## ೧೯ನೇ ಶತಮಾನದಲ್ಲಿ

# ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ

[ಈ ವಿಷಯವನ್ನು ಕುರಿತು ನಮ್ಮ ದೇಶದಲ್ಲಿ ಮೊದಲ ಬಾರಿಗೆ ಬರೆಯಲ್ಪಟ್ಟ ಮತ್ತು ವಿಚಾರ ಜಾಗೃತಿಯನ್ನುಂಟುಮಾಡುವ ಅಮೋಘವಾದ ಹಾಗೂ ಪರಿಪುಷ್ಟವಾದ ಸಚಿತ್ರ ಗ್ರಂಥ]

"These (writings of the European Scholars) will survive when the British dominion in India shall have long ceases to exist."

(*Warren Hastings—1784 first Governor-General of India*)

"If we take out all the mud from the bed of the Indian Ocean and throw it into your faces, it will be but a mere speck in comparison to what your scholars and missionaries have done to our religion and culture."

(*Swami Vivekananda in Europe—1897*)

"To Sir William Jones and to many other European scholars, India owes a deep debt of gratitude for the rediscovery of her past literature."

(*Sri Jawaharlal Nehru—1943*)


ಗ್ರಂಥಕರ್ತ

ಐ. ಮಾ. ಮುತ್ತಣ್ಣ,

ಎಂ.ಎ., (ಬಿ.ಒ.ಎಲ್.,) ಬಿ.ಟಿ., (ಮದ್ರಾಸು) ಪಿಹೆಚ್.ಡಿ., (ಕೋಲೊ.)
ಡಿಪ್-ಇನ್-ಜರ್ನ್., (ಲಂಡನ್) ವಿದ್ವಾನ್ (ಕನ್ನಡ ಮತ್ತು ಸಂಸ್ಕೃತ)



1969

ಅಧಿಕೃತ ಮಾರಾಟಗಾರರು :

ಉಷಾ ಪ್ರೆಸ್, ಮೈಸೂರು-೧



# ಅರ್ಪಣೆ

ಕನ್ನಡ ಮಾತೆಯ ಆರಾಧನಾ ಪೂಜೆಯಲ್ಲಿ ಲಭಿಸಿದ ಈ ಒಂದು ಎಸಳನ್ನು
ಈ ದೇಶಕ್ಕಾಗಿ ತಮ್ಮ ತನು ಮನವನ್ನು ಸವೆದು ನಮ್ಮ ಸಾಹಿತ್ಯ ಸಂಸ್ಕೃತಿಗಳ
ಉದ್ಧಾರವನ್ನು ಕ್ರಾಂತಿಕಾರಕವಾಗಿ ಸಾಧಿಸಿದ ಅಂದಿನ ಧೀವಂತ ತತ್ವಜ್ಞಾನಿಗಳೂ
ಭಾಷಾ ಶಾಸ್ತ್ರಜ್ಞರೂ ವೇದಾಭ್ಯಾಸಿಗಳೂ ಆದ,—

| | | | |
|---|---|---|---|
| Arnold | Dusseau | Jacobi | Rosan |
| Beal | Elliot | Jones | Roth |
| Beames | Fergusson | Kern | Rottler |
| Benfey | Fleet | Kielhorn | Sanderson |
| Bloomfield | Forbes | Kittel | Schelegel |
| Bopp | Garrett | Lanman | Schoebal |
| Brown | Goldstucker | Macdanold | Taylor |
| Buchanan | Gonsalves | Mackenzie | Temple |
| Buehler | Grierson | Max Mueller | Todd |
| Burgess | Griffith | Molesworth | Weber |
| Burnell | Gundart | Morton | Whitney |
| Burnouff | Halhed | Odenburg | Wilkins |
| Caland | Hands | Poliers | Williams |
| Caldwell | Hawell | Princep | Wilson |
| Campbell | Hodgson | Reeve | Wurth |
| Carey | Hultzsch | Rennell | Xavier |
| Colebrooke | Humboldt | Rice | Yule |
| Cunningham | Hunter | Roger | Zeighler |

ಈ ಮೊದಲಾದ ಅಂದ್ಥಿನ ಅಸಂಖ್ಯಾತ ವಿದ್ವಾಂಸರ ಪದತಲದ
ಸ್ಮರಣಾರ್ಥವಾಗಿ ಆದರಪೂರ್ವಕವಾಗಿ ಅರ್ಪಿಸುತ್ತೇನೆ.

ಗ್ರಂಥಕರ್ತೃ

“ ಭಾರತಕೆ ಚೇತನವ ಆಧುನಿಕ ವಿದ್ಯೆ ಸಂ
ಸ್ಕಾರಗಳ ಇತ್ತೆಲ್ಲೈ ಅಂದು ನೀನು,
ಈನ್ನೂರು ವರ್ಷಗಳಲೀ ಜನದ ಮೌಢ್ಯತೆಯ
ಹರಿಸಿ ಕಣ್ದೆರೆಯಿಸಿದೆ ನೀನು.”

[ಮುತ್ತಣ್ಣನ ಕವನಗಳು–ಭಾಗ ೨; ಪುಟ 187]

# ಒಂದು ಮಾತು

ಕ್ರಿ.ಶ. ೧೮ನೇ ಶತಮಾನದ ಪೂರ್ವಾರ್ಧ ಮತ್ತು ಇಂದಿನ ೨೦ನೇ ಶತಮಾನದ ಅಪರಾರ್ಧದ ಮಧ್ಯೆ ೨೦೦ ವರ್ಷಗಳ ಕಾಲದಲ್ಲಿ ಉಂಟಾದ ಒಂದು ಅಪೂರ್ವ ರಾಜಕೀಯ ಮತ್ತು ಸಾಂಸ್ಕೃತಿಕ ಉತ್ಕ್ರಾಂತಿಯು ಈ ದೇಶದ ಸಹಸ್ರಾರು ವರ್ಷಗಳ ಚರಿತ್ರೆಯಲ್ಲಿ ಎಂದೂ ಕಂಡುಬಾರದಿದ್ದ ವಿಶಿಷ್ಟ ಘಟನೆಯಾಗಿದೆ. ಪಾಶ್ಚಾತ್ಯರ ಬರುವಿಕೆಯು ಈ ದೇಶವನ್ನು ಕಳೆದ ಶತಮಾನದಲ್ಲಿ ಆಧುನಿಕ ಜಗತ್ತಿನ ಹೊಸ್ತಿಲಿಗೆ ತಳ್ಳಿಹಾಕಿತು ಎಂಬುದು ನಿರ್ವಿವಾದವಾದ ವಿಚಾರವಾಗಿದೆ. ೧೮ನೇ ಶತಮಾನದ ಜನರ ಜ್ಞಾನಪರಿಮಿತಿ, ಜೀವನ ವ್ಯವಹಾರ, ಅಮಾನುಷ ನೀತಿ, ಶುಷ್ಕ ಪರಂಪರೆಗಳು, ಮೊದಲಾದುವನ್ನು ಪಾಶ್ಚಾತ್ಯ ವಾಙ್ಮಯವು ತಟ್ಟಿಹಾಕಿ ದೇಶಕ್ಕೆ ಒಂದು ಹೊಸ ವಾತಾವರಣವನ್ನು ಕಲ್ಪಿಸಿತು. "ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂದು ಹೇಳಿದ ಭಗವಂತನು ಹಿಂದಿನ ಕಾಲದಲ್ಲಿ ಮತ್ಸ್ಯವಾಗಿ, ಕೂರ್ಮವಾಗಿ, ವರಾಹವಾಗಿ, ವಾಮನನಾಗಿ, ಬೇಟೆಗಾರನಾಗಿ ಹೀಗೆ ಹಲವು ವಿಧದಲ್ಲಿ ಬಂದು ಹೋದನೆಂಬುದು ನ್ಯಾಯವಾದ ಕಥೆಯೇ ಆಗಿದೆ; ಇರಬಹುದು, ಆದರೆ ನಮ್ಮ ದೇಶದಲ್ಲಿ ಶಿಥಿಲವಾಗುತಿದ್ದ ಹಿಂದೂಧರ್ಮ, ಸಂಸ್ಕೃತಿ, ಸಾಹಿತ್ಯಗಳೆಲ್ಲವನ್ನೂ ಉಳಿಸಲು, ದೇಶದಾದ್ಯಂತ ಅವ್ಯಾಹತವಾಗಿ ಸರ್ವನಾಶವಾಗುತ್ತಿದ್ದ ನಮ್ಮ ಸಂಸ್ಕೃತಿಯನ್ನು ರಕ್ಷಿಸಲು, ೮ನೇ ಶತಮಾನದಿಂದ ೧೮ನೇ ಶತಮಾನದ ವರೆಗಿನ ೧೦೦೦ ವರ್ಷಗಳ ವರೆಗೂ ನಡೆದ ಮಹ್ಮದೀಯರ ಕರಾಳ ನೀತಿಯಿಂದ ದೇಶವನ್ನು ಪಾರಾಗಿಸಲು ಆದಾವ ಸುದೈವವೋ ಎಂಬಂತೆ ಪಶ್ಚಿಮ ಸಾಗರಗಳನ್ನು ಬಳಸಿ, ಬಿರುಗಾಳಿಯ ಬಡಿತವನ್ನು ಎದುರಿಸಿ ವ್ಯಾಪಾರಿಯಂತೆಯೋ ಪ್ರಯಾಣಿಕನಂತೆಯೋ ಈ ದೇಶಕ್ಕೆ ನುಗ್ಗಿ ಸುತ್ತಾಡಿ ಒಂದು ಹೊಸ ವ್ಯವಸ್ಥೆಗೆ, ಮಾರ್ಪಾಡಿಗೆ, ವಿಚಾರ ಜಾಗೃತಿಗೆ ತಕ್ಕ ಸನ್ನಿವೇಶವನ್ನು ಕಲ್ಪಿಸಿ ೨೦೦ ವರ್ಷಗಳ ಕಾಲ ಇದ್ದು ಹಿಂದೆರಳಿದ ಪಾಶ್ಚಾತ್ಯನು ಮೇಲಿನ ರೀತಿಯಲ್ಲಿ ಹೇಳುವುದಾದರೆ ಏಕದಶಾವತಾರಿಯಲ್ಲದೆ ಮತ್ತಾರು? ಬೇರಾವುದೋ ಮತ, ವರ್ಣ, ನೀತಿ ಇತ್ಯಾದಿಗಳಿಗೆ ಸೇರಿದ ಆ ಬಿಳಿಮುಖದವನು ದೂರದ ಒಂದು ಭೂಖಂಡದಿಂದ ಈ ದೇಶಕ್ಕೆ ಬಂದು ನಡೆಸಿದ ಅಭೂತಪೂರ್ವ ಹಾಗೂ ಕ್ರಾಂತಿಕಾರಕ ಬದಲಾವಣೆ ಮತ್ತು ಸುಧಾರಣೆಗಳನ್ನು ನಾವು ಅಲ್ಪವೆಂದು ಗಣಿಸಿದರೆ ಅದು ನಮ್ಮಲ್ಲಿ ಪರಂಪರಾನುಗತವಾಗಿ ಬಂದ ಧೂರ್ತತನದ ವಕ್ರದೃಷ್ಟಿಯೆಂದು ಮಾತ್ರ ಹೇಳಬಹುದು.

ಕ್ರಿ.ಶ. ೧೮ನೇ ಶತಮಾನದ ವರೆಗೆ ಜನರ ಬಾಳು ಬದುಕು ರೀತಿ ನೀತಿಗಳೆಲ್ಲವೂ ಎಂತಿದ್ದುವು? ಅವರ ಜೀವನಕ್ರಮ, ಮನೆಮಠ, ವ್ಯವಹಾರ ಕ್ರಮವೆಲ್ಲವೂ ಹೇಗಿದ್ದುವು? ಇಂದಿನ ಜನರು ಅದೀಗ ಎಷ್ಟು ಬೇರ್ಪಟ್ಟು ಇದ್ದಾರೆ? ಸರಿ, ನಮ್ಮ ಪೂರ್ವಜರು ಬಹು ವೈಭವದಿಂದ ಬಾಳಿದರು; ಒಬ್ಬ ರಾಜನು ಹಿಮಾಲಯದ ವರೆಗೆ ಹಾದು ಹೋದನು; ಶಂಕರಾಚಾರ್ಯನು ಕಾಶ್ಮೀರದ ವರೆಗೆ ನಡೆದು ಹೋದನು, ಒಬ್ಬೊಬ್ಬನಲ್ಲಿ ಅಂದು ಸಹಸ್ರಾರು ಸೇರು ಚಿನ್ನವಿರುತಿತ್ತು ಎಂದಿತ್ಯಾದಿಯಾಗಿ ಹೇಳುವ ವಿಚಾರ

ಗಳೂ ಅನೇಕ ಇವೆ. ಬೇಲೂರ ದೇಗುಲ, ಸೋಮನಾಥನ ಮಂಟಪ, ಗುಮ್ಮಟನ ವಿಗ್ರಹ ಮೊದಲಾದುವನ್ನೆಲ್ಲಾ ನಿಲ್ಲಿಸಿದವರು ಸಾಮಾನ್ಯರೇ ? ನಿಜಕ್ಕೂ ಸಾಮಾನ್ಯ ರಲ್ಲ. ಹಾಗಾದರೆ ಬೇಲೂರು. ಸೋಮನಾಥ ದೇಗುಲಗಳಂಥಾ ಸಹಸ್ರಾರು ಕಟ್ಟೋಣ ಗಳು ಅಂದೆಯೇ ಅದೇಕೋ ಕೆಡಹಲ್ಪಟ್ಟುವು. ವೇದ, ಪುರಾಣ, ಶಾಸ್ತ್ರಾದಿ ಗ್ರಂಥಗಳ ಅಪಾರ ರಾಶಿಯೆಲ್ಲಾ ವಿಧರ್ಮಿಯರಿಂದ ಸುಟ್ಟು ಹಾಕಲ್ಪಟ್ಟುವು. ಜನವೆಲ್ಲಾ ಭಯ ಭೀತಿಯಿಂದ. ಅಂಧಶ್ರದ್ಧೆಯಿಂದ. ಧರ್ಮತತ್ವಗಳ ಅರಿವಿಲ್ಲದೆ ಕಲ್ಲುಮರಗಳ ದೇವರು ಗಳನ್ನು ನಿರ್ಮಿಸಿಕೊಂಡು ಜಗತ್ತಿನ ಆಗುಹೋಗುಗಳ ಪರಿವೆಯಿಲ್ಲದೆ ಜೀವಿಸುತಿದ್ದರು. ಮಿಲ್ಯಾಂತಕ್ಕೊಬ್ಬ ಪಂಪ, ರನ್ನ, ರಾಘವಾಂಕ, ಲಕ್ಷ್ಮೀಶರಲ್ಲದೆ ಉಳಿದವರೆಲ್ಲಾ ಹಳ್ಳಿಯ ಪಾಡ್ದನಗಳಿಂದಲೇ ತಮ್ಮ ಮೋಕ್ಷವನ್ನು ಕಲ್ಪಿಸಿಕೊಂಡಿದ್ದರು. ಹೀಗೆ ಇನ್ನೇಷ್ಟೋ ಬಗೆಯಲ್ಲಿ ಈ ದೇಶವು ಚಿಂತಾಜನಕವಾಗಿ ಸೊರಗಿತ್ತು.

ಕಾಲವು ತೀವ್ರಗತಿಯಿಂದ ಬದಲಾಗುತ್ತಿದೆ, ಎಂದು ಹೇಳುವುದು ಸಾಮಾನ್ಯ ವಾಗಿದೆ. ಆದರೆ ಆ ಕಾಲಚಕ್ರವನ್ನುರುಳಿಸಲು ಒರ್ವ ಸಾರಥಿಯು ಬೇಕೇ ಬೇಕಲ್ಲವೇ? ನಮ್ಮ ಧರ್ಮ, ತತ್ವ, ನೀತಿಗಳೆಲ್ಲವೂ ಮಣ್ಣುಗೂಡುತಿದ್ದಾಗ, ಮಹ್ಮದೀಯರ ಪ್ರಭಾವ ದಿಂದ ಹಿಂದೂ ಧರ್ಮವು ಅಳಿಯುತಿದ್ದಾಗ, ಅದಕ್ಕೆ ತಡೆಯಿಟ್ಟು ದೇಶಕ್ಕೆ ನವಶಕ್ತಿ ಹಾಗೂ ಸ್ಫೂರ್ತಿಯನ್ನು ಒದಗಿಸಿದ ಕಾಲಚಕ್ರದ ಸಾರಥಿಯು ಪಾಶ್ಚಾತ್ಯ ದೇಶದಿಂದ ಒರ್ವ ವ್ಯಾಪಾರಿಯಾಗಿ ಬಂದುದು ದೇಶದ ಸುದೈವ! ಈ ಅವತಾರವು ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳಿಗಿಂತಾ ಎಷ್ಟೋ ಮೇಲಾದುದೂ ಅರ್ಥವತ್ತಾದುದೂ ಎಂದು ನನ್ನ ಭಾವನೆಯಾಗಿದೆ.

ನಮ್ಮ ದೇಶದ ರಾಜಕೀಯ ಘಟ್ಟದಲ್ಲಿ ಆದ ವಿಶಿಷ್ಟ ಬದಲಾವಣೆಗಳ ಬಗ್ಗೆ ನಾನು ಇಲ್ಲಿ ಹೇಳುವ ಅಗತ್ಯವಿಲ್ಲ. ಆದರೆ ದೇಶದ ಮಿಲ್ಯಾಂತರ ಜನದ ಜ್ಞಾನವಿಕಾಸ ಮತ್ತು ಸಾಂಸ್ಕೃತಿಕ ವರ್ಚಸ್ಸು ಕಳೆಗುಂದಿದ್ದಾಗ, ದೇಶವು ಅಜ್ಞಾನ ಮತ್ತು ಮೂಢ ನಂಬಿಕೆಗಳಿಂದ ಸೊರಗಿದ್ದಾಗ, ಜನತೆಯು ವಿಧರ್ಮಿ ಮುಸಲ್ಮಾನರ ಭ್ರಷ್ಟಾಚಾರಕ್ಕೆ ತುತ್ತಾಗಿದ್ದಾಗ, ದಲಿತರು ಸ್ವಧರ್ಮಿ ಬ್ರಾಹ್ಮಣರ ಮತಾಂಧತೆಯ ಅಟ್ಟಹಾಸಕ್ಕೆ ಬಲಿಯಾಗಿದ್ದಾಗ, ಆ ಎಲ್ಲಾ ಬಗೆಯ ವ್ಯಾಧಿಗಳಿಂದ ದೇಶವನ್ನು ಸುಧಾರಿಸಲು ಮತ್ತು ಧರ್ಮ ಸಂಸ್ಥಾಪನಾರ್ಥಾಯವಾಗಿಯೇ ಪಾಶ್ಚಾತ್ಯರು ಬಂದು ಕೈಗೊಂಡ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸುಧಾರಣೆಗಳನ್ನು ಕುರಿತು ವಿವರಿಸಲು ಈ ನನ್ನ ಅಲ್ಪ ಬರೆವಣಿ ಗೆಯು ಸಾಲದು. ಇಂಥಾ ನೂರಾರು ಗ್ರಂಥಗಳೇ ಪ್ರಕಾಶಕ್ಕೆ ಬಂದು ಅವರು ನಡೆ ಸಿದ ಅಮೋಘ ಸಾಧನೆಗಳೇನೇನು ಎಂದು ದೇಶೀಯರಿಗೆ ತಿಳಿಸಿ ಅವರ ಕಣ್ತೆರೆಯಿಸ ಬೇಕಿದೆ.

ಕಳೆದ ೨೦೦ ವರ್ಷಗಳ ಕಾಲದಲ್ಲಿ ನಮ್ಮ ಆರ್ಷೇಯ ಸಾಹಿತ್ಯ ಸಂಸ್ಕೃತಿಗಳ ನ್ನೆಲ್ಲಾ ಕಾಲಗರ್ಭದಿಂದಗಿದು ಬಯಲಿಗೆ ತಂದ ಅಂದಿನ ಪಾಶ್ಚಾತ್ಯ ವಿದ್ವಾಂಸರ ತಂಡವೊಂದು ಈ ದೇಶದಲ್ಲಿ ಆಧುನಿಕ ಋಷಿಗಳಂತೆ ಕಾಣಿಸಿಕೊಂಡರು. ವೇದೋಪ ನಿಷತ್ತುಗಳು, ಪುರಾಣಗಳು. ಶಾಸ್ತ್ರಾದಿಗ್ರಂಥಗಳು. ಪ್ರಾಚೀನ ಸಾಹಿತ್ಯ ಸಂಸ್ಕೃತಿಗಳ ವಶೇಷಗಳು, ಅಸಂಖ್ಯ ಶಿಲಾಶಾಸನಗಳು ಎಂದೀ ಬಗೆಯಾಗಿ ಅವರು ಭೂಗರ್ಭ

ದಿಂದಗಿದು ಬೆಳಕಿಗೆ ತಂದು, ಅನ್ವೇಷಿಸಿ, ವ್ಯಾಖ್ಯಾನಿಸಿ ಅಂತೆಯೇ ಉಳಿಸಿ ಮಾಡಿದ ಸಾಹಸಕರವಾದ ಕೆಲಸವು ಇಡೀ ಪ್ರಪಂಚದ ಚರಿತ್ರೆಯಲ್ಲಿಯೇ ನಡೆಯದೇ ಇರುವ ಅಸಾಮಾನ್ಯ ಕಾರ್ಯವಾಗಿದೆ. ಇಂದಿನಂತೆ ಪ್ರಯಾಣ ಸೌಕರ್ಯವಿಲ್ಲದಿದ್ದ ಆ ಕಾಲದಲ್ಲಿ ಅವರು ಆಸೇತು ಹಿಮಾಚಲದವರೆಗಿನ ಈ ದೇಶದ ಮೂಲೆ ಮೂಲೆಗಳಲ್ಲೆಲ್ಲಾ ಸಂಚರಿಸಿ ಅಳಿದುಳಿದ ನಮ್ಮ ಪ್ರಾಚೀನ ಐತಿಹಾಸಿಕ, ವಾಸ್ತುಶಿಲ್ಪ ಮತ್ತು ಸಾಹಿತ್ಯಾದಿ ಕುರುಹಗಳನ್ನು ಉಳಿಸಲು ಅವರು ದೇವದೂತರಂತೆ ಬಂದು ನಡೆಸಿದ ಜ್ಞಾನೋಪಾಸನೆ, ಅನ್ವೇಷಣೆ ಮತ್ತು ಧರ್ಮರಕ್ಷಣೆಯ ಮಹಾಕಾರ್ಯವು ನಮ್ಮ ದೇಶದ ಹಿಂದಾವ ಮಹಾತಪಸ್ವಿಯೂ ಕೈಗೊಳ್ಳದಿದ್ದ ಅಸಾಧಾರಣ ಸಾಹಸವಾಗಿದೆ. ವೇದ ಪುರಾಣಾದಿಗಳನ್ನು ಕರತಲಾಮಲಕವಾಗಿಸಿಕೊಂಡು ತಮ್ಮ ಲ್ಯಾಟಿನ್, ಗ್ರೀಕ್, ಪರ್ಷಿಯನ್ ಇತ್ಯಾದಿ ಭಾಷಾ ಪಾಂಡಿತ್ಯದ ಜತೆಗೆ, ಈ ದೇಶದ ಸಂಸ್ಕೃತವೇ ಮೊದಲಾದ ಹತ್ತಾರು ಭಾಷೆಗಳಲ್ಲೂ ಪ್ರಬಲ ಪ್ರಶಸ್ತಿಯನ್ನು ಗಳಿಸಿದ್ದ ಅಂದಿನ ಪಾಶ್ಚಾತ್ಯ ವಿದ್ವಾಂಸರು ನೂರಾರು ಯಾ ಸಹಸ್ರಾರು ಸಂಖ್ಯೆಯಲ್ಲಿ ಒಬ್ಬನಿಗಿಂತಲೂ ಒಬ್ಬನು ಮಿಗಿಲಾಗಿ ನಡೆಸಿದ ಸಾಹಿತ್ಯ, ಸಾಂಸ್ಕೃತಿಕ ಮತ್ತು ಸಾಮಾಜಿಕ ಸೇವೆಯು ಇಡೀ ದೇಶದ ಮೌಢ್ಯತೆಯನ್ನು ಕಿತ್ತೊಗೆದುದಲ್ಲದೆ ಜನಾಂಗವನ್ನು ಶತಮಾನಗಳ ಕಾಲಕ್ಕೂ ಮುಂದೆ ತಳ್ಳಿಹಾಕಿತ್ತು. ಇವರು ಈ ದೇಶದಲ್ಲಿ ನಡೆಸಿದ ತಪೋಸಾಧನೆಯು ಯೂರೋಪಿನಲ್ಲಿ ಅಂದಾದ Literary Renaissance ಇದರ ಪ್ರಮಾಣವನ್ನು ಮೀರಿಸಿತ್ತೆಂದರೆ ಅತಿಶಯೋಕ್ತಿಯಾಗಲಾರದು.

ಸೂಕ್ಷ್ಮವಾಗಿ ಹೇಳುವುದಾದರೆ ಪಾಶ್ಚಾತ್ಯರು ಈ ದೇಶದ ಆಧುನಿಕ ಜ್ಞಾನ ವಿಕಾಸಕ್ಕೆ ಕಾರಣರಾದರು. ಈ ದೇಶದ ಕಾವ್ಯೇತಿಹಾಸಗಳನ್ನೆಲ್ಲಾ ಬೆಳಕಿಗೆ ತಂದರು. ನಮ್ಮ ಪ್ರಾಚೀನ ವೈಭವವೆಂತೆಂದು ಲೋಕಕ್ಕೆ ಪರಿಚಯ ಮಾಡಿಸಿದರು. ಈ ದೇಶದ ಭೌಗೋಲಿಕ ಪ್ರಮಾಣವನ್ನಳೆದರು. ಅಖಂಡಭಾರತ ಇತಿಹಾಸ ಗ್ರಂಥಗಳನ್ನು ಮೊದಲ ಬಾರಿಗೆ ಪ್ರಕಟಿಸಿದರು; ಆಧುನಿಕ ವಿದ್ಯಾಕ್ರಮಕ್ಕೂ ಕಾರಣ ಪ್ರಾಯರಾದರು; ಪ್ರಾಚೀನ ಕಾವ್ಯ, ಶಾಸನ ವಾಸ್ತುಶಿಲ್ಪಾದಿಗಳನ್ನೆಲ್ಲಾ ಭೂತಲದಿಂದಗಿದು ಅವುಗಳ ಮೇಲೆ ವಿವರಣೆಗಳನ್ನು ಬರೆದರು. ಆಧುನಿಕ ಭಾರತೀಯ ಗದ್ಯ ಮತ್ತು ಪದ್ಯ ಸಾಹಿತ್ಯಗಳೆಲ್ಲಕ್ಕೂ ಅವರೇ ಮೂಲಪುರುಷರಾದರು; ಬ್ರಾಹ್ಮಣರ ಗುಡಿಸಲುಗಳಿಂದ ಮತ್ತು ಮಹಮ್ಮದೀಯರ ಧಾಳಿಗೆ ತುತ್ತಾದ ಮುರುಕು ಮಂಟಪಗಳ ಮೂಲೆಯಿಂದ ಶಾಸ್ತ್ರಾದಿ ಗ್ರಂಥವೋಲೆಗಳನ್ನೆಲ್ಲಾ ಹೊರತಂದು ಪಾಮರ ಜನದ ಮುಂದಿಟ್ಟರು; ಸಮಾಜ ಸೇವೆಯೇನೆಂಬುದನ್ನು ನಿಸ್ವಾರ್ಥ ದೃಷ್ಟಿಯಿಂದ ಕೈಕೊಂಡು ತೋರಿಸಿ ಬಡಜನರ ಉದ್ಧಾರಕ್ಕೆ ಕಾರಣರಾದರು; ಅವಿದ್ಯಾವಂತರಾದ ಹಾಗೂ ಹಿಂದೂಧರ್ಮಕ್ಕೆ ಘಾತುಕಪ್ರಾಯರಾದ ಬ್ರಾಹ್ಮಣರನ್ನೆಲ್ಲಾ ನಾಚಿಸಿದರು. ಕ್ರೂರ ಮಹ್ಮದೀಯ ನವಾಬರ ಪೀಳಿಗೆಯನ್ನೆಲ್ಲಾ ಅಲ್ಲಲ್ಲಿ ಕತ್ತರಿಸಿಹಾಕಿದರು; ಅಂತೆಯೇ ದುಷ್ಟ ಹಿಂದೂ ಅರಸರನ್ನೆಲ್ಲಾ ತಮ್ಮ ರಾಜನೀತಿಯಿಂದ ಪದಚ್ಯುತರನ್ನಾಗಿ ಮಾಡಿ ಜನಸಾಮಾನ್ಯರಿಗೆ ಸ್ವಾತಂತ್ರ್ಯವೇನೆಂಬುದನ್ನು ತಿಳಿಸಿದರು. ಸೇವಾ ಪಾರಾಯಣರೂ ಜನಹಿತಾಭಿಮಾನಿಗಳೂ ತಾತ್ವಿಕರೂ ಆದ ಬ್ರಿಟಿಷ್ ಅಧಿಕಾರಿಗಳು ಅಂಧಶ್ರದ್ಧೆ

ಯಿಂದ ಸೊರಗುತಿದ್ದ ನಮ್ಮ ಜನಕ್ಕೆ ಜ್ಞಾನಚಕ್ಷುವನ್ನು ನೀಡಿದರು. ಹೇಸ್ಟಿಂಗ್ಸ್, ಮಿಂಟೋ, ಬೆಂಟಿಂಕ್, ಗ್ರಾಂಟ್ ಎಲ್ಫಿನ್‌ಸ್ಟನ್, ಮನ್ರೊ, ಮೆಟ್ಕಾಫ್, ಜಾಟ್ರಾಮ್, ಮಾಲ್ಕಾಮ್, ರಿಪ್ಪನ್, ಕಾಟನ್, ಕಬ್ಬನ್, ಲಾರೆನ್ಸ್, ಟ್ಯಾಲರ್ ಎಂಬೀ ಹಲವು ಉದಾತ್ತವರ್ಗದ ರಾಜಕಾರಣಿಗಳು ಅಂದಿನ ಭಾರತದಲ್ಲಿ ಕಾಣಿಸಿ ಕೊಂಡುದು ದೇಶದ ಪುಣ್ಯವೆಂದೇ ಹೇಳಬೇಕಿದೆ.

ಬ್ರಿಟಿಷರ ೨೦೦ ವರ್ಷಗಳ ಆಳ್ವಿಕೆಯು ಅದಕ್ಕಿಂತ ಹಿಂದಿನ ೧೦೦೦ ವರ್ಷಗಳ ಮಹ್ಮದೀಯರು ಅನುಸರಿಸಿದ ಕರಾಳ ನೀತಿಯನ್ನೆಲ್ಲಾ ತಲೆ ಕೆಳಗಾಗಿಸಿತು. ಜನತೆಯು ಜೀವನಕ್ರಮ, ಆರೋಗ್ಯ, ವ್ಯವಸಾಯ ಇತ್ಯಾದಿಗಳಲ್ಲೆಲ್ಲಾ ಪ್ರಗತಿಯನ್ನು ಸಾಧಿಸಿತು. ಹಿಂದಿನ ಕಾಲದಲ್ಲಿ ಊರಿಂದ ಊರಿಗೆ, ನಾಡಿಂದ ನಾಡಿಗೆ ಎಂಬಂತೆ ಆಗುತಿದ್ದ ಯುದ್ಧಗಳು ಇಲ್ಲವಾದುವು ; ಸತೀ ಸಹಗಮನ, ನರಬಲಿ, ಶಿಶುಹತ್ಯೆ ಇತ್ಯಾದಿಗಳೂ ನಿಲ್ಲಿಸಲ್ಪಟ್ಟುವು. ಆಧುನಿಕ ಔಷಧಾಲಯಗಳು ರೋಗರುಜಿನಗಳನ್ನು ತಡೆಗಟ್ಟಿದುವು; ಪರಿಣಾಮವಾಗಿ ಕ್ರಿ. ಶ. 1800ಕ್ಕೆ 120 ಮಿಲ್ಲಿಯದಂತೆ ಇದ್ದ ಜನಸಂಖ್ಯೆಯು ಕ್ರಿ.ಶ. 1900ಕ್ಕೆ 280 ಮಿಲ್ಲಿಯಕ್ಕೇರಿತು. ಕ್ರಿ.ಶ. 1950ಕ್ಕೆ ಇಡೀ ದೇಶದ ಜನಸಂಖ್ಯೆಯು 450 ಮಿಲ್ಲಿಯಕ್ಕೆ ತಲಪಿ ಇಂದೀಗ ಪಾಕೀಸ್ಥಾನವನ್ನುಳಿದ ಭಾರತದ ಜನಸಂಖ್ಯೆಯು 550 ಮಿಲ್ಲಿಯದ ಸನಿಹದಲ್ಲಿದೆ. ಬ್ರಿಟಿಷರು ಬಂದಾಗ ಬರೇ ನೂರಿನ್ನೂರು ಜನರಿಂದ ಕೂಡಿದ್ದ ಕಲ್ಕತ್ತಾ, ಬೊಂಬಾಯಿ, ಮದ್ರಾಸು ಮೊದಲಾದ ಸ್ಥಳಗಳು ಇಂದು ಮಿಲ್ಲಿಯಗಟ್ಲೆ ಜನರಿಂದ ಕೂಡಿದ ನಗರಗಳಾಗಿವೆ. ಬ್ರಿಟಿಷರು ಈ ದೇಶದಲ್ಲಿ ಸಾಧಿಸಿದ ಹಲವು ಕ್ರಾಂತಿಕಾರಕ ಸುಧಾರಣೆಗಳ ಬಗ್ಗೆ ನಾನು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅದಕ್ಕೆ ಬದಲಾಗಿ ಇದೊಂದು ಪ್ರಶ್ನೆಯನ್ನು ಮಾತ್ರ ಕೇಳಬಹುದು. ಬಹುಶಃ ಅಂದಿನ ಕಾಲಕ್ಕೆ ಅವರು ಈ ದೇಶವನ್ನು ಕರಗತಮಾಡಿ ಮುನ್ನಡೆಸದೇ ಹೋಗಿದ್ದರೆ ನಮ್ಮ ದೇಶ, ನಮ್ಮ ನಾಡು, ನಮ್ಮ ನುಡಿ, ನಮ್ಮ ಜೀವನ, ನಮ್ಮ ರೀತಿ ನೀತಿಗಳೆಲ್ಲಾ ಎಂತಿರುತಿತ್ತು ಎಂಬುದನ್ನು ಬಹು ಕಳವಳದಿಂದ ಊಹಿಸಬೇಕಿದೆ. ನಿಜಕ್ಕೂ ಚಿಂತಾಜನಕವಾದ ಪರಿಸ್ಥಿತಿಯೇ ತಾಂಡವವಾಡುತ್ತಿತ್ತೆಂದು ಹೇಳದೆ ಸಾಧ್ಯವಿಲ್ಲ.

ಇಂದಿನ ಪೀಳಿಗೆಗೆ ಸೇರಿದ ನಮ್ಮ ಮತ್ತು ನಮ್ಮ ಅಜ್ಜಂದಿಯರ ಕಾಲದ ಜೀವನ ವಿಧಾನಗಳಿಗೆ ಅದೆಷ್ಟು ವ್ಯತ್ಯಾಸವಿವೆ. ಜನರು ದುಷ್ಟ ಮೃಗಗಳಿಗಲ್ಲ; ಅವಕ್ಕೂ ಕಡೆಗೆಟ್ಟ ಜನಕ್ಕೆ ಹೆದರಿ ಅಂಥವರಿಂದ ರಕ್ಷಿಸಲ್ಪಡಲು ತಮ್ಮ ಹುಲ್ಲು ಚಾವಡಿಗಳಿಗೆ ಗಾಳಿಯು ಸಹ ಒಳಹುಗದಂತೆ ಭಯಭ್ರಾಂತರಾಗಿ ಜೀವಿಸುತಿದ್ದಾಗ ಬ್ರಿಟಿಷ್ ಖಾನೂನು ಕಾಯಿದೆಗಳ ರಕ್ಷಣೆಗೆ ಒಳಗಾದ ಜನತೆಯು ಹಂಚು ಹಾಕಿದ ಮತ್ತು ವಿಶಾಲ ಕಿಟಕಿ ಬಾಗಿಲುಗಳಿಂದ ಕೂಡಿದ ಭವನಗಳಲ್ಲಿ ಮೆರೆಯುವಂತಾದರು. ಅಂಥಾ ಪರಿಸ್ಥಿತಿಯಿಂದ ಪ್ರಾರಂಭಗೊಂಡು ನವೀನ ವಿದ್ಯಾಬಲದಿಂದ ಚೇತನಗೊಂಡು ನಮ್ಮ ದೇಶವು ಆಧುನಿಕ ಜಗತ್ತಿನಲ್ಲಿ ಇತರ ಹಿಂದುಳಿದ ಹಾಗು ಮುಂದುವರಿದ ದೇಶಗಳೊಡನೆ ಭುಜಕ್ಕೆ ಭುಜ ಕೊಟ್ಟು ಹಾಯುತ್ತಿದೆ.

ಕರ್ಣಾಟಕವೆಂಬ ರಾಜ್ಯವು ಹಿಂದಿನ ಕಾಲದಲ್ಲಿ ಹೇಗೆ ಒಂದು ಆಡಳಿತ ಘಟಕ

ವಾಗಿ ಇರಲಿಲ್ಲವೋ ಅದೇ ರೀತಿ ಇಡೀ ಭರತಖಂಡವೂ ಒಂದೇ ರಾಜ್ಯವಾಗಿ ಹಿಂದಾವ ಕಾಲದಲ್ಲೂ ಇರಲಿಲ್ಲ. ಅಶೋಕನ ಸಾಮ್ರಾಜ್ಯ, ಗುಪ್ತರ ಸಾಮ್ರಾಜ್ಯ, ಹರ್ಷನ ಸಾಮ್ರಾಜ್ಯ. ಮೊಗಲರ ಸಾಮ್ರಾಜ್ಯ ಇತ್ಯಾದಿಗಳೆಲ್ಲಕ್ಕೂ ಇಡೀ ಭರತಖಂಡವು ಸೇರಿರಲಿಲ್ಲ. ಆದರೆ ಬ್ರಿಟಿಷ್ ಸಾಮ್ರಾಜ್ಯದೊಳಗಡಗಿದ ಸಮಗ್ರ ಭಾರತವು ಅಂದು ಕೆಂಪು ವರ್ಣದ ಭೂಪಟದಿಂದ ವಿರಾಜಿಸುತಿದ್ದುದು ಹೆಮ್ಮೆಯ ದೃಶ್ಯವಾಗಿದೆ. ಕ್ರಿ.ಶ. 1858 ರಲ್ಲಿ ಇಡೀ ಭರತಖಂಡವನ್ನು ಒಂದು ಸಾಮ್ರಾಜ್ಯವಾಗಿ ಕಟ್ಟಿ ಅಫಘಾನೀಸ್ಥಾನ, ಟಿಬೇಟ್, ನೇಪಾಳ, ಬರ್ಮಾ ದೇಶಗಳ ವರೆಗಿನ ದೇಶದ ಗಡಿಯನ್ನು ಬಹು ಭದ್ರತೆಯಿಂದ ಕಟ್ಟಿ ಈ ವಿಶಾಲ ದೇಶವನ್ನು ಅವರು ವಿಲಾಯಿತಿಯಿಂದ ಆಳಿದರು. ಅವರೊಡನೆಯೇ ಸ್ವಾತಂತ್ರ್ಯಾಭಿಮಾನಿಗಳಾದ ಹ್ಯೂಮ್, ಯೂನಲ್, ಸ್ಮಿತ್, ವೆಡರ್‌ಬರ್ನ್, ಕಾಟನ್, ಆನಿ ಬಿಸೆಂಟ್ ಈ ಮೊದಲಾದ ಬ್ರಿಟಿಷರೇ ಭಾರತೀಯರಿಗೆ ದೇಶಾಭಿಮಾನದ ಮಂತ್ರವನ್ನುಸುರಿ ಜನತೆಯನ್ನು ಕೆರಳಿಸಿದರು. ಕ್ರಿ.ಶ. 1937ರಲ್ಲಿ ದೇಶೀಯರಿಗೆ ಪ್ರಾಂತ ಸರಕಾರಗಳ ಅಧಿಕಾರವನ್ನು ತಾತ್ಕಾಲಿಕವಾಗಿ ಕೊಟ್ಟಾಗ ನಮ್ಮ ಮುಂದಾಳುಗಳು ದೇಶೀಯ ಮಹಮ್ಮದೀಯರನ್ನು ಅವರ ಪ್ರಾತಿನಿಧ್ಯದ ಬಗ್ಗೆ ಪೆಚ್ಚಾಗಿಸಿದರು. ಕ್ರಿ.ಶ. 1947ಕ್ಕೆ ಸ್ವಾತಂತ್ರ್ಯವು ಬಂದಾಗ ದೇಶವು ಎರಡು ರಾಷ್ಟ್ರಗಳಾಗಿ ಒಡೆಯಿತು. ಬ್ರಿಟಿಷರು ಕಾದಿಟ್ಟಿದ್ದ ಗಡಿಯೆಲ್ಲಾ ಅಭದ್ರತೆಗೀಡಾಯಿತು.

ಸ್ವಾತಂತ್ರ್ಯ ದೊರಕಿತು ಎಂದಾಗ ಕೇಳಬೇಕೇ ? ಹಿಂದೂಜನವು ಕಳೆದ 1200 ವರ್ಷಗಳಿಂದ ಎಂದೂ ಭಾರತದಂಥಾ ವಿಶಾಲ ರಾಜ್ಯದ ಅಧಿಕಾರವನ್ನು ಹೊತ್ತದ್ದಿಲ್ಲ. ವಿಜಯನಗರ ರಾಜ್ಯವು ಸಹ ರಾಮರಾಯನೆಂಬ ರಾಯನ ಅಧಿಕಾರದರ್ಪಕ್ಕೆ ಆಹುತಿಯಾಯಿತು. ಇನ್ನೀಗ 1947ರಲ್ಲಿ ಅನಿರೀಕ್ಷಣೀಯವಾಗಿ ದೊರಕಿದ ಸ್ವಾತಂತ್ರ್ಯದ ಬಲದಿಂದ ಹಿಂದೂ ಜನಕೋಟಿಯೆಲ್ಲಾ ಹತ್ತತ್ತು ಅಡಿ ಎತ್ತರ ಬೆಳೆದರು. ಬ್ರಿಟಿಷರು ಚೀನಾ ಮತ್ತು ರಷ್ಯಾದ ನೆರಳು ಸಹ ಈ ದೇಶಕ್ಕೆ ಬೀಳದಂತೆ ಕೈಗೊಂಡಿದ್ದ ವ್ಯವಸ್ಥೆಯನ್ನೆಲ್ಲಾ ಅವ್ಯವಸ್ಥೆಯೊಳಗದ್ದಿದರು. ಪಾಕೀಸ್ಥಾನ, ಟಿಬೇಟ್‌ಗಳ ಮಧ್ಯೆ ನಮ್ಮ ದೇಶದ ಉತ್ತರದ ಗಡಿಯಾವುದೆಂಬುದು ಇನ್ನೂ ನಮಗೆ ಸ್ಪಷ್ಟವಾಗಿಲ್ಲ. ಅಷ್ಟೇ ಅಲ್ಲ, ಕಳೆದ ಶತಮಾನದಲ್ಲಿ ಈ ದೇಶದ ಜನಕ್ಕೆ ಬ್ರಿಟಿಷರು ಕಲಿಸಿದ ದೇಶಾಭಿಮಾನದ ಪರಿಮಿತಿಯೇನೆಂಬುದು ನಮಗೆ ಇನ್ನೂ ವ್ಯಕ್ತವಾಗಿಲ್ಲ. ಇಂಗ್ಲಿಷ್ ವಿದ್ಯೆ. ಇಂಗ್ಲಿಷ್ ಭಾಷೆಗಳೆಲ್ಲವೂ ನಮ್ಮ ದೇಶಾಭಿಮಾನಕ್ಕೆ ಎಟಕದ ಸಾಧನೆಗಳಾಗಿ ಹೋಗಿವೆ. ಶೇಕಡ 75 ರಷ್ಟು ನಿರಕ್ಷರಸ್ತ ಜನರ ಮತಾಧಿಕಾರ ಬಲದಿಂದ ನಮ್ಮ ನಾಯಕರು ತಮಗೆ ಸಹನೀಯವಾದ ಕ್ರಮದಲ್ಲಿ ತಮ್ಮ ನಾಯಕತ್ವವನ್ನು ನಡೆಸುತಿದ್ದಾರೆ. ಇಂದಿಗೆ ಇದೇ ಸುಖ, ಸರಿ. ಮುಂದಿನ ಸುಖದ ಬಗೆಯೆಂತೋ ಏನೋ ?

ಈ ವಿಚಾರಗಳ ಬಗ್ಗೆ ನಾನು ಹೆಚ್ಚು ಹೇಳಲಾರೆನು. ಆದರೆ ನಮ್ಮ ಭಾಷೆ, ದೇಶಭಾಷೆ, ವಿದೇಶೀಯ ಭಾಷೆ ಎಂಬಿವುಗಳ ಬಗ್ಗೆ ಹುಟ್ಟಿರುವ ವಾದವನ್ನು ಕುರಿತು ಒಂದು ಮಾತು ಹೇಳಿದರೆ ಅಪ್ರಾಸಂಗಿಕವಾಗಲಾರದು. ಈ ಗ್ರಂಥವನ್ನು ಓದುವವರು ಒಂದು ವಿಷಯವನ್ನು ತಿಳಿಯಬಹುದು. ಇಂಗ್ಲಿಷ್ ಭಾಷೆಯನ್ನು ಈ ದೇಶದಲ್ಲಿ ಬೇರೂ

ರಿಸಿದವರು ಆಂಗ್ಲೇಯರಲ್ಲ. ಅವರು ಪ್ರಾರಂಭದಲ್ಲಿ ಭಾರತೀಯ ಪಾಠಶಾಲೆಗಳನ್ನೇ ಎಲ್ಲೆಡೆಯೂ ತೆರೆದಿದ್ದರು. ಆದರೆ ಅಂದಿನ ಭಾರತೀಯ ಮುಂದಾಳುಗಳು ಇಂಗ್ಲಿಷ್ ಭಾಷೆ ಮತ್ತು ಇಂಗ್ಲಿಷ್ ವಿದ್ಯೆಯು ನಮ್ಮ ದೇಶದ ಪುರೋಭಿವೃದ್ಧಿಗೆ ಅತ್ಯಾವಶ್ಯಕವೆಂದು ಮನಗಂಡು ಅವರು ಇಂಗ್ಲಿಷ್ ಭಾಷಾ ಶಾಲೆಗಳನ್ನೇ ದೇಶದುದ್ದಕ್ಕೂ ತೆರೆಯಬೇಕೆಂದು ಬ್ರಿಟಿಷ್ ಸರಕಾರವನ್ನು ಕೇಳಿಕೊಂಡರು.

ಸರಿ, ಅಂದು ನಮ್ಮ ಹಿರಿಯರಿಗೆ ಆವಶ್ಯವಿದೆಯೆಂದು ತೋರಿಬಂದು ಅದರಂತೆಯೇ ದೇಶದ ಜ್ಞಾನಾಭಿವೃದ್ಧಿಯ ವ್ಯಾಪಕಕ್ಕೆ ಸಾಧನವಾದ ಇಂಗ್ಲಿಷ್ ಭಾಷೆಯು ಮತ್ತು ಆಂಗ್ಲವಿದ್ಯೆಯು ಇಂದು ಅವರ ಮೊಮ್ಮಕ್ಕಳ ಕಾಲಕ್ಕೆ ಬೇಡವಾಯಿತು, ಏಕೆ? ನೂರಾರು ಭಾಷೆಗಳಿರುವ ಈ ದೇಶದಲ್ಲಿ ವಿಶ್ವಭಾಷೆಯಾದ ಆಂಗ್ಲಭಾಷೆಯೇ ಶಾಲೆ ಮತ್ತು ಖಚೇರಿ ಭಾಷೆಯಾಗಿ ಮುಂದುವರಿದರೆ ನಾವು ಕಳೆದುಕೊಳ್ಳುವುದು ಏನು? ಕ್ರಿ.ಶ 18ನೇ ಶತಮಾನದ ವರೆಗಿದ್ದ ಪರ್ಷಿಯನ್ ಮತ್ತು ಹಿಂದೂಸ್ಥಾನೀ ರಾಜಭಾಷೆಗಳಿಂದ ನಮ್ಮ ಹಿರಿಯರು ಸಾಧಿಸಿದ್ದೇನು? ಅವರು ಕಲಿತದ್ದು ಏನು? ಇನ್ನೀಗ ಕನ್ನಡ ನಾಡಿನಲ್ಲಿ ಕನ್ನಡ, ತಮಿಳು ನಾಡಿನಲ್ಲಿ ತಮಿಳು. ತೆಲುಗು ನಾಡಿನಲ್ಲಿ ತೆಲುಗು, ಹೀಗೆ ನಾಡಿಂದ ನಾಡಿಗೆ ಹಿಂದಿನ ಕಾಲದಲ್ಲಿದ್ದ ವೈಷಮ್ಯವನ್ನೇ ಚಿಗುರಿಸಿ ನಾವು ಮಾಡುವುದೇನು? ಹಾಗಲ್ಲ, ಇಡೀ ಭಾರತಕ್ಕೆ ಹಿಂದೀ ಭಾಷೆಯು ದೇಶಭಾಷೆಯಾದರೆ ನಮ್ಮ ಸ್ವಗೌರವ ಸ್ವಪ್ರತಿಷ್ಠೆಗಳನ್ನು ಆ ರೀತಿ ಪ್ರದರ್ಶಿಸಿ ನಮ್ಮ ದೇಶವನ್ನು ಎಲ್ಲಿಗೆ ಒಯ್ಯಲಿರುವೆವೋ ಎಂದು ಕುತೂಹಲದಾಯಕವಾಗಿ ಕೇಳಬೇಕಾಗಿದೆ.

ಸ್ವಭಾಷೆಯಲ್ಲಿಯೇ ವಿದ್ಯೆಯನ್ನು ಪಡೆದರೆ ಆ ವಿದ್ಯೆಯು ಮಕ್ಕಳಿಗೆ ಸುಲಭದಲ್ಲಿ ಅರ್ಥವಾಗುತ್ತದೆಂಬ ವಾದವು ಶಾಸ್ತ್ರೀಯವಾಗಿ ಸರಿಯಲ್ಲ. ಹಾಗಾದರೆ ನಮ್ಮ ಅಪ್ಪಂದಿರು ಪಡೆದ ಇಂಗ್ಲಿಷ್ ವಿದ್ಯೆಯು ಅವರಿಗೇನೂ ಅರ್ಥವಾಗಲಿಲ್ಲವೇ? ಇಂದಿನ ಮಂತ್ರಿಗಳು ವೈಸ್ ಛಾನ್ಸಲರುಗಳೆಲ್ಲಾ ಬರೇ ಕನ್ನಡ ಯಾ ಹಿಂದೀ ಮೂಲಕ ಬ್ರಹ್ಮ ವಿದ್ಯೆಯನ್ನು ಪಡೆದಿರಬಹುದಾದರೂ ಅವರು ಇಂಗ್ಲಿಷನ್ನು ಕಲಿಯದೇ ಹೋಗಿದ್ದರೆ ಅವರು ಬರೇ ಐಗಳ ಮಠದಲ್ಲಿ ಅಧ್ಯಾಪಕರಾಗಿ ಮಾತ್ರ ಇರುತ್ತಿರಲಿಲ್ಲವೆ? ತಾವು ಮಾತ್ರ ತಲೆಬಾರದ ಇಂಗ್ಲಿಷ್ ವಿದ್ಯೆಯನ್ನು ಪಡೆದು ದೇಶದ ಮಕ್ಕಳಿಗೆ (ತಮ್ಮ ಮಕ್ಕಳಿಗಲ್ಲ) ಹಿಂದೀ ಮತ್ತು ಕನ್ನಡದ ಮೂಲಕ ವಿದ್ಯೆ ಕಲಿತರೆ ನಮ್ಮ ದೇಶವು ರಷ್ಯಾ, ಚೀನಾ, ಜಪಾನ್ ರಾಜ್ಯಗಳಂತೆ ಬಲವತ್ತರವಾಗುತ್ತದೆಂದು ಹೇಳುವ ಕನಸಿನ ಮಾತುಗಳು ಮುಂದಿನ ಜನಾಂಗವನ್ನು ಇನ್ನಾವ ಬಗೆಯ ವಿದ್ಯಾವಂತರಾಗಿ ಮಾರ್ಪಡಿಸುವುದೋ ಎಂದು ಜೆರಗಾಂತು ಯೋಚಿಸಬೇಕಿದೆ. ಈ ಬಗೆಯ ವಿದ್ಯಾವಂತರು ಶಂಕರ, ವಿದ್ಯಾರಣ್ಯ, ಕಬೀರ, ನಾನಕ್ ಎಂಬವರಂತೆ ಆಗಬಹುದು. ಆದರೆ ದೇಶದ 500 ಮಿಲ್ಲಿಯ ಜನ ಅಂತಾಗುವುದು ಅಸಂಭವ. ಅವರೆಲ್ಲಾ 18ನೇ ಶತಮಾನದ ವರೆಗಿದ್ದ ಭಾರತದಲ್ಲಿ ಸದಾರ ದೌಲತ್ ಖಚೇರಿಯ ಖಾಸಾ ಮುನಿಷಿಗಳಾಗಿ ಯಾ ಸಿಪಾಯಿಗಳಾಗಿ ಉಳಿಯುವರು. ಅವರ ಪೈಕಿ ವೀರಾಧಿ ವೀರರು ಆಯಾ ನಾಡು ತಾಲೂಕುಗಳ ನಾಯಕರಾಗಿ. ನವಾಬರಾಗಿ ಪಾಳೆಯಗಾರರಾಗಿ ಮುಂದಕ್ಕೆ ಬರುವರು. ಹಿಂದಿನ ಭಾಷಾವಾರು ಪ್ರಾಂತಗಳೂ ಮುಂದಕ್ಕೆ ಉಳಿಯಲಾರವು. ಕಟ್ಟ ಕಡೆಗೆ ಬರೇ ಜಿಲ್ಲಾವಾರು

ಯೂ ತಾಲೂಕುವಾರು ರಾಜ್ಯಗಳೇ ಆಗುವುವು. ಸರಿ, ಇದು ನಿರಾಶಾವಾದದ ಮಾತಲ್ಲ. ಇಂದಿನ ರಾಜನೀತಿಯ ರೂಪುರೇಷೆಯು ಆ ರೀತಿ ಹರಿಯುತ್ತಿದೆ.

ಕಳೆದ ಶತಮಾನದ ಪ್ರಾರಂಭದ ವರೆಗೂ ನಮ್ಮ ದೇಶದ ಜನ ಸಾಮಾನ್ಯರನ್ನು ನಮ್ಮ ಪ್ರಾಚೀನ ಕಾವ್ಯಗಳೂ ಜಾನಪದ ಗೀತೆಗಳೂ. ಶಾಸ್ತ್ರೀಯ ಗ್ರಂಥಗಳೂ ವಿಚಾರಜ್ಞಾನವನ್ನಿತ್ತು ಪೋಷಿಸಿದುವು. ಅನಂತರ ಆಂಗ್ಲ ವಿದ್ಯೆಯನ್ನು ಪಡೆದ ಭಾರತೀಯರ ಮತ್ತು ಕನ್ನಡಿಗರ ಒಂದು ಹೊಸ ಪೀಳಿಗೆಯ ಸೃಷ್ಟಿಯಾಯಿತು. ಈ ನಾವಿನ್ಯಕ್ಕೆ ಮೆರುಗುಗೊಟ್ಟುದು ಆಧುನಿಕ ವಿದ್ಯೆಯಾಗಿದೆ. ಪಾಶ್ಚಾತ್ಯ ಮತ್ತು ಪೌರಸ್ತ್ಯ ಜ್ಞಾನಗಳೆರಡನ್ನೂ ಲೀನವಾಗಿಸಿ ನೈಪುಣ್ಯತೆಯನ್ನು ಪಡೆದ ಇಂದಿನ ವಿದ್ವಾಂಸನು ಹೊಂದಿರುವ ಎರಡು ಕಣ್ಣುಗಳು ಅವೇ ಆಗಿವೆ. ಆ ಎರಡನೇ ಕಣ್ಣನ್ನು ದೇಶಕ್ಕೆ ಒದಗಿಸಿದವರು ಆಂಗ್ಲೇಯರು. ಇಂದೀಗ ನಾವು ಆ ಎರಡು ಕಣ್ಣುಗಳನ್ನೂ ಉಳಿಸಿಕೊಂಡು ನಮ್ಮ ದೃಷ್ಟಿಯನ್ನು ವಿಶಾಲವಾಗಿಸಲೆಡೆಗೊಡಬೇಕಾಗಿದೆ.

ಇಂದು ಹೊರಡುತ್ತಿರುವ ನಮ್ಮ ಸಾಹಿತ್ಯವು ಪಾಶ್ಚಾತ್ಯ ಸಾಹಿತ್ಯದ ಛಾಯೆಯಾಗಿದೆ. ಎಲ್ಲರೂ ಪಾಶ್ಚಾತ್ಯ ಶೈಲಿಯಲ್ಲಿ ಕಾದಂಬರಿ, ಕವನ, ನಾಟಕ ಇತ್ಯಾದಿಗಳನ್ನು ನಿರ್ಮಿಸಿದ್ದಾರೆ. ಕೆಲವು ಸಾಹಿತಿಗಳೂ ಪರಿಶೋಧನಾಗಾರರೂ ಭಾಷಾಶಾಸ್ತ್ರಜ್ಞರೂ ಪಾಶ್ಚಾತ್ಯರು ಬರೆದುದನ್ನೇ ಅನುಕರಣೆ ಮಾಡಿದ್ದಾರೆ. ಅವರಲ್ಲಿ ಮಹಾಘಟಾನುಘಟಗರೂ ಪಾಶ್ಚಾತ್ಯ ವಿದ್ವಾಂಸರ ಕೃತಿಗಳಿಂದ ಕೃತಿಚೋರತನವನ್ನು ಮಾಡಿದ್ದಾರೆ. ಇಂದಿನ ಸಾಹಿತ್ಯಕ್ಕೆ ಮೂಲಪುರುಷರಾದ ಅವರನ್ನು ಹಿಂದಿಟ್ಟು ತಾವೇ ಬುದ್ಧಿವಂತರೆಂದು ತೋರ್ಪಡಿಸಿಕೊಂಡಿದ್ದಾರೆ; ಅಂತೆಯೇ ಪ್ರಚಾರವನ್ನೂ ನಡೆಸಿದ್ದಾರೆ. ರೀವ್. ಗಾರೆಟ್ಟ್. ಸೇಂಡರ್ಸನ್, ಮ್ಯಾಗ್ಲಿಂಗ್, ವೀಗ್‌ಲ್, ಮೆಕ್ರೆಲ್. ವೂರ್ತ್‌, ರೈಸ್, ಸ್ಟಿಗ್ಲರ್, ಕಾಲ್ಡ್‌ವೆಲ್, ಫ್ಲೀಟ್. ಕಿಟ್ಟೆಲ್. ಹಲ್ಟ್‌ಸ್ಚ್, ಈ ಮೊದಲಾದ ಹಲವು ವಿದ್ವಾಂಸರ ಸ್ಮರಣೆಗೆ ಅಪಚಾರವನ್ನು ಮಾಡಿದ್ದಾರೆ. ನಮ್ಮ ಜನದ ಈ ರೀತಿ ನೀತಿಗಳು ಇಂದಿನದಲ್ಲ; ಬಹು ಹಿಂದಿನ ಕಾಲದಿಂದಲೇ ನಡೆಮುಕೊಂಡು ಬಂದುದು; ಅದು ನಮ್ಮ ದೇಶದ ಮತ್ತೊಂದು ದುರ್ದೈವ! ಪಾಶ್ಚಾತ್ಯರು ತಮ್ಮ ಹಲವು ವರ್ಷಗಳ ಶ್ರಮ ಮತ್ತು ತಪೋಬಲದಿಂದ ಮತ್ತು ಸಾಹಸದಿಂದ ಸಾಧಿಸಿದನ್ನು ಅನಂತರದ ದೇಶೀಯರು ಅವರ ಹೆಸರನ್ನು ಎತ್ತದೆಯೇ ವಿಷಯಗಳನ್ನು ಅವರ ಕೃತಿಗಳಿಂದ ಎತ್ತಿ ಬರೆದು ಅಥವಾ ಬೇರೊಂದು ರೀತಿಯಲ್ಲಿ ಬರೆದು ಅವರನ್ನು ತಮ್ಮದಾಗಿ ತೋರ್ಪಡಿಸಿಕೊಂಡು ಮಾಡಿದ ದುರ್ವ್ಯಾಪಾರವನ್ನು ಇತ್ತೀಚೆಗಿನ ಪಂಡಿತರೂ ಮುಂದುವರಿಸಿದ್ದಾರೆ.

ಒಟ್ಟಾಗಿ ನಾನು ಹೇಳುವುದು ಇಷ್ಟೆ! ನಮ್ಮ ಮಹಾಗ್ರಂಥಕರ್ತರು ಫ್ಲೀಟ್, ರೈಸ್, ಹಲ್ಟ್‌ಸ್ಚ್, ಮೊದಲಾದವರ ಸ್ಫೂರ್ತಿಬಲದಿಂದ ಸಂಶೋಧನಾ ವಿಚಾರಗಳನ್ನು ಬರೆದರು. ಅವರ ಕೈಕೆಳಗೆ ಸ್ವಸ್ಥ ದುಡಿದು ತನ್ನ ಸ್ಥಾನವನ್ನು ಭದ್ರಗೊಳಿಸಿಕೊಂಡರು. ಆದರೂ ಆ ಮೇಧಾವಿ ದೇಶೀಯರು ಗುರುಗಳಿಗೆ ತಕ್ಕ ಕೃತಜ್ಞತೆಯನ್ನು ತೋರಿಸಿದ್ದು ಕಾಣುವುದಿಲ್ಲ. ಹೀಗೆ ಹಲವರ ಸಂಶೋಧನಾ ಹಾಗೂ ಸಾಹಿತ್ಯ ಬರೆಹಗಳು ಅಂದಿನ ಇಂಗ್ಲಿಷ್ ಮತ್ತು ಜರ್ಮನ್ ವಿದ್ವಾಂಸರ ಛಾಯೆಯಾಗಿವೆ. ಇಂದೀಗ

ನಮಗೆ ಆ ಪಾಶ್ಚಾತ್ಯರು ಪರಕೀಯರೂ, ಭ್ರಷ್ಟರೂ ನಮ್ಮ ದೇಶವನ್ನು ಆಳಿದ ದುಷ್ಟರೂ ಆದರು. ಇನ್ನು ಹೇಳಬೇಕೇ ? ಅವರ ಹೆಸರುಗಳನ್ನು ಅವರಿಂದಲೇ ವಿದ್ಯೆಯನ್ನು ಪಡೆದ ನಮ್ಮ ಮಹಾಜನರು ಎತ್ತುವರುಂಟೆ ? ತಮ್ಮ ಗ್ರಂಥಗಳಲ್ಲಿ ಅವರನ್ನು ಸ್ಮರಿಸುವರುಂಟೇ ? ಆದರೆ ಆ ಪಾಶ್ಚಾತ್ಯರು ಬರೆದಿಟ್ಟ ಸಹಸ್ರಾರು ಬರವಣಿಗೆಗಳನ್ನು ಇಂದು ಪುನರ್ಮುದ್ರಿಸಿ ಜನಕ್ಕೆ ಹಂಚಿದ್ದಾದರೆ ನಮ್ಮ ಸಾಹಿತಿಗಳೂ ಇತಿಹಾಸಕಾರರೂ ಸಂಶೋಧನಾ ತಜ್ಞರೂ ತಾವಾಗಿ ಹೇಳದ್ದು ಏನು, ಆ ಪರಕೀಯರು ಬರೆದುದನ್ನು ತಾವು ಒಪ್ಪದೆಯೇ ಅವುಗಳನ್ನು ತಮ್ಮ ಬರವಣಿಗೆಯಲ್ಲಿ ಸೇರಿಸಿದೆವು ಎಂದು ವ್ಯಕ್ತವಾಗುತ್ತದೆ.

ಒಟ್ಟಾಗಿ ಹೇಳುವುದಿದ್ದರೆ ಪಾಶ್ಚಾತ್ಯ ವಿದ್ವಾಂಸರ ಸೇವೆಯು ಈ ದೇಶಕ್ಕೆ ಈ ನಾಡಿಗೆ ಅಪರಿಮಿತವಾಗಿ ಸಂದಿದೆ. ಇಂದಿನ ಇತಿಹಾಸಕಾರನೂ ಪರಿಶೋಧಕನೂ ಸಾಹಿತಿಯೂ ತಮ್ಮ ತಮ್ಮ ಕ್ಷೇತ್ರದಲ್ಲಿ ನಡೆಸುವ ಸಾಧನೆಗೆ ಆಧಾರವಾವುದೆಂಬುದನ್ನು ನಿಷ್ಠೆಯಿಂದ ಒಪ್ಪಬೇಕು. ಪಾಮರ ಜನಕ್ಕೆ ತಮ್ಮ ಪ್ರತಿಷ್ಠೆಯನ್ನು ತೋರಿಸುವ ವೇಳೆಗೆ ಮೂಲ ಲೇಖಕರಿಗೆ ಅನ್ಯಾಯವನ್ನು ಬಗೆಯುವ ಕುಹಕವನ್ನು ತಳೆಯುವುದು ಅಕ್ಷಮ್ಯವಾದ ವಿಚಾರವಾಗಿದೆ. ಹೇಗೂ ಇವೆಲ್ಲಾ ಇಂದಿನ ನಮ್ಮ ರಾಷ್ಟ್ರೀಯ ಅವ್ಯವಹಾರ ಮತ್ತು ಅಕ್ರಮಗಳ ಪಟ್ಟಿಗೆ ಸೇರತಕ್ಕ ವಿಚಾರಗಳಾಗಿ ಹೋಗಿವೆ.

ಇಂದಿನ ನಮ್ಮ ದೇಶಾಭಿಮಾನ ಮತ್ತು ಭಾಷಾಭಿಮಾನವನ್ನು ಅಂದು ನೀರೆರೆದು ಪ್ರೋತ್ಸಾಹಿಸಿದವರು ಆಂಗ್ಲ [illegible]. ಆ ವರೆಗೂ ನಮ್ಮ ದೇಶದ ಜನಕ್ಕೆ ಮತ್ತು ನಾಯಕರು ಮತ್ತು ನವಾಬರಿಗೆ ತಮ್ಮ ತಮ್ಮ ಸ್ವಾರ್ಥಾಭಿಮಾನವೊಂದು ತಿಳಿದಿತ್ತಲ್ಲದೆ ದೇಶಾಭಿಮಾನವೆಂಬುದು ಅವರಿಗೆ ಸತ್ತಪ್ರಾಯವಾದ ವಿಷಯವಾಗಿತ್ತೆಂಬುದಕ್ಕೆ ನೂರಾರು ನಿದರ್ಶನಗಳಿವೆ. ಹೇಗೂ ಇತ್ತೀಚೆಗೆ ಬೆಳೆದು ಬರುತ್ತಿರುವ ನಮ್ಮ ನುಡಿ, ನಮ್ಮ ನಾಡು ಎಂಬ ಅಭಿಮಾನಗಳನ್ನು ಸಂಕೀರ್ಣ ವಲಯದೊಳಕ್ಕೆ ಸೇರಿಸಿ ವಿಶಾಲ ಭಾವನೆಗೆಡೆಗೊಡುವ ವಿಶಿಷ್ಟ ನೀತಿಗಳನ್ನು ತಳೆದಾಗ ನಾವು ಪಡೆಯುವ ಸ್ವರ್ಗದ ಮಾದರಿಯೆಂತಹುದೆಂದು ತಿಳಿಯಲು ಬಹುಕಾಲವೇನೂ ಬೇಕಾಗಲಾರದು.

ನಾನು ಈ 'ಮುನ್ನುಡಿ'ಯನ್ನು ದೀರ್ಘ ಬೆಳೆಸಲಾರೆನು. ಈ ಗ್ರಂಥವು ನಾನು ಹಲವು ವರ್ಷಗಳ ಕಾಲ ನಡೆಸಿದ ಪ್ರಯತ್ನದ ಫಲವಾಗಿದೆ. ನಾನು 19ನೇ ವರ್ಷ ಪ್ರಾಯದ ಹುಡುಗನಾಗಿದ್ದಾಗ ಕನ್ನಡ ಸಾಹಿತ್ಯದ ರೂಪುರೇಷೆಗಳೆಂತೆಂದು ನೋಡಲು ತೊಡಗಿದೆನು. 1939ನೇ ವರ್ಷ ಕಾಲದಲ್ಲಿ ನನಗೆ ಶಬ್ದಮಣಿ ದರ್ಪಣ ಮತ್ತು ಛಂದೋಂಬುಧಿ ಗ್ರಂಥಗಳು ಬೇಕಾಗಿದ್ದುವು. ಆಗ ಅವುಗಳ ಪ್ರತಿಗಳನ್ನು ಅತೀ ಪ್ರಯಾಸಪಟ್ಟು ಮದ್ರಾಸಿನಿಂದ ತರಿಸಿದೆನು. ಆವೆರಡು ಗ್ರಂಥಗಳೂ ಫರ್ನಾಂಡಿಸ್ ಕಿಟ್ಟೆಲ್ ಇವರಿಂದ ಸಂಪಾದಿಸಲ್ಪಟ್ಟು ಇಂಗ್ಲೀಷಿನಲ್ಲಿ ಅವನ ವಿವರಣೆಯೊಂದೊಡಗೂಡಿ ಪ್ರಕಟವಾಗಿದ್ದುದನ್ನು ನೋಡಿ ಆಶ್ಚರ್ಯಚಕಿತನಾದೆನು.

ಅಲ್ಲಿಂದ ಮೊದಲ್ಗೊಂಡು ನಾನು ಈ ವಿಷಯದಲ್ಲಿ ವಿಶೇಷ ಆಸಕ್ತನಾದೆನು. ಪಾಶ್ಚಾತ್ಯ ವಿದ್ವಾಂಸರು ಇನ್ನೇನು ಚಮತ್ಕಾರಿಕ ಕೆಲಸಗಳನ್ನು ಮಾಡಿದ್ದಾರೆಯೆಂದು ನೋಡುವುದಕ್ಕೆಳಸಿದೆನು. ದಕ್ಷಿಣ ಹಿಂದೂಸ್ಥಾನದ ಹಲವು ಪ್ರಧಾನ ಗ್ರಂಥ ಭಂಡಾರ

ಗಳನ್ನು ಶೋಧನೆ ಮಾಡಿದೆನು. ಅನಂತರ ವರ್ಷಗಳು ಕಳೆದಂತೆ ಪೂನಾ, ಬೊಂಬಾಯಿ, ಢಿಲ್ಲಿ ಇತ್ಯಾದಿ ಸ್ಥಳಗಳಲ್ಲೂ ಅದೇ ಅನ್ವೇಷಣೆಗಿಳಿದೆನು. ಪರಿಣಾಮವಾಗಿ ನನಗೆ ಕಂಡು ಬಂದುದೇ ಒಂದು, ನಮ್ಮ ಜನರು ಹಾರಿಸುತ್ತಿದ್ದ ಕಲಿಬುರುಡೆ ಗಾಳಿಪಟಗಳೇ ಇನ್ನೊಂದು ಎಂಬಂತೆ ತೋರಿತು. ಪಾಶ್ಚಾತ್ಯರು ಈ ದೇಶವನ್ನು ಆಳಿದ್ದು ಮಾತ್ರವಲ್ಲ, ಮುನ್ನಡೆಸಿದ್ದು ಮಾತ್ರವಲ್ಲ, ಪ್ರಗತಿಯನ್ನು ಸಾಧಿಸಿದ್ದೇ ಅಲ್ಲ; ಬಹು ಆಳವಾಗಿ ಅನ್ವೇಷಣೆಯನ್ನೆಸಗಿ ಅದ್ಭುತ ಕಾರ್ಯವನ್ನೆಸಗಿದ್ದಾರೆಂದು ದೃಢವಾದ ನಂಬಿಕೆ ಹುಟ್ಟಿತು. ವೇದ ಪುರಾಣಾದಿಗಳಿಂದ ಹಿಡಿದು ಪ್ರಾಚೀನ ಶಾಸನಗಳೇ ಮೊದಲಾದುವು ಗಳಿಂದ ತೊಡಗಿ, ಹಳ್ಳಿಯ ಹಾಡು ದಾಸರ ಹಾಡು ಇತ್ಯಾದಿಗಳವರೆಗೂ ಅವರು ಯಾವುದನ್ನೂ ಬಿಡದೆ ಕಲಿಯುಗದ ತ್ರಿವಿಕ್ರಮರಂತೆ ಭಾರತ ಭೂವ್ಯೋಮವನ್ನು ವ್ಯಾಪಿಸಿ ಅಪಾರವಾಗಿ ದುಡಿದಿದ್ದಾರೆ.

ಕಳೆದ ಸುಮಾರು ಹತ್ತು ವರ್ಷಗಳಿಂದ ನಾನು ಆಫ್ರಿಕಾ, ಯೂರೋಪು ಮತ್ತು ಉತ್ತರ ಅಮೇರಿಕಾ ಖಂಡಗಳಲ್ಲಿ ಕೈಗೊಂಡ ಜೀವನ ಮತ್ತು ಪ್ರವಾಸವು ನನ್ನ ಈ ಗ್ರಂಥಕ್ಕೆ ಒಂದು ಪರಿಪುಷ್ಟತೆಯನ್ನು ಒದಗಿಸಿತೆಂದು ಸಂತೋಷದಿಂದ ಹೇಳುತ್ತಿದ್ದೇನೆ. ಯೂರೋಪು ಖಂಡದ ಎಲ್ಲಾ ದೇಶಗಳಲ್ಲೂ ಆಯಾ ದೇಶೀಯ ಭಾಷೆಗಳಲ್ಲಿ ಭಾರತೀಯ ಸಾಹಿತ್ಯವು ವಿಪುಲವಾಗಿ ಹಬ್ಬಿವೆ. ಕಳೆದ ಶತಮಾನದಲ್ಲಿ ನಡೆದ ಹಿಂದೂ ಸಾಹಿತ್ಯ ಪರಿಶೋಧನೆ ಮತ್ತು ಪ್ರಚಾರಣೆಯು ಅದ್ಭುತವಾದ ರಾಷ್ಟ್ರೀಯ ಘಟನೆಯಾಗಿದೆ. ಯೂರೋಪಿನ ಬರ್ಲಿನ್, ವಿಯೆನ್ನಾ, ಲೈಪ್ಸಿಗ್, ಪ್ಯಾರಿಸ್, ಲಿಸ್ಬನ್, ಲಂಡನ್, ಆಕ್ಸ್‌ಫರ್ಡ್, ಆಮ್ಸ್ಟರ್‌ಡಾಂ ಇತ್ಯಾದಿ ಹಲವು ನಗರಗಳು ಇಂದಿಗೂ ಭಾರತೀಯ ಸಾಹಿತ್ಯದ ಆಗರವಾಗಿವೆ. ಸಹಸ್ರಾರು ಪ್ರಾಚೀನ ಭಾರತೀಯ ಗ್ರಂಥಗಳು ಇಂಗ್ಲಿಷ್, ಫ್ರೆಂಚ್, ಡಚ್, ಜರ್ಮನ್, ಸ್ಪ್ಯಾನಿಷ್, ರಷ್ಯನ್, ಲ್ಯಾಟಿನ್, ಪೋರ್ಚುಗೀಸ್ ಇತ್ಯಾದಿ ಭಾಷೆಗಳಲ್ಲಿ ಇವೆ. ಪೂರ್ವಕಾಲದಲ್ಲಿ ಚೀನಾ, ತಿಬೇಟ್, ಬರ್ಮಾ, ಮಧ್ಯ ಏಷ್ಯಾಗಳ ಕಡೆಗೆ ಭಾರತೀಯ ಗ್ರಂಥಗಳು ಪ್ರವಾಸಿಗರ ಹಾಗೂ ಕಲಾವಿದರ ಮೂಲಕವಾಗಿ ಹೋದುವು. ಆದರೆ ಕಳೆದ ಶತಮಾನದಲ್ಲಿ ನಮ್ಮ ಸಾಹಿತ್ಯ ಸಂಸ್ಕೃತಿಗಳ ಹೆದ್ದೆರೆಯು ಪಶ್ಚಿಮಾಭಿಮುಖವಾಗಿ ಹರಿದು ಹೋದುದು ಈ ದೇಶದ ಚರಿತ್ರೆಯಲ್ಲಿ ಎಂದೂ ನಡೆಯದ ಅಭೂತಪೂರ್ವ ಘಟನೆಯಾಗಿದೆ.

ಈ ಗ್ರಂಥದ ಬಗ್ಗೆ ವಿಷಯ ಸಂಗ್ರಹಣವನ್ನು ಹಲವೆಡೆಗಳಿಂದ ಕೈಗೊಂಡಿದ್ದೇನೆ. ಈ ದೇಶದ ಹಲವು ಗ್ರಂಥಭಂಡಾರಗಳಲ್ಲದೆ ಯೂರೋಪು ಮತ್ತು ಉತ್ತರ ಅಮೇರಿಕಾದ ಹಲವು ವಿದ್ಯಾಕ್ಷೇತ್ರಗಳೂ ನನಗೆ ಸಹಾಯಕವಾಗಿವೆ. ಇಂಗ್ಲೆಂಡಿನ ಲಂಡನ್, ಆಕ್ಸ್‌ಫರ್ಡ್, ಮತ್ತು ಮ್ಯಾಂಚೆಸ್ಟರ್ ಗ್ರಂಥ ಭಂಡಾರಗಳನ್ನು ಕುರಿತು ಪ್ರತ್ಯೇಕವಾಗಿ ಹೇಳಬೇಕಾಗಿದೆ. ಈ ಗ್ರಂಥದ ಬಗ್ಗೆ ಈ ಕೆಲವು ಸೂಚನೆಗಳನ್ನು ಕೊಡಲು ಬಯಸುತ್ತೇನೆ —

೧. ಈ ಹೊತ್ತಗೆಯನ್ನು ಮೂರು ಭಾಗವಾಗಿ ವಿಭಾಗಿಸಲಾಗಿದೆ: ಮೊದಲನೇ ಭಾಗದಲ್ಲಿ ೧೧, ಎರಡನೆ ಭಾಗದಲ್ಲಿ ೫ ಮತ್ತು ಮೂರನೇ ಭಾಗದಲ್ಲಿ ೯ ಅಧ್ಯಾಯಗಳಿವೆ, ಒಟ್ಟಾಗಿ ೨೫ ಅಧ್ಯಾಯಗಳಿವೆ.

೨. ಮೊದಲನೇ ೧೧ ಅಧ್ಯಾಯಗಳಲ್ಲಿ ಇಡೀ ಭಾರತೀಯ ಸಂಸ್ಕೃತಿ, ಸಾಹಿತ್ಯ ವಾಸ್ತುಶಿಲ್ಪ ಇತ್ಯಾದಿಗಳ ಬಗ್ಗೆ ಪಾಶ್ಚಾತ್ಯರು ಸಲ್ಲಿಸಿದ ಸೇವೆಯ ಸಿಂಹಾವಲೋಕನವನ್ನಷ್ಟೇ ಮಾಡಲಾಗಿದೆ. ಜೋನ್ಸ್, ಕೊಲ್‌ಬ್ರೂಕ್, ಕ್ಯಾರಿ, ವಿಲ್ಸನ್, ಮ್ಯಾಕ್ಸ್ ಮುಲ್ಲರ್ ಈ ಕೆಲವು ವಿದ್ವಾಂಸರ ಬಗ್ಗೆ ವಿವರಣಾತ್ಮಕವಾಗಿ ಹೇಳಲಾಗಿದೆ. ಹಾಗಿದ್ದರೂ ವಿವಿಧ ಭಾರತೀಯ ಭಾಷೆಗಳ ಸೇವೆ ಸಲ್ಲಿಸಿದ ಇನ್ನೆಷ್ಟೋ ಸಹಸ್ರಾರು ಜನ ಐರೋಪ್ಯಾ ವಿದ್ವಾಂಸರನ್ನು ಕುರಿತು ಪ್ರಸ್ತಾಪಿಸಲು ಸಾಧ್ಯವಾಗಲಿಲ್ಲ; ಅವೆಲ್ಲವನ್ನೂ ಪೂರ್ತಿ ಹೇಳಲು ಈ ಪ್ರಮಾಣದ ಗ್ರಂಥಗಳು ಇನ್ನೆಷ್ಟೋ ಬೇಕಾಗುತ್ತವೆ.

೩. ಪ್ರಾರಂಭದಲ್ಲಿ ಕೊಟ್ಟ ಚಿತ್ರಗಳಲ್ಲದೆ ಮೊದಲನೇ ಮತ್ತು ಎರಡನೇ ಭಾಗದ ಮಧ್ಯೆ ಕೆಲವು ಚಿತ್ರಗಳು ಕೊಡಲ್ಪಟ್ಟವೆ. ಇವುಗಳಲ್ಲಿ ಕಳೆದ ಶತಮಾನದ ಕೆಲವು ವಿಶೇಷ ಗ್ರಂಥಪುಟಗಳಿತ್ಯಾದಿಗಳನ್ನೂ ಸೇರಿಸಲಾಗಿವೆ.

೪. ಅಧ್ಯಾಯ 12 ರಿಂದ 16 ರವರೆಗೆ ಪಾಶ್ಚಾತ್ಯ ಕ್ರೈಸ್ತ ಗುರುಗಳೂ ವಿದ್ವಾಂಸರೂ ಕನ್ನಡದಲ್ಲಿ ನಿರ್ಮಿಸಿದ ಬೈಬಲ್ ಸಾಹಿತ್ಯವನ್ನು ಕುರಿತು ವಿವರಿಸಲಾಗಿದೆ. ಕನ್ನಡದಲ್ಲಿ ಬೈಬಲನ್ನು ಕಳೆದ ಶತಮಾನದಲ್ಲಿ ಬರೆದ ಎಲ್ಲಾ ಕ್ರೈಸ್ತ ಗುರುಗಳ ಹೆಸರುಗಳೂ ಇದರಲ್ಲಿ ಸೇರಿರಬಹುದೆಂದು ನಂಬಿದ್ದೇನೆ. ಜೈನಪುರಾಣ ಶಿವಪುರಾಣ ಇತ್ಯಾದಿಗಳೂ ಕನ್ನಡ ಸಾಹಿತ್ಯದಲ್ಲಿರುವಂತೆ ಬೈಬಲ್ ಪುರಾಣವೂ ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಅಂಗವೆಂಬುದನ್ನು ಲಕ್ಷಿಸಬೇಕಿದೆ. ಬೈಬಲ್ ಕತೆ, ಬೈಬಲ್ ಕವನ, ಬೈಬಲ್ ಪ್ರಸಂಗಗಳೆಲ್ಲವೂ ಆ ಮಹಾ ಸಾಹಿತ್ಯಕ್ಕೆ ಸೇರಿವೆಯೆಂದೆನ್ನಬಹುದು.

೫. ಅನಂತರ ೨ ನೇ ಮತ್ತು ೩ ನೇ ಭಾಗದ ಮಧ್ಯೆ ಇನ್ನೊಂದು ಗುಚ್ಛ ಚಿತ್ರಗಳು ಕೊಡಲ್ಪಟ್ಟವೆ. ಪ್ರಧಾನ ಗ್ರಂಥ ಪುಟಗಳೂ ಪ್ರಾರಂಭದ ಕನ್ನಡ ಅಕ್ಷರ ಅಚ್ಚು ಮೊಳೆಗಳೂ ಗ್ರಂಥ ಭಾಗಗಳೂ ಇತ್ಯಾದಿಗಳ ಚಿತ್ರಗಳನ್ನು ಸಾಧ್ಯವಾದಷ್ಟು ಕೊಡಲಾಗಿವೆ.

೬. ಕಡೇ ೯ ಅಧ್ಯಾಯಗಳಲ್ಲಿ ಪಾಶ್ಚಾತ್ಯ ವಿದ್ವಾಂಸರು ಕನ್ನಡ ಸಾಹಿತ್ಯದ ಬಗ್ಗೆ ಕೈಗೊಂಡ ಸೇವೆಯನ್ನು ಕುರಿತು ಪ್ರಸ್ತಾಪಿಸಲಾಗಿದೆ. ಹೇಂಡ್ಸ್. ರೀವ್, ಮೆಕ್ರೆಲ್, ಗೇರೆಟ್, ವೀಗಲ್, ಮ್ಯಾಗ್ಲಿಂಗ್ ಸೇಂಡರ್ಸನ್. ಫ್ಲೀಟ್. ರೈಸ್. ಜ್ಜಿಗ್ಲರ್. ಕಿಟ್ಟೆಲ್. ಈ ಮೊದಲಾದ ಧೀಮಂತ ಸಾಹಿತಿಗಳ ವಿಷಯವಾಗಿ ವಿಸ್ತಾರವಾಗಿ ಹೇಳಲಾಗಿದೆ. (17ನೇ ಅಧ್ಯಾಯದಲ್ಲಿ ದೇಶೀಯ ವಿದ್ವಾಂಸರು ಕಳೆದ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯ ಸಿಂಹಾವಲೋಕನವನ್ನೂ ಮಾಡಲಾಗಿದೆ.)

೭. ಅಂತ್ಯದಲ್ಲಿ ಕೊಟ್ಟ Index ನಲ್ಲಿ ಬರೇ ಪಾಶ್ಚಾತ್ಯರ ಹೆಸರುಗಳನ್ನು ಮಾತ್ರ ಕೊಡಲಾಗಿವೆ. ಕೆಲವೇ ಭಾರತೀಯರ ಹೆಸರುಗಳನ್ನು ಅವರಲ್ಲಿ

ಸೇರಿಸುವ ಅವಶ್ಯಕತೆಯು ತೋರಲಿಲ್ಲ.

೮. ಐರೋಪ್ಯಾ ಸಾಹಿತಿಗಳ ಹೆಸರುಗಳನ್ನೆಲ್ಲಾ ಅಂತೆಯೇ ಸ್ಪಷ್ಟವಾಗಿಸಲು ಮತ್ತು ಮುಂದಿನ ಪೀಳಿಗೆಗೆ ಆ ಇಂಗ್ಲಿಷ್ ಹೆಸರುಗಳ ಬರೆವಣಿಗೆ ಕ್ರಮವನ್ನು ಕಾದಿಡುವ ಸಲುವಾಗಿ ಅವನ್ನೆಲ್ಲಾ ಇಂಗ್ಲಿಷ್‌ನಲ್ಲಿಯೇ ಕೊಡಲಾಗಿದೆ. ವಿದೇಶೀಯ ಭಾಷಾ ಶಬ್ದಗಳನ್ನು ಬೇರೊಂದು ಭಾಷೆಯಲ್ಲಿ ಬರೆದಾಗ ಅವುಗಳ ಬರೆವಣಿಗೆ ಮತ್ತು ಉಚ್ಚಾರಣೆಯಲ್ಲಿ ಹೇಗೂ ಸ್ವಲ್ಪಮಟ್ಟಿಗೆ ಭೇದವುಂಟಾಗದಿರದೆಂಬುದನ್ನು ಬಗೆದು ಹೆಸರುಗಳನ್ನೂ ಅವರ ಕೆಲವು ಪ್ರಾಮುಖ್ಯ ಹೇಳಿಕೆಗಳನ್ನೂ ಇಂಗ್ಲಿಷ್‌ನಲ್ಲಿ ಅಂತೆಯೇ ಕೊಡಲಾಗಿವೆ.

ಇದರಲ್ಲಿ ಕೊಡಲಾದ ಕೆಲವು ಭಾವಚಿತ್ರಗಳ ಮೂಲಪ್ರತಿಗಳನ್ನು ನನಗೆ ದೊರಕಿಸಿಕೊಟ್ಟು ಸಹಕರಿಸಿದ ಹಿಂದೂಸ್ಥಾನ, ಯೂರೋಪು ಮತ್ತು ಉತ್ತರ ಅಮೇರಿಕಾದ ಕೆಲವು ಪ್ರಧಾನ ಗ್ರಂಥಭಂಡಾರಗಳ ವ್ಯವಸ್ಥಾಪಕರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಗ್ರಂಥದಿಂದ ಏನನ್ನಾದರೂ ಎತ್ತಿ ಬರೆಯುವವರು ಅಥವಾ ಭಾವಚಿತ್ರಗಳನ್ನು ಉಪಯೋಗಿಸುವವರು Copy-right ಖಾನೂನನ್ನು ಅಕ್ಷರಶಃ ಪಾಲಿಸಬೇಕೆಂದು ಕೇಳಿಕೊಳ್ಳುತ್ತೇನೆ. ಉದಾಹರಣೆಗೆ ಜೋನ್ಸ್, ವಿಲ್ಸನ್, ಮ್ಯಾಕ್ಸ್ ಮುಲ್ಲರ್ ಇಂಥವರ ಹೇಳಿಕೆಗಳನ್ನು ಅವರ ಮೂಲ ಬರೆವಣಿಗೆ ನೋಡದೆ ಇಂಥಾ ಗ್ರಂಥಗಳಿಂದ ಎತ್ತಿ ಬರೆದು ಕಡೆಗೆ ಅವರು ಹಾಗೆ ಹೇಳಿದರು ಎಂದು ಬರೆದು ಯಾ ಚಿತ್ರಗಳನ್ನು ಉಪಯೋಗಿಸಿ ನೇರವಾಗಿ ಕೃತಿಚೌರ್ಯವನ್ನು ಹಿಂದಿನ ಗ್ರಂಥಗಳಿಂದ ಇತರರು ಹೆಕ್ಕಿ ಮಾಡಿದ ಸಂದರ್ಭಗಳಿವೆ. ನಮ್ಮ ಸಾಹಿತ್ಯ ರಚನೆಯನ್ನು ಶುದ್ಧವಾಗಿಡುವ ಉದ್ದೇಶದಿಂದ ಇದನ್ನು ಹೇಳುತಿದ್ದೇನಲ್ಲದೆ ಅನ್ಯಥಾ ಅಲ್ಲ. ಓದುಗರು ನನ್ನನ್ನು ಕ್ಷಮಿಸಬೇಕು. ಒಂದೆರಡು ಬಾರಿ ಅಂಥವರ ಮೇಲೆ ಖಾನೂನು ಬದ್ಧ ಕ್ರಮವನ್ನು ತೆಗೆಯಬೇಕಾಗಿದ್ದ ಕಹಿ ಪ್ರಸಂಗವನ್ನೂ ಖೇದಪೂರ್ವಕವಾಗಿ ಇಲ್ಲಿ ನೆನೆಯುತ್ತೇನೆ.

ಅಲ್ಲಲ್ಲಿ ಕೆಲವು ಮುದ್ರಣ ತಪ್ಪುಗಳು ಕಾರಣಾಂತರಗಳಿಂದ ಬಿದ್ದುಹೋಗಿವೆ. ಅವುಗಳಲ್ಲಿ ಕೆಲವು ಮುಖ್ಯವಾದುವನ್ನು ಆಯ್ದು ಪ್ರತ್ಯೇಕವಾಗಿ ಒಂದು 'ತಿದ್ದುಪಡಿ' ಪಟ್ಟಿಯಲ್ಲಿ ಕೊಡಲಾಗಿದೆ.

ಈ ಗ್ರಂಥವನ್ನು ನನ್ನ ಕೋರಿಕೆಯಂತೆ ಸರ್ವಾಂಗ ಸುಂದರವಾಗಿ ಮುದ್ರಿಸಿ ಕೊಟ್ಟ ಮೈಸೂರು ಉಷಾ ಮುದ್ರಣಾಲಯದ ನನ್ನ ಮಿತ್ರರಾದ ಶ್ರೀ ಆರ್. ಎನ್. ಹಬ್ಬು ಇವರಿಗೆ ನಾನು ಋಣಿಯಾಗಿದ್ದೇನೆ.

ಬ್ರಿಟಿಷ್ ಕೊಲೊಂಬಿಯಾ,
ಕೆನಡಾ !
ತಾ ೧—೧—೧೯೬೯

ಐ. ಮಾ. ಮುತ್ತಣ್ಣ

# INTRODUCTION

## AND

## A TRIBUTE TO WARREN HASTINGS, THE FIRST GOVERNOR-GENERAL OF INDIA AND A GREAT PHILOSOPHER-STATESMAN

The British period in the Indian history is certainly a most modern and the most conscientious age of intellectual renaissance after many centuries of lull and lack of creative urge of any significance in the country. What nourished the hearts of the fallen and down-trodden millions of the time was just the past glory of their ancestors, the Vedas and a lot of their scriptural wealth, enormous riches of the by-gone days, the glorious exploits of centuries ago and good many other things that had accompanied all that. But again all those were just the things of old, and, they were nowhere within one's reach by the time the country came under the Asian onslaught and domination of a new religious group called the Islam, bit by bit from about the 10th century, most of North India by about the 13th century, and the most of India in the 15th century. The Turks, the Tartars, the Mongols, the Afghans, the Persians, the Arabs and the Mughals were all foreigners, and all of them had their day here for well over 800 years.

Who says that the maxim enunciated in the Gita, *Dharma Samsthapanarthaya Sambhavaami Yuge Yuge*, is just a myth? As one great soul would appear to re-establish Dharma, a mighty upsurge or a volcanic eruption would also take place to change the course of events, and if it helps to restore Dharma or righteousness, it evidently shows that God's command is at work. Such a thing did happen when the European adventurers began hovering in the Indian Ocean in the 17th century, and then set foot on the soil of the land which they called 'Sentinel of the East'. The Muslim influence and power was slowly elbowed out and that long needed and much wanted change in the country took place at the turn of the 18th century. The medieval tyranny saw its doom at Plassey, Buxaar, Arcot in the South, and at many places, and a new India was emerging of which the Europeans were the tenants who seemed to have

come to reestablish the order of Dharma and unite the country which was hopelessly molested, temples desecrated, citadels demolished, sculptures erased, classics destroyed, religion tampered and everything of the past absolutely degenerated.

The Europeans, particularly the British, who came in the 17th century, were essentially the traders. But it was God's will that they were also His messengers who were sent to rebuild the past, recast the old order, reform the tradition, renew the past glory and remould the entire structure of the country from the blessed Islamic hatchet to a refined Hindu facet.

From 1765, the year when the British flag was first hoisted at the historic Fort William of Calcutta to 1947, a period of 182 years is too short a period to achieve miracles in a country which was ravaged and mutilated during the 1000 years of the Islamic onslaught, and yet it was they, the British who could achieve so much in so short a time and kick up the country into the modern age of the 20th century, whatever may be the view of the prejudiced politicians and the biased historians.

While Robert Clive proved to be a military genius who laid the foundation of an empire, his successor, Warren Hastings was certainly a builder of a great developmental structure over that. The first Governor-General of India from 1772, Warren Hastings had also the distinction of being the only Governor-General to serve in that high capacity for thirteen long years till 1785. His achievements both in the field of politics and administration excited a great admiration of a few and envy of many of his contemporaries and colleagues.

Yes, here one may remember history, that ungrateful record of events as far as the unfortunate persons were concerned. Warren Hastings was known more as a man who was impeached than honoured and as one disloyal than being dedicated to the task that he was entrusted to serve. This kind of accusation is a tragic truth in the case of almost all good men. However, in the case of Warren Hastings, all those assumptions were proved to be a hoax.

That sensational proceedings of the impeachment of a great man who was the ruler of a great and large country with complex problems of the time, was conducted at the commodious hall of Westminster, London, and that did draw attention of the whole of England, and to some extent of Europe. The

proceedings were dragged on from 1788 to 1795, a long weary and worthless trial which was at last found to have been a case with neither stuff nor proof. Edmund Burke and John Sheridon poured forth their oratorical skill to the winds for days, months and even years and on the deaf ears of those esteemed judges who had presided over that brilliantly decorated historic court. Lord Macaulay characterised the whole scene thus:

> "Warren Hastings...... looked like a great man and not like a bad man........The orator (Burke) made no attempt to control his passion, and his want of moderation weakened the force of his arguments .......".

People create sensation from out of nothing or out of trifles. The historic impeachment proceedings against a man of great integrity, of proved honesty and of political morality, signified nothing. The case was finally dismissed and Warren Hastings was sanctioned a liberal pension of £ 4000 a year. Everyone testified to his great service to India and to the esteem with which he was held by the Directors of the East India Company. His large circle of friends included William Pitt, prime minister of England, Dr. Samuel Johnson, the great scholar, Sir William Jones, that renowned Orientalist, Edward Gibbon, the historian, and many others. Personally Warren Hastings was a gem of a man, and Mr. P. E. Roberts spoke about him thus:

> "No one ever doubted his (Warren Hastings') transcendent abillty, no one doubts his noble patriotism, his laborious, never-ceasing efforts to preserve the charge committed to him in the East, and his wonderful patience under adversity.......Morally he possessed magnificent qualities."

Warren Hastings was born in 1732. He came to India in 1759 and joined as a clerk in the office of the East India Company. From there he rose up step by step by dint of his ability and integrity. He was well-read, intelligent and popular among his colleagues and officials. His Governor-Generalship for thirteen years was a remarkable period in the history of India, and it was he who had to turn the tide of events of this vast country. Politically, one might say that it was for the advantage of the British, but in effect it turned out to be more beneficial to India in many ways.

The time of Warren Hastings in India was best known as a glorious era of the Hindu literary renaissance which began in the second half of the 18th century, and continued right up to the end of the last century. His love for India was so much that it is said that:

> "Sitting in a remote Bengalee town, with ample leisure for reflection, Warren Hastings wondered at the vastness of the country, its richness and variety, and, above all, the antiquity and the splendour of its civilization. Unobscured by prejudice, his observant eye and his deep understanding stimulated in him a profound and an almost reverant admiration for India's anceint heritage."

Warren Hastings should be credited to the revival of the country's past glory and to the emergence of the intellectual and educational progress. As one of the founders and as the first President of the Royal Asiatic Society. Warren Hastings initiated a movement of literary development, research and rediscovery of the entire Asian culture in general, and of the Indian culture in particular. He was both the spirit and brain behind this lofty project, and around him there were great and mighty Orientalists like Sir William Jones, Sir Charles Wilkins, Nathaniel Halhed and many others. By that time the Dutch, the Portuguese, the Danish and other European scholars had already had pioneered the movement of Hindu literary revival by themselves taking to the task of translating the Vedas and other ancient scriptures. In a report submitted to the East India Company Directors in England, Warren Hastings wrote as follows:

> "... ...Every accumulation of knowledge, and especially such as is obtained by social communication with people over whom we exercise a dominion founded on the right of conquest, is useful to the State; it is the gain of humanity... it attracts and conciliates distant affections; it lessens the weight of the chain by which the natives are held in subjection; and it imprints on the hearts of our own countrymen the sense and obligation of benevolence......Every instance which brings their real character home to observation will impress us with a more generous sense of feeling for their natural rights, and teach us to estimate them by the measure

of our own. But such instances can only be obtained in their writings.......".

Himself a scholar and a philosopher by temperament, Warren Hastings ordered to bring to light all the hidden ancient classics, Hindu scriptures, works on theology, law, grammar, poetry, science and everything on which one could lay his hand. It was Warren Hastings who opened for the first time the modern Hindu schools in Calcutta, Benares and other places. He ordered the servants of the Company and the European missionaries to foster Hindu culture and literature by way of intensive research into the ancient Indian literature and by opening more and more Hindu schools, not meant for teaching English, but Sanskrit and other Indian languages. Teams of experts were deputed to dig out archaeological remnants to preserve the ancient relics, to translate Hindu scriptures etc etc and it was for that purpose he showed interest in the Royal Asiatic Society. This movement seemed like an attempt to restore the ancient seats of learning like Nalanda, Tekshashila, Varanasi, Kanchi etc which were literally destroyed by the Muslim tyrants during their 1000 years of atrocity in the country. Writing a Foreword to the Bhagwad Gita that was translated into English for the first time by Sir Charles Wilkins, and in the form of a letter to the Chairman of the Company, Warren Hastings said that :

"Sir, To you, as the first member of the commercial body, not only of the present age, but of all the known generation of mankind, I presume to offer, and recommend through you, for an offering to the public, a very curious specimen of the Literature, the Mythology and Morality of the ancient Hindus.........I hesitate not to pronounce the Gita, a great performance of great orginality ; of a sublimity of conception, reasoning and diction, almost unequalled ; and a single exception, among all the known religions of mankind...... the order which is followed by the author of the Gita, and so far at least he soars far beyond all competitors in this species of composition......"

This was what the first Governor-General of India had to say on the Bhagavad Gita. It was a good luck of India and a good fortune of the Hindus and a good augury for the revival of the Hindu learning, that, the country had in the days of the

commencement of the British rule, a wise and far-sighted statesman in Warren Hastings. He served the country with profound love for the country and with simplicity and dignity. He was always contemplating on India's past glory and about the then misfortunes of the country and as to how he could best serve in order to bring up the land to its former position. In continuation of his above letter, he said :—

> "Very natural causes may be ascribed for their (Brahmins') reluctance to communicate the mysteries of their learning to strangers, as those to whom they have been for some centuries in subjection, never enquired into them, but to turn the religion into derision, or deduce from them arguments to support the intolerant principles of their own. From our nation they have received different treatment, and are no less eager to impart their knowledge than we are to receive it."

Writing about the help he derived from the European scholars in fulfilling his great mission of Indian literary revival, Warren Hastings says :

> "......It was contributed both cheerfully and gratuitously by men of the most respectable characters for sanctity and learning .... I add, that they have yet received no other reward for their meritorious labours......".

Hundreds of European scholars and missionaries got into this great work of literary revival, and thousands of ancient books and palm-leaves were brought to light, and many started working on them, editing, translating, reviewing and so on. Those enthusiastic scholars included not only the British, but also the German, French, Portuguese, Dutch and others. It was a tremendous labour of love of those foreigners. Warren Hastings said in respect of their marvellous literary work, that :

> "These.....writings will survive when the British dominion in India shall have long ceased to exist."

That is true. Those 'writings' exist even today long after the British left not only in India but all over the world. In fact, it is they, the British, who are responsible to make India known to the world. The role of Warren Hastings in this lofty missionary work was indeed amiable.

Warren Hastings left India in 1786, and he spent his retirement in spite of the political charges that were made against him, with a mind unperturbed, and with a conscience so guiltless and with no rancour or ill-will against anyone. He lived a long, purposeful and quiet life. In 1813, he was summoned by the House of Commons to obtain his expert advice on an issue pertaining to India, and as he entered the House, all the members respectfully received him standing. Later when he left the chambers, it was said that:

> " The members rose as by simultaneous impulse, and stood bare-headed until he passed out of sight. A complement of exceptional character......".

Warren Hastings' was a life of fulfilment, contentment and of a remarkable achievement. He spent his last days leading the life of the Rishis of yore. He would always get up at dawn, even during the winter months of England, and then have a long walk around his own vast farm of 600 acres, observe a few of the Hindu rituals and even recite some hymns of the Gita every day. His piety and nobility was of an extraordinary character. And, he was the first Governor-General of India, and a ruler of a vast country for thirteen long years. It was he who made the future British empire in India a reality and it was he who was an inspiration to thousands of European Indologists in India, beginning from Sir William Jones to Sir Fredrich Max Mueller. Warren Hastings was verily a philosopher-statesman of lofty ideals and noble deeds. He passed away in 1818, in his 86th year, and the grateful country, England, honoured him in a way befitting his noble, dedicated and remarkably simple and saintly life.

And then what to say about the great Vedic and the Upanishadic scholars of the last two centuries. Their list is too long and each one of them had been a gem of a great scholarly acumen. The names of Jones, Wilkins, Poliers, Halhed, Schelegel, Roger, Carey, Rosan, Colebrooke, Bopp, Roth, Yule, Burnouff, Mackenzie, Caland, Humboldt, Kuhn, Wilson, Beal, Bloomfield, Griffith, Odenburg, Schoebal, Mill, Kern, Hawell, Dusseau, Princep, Buehler, Cunningham, Buchanan, Whitney, Williams, Kielhorn, Macdanold, Fergusson, Weber, Beames, Hunter, Burgess, Tod, Temple, Hodgson, Max Mueller and

many others are shining examples for the European Industry and scholarship. They were indeed the great Rishis who dedicated all their lives to revive and revitalise the India's cultural and historical glory. Let the grateful country of ours honour the memory of every one of those noble European seers of the past, and let the literary academies of the country bring out their voluminous and scholarly treatises on various subjects into light. That would certainly remind us of our own responsibility aud also help us to be clear where we were found wanting, where we lacked initiative, where we committed to literary blackmail and finally why after all our contry fell short of such noble and lofty efforts in those days.

This work of mine did not cover even five per cent of all those great and dedicated scholars did in the all India field, but in the first eleven ehapters I have tried to give a bird's eye view of the subject. I have, however, tried to cover all that they did for Kannada literature in particular, in the later chapters beginning from Chapter 12. Many of those great men of those days came to this country with the bible in one hand and love and tolerance towards the other religions and culture, in the other. Their discovery, interpretation, translation, circulation and preservation of the Hindu classics and theology, was extraordinary. In fact, I may repeat, that was a time of a great literary renaissance in India.

This humble work of mine came out as a result of my very early impression that I had formed about those European scholars and from the day I first came in contact about thirty years back with Rev. Fernandiz Kittel's editions of Kannada grammar and prosody. I continued my hunt for information about many more literary luminaries of the last century, and I consider that it was a good fortune of Kannada literature, history and archaeology that Karnataka had the benefit of the services of men like Hands, Carey, Reeve, Mckerrel, Reid, Garret, Weigle, Moegling, Caldwell, Sanderson, Buehler, Burgesss, Rice, Hultzsch, Fleet, Kittel, Zeighler, Brigel, Wurth, Burnell and many others. Such great Rishis of eminence and scholarship emerged in all parts of India to work on every minor and major race and language and that was God's will that the contry's historical, literary and archaeological wealth was unearthed and preserved and the great tradition of the past restored.

It is up to the country today to preserve all their monumental works very scrupulously and ardently so that we may not again become a laughing stock at the hands of posterity. It would indeed be worthwhile that most of the earlier and original works of those European pioneer writers are reprinted and brought out by the various literary academies in the country with the help of the Central and State governments. I hope that our academicians and scholars would bestow some serious consideration on that because most of those very valuable and earlier writings are fast becoming extinct, and today's people are mostly served with the adulterated stuff in which the ungrateful native recorders have even failed to acknowledge the source from where they copied that lot.

Vancouver,
Br. Columbia, Canada **I. M. Muthanna**
Ist Jan. 1969

# ವಿಷಯ ಸೂಚಿಕೆ

## ಭಾಗ ೧

## ಭಾಗ ೨

## ಭಾಗ ೩

---

# ಚಿತ್ರಗಳ ವಿವರ

## ಮೊದಲನೆಯ ಭಾಗ



## ಎರಡನೆಯ ಭಾಗ

೧೧. ಡಾ. ಜಾರ್ಜ್ ಬ್ಯೂಲ್ಹರ್ 1837–1898.
೧೨. ಶ್ರೀರಂಗಪಟ್ಣ ಕೃಷ್ಣಮಾಚಾರ್ಯನು ಬರೆದ ಆಧುನಿಕ ದೇಶೀಯ ಕನ್ನಡ ವ್ಯಾಕರಣದ ಒಂದು ಪುಟ.
೧೩. ಚಾರ್ಲ್ಸ್ ಬ್ರೌನ್ 1852 ರಲ್ಲಿ ರಚಿಸಿದ ಇಂಗ್ಲಿಷ್–ಕನ್ನಡಭೋದೆಯ ಒಂದು ಪುಟ.
೧೪. ಡಾ. ರಾಬರ್ಟ ಕಾಲ್ಡ್ವೆಲ್ ಇವನ ದ್ರಾವಿಡ ಭಾಷಾ ಶಾಸ್ತ್ರದ ಒಂದು ಪುಟ
೧೫. ಭಾರತದ ಗೆಜೆಟಿಯರುಗಳನ್ನು ಬರೆದ ಸರ್. ವಿಲಿಯಂ ವಿಲ್ಸನ್ ಹಂಟರ್.
೧೬. ಕನ್ನಡ ಕಣ್ಮಣಿ–ವೀರ ಕನ್ನಡಿಗ ರೆ. ಎಫ್. ಕಿಟೆಲ್ ಮತ್ತು ಅವರ ಪತ್ನಿ.

## ಮೂರನೆಯ ಭಾಗ

೧. ಪ್ರಸಿದ್ಧ ಕನ್ನಡ ಸಾಹಿತಿ ಮತ್ತು ಭಾರತೀಯ ಇತಿಹಾಸ ಸಂಶೋಧಕ ಜಾನ್ ಫೆಯಿತಫುಲ್ ಫ್ಲೀಟ್.
೨. ಭಾರತೀಯರಿಗೆ ದೇಶಾಭಿಮಾನವನ್ನು ಹುಟ್ಟಿಸಲು ಕಾರಣಭೂತರಾದ ಅಂದಿನ ಪಾಶ್ಚಾತ್ಯ ಧುರೀಣರು (1904ರಲ್ಲಿ ಬೊಂಬಾಯಿ ಕಾಂಗ್ರೆಸ್ ಅಧಿವೇಶನ ವೇಳೆಗೆ ತೆಗೆದ ಚಿತ್ರ)
೩. ಸರ್ ವಿಲಿಯಂ ಜೋನ್ಸ್ ಇವನ ಸ್ಮರಣಾರ್ಥವಾಗಿ ಆಕ್ಸ್‌ಫರ್ಡ್‌ನಲ್ಲಿ ಇರುವ ಭವ್ಯ ಬೆಂಗಲ್ಲು ಸ್ಮಾರಕ.
೪. ರೆ.ಫ. ಕಿಟ್ಟೆಲ್ ಇವನ ‘ ಕರ್ನಾಟಕ ಕಾವ್ಯಮಾಲೆ ’ ಯ ಒಂದು ಪುಟ.
೫. ಬೆಂಜಾಯಿನ್ ರೈಸ್ ಇವನಿಂದ ಸಂಪಾದಿತವಾದ ‘ ಕರ್ನಾಟಕ ಭಾಷಾ ಭೂಷಣ ’ ಇದರ ಒಂದು ಪುಟ.
೬. 1855ರಲ್ಲಿ ಥಾಮಸ್ ಹಡ್ಸನ್ ಇವನು ಬರೆದ ಕನ್ನಡ ವ್ಯಾಕರಣದ ಒಂದು ಪುಟ.
೭. 1855ರಲ್ಲಿ ರೆ. ಬೌಟ್‌ಲೂ ಇವನಿಂದ ಬರೆಯಲ್ಪಟ್ಟ ಲ್ಯಾಟಿನ್–ಕನ್ನಡ ಅರ್ಥಕೋಶದ ಒಂದು ಪುಟ.
೮. ಬೆಂಜಾಮಿನ್ ರೈಸ್ ಇವನು 1868ರಲ್ಲಿ ಬರೆದ ‘ಸಂಸ್ಕೃತ ಪ್ರದರ್ಶಿನಿ’ ಇದರ ಒಂದು ಪುಟ.
೯. 1853 ರಲ್ಲಿ ಮಂಗಳೂರು ಬಾಸೆಲ್ ಮಿಷನ್ ಇವರಿಂದ ಪ್ರಕಟವಾದ “ ಬಡ್ಡಿಯ ಪಟ್ಟಿಗಳು ” ಎಂಬ ಕೈಪಿಡಿ.
೧೦. 1859 ರಲ್ಲಿ ಕೇಪ್ಟನ್ ಬೆಸ್ಟ್ ಇವನಿಂದ ರಚಿತವಾದ ಪಾಯಮಾನಸ ಅಳತೆ ವಿವರ ಇದರ ಒಂದು ಪುಟ.
೧೧. ರೆ. ಕಿಟ್ಟೆಲ್ ಇವನ ‘ ಕನ್ನಡ ಅರ್ಥಕೋಶದ ’ ದ ಒಂದು ಪುಟ.

೧೨. 1858 ರಲ್ಲಿ ಬೆಂಗಳೂರು ಕೆಥೋಲಿಕ್ ಮಿಷನ್ ಇವರಿಂದ ಪ್ರಕಟವಾದ ' ಸಂಕ್ಷೇಪ ಗಣಿತಶಾಸ್ತ್ರ ' ಇದರ ಒಂದೆರಡು ಪುಟಗಳು.

೧೩. ಬೆಂಜಾಮಿನ್‌ರೈಸ್ ಇವನಿಂದ ಸಂಪಾದಿತವಾದ 'ಕರ್ನಾಟಕ ಶಬ್ದಾನುಶಾಸನ'ಕ್ಕೆ ಅವನು ಬರೆದ ಮುನ್ನುಡಿಯ ಒಂದು ಪುಟ.

೧೪. 1844 ರಲ್ಲಿ ಬಳ್ಳಾರಿ ಕ್ರೈಸ್ತ ಶಿಬಿರದಿಂದ ಹೊರಡುತ್ತಿದ್ದ ಮೊದಲನೆ ಕನ್ನಡ ಪತ್ರಿಕೆಯ ಮೊದಲ ಪುಟ.

೧೫. ರೆ. ಮ್ಯಾಗ್ಲಿಂಗನು 1854 ರಲ್ಲಿ ಪ್ರಕಟಿಸಿದ ಕೊಡಗಿನ ' ರಾಜೇಂದ್ರನಾಮೆ ' ಇದರ ಮೊದಲ ಪುಟ.

೧೬. 1856 ರಲ್ಲಿ ಕನ್ನಡದಲ್ಲಿ ಪ್ರಕಟಗೊಳಿಸಿದ ದಕ್ಷಿಣ ಭಾರತದ 'ರೈಲ್‌ವೇ ಗೈಡ್'–ಇದರ ಒಂದು ಪುಟ.

೧೭. 1860 ರ ಕಾಲದ ಜನಪ್ರಿಯ ಕನ್ನಡ ಪತ್ರಿಕೆ 'ಮೈಸೂರು ವೃತ್ತಾಂತ ಬೋಧಿನಿ 'ಯ ಮುಖಪುಟ.

೧೮. ರೆ. ಫೆಡ್ರಿಕ್ ಜಿಗ್ಲರ್.

---



ವಾರ್ನ್ ಹೇಸ್ಟಿಂಗ್ಸ್ (1732–1818)



ಸರ್ ವಿಲಿಯಮ್ ಜೋನ್ಸ್, 1746–1794



Your affect.t Bro.r
W. Carey.

ಡಾ॥ ವಿಲಿಯಂ ಕ್ಯಾರಿ (1761-1834)



ಪ್ರೊ. ಹೊರೇಸ್ ಹೇಮನ್ ವಿಲ್ಸನ್



ಡಾ|| ಫ್ರೆಡ್ರಿಕ್ ಮ್ಯಾಕ್ಸ್ ಮುಲ್ಲರ್ (1823–1900)



ಬೆಂಜಾಮಿನ್ ಲೀವಿ ರೈಸ್

(ಮೈಸೂರು ಮಹಾರಾಜಾ ಕಾಲೇಜು ಕೃಪೆಯಿಂದ)

# ೧೯ ನೇ ಶತಮಾನದಲ್ಲಿ

# ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ



## ೧

ಸೊಗಯಿಸಿ ಬಂದ ಮಾಮರನೆ ತಳ್ತೆಲೆ
ವಳ್ಳಿಯೆ ಪೂತ ಜಾತಿ ಸಂ ।
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ
ತುಂಬಿಯೆ ನಲ್ಲರೊಳ್ಮೊಗಂ !
ನಗೆಮೊಗದೊಳ್ ಪಳಂಚಲೆಯೆ ಕೂಡುವ
ನಲ್ಲರೆ ನೋಳ್ಪೊಡಾವ ಚೆ ।
ಲ್ವಗಳೊಳಮಾವ ನಂದನವನಂಗ
ಳೊಳಂ ಬನವಾಸಿ ದೇಶದೊಳ್ ॥

[ಪಂಪ]

ಕ್ರಿ. ಶ. ೧೮ ಮತ್ತು ೧೯ ನೇ ಶತಮಾನಗಳಲ್ಲಿ ಕನ್ನಡ ಸಾಹಿತ್ಯದ ವರ್ಚಸ್ಸು ಅದೇಕೋ ಇಳಿಮುಖವಾಗಿತ್ತು. ಕನ್ನಡ ಸಾಹಿತ್ಯವು ಹೇಗೋ ಅದೇ ರೀತಿ ಭಾರತದ ಇತರ ಎಲ್ಲ ಭಾಷೆಗಳೂ ಕಲೆಗಳೂ ಸೊರಗಿ ದೇಶದ ಭವಿತವ್ಯವೇ ಇಳಿಮುಖವಾಗಿತ್ತು. ಇದಕ್ಕೆ ಕಾರಣ ಅಂದಿನ ರಾಜಕೀಯ ಪರಿಸ್ಥಿತಿ, ಹಿಂದೂ ಅರಸರ ಅವನತಿ, ಮಹ್ಮದೀಯ ಪ್ರಮುಖರ ಪ್ರಭಾವ, ಸಾಹಿತ್ಯ, ಕಲೆ, ಮೊದಲಾದುವುಗಳ ಬೆಳವಣಿಗೆಗೆ ರಾಜಾಶ್ರಯದ ಅಭಾವ ಇತ್ಯಾದಿಗಳಾಗಿದ್ದಿರಬಹುದು.

ಕ್ರಿ. ಶ. ೧೬ ನೇ ಶತಮಾನದ ವರೆಗೂ ಇಡೀ ಭಾರತದಲ್ಲಿ ಪ್ರಬಲವಾಗಿದ್ದ ವಿಜಯನಗರ ಸಾಮ್ರಾಜ್ಯವೂ ಅಂದೇ ಅಳಿದಿತ್ತು. ಅನಂತರ ಅಲ್ಲಲ್ಲಿ ನಾಯಕರು, ನವಾಬರು, ಪಾಳೆಯಗಾರರು ಮತ್ತಿತರ ಪ್ರಮುಖರು ಅಧಿಕಾರಕ್ಕೆಂದು ಹೋರಾಡುತ್ತಲೇ ಬಹುಕಾಲವನ್ನು ಕಳೆದರು. ಮೊಗಲ್ ಸಾಮ್ರಾಜ್ಯವೂ ಕೇವಲ ಹೆಸರಿಗೆ ಮಾತ್ರ ಒಂದು ಸಾಮ್ರಾಜ್ಯದಂತೆ ಇತ್ತು. ಹೀಗಾಗಿ ಈ ದೇಶದ ಯಾವ ಭಾಗದಲ್ಲೂ ಸುಭದ್ರವಾದ ಒಂದು ಸರಕಾರವು ಇದ್ದಂತೆ ತೋರಲಿಲ್ಲ. ಸಾಹಿತ್ಯ ಕಲೆಗಳು ಹಲವಾರು ರಾಜರಿಂದ ಪೋಷಿಸಲ್ಪಟ್ಟದ್ದ ಕಾಲದಲ್ಲಿ ಅವು ಅಂತೆಯೇ ಬೆಳೆದುವು. ದೇಶಿಯ ಹಿಂದೂ ಅಳರಸರು ಅಲ್ಲಲ್ಲಿ ಇದ್ದಾಗ ದೇಶದಲ್ಲಿ ಅದೊಂದು ಬಗೆಯ ಸುಧಾರಿತ ಪರಿಸ್ಥಿತಿಯು ತೋರುತ್ತಿದ್ದಿತು. ಆದರೆ ಸರಕಾರವೇ ಎಲ್ಲೂ ಸ್ಥಿಮಿತವಾಗಿ ಇಲ್ಲದಿದ್ದ ವೇಳೆಯಲ್ಲಿ ಸಾಹಿತ್ಯ ಸಂಸ್ಕೃತಿಗಳ ಪೋಷಣೆಗೂ ಹೆಚ್ಚು ಅವಕಾಶವಿಲ್ಲದಾಯಿತು.

ಕರ್ಣಾಟಕವನ್ನೇ ತೆಗೆದುಕೊಂಡರೆ, ಕ್ರಿ. ಶ. ೧೮ ನೇ ಶತಮಾನದ ಮೊದಲ ಭಾಗದಲ್ಲಿ ಮೈಸೂರು ಮತ್ತು ಇಕ್ಕೇರಿ ಪ್ರಾಂತಗಳು ಹಿರಿದಾಗಿದ್ದುವು. ಕೆಲಕಾಲ ಪ್ರಾಬಲ್ಯವನ್ನು ತೋರಿದ್ದ ಮೈಸೂರು ರಾಜ್ಯವು ಆ ಶತಮಾನದ ಮಧ್ಯಭಾಗದಲ್ಲಿ ದುರ್ಬಲವಾಯಿತು. ಅದರೊಡನೆಯೇ ಮಲೆನಾಡಿನ ಸಂಪತ್ತಿಗೆ ಬೊಕ್ಕಸದಂತಿದ್ದ

ಇಕ್ಕೇರಿಯೂ ಅದೇ ಕಾಲಕ್ಕೆ ಅಳಿಯಿತು. ಇದೇ ರೀತಿ ಕಾಶ್ಮೀರದಿಂದ ಕನ್ಯಾಕುಮಾರಿ ವರೆಗಿನ ಈ ದೇಶದ ಪರಿಸ್ಥಿತಿಯು ಆಯಾ ಭಾಗಗಳಲ್ಲಿ ತೋರಿಬಂದಿತು.

**೨. ಅಂದಿನ ರಾಜಕೀಯ ಪರಿಸ್ಥಿತಿ :—**

ಸುಮಾರು ೧೮ ನೇ ಶತಮಾನದ ಕಾಲದಲ್ಲಿ ಈ ದೇಶದಲ್ಲಿ ಇದ್ದ ಹಲವು ರಾಜರು ಮಹಾರಾಜರು, ನವಾಬರು, ಸುಲ್ತಾನರೇ ಮೊದಲಾದವರು ತಮ್ಮ ತಮ್ಮೊಳಗಿದ್ದ ದ್ವೇಷ, ವೈರಗಳನ್ನು ಆಗಿಂದಾಗ್ಗೆ ಪ್ರದರ್ಶಿಸಿ ಕಾದುತ್ತಿದ್ದರು. ನೂರಾರು ಜನವನ್ನು ಸಂಘಟಿಸಿ ಒಂದು ಸೈನ್ಯವನ್ನು ಕಟ್ಟಿದವನು ಓರ್ವ ನಾಯಕನೋ ನವಾಬನೋ ಆಗುತ್ತಿದ್ದನು. ಅಂಥಾ ಹಲವು ನಾಯಕರು ಮತ್ತು ಪಾಳಿಯಗಾರರನ್ನು ಸ್ವಾಧೀನಕ್ಕೆ ತಂದವನು ರಾಜನೋ ಸುಲ್ತಾನನೋ ಆಗುತ್ತಿದ್ದನು. ಆದರೆ ಇವರ ಅಧಿಕಾರವೆಲ್ಲಾ ಆಯಾ ಸಂಕೀರ್ಣ ಕ್ಷೇತ್ರದಲ್ಲಿ ಮಾತ್ರ ಇದ್ದಿತು. ತಮ್ಮ ತಮ್ಮ ಚಿಕ್ಕ ಪುಟ್ಟ ಸೀಮೆಗಳೇ ಒಂದೊಂದು ದೇಶವೆಂಬ ಭ್ರಮೆಯಿಂದ ವ್ಯವಹಾರಗಳು ಸಾಗುತ್ತಿದ್ದುವು.

ಹೀಗೆ ಅದಾವುದೋ ಒಂದು ವಿಚಿತ್ರ ರೀತಿಯಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿ ತೋರ್ಪಡಿಸಿಕೊಂಡ ಪ್ರಮುಖರು ಕೆಲಕಾಲ ಅಲ್ಲಲ್ಲಿ ಆಳಿದರು; ಅಂತೆಯೇ ಬಿದ್ದರು; ಕೂಡಲೆ ಇತರರು ಕಾಣಿಸಿಕೊಂಡರು. ಹೀಗೆಯೇ ಕಳೆದುವು ಹಿಂದಿನ ಆ ದಿನಗಳು, ಮತ್ತು ಶತಮಾನಗಳು !

ಈ ಒಂದೊಂದು ರಾಜವಂಶಗಳು ಐವತ್ತು, ನೂರು ಅಥವಾ ನೂರೈವತ್ತು ವರ್ಷಗಳ ಕಾಲ ಕ್ರಿ. ಶ. ೧೬ನೇ ಶತಮಾನದಿಂದಿತ್ತ ರಾಜ್ಯಭಾರ ನಡೆಸಿದವು. ಜನರಿಂದ ತೆರಿಗೆ ವಸೂಲಾತಿ ಮತ್ತು ನೆರೆ ರಾಜ್ಯಗಳೊಡನೆ ಯುದ್ಧ ಮಾಡುವುದು— ಈ ಎರಡು ಕಾರ್ಯಭಾರವಲ್ಲದೆ ದೇಶದ ಜನರ ವಿದ್ಯೆ, ಆರೋಗ್ಯ, ವ್ಯವಸಾಯ, ವ್ಯಾಪಾರಾಭಿವೃದ್ಧಿ ಇತ್ಯಾದಿಗಳ ಬಗ್ಗೆ ಹೆಚ್ಚು ಲಕ್ಷ್ಯವಿಟ್ಟಂತೆ ತೋರುವುದಿಲ್ಲ; ಅವೆಲ್ಲಾ ಹೆಚ್ಚಾಗಿ ಜನರ ಪಾಲಿಗೆ ಬಿಟ್ಟಂಥಾ ವಿಚಾರಗಳಾಗಿದ್ದುವು. ಅದಕ್ಕೆ ತಕ್ಕಂತೆ ನಮ್ಮ ಚಾತುರ್ವರ್ಣ್ಯ ಮತ್ತು ಸಹಸ್ರವರ್ಣ ಭೇದಗಳೂ ವಿವಿಧ ಕುಲಧರ್ಮ ನೀತಿಗಳೂ ಜನತೆಯನ್ನು ಭಿನ್ನವಾಗಿಸಲು ಸಹಕಾರಿಯಾದುವು.

**೩. ದೇಶದ ಸಾಂಸ್ಕೃತಿಕ ಪಾರಂಪರ್ಯ :—**

ಹಾಗಿದ್ದ ಪರಿಸ್ಥಿತಿಯಲ್ಲಿ ವಿದ್ಯೆಯನ್ನು ಆ ಕಾಲದಲ್ಲಿ ಎಲ್ಲರೂ ಕಲಿಯುವಂತಿರಲಿಲ್ಲ; ಧರ್ಮಕ್ಷೇತ್ರಗಳು ಸಹಸ್ರಾರು ಇದ್ದರೂ ಅವು ಎಲ್ಲರಿಗೂ ತೆರೆದಿಡಲ್ಪಡಲಿಲ್ಲ; ಹಿಂದೂ ದೇವಾಲಯಗಳು ಎಲ್ಲ ಹಿಂದೂಗಳಿಗೂ ಪ್ರವೇಶವೀಯಲಿಲ್ಲ. ಈ ರೀತಿಯಾಗಿದ್ದ ಸಮಾಜದಲ್ಲಿ ವ್ಯವಹಾರಗಳೆಲ್ಲವೂ ಪ್ರಗತಿದಾಯಕವಾಗಿ ಅಂದು ನಡೆಸಲ್ಪಡುತ್ತಿದ್ದಂತೆ ತೋರಲಿಲ್ಲ. ಸಾಹಿತ್ಯ ನಿರ್ಮಾಣವಂತೂ ಕೆಲವೇ ವಿದ್ವಾಂಸರ ಪಾಲಿನ ಕರ್ತವ್ಯವಾಗಿತ್ತು. ಹೀಗಿದ್ದರೂ ನಾಡು ಉತ್ತಮ ವರ್ಗದ ಸಾಹಿತ್ಯ ಸಂಸ್ಕೃತಿಗಳನ್ನು ಪೋಷಿಸುತ್ತಾ ಬಂದಿತು. ಜನ ಸಾಮಾನ್ಯರಾದರೋ ಕೇವಲ ಅನಾಗರಿಕರೆಂದೆನಿಸದೆ ತಮ್ಮ ಬುದ್ಧಿ ಬಲ ಅನುಭವ ಬಲಗಳ ಸದ್ವಿನಿಯೋಗದಿಂದ

ಸುಸಂಸ್ಕೃತ ಜನಾಂಗವಾಗಿ ತಮ್ಮ ತಮ್ಮ ಆವರಣಗಳಲ್ಲಿ ತೊಳಲಾಡಿದರು.

ರಾಜಕೀಯ ಕ್ಷೋಭೆಗಳು ಕಾಲದಿಂದ ಕಾಲಕ್ಕೆ ಎಲ್ಲೆಲ್ಲೂ ನಡೆಯುತ್ತವೆ; ಇಂದಿಗೂ ಅವು ಬೇರೊಂದು ರೀತಿಯಲ್ಲಿ ಕಾಣಿಸುತ್ತವೆ. ಆ ಮಾತ್ರಕ್ಕೆ ಜನತೆಯ ನಿತ್ಯದ ವ್ಯವಹಾರದಲ್ಲಿ ಶತಮಾನಗಳಿಂದಲೇ ಬೇರು ಬಿಟ್ಟು ಸಮೃದ್ಧಿಯಾಗಿರುವ ಭಾಷೆ, ಕಲೆ, ಸಂಸ್ಕಾರ, ಜೀವನ ವೈಶಿಷ್ಟ್ಯ ಇತ್ಯಾದಿಗಳು ಕ್ಷೋಭೆಗೊಳಗಾಗವು. ಅವು ಎಂದಿನಂತೆಯೇ ಪಾರಂಪರ್ಯವಾಗಿ ಹರಿದು ಹೋಗುತ್ತಲೇ ಇರುತ್ತವೆ. ಅದರ ಪರಿಣಾಮವಾಗಿಯೇ ಹಲವಾರು ಧರ್ಮಕ್ಷೇತ್ರಗಳು ಅಂದಿನಂತೆ ಇಂದಿಗೂ ಇವೆ. ಅಲ್ಲಲ್ಲಿ ಉದ್ದಾಮ ಪಂಡಿತರೂ ಗಮಕಿಗಳೂ ಹರಿದಾಸರೂ ಹಾಡುಗಾರರೂ ಕವಿಗಳೂ ಇದ್ದರು. ಸಂಸ್ಕೃತ ಮತ್ತು ದೇಶೀಯ ಭಾಷಾ ವ್ಯಾಸಂಗ ಕ್ಷೇತ್ರಗಳೂ ಇದ್ದುವು. ದೇಶದ ಸಹಸ್ರಾರು ಗುರುಮಠಗಳು ವಿದ್ಯಾಪೀಠಗಳಾಗಿಯೇ ಉಳಿದುವು. ಜೀವನ ವೈವಿಧ್ಯವು ಅಲ್ಲಲ್ಲಿ ಅಲ್ಪಸ್ವಲ್ಪ ಬದಲಾವಣೆಯಾದಂತೆ ತೋರಿದ್ದರೂ ಗ್ರಾಮಾಂತರ ಗಳಲ್ಲಿ ಜೀವನವು ಆರ್ಥಿಕ ನೆಮ್ಮದಿಯನ್ನೂ ಮಾನಸಿಕ ಪರಿಪುಷ್ಟತೆಯನ್ನೂ ಸೂಚಿಸಿತ್ತು. ಶತಮಾನಗಳ ಕಾಲದ ಮುಹಮ್ಮದೀಯರ ಆಡಳಿತ ಮತ್ತು ಪರ್ಷಿಯನ್ ಭಾಷೆ, ಅನಂತರ ಒಂದೆರಡು ಶತಮಾನಗಳ ಕಾಲದ ಆಂಗ್ಲೇಯ ರಾಜ್ಯಭಾರ ಮತ್ತು ಇಂಗ್ಲಿಷ್ ಭಾಷೆ—ಇವು ಭಾರತೀಯ ಧರ್ಮವನ್ನೂ ಸಂಸ್ಕೃತಿಯನ್ನೂ ಎಳ್ಳಷ್ಟೂ ಕದಡಿಸಲಿಲ್ಲ.

**೪. ರಾಷ್ಟ್ರೀಯ ಸಂಘಟನೆ ಇರಲಿಲ್ಲ:—**

ಹೀಗಿದ್ದ ಕಾಲಕ್ಕೆ ನಮ್ಮ ಸಾಮಾಜಿಕ ವಾತಾವರಣವು ಕಲುಷಿತವಾಗಿತ್ತು. ೧೮ನೇ ಶತಮಾನದ ಅಂತ್ಯದ ವರೆಗೂ ಮುಹಮ್ಮದೀಯರು ವಿದೇಶೀಯರೆಂದೇ ಪರಿಗಣಿಸಲ್ಪಟ್ಟಿದ್ದರು. ಅ ಕಾರಣದಿಂದ ಇವರು ಬಲಾತ್ಕಾರಿಕವಾಗಿ ಈ ದೇಶದ ಜನರನ್ನು ಮತಾಂತರಗೊಳಿಸುವುದೇ ಮೊದಲಾದ ಕ್ರೂರ ನೀತಿಗಳನ್ನು ಅನುಸರಿಸಿದರು. ಇದರಿಂದ ದೇಶದಲ್ಲಿ ಐಕ್ಯತೆಗೂ ಭದ್ರತೆಗೂ ಕುಂದಕವುಂಟಾಯಿತು. ಉತ್ತರದಲ್ಲಿ ಮೊಗಲರೂ ಅವರ ಆಶ್ರಯದಲ್ಲಿ ಮುಹಮ್ಮದೀಯ ನವಾಬರೂ ಅಲ್ಲಲ್ಲಿ ಇದ್ದಾಗ ದಕ್ಷಿಣದಲ್ಲೂ ಹೈದರಾಬಾದಿನ ನೈಜಾಮು, ಮೈಸೂರಿನ ಹೈದರಾಲಿ, ಆರ್ಕಾಟಿನ ನವಾಬರೇ ಮೊದಲ್ಗೊಂಡು ಎಲ್ಲೆಲ್ಲೂ ಮುಹಮ್ಮದೀಯರ ವರ್ಚಸ್ಸೇ ಹೆಚ್ಚಿತ್ತು. ಹಿಂದೂ ಜನತೆಯ ರಾಷ್ಟ್ರದಲ್ಲಿ ಈ ರೀತಿ ಮುಹಮ್ಮದೀಯ ಪ್ರಭಾವ ಏರಿದಾಗ ರಾಷ್ಟ್ರೀಯ ಸಂಘಟನೆಗೆ ಎಳ್ಳಷ್ಟೂ ಅವಕಾಶವಿರಲಿಲ್ಲ. ಕರ್ಣಾಟಕದ ಮಟ್ಟಿಗೆ ಹೇಳುವುದಾದರೆ ಸುಮಾರು ಕ್ರಿ. ಶ. 1755 ರಿಂದ 1799 ರ ವರೆಗೆ ಹೈದರಾಲಿ ಮತ್ತು ಟಿಪ್ಪುಸುಲ್ತಾನರೇ ಆ ಅರ್ಧ ಶತಮಾನ ಕಾಲವನ್ನು ತಿಂದು ಹಾಕಿದರು.

ಮೊಗಲ್ ಚಕ್ರವರ್ತಿಗಳಲ್ಲಿ ಕೆಲವರನ್ನು ಬಹು ಶ್ರೇಷ್ಠ ವ್ಯಕ್ತಿಗಳೆಂದು ಚರಿತ್ರಕರ್ತರು ಆಗಿಂದಾಗ್ಗೆ ಹೇಳುತ್ತಾರೆ. ಆದರೆ ಅವರ ಶ್ರೇಷ್ಠತೆಯೆಲ್ಲವೂ ಕೊಲ್ಲು, ಕೊಲೆ, ದರೋಡೆ, ಮತಪರಿವರ್ತನೆ, ದುರಾಚಾರ, ದುರಾಕ್ರಮಣ ಇತ್ಯಾದಿಗಳಲ್ಲಿಯೇ ಪರ್ಯವಸಾನವಾಗಿದೆಯೆಂದು ಇತ್ತೀಚೆಗೆ ಆಧಾರಪೂರ್ವಕವಾಗಿ ತಿಳಿದು ಬಂದಿದೆ.

ಚಕ್ರವರ್ತಿಗಳೇ ಹಾಗಿದ್ದ ಮೇಲೆ ಇತರ ಹಿಂದೂ ಮತ್ತು ಮಹ್ಮದೀಯ ಪ್ರಮುಖರೂ ಅಂತೆಯೇ ತಮ್ಮ ವ್ಯವಹಾರಗಳನ್ನು ಸಾಗಿಸಿದರೆಂದು ಪ್ರತ್ಯೇಕವಾಗಿ ಹೇಳುವ ಅವಶ್ಯಕತೆಯಿಲ್ಲ.

ಅದೇನೋ ನೂರಾರು ಪಾಪಕಾರ್ಯಗಳನ್ನು ಮಾಡಿದ ಆ ಮಹಾವ್ಯಕ್ತಿಗಳು ಅಕಸ್ಮಾತ್ತಾಗಿ ಒಂದೆರಡು ಒಳ್ಳೆಯ ಕೆಲಸ ಮಾಡಿದರೆ ಆ ಕಾರಣದಿಂದ ಅವರು ಶ್ರೇಷ್ಠರು ಎಂದು ಹೇಳುವುದು ಇನ್ನಾದರೂ ನಿಲ್ಲಬೇಕು. ಅಂಥಾ ಒಂದೆರಡು ಒಳ್ಳೆ ಕೆಲಸಗಳೂ ರಾಜಕೀಯ ದೃಷ್ಟಿಯಿಂದಾದುದೇ ಹೊರತು ನಿಸ್ವಾರ್ಥವಾದ ಸದುದ್ದೇಶ ದಿಂದ ಅಲ್ಲವೆಂಬೂ ಹೇಳಬಹುದಾಗಿದೆ. ಈ ಎಲ್ಲ ಕಾರಣಗಳಿಂದ ದೇಶವು ನೂರಾರು ಖಂಡ ತುಂಡಗಳಾಗಿ ಛಿದ್ರ ಛಿದ್ರವಾಗಿ ಅದಾವುದೋ ಒಂದು ರೀತಿಯಲ್ಲಿ ಸೊರಗಿತ್ತು.

**೫. ಪಾಶ್ಚಾತ್ಯ ದೇಶಗಳ ವ್ಯಾಪಾರಿಗಳು :—**

ಪಾಶ್ಚಾತ್ಯ ದೇಶಗಳಿಂದ ಕ್ರೈಸ್ತ ಗುರುಗಳೂ ಇತರ ಪ್ರವಾಸಿಕರೂ ಸುಮಾರು ೨೦೦೦ ವರ್ಷಗಳಿಂದಲೇ ಈ ದೇಶಕ್ಕೆ ಬರುತ್ತಾ ಇದ್ದಾರೆ. ಆದರೆ ಕ್ರಿ. ಶ. ೧೬ನೇ ಶತಮಾನದಿಂದ ಇಂಥಾ ಜನರ ಸಂಖ್ಯೆಯು ಹೆಚ್ಚಿತು. ತಮ್ಮ ತಮ್ಮ ದೇಶಗಳಲ್ಲಿ ಇದ್ದ ವ್ಯಾಪಾರ ಸಂಸ್ಥೆಗಳ ಮೂಲಕವಾಗಿ ಪೋರ್ಚುಗೀಸರೂ ಡಚ್ಚರೂ ಪ್ರಾರಂಭದಲ್ಲಿ ಈ ದೇಶಕ್ಕೆ ಬಂದು ಕರಾವಳಿ ಸೀಮೆಯಲ್ಲೆಲ್ಲಾ ತಮ್ಮ ವ್ಯಾಪಾರ ವಸತಿಗಳನ್ನು ನಿರ್ಮಿಸಿದರು.

ಕ್ರಿ. ಶ. ಹದಿನೇಳನೇ ಶತಮಾನದಿಂದ ಮೊದಲ್ಗೊಂಡು ಬ್ರಿಟಿಷರೂ ಫ್ರೆಂಚರೂ ಬಂದು ಅದೇ ರೀತಿಯಲ್ಲಿ ಈ ದೇಶದ ರಾಜರ ಮತ್ತು ಸ್ಥಳೀಯ ಪ್ರಮುಖರ ಅನುಮತಿ ಯನ್ನು ಪಡೆದು ವ್ಯಾಪಾರಕ್ಕೆ ತೊಡಗಿದರು. ಇವರಿಗೆ ಆಗ ವ್ಯಾಪಾರ ಮಾಡುವ ಉದ್ದೇಶವೊಂದಲ್ಲದೆ ಈ ದೇಶವನ್ನು ತಮ್ಮ ವಸತಿಗಾಗಿ ಅಥವಾ ಅಧಿಕಾರ ನಡೆಸುವು ದಕ್ಕಾಗಿ ಪಡೆಯುವ ಅಭಿಪ್ರಾಯವೇನೂ ಇರಲಿಲ್ಲ. ಆದರೆ ಮಹ್ಮದೀಯ ಪ್ರಮುಖರು ಈ ದೇಶದಲ್ಲಿ ನಡೆದ ಅತ್ಯಾಚಾರದ ಕಾರಣದಿಂದಾಗಿ ಹಿಂದೂ ರಾಜರಿಗೂ ಮಹ್ಮದೀ ಯರಿಗೂ ಪ್ರಾರಂಭದಿಂದಲೇ ಇದ್ದ ವೈಷಮ್ಯವು ಇನ್ನಷ್ಟು ಹೆಚ್ಚಿತು. ದೇಶದಲ್ಲಿ ಇಂಥಾ ರಾಜಕೀಯ ಗೊಂದಲವು ಎದ್ದಾಗ ಅವರೆಡೆಗೆ ಈ ಪಾಶ್ಚಾತ್ಯ ವ್ಯಾಪಾರಿಗಳು ಸೇರಿ ಒಂದಲ್ಲ ಒಂದು ಪಕ್ಷವನ್ನು ವಹಿಸಿ ತಾವೇ ಪ್ರಬಲರಾಗುವ ಸ್ಥಿತಿಗೆ ಬಂದರು. ಹಿಂದೂ ಗಳು ಮಹ್ಮದೀಯರೂ ಅಂದೇ ಒಂದಾಗಿ ಸಖ್ಯದಿಂದ ವರ್ತಿಸಿದ್ದರೆ ಪಾಶ್ಚಾತ್ಯರು ಇಲ್ಲಿ ನೆಲಸಲಿಕ್ಕೆ ಅವಕಾಶವೇ ಇರಲಿಲ್ಲ.

ಈ ಮಹ್ಮದೀಯರ ರಾಜ್ಯಭಾರವು ಬಹು ಉತ್ತಮವಾಗಿತ್ತು ಎಂದು ಅವರೇ ಬರೆಸಿಕೊಂಡ ಪರ್ಷಿಯನ್ ಭಾಷಾ ಇತಿಹಾಸ ಗ್ರಂಥಗಳು ನೂರಾರು ಸಂಖ್ಯೆಯಾಗಿ ಹೇಳಿದರೂ ಕಾರ್ಯತಃ ಸ್ಥಿತಿಯು ಹಾಗೆ ಇರಲಿಲ್ಲ. ಇದಕ್ಕೆ ಮೊಗಲ್ ಚಕ್ರವರ್ತಿಗಳು ಬರೆಯಿಸಿದ ಪರ್ಷಿಯನ್ ಚರಿತ್ರೆಗಳಿಂದಲೇ ಹಲವು ದೃಷ್ಟಾಂತಗಳನ್ನು ಕೊಡಬಹುದು. ಅದೇ ರೀತಿ ಕರ್ನಾಟಕದಲ್ಲಿ ಕೆಲವು ಕಾಲ ಪ್ರತಿಭಾಶಾಲಿಯಾಗಿದ್ದ ಹೈದರನು ಹಿಂದೂ

ಗಳಿಗೆ ಅಲ್ಲೊಂದು ಇಲ್ಲೊಂದು ಒಳ್ಳೆಯ ಕಾರ್ಯವನ್ನೆಸಗಿದುದು ಅವನ ವೈಯುಕ್ತಿಕ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ತೋರಿಸಿದ ರಾಜತಂತ್ರವಷ್ಟೇ ಎಂದು ತಿಳಿಯುತ್ತದೆ. ಟಿಪ್ಪುವು ಶೃಂಗೇರಿ ಮಠಕ್ಕೆ ಮತ್ತು ಒಂದೆರಡು ಕ್ಷೇತ್ರಗಳಿಗೆ ಔದಾರ್ಯವನ್ನು ತೋರಿದ್ದೂ ಅದೇ ದೃಷ್ಟಿಯಿಂದ ತನ್ನ ಶಕ್ತಿಯನ್ನು ಸಂಘಟಿಸುವ ಸಲುವಾಗಿಯೇ ಆಗಿದೆ, ಏಕೆಂದರೆ ಇವರಿರ್ವರೂ ನಾಡಿನ ಜನತೆಯನ್ನು ಮನ್ನಣೆಯಿಂದ ಕಂಡಂತೆ ಐತಿಹಾಸಿಕವಾಗಿ ತೋರುವುದಿಲ್ಲ. ಪೂರ್ಣಯ್ಯನಂಥಾ ಕೆಲವು ದಕ್ಷ ಹಿಂದೂ ಆಡಳಿತಗಾರರನ್ನು ಅವರು ನೇಮಿಸಿಕೊಂಡುದು ಆ ಬ್ರಾಹ್ಮಣರ ಕರ್ತವ್ಯ ದಕ್ಷತೆಯ ಬಲದಿಂದ ರಾಜ್ಯಾಡಳಿತೆಯನ್ನು ಸುಗಮವಾಗಿ ನಡೆಸಿಕೊಂಡು ಹೋಗುವುದಕ್ಕೆ ಮಾತ್ರವೆಂದು ಹೇಳಬಹುದು.

ಆದರೆ ಇವರ ಆ ನೀತಿಯು ಆ ಕಾಲಕ್ಕೆ ತಪ್ಪೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಭಾರತದ ಎಲ್ಲೆಡೆಯೂ ಅಂದು ಆ ರೀತಿಯಾಗಿತ್ತು. ಇಂಥಾ ರಾಜತಂತ್ರವನ್ನು ಇಂದಿಗೂ ಬೇರೊಂದು ಬಗೆಯಲ್ಲಿ ಕಾಣುತ್ತೇವೆ. ಆದರೆ ಆಗ ಇದ್ದ ಪರಿಸ್ಥಿತಿಯು ಪಾಶ್ಚಾತ್ಯ ವ್ಯಾಪಾರಿಗಳಿಗೆ ತಮ್ಮ ಅನುಕೂಲತೆಯನ್ನು ಸಾಧಿಸಲು ಸಮಯೋಚಿತವಾದುದಾಗಿತ್ತು.

## ೬. ೧೮ನೇ ಶತಮಾನದಲ್ಲಿ ಬ್ರಿಟಿಷರು :—

ಕ್ರಿ. ಶ. ೧೭ನೇ ಶತಮಾನದಲ್ಲಿ ಡಚ್ಚರು ಮತ್ತು ಪೋರ್ಚುಗೀಸರು ಈ ದೇಶದಲ್ಲಿ ಅಡ್ಡಾಡಿ ವ್ಯಾಪಾರ ಮಾಡಿ ಅನಂತರ ಪೂರ್ವಾಭಿಮುಖವಾಗಿ ಇತರ ದೇಶಗಳತ್ತ ಹೊರಟುಹೋದರು. ಕೆಲವರು ಮಾತ್ರ ಇಲ್ಲಿ ಇದ್ದರು. ಪೋರ್ಚುಗೀಸರು ವಶಪಡಿಸಿಕೊಂಡಿದ್ದ ಗೋವಾ ಸೀಮೆಯು ಮಾತ್ರ ಸುಮಾರು ನಾನೂರು ವರ್ಷಗಳ ಕಾಲ ಅವರ ಆಸ್ತಿಯಂತೆ ಇದ್ದಿತು.

ಆದರೆ ೧೮ನೇ ಶತಮಾನದ ಆರಂಭಕ್ಕೆ ಫ್ರೆಂಚರೂ ಇಂಗ್ಲಿಷರೂ ತಮ್ಮ ಸ್ವದೇಶಗಳಲ್ಲಿ ತಮ್ಮೊಳಗಿದ್ದ ವೈಷಮ್ಯವನ್ನು ಈ ದೇಶಕ್ಕೆ ಹೊತ್ತುಕೊಂಡು ಬಂದು ಹೋರಾಟಕ್ಕಾರಂಭಿಸಿದರು. ಇವರ ಈ ಕಾದಾಟಕ್ಕೆ ದೇಶೀಯ ಪ್ರಮುಖರು ಒಂದಲ್ಲ ಒಂದು ಪಕ್ಷ ವಹಿಸಿದರು. ಕಡೆಗೆ ಬ್ರಿಟಿಷರೇ ಗೆದ್ದರು. ಆದರೆ ಟಿಪ್ಪುವನ್ನು ಸೋಲಿಸದೆ ಅವರ ಅಸ್ತಿತ್ವಕ್ಕೆ ಕ್ಷೇಮವಿಲ್ಲವೆಂದು ತಿಳಿದಿದ್ದರು, ಏಕೆಂದರೆ ಹೈದರ ಮತ್ತು ಟಿಪ್ಪು ಇವರಿರ್ವರೂ ಪ್ರಾರಂಭದಿಂದಲೇ ಫ್ರೆಂಚರ ಸಹಾಯದಿಂದ ಬ್ರಿಟಿಷರನ್ನು ಅಟ್ಟಬಹುದೆಂದು ನಂಬಿದ್ದರು. ಅದರಂತೆ ನಾಲ್ಕನೇ ಮೈಸೂರು ಯುದ್ಧದಲ್ಲಿ ಬ್ರಿಟಿಷರು ಟಿಪ್ಪುವನ್ನು ಕಡೇ ಬಾರಿಗೆ ಸೋಲಿಸಿದರು. ಫ್ರೆಂಚರ ಪ್ರಾಬಲ್ಯವನ್ನು ಅದರೊಡನೆಯೇ ಅಡಗಿಸಿದರು. ಬ್ರಿಟಿಷರು The Empire of the East is at our feet ಎಂದು ನ್ಯಾಯವಾಗಿಯೇ ಘೋಷಿಸಿದರು.

ಆ ವರೆಗೂ ಭಾರತದ ಸ್ವಾತಂತ್ರ್ಯವು ಕನ್ನಡನಾಡಿನಲ್ಲಿ ಹೊಂಚುತ್ತಾ ಇದ್ದು ವಿದೇಶೀಯರನ್ನು ಅಟ್ಟಲು ಕಾದಿತ್ತು. ಆದರೆ ಟಿಪ್ಪುವಿನ ಪತನಾನಂತರವೇ ಆ ಸ್ವಾತಂತ್ರ್ಯವೂ ಅಳಿಯಿತು.

ಕ್ರಿ. ಶ. 1799ರಲ್ಲಿ ದಕ್ಷಿಣ ಹಿಂದೂಸ್ಥಾನದಲ್ಲಿ ಟಿಪ್ಪುವಿನ ರಾಜ್ಯವು ಅಳಿದುದರೊಡನೆ ಬ್ರಿಟಿಷ್ ಸಾಮ್ರಾಜ್ಯದ ಉದಯವು ಈ ದೇಶದಲ್ಲಿ ಆಯಿತು. ಬ್ರಿಟಿಷರೇ ಈ ದೇಶದ ಪ್ರಬಲ ಶಕ್ತಿಯಂತಾದರು. 1765ರಿಂದ 1800ರ ವರೆಗೆ Robert Clive Warren Hastings, Lord cornwallis ಮತ್ತು Marquess of Wellesley ಈ ನಾಲ್ಕು ಜನರು ಬ್ರಿಟಿಷ್ ಸಾಮ್ರಾಜ್ಯದ ನಿರ್ಮಾಣಕ್ಕೆ ಕಾರಣರಾದರೆನ್ನಬಹುದು. ಅಲ್ಲಿಂದ ಮೊದಲ್ಗೊಂಡು ಭಾರತೀಯರ ಸ್ವಗೌರವ ಸ್ವಪ್ರತಿಷ್ಠೆಗಳೆಲ್ಲವೂ ಮಣ್ಣು ಪಾಲಾದುವು. ಭಾರತದಲ್ಲಿ ಒಂದು ಹೊಸ ವಾಙ್ಮಯ ವಿಕಾಸವು ಬೆಳಗತೊಡಗಿತು.

## ೭. ಅವ್ಯಾಹತ ಅಕ್ರಮಗಳನ್ನು ಸರಿಗಟ್ಟಲು ಬಂದ 'ಗಂಧರ್ವ'ರು :—

ಇಷ್ಟೇ ಅಲ್ಲ, ಆಂಗ್ಲೇಯರ ಬರುವಿಕೆಯಿಂದ ಈ ದೇಶದಲ್ಲಿ ಸುಮಾರು ೧೦೦೦ ವರ್ಷಗಳಿಗೆ ಹಿಂದಿದ್ದ ನಾಗರೀಕತೆಯೇ ಪುನರ್ಜನ್ಮವೆತ್ತಿದಂತೆ ತೋರಿತು. ಕ್ರೂರಿಗಳೂ, ಮೂರ್ಖರೂ, ಅವಿವೇಕಿಗಳೂ ಆಗಿದ್ದ ಅಸಂಖ್ಯಾತ ರಾಜರನ್ನೂ ಇತರ ಸಣ್ಣಪುಟ್ಟ ಅಧಿಕಾರಿಗಳನ್ನೂ ನಿರ್ಮೂಲ ಮಾಡಿ ಅವರು ಈ ದೇಶದಲ್ಲಿ ಹೊಸ ಒಂದು ರಾಜಕೀಯ ಮತ್ತು ಸಾಮಾಜಿಕ ಬೆಳವಣಿಗೆಗೆ ಕಾರಣರಾದರು. ಅತಿ ಕ್ರೂರಿಗಳಾಗಿದ್ದ ಹಿಂದೂ ಮತ್ತು ಮಹ್ಮದೀಯ ಪ್ರಮುಖರನ್ನೆಲ್ಲ ಅದೇ ಒಂದು ಹೇತುವೆಂದು ಅವರ ಪದಚ್ಯುತಿಗೆ ಕಾರಣರಾದರು. ಹಲವು ಬಗೆಯ ದುಷ್ಟಪದ್ಧತಿಗಳೂ, ಅಲ್ಪಸ್ವಲ್ಪ ತಪ್ಪುಗಳಿಗೆ ಅವರ್ಣನೀಯವಾದ ರೀತಿಯಲ್ಲಿ ವಿಧಿಸುತಿದ್ದ ಶಿಕ್ಷೆಗಳೂ, ಚಿತ್ರಹಿಂಸೆಗಳೂ, ಸಹಗಮನ, ಕಾಳಿಗೆ ನರಬಲಿ, ಬಾಲ್ಯವಿವಾಹ ಹೀಗೆ ಹಲವು ಬಗೆಯ ದುಷ್ಟನಿಯಮಗಳೆಲ್ಲಾ ಅಂತೆಯೇ ಕೊನೆಗೊಂಡುವು.

ಒಂದು ರೀತಿಯಲ್ಲಿ ಹೇಳುವುದಾದರೆ ಕ್ರಿ. ಶ. ೧೮ನೇ ಶತಮಾನದಲ್ಲಿ ದೇಶದಲ್ಲಿದ್ದ ಪರಿಸ್ಥಿತಿಯನ್ನು ಅನಂತರದ ಬದಲಾವಣೆಗಳು ಈ ೨೦ನೇ ಶತಮಾನದೊಳಗಾಗಿ ತಲೆಕೆಳಗಾಗಿಸಿತು ಹೊಸ ಬಗೆಯ ಜನರು, ಹೊಸ ಆಡಳಿತ ನೀತಿ, ಹೊಸ ಕಾನೂನು ವ್ಯವಸ್ಥೆ, ಹೊಸ ವಿದ್ಯಾಕ್ರಮ ಇತ್ಯಾದಿಗಳಿಂದ ನಮ್ಮ ದೇಶದ ಜನರಲ್ಲಿ ಹೊಸ ಬಗೆಯ ವಿಚಾರ ಜ್ಞಾನವು ಹರಿಯತೊಡಗಿತು. ಆ ವರೆಗೂ ಭಾರತದ ಜನರು ಅದಾವುದೋ ಒಂದು ಕಗ್ಗತ್ತಲ ಆವರಣದಲ್ಲಿ ತೊಳಲುತ್ತಿದ್ದರು; ನೈತಿಕ ಮಟ್ಟವೂ ಬಹು ಕೆಳಗೆ ಇಳಿದಿತ್ತು. ಇದನ್ನೆಲ್ಲಾ ಬ್ರಿಟಿಷರು ಅಂದೇ ಕಾಣದೆ ಇರಲಿಲ್ಲ. Lord Cornwallis ಇವನು ಒಂದು ಸಂದರ್ಭದಲ್ಲಿ "Every native of Hindustan, I verily belive, is corrupt" ಎಂದು ಹೇಳಿದ್ದನು. ಆಗ ಅವನು ಹೇಳಿದ ಮಾತಿಗೆ ನಾವು ಈಗ ಸಿಡಿದು ಬೀಳದೆ ನಮ್ಮ ದೇಶದ ಇಂದಿನ ಪರಿಸ್ಥಿತಿಯೊಡನೆ ಅದನ್ನು ಸಾವಧಾನದಿಂದ ಪರಿಶೀಲಿಸಿದರೆ ಅದರ ಯಾಥಾರ್ಥ್ಯವು ಚಿಂತಾಜನಕವಾಗಿ ತೋರದಿರದು.

ಬ್ರಿಟಿಷರು ಕಳೆದ ಶತಮಾನದಲ್ಲಿ ಕೈಗೊಂಡ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳನ್ನು ಇಲ್ಲಿ ಪ್ರಸ್ತಾಪಿಸುವುದು ಈ ಗ್ರಂಥದ ಉದ್ದೇಶವಲ್ಲ. ಹೇಗೂ ಅವರು

ಈ ದೇಶದಲ್ಲಿ ತಮ್ಮ ವ್ಯಾಪಾರ ವ್ಯವಹಾರಗಳೊಡನೆ ಹಲವು ಸಾಹಸ ಕಾರ್ಯಗಳನ್ನು ಮಾಡಿದ್ದಾರೆ. ಇದನ್ನು ನೋಡುತ್ತಾ ಇದ್ದ ಅಂದಿನ ಜನರು ನಿಜಕ್ಕೂ ಈ ಜನಾಂಗದ ವರ್ಚಸ್ಸನ್ನು ನೋಡಿ ಬೆರಗಾದರು. ಇದೇನು. ಈ ದೇಶದ ಅನಾಯಕತೆ ಮತ್ತು ಅವ್ಯಾಹತ ಅಕ್ರಮ, ಅಕೃತ್ಯಗಳನ್ನೆಲ್ಲಾ ಸರಿಗೂಡಿಸಲು ಪೌರಾಣಿಕ ಕಾಲದಲ್ಲಿ ಇದ್ದ ರೆಂದು ಹೇಳಲ್ಪಟ್ಟ ಆ ಗಂಧರ್ವರೇ ಈ ರೀತಿ ಬಿಳಿಜನರ ರೂಪಿನಲ್ಲಿ ಹೀಗೆ ಕಾಣಿಸಿ ಕೊಂಡರೋ ಎಂಬುದಾಗಿ ಭಾರತದ ಹಳ್ಳಿಯ ಜನರು ಆ ಕಾಲದಲ್ಲಿ ಆಗಿಂದಾಗ್ಗೆ ಉದ್ಗಾರವನ್ನೆತ್ತಿದ್ದರು.

**೮. ದೇಶೀಯರ ವಿಶ್ವಾಸವನ್ನು ಗಳಿಸಿಯೇ ಆಳಿದರು :—**

ಬ್ರಿಟಿಷರು ಈ ದೇಶದಲ್ಲಿ ತಮ್ಮ ಸುಧಾರಣಾಕಾರ್ಯಗಳನ್ನು ದೇಶೀಯರ ಬೆಂಬಲವನ್ನು ಪಡೆದು. ದೇಶೀಯ ಪ್ರಮುಖರ ವಿಶ್ವಾಸವನ್ನು ಗಳಿಸಿ ಜಾರಿಗೆ ತಂದರು. Lord Clive ಇವನು ಬಂಗಾಳದಲ್ಲೂ, Warren Hastings ಇವನು ಉತ್ತರ ಪ್ರದೇಶದಲ್ಲೂ, Lord Cornwallis ಇವನು ಮಹಾರಾಷ್ಟ್ರ ಭಾಗದಲ್ಲೂ ಇದ್ದ ಪ್ರಮುಖರ ಬಲವನ್ನು ಅಡಗಿಸಿ ದೇಶದ ಬಹು ಭಾಗವನ್ನು ಸ್ವಾಧೀನ ಪಡಿಸಿದ್ದರು. ಕಟ್ಟಕಡೆಗೆ ದಕ್ಷಿಣ ಹಿಂದೂಸ್ಥಾನದಲ್ಲಿ ಟಿಪ್ಪುವನ್ನು ಕೊನೆಗೊಳಿಸಿದರೆ ಎಲ್ಲವೂ ಸರಿಹೋಗುವುದೆಂದು ಭಾವಿಸಿದ್ದ ಅವರು Lord Wellesley ಇವನ ನೇತೃತ್ವದಲ್ಲಿ ಅದರಲ್ಲೂ ಜಯಪ್ರದರಾದರು. ಈ ಎಲ್ಲ ಕಾರ್ಯಗಳಲ್ಲಿ ಅವರಿಗೆ ಇತರ ದೇಶೀಯ ಪ್ರಮುಖರ ಸಹಾಯವು ಧಾರಾಳವಾಗಿ ದೊರೆಯಿತು. ಹಾಗೆ ಸಹಕರಿಸಿದವರಿಗೆ ಅವರು ಯಥೇಚ್ಛವಾಗಿ ಸಹಾಯವನ್ನು ಅನಂತರ ನೀಡಿದರು.

ಉದಾಹರಣೆಗೆ, ಕಡೇ ಶ್ರೀರಂಗಪಟ್ಟ ಯುದ್ಧದಲ್ಲಿ ಬ್ರಿಟಿಷರಿಗೆ ಹೈದರಾಬಾದಿನ ನೈಜಾಮನೂ, ಮರಾಠರೂ ಮತ್ತು ಇತರ ಕೆಲವು ದೇಶೀಯ ಪ್ರಮುಖರೂ ಸಹಕಾರಿಗಳಾಗಿದ್ದರು. ಶ್ರೀರಂಗಪಟ್ಟದಿಂದ ಅವರಿಗೆ ಹತ್ತು ಕೋಟಿ ಪೌಂಡುಗಳಿಗೂ ಮೀರಿದ ಆಸ್ತಿಯೂ ಹಣವೂ ದೊರೆಯಿತು. ಹೈದರನು ಬಿದನೂರಿನಿಂದ ದೋಚಿಕೊಂಡ ಬಂದ ಹಣವೆಲ್ಲವೂ ಟಿಪ್ಪುವಿನ ಗಡಸುತನದ ಪರಿಣಾಮವಾಗಿ ಬ್ರಿಟಿಷರ ಕೈಸೇರಿತು, ಆ ಹಣದಲ್ಲಿ ಬಹುಪಾಲನ್ನು ಅವರು ತಮಗೆ ಸಹಕರಿಸಿದ ದೇಶೀಯ ರಾಜರಿಗೆ ಕೊಟ್ಟರು. ಈ ರೀತಿಯಾಗಿ ದೇಶದ ಜನರನ್ನೂ ಅರಸರನ್ನೂ ತಮ್ಮ ಅಂಕಿತಕ್ಕೆ ತಂದು ವಿಶ್ವಾಸ ಪೂರ್ವಕವಾಗಿಯೇ ತಮ್ಮ ಕಾರ್ಯವನ್ನು ಸಾಧಿಸಿದರು.

ಹೈದರಾಬಾದಿನ ನೈಜಾಮನನ್ನು ಅವರು ಹೇಗೆ ಮನ್ನಣೆಯಿಂದ ಕಂಡರೋ ಅದೇ ರೀತಿ ಅಲ್ಲಲ್ಲಿ ಇದ್ದ ಇತರ ಭಾರತೀಯ ಮಿತ್ರರನ್ನೂ ಕಂಡರು. ಅಂಥಾ ಆಪ್ತರ ಮೂಲಕವಾಗಿ ಪಾಶ್ಚಾತ್ಯ ಜೀವನಕ್ರಮ, ನಾಗರೀಕತೆಗಳನ್ನು ಇಲ್ಲಿ ಬೇರೂರಿಸಲು ಪ್ರಯತ್ನಿಸಿದರು. ನಿದರ್ಶನಾರ್ಥವಾಗಿ ಹೇಳುವುದಿದ್ದರೆ Prof. Wilson ಈ ವಿಚಾರವಾಗಿ ಹೀಗೆ ಬರೆದಿದ್ದಾನೆ :—

"........A fourth of thc second share of the Prize-money of Srirangapatna was to be paid for the Nizam, and with the

prudent regard for the interests of British trade, the Govrnment of Madras thought it expedient to convert the amount into broadcloth, plate, china glass and the like in order to initiate His Highness into a taste for the elegant superflui ities of European living —..."*

ಈ ರೀತಿಯಾಗಿ ಉಚ್ಚವರ್ಗದ ಜನರಿಂದ ಆರಂಭಿಸಿ ಅವರು ದೇಶದಲ್ಲಿ ಒಂದು ಹೊಸ ಜೀವನಕ್ರಮಕ್ಕೆ ನಾಂದಿಯನ್ನು ಹಾಕಿದರು. ದೇಶೀಯರು ಆಧುನಿಕ ವಿದ್ಯೆಯನ್ನು ಪಡೆಯುತ್ತಾ ಬಂದಂತೆ ಅವರು ಹೆಚ್ಚಾಗಿ ಪಾಶ್ಚಾತ್ಯ ಕ್ರಮವನ್ನೇ ಅನುಸರಿಸಲು ತೊಡಗಿದರು.

### ೯. ಆಂಗ್ಲ ಆಡಳಿತೆಯ ಬಗ್ಗೆ ಪ್ರಶಂಸೆ :—

ಕ್ರಿ. ಶ. ೧೯ ನೇ ಶತಮಾನದ ಆದಿಯಲ್ಲಿ ಇದ್ದ ರಾಜಾರಾಮಮೋಹನರಾಯ್ ಇವನಿಂದ ಹಿಡಿದು ಆ ಶತಮಾನಾಂತ್ಯದಲ್ಲಿದ್ದ ಸ್ವಾಮಿ ವಿವೇಕಾನಂದ ಇವನ ವರೆವಿಗೂ ಆ ಕಾಲದ ಹಲವು ಮಹಾವ್ಯಕ್ತಿಗಳು ಈ ಆಂಗ್ಲೇಯ ವಿಚಾರ ವಾಙ್ಮಯದ ಪ್ರಭಾವ ಕ್ಕೊಳಗಾಗಿ ಮಹಾಪುರುಷರೆಂದೆನಿಸಿದರು; ಅಥವಾ ತಮ್ಮಲ್ಲಿದ್ದ ಸ್ಫೂರ್ತಿ ಪ್ರಾಬಲ್ಯ ಗಳನ್ನು ಈ ಹೊಸ ವಾಙ್ಮಯ ಬಲದಿಂದ ವಿಕಾಸಗೊಳಿಸಿದರು. ಇವರೂ, ಇವರಂಥಾ ಇನ್ನೂ ಹಲವು ದೇಶೀಯ ಮಹಾವ್ಯಕ್ತಿಗಳೂ ಬ್ರಿಟಿಷರು ಈ ದೇಶದಲ್ಲಿ ಸಾಧಿಸಿದ ಮಹತ್ಕಾರ್ಯಗಳನ್ನು ಅಂದೇ ಮುಕ್ತಕಂಠದಿಂದ ಹೊಗಳಿದ್ದಾರೆ. ಈ ಪರಂಪರೆಗೆ ಸೇರಿದ್ದು ಅಂತೆಯೇ ಬ್ರಿಟಿಷರನ್ನು ಶ್ಲಾಘಿಸಿ ಅವರನ್ನು ಆತ್ಮೀಯತೆಯಿಂದ ಕಂಡ ಶ್ರೇಷ್ಠ ಪುರುಷರಲ್ಲಿ ಮಹಾತ್ಮಾ ಗಾಂಧಿಯವರೊಬ್ಬರು.

ಕಳೆದ ಶತಮಾನದಲ್ಲಿ ಹಲವು ದೇಶೀಯ ರಾಜ್ಯಗಳನ್ನು ಈ ದೇಶದೊಳಗೆ ಬ್ರಿಟಿಷರು ತಮ್ಮ ಸಾಮ್ರಾಜ್ಯದ ಭದ್ರತೆಗೆ ಪೋಷಕವಾಗುವಂತೆ ಇಟ್ಟುಕೊಂಡಿದ್ದರು, ಅವುಗಳಲ್ಲಿ ಹಳೇ ಮೈಸೂರು ರಾಜ್ಯವೂ ಒಂದಾಗಿತ್ತು. ಇಂಥಾ ರಾಜ್ಯಗಳಲ್ಲೂ ಅವರು ಜಾರಿಗೆ ತಂದ ಸುಧಾರಣೆಗಳ ಬಗ್ಗೆ ಭಾರತೀಯರು ತಮ್ಮ ಮೆಚ್ಚಿಕೆಯನ್ನು ಪ್ರದರ್ಶಿಸಿದ್ದರು. ಉದಾಹರಣೆಗೆ ಹಳೇ ಮೈಸೂರು ರಾಜ್ಯದಲ್ಲಿ ಸಾಧಿಸಿದ ಅಭಿವೃದ್ಧಿ ಯನ್ನು ಕುರಿತು ದೇಶೀಯ ರಾಜಕಾರಣಿಯೋರ್ವನು ಕಳೆದ ಶತಮಾನದಲ್ಲಿ ಹೀಗೆಂದನು :—

"......The desire for the reformation of Native states has everywhere been aroused. Scindia, Holkar and Jeypore are vying with one another by their English advisers. Jodhpur and other mismanaged states, have been taken in hand to undergo a course treatment under British supervision; while the minority of the rulers of Hyderabad, Mysore and some minor states, gave the British government an opportunity for introducing an

---

* Review on "Nizam of Hyderabad" by H. G. Briggs (1861)

improved administration such as has never been known in Indian history......"*

## ೧೦. ಆಧುನಿಕ ಸುಧಾರಣೆಗಳ ಸಹಿತ ದೇಶವನ್ನು ಮುಂದೊಯ್ದರು :—

ಆದರೆ ಎಷ್ಟೇ ಒಳ್ಳೆಯ ಸರಕಾರವಾದರೂ ಅದು ಸ್ವರಾಜ್ಯ ಸರಕಾರವಾಗಲಾರದು ಎಂಬುದಾಗಿ ಆಂಗ್ಲೇಯರೇ ದೇಶಿಯರಿಗೆ ಕ್ರಾಂತಿಕಾರಕವಾದ ವಿಚಾರ ಪ್ರಚೋದನೆಯನ್ನು ಕ್ರಿ. ಶ. ೧೮೮೦ ರಿಂದೀಚೆಗೆ ಉಂಟುಮಾಡಿದರು. ಇಲ್ಲಿಂದನಂತರ ರಾಷ್ಟ್ರೀಯ ಸಂಸ್ಥೆಗಳು ಹುಟ್ಟಿ ವಿಧಾಯಕವಾಗಿ ಈ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಸಂದರ್ಭವನ್ನೂ ಅವರೇ ಪ್ರಾರಂಭದಲ್ಲಿ ವಿದ್ಯಾವಂತರಾದ ದೇಶೀಯರಿಗೆ ಕಲ್ಪಿಸಿ ಕೊಟ್ಟರು. Sir Octavian Hume, Sir Henry Cotton, Sir William Wedderburn, ಮತ್ತು Dr. (Mrs) Anne Besant ಇವರು ಭಾರತದ ಪರವಾಗಿ ನಿಷ್ಠಾವಂತರಾದ ರಾಷ್ಟ್ರೀಯವಾದಿಗಳಾಗಿ ಈ ದೇಶದಲ್ಲಿ ಸ್ವಾತ್ರಂತ್ರ್ಯ ಹೋರಾಟಗಾರರ ಒಂದು ಪೀಳಿಗೆಯನ್ನೇ ಸೃಷ್ಟಿಸಿದರು. ಇವರೆಲ್ಲರೂ ಬ್ರಿಟಿಷರು. ಬ್ರಿಟಿಷ್ ಸರಕಾರದಲ್ಲಿ ಅತಿ ದೊಡ್ಡ ಹುದ್ದೆಯಲ್ಲಿದ್ದವರು; ಅವರ ಪೈಕಿ Dr. (Mrs) Besant ಇವಳು ತತ್ವವಿಶಾರದೆ, ಸಾಹಿತಿ ಮತ್ತು ಪ್ರಮುಖ ದೇಶೀಯ ಮುಂದಾಳು ಆಗಿ ಈ ಶತಮಾನದ ಮೊದಲ ಭಾಗದಲ್ಲಿ ಹಿರಿಯ ರಾಜಕಾರಣಿಯಾಗಿ ಮೆರೆದಳು.

ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸಿದರೆ ಹಿಂದೂಸ್ಥಾನದಲ್ಲಿ ಕಳೆದ ಒಂದೆರಡು ಶತಮಾನಗಳ ಕಾಲ ಆಂಗ್ಲೇಯರು ಈ ದೇಶವನ್ನು ಆಳಿ. ಮತ್ತು ಹಲವು ಪೌರಸ್ತ್ಯ ರಾಷ್ಟ್ರಗಳಲ್ಲಿ ತಮ್ಮ ಪ್ರಭಾವವನ್ನು ಬೀರಿ, ಪೂರ್ವ ಮತ್ತು ಪಶ್ಚಿಮ ದೇಶಗಳೊಳಗೆ ತಕ್ಕ ಸಮನ್ವಯವನ್ನು ಒದಗಿಸಿದ್ದು ಒಂದು ಪುಣ್ಯವೆಂದೇ ಹೇಳಬೇಕು. ಅಂತಾಗದೆ ಹೋಗಿದ್ದರೆ ಭಾರತದ ಪರಿಸ್ಥಿತಿಯು ಇಂದು ಬೇರೊಂದು ರೀತಿಯಲ್ಲಿ ಇರುತ್ತಿತ್ತು; ಆದರೆ ಅದು ಅಭಿವೃದ್ಧಿಯ ಪಥವನ್ನು ಅನುಸರಿಸಿ ಇದ್ದಿರುತ್ತಿತ್ತೆಂಬುದು ಮಾತ್ರ ಸಂದೇಹಾಸ್ಪದವಾದ ವಿಷಯವಾಗಿದೆ. ಈ ದೇಶವಲ್ಲಿ ಮಹಮ್ಮದೀಯರ ಪ್ರಭಾವವನ್ನು ಅಡಗಿಸಿ ಆಧುನಿಕ ಸುಧಾರಣೆಗಳನ್ನು ತಂದು ಆ ರೀತಿ ಮುಂದೊಯ್ದ ಅವರ ಆಡಳಿತವು ನಾಡಿನ ಸುದೈವವೆಂದೇ ಹೇಳಬೇಕಾಗಿದೆ. ಆದರೆ ಅದಕ್ಕೆ ಕಳಂಕಪ್ರಾಯವೋ ಎಂಬಂತೆ ದೇಶವು ಸ್ವತಂತ್ರವಾದಾಗ ಅದು ಎರಡಾಗಿ ಒಡೆದು ಪ್ರತ್ಯೇಕ ಎರಡು ರಾಷ್ಟ್ರಗಳಾಗಿ ಬೇರ್ಪಟ್ಟಿತು.

## ೧೧. ದೇಶೀಯ ಸಾಹಿತ್ಯದ ಬೆಳವಣಿಗೆಗೆ—ಬರಗಾಲ :—

ಕ್ರಿ. ಶ. ೧೮ನೇ ಶತಮಾನದ ಮಧ್ಯಭಾಗದಿಂದ ಹಿಡಿದು ೧೯ನೇ ಶತಮಾನದ ಮಧ್ಯದವರೆಗೂ ಕರ್ಣಾಟಕದಲ್ಲಿ ಮಾತ್ರವಲ್ಲ, ಇಡೀ ಭಾರತದಲ್ಲಿಯೇ ದೇಶೀಯ

* "The British Administration of Mysore" by 'A Native' (1874)

ಸಾಹಿತ್ಯಗಳ ಬೆಳವಣಿಗೆಯ ಮಟ್ಟಿಗೆ ಅದೊಂದು ತೆರನಾದ ಬರಗಾಲವೇ ಬಂದಿದ್ದಿತು. ಬ್ರಿಟಿಷ್ ಸರಕಾರವು ಈ ದೇಶದ ಜನರನ್ನು ಆಧುನಿಕ ರೀತಿಯಲ್ಲಿ ವಿದ್ಯಾವಂತರಾಗಿ ಮಾಡುವ ಸದ್ಭಯಕೆಯ ಯೋಜನೆಗಳನ್ನು ತಯಾರಿಸಿದಾಗ ಅವರಿಗೆ ಪರಿಸ್ಥಿತಿಯು ಇನ್ನಷ್ಟು ಬಿಗುಡಾಗಿಯೇ ಕಂಡುಬಂದಿತು. ಅಲ್ಲೊಬ್ಬ ಸಂಸ್ಕೃತ ವಿದ್ವಾಂಸ, ಇಲ್ಲೊಬ್ಬ ಆಚಾರ್ಯ, ಮತ್ತೊಬ್ಬ ಪುರೋಹಿತ, ಇನ್ನೊಬ್ಬ ಹರಿದಾಸ, ಗಮಕಿ, ಕೀರ್ತನಗಾರರಾದಿಯಾಗಿ ಇದ್ದ ಆ ಸಮಾಜವನ್ನು ಸಂಪೂರ್ಣವಾಗಿ ಬದಲಾಯಿಸಿ ಜನಕ್ಕೆ ಶಾಸ್ತ್ರೀಯ ರೀತಿಯಲ್ಲಿ ವಿದ್ಯೆಯನ್ನು ಲೌಕಿಕ ಜ್ಞಾನವನ್ನು ಈಯುವ ಬಗ್ಗೆ ಅವರು ಪಾಠಶಾಲೆಗಳನ್ನು ಅಲ್ಲಲ್ಲಿ ತೆರೆದರು. ಅದರ ಜತೆಗೆ ಇಂಗ್ಲಿಷ್ ಭಾಷೆಯನ್ನೂ ಭಾರತೀಯರಿಗೆ ಕಲಿಸಿದರೆ ಆ ಮೂಲಕ ದೇಶೀಯರಿಂದ ತಮಗೂ ಪ್ರಯೋಜನವಾಗುವುದೆಂದೂ ಆಡಳಿತವು ಸುಗಮವಾಗಿ ಸಾಗುವುದೆಂದೂ ಎಣಿಸಿ ಅವರು ಅದಕ್ಕನುಸಾರವಾಗಿ ಈ ದೇಶದಲ್ಲಿ ಜನರ ವಿದ್ಯಾ ಪ್ರಗತಿಗಾಗಿ ದುಡಿದರು.

ಅಷ್ಟೇ ಅಲ್ಲ, ಅಂದಿನವರೆಗೂ ಇಡೀ ದೇಶವು ವಿವಿಧ ಪ್ರಮುಖರ, ಸಣ್ಣ ಪುಟ್ಟ ಅರಸರ ವಸಾಹತ್ತುಗಳಾಗಿ ಛಿದ್ರಛಿದ್ರವಾಗಿದ್ದುದನ್ನು ಸಾಂಸ್ಕೃತಿಕವಾಗಿ ಒಂದುಗೂಡಿಸುವ ಮಹತ್ಕಾರ್ಯವನ್ನೂ ಅವರು ಸಾಧಿಸುತ್ತಿರುವಂತೆ ತೋರಿತು. ಅದಕ್ಕೆ ತಕ್ಕಂತೆ ೧೮ನೇ ಮತ್ತು ೧೯ನೇ ಶತಮಾನದಲ್ಲಿ ಭಾರತದಲ್ಲಿ ಯಾವ ದೇಶೀಯ ವಿದ್ವಾಂಸನ ಪಾಂಡಿತ್ಯವನ್ನೂ ಮೀರಿಸುವಂತೆ ಶ್ರೇಷ್ಠ ಸಂಸ್ಕೃತ ವಿದ್ವಾಂಸರು ಪಾಶ್ಚಾತ್ಯರ ಪೈಕಿ ಒಬ್ಬರನಂತರ ಒಬ್ಬರಾಗಿ ತೋರಿಬಂದರು, ಇವರ ಪ್ರಚಂಡ ಭಾಷಾ ಪ್ರೌಢಿಮೆಯು ಭಾರತೀಯರನ್ನು ಅಂದೇ ಬೆರಗಾಗಿಸಿತು. ಈ ಪಾಶ್ಚಾತ್ಯ ವಿದ್ವಾಂಸರ ಪೈಕಿ ಇಂಗ್ಲಿಷರೂ, ಜರ್ಮನ್ನರೂ ಪೋರ್ಚುಗೀಸರೂ, ಡಚ್ಚರೂ, ಇಟಾಲಿಯನ್ನರೂ, ಫ್ರೆಂಚರೂ ಮೊದಲ್ಗೊಂಡು ವಿವಿಧ ಜನಾಂಗದವರು ಇದ್ದರು.

## ೧೨. ಇಡೀ ದೇಶದ ಆಡಳಿತ ೧೫೦ ವರ್ಷಗಳು ಮಾತ್ರ :—

ಕ್ರಿ. ಶ. ೧೬೪೭ ರಿಂದ ೧೯೪೭ರವರೆಗೆ, ಎಂದರೆ ಮುನ್ನೂರು ವರ್ಷಗಳ ಕಾಲ ಆಂಗ್ಲೇಯರು ಹಿಂದೂ ದೇಶದಲ್ಲಿ ವ್ಯಾಪಾರವನ್ನು ನಡೆಸಿದರು. ಹೋರಾಟವನ್ನು ನಡೆಸಿದರು ಮತ್ತು ರಾಜ್ಯಭಾರವನ್ನೂ ನಡೆಸಿದರು. ಆದರೆ ಈ ಅವಧಿಯ ಅರ್ಧ ಭಾಗ ಹೋರಾಟ ಮತ್ತು ಯುದ್ಧಗಳಲ್ಲಿಯೇ ಕಳೆದುವು. ಹಿಂದೆ ಹೇಳಿದಂತೆ ವ್ಯಾಪಾರಿಗಳಾಗಿ ಬಂದ ಅವರಿಗೆ ಈ ದೇಶವನ್ನು ಗೆದ್ದು ಸಾಮ್ರಾಜ್ಯವನ್ನು ಕಟ್ಟುವ ಆಲೋಚನೆಯೇ ಇರಲಿಲ್ಲ. ಹಾಗಿದ್ದರೂ ಈ ದೇಶದ ಅಂದಿನ ವಿಚಿತ್ರ ರಾಜಕೀಯದ ಕಾರಣದಿಂದ ಮತ್ತು ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರು ಈ ದೇಶದಲ್ಲಿ ಪೈಪೋಟಿ ನಡೆಸುತ್ತಿದ್ದ ಕಾರಣದಿಂದ ಅವರ ಪ್ರಭಾವವನ್ನು ತಡೆಗಟ್ಟಲಿಕ್ಕೋಸ್ಕರ ಬ್ರಿಟಿಷರೂ ರಾಜಕೀಯಕ್ಕೆ ಇಳಿದರು. ಪ್ರಾರಂಭದ ೧೫೦ ವರ್ಷಗಳ ಅವಧಿಯಲ್ಲಿ ಸ್ವಲ್ಪಸ್ವಲ್ಪವಾಗಿ ವಸಾಹತನ್ನು ಪಡೆಯುತ್ತಾ ಕಡೆಗೆ ಪೂರ್ತಿಯಾಗಿಯೇ ಪಡೆದರು. ಅನಂತರದ ೧೫೦ ವರ್ಷಗಳ ಕಾಲ ಬ್ರಿಟಿಷರು ಧೀಮಂತ ಜನಾಂಗವಾಗಿ ಈ ದೇಶವನ್ನು ಆಳಿದರು.

ಸಹಸ್ರಾರು ವರ್ಷಗಳ ಕಾಲದ ಚರಿತ್ರೆಯನ್ನು ಪರಿಗಣಿಸಿದಾಗ ಬ್ರಿಟಿಷರ



ಈ 300 ವರ್ಷಗಳ ಕಾಲದ ಅವಧಿಯು ಈ ದೇಶದ ರಾಜಕೀಯದ ಮಟ್ಟಿಗೆ ಬಹು ಅಲ್ಪವಾದುದೆಂದೇ ಹೇಳಬಹುದು. ನ್ಯಾಯವಾಗಿ ಅವರ ಆಡಳಿತೆಯು ಇಡೀ ದೇಶದಲ್ಲಿ ನಡೆದದ್ದು ಬರೇ 150 ವರ್ಷಗಳು ಮಾತ್ರ! ಕುಂಪನೀ ಸರಕಾರದ ಅಧಿಕಾರವು ತೊಲಗಿ ನೇರವಾಗಿ ಬ್ರಿಟಿಷ್ ಸರಕಾರವು ಆಳಿದ್ದು ಕ್ರಿ. ಶ. 1858 ರಿಂದ ತೊಡಗಿ ಬರೇ ತೊಂಬತ್ತು ವರ್ಷ ಮಾತ್ರ!! ಹಿಂದೂದೇಶವು ಬ್ರಿಟಿಷ್ ಸಾರ್ವಭೌಮತ್ವದೊಳಗೆ ಅಡಗಿ ಇದ್ದುದು ಕೇವಲ ಎಪ್ಪತ್ತು ವರ್ಷಗಳ ಕಾಲ!!! ಆದರೆ ಒಟ್ಟಾಗಿ ಅವರು ಆ 300 ವರ್ಷಗಳ ಕಾಲ ಭಾರತದ ನೆಲದಲ್ಲಿ ಓಡಾಡಿ, ಅಡ್ಡಾಡಿ ನಡೆಸಿದ ಕಾರ್ಯವಾದರೋ ಅವರಿಗಿಂತಲೂ ಹಿಂದೆ ಹಲವಾರು ಶತಮಾನಗಳ ಕಾಲ ಆಳಿದ ಯಾವ ಪ್ರಭುತ್ವಗಳೂ ಸಾಧಿಸದಷ್ಟೂ ಮಹತ್ವವಾಗಿದೆ. ವ್ಯಾಪಾರ, ವ್ಯವಹಾರ, ಸರಕಾರ ಇತ್ಯಾದಿ ಕ್ಷೇತ್ರಗಳಲ್ಲಿ ಮೇರೆ ಮೀರಿ ದುಡಿದು ಅಮೋಘ ಕಾರ್ಯವನ್ನೆಸಗಿ ಅನಂತರ ಅವರು ಹೇಗೆ ಬಂದರೋ ಅದೇ ರೀತಿ ಇಲ್ಲಿಂದ ಹೊರಟೂ ಹೋದರು.

**೧೩. ವ್ಯಾಪಾರಿಗಳ ವರದಿಗಳೇ ಉದ್ಗ್ರಂಥಗಳಾದುವು :—**

ಕ್ರಿ. ಶ. 1600 ರಿಂದ ಈ ದೇಶದಲ್ಲಿ ಆಂಗ್ಲೇಯರ ವ್ಯಾಪಾರದ "ಕುಂಪೆನೀ" ಎಂಬುದು ಇದ್ದಿತೇ ಹೊರತು "ಕುಂಪೆನಿ ಸರಕಾರ"ವೆಂಬುದು ಆಗ ಇರಲಿಲ್ಲ. ಡಚ್ಚರು, ಪೋರ್ಚುಗೀಸರು, ಫ್ರೆಂಚರು ಮತ್ತು ಇಂಗ್ಲೀಷರು ಸಮ ಸಮವಾಗಿ ಈ ದೇಶದ ಬೇರೆ ಬೇರೆ ಭಾಗಗಳಲ್ಲಿ ವ್ಯಾಪಾರವನ್ನು ನಡೆಸಿದರು. ಈ ಶತಮಾನದ ಕಾಲದಲ್ಲಿ ಈ ವ್ಯಾಪಾರಿಗಳ ತಂಡವು ಈ ದೇಶದ ಬಗ್ಗೆ ಅವರು ನಡೆಸಿದ ವ್ಯಾವಹಾರಿಕ ವಿವರಗಳ ವರದಿಯನ್ನು ಆಗಿಂದಾಗ್ಗೆ ತಮ್ಮ ಸ್ವದೇಶಗಳಿಗೆ ಬರೆದು ತಿಳಿಸುತ್ತಿದ್ದರು. ಅಂದು ಬರೆದ ಆ ಕೋಟಿಗಟ್ಲೆ ವಿಚಾರಗಳನ್ನು ಕುರಿತಾದ ಪ್ರತಿಯೊಂದು ಚೂರು ತುಂಡು ಓಲೆಯೂ ಕಾಗದವೂ ಬಹು ಬೆಲೆ ಬಾಳುವ ಆಧಾರಪತ್ರವಾಗಿ ಸಂಗ್ರಹಿಸಲ್ಪಟ್ಟು ಸಹಸ್ರಾರು ಸಂಪುಟಗಳ ಉದ್ಗ್ರಂಥಗಳಾಗಿ ಇಂದಿಗೂ ಆಯಾ ಪಾಶ್ಚಾತ್ಯ ದೇಶಗಳಲ್ಲಿ ಜೋಪಾನವಾಗಿ ಕಾದಿರಿಸಲ್ಪಟ್ಟವೆ. ಹೀಗಾಗಿ ಅವು ಗ್ರಂಥಭಂಡಾರಗಳು ಮಾತ್ರವಲ್ಲ, ಐತಿಹಾಸಿಕ ವಿಚಾರಗಳ ಸಾಗರವೇ ಆಗಿವೆ.

ಹೀಗೆ ಪತ್ರವ್ಯವಹಾರಗಳನ್ನು ನಡೆಸಿದವರು ಯಾರು? ಅವರೆಲ್ಲಾ ಬರೇ ವ್ಯಾಪಾರೀ ವರ್ಗಕ್ಕೆ ಸೇರಿದ್ದ ನೌಕರರು, ನಾವಿಕರು, ಸೈನಿಕರು, ಸಿಪಾಯಿಗಳು ಮತ್ತು ಅಂತೆಯೇ ಹಡಗಿನಲ್ಲಿ ಬರುತ್ತಿದ್ದ ಪ್ರಯಾಣಿಕರು ಮತ್ತು ಕ್ರೈಸ್ತಮತೋಪದೇಶಕರು. ಕ್ರಿ. ಶ. ೧೭ನೇ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಆ ಐರೋಪ್ಯದ ಜನರು ಅಂದಿನ ಪ್ರಸಿದ್ಧವಾದ ಓಕ್ಸ್‌ಫರ್ಡ್, ಬರ್ಲಿನ್, ಲೈಪ್‌ಸಗ್, ಲಿಸ್ಬನ್, ಪ್ಯಾರಿಸ್ ಇತ್ಯಾದಿ ವಿಶ್ವವಿದ್ಯಾಲಯಗಳಲ್ಲಿ ಓದಿದವರೇನೂ ಅಲ್ಲ. ಅವರಲ್ಲಿ ಹಲವರು ಪ್ರಾಥಮಿಕ ವಿದ್ಯಾಭ್ಯಾಸವನ್ನೇ ಅಂದು ಪೂರ್ತಿಯಾಗಿ ಹೊಂದದೇ ಇದ್ದಂಥವರು. ಹಾಗಿದ್ದರೂ ಇವರೆಲ್ಲಾ ತಾವು ಈ ದೇಶದಲ್ಲಿ ಸಾಧಿಸಿದ ವಿಷಯಗಳನ್ನು ಕುರಿತು ನೂರಾರು ಪತ್ರಗಳನ್ನೂ, ಪ್ರವಾಸ ವರದಿಗಳನ್ನೂ ಈ ದೇಶದ ಜನ ಜೀವನವನ್ನು ಕುರಿತಾದ ಸಮಾಚಾರಗಳನ್ನೂ ಧಾರಾವಾಹಿಯಾಗಿ ಬರೆದು ಸ್ವದೇಶಗಳಿಗೆ ಕಳುಹಿಸುತ್ತಿದ್ದರು.

ಭಾರತೀಯರು ಒಂದು ಸಾವಿರ ವರ್ಷಗಳಿಗೂ ಹಿಂದೆ ಬರ್ಮಾ, ಮಲೆಯಾ, ಕೇಂಬೋಡಿಯಾ, ಇಂಡೋನೇಷ್ಯಾ, ಪೂರ್ವ ಆಫ್ರಿಕಾ, ಅರೇಬಿಯಾ, ಪರ್ಷಿಯಾ ಮೊದಲಾದೆಡೆಗಳಲ್ಲಿ ವ್ಯಾಪಾರ ನಡೆಸಿದ್ದಾರೆ; ಅವರು ವ್ಯಾಪಾರವನ್ನೇನೋ ಜಯ ಪ್ರದವಾಗಿ ನಡೆಸಿರಬಹುದು; ಆದರೆ ಅವರ ಅನುಭವ, ಅವರು ನೆಲೆಸಿದ ಆಯಾ ದೇಶಗಳನ್ನು ಕುರಿತಾದ ವಿಚಾರಗಳನ್ನು ಏನು ಬರೆದಿದ್ದಾರೆ? ಎಷ್ಟು ಬರೆದಿದ್ದಾರೆ? ಏನು ಮಾಡಿದ್ದಾರೆ? ಇವಾವುದೂ ತಿಳಿಯದು! ಅದಕ್ಕೆ ಬದಲಾಗಿ ಬ್ರಿಟಿಷರು ೧೭ ನೇ ಶತಮಾನದಲ್ಲಿ ನಡೆಸಿದ ಪತ್ರವ್ಯವಹಾರಗಳು "Minutes of East India Company" ಎಂಬುದಾಗಿ ಸಹಸ್ರಾರು ಕಾಂಡಗಳ ಮಹದ್ಗ್ರಂಥಗಳಾಗಿ ವಿರಾಜಿಸುತ್ತಿವೆ. ಇದೇ ರೀತಿ ಡಚ್ಚರು, ಪೋರ್ಚುಗೀಸರು ಮತ್ತು ಫ್ರೆಂಚರು ತಮ್ಮ "Company Minutes" ಇವನ್ನು ಬರೆದಿದ್ದಾರೆ.

**೧೪. ಪಾಶ್ಚಾತ್ಯ ವ್ಯಾಪಾರಿಗೂ ಭಾರತದ ಪಾಣಿನಿಗೂ ಏನು ಸಂಬಂಧ?:—**

ಇಷ್ಟೇ ಅಲ್ಲ; ವ್ಯಾಪಾರಿಗಳಾಗಿ, ಪ್ರವಾಸಿಗರಾಗಿ, ಕ್ರೈಸ್ತಮತ ಪ್ರಚಾರಕರಾಗಿ ಬಂದ ಪಾಶ್ಚಾತ್ಯರು ನಮ್ಮ ದೇಶದ ನಾಲ್ಕಾರು ಭಾಷೆಗಳನ್ನು ಕಲಿತುದಲ್ಲದೆ ಅವರ ಪೈಕಿ ವಿದ್ವಾಂಸರಾದ ಹಲವರು ಈ ದೇಶದ ಪ್ರಾಚೀನ ಭಾಷೆಗಳಲ್ಲೆಲ್ಲಾ ವಿಶೇಷ ಪರಿಣತಿಯನ್ನು ಹೊಂದಿ ಕೈಗೊಂಡ ಭಾಷಾ ಸೇವೆ, ಮತಪ್ರಚಾರ ಸೇವೆ, ಭಾರತೀಯ ಸಂಸ್ಕೃತಿಯ ಪ್ರಚಾರ ಸೇವೆ ಇತ್ಯಾದಿಗಳನ್ನು ಏಕ ಪ್ರಕಾರವಾಗಿ ನಡೆಸಿದರು. ನಮ್ಮ ಸನಾತನ ಧರ್ಮ ಶಾಸ್ತ್ರ, ಕಾವ್ಯ, ವ್ಯಾಕರಣ, ನ್ಯಾಯ, ಮೀಮಾಂಸೆ ಮೊದಲಾದುವುಗಳನ್ನು ತಿಳಿಯಬೇಕೆನ್ನುವ ಅವರ ಹಂಬಲವು ಅವರಿಗಿಂತಲೂ ನಮಗೆ ಇಮ್ಮಡಿಯಾಗಿ ನಾಲ್ಮಡಿಯಾಗಿ ಪ್ರಯೋಜನವಾಯಿತು

ಈ ಪಾಶ್ಚಾತ್ಯ ಕರ್ಮಯೋಗಿಗಳು ಕಳೆದ ಶತಮಾನದ ಬರೇ ನೂರು ವರ್ಷಗಳ ಅವಧಿಯಲ್ಲಿ ಮುಟ್ಟದೇ ಇದ್ದ, ಅವರ ಅವಗಾಹನೆಗೆ ಬಾರದೇ ಇದ್ದ, ಅವರ ಸೂಕ್ಷ್ಮದೃಷ್ಟಿಗೆ ಸಿಲುಕದೇ ಇದ್ದ ವಿಷಯವು ಯಾವುದು? ಭೂಗರ್ಭದಿಂದ ಹಿಡಿದು ಭೂವ್ಯೋಮದ ವರೆಗಿನ ಎಲ್ಲ ವಿಷಯಗಳನ್ನೂ ಅವರು ಈ ದೇಶದಲ್ಲಿ ಅನ್ವೇಷಿಸಿದ್ದಾರೆ.

ಇದೇನು ಒಂದು ಬಗೆಯ ಜನಾಂಗ? ಆ ಅಲ್ಪ ಅವಧಿಯಲ್ಲಿ ಅವರ ಅದೆಂಥಾ ಸಾಹಸ? ಕಚೇರಿಯಲ್ಲಿ ದುಡಿಯುತಿದ್ದ ಕುಂಪೆನೀ ಸರಕಾರದ ಗುಮಾಸ್ತನಿಗೂ ಹಿಮಾಲಯದ ಕಾಡು ಕಣಿವೆ, ಪುಣ್ಯಕ್ಷೇತ್ರಗಳಿಗೂ ಅದೆಂಥಾ ಪರಸ್ಪರ ಆಕರ್ಷಣೆ? ಪಾಶ್ಚಾತ್ಯ ರಾಜಕಾರಿಣಿಗೂ ಭಗವದ್ಗೀತೆಗೂ ಯಾವ ಬಾಂಧವ್ಯ? ಐರೋಪ್ಯಾದ ಓರ್ವ ಸಿಪಾಯಿಗೂ ನಮ್ಮ ದಾಸರ ಹಾಡುಗಳಿಗೂ ಯಾವ ನೆಂಟಸ್ತಿಕೆ? ಆ ಕ್ರೈಸ್ತ ಗುರುವಿಗೂ ಹಿಂದೂಮತ, ಭಾಷೆ, ವ್ಯಾಕರಣ, ಕಾವ್ಯಗಳಿಗೂ ಏನು ಸೌಹಾರ್ದತೆ? ಆ ವಿದೇಶೀ ವ್ಯಾಪಾರಿಗೂ ಭಾರತದ ಪಾಣಿನಿಗೂ ಏನು ಸಂಬಂಧ?

ನಮ್ಮ ದೇಶದಲ್ಲಿ ಹೀಗೆ ಯಾವಾವುದೋ ಅಭಿರುಚಿಗೊಳಗಾಗಿ ಮತ್ತಾವುದೋ ಅಸಂಬದ್ಧವಾದ ವಿಚಾರಗಳಲ್ಲಿ ತಜ್ಞತೆಯನ್ನು ಪಡೆದವರು ಎಷ್ಟು ಜನ ಇದ್ದಾರೆ?

ಸ್ವಾತಿ ತಿರುನಾಳ್ ಇವನಂಥಾ ಕೆಲವು ಕಲಾಪ್ರಿಯರಾದ, ರಸಿಕರಾದ ನಾಲ್ಕಾರು ಅರಸರೂ ಹಾಗೆ ಇನ್ನೂ ಕೆಲವರೂ ಇದ್ದಿರಬಹುದು. ಆದರೆ ನೃಪತುಂಗನೆಂಬ ರಾಜನು 'ಕವಿರಾಜ ಮಾರ್ಗ'ವನ್ನೂ ಪಂಪನೆಂಬ ಸೇನಾನಿಯು 'ವಿಕ್ರಮಾರ್ಜುನ ವಿಜಯ' ವನ್ನೂ ಬರೆದರೆ ? ನಮ್ಮ ದೇಶದಲ್ಲಿ ಅದೆಂತು ಸಾಧ್ಯ ? ಹೌದು, ಕವಿಚರಿತ್ರಕಾರರು ಅಂಥಾ ಅರಸರೂ ಸೇನಾಪತಿಗಳೂ ಕಾವ್ಯಗಳನ್ನೂ ಸಾಹಿತ್ಯ ಗ್ರಂಥಗಳನ್ನೂ ರಚಿಸಿದ್ದಾರೆ, ಎಂದು ಹೇಳುತ್ತಾರೆ. ಆದರೆ ಈ ಹೇಳಿಕೆಯನ್ನು ಪುನಃ ಕೆದಕಿ ಅವುಗಳ ಒಳಹೊಕ್ಕು ನೋಡಬೇಕಾದರೆ ನಮಗೆ ಪುನಃ ಇನ್ನೊರ್ವ Fleet, Burnell, Rice ಮೊದಲಾದವರು ಬೇಕಾಗಿದ್ದಾರೆ ಎಂದನ್ನಿಸುತ್ತದೆ.

### ೧೫. ವಾರನ್ ಹೇಸ್ಟಿಂಗ್ಸ್ ಇವನಿಂದ ಕರ್ಜನ್‌ನ ವರೆಗೆ :—

ಕ್ರಿ. ಶ. ೧೮ನೇ ಶತಮಾನದ ಮಧ್ಯಕಾಲದಲ್ಲಿ Robert Clive ಇವನು ಭಾರತದಲ್ಲಿ ಬ್ರಿಟಿಷ್ ಸರಕಾರದ ಅಸ್ತಿತ್ವಕ್ಕೆ ತಳಹದಿಯನ್ನು ಹಾಕಿದನು. ಅವನ ನಂತರ Warren Hastings ಇವನು ಈ ದೇಶದ ಮೊದಲನೆಯ Governor-General-in-Council ಎಂಬುದಾಗಿ ನೇಮಕವಾದನು. ಹೀಗೆ ಇವನ ಕಾಲದಿಂದ ಹಿಡಿದು ಕಳೆದ ಶತಮಾನದ ಅಂತ್ಯದಲ್ಲಿ ಈ ದೇಶದ ಪ್ರಾಕ್ತನ ವಿಚಾರ ಪರಿಶೋಧನೆ ಮತ್ತು ವಾಸ್ತು ಶಿಲ್ಪಾನ್ವೇಷಣಾ ಕಾರ್ಯಗಳಿಗೆ ಇನ್ನೂ ಹೆಚ್ಚಿನ ಪ್ರಚೋದನೆಯನ್ನು ಒದಗಿಸಿದ Lord Curzon ಇವನ ಕಾಲದವರೆಗೆ ನಡೆದ ಸಾಂಸ್ಕೃತಿಕ ಪ್ರಗತಿಯ ಸಾಧನೆಗಳನ್ನು ಅಳೆದು ನೋಡಿದಾಗ ಯಾವ ಭಾರತೀಯನೂ ಆಶ್ಚರ್ಯ ಚಕಿತನಾಗದಿರಲಾರನು.

Warren Hastings ಇವನ ಕಾಲದಲ್ಲಿ ಈ ವಿಶಾಲ ದೇಶದ ಎಲ್ಲ ಭಾಗಗಳೂ ಕುಂಪೆನೀ ಸರಕಾರದ ಅಧೀನಕ್ಕೊಳಗಾಗಿರಲಿಲ್ಲ. ಅವನನಂತರ ಬಂದ Cornwallis, Wellesley, Minto ಮೊದಲಾದವರ ಕಾಲದಲ್ಲೂ ಈ ದೇಶದ ಎಲ್ಲಾ ಸೀಮೆಗಳೂ ಅವರ ಅಧಿಕಾರಕ್ಕೆ ಒಳಪಟ್ಟಿರಲಿಲ್ಲ. ಹಾಗಿದ್ದರೂ ಕ್ರಿ. ಶ. ೧೮ನೇ ಶತಮಾನದ ಆರಂಭದಿಂದಲೇ ಬ್ರಿಟಿಷರು ಪೂರ್ವಕಾಲದಲ್ಲಿ ಲೋಕದ ಕಣ್ಣಾಗಿದ್ದ ಮತ್ತು "Sentinel of the East" ಎಂದು ಪ್ರಖ್ಯಾತಿಯನ್ನು ಪಡೆದಿದ್ದ ಈ ಭರತಖಂಡದ ಪೂರ್ಣಾನ್ವೇಷಣೆಯ ಮಹತ್ಕಾರ್ಯಕ್ಕೆ ಇಳಿದರು.

ಇದರಿಂದ ಅವರು ಈ ದೇಶದ ಆರ್ಥಿಕ ಸಂಪತ್ತನ್ನು ಕಸಿಯುವುದರಲ್ಲಿ ಮಾತ್ರ ನಿರತರಾಗದೆ, ನಾಡಿನ ಸಾಂಸ್ಕೃತಿಕ ಮತ್ತು ಪಾರಮಾರ್ಥಿಕ ವಿಚಾರಗಳನ್ನು ಸಂಶೋಧಿಸಿ ಜಗತ್ತಿಗೆ ತಿಳುಹಿಸುವ ಉಚ್ಚಧ್ಯೇಯವನ್ನು ಹೊಂದಿದ್ದರೆಂದು ತಿಳಿಯುತ್ತದೆ. ಇದಕ್ಕೆ ನಿದರ್ಶನವಾಗಿ ಕ್ರಿ. ಶ. ೧೭೮೪ರಲ್ಲಿ Warren Hastings ಇವನು ತನ್ನ ಅಧಿಕಾರಿಗಳಿಗೆ ಬರೆದ ಪತ್ರದಲ್ಲಿ ಈ ರೀತಿಯಾಗಿ ಹೇಳಿದ್ದನು—

" ........It is not very long since the inhabitants of India were considered by many as creatures scarce elevated above the degree of savage life; nor, I fear, is that prejudice yet wholly eradi-

cated though surely abated. Every instance which brings their real character home to observation will impress us with a more generous sense of feeling for their natural rights, and teach us to estimate them by the measure of our own. But such instances can only be obtained in their writings : and these will survive when the British dominion in India shall have long ceased to exist, and when the sources which it once yielded of wealth and power are lost to remembrance.*

**೧೬. ಭಾರತಕ್ಕೆ ಸಲ್ಲಿಸಿದ ಸೇವೆಯೇ ಕರ್ಣಾಟಕದ ಸೇವೆ :—**

ಕುಂಪೆನಿ ಸರಕಾರವೂ ಪಾಶ್ಚಾತ್ಯ ವಿದ್ವಾಂಸರೂ ಈ ದೇಶದಲ್ಲಿ ತಮ್ಮ ಮತೀಯ ವ್ಯವಹಾರಗಳನ್ನು ಎಷ್ಟು ಶ್ರದ್ಧೆಯಿಂದ ನಡೆಸಿದರೋ, ಅದೆಷ್ಟು ಸಾಹಸದಿಂದ ತಮ್ಮ ಸಾಮ್ರಾಜ್ಯದ ಸ್ಥಾಪನೆಗೆ ಹೋರಾಡಿದರೋ ಅಷ್ಟೇ ನಿಷ್ಠೆಯಿಂದ ಈ ದೇಶದ ಸಂಶೋಧನೆ, ಚಾರಿತ್ರಿಕ ಪರಿಶೋಧನೆ, ಭೌಗೋಲಿಕ ಅನ್ವೇಷಣೆ, ಪ್ರಾಚೀನ ಸಾಹಿತ್ಯ ಸಂಸ್ಕೃತಿಗಳ ಪ್ರಚಾರ ಮತ್ತು ಹಲವು ದುಷ್ಟ ಪದ್ಧತಿಗಳ ನಿವಾರಣೆಗೆ ಶ್ರಮಿಸಿದರು. ಈ ಎಲ್ಲ ಕ್ಷೇತ್ರಗಳಲ್ಲೂ ಬಹು ದಕ್ಷತೆಯಿಂದ ದುಡಿಯಲು ಐರೋಪ್ಯದ ವಿವಿಧ ಭಾಗಗಳಿಂದ ತಜ್ಞರಾದ ಸಾಧಕರೂ ಆಡಳಿತಗಾರರೂ ಒಬ್ಬರನಂತರ ಒಬ್ಬರಾಗಿ ಬಂದು ಈ ದೇಶದ ಪ್ರಗತಿಗೆ ತಕ್ಕ ಸುಧಾರಣೆಗಳನ್ನೂ ನಾವೀನ್ಯತೆಯನ್ನೂ ತಂದುದು ಮಾತ್ರವಲ್ಲದೆ ಇತರ ಹಲವು ಕ್ಷೇತ್ರಗಳಲ್ಲೂ ಅವರು ವಿಧಾಯಕ ರೀತಿಯಲ್ಲಿ ದುಡಿದರೆಂಬುದು ಅವರು ಈ ದೇಶದಲ್ಲಿ ಕೈಗೊಂಡ ಕಾರ್ಯಕಲಾಪಗಳ ಫಲಿತಾಂಶಗಳಿಂದಲೇ ತಿಳಿಯಬಹುದಾಗಿದೆ.

ಪಾಶ್ಚಾತ್ಯರು ಕರ್ಣಾಟಕಕ್ಕೆ ಮತ್ತು ಕನ್ನಡ ಸಾಹಿತ್ಯಕ್ಕೆ ಸೇವೆಯನ್ನು ಪ್ರತಿಪಾದಿಸುವ ಮೊದಲಾಗಿ ಇಡೀ ಭಾರತಕ್ಕೆ ಮತ್ತು ಭಾರತದ ಚರಿತ್ರೆ. ಸಾಹಿತ್ಯ, ಸಂಸ್ಕೃತಿಗಳ ಪುನರುದ್ಧಾರಕ್ಕೆ ಅದೆಷ್ಟು ಶ್ರಮಿಸಿದ್ದಾರೆಂಬುದನ್ನು ಸೂಕ್ಷ್ಮವಾಗಿ ಹೇಳಿದರೆ ಅಸಂಗತವಾಗಲಾರದು. ಅವರು ಭಾರತದ ಏಳಿಗೆಗೆ ಎಸಗಿದ ಹಲವು ಕಾರ್ಯಗಳ ಬಹುಪಾಲು ಕರ್ಣಾಟಕಕ್ಕೂ ಸಂದಿದೆ. ವೇದೋಪನಿಷತ್ತುಗಳೂ, ರಾಮಾಯಣ ಮಹಾಭಾರತಗಳೂ, ಮೀಮಾಂಸ, ನ್ಯಾಯ, ಯೋಗಾದಿ ಶಾಸ್ತ್ರಗಳೂ, ಶಂಕರ, ಮಾಧ್ವ, ಸಾಯಣರೇ ಮೊದಲಾದವರ ಭಾಷ್ಯಗಳೂ, ಮಿತಾಕ್ಷರ, ದಯಾಭಾಗಾದಿ ನ್ಯಾಯ ಶಾಸ್ತ್ರಜ್ಞರೂ, ವರಾಹಮಿಹಿರ, ಆರ್ಯಭಟ್ಟ, ಭಾಸ್ಕರಾಚಾರ್ಯರೇ ಮೊದಲಾದವರ ಶಾಸ್ತ್ರೀಯ ಗ್ರಂಥಗಳೂ ಕರ್ಣಾಟಕದಲ್ಲೂ ಹುಟ್ಟಿದುವು ; ಇವರಲ್ಲಿ ಹಲವರು ಕನ್ನಡಿಗರೇ ಆಗಿದ್ದರು ; ಕರ್ಣಾಟಕದಿಂದ ವ್ಯಾಪ್ತವಾಗಿದ್ದ ದಖ್ಖಣವು ಪ್ರಾಚೀನ ಭಾರತದ ಸಾಹಿತ್ಯ ಸಂಸ್ಕೃತಿಯ ಪ್ರಚೋದನೆಗೆ ತನ್ನ ಪಾಲಿನ ಕರ್ತವ್ಯವನ್ನು ಸಲ್ಲಿಸಿದೆ.

ಅಷ್ಟೇ ಅಲ್ಲ, ಈ ಪುರಾತನ ಗ್ರಂಥಗಳೆಲ್ಲವನ್ನೂ ಪಾಶ್ಚಾತ್ಯರು ಅನ್ವೇಷಿಸಿ,

* Introduction to Bhagavad Gita by Sir Charles Wilkins.

ವ್ಯಾಖ್ಯಾನಿಸಿ, ಭಾಷಾಂತರಿಸಿ ಮತ್ತು ಪ್ರಕಟಿಸಿ ಈ ದೇಶದಲ್ಲಿ ಮಾತ್ರವಲ್ಲ, ವಿದೇಶಗಳಲ್ಲೂ ಕಳೆದ ಶತಮಾನದಲ್ಲಿ ಬಿತ್ತಿದ್ದಾರೆ. Jones, Colebrooke, Carey, Max Muller ಹೀಗೆ ಮೊದಲ್ಗೊಂಡು ನೂರಾರು ಪ್ರಚಂಡ ವಿದ್ವಾಂಸರು ಸಲ್ಲಿಸಿದ ಸೇವೆಯು ಬಹುಪಾಲು ಕರ್ಣಾಟಕಕ್ಕೂ ಸಂದಿದೆಯೆಂಬುದಕ್ಕಾಗಿ ಅವರು ಕೈಗೊಂಡ ಕೆಲಸಗಳೇನೇನು ಎಂಬುದಾಗಿ ಮುಂದಿನ ಕೆಲವು ಪುಟಗಳಲ್ಲಿ ಹೇಳಲಾಗಿದೆ. ಹಾಗೆ ಹೇಳುವಾಗ ಅವರಂತೆ ಇತರರೂ ಇನ್ನಾವಾವ ರೀತಿಯಲ್ಲಿ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆಂಬುದರ ಸ್ಥೂಲ ಪರಿಚಯವನ್ನೂ ಕೊಡಲಾಗಿದೆ. ಆದರೆ ಅದನ್ನು ಕುರಿತು ಇಂತಿಷ್ಟು ಹೇಳಲಾಗಿದ್ದರೂ ಅದು ಅಸಂಪೂರ್ಣವೆಂದೇ ಓದುಗರು ಗಮನಿಸಬೇಕಾಗಿದೆ.

---

೨

" ನಡೆವರೆಡಹದೆ ಕುಳಿತರೆಡಹುವರೆ ಕಾವ್ಯಮಂ
ನಡೆಸುವಾತಂ ರಸಾವೇಶ ಮರಹಾಲಸ್ಯ
ನೆಡೆಗೊಳಲು ತಪ್ಪುಗಲ್ಲದೆ ಕಾವ್ಯಕರ್ತೃ ತಪ್ಪುವನೆ ಒಂದೆರಡೆಡೆಯೊಳು !
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆಯುವುದೆ ಬೇನೆಯರಿಯದ ನೀರಸರನೇಕೆ ಪುಟ್ಟಿಸಿದನಬುಜಭವನು.

[ರಾಘವಾಂಕ]

ಕಳೆದ ಶತಮಾನದಲ್ಲಿ ಈ ದೇಶದಲ್ಲಿ ಇದ್ದ ಕೆಲವು ಐರೋಪ್ಯ ಪಂಡಿತರು ಅಥವಾ ಅವರ ಹೆಸರುಗಳು ನಮಗೆ ಕಾಳಿದಾಸ, ಭವಭೂತಿ, ಪಂಪ, ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದವರ ಹೆಸರುಗಳಷ್ಟೇ ದಿನನಿತ್ಯದ ಮಾತಾಗಿದ್ದುವು. ಇವರು ಪ್ರಾಚೀನ ಧರ್ಮಶಾಸ್ತ್ರ ಗ್ರಂಥಗಳನ್ನು ಐರೋಪ್ಯ ಭಾಷೆಗಳಿಗೆ ಇಳಿಸಿದಾಗ ನಮ್ಮ ಆ ಸಾಹಿತ್ಯ ಸಂಪತ್ತಿನ ಆಧಿಕ್ಯವು ಮತ್ತು ಮಹತ್ವವು ಜನಸಾಮಾನ್ಯರಿಗೆ ಆಶ್ಚರ್ಯ ಪ್ರಚೋದಕವನ್ನುಂಟುಮಾಡಿತು.

ಭಾರತೀಯರ ಧಮನಿಯಲ್ಲಿ ಆರ್ಯರ ರಕ್ತವು ಹರಿಯುತ್ತಿದ್ದರೆ ಅದೇ ಪ್ರಮಾಣ ದಲ್ಲಿ ಪಾಶ್ಚಾತ್ಯರ ನರನಾಡಿಗಳಲ್ಲೂ ಹರಿಯುತ್ತಿದೆ. ನಮ್ಮ ಪೂರ್ವಿಕರು ಉತ್ತರ ಏಷ್ಯಾದ ಅದಾವ ಒಂದು ಭಾಗದಿಂದ ಈ ದೇಶಕ್ಕೆ ಸಹಸ್ರಾರು ವರ್ಷಗಳಿಗೆ ಹಿಂದೆ ಬಂದರೋ, ಅಂತೆಯೇ ಪಾಶ್ಚಾತ್ಯರ ಪೂರ್ವಿಕರೂ ಉತ್ತರ ಏಷ್ಯಾದ ಅದೇ ಭಾಗದಿಂದ ಐರೋಪ್ಯದತ್ತ ಹೋದರು. ಆ ರೀತಿಯಲ್ಲಿ ಅಂಥ ಒಂದು ಸೋದರ ಭಾವನೆಯು ಮೊಳೆತಿದ್ದ ಕಾರಣದಿಂದಲೇ ಪೌರಸ್ತ್ಯ ಸಂಸ್ಕೃತಿಯಲ್ಲಿ ಪಾಶ್ಚಾತ್ಯರಿಗೆ ಗೌರವ ಮತ್ತು ಅಭಿಮಾನವು ಹುಟ್ಟಿ ಅದರ ಉದ್ಧಾರಕ್ಕಾಗಿ ಮತ್ತು ಪರಿಷ್ಕಾರಕ್ಕಾಗಿ ದುಡಿದರು. ಹಾಗಾದ ಕಾರಣದಿಂದಲೇ Hastings, Cornwallis. Bentinck ಮೊದ ಲಾದವರಂಥಾ ವಿಶಾಲ ಭಾವನೆಯ ಅಧಿಕಾರಿಗಳೂ Jones, Colebrooke, Wilson ಮೊದಲಾದವರಂಥಾ ಉದ್ದಾಮ ಪಂಡಿತರೂ ನಮ್ಮ ದೇಶದಲ್ಲಿ ಆ ಕಾಲ ದಲ್ಲಿ ಕಂಡುಬಂದರು. ಈ ದೇಶವು ರಾಜಕೀಯವಾಗಿ ಸೊರಗಿದ್ದ ಆ ವೇಳೆಗೆ ಈ ಬಿಳಿ ಜನದ ತಂಡವು ನಾಡಿನ ಸುದೈವವೋ ಎಂಬಂತೆ ಆ ವರೆಗೂ ಗುಪ್ತವಾಗಿದ್ದ ಅಪಾರ ಸಾಹಿತ್ಯ ಸಂಪತ್ತನ್ನು ಹೊರಗೆಡವಿ ದೇಶದ ಭವಿಷ್ಯಕ್ಕೆ ಆಶಾದಾಯಕವಾದ ಚೈತನ್ಯ ವನ್ನೊದಗಿಸಿದರು.

ಐರೋಪ್ಯ ಪಂಡಿತರು ದೀಕ್ಷಾಬದ್ಧವಾಗಿ ಕೈಗೊಂಡ ಅವರ ಸಾಹಿತ್ಯ ಸೇವೆ ಯಲ್ಲಿ ಅವರ ಅವಗಾಹನೆಗೆ ಬಾರದೇ ಇದ್ದ ವಿಚಾರಗಳು ಯಾವುದೂ ಇರಲಿಲ್ಲ; ಅವರು ಎಲ್ಲವನ್ನೂ ಮುಟ್ಟಿದರು. ಪರಿಣಾಮವಾಗಿ ಕಾಲಗರ್ಭದೊಳಡಗಿದ್ದ ಸಾಹಿತ್ಯ ಮತ್ತು ಶಾಸ್ತ್ರರತ್ನಗಳನ್ನು ಶ್ರಮಪಟ್ಟು ಹೊರದೆಗೆದು ಅವನ್ನು ಸಂಸ್ಕರಿಸಿ ಅಪ್ಪಟ ಚಿನ್ನವಾಗಿ ಮಾರ್ಪಡಿಸಿ ಮುದ್ರಿಸಿ ಪ್ರಕಟಿಸಿ ಬೆಳಕಿಗೆ ತಂದ ಯಶಸ್ಸು ಅವರದಾಗಿದೆ.

**೨. ಸಾಹಸಕರ ಜೀವನ ಮತ್ತು ಅಪಾರ ವಿದ್ವತ್ತು :—**

ಒಟ್ಟಾಗಿ ಹೇಳುವುದೇನೆಂದರೆ ಬ್ರಿಟಿಷ್ ಸರಕಾರದ ಅಧಿಕಾರ ವರ್ಗವೂ ಧರ್ಮ ಪ್ರಚಾರಕರ ತಂಡವೂ ಕಳೆದ ಶತಮಾನದಲ್ಲಿ ಭಾರತೀಯ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಭೂಗೋಳವೇ ಮೊದಲಾದುವುಗಳ ಬಗ್ಗೆ ಸಾಧಿಸಿದ ಕಾರ್ಯಗಳೆಲ್ಲಾ ಆಯಾ ಕ್ಷೇತ್ರಗಳಲ್ಲಿ ಪ್ರೌಢವ್ಯಾಸಂಗವನ್ನು ಹೊಂದಿದವರೂ ಅಥವಾ ಸ್ವಯಂ ಪ್ರತಿಭೆಯನ್ನು ಹುಟ್ಟಿದಾರಭ್ಯದಿಂದಲೇ ಪಡೆದವರೂ ಆದ ತಜ್ಞರಿಂದ ಆದುದಲ್ಲ. ಆ ನೂರಾರು ಪಾಶ್ಚಾತ್ಯ ಸಾಧಕರು ಸಹಸ್ರಾರು ಗ್ರಂಥಗಳನ್ನು ಈ ದೇಶದ ಬಗ್ಗೆ ಬರೆದಾಗ ಮತ್ತು ಆ ಲೇಖಕರನ್ನೆಲ್ಲಾ ಯಾರು, ಎಂಥವರು ಎಂದು ಮೇಲಿಂದ ಮೇಲೆ ನೋಡಿದಾಗ ನಮಗೆ ತೋರುವುದೇ ಬೇರೆಯಾಗಿದೆ.

ಈ ವಿದ್ವಾಂಸರೆಲ್ಲಾ ತಮ್ಮ ಶ್ರಮ ಸಾಧ್ಯವಾದ ಮತ್ತು ಸಾಹಸಭರಿತವಾದ ಜೀವನದಿಂದಲೇ ಆ ಅಪಾರ ವಿದ್ವತ್ತನ್ನು ಗಳಿಸಿದರು. ಸರಕಾರದ ಆಶ್ರಯವು ಅಂಥಾ ಧೀಮಂತ ತಪಸ್ವಿಗಳಿಗೆ, ಸಾಹಿತಿಗಳಿಗೆ ಮತ್ತು ಸಂಶೋಧಕರಿಗೆ ದೊರೆತಾಗ ಅವರ ಆ ಪ್ರಯತ್ನಕ್ಕೆ ಇನ್ನಷ್ಟು ಕಳೆಗೊಟ್ಟಂತಾಗಿ ಅವರ ಸಾಹಸವು ಪರಿಪೂರ್ಣತೆಯನ್ನು ಪಡೆಯಿತು.

ಸಾಹಸಕ್ಕೆ ಸಹಾನುಭೂತಿ ಇದ್ದೇ ಇದೆ. ಹಾಗಿಲ್ಲದಿದ್ದರೆ ಕೇವಲ ಒಂದೆರಡು ದರ್ಜೆಗಳು ಮಾತ್ರ ಓದಿದವರು ಸಾಮ್ರಾಜ್ಯವನ್ನೇ ಕಟ್ಟುವಷ್ಟು ನೈಪುಣ್ಯತೆಯನ್ನು ಹೇಗೆ ಪಡೆದರು ? ತಮ್ಮ ಜೀವಾವಧಿಯ ಮೂವತ್ತು ಯಾ ನಲ್ವತ್ತು ವರ್ಷಗಳ ವರೆಗೂ ಸಂಸ್ಕೃತ ಮತ್ತು ಭಾರತೀಯ ಭಾಷೆಗಳ ಗಂಧಗಾಳಿಗೆ ಎಟಕದಿದ್ದವರು ವೇದೋಪನಿಷತ್ತುಗಳನ್ನು ಹೇಗೆ ಭಾಷಾಂತರಿಸಿದರು ? ಅವುಗಳ ಮೇಲೆ ಟೀಕೆಗಳನ್ನು ಹೇಗೆ ಬರೆದರು ? ಬರೇ ಬೈಬಲ್ ಒಂದನ್ನು ಕೈಯ್ಯಲ್ಲಿ ಹಿಡಿದುಕೊಂಡು ಬಂದ ಕ್ರೈಸ್ತಮತ ಪ್ರಚಾರಕರು ಸಹಸ್ರಾರು Folio ಪುಟಗಳಷ್ಟು ಅದ್ಭುತ ನಿಘಂಟುಗಳನ್ನೂ ದೇಶೀಯ ಭಾಷಾ ವ್ಯಾಕರಣ ಗ್ರಂಥಗಳನ್ನೂ ಇತರ ಸಂಶೋಧನಾ ವರದಿಗಳನ್ನೂ ಹೇಗೆ ಬರೆಯುವಂತಾದರು ? ಅಂಥಾ ಪಂಡಿತರಲ್ಲಿ ಹಲವರು ಇಂದಿನ ಯಾವ ಮಹಾವಿದ್ಯಾತಜ್ಞನನ್ನೂ ಮೀರಿಸುವಂಥಾ ಅಸಾಮಾನ್ಯ ಕೆಲಸಗಳನ್ನು ಅಂದು ಮಾಡಿ ಬಿಟ್ಟು ಹೋದರು.

ಅವರ ಅನ್ವೇಷಣೆಯು ಲೋಕದ ಬೇರೆ ಬೇರೆ ಖಂಡಗಳಲ್ಲಿ ಹೇಗೆ ನಡೆದುವೋ ಅದೇ ರೀತಿಯಲ್ಲಿ ಈ ದೇಶದ ಪ್ರತಿಯೊಂದು ವಿಚಾರಗಳ ಮೇಲೂ, ಬೆಟ್ಟ, ಗುಡ್ಡ, ನದಿ, ಸರೋವರ, ತೊರೆ, ತೋಡು, ದ್ವೀಪಗಳೇ ಅಲ್ಲದೆ ವಿವಿಧ ಪ್ರಾಣಿ, ಪಕ್ಷಿ. ಕ್ರಿಮಿ, ಕೀಟಗಳನ್ನು ಕುರಿತಾಗಿಯೂ ಅವರು ವೈಜ್ಞಾನಿಕವಾಗಿ ಅನ್ವೇಷಿಸಿ ಅವುಗಳ ಮೇಲೆ ಶಾಸ್ತ್ರೀಯ ಗ್ರಂಥಗಳನ್ನೂ ಸಹಸ್ರಾರು ಬರೆದಿದ್ದಾರೆ.

**೩. ವಿವಿಧ ಐರೋಪ್ಯ ಜನಾಂಗದವರು ಒಟ್ಟಾಗಿ ದುಡಿದರು :—**

ಒಂದು ದೇಶದ ನಾಗರಿಕತೆಯ ಪರಿಮಿತಿಯು ಎಷ್ಟೆಂದು ನೋಡಬೇಕಾದರೆ ಅಲ್ಲಿ ಇರುವ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಪತ್ತಿನಿಂದ ತಿಳಿಯಬಹುದೆಂದು

ಪಾಶ್ಚಾತ್ಯರು ತಿಳಿದಿದ್ದರು. ಅದಕ್ಕಾಗಿಯೇ ಗೌರ್ನರ್ ಜನರಲ್ ವಾರನ್ ಹೇಸ್ಟಿಂಗ್ಸ್ ಇವನು ಭಾರತೀಯರ ಪ್ರಾಚೀನ ವಿದ್ವತ್ತು, ಕಲೆ, ಶಾಸ್ತ್ರಾದಿಗಳೆಲ್ಲವನ್ನೂ "Can only be obtained in their writings" ಎಂದು ಹೇಳಿದ್ದನು. ಬ್ರಿಟಿಷ್ ಸರಕಾರದ ಈ ಪ್ರಗತಿಪರವಾದ ಧೋರಣೆಯನ್ನು ಜಯಪ್ರದವಾಗಿ ಜಾರಿಗೆ ತರಲು ಅದಕ್ಕೆ ತಕ್ಕಂತೆ ಉದ್ದಾಮ ಪಂಡಿತರು ಕ್ರಿ. ಶ. 1750 ರಿಂದ ಮೊದಲ್ಗೊಂಡು ಯೂರೋಪು ಖಂಡದಿಂದ ಆಗಿಂದಾಗ್ಗೆ ಬರುತ್ತಿದ್ದರು. ಅವರೆಲ್ಲರೂ ಈ ದೇಶದಲ್ಲಿ ಶ್ರಮಿಸದ ಕಾರ್ಯಕ್ಷೇತ್ರವು ಯಾವುದೂ ಇಲ್ಲವೆಂಬಷ್ಟು ವ್ಯಾಪಕವಾಗಿ ದುಡಿದಿದ್ದಾರೆ. ಅಂತರರಾಷ್ಟ್ರೀಯ ವ್ಯವಹಾರ, ವ್ಯಾಪಾರ, ರಾಜ್ಯಾಡಳಿತ, ವಿದ್ಯಾಭಿವೃದ್ಧಿ, ಸಾಹಿತ್ಯ ಸಂಶೋಧನೆ ಇತ್ಯಾದಿಗಳಲ್ಲೆಲ್ಲ ಅಮೋಘ ಸೇವೆಯನ್ನು ಕೈಕೊಂಡು ಈ ದೇಶವನ್ನು ಮುಂದೊಯ್ದಿದ್ದಾರೆ.

ನಿಷ್ಪಕ್ಷಪಾತವಾಗಿ ಆಲೋಚಿಸಿದರೆ ಐರೋಪ್ಯದ ಈ ವಿವಿಧ ಜನಾಂಗಗಳು ಈ ದೇಶದಲ್ಲಿ ಸಾಧಿಸಿದ ಮಹತ್ಕಾರ್ಯಗಳಲ್ಲಿ ಈಗ ಉಳಿದದ್ದು ಅವರ ಅಪಾರ ಬರೆವಣಿಗೆ ಗಳು; ಈ ದೇಶವನ್ನು ಕುರಿತು, ಈ ದೇಶದ ಪುರಾಣ, ಶಾಸ್ತ್ರ, ಕಾವ್ಯ ಮುಂತಾದು ವನ್ನು ಅನ್ವೇಷಿಸಿ, ಸಂಪಾದಿಸಿ, ವ್ಯಾಖ್ಯಾನಿಸಿ, ಭಾಷಾಂತರಿಸಿ ಮತ್ತು ಪ್ರಕಟಿಸಿ ಇಂಗ್ಲಿಷ್, ಜರ್ಮನ್, ಇಟಾಲಿಯನ್, ಪೋರ್ಚುಗೀಸ್, ಫ್ರೆಂಚ್, ಲ್ಯಾಟಿನ್, ಗ್ರೀಕ್ ಹೀಗೆ ಇನ್ನೂ ಹಲವು ಭಾಷೆಗಳಲ್ಲಿ ಬಿಟ್ಟು ಹೋದ ಅವರ ಬರವಣಿಗೆಗಳು! Warren Hastings ಇವನು ಅಂದಂತೆ.

"........These....... writings will survive when British dominion in India shall have long ceased to exist..."

ಎಂದು ಹೇಳಿದ್ದು ಅಕ್ಷರಶಃ ನಿಜವಾಗಿದೆ.

ಯೂರೋಪಿನ ಈ ವಿವಿಧ ಜನಾಂಗಗಳು ಅಂದು ಈ ದೇಶದಲ್ಲಿ ತಮ್ಮ ರಾಜಕೀಯ ಮತ್ತು ವ್ಯಾಪಾರಗಳ ಬಗ್ಗೆ ಪರಸ್ಪರ ಕಾದಾಡುತ್ತಾ ಇದ್ದರೂ ಅವರು ತಮ್ಮ ಸಾಹಿತ್ಯ ಮತ್ತು ಸಾಂಸ್ಕೃತಿಕ ಅನ್ವೇಷಣೆಯ ಕಾರ್ಯದಲ್ಲಿ ಆತ್ಮೀಯ ಬಂಧು ಗಳಂತೆ ನಡೆದುಕೊಂಡರು. ವಿವಿಧ ದೇಶದವರು ಇಲ್ಲಿ ಅನ್ಯೋನ್ಯ ಸೌಹಾರ್ದತೆ ಯಿಂದ ವರ್ತಿಸಿ ಒಡಗೂಡಿ ಒಡನಾಡಿ ಕಲೆತು ತಮ್ಮ ಧರ್ಮಪ್ರಚಾರ ಕಾರ್ಯವನ್ನೂ ನಡೆಸಿದರು; ಅಂತೆಯೇ ಭಾರತೀಯ ಗ್ರಂಥಗಳ ಸಂಶೋಧನಾ ಕಾರ್ಯವನ್ನೂ ನಡೆಸಿದರು. ಅದರಲ್ಲಿ ಆ ಕೆಲವು ಮಹಾತಪಸ್ವಿಗಳು ತಮ್ಮ ಜೀವಾವಧಿಯನ್ನೆಲ್ಲ ಅದಕ್ಕಾಗಿ ತೆತ್ತರು. ಅದರಿಂದ ಅವರು ಕೈಕೊಂಡ ಮಹಾವ್ರತವು ಫಲಕಾರಿ ಯಾಯಿತು; ಅವರ ಸಾಹಸೀ ಜೀವವು ಸಂತೃಪ್ತವಾಯಿತು. ಭಾರತದ ದಿವ್ಯ ಸಂದೇಶವು ಈ ಶ್ರದ್ಧಾವಂತ ವಿದ್ವಾಂಸರ ಮೂಲಕವಾಗಿ ಲೋಕವೆಲ್ಲಾ ಪ್ರಚಾರ ವಾಯಿತು.

## ೪. ದೇಶೀಯ ಸಾಹಿತ್ಯಾನ್ವೇಷಣೆಯ ಯುಗ :—

ಭಾರತದ ಜನಕ್ಕೆ ಆಧುನಿಕ ವಿಚಾರಜ್ಞಾನವನ್ನೀಯಲು ಆಲೋಚಿಸಿದ

ಆಂಗ್ಲೇಯ ಅಧಿಕಾರಿಗಳಲ್ಲಿ Warren Hastings ಇವನೇ ಮೊದಲಿಗನು; ಅದರೊಡನೆಯೇ ಭಾರತದ ಪ್ರಾಚೀನ ಗ್ರಂಥಗಳನ್ನು ಪರಿಶೋಧಿಸಲು ಮತ್ತು ಭಾಷಾಂತರಿಸಲು ತಕ್ಕ ಸನ್ನಿವೇಶವನ್ನೂ ಅವನು ಕಲ್ಪಿಸಿದನು. ಇವನಿಗೆ ಭಾರತದ ಮೇಲೆ ಅದೆಷ್ಟು ಅಭಿಮಾನವಿತ್ತೆಂದರೆ—

"Sitting in a remote Bengali town, with ample leisure for reflection, W. Hastings wondered at the vastness of the country, its richness and variety, and, above all, the antiquity and the splendour of its civilization. Unobscured by prejudice, his observant eye and his deep understanding stimulated in him a profound and an almost reverant admiration for India's ancient heritage."*

Warren Hastings ಇವನು 1772 ರಿಂದ 1785ರ ವರೆಗೆ ಹದಿಮೂರು ವರ್ಷಗಳ ಕಾಲ ಈ ದೇಶದ ಅಧಿಕಾರಿಯಾಗಿದ್ದನು. Robert Clive ಇವನು ಕ್ರಿ. ಶ. 1767ರಲ್ಲಿ ನಿವೃತ್ತನಾಗಿ ಸ್ವದೇಶಕ್ಕೆ ಮರುಳಿ 1774 ರ ನವಂಬರ್ ತಿಂಗಳಲ್ಲಿ ತನ್ನ 49 ನೇ ವರ್ಷ ಪ್ರಾಯದಲ್ಲಿ ಗತಿಸಿದನು. ಅವನನಂತರ Harry Verdst ಮತ್ತು John Cartier ಎಂಬಿರ್ವರು ಎರಡೆರಡು ವರ್ಷಗಳ ಕಾಲ ಅಧಿಕಾರ ನಡೆಸಿದರು. ಅನಂತರ Warren Hastings ಇವನು ಬಂದು ಸುದೈವವಶಾತ್ ಈ ದೇಶದ ಸಾಹಿತ್ಯಗ್ರಂಥಗಳ ಅನ್ವೇಷಣೆಯ ಯುಗವನ್ನೇ ಪ್ರಾರಂಭಿಸಿದನು. 1784 ರಲ್ಲಿ ಅವನು ಇಂಗ್ಲೆಂಡಿನ ತನ್ನ ಅಧಿಕಾರಿಗಳಿಗೆ ಬರೆದ ಪತ್ರವೊಂದರಲ್ಲಿ ಈ ರೀತಿ ಹೇಳಿದ್ದು ಅವನ ಮತ್ತು ಅಂದಿನ ಸರಕಾರದ ಮನೋಧರ್ಮವೇನಿತ್ತೆಂದು ತಿಳಿಯುತ್ತದೆ.—

"......Every accumulation of knowledge, and especially such as is obtained by social communication with people over whom we exercise a dominion founded on the right of conquest, is useful to the State; it is the gain of humanity........it attracts and conciliates distant affections; it lessens the weight of the chain by which the natives are held in subjection; and it imprints on the hearts of our own countrymen the sense and obligation of benevolence.........Every instance which brings their real character home to observation will impress us with a more generous sense of feeling for their natural rights, and teach us to estimate them by the measure of our own. But such instances can only be obtained in their writings,........"*

೫. ಪ್ರಾಂತೀಯ ಭಾವನೆಗೆ ಅವರಲ್ಲಿ ಅವಕಾಶವಿರಲಿಲ್ಲ :—

ಸುಮಾರು ೨೦೦ ವರ್ಷಗಳ ಹಿಂದೆ ನಮ್ಮ ದೇಶದ ಪರಿಸ್ಥಿತಿಯು ಹೇಗಿತ್ತೆಂಬು

---

* Mr. V. B. Kulkarni, " British Statesmen in India ".

* Introduction to Gita, translated by Charles wilkins.

ಬಚ್ಚಿಡುವಂತೆ ಅಡಗಿಸಿಡಬೇಕಾಗಿದ್ದ ಪ್ರಮೇಯವೇನಿತ್ತೋ ತಿಳಿಯದು. ಇವರ ಪರಿಣಾಮವಾಗಿ ಆ ದಿವ್ಯ ಗ್ರಂಥಗಳನ್ನು ಬ್ರಾಹ್ಮಣರೂ ಓದಲಿಲ್ಲ ಅಥವಾ ಕಲಿಯಲಿಲ್ಲ; ಇತರರಿಗೂ ಓದುವ ಅವಕಾಶವನ್ನು ಕೊಡಲಿಲ್ಲ. ಹೀಗೆಯೇ ನಮ್ಮ ದೇಶದಲ್ಲಿ ಹತ್ತಿಪ್ಪತ್ತು ಶತಮಾನಗಳು ಕಳೆದುಹೋದುವು. ಇಂಥಾ ಒಂದು ದುರ್ದೆಸೆಯ ದುರ್ದೈವಕ್ಕೊಳಗಾಗಿಯೇ ನಮ್ಮ ಸಮಾಜವು ಕಾಲವನ್ನು ತಿಳ್ಳಿತು.

ಈ ಸಂದರ್ಭದಲ್ಲಿ Dr. Mill ಇವನು ಒಂದು ಪ್ರಸಂಗವನ್ನು ಹೇಳಿದ್ದು ಸ್ವಾರಸ್ಯವಿದೆ. ಓರ್ವ ಪಾಶ್ಚಾತ್ಯ ವಿದ್ವಾಂಸನು ವೇದದೊಳಗಿನ ಗಾಯತ್ರೀ ಮಂತ್ರಗಳನ್ನು ಓದಿದನಂತೆ. ಮೊದಲೇ ಅಸ್ವಸ್ಥತೆಗೊಳಗಾಗಿದ್ದ ಅವನು ಅನಂತರ ಒಂದೆರಡು ತಿಂಗಳಲ್ಲಿ ಮೃತನಾದನಂತೆ. ಆಗ ಬ್ರಾಹ್ಮಣರೆಲ್ಲಾ ಸೇರಿ ಅವನು ವೇದವನ್ನು ಓದಿದ ಪಾಪಕ್ಕೆ ದೇವರು ತಕ್ಕ ಶಿಕ್ಷೆಯನ್ನು ವಿಧಿಸಿದನೆಂದು ಹೇಳಿದರಂತೆ. ಅದೇ ರೀತಿ ಓರ್ವ ದೇಶೀಯ ರಾಜನ ಬಳಿಯಿದ್ದ ಒಂದು ವೇದಗ್ರಂಥವನ್ನು ಓರ್ವ ಆಂಗ್ಲ ಪಂಡಿತನು ತೆಗೆದುಕೊಂಡು ಓದುತ್ತಾ ಇದ್ದಾಗ ಅಲ್ಲಿದ್ದ ಬ್ರಾಹ್ಮಣ ಪುರೋಹಿತರೆಲ್ಲರೂ ಅವನ ಮೇಲೆ ಕೋಪಗೊಂಡು ಅವನನ್ನು ಸಿಕ್ಕಾಬಟ್ಟೆ ಬೈದರಂತೆ, ಹೀಗೆ ಇನ್ನೆಷ್ಟೋ ನಿದರ್ಶನಗಳು ಇವೆ.

ಇಂಥಾ ಬ್ರಾಹ್ಮಣರು ಲಕ್ಷ್ಯಗಟ್ಲೆಯಾಗಿ ದೇಶದಲ್ಲಿ ಇದ್ದಾಗ ಪಾಶ್ಚಾತ್ಯ ವಿದ್ವಾಂಸರಿಗೆ ಅವರಲ್ಲೇನು ಗುಟ್ಟಿದೆಯೆಂದು ನೋಡುವ ಕಾತರತೆಯು ಉಂಟಾಗದೇ ಇರಲಿಲ್ಲ. ಲೋಕವನ್ನೆ ಅನ್ವೇಷಿಸಿದ ಆ ಜನಕ್ಕೆ ಬ್ರಾಹ್ಮಣರ ಗುಡಿಸಿಲಿನೊಳಗೆ ಹಾಯ್ದು ಈ ತಾಳೇ ವೋಲೆಗಳ ಹೊತ್ತಗೆಗಳನ್ನು ಕಿತ್ತು ತರುವುದಕ್ಕೆ ಹೆಚ್ಚು ಪರಿಶ್ರಮವಾಗಲಿಲ್ಲ. ಸಂಸ್ಕೃತ ಸಾಹಿತ್ಯವನ್ನು ನಿಷ್ಠೆಯಿಂದ ಅಭ್ಯಸಿಸಿದ್ದ ಅವರು ' The Veda is the basis of Sankrit literature ಎಂದು ಹೇಳಿದ್ದರು.

೮. ದೇಶೀಯರ ಸಹಾಯದಿಂದಲೇ ಹೊರತೆಗೆದರು :—

ಬ್ರಾಹ್ಮಣರು ವೇದಗಳನ್ನು ಇತರರು ಓದಿದರೆ ಅವರಿಗೆ ಕಣ್ಣು ಕಾಣಿಸದಾಗುತ್ತದೆ, ಮಂತ್ರಗಳನ್ನು ಇತರರು ಕೇಳಿದರೆ ಕಿವಿ ಕೇಳಿಸದಾಗುತ್ತದೆ, ಎಂದಿತ್ಯಾದಿಯಾಗಿ ಪ್ರಚಾರ ಮಾಡುತ್ತಾ ಇದ್ದಾಗಲೇ ವೇದೋಪನಿಷತ್ತುಗಳ ಮತ್ತು ಇತರ ಶಾಸ್ತ್ರಗ್ರಂಥಗಳ ಹಸ್ತಪ್ರತಿಗಳ ಕಟ್ಟುಗಳು ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್, ಹಾಲೆಂಡ್ ಮೊದಲಾದ ದೇಶಗಳತ್ತ ಸಾಗಿಸಲ್ಪಟ್ಟು ಅವೆಲ್ಲವನ್ನೂ ೧೮ ನೇ ಶತಮಾನದ ಅಂತ್ಯದೊಳಗಾಗಿಯೇ, ಪಾಶ್ಚಾತ್ಯ ಪಂಡಿತರು ಕರತಲಾಮಲಕವಾಗಿಸಿಕೊಂಡು ಅವುಗಳ ಸತ್ವ ಸಾರಗಳನ್ನರಗಿಸಿಕೊಂಡು ಲೋಕವೆಲ್ಲಾ ಪ್ರಚಾರಪಡಿಸಿದರು.

ಪ್ರಾಚೀನ ಗ್ರಂಥಗಳ ಸಂಶೋಧನೆಗೆ ಕುಂಪೆನೀ ಸರಕಾರವು ಆಯಾ ದೇಶೀಯ ಭಾಷೆಗಳಲ್ಲಿ ಮತ್ತು ಸಂಸ್ಕೃತದಲ್ಲಿ ಪರಿಣತರಾದ ಪಂಡಿತರನ್ನು ಆಹ್ವಾನಿಸಿ ಅವರಿಗೆ ದ್ರವ್ಯ ಸಹಾಯವನ್ನಿತ್ತು ಅವರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿತು. ಅವರ ಅನೇಕರು ತಾವಾಗಿಯೇ ತಮ್ಮಲ್ಲಿದ್ದ ವೇದ ಮತ್ತು ಪುರಾಣಗಳ ಓಲೆಕಟ್ಟುಗಳನ್ನು ಪಾಶ್ಚಾತ್ಯ ಪಂಡಿತರಿಗೆ ಕೊಟ್ಟುದಲ್ಲದೆ ಕಾಲಕ್ರಮೇಣ ಈ ದೇಶೀಯ ವಿದ್ವಾಂಸ

ಸೇವಾದೃಷ್ಟಿಯಿಂದ ಅವರಿಗೆ ಪ್ರಾಚೀನ ಗ್ರಂಥಗಳ ಸಂಶೋಧನೆಯಲ್ಲಿ ನೆರವಾದರು ಎಂಬುದನ್ನು Warren Hastings ಇವನು ಈ ರೀತಿಯಾಗಿ ತಿಳಿಸಿದ್ದಾನೆ:—

"Very natural causes may be ascribed for their (Brahmins') reluctance to communicate the mysteries of their learning to strangers, as those to whom they have been for some centuries in subjection, never enquired into them, but to turn their religion into derision, or deduce from them arguments to support the intolerant principles of their own. From our nation they have received a different treatment, and are no less eager to impart their knowledge than we are to receive it .......".*
ಅಲ್ಲದೆ ಭಾರತೀಯ ಭಾಷಾ ಪಂಡಿತರು ತಮ್ಮ ಭಾಷೆಗಳನ್ನು ಐರೋಪ್ಯಾ ಸಾಹಿತಿಗಳಿಗೆ ಬೋಧಿಸುವುದರೊಡನೆ ಕುಂಪೆನೀ ಸರಕಾರದ ಆಶ್ರಯದಲ್ಲಿ ಈ ದೇಶದ ಪುರಾತನ ಗ್ರಂಥಗಳೆಲ್ಲದರ ಸಂಶೋಧನೆಗೂ ಧಾರಾಳವಾಗಿ ಸಹಕರಿಸಿದರೆಂದು W Hastings ಇವನು ಮುಂದುವರಿಸಿ ಈ ರೀತಿಯಾಗಿ ಹೇಳಿದ್ದಾನೆ

"..........It was contributed both cheerfully and gratuitously by men of the most respectable characters for sanctity and learning..........I add, that they have yet received no other reward for their meritorious labours..........".

೯. ಭಗವದ್ಗೀತೆಯ ಇಂಗ್ಲಿಷ್ ಭಾಷಾಂತರ:—

ಕ್ರಿ. ಶ. ೧೮ನೇ ಶತಮಾನದಲ್ಲಿ Warren Hastings ಇವನು ಇದ್ದಾಗಲೇ ಮತ್ತು ಅವನ ಸಲಹೆ ಸಹಕಾರದ ಪರಿಣಾಮವಾಗಿಯೇ ಹಲವು ಪ್ರಾಚೀನ ಶಾಸ್ತ್ರೀಯ ಗ್ರಂಥಗಳು ಐರೋಪ್ಯ ಭಾಷೆಗಳಿಗಿಳಿಸಲ್ಪಟ್ಟುವು. ಹೀಗೆ ಭಾಷಾಂತರವಾದ ಸಂಸ್ಕೃತ ಕಾವ್ಯಗ್ರಂಥಗಳ ಪೈಕಿ ಶ್ರೀಮದ್ಭಗವದ್ಗೀತೆಯೇ ಮೊದಲನೆಯದಾಗಿದೆ.

Charles Wilkins ಇವನು ಇದನ್ನು 1783 ರಲ್ಲಿ ಇಂಗ್ಲಿಷ್‌ನಲ್ಲಿ ಬರೆದನು. ಅದು ಇಂಗ್ಲೆಂಡಿನಲ್ಲಿ ಮುದ್ರಣಕ್ಕೆಂದು ಕಳುಹಿಸಲ್ಪಟ್ಟಾಗ ಅದರ ಭಾಷಾಂತರಕಾರನ ಕೋರಿಕೆಯಂತೆ Warren Hastings ಇವನು ಏಳು Folio ಪುಟಗಳಷ್ಟು ದೀರ್ಘವಾದ ಮುನ್ನುಡಿಯನ್ನು ಆಗ East India Company ಇದರ ಮುಖ್ಯಾಧಿಕಾರಿಯಾಗಿದ್ದ Nathaniel Smith ಇವನಿಗೆ ಬರೆದ ಪತ್ರದ ರೂಪದಲ್ಲಿ ಬರೆದನು. ಅದರಿಂದ ಅಂದು ಬ್ರಿಟಿಷರು ಭಾರತದ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸಿ ವಿದೇಶಗಳಲ್ಲಿ ಪ್ರಚಾರಪಡಿಸಲು ಎಷ್ಟು ಶ್ರದ್ಧೆಯಿಂದ ದುಡಿದರು ಎಂಬುದು ವ್ಯಕ್ತವಾಗುತ್ತದೆ:—

"Sir, To you, as the first member of the commercial body, not only of the present age, but of all the known generation of mankind, I presume to offer, and recommend through you, for

* Letter to the Directors of the East India Company (1784)

an offiering to the public, a very curious specimen of the Literature, the Mythology and Morality of the ancient Hindoos—I hesitate not to pronounce the Geeta a great performance of great originality ; of a sublimity of conception, reasoning and diction, almost unequalled ; and a single exception, among all the known religions of mankind—the order which is followed by the author of the Geeta, and so far atleast he soars for beyond all competitors in this species of composition—"
ಹೀಗೆ ಬರೆಯುತ್ತಾ ತಾನು ಭಾರತದ ಸಂಸ್ಕೃತಿಯ ಬಗ್ಗೆ ಎಷ್ಟು ನಿಷ್ಠಾವಂತನಿರುವೆನೆಂಬುದನ್ನು ಕುರಿತು ಹೀಗೆ ಹೇಳಿದ್ದಾನೆ :—

"I have always regarded the encouragement of every species of useful diligence, in the servants of the company, as a duty appertaining to my office—I have seen an extract frcm a foreign work of great literary credit, in which my name is mentioned, with undeserved appalause, for an attempt to introduce the knowledge of Hindu literature into the European world—"
ಇದರಿಂದ Warren Hastings ಇವನು ಅದೆಷ್ಟು ಸುಸಂಸ್ಕೃತನಾಗಿದ್ದ ಬ್ರಿಟಿಷ್ ಅಧಿಕಾರಿಯೆಂದು ತಿಳಿಯಬಹುದಾಗಿದೆ. ಇಂಥಾ ಆಡಳಿತಗಾರರೇ Philosopher-Statesmen ಎಂಬುದಾಗಿ ವಿಖ್ಯಾತರಾಗುತ್ತಾರೆ. ನಿಜವಾಗಿಯೂ ಇವನು ಈ ದಿಶೆಯಲ್ಲಿ ಸಾಧಿಸಿದ ಕಾರ್ಯವು ಸ್ತುತ್ಯಾರ್ಹವಾಗಿದೆ

೧೦. ವಾರನ್ ಹೇಸ್ಟಿಂಗ್ಸ್—ಇವರ ಕಡೇ ದಿನಗಳು :—

ಹಿಂದೂಸ್ಥಾನದಲ್ಲಿ ಬ್ರಿಟಿಷ್ ಸಾಮ್ರಾಜ್ಯಕ್ಕೆ Robert Clive ಇವನನಂತರ ಭದ್ರವಾದ ತಳಹದಿಯನ್ನು ಹಾಕಿ ಈ ರಾಷ್ಟ್ರದ ಪ್ರಗತಿಗೆ ಹಲವು ಅಮೋಘ ಕಾರ್ಯಗಳನ್ನೆಸಗಿದ Warren Hastings ಇವನು ಕ್ರಿ. ಶ. 1785 ರಲ್ಲಿ ನಿವೃತ್ತನಾದನು. 1732 ರಲ್ಲಿ ಜನಿಸಿ, 1759 ರಲ್ಲಿ ಭಾರತಕ್ಕೆ ಬಂದು ಒರ್ವ ಕೆಳದರ್ಜೆಯ ಹುದ್ದೆಯನ್ನು ಪಡೆದ ಇವನು ಕಡೆಗೆ ಹದಿಮೂರು ವರ್ಷಗಳ ಕಾಲ ಈ ದೇಶದ ಮುಖ್ಯಾಧಿಕಾರಿಯಾಗಿದ್ದು ಬಹು ಶ್ರೇಷ್ಠ ರಾಜಕಾರಿಣಿಯೆಂದೆನಿಸಿಕೊಂಡಿದ್ದನು. ಆದರೆ ಅದೇನೋ ಒಂದು ರಾಜಕೀಯ ಬಿರುಗಾಳಿಯು ಬೀಸಿ ಅವನು ಅದಾವುದೋ ಒಂದು ವಿಚಿತ್ರ ವ್ಯವಹಾರಕ್ಕೆ ಈ ದೇಶದಲ್ಲಿ ಸಹಕರಿಸಿದನೆಂಬ ಅಪವಾದವನ್ನು ಅವನ ವಿರೋಧಿಗಳು ಅವನ ಮೇಲೆ ಹೊರಿಸಿ ವಿಚಾರಣೆಗೆ ಗುರಿಮಾಡಿದರು.

ಈ ವಿಚಾರಣೆಯು ಕ್ರಿ. ಶ. 1788 ರಲ್ಲಿ ಲಂಡನ್ನಿನ ವೆಸ್ಟ್ ಮಿನಿಸ್ಟರ್ ಸಭಾಂಗಣದಲ್ಲಿ ನಡೆಯಿತು. ಆ ಕಾಲದಲ್ಲಿ ಈ ವ್ಯಾಜ್ಯವು ಇಂಗ್ಲೆಂಡಿನಲ್ಲಿ ತುಂಬಾ ಗದ್ದಲವನ್ನು ಹುಟ್ಟಿಸಿತು. ಈ ವಿಚಾರಣೆಯನ್ನರುಹಲು ಮತ್ತು ಕೇಳಲು ಸಹಸ್ರಗಟ್ಟಲೆಯಾಗಿ ಜನರು ನ್ಯಾಯಾಲಯದಲ್ಲಿ ಸೇರಿದರು. ಆಗ Warren Hastings ಇವನು ಎಲ್ಲಿ ನಿಂತಿದ್ದ, ಎಲ್ಲಿ ಕುಳಿತಿದ್ದ ಎಂಬುದಾಗಿ ಆಯಾ ಸ್ಥಳದಲ್ಲಿ ಕಲ್ಲಿನಲ್ಲಿ ಬರೆದುದನ್ನು

ಇಂದಿಗೂ ಅಂತೆಯೇ ಇಟ್ಟಿದ್ದಾರೆ.

ಈ ವಿಚಾರಣೆಯು ಏಳು ವರ್ಷಗಳ ಕಾಲ ನಡೆಯಿತು. Edmund Burke, John Sheridon ವೊದಲಾದ ವಾಗ್ಮಿಗಳು ಆವನನ್ನು ರಾಜದ್ರೋಹಿ ಯೆಂದು ಖಂಡಿಸಿ ವಾದಿಸಿದರು ಆದರೆ ಪ್ರಬಲ ನ್ಯಾಯಾಧೀಶ Sir William Jones ಇವನಿಗೆ ಆ ಆಪಾದನೆಗಳಲ್ಲಿ ಹೆಚ್ಚು ಹುರುಳಿಲ್ಲವೆಂದೂ ಅಂದೇ ತಿಳಿದಿತ್ತು. 1791 ರಲ್ಲಿ ಅವನು ಕಲ್ಕತ್ತಾದಿಂದ ತನ್ನ ಮಿತ್ರನಿಗೆ ಜಯವಾಗಲಿ ಎಂದು ಶುಭಾ ಶಯವನ್ನೂ ಕಳುಹಿಸಿದನು. ಈ ವ್ಯಾಜ್ಯವನ್ನು ಕುರಿತು Lord Mecaulay ಇವನು ಈ ರೀತಿಯಾಗಿ ಹೇಳಿದನು :—

"Warren Hastings—looked like a great man and not like a bad man—The orator (Edmund Burke) made no attempt to control his passion, and his want of moderation weakened the force of his arguments—"

ಹೇಗೂ ಕೊನೆಗೆ Warren Hastings ಇವನು ನಿರಪರಾಧಿಯೆಂದು ತೀರ್ಮಾ ನಿಸಿ ಅವನಿಗೆ ವರ್ಷಕ್ಕೆ 4000 ಪೌಂಡುಗಳಂತೆ ನಿವೃತ್ತಿ ವೇತನವನ್ನು ಕೊಟ್ಟು ಖುಲಾಸುಮಾಡಿದರು. ಅವನು ಒರ್ವ ಶ್ರದ್ಧಾವಂತ ಆಡಳಿತಗಾರನೆಂಬುದನ್ನು ಅವನ ರಾಜಕೀಯ ವಿರೋಧಿಗಳೇ ಶ್ಲಾಘಿಸಿದ್ದಾರೆ. P. E. Roberts ಇವನ ಹೇಳಿಕೆ ಯಂತೆ :—

"No one ever doubted his (Warran Hastings') transcendant ability, no one doubts his noble patriotism, his laborious, never-ceasing efforts to preserve the charge committed to him in the East and his wonderful patience under adversity—Morally he possessed magnificent qualities.'

1813 ರಲ್ಲಿ House of Commons ಸಭೆಯು ಅವನನ್ನು ಒಂದು ಸಮಸ್ಯೆಯನ್ನು ಕುರಿತು ಕೇಳಲು ಕರೆಸಿದಾಗ ಆ ಸಭಾ ಸದಸ್ಯರು ಬಹು ಆದರದಿಂದ ಅವನನ್ನು ಸ್ವಾಗತಿಸಿದ್ದಲ್ಲದೆ, ಅವನು ಅಲ್ಲಿಂದ ಹೋಗುವಾಗ, " the members rose as by a simultaneous impulse, and stood bareheaded until he passed out of sight. A ccmplement of exceptional character—", ಎಂದು ಹೇಳಲಾಗಿತ್ತು.

W. Hastings ಇವನು ಆಗಸ್ಟ 1818 ರಲ್ಲಿ ಕಾಲವಾದನು. ಕಡೇ ದಿನ ಗಳ ವರೆಗೂ ಭಾರತೀಯ ಋಷಿಗಳಂತೆ ಜೀವನವನ್ನು ನಡೆಸಿದ್ದನು. ಸೂರ್ಯೋದ ಯದ ವೇಳೆಗೆ ಎದ್ದು ತಣ್ಣೀರು ಸ್ನಾನಮಾಡಿ, ಗೀತೆಯನ್ನು ಪಠಿಸಿ, ತನ್ನ 600 ಏಕ್ರೆಗಳ ವಿಸ್ತಾರದ ಹೊಲದಲ್ಲಿ ತಿರುಗಾಡುತ್ತಾ ಕಾಲವನ್ನು ಕಳೆಯುತ್ತಿದ್ದನು.

೧೧. ಪಾಶ್ಚಾತ್ಯ ಪ್ರಯಾಣಿಕರ ಬರಹಗಳು :—

೧೮ನೇ ಶತಮಾನದ ಅಂತ್ಯದಲ್ಲಿ ಈ ದೇಶದ ಐತಿಹಾಸಿಕ ಮತ್ತು ಸಾಹಿತ್ಯ ಗ್ರಂಥಗಳ ಸಂಶೋಧನೆಗೆ ಪಾಶ್ಚಾತ್ಯ ವಿದ್ವಾಂಸರು ಬ್ರಿಟಿಷ್ ಸರಕಾರದ ಆಶ್ರಯದಲ್ಲಿ

ಪ್ರಾರಂಭಿಸಿದಾಗ ಅವರಿಗೆ ಈ ದೇಶದ ಪರಿಚಯವನ್ನು ಮಾಡಿಕೊಡಲು ಅವರಿಗಿಂತಲೂ ಎಷ್ಟೋ ಹಿಂದೆ ಈ ದೇಶಕ್ಕೆ ಬಂದ ಐರೋಪ್ಯಾ ಮತ್ತು ಮಧ್ಯಪ್ರಾಚ್ಯ ದೇಶಗಳ ಪ್ರಯಾಣಿಕರು ಬರೆದಿಟ್ಟ ಗ್ರಂಥಗಳೇ ಆಧಾರವಾಗಿದ್ದುವು. ಸುಮಾರು ೧೪ನೇ ಶತಮಾನದಿಂದಿತ್ತಲಾಗಿ ಪಶ್ಚಿಮ ದೇಶಗಳಿಂದ ಬರುತಿದ್ದ ವ್ಯಾಪಾರಿಗಳೂ ಪ್ರಯಾಣಿಕರೂ ಕ್ರೈಸ್ತ ಮತೋಪದೇಶಕರೂ ತಮ್ಮ ಅನುಭವಗಳನ್ನು ಕುರಿತಾಗಿ ಉತ್ತಮ ಗ್ರಂಥಗಳನ್ನು ಬರೆದು ಅನಂತರ ಬಂದ ಪಾಶ್ಚಾತ್ಯರಿಗೆ ತಕ್ಕ ಹಿನ್ನೆಲೆಯನ್ನು ಕಲ್ಪಿಸಿದ್ದಾರೆ.

ಇಂಥಾ ಪ್ರವಾಸಿಗರ ಪೈಕಿ Ferishta, Ibn Batuta, Abdul Razaaq, Fernao Nuniz, Caesor Fredric, Nicolo de Conti, Leonard Peas ಮೊದಲಾದವರು ಅಂದಿನ ಮೊಗಲ್ ಸಾಮ್ರಾಜ್ಯ, ಬಾಹ್ಮನೀ ರಾಜ್ಯ, ವಿಜಯನಗರ, ಇಕ್ಕೇರಿ, ಹೀಗೆ ಹಲವೆಡೆಗಳಲ್ಲಿ ಸುತ್ತಿ ಒಂದು ಅನ್ವೇಷಣೆಯನ್ನೇ ನಡೆಸಿ ಉತ್ತಮ ವರದಿಗಳನ್ನು ಬರೆದಿದ್ದಾರೆ. ಇವರ ಈ ಗ್ರಂಥ ಗಳು ಪರ್ಷಿಯನ್, ಅರಬೀ, ಇಟಾಲಿಯನ್, ಪೋರ್ಚುಗಲ್, ಡಚ್ಚ್ ಇತ್ಯಾದಿ ಭಾಷೆಗಳಲ್ಲೂ ಇವೆ. ಅವುಗಳಲ್ಲಿ ಹಲವು ಇಂಗ್ಲಿಷ್‌ಗೂ ಭಾಷಾಂತರವಾಗಿವೆ. ಈ ವರ್ಗದ ಪ್ರವಾಸಿಗರ ಪೈಕಿ John de Mandelso ಇವನ ಪ್ರವಾಸ ಗ್ರಂಥವೂ ವಿಚಾರ ಪೂರ್ಣವಾಗಿದೆ.

ಕ್ರಿ. ಶ. ೧೬ನೇ ಶತಮಾನದ ಅಂತ್ಯದಲ್ಲಿ ಮತ್ತು ೧೭ನೇ ಶತಮಾನದ ಪ್ರಾರಂಭದಲ್ಲಿ ಅಕ್ಬರ್ ಮತ್ತು ಜಹಂಗೀರ್ ಚಕ್ರವರ್ತಿಗಳ ಕಾಲದಲ್ಲಿ ಭಾರತಕ್ಕೆ ಬಂದ ಬ್ರಿಟಿಷರು ವ್ಯಾಪಾರದ ಕುಂಪೆನಿಯನ್ನು ಸ್ಥಾಪಿಸುವ ಸಲುವಾಗಿ ಮತ್ತು ಪ್ರಯಾಣಿಕರಾಗಿ ಇಲ್ಲಿಗೆ ಬಂದರು. ಇವರಲ್ಲಿ ಮೊದಲಾಗಿ ಬಂದ ಏಳು ಜನರೂ ತಾವು ಈ ದೇಶದಲ್ಲಿ ಕಂಡ ವಿಚಾರಗಳ ಬಗೆಯಾಗಿ ವಿಸ್ತಾರವಾಗಿ ಬರೆದಿದ್ದಾರೆ. ಕ್ರಿ. ಶ. 1583 ರಿಂದ 1591 ರ ವರೆಗೆ Ralph Fitch ಇವನೂ, ಕ್ರಿ. ಶ. 1599 ರಿಂದ 1606 ರ ವರೆಗೆ John Mildenhall ಇವನೂ, ಅಕ್ಬರನ ಕಾಲದಲ್ಲಿ ಈ ದೇಶ ದಲ್ಲಿ ಸುತ್ತಾಡಿದರು. ಅನಂತರ William Hawkins (1608-13), William Laryat (1608-11), Nicholars Withington (1612-16), Thomas Coryat (1612-17) ಮತ್ತು Edward Terry (1616-19) ಇವರು ಪ್ರಾರಂಭದಲ್ಲಿ ಈ ದೇಶದಲ್ಲಿ ಇದ್ದ ಬ್ರಿಟಿಷರಾಗಿದ್ದರು. ಇವರನ್ನನುಸರಿಸಿ Sir Thomas Roe ಇವನು ಬಂದನು. ಅದೇ ರೀತಿ John Fryers ಇವನು "Travels in India", ಎಂಬೀ ಬಗೆಯ ಗ್ರಂಥವನ್ನು ಬರೆದನು. ಈ ಎಲ್ಲಾ ಜನರ ವರದಿಗಳೂ ಅನಂತರ ಬಂದ ವಿದ್ವಾಂಸರಿಗೆ ಈ ದೇಶದ ವಿಚಾರವಾಗಿ ತಕ್ಕ ವಿವರಣೆಯನ್ನೀಯಲು ಸಹಾಯಕವಾದುವು.

**೧೨. ಸಮಗ್ರ ಭಾರತದ ಇತಿಹಾಸ ಗ್ರಂಥ ಇತ್ತೇ? :—**

ಮೊಗಲರ ರಾಜ್ಯವೇ ಇರಲಿ, ಮರಾಠರೇ ಇರಲಿ, ನೈಜಾಮನೇ ಇರಲಿ, ಇತರ

ನೂರಾರು ನವಾಬರೂ ರಾಜರೂ ಇರಲಿ; ಬ್ರಿಟಿಷರು ಮಾತ್ರ ಕ್ರಿ. ಶ. 1600 ರಿಂದ 1750 ರ ವರೆಗೆ–150 ವರ್ಷಗಳ ಕಾಲ ಈ ದೇಶದಲ್ಲಿ ಮಾಡಬೇಕಾದ್ದನ್ನೆಲ್ಲಾ ಮಾಡಲಿಕ್ಕೆ ತಕ್ಕ ತಳಹದಿಯನ್ನೇ ಹಾಕಿದರು; ಆ ತಳಹದಿಯ ಮೇಲೆ ಒಂದು ಸುಭದ್ರವಾದ ಸಾಮ್ರಾಜ್ಯವನ್ನೇ ಕಟ್ಟಿದರು.

ಕ್ರಿ. ಶ. ೧೮ನೇ ಶತಮಾನದ ಅಂತ್ಯದೊಳಗಾಗಿಯೇ ಬ್ರಿಟಿಷ್ ಸರಿಕಾರವು ಸಮಗ್ರ ಭಾರತದ ಇತಿಹಾಸವನ್ನು ಬಹು ಶ್ರೇಷ್ಠ ಪಾಶ್ಚಾತ್ಯ ವಿದ್ವಾಂಸರಿಂದ ಇಂಗ್ಲಿಷ್ ಭಾಷೆಯಲ್ಲಿ ಬರೆಯಿಸಿ ಅವೆಲ್ಲವನ್ನೂ ಇಂಗ್ಲೆಂಡಿನಲ್ಲಿಯೇ ಪ್ರಕಟಿಸಿದರು. ಆ ವರೆಗೂ ಇಡೀ ಹಿಂದೂದೇಶದ ಚರಿತ್ರೆಯನ್ನು ಪ್ರತಿಪಾದಿಸುವಂಥಾ ಒಂದೇ ಒಂದು ಗ್ರಂಥವಿರ ಲಿಲ್ಲ. ಮೊಗಲರು ತಮ್ಮ ಕಾಲದ ತಮ್ಮ ಪ್ರಭಾವ ಮತ್ತು ಸಾಮರ್ಥ್ಯಗಳನ್ನು ಘೋಷಿಸುವ ಮತ್ತು ತಮ್ಮ ವಂಶಚರಿತ್ರೆಯನ್ನು ಪ್ರತಿಪಾದಿಸುವ, ತಾವು ನಡೆಸಿದ ಯುದ್ಧಗಳು ಇತ್ಯಾದಿಗಳನ್ನು ಹೇಳುವ ಗ್ರಂಥಗಳನ್ನು ಪರ್ಷಿಯನ್ ಭಾಷೆಯಲ್ಲಿ ಬರೆಯಿಸಿದರು. ಅಂತೆಯೇ ನೂರಾರು ರಾಜರು ಮತ್ತು ನವಾಬರು ತಮ್ಮ ಪುಟ್ಟ ರಾಜ್ಯಗಳನ್ನು ಅವರವರ ಒಂದು ದೇಶವೆಂದೇ ಹೇಳಿಕೊಂಡು ಸ್ಥಳೀಯ ಚರಿತ್ರೆ ಗಳನ್ನು ಬರೆಯಿಸಿದರು.

ಬಹು ದೊಡ್ಡ ಚರಿತ್ರಕರ್ತನೆಂದು ಹೇಳಲ್ಪಟ್ಟ ಕಾಶ್ಮೀರದ ಕಲ್ಹಾಣನ "ರಾಜ ತರಂಗಿಣಿ"ಯೆಂಬ ಕ್ರಿ. ಶ. 1148 ರ ಇತಿಹಾಸ ಗ್ರಂಥವು ಸಹ ಬರೇ ಕಾಶ್ಮೀರ ಮತ್ತು ಅದರ ಸುತ್ತುಮುತ್ತಲ ರಾಜ್ಯಗಳ ಚರಿತ್ರೆಯನ್ನು ಮಾತ್ರ ಹೇಳಿದೆ. ಹೀಗಾಗಿ ಇಡೀ ಭಾರತವು ಒಂದೇ ದೇಶವೆಂಬ ಮನೋಧರ್ಮವು ಪೌರಾಣಿಕ ಯುಗದಲ್ಲಿ ಇದ್ದು, ಈ ದೇಶವು ಜಂಬೂದ್ವೀಪವೆಂದು ಪ್ರಸಿದ್ಧಿಯಾಗಿತ್ತಾದರೂ ಅದೇ ಅಭಿಪ್ರಾಯಕ್ಕೆ ದ್ಯೋತಕವಾಗುವಂಥಾ ಭಾರತದ ಇತಿಹಾಸ ಗ್ರಂಥಗಳು ಮಾತ್ರ ಕ್ರಿ. ಶ. ೧೮ನೇ ಶತಮಾನದವರೆಗೂ ಇರಲಿಲ್ಲ. ಆ ಕಾರಣದಿಂದ ಇಂದಿನ ದೇಶೀಯ ಇತಿಹಾಸಕಾರನಾದ ಡಾ| ಮಜುಂದಾರನು ಈ ರೀತಿಯಾಗಿ ಪ್ರಶ್ನಿಸುತ್ತಾನೆ :—

"Why did the Hindu intellect was capable of writing the 'Rajatarangini' shrink from similar attempts to write history of India as a whole ?"

ಇದಕ್ಕೆ ಉತ್ತರವನ್ನು ಹೇಳಲು ಬಹು ಪ್ರಯಾಸವೇನೂ ಇಲ್ಲ. ಆಗ ಈ ಹಿಂದೂ ದೇಶದಲ್ಲಿ ಸಹಸ್ರಾರು ರಾಜ್ಯಗಳು, ಮತ್ತು ರಾಜರು ಇದ್ದರು. ಈ ಎಲ್ಲಾ ರಾಜ್ಯ ಗಳೂ ಒಂದೊಂದು ದೇಶವೆಂಬ ಭಾವನೆಯೂ ಇದ್ದಿತು, ಬೇರೆ ಬೇರೆ ಆಡಳಿತ, ಬೇರೆ ಬೇರೆ ಸೈನ್ಯ, ಬೇರೆ ಬೇರೆ ಹಣಕಾಸು ವ್ಯವಹಾರ, ಪ್ರತ್ಯೇಕ ನಾಣ್ಯಗಳು ಇತ್ಯಾದಿ ಯಾಗಿ ಇದ್ದಿತು. ಅಶೋಕನ ಚಕ್ರಾಧಿಪತ್ಯ, ಗುಪ್ತ ಚಕ್ರಾಧಿಪತ್ಯ, ಹರ್ಷನ ಚಕ್ರಾಧಿ ಪತ್ಯ, ಮೊಗಲರ ಚಕ್ರಾಧಿಪತ್ಯ, ವಿಜಯನಗರ ಮತ್ತು ಮರಾಠ ಚಕ್ರಾಧಿಪತ್ಯಗಳೆ ಲ್ಲವೂ ಹಿಂದೂದೇಶದ ಒಳಗೆಯೇ ಬೇರೆ ಬೇರೆ ಕಾಲದಲ್ಲಿ ಇದ್ದುವು. ಅವುಗಳ ಒಳಗೂ ನೂರಾರು ಪುಟ್ಟ ರಾಜರು, ನವಾಬರು, ಮೊದಲಾದವರಿಂದ ಈ ದೇಶವು ಛಿದ್ರಛಿದ್ರ ವಾಗಿ ಹೋಗಿತ್ತು. ಹೀಗಿದ್ದ ಪರಿಸ್ಥಿತಿಯಲ್ಲಿ ಸಮಗ್ರ ಭಾರತವನ್ನು ರಾಜಕೀಯ

ಮತ್ತು ಫ್ರೆಂಚ್ ಭಾಷೆಗಳಿಗೂ ಇಳಿಸಲ್ಪಟ್ಟುವು.

ಕಳೆದ ಶತಮಾನದ ಮಧ್ಯಕಾಲದಲ್ಲಿ Thornton ಇವನ History of India ಇದು 2900 ಪುಟಗಳ ಗ್ರಂಥವಾಗಿ ಆರು ಕಾಂಡಗಳಾಗಿ ಪ್ರಕಟವಾಯಿತು. Cassell ಇವನ ಹಿಂದೂಸ್ಥಾನದ ಚರಿತ್ರೆಯು 2000 folio ಪುಟಗಳಷ್ಟು ದೊಡ್ಡದಾಯಿತು ! J. T. Wheeler ಇವನ Early Records of British India ಮತ್ತು History of India ಗ್ರಂಥಗಳೂ ನಾಲ್ಕಾರು ಕಾಂಡಗಳಾಗಿ ಪ್ರಕಟವಾದುವು. ಇದೇ ರೀತಿ H. Beveridge, Vincent Smith, Robert Taylor ಮೊದಲಾದವರ ಉದ್ದಾಮ ಚರಿತ್ರೆ ಗ್ರಂಥಗಳೆಲ್ಲಾ 1870 ರ ಒಳಗಾಗಿ ಪ್ರಕಟವಾಗಿ ಹಲವು ಬಾರಿ ಪುನರ್ಮುದ್ರಣವಾದುವು. ಇವೆಲ್ಲಾ ಬೃಹದ್ಭಾರತದ ಪ್ರಾಚೀನ ವೈಭವ, ಸಾಂಸ್ಕೃತಿಕ ಸಂಪತ್ತು ಮತ್ತು ರಾಜಕೀಯಪ್ರತಿಷ್ಠೆಗಳನ್ನು ಆಧಾರ ಪೂರ್ವಕವಾಗಿ ಪ್ರತಿಪಾದಿಸಲ್ಪಟ್ಟ ಉದ್ಗ್ರಂಥಗಳಾಗಿದ್ದುವಲ್ಲದೆ ಇಡೀ ಭಾರತವು ಒಂದೇ ಒಂದು ವಿಶಾಲವಾದ ದೇಶವೆಂಬುದನ್ನು ಮೇಲಿಂದ ಮೇಲೆ ಸಾರಿದುವು.

## 15. ಕೆಲವು ಪ್ರಾಂತಾವಾರು ಚರಿತ್ರೆ ಗ್ರಂಥಗಳು :—

ಸುಮಾರು ನೂರೈವತ್ತು ವರ್ಷಗಳಿಗೆ ಹಿಂದೆ ಭಾರತದ ಚರಿತ್ರೆಯನ್ನು ಬರೆಯುವುದಕ್ಕೂ ಈಗಿನ ಕಾಲದಲ್ಲಿ ಬರೆಯುವುದಕ್ಕೂ ತುಂಬಾ ವ್ಯತ್ಯಾಸವಿದೆ. ಇತ್ತೀಚೆಗೆ ಬರೆಯಲ್ಪಟ್ಟ ಹಲವು ದೇಶೀಯ ವಿದ್ವಾಂಸರ ಚರಿತ್ರೆ ಪುಸ್ತಕಗಳು ಕೇವಲ ಆಂಗ್ಲೇಯ ಚರಿತ್ರಾಕಾರರು ಬರೆದುದರ ನಕಲು ಮಾತ್ರವೋ ಎಂದರೆ ಆಶ್ಚರ್ಯಪಡಬೇಕಾದ್ದಿಲ್ಲ. ಆ ಕಾಲದಲ್ಲಿ ಆಧಾರಗಳನ್ನು ಅವರು ನೂರಾರು ಸಹಸ್ರಾರು ಶಾಸನಗಳು, ತಾಳೇ ಓಲೆಗಳು, ಅರಬೀ, ಫಾರ್ಸೀ, ಸಂಸ್ಕೃತ ಮತ್ತು ಪಾಲೀ ಗ್ರಂಥಗಳು-ಇವನ್ನೆಲ್ಲಾ ಶೋಧಿಸಿ ಬರೆದು ಭಾರತದ ಚರಿತ್ರೆಗೆ ಒಂದು ರೂಪನ್ನು ಕೊಟ್ಟರು. ಆದರೆ ಇತ್ತೀಚೆಗೆ ಬರೆದ ಹಲವು ದೇಶೀಯರ ಚರಿತ್ರೆ ಗ್ರಂಥಗಳಲ್ಲಿ ನಮ್ಮ ಭಾರತದ ಚರಿತ್ರೆಯ ಬಗ್ಗೆ ವಿಚಾರಾರ್ಹವಾದ ವಿಮರ್ಶೆಯಾಗಲೀ, ಪರಿಷ್ಕೃತ ಪ್ರಮಾಣಗಳಾಗಲೀ ಹೊಸ ದೃಷ್ಟಿಯಿಂದ ವಿವರಿಸಿದ್ದು ಕಂಡು ಬರುವುದಿಲ್ಲವೆಂದರೆ ಶೋಚನೀಯವೇ ಆಗಿದೆ. *

ಸಮಗ್ರ ಭಾರತದ ಚರಿತ್ರೆಗೆ ರೂಪುಕೊಟ್ಟ ಅಂದಿನ ಪಾಶ್ಚಾತ್ಯರಲ್ಲಿ ಇನ್ನೂ ಕೆಲವರು ಈ ದೇಶದ ಪ್ರಾಚೀನ ಇತಿಹಾಸವನ್ನು ಇನ್ನಷ್ಟು ವಿಸ್ತೃತವಾಗಿ ತಮ್ಮ ಪ್ರಾಂತಾವಾರು ಚರಿತ್ರೆಗಳಲ್ಲಿ ಪ್ರತಿಪಾದಿಸಿದರು. ಅವೆಲ್ಲಾ ಇಂದಿಗೂ ಬಹು ಪ್ರೌಢವಾದ ಗ್ರಂಥಗಳಾಗಿ ಇವೆ. ಅಷ್ಟೇ ಅಲ್ಲದೆ ಹಿಂದೂಸ್ಥಾನದ ಪ್ರತಿಯೊಂದು ಚರಿತ್ರಾರ್ಹ ಪ್ರಾಂತಗಳು, ಜಿಲ್ಲೆಗಳು ಮತ್ತು ನಾಡುಗಳ ಕುರಿತಾಗಿ ಅಂದೆಯೆ ಬರೆದು ಆ

* ಇತ್ತೀಚೆಗೆ Rewriting of Indian History ಎಂಬುದಾಗಿ ಒಂದು ಯೋಜನೆಯನ್ನು ಕೈಗೊಂಡು ಕೆಲವರು ದುಡಿಯುತ್ತಿದ್ದಾರೆಂಬುದು ಪ್ರಶಂಸಾರ್ಹವಾದುದಾಗಿದೆ. ಇವರು ಸಾಕಷ್ಟು ಹೊಸ ವಿಚಾರಗಳನ್ನು ಮುಹಮ್ಮದೀಯರ ಕಾಲದ ಚರಿತ್ರೆಯನ್ನು ಕುರಿತು ಈಗಾಗಲೇ ಕೊಟ್ಟಿದ್ದಾರೆ.

ಅಸಂಖ್ಯಾತ ಗ್ರಂಥಗಳನ್ನು ಮುಂದಿನ ಪೀಳಿಗೆಗೆ ದಿಗ್ದರ್ಶನಾರ್ಥವಾಗಿ ಬಿಟ್ಟು ಹೋಗಿ ಹ್ದಾರೆ.

S. C. Hill ಇವನ Indian Records Series ಇದರ ಮೂರು ಕಾಂಡಗಳೂ, Robert Orme ಇವನ British Nation in Hindustan ಎಂಬ 1200 Demy ಪುಟಗಳ ಗ್ರಂಥವೂ ಬಂಗಾಳ ಪ್ರಾಂತವನ್ನು ಕುರಿತು ಪ್ರಸ್ತಾಪಿಸಿವೆ. Col James Tod ಇವನು 1829ರಲ್ಲಿ ಬರೆದ Annals and Antiquities of Rajastan ಇದಕ್ಕೆ ಸಮನಾದ ಪ್ರಾಂತೀಯ ಐತಿಹಾಸಕ ಗ್ರಂಥವು ಬೇರೊಂದು ಇಲ್ಲವೆಂದು ಹೇಳಲಾಗಿದೆ ರಾಜಾಸ್ಥಾನದ ವೀರ ಸೇನಾನಿಗಳ ವೀರ ನಾರಿಯರ ಸಾಹಸ ಜೀವನವನ್ನು ಹೃದಯಂಗಮಯವಾಗಿ ವರ್ಣಿಸಲ್ಪಟ್ಟ ಈ ಗ್ರಂಥವು Sir Walter Scott ಇವನಂಥಾ ಪ್ರಖ್ಯಾತ ಗ್ರಂಥಕರ್ತನ ಪ್ರಶಂಸೆಗೂ ಪ್ರಾಪ್ತವಾಯಿತು ಇದೇ ವರ್ಗಕ್ಕೆ ಸೇರುವ ಇನ್ನೊಂದು ಪ್ರಾಂತೀಯ ಚರಿತ್ರಾ ಗ್ರಂಥವು ವಿಜಯನಗರ ಸಾಮ್ರಾಜ್ಯದ ದುರಂತ ಕಥೆಯನ್ನು ಹೇಳುವ Robert Sewell ಇವನು ಬರೆದ The Forgotten Empire ಇದಾಗಿದೆ.

Col. Mark Wilks ಇವನ Sketches of South Indian History ಎಂಬ ಗ್ರಂಥವು 1807 ರಲ್ಲೂ, History of Mysore ಇದು 1810 ರಲ್ಲೂ ಪ್ರಕಟವಾದುವು. ಈ ಪುಸ್ತಕಗಳ ಇತರ ಕಾಂಡಗಳು 1817 ರಲ್ಲಿ ಮತ್ತು ಅನಂತರವೂ ಪುನರ್ಮುದ್ರಣವಾದುವು. ಇವುಗಳನ್ನು ಕುರಿತು ವಿಶದವಾಗಿ ಮುಂದಕ್ಕೆ ಪ್ರಸ್ತಾಪಿಸಲಾಗುವುದು. Grant Duff ಇವನ A History of Mahrattas ಎಂಬ ಎರಡು ಕಾಂಡಗಳ ಇತಿಹಾಸ ಗ್ರಂಥವು 1825 ರಲ್ಲಿ ಪ್ರಕಟವಾಯಿತು. ಮಹಾರಾಷ್ಟ್ರ ಮತ್ತು ಪಶ್ಚಿಮ ಹಿಂದೂಸ್ಥಾನದ ಚರಿತ್ರೆಗೆ ಇದು ಪ್ರಬಲವಾದ ಆಧಾರಗ್ರಂಥವಾಗಿದೆ. ಈ ಹಲವು ಪುಸ್ತಕಗಳೂ ಆಕಾಲದಲ್ಲಿ ಇಂಗ್ಲೆಂಡಿನಲ್ಲಿಯೇ ಪ್ರಕಟವಾದುವು.

**೧೬. ಭಾರತದ ಭೌಗೋಲಿಕ ಪ್ರಮಾಣವನ್ನಳೆದ 'ತಿವಿಕ್ರಮ'ರು :—**

ಕ್ರಿ. ಶ. ೧೮ನೇ ಶತಮಾನದಿಂದಲೇ ಪಾಶ್ಚಾತ್ಯರ ಸೇವಾಕ್ಷೇತ್ರವು ಈ ದೇಶದಲ್ಲಿ ಇನ್ನೂ ವ್ಯಾಪಕವಾಗಿದ್ದಿತು. ಈ ದೇಶದ ಭೌಗೋಲೀಕ ವಿವರವನ್ನರಿಯಲು ಮತ್ತು ಆಸೇತು ಹಿಮಾಚಲ ಪರ್ಯಂತವಾಗಿ ಈ ದೇಶವನ್ನು ಅಳೆಯಲು 1767 ರಷ್ಟು ಹಿಂದೆಯೇ Robert Clive ಇವನು ಪೈಮಾಯಷಿಕ ಇಲಾಖೆಯನ್ನು ಸ್ಥಾಪಿಸಿದನು. ಅಲ್ಲಿಂದ ನಂತರ ಇಡೀ ದೇಶದ Geodatic ಮತ್ತು Topographical Survey ಇದನ್ನು ಪಾಶ್ಚಾತ್ಯ ತಜ್ಞರು ಕೈಗೊಂಡು ಪ್ರತಿಯೊಂದು ಪ್ರಾಂತ, ಜಿಲ್ಲೆ, ಗ್ರಾಮ, ಬೆಟ್ಟ, ನದಿ ಇತ್ಯಾದಿಗಳ ಉದ್ದಗಲ ಪ್ರಮಾಣಗಳನ್ನು ನಿಷ್ಠೆಯಿಂದ ಕಂಡು ಹಿಡಿಯಲು ತೊಡಗಿದರು.

ಚೀನಾದೇಶದಲ್ಲಿ ಇದ್ದ Jesuit ಧರ್ಮಪ್ರಚಾರಕರು ಟಿಬೇಟ್ ಮತ್ತು ಹಿಮಾಲಯ ಪ್ರಾಂತಗಳ ಭೌಗೋಲಿಕ ವಿವರವನ್ನು ಕ್ರಿ. ಶ. ೧೮ನೇ ಶತಮಾನದ

ಪ್ರಾರಂಭದಲ್ಲಿಯೇ ಲೋಕಕ್ಕೆ ತಿಳಿಸಿದ್ದರು. ಅದೇ ಕಾಲಕ್ಕೆ ಸ್ಪೇಯಿನ್ ದೇಶದ Acquetic de Perron ಇವನು ಇಡೀ ಹಿಂದೂಸ್ಥಾನದ ಭೂಪಟವನ್ನು ಬಹು ಶಾಸ್ತ್ರೀಯವಾಗಿ ತಯಾರಿಸಿದ್ದನು. ಕ್ರಿ. ಶ. 1790 ರಲ್ಲಿ ಕುಂಪೆನಿ ಸರಕಾರದ Surveyor General James Rennel ಇವನು Map of Hindustan ಎಂಬುದಾಗಿ ಈ ದೇಶದ ನಕ್ಷೆಗಳನ್ನೊಳಗೊಂಡ ಭೂಗೋಳ ಶಾಸ್ತ್ರಗ್ರಂಥವು ಬೃಹದಾಕಾರದ ಎರಡು ಕಾಂಡಗಳಾಗಿ ಪ್ರಕಟವಾಯಿತು. Robert Orme ಇವನೂ 1800 ಒಳಗಾಗಿ ಈ ದೇಶದ ಅಂದಿನ ಹಲವು ಪ್ರಾಂತಾ ಗಡಿಗಳನ್ನು ನಮೂದಿಸಿ ಹಲವು ಭೂಪಟಗಳಿಂದೊಡಗೂಡಿದ ಪುಸ್ತಕವನ್ನು ತಯಾರಿಸಿದನು.

ಕ್ರಿ. ಶ. 1802 ರಲ್ಲಿ ನೇಪಾಳದಲ್ಲಿದ್ದ Lt. Crawford ಇವನು ನೇಪಾಳ, ಹಿಮಾಲಯ ಪ್ರದೇಶ ಮತ್ತು ಗಂಗಾನದೀ ಪ್ರದೇಶಗಳನ್ನು ಅಳೆದನು. Sir A. Cunningham ಮತ್ತು Dr. J G. Hunter ಇವರು Survey of India ಇಲಾಖೆಯ ಅಧಿಕಾರಿಗಳಾಗಿ ಈ ದೇಶದ ಪ್ರತಿಯೊಂದು ಪ್ರಾಂತ ಮತ್ತು ಜಿಲ್ಲೆಗಳನ್ನು ಸಾಮೂಲಾಗ್ರವಾಗಿ ಅಳೆಯಿಸಿದರು. Lord W. Lambton ಇವನು ಕಳೆದ ಶತಮಾನದ ಪ್ರಾರಂಭದಲ್ಲಿಯೇ "Great Trigonometrical Survey" ಎಂಬ ಇಲಾಖೆಯನ್ನು ಸ್ಥಾಪಿಸಿದ್ದು ಅದರ ಮೂಲಕವಾಗಿ ಇನ್ನೂ ಪರಿಷ್ಕೃತ ರೀತಿಯಲ್ಲಿ ಈ ದೇಶದ ಭೂಭಾಗವನ್ನೆಲ್ಲಾ ಅಳೆಯಲಾಯಿತು.

1875 ರ ಒಳಗಾಗಿ ಹಲವು ಭಾರತ ಭೂಗೋಳ ವಿವರಣೆಗಳನ್ನೊಳಗೊಂಡ ಗ್ರಂಥಗಳು ಪ್ರಕಟವಾದುವು. ಅದರಲ್ಲಿ 1858 ರ ವೇಳೆಗೆ J. Duncan ಇವನು ಬರೆದ ಗ್ರಂಥವು ಪರಿಪೂರ್ಣವಾದುದಾಗಿತ್ತು. ಹೀಗೆ Sir George Everest ಇವನು ಗೌರೀಶಂಕರ ಶಿಖರದ ಎತ್ತರವನ್ನು ಕಂಡುಹಿಡಿದು ಹಿಮಾಲಯವು ಪ್ರಪಂಚದಲ್ಲಿಯೇ ಅತೀ ಉನ್ನತವಾದ ಪರ್ವತವೆಂದು ಸಾರುವವರೆಗೂ ನೂರಾರು ಪಾಶ್ಚಾತ್ಯ ಭೂಗೋಳ ಶಾಸ್ತ್ರಜ್ಞರು ಈ ದೇಶದಲ್ಲಿ ಆಧುನಿಕ 'ತ್ರಿವಿಕ್ರಮ'ರಂತೆ ಸಂಚರಿಸಿ ಇದರ ಉದ್ದಗಲಗಳನ್ನು ಅಳೆದಿದ್ದಾರೆ.

೧೭. ಹಿಂದೂ ಪುರಾಣಗಳ ಆಧಾರದಿಂದ ಪ್ರಪಂಚದ ಭೂವಿವರಣೆ :—

ಪ್ರಾಚೀನ ಕಾಲದ ಪೌರಾಣಿಕ ಗ್ರಂಥಗಳನ್ನು ಪಠಿಸಿ ಪಾರಂಗತನಾಗಿದ್ದ H. T. Colebrooke ಇವನು ಅಂದಿನ ಭೂಗೋಳ ಶಾಸ್ತ್ರಜ್ಞರಿಗೆ ದಿಗ್ದರ್ಶಕನಾದನು. ವಿಷ್ಣು ಪುರಾಣ ಮತ್ತು ಕಾಳಿದಾಸನ ಕಾವ್ಯಗಳ ಆಧಾರದ ಮೇಲೆ ಮತ್ತು H. T. Colebrooke ಇವನ ಸಲಹೆಯಂತೆ Major Wilford ಇವನು ಗಂಗಾ ಮತ್ತು ಸಿಂಧೂ ಕಣಿವೆಗಳನ್ನೂ ಹಿಮಾಲಯ ಪ್ರದೇಶಗಳನ್ನೂ ಸಂಶೋಧಿಸಿದನು. Lt. Webb ಮತ್ತು Moorecroft ಇವರಿರ್ವರೂ ಪುರಾಣಗಳ ಆಧಾರದ ಮೇಲೆಯೇ ಹಿಮಾಲಯ ಕಣಿವೆಗಳನ್ನೂ, ವಾಯುವ್ಯಪ್ರಾಂತದಿಂದ ಬರ್ಮದ ವರೆಗಿನ ಭೂಭಾಗವನ್ನೆಲ್ಲಾ ಅಳೆದು ಈ ದೇಶದ ಪರಿಚಯವನ್ನು ಇನ್ನಷ್ಟು ಸ್ಪಷ್ಟವಾಗಿ

ಮಾಡಿಕೊಟ್ಟರು.

ಗ್ರೀಕ್ ಭೂಗೋಳ ಶಾಸ್ತ್ರಜ್ಞನಾದ Ptolemy ಇವನು ಏಷ್ಯಾಖಂಡದ ಮತ್ತು ಭೂಮಧ್ಯ ಪ್ರದೇಶಗಳನ್ನು ಕುರಿತು ಹೇಳಿದಾಗ ಹಿಂದೂಸ್ಥಾನದ ವಿಚಾರವಾಗಿ ಕೂಲಂಕುಷವಾಗಿ ಪ್ರಸ್ತಾಪಿಸಿದ್ದಾನೆ. ಕಾವೇರಿ ನದಿಯಿಂದ ಹಿಡಿದು ಈ ದೇಶದ ಎಲ್ಲ ನದಿ, ಪರ್ವತ, ಪಟ್ಟಣಗಳೆಲ್ಲದರ ಹೆಸರನ್ನು ಕೊಟ್ಟುದು ಕಳೆದ ಶತಮಾನದ ಭೂಗೋಳ ಶಾಸ್ತ್ರಜ್ಞರಿಗೆ ತುಂಬಾ ಪ್ರಯೋಜನಕರವಾಯಿತು. ಅದೇ ರೀತಿ Rev. Julien ಇವನು ಹ್ಯೂವನ್ ತ್ಯಾಂಗನ ಪ್ರವಾಸ ಗ್ರಂಥವನ್ನು ಭಾಷಾಂತರಿಸಿ ಅದರ ಆಧಾರದ ಮೇಲೆ ಈ ದೇಶದ ಭೂಗೋಳ ವಿವರಣೆಯನ್ನು ಕೊಟ್ಟನು.

Prof. H. H. Wilson ಇವನು ವಿಷ್ಣು ಪುರಾಣ ಮತ್ತು ಬೈಭಿಷಾ ಪುರಾಣಗಳನ್ನು ಭಾಷಾಂತರಿಸಿದಾಗ ಅವು ಬರೇ ಪುರಾಣಗಳು ಮಾತ್ರವಲ್ಲ; ಭೂಗೋಳ ವಿವರಣೆಗಳೆಂದೂ ವಿದ್ವಾಂಸರು ತಿಳಿದರು. ಅದರಲ್ಲಿ ಭೂಮಿಯ ವಿಸ್ತಾರ, ಸಪ್ತದ್ವೀಪಗಳು, ಸಪ್ತ ಸಮುದ್ರಗಳು. ಮೇರುಪರ್ವತ, ಇಳಾವೃತ, ಜಂಬುದ್ವೀಪ, ನದಿಗಳು, ಸರೋವರಗಳು—ಹೀಗೆ ಮೊದಲ್ಗೊಂಡು ಹಲವು ವಿಚಾರ ಗಳು ಅದರಲ್ಲಿ ಹೆಸರು ಸಮೇತವಾಗಿ ವಿವರಿಸಲ್ಪಟ್ಟವೆ.

ಮುಂದುವರಿಯುತ್ತಾ, ಭಾರತವರ್ಷ, ಅದರ ಒಂಭತ್ತು ವಿಭಾಗಗಳು. ಬೆಟ್ಟ ಗಳು, ಪಾಲಾಕ್ಷ, ಕುಶ, ಕೌಂಚ, ಶಕ, ಪುಷ್ಕರ, ಅತಳ ವಿತಳ ಪಾತಾಳಲೋಕಗಳು. ಭೂಲೋಕ, ಭುವರ್ಲೋಕ, ಸತ್ಯಲೋಕಾದಿ ಲೋಕಗಳು. ಸೂರ್ಯ, ಚಂದ್ರ, ಗ್ರಹಗಳು, ದಿನ ಮತ್ತು ರಾತ್ರಿ ಯುಗಗಳು—ಇತ್ಯಾದಿಗಳೆಲ್ಲಾ ಈ ಪುರಾಣಗಳಲ್ಲಿ ವರ್ಣಿತವಾಗಿವೆ. ಇದರ ಆಧಾರದಿಂದ ಏಷ್ಯಾ, ಆಫ್ರಿಕಾ, ಮತ್ತಿತರ ಖಂಡಗಳ ಭೌಗೋಲಿಕ ವಿವರಣೆಯನ್ನರಿಯಲು ಭೂಗೋಳಶಾಸ್ತ್ರಜ್ಞರು ಶ್ರಮಿಸಿ ಜಯಪ್ರದ ರಾಗಿದ್ದಾರೆ. Sir Francis Engineer ಇವನು ಇವುಗಳ ಆಧಾರದಿಂದ ಹಿಂದೂಸ್ಥಾನ ಮಾತ್ರವಲ್ಲದೆ ಇತರ ಭೂಖಂಡಗಳ ಬಗೆಯಾಗಿಯೂ ತುಂಬಾ ಪರಿಶೀಲನೆಯನ್ನು ನಡೆಸಿದ್ದಾನೆ. Lt. J. H. Speke ಇವನು ಹಿಂದೂ ಪುರಾಣ ಗಳ ಆಧಾರದಿಂದಲೇ ನೈಲ್‌ನದಿಯ ಉಗಮಸ್ಥಳ, ಕಿಲಿಮಂಜಾರೋ ಬೆಟ್ಟ, ಆಫ್ರಿಕಾದ ವಿಕ್ಟೋರಿಯಾ, ಥಾಣಾ ಮೊದಲಾದ ಸರೋವರಗಳನ್ನಲ್ಲದೆ ಕೆಂಪು ಸಮುದ್ರ ಪ್ರದೇಶಗಳನ್ನು ಕುರಿತಾದ ಭೌಗೋಲಿಕ ವರದಿಯನ್ನು ಬರೆದು Royal Geographical Society ಇದಕ್ಕೆ ಕಳುಹಿಸಿದ್ದು ಭೂಗೋಳಶಾಸ್ತ್ರಜ್ಞರಿಂದ ಅಂಗೀಕೃತವಾಗಿದೆ. 1875 ರಲ್ಲಿ Dr. W. Smith ಇವನು ರಚಿಸಿದ Atlas of Ancient Indian Geography ಇದು ಈ ದಿಶೆಯಲ್ಲಿ ಮತ್ತೊಂದು ಅಮೋಘವಾದ ಸಂಶೋಧನಾ ಗ್ರಂಥವಾಗಿದೆ.

ಈ ರೀತಿ ಸಾಹಿತ್ಯವೇ ಆಗಲಿ ಅಥವಾ ಇತಿಹಾಸ ಭೂಗೋಳ ಶಾಸ್ತ್ರಗಳೇ ಆಗಲಿ; ಪಾಶ್ಚಾತ್ಯರ ಶ್ರಮವು ಯಾವ ಕ್ಷೇತ್ರಕ್ಕೆ ಒಳಪಟ್ಟಿದ್ದರೂ ಅವೆಲ್ಲಾ ಕರ್ನಾಟಕ ವನ್ನೊಳಗೊಂಡ ಈ ದೇಶಕ್ಕೆ ಸಲ್ಲಿಸಲ್ಪಟ್ಟುದಾಗಿದೆ. ಅವರು ಕನ್ನಡನಾಡಿಗೆ ಸಲ್ಲಿಸಿದ ಸೇವೆಯನ್ನು ಪ್ರಸ್ತಾಪಿಸುವುದಕ್ಕೆ ಮೊದಲಾಗಿ ಅಖಿಲ ಭಾರತ ಮಟ್ಟದಲ್ಲಿ ದುಡಿದ

ಕೆಲವು ವಿಖ್ಯಾತರಾದ ಐರೋಪ್ಯ ವಿದ್ವಾಂಸರ ವಿಚಾರವಾಗಿ ಹೇಳುವುದು ಅಗತ್ಯವೆಂದೇ ತೋರುತ್ತದೆ.

---

೩

* ಕೆನೆವಾಲಗಡೆದು ನವನೀತಮಂ ತೆಗೆದು ಬಾ
ಯ್ಗಿನಿದಾಗಿ ಸವಿಯದದರೊಳಗೆ ಪುಳಿವಿಡಿದು ರಸ
ವನೆ ಕಿಡಿಸಿದೊಡೆ ಕರೆದ ಸುರಭಿಗಪ್ಪುದೆ ಕೊರತೆ ಕಾವ್ಯಮಂ ಕೇಳ್ದು ಮಥಿಸಿ
ಜನಿಸಿದ ಪದಾರ್ಥಮಂ ತಿಳಿದು ನೋಡದೆ ವಿನೂ
ತನ ಕವಿತೆಯೆಂದು ಕುಂದಿಟ್ಟು ಜರೆದೊಡೆ ಕೇಳ್ದ
ವನೊಳಾವುದೂಣೆಯಂ ಜಾಣರಿದನರಿದು ಮತ್ಸರವನುಳಿದಾಲಿಸುವುದು.

[ಲಕ್ಷ್ಮೀಶ.]

ಐರೋಪ್ಯ ಜನಾಂಗವನ್ನು ನಾಸ್ತಿಕರೆಂದು ಕೆಲವರು ಹೇಳುವುದುಂಟು. ಆದರೆ ಅವರು ಹಾಗಾಗಿದ್ದರೆ ದೇವರು ಎಲ್ಲಿದ್ದಾನೆಂದು ಹುಡುಕುತ್ತಾ ತಮ್ಮ ಧರ್ಮತತ್ವಗಳ ಕಹಳೆಗಳನ್ನು ಮೊಳಗಿಸುತ್ತಾ ಹಲವು ಶತಮಾನಗಳಿಗೆ ಹಿಂದೆ ಲೋಕವೆಲ್ಲಾ ಸುತ್ತಾ ಡುತ್ತಿರಲಿಲ್ಲ, ಬ್ರಿಟಿಷ್ ಜನಾಂಗವನ್ನು "a nation of shop-keepers" ಎಂದು ಅವರ ನೆರೆರಾಷ್ಟ್ರದವನಾದ Napoleon Bonaparte ಇವನು ತನ್ನ ರಾಜಕೀಯ ದ್ವೇಷದ ಕಿಡಿಯನ್ನು ಹಾರಿಸುತ್ತಾ ಹೇಳಿದನು. ಹಾಗಿದ್ದರೂ ಅವರಷ್ಟೇ ಅಥವಾ ಆ ಬ್ರಿಟಿಷರಿಗಿಂತಲೂ ಯಾವ ವಿಧದಲ್ಲೂ ಕಡಿಮೆಯಿಲ್ಲದ ವ್ಯಾಪಾರೀ ಮನೋಭಾವದವರನ್ನೂ ಬೇರೆಲ್ಲೂ ಕಂಡುದಿಲ್ಲ ಮತ್ತು ಕಾಣುವಂತೆಯೂ ಇಲ್ಲ.

ಉತ್ತಮ ಆಡಳಿತೆಯೊಂದಿಗೆ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಸಾಮಾನ್ಯ ಪರಿಶ್ರಮ ದಿಂದ ಪಾಶ್ಚಾತ್ಯರು ಈ ದೇಶದಲ್ಲಿ ಸಾಧಿಸಿದ್ದು ಯಾರನ್ನೂ ಬೆರಗುಗೊಳಿಸುವಂಥಾ ಗಿದೆ. ಅವರು ಈ ದೇಶದ ಪ್ರಾಚೀನ ಕಾವ್ಯ ಶಾಸ್ತ್ರಾದಿಗಳ, ಶಿಲಾಶಾಸನಗಳ ಮತ್ತು ಪ್ರಾಕ್ತನ ವಿಚಾರಗಳ ಬಗ್ಗೆ ದುಡಿದ ಮೂಲ ಸಂಶೋಧಕರು. ಅದೇನೋ ಎಂತೋ ಈ ಜನಾಂಗವು ಅಂದು ಈ ದೇಶದಲ್ಲಿ ಅಲೆದಾಡದೇ ಹೋಗಿದ್ದರೆ ನಮ್ಮ ದೇಶದ ಚರಿ ತ್ರೆಯು ಇನ್ನಾವ ರೀತಿಯಲ್ಲಿ ತೋರ್ಪಡಿಸಿಕೊಳ್ಳುತಿತ್ತೋ ಎಂಬುದಾಗಿ ಬಹು ಕಳ ವಳದಿಂದ ಊಹಿಸಬೇಕಾಗಿದೆ.

ಆ ವರೆಗೂ ಅಪ್ರಕಟಿತವಾದ ಈ ದೇಶದ ಸಹಸ್ರಾರು ಕಾವ್ಯೇತಿಹಾಸಗಳನ್ನು ಅವರು ಸಂಶೋಧಿಸಿ ವ್ಯಾಖ್ಯಾನಿಸಿದಾಗ ಈ ಧೀಮಂತ ಸಾಹಿತಿಗಳು ಅಲ್ಲೊಮ್ಮೆ ಇಲ್ಲೊಮ್ಮೆ ಎಡವಿರಬಹುದು. ಆದರೂ ಅಂಥ ಆಕ್ಷೇಪಣೀಯವಾದ ವಿಚಾರಗಳನ್ನು ಪುನಃ ಕೆದಕಿ ಅದರ ಮೂಲವನ್ನು ನೋಡಿದಾಗ ಅವರು ಅಂದದ್ದು ಸರಿಯೆಂದೇ ನಿಷ್ಪಕ್ಷಪಾತ ದೃಷ್ಟಿಯಿಂದ ಪರ್ಯಾಲೋಚಿಸಿದವರಿಗೆ ಕಂಡುಬಾರದಿರದು. "ಎಡೆ ವಾಯ್ದು ಬಂದ ತಪ್ಪಂ ಸಾಧಿಸದೆ ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆಯೊಡೆ ಯುವುದೇ" ಎಂಬುದಾಗಿ ರಾಘವಾಂಕನು ಹೇಳಿದ ಮಾತುಗಳು ಈ ದೃಷ್ಟಿಯಿಂದ ಸೂಕ್ತವಾಗಿವೆ.

**೨. ದೇಶದ ಎಲ್ಲಾ ಭಾಗಗಳ ಭೂಪಟಗಳನ್ನು ಬಿಡಿಸಿದರು :—**

ಕಳೆದ ಶತಮಾನದ ಪ್ರಾರಂಭದಲ್ಲಿ ಮತ್ತು ಅದಕ್ಕೂ ಹಿಂದೆ ಪಾಶ್ಚಾತ್ಯ ಭೌಗೋಲಿಕ ತಜ್ಞರು ಹಿಂದೂ ಪುರಾಣಗಳ ಆಧಾರದಿಂದ ಈ ದೇಶದ ಮತ್ತು ಇತರ ಭೂಖಂಡಗಳ ಕೆಲವು ಭಾಗಗಳನ್ನು ಸಂಶೋಧಿಸಿದುದರೊಡನೆ ಈ ದೇಶದ ಎಲ್ಲಾ ಭಾಗಗಳ ಉದ್ದಗಲಗಳನ್ನೂ ಅಳೆದು ಚಿತ್ರಿಸಿದರು. ಆದರೆ ಅಂಥ ಆಧಾರಗಳಾವುದೂ ಇಲ್ಲದೆ ಕ್ರಿ. ಶ. 1538 ರಷ್ಟು ಹಿಂದೆಯೇ ಗೋವಾದಲ್ಲಿದ್ದ Joao De Casto ಎಂಬ ಸ್ಪೈರ್ಯಿ ದೇಶದವನು ಹಿಂದೂಸ್ಥಾನದ ಭೂಪಟವೊಂದನ್ನು ಬಿಡಿಸಿದನು.

Ptolemy ಮತ್ತು Marco Polo ಇವರು ಪೂರ್ವಕಾಲದಲ್ಲಿ ಬಿಡಿಸಿದ್ದ ರೇಖಾಪಟಗಳನ್ನನುಸರಿಸಿ ಡಚ್ಚರು 1700 ರಲ್ಲಿ ಮೊಗಲರ ಕಾಲದ L' Empire Do Mogol ಎಂಬುದಾಗಿ ಒಂದು ಭೂಪಟವನ್ನು ರಚಿಸಿದರು. P. Mortier ಇವನ ಉತ್ತರ ಹಿಂದೂಸ್ಥಾನದ ನಕ್ಷೆ. I, Covens ಮತ್ತು C. Mortier ಇವರು Malabar Et do Coromandal ಎಂಬುದಾಗಿ ಬಿಡಿಸಿದ ದಕ್ಷಿಣ ಹಿಂದೂಸ್ಥಾನದ ಬಣ್ಣಚಿತ್ರವೂ ಕ್ರಿ. ಶ. 1720 ರಲ್ಲಿ ಹಾಲೆಂಡಿನಲ್ಲಿ ಮುದ್ರಣವಾಯಿತು.

ಇದರನಂತರ ಕಳೆದ ಶತಮಾನದ ಮಧ್ಯಕಾಲದವರೆಗೂ ಹಲವು ಡಚ್ಚ್, ಪೋರ್ಚುಗೀಸ್, ಇಂಗ್ಲಿಷ್ ಮತ್ತು ಫ್ರೆಂಚ್ ಭೂಗೋಳ ಶಾಸ್ತ್ರಜ್ಞರು ಈ ದೇಶದ ನಾನಾ ಭಾಗಗಳನ್ನು ಅಳೆದು ಚಿತ್ರಿಸಿದರು. ಬಂಗಾಳ ಮತ್ತು ಹಿಮಾಲಯ ಪ್ರಾಂತಗಳನ್ನು ಸಂಪೂರ್ಣವಾಗಿ ಪರಿಶೋಧಿಸಿದರು. ಪರ್ಶಿಯಾ, ಗುಜರಾತು ಮತ್ತು ಪಶ್ಚಿಮ ಕರಾವಳೀ ಪ್ರದೇಶಗಳನ್ನು ಒಂದೇ ಪಟದಲ್ಲಿ ತೋರಿಸಿ ಅಂದಿನ ಸಮುದ್ರ ವ್ಯಾಪಾರದ ಪರಿಮಿತಿಯನ್ನು ತೋರಿಸುವ ಬಣ್ಣಚಿತ್ರವೊಂದು 1740 ರಲ್ಲಿ ಪ್ರಕಟವಾಯಿತು. ಇದರನಂತರ 1751 ರಲ್ಲಿ S. Robert, 1774 ರಲ್ಲಿ Samuel Dunn ಮತ್ತು 1781 ರಲ್ಲಿ J. Walker ಇವರು ಬಿಡಿಸಿದ ಈ ದೇಶದ ಬಣ್ಣ ಚಿತ್ರಗಳು ಬ್ರಿಟಿಷ್ ಸರಕಾರಕ್ಕೆ ಅಂದು ತುಂಬಾ ಪ್ರಯೋಜನವಾದುವು. ಇವೆಲ್ಲಾ ಲಂಡನ್‌ನಲ್ಲಿ ಮುದ್ರಿಸಲ್ಪಟ್ಟುವು. ಹೇಗೂ 1790 ರಲ್ಲಿ James Rennel ಇವನ ಪರಿಪೂರ್ಣವಾದ ಈ ದೇಶದ ವಿವಿಧ ಭಾಗಗಳ ಭೂಪಟಗಳು ಪ್ರಕಟವಾಗುವವರೆಗೂ ಒರಿಸ್ಸಾ, ಮಧ್ಯಪ್ರದೇಶ ಮತ್ತು ಆಂಧ್ರಕರಾವಳೀ ಸೀಮೆಗಳು ಪಾಶ್ಚಾತ್ಯರಿಗೆ ಅಪರಿಚಿತವಾಗಿಯೇ ಇದ್ದುವು.

J. Bew Peter ಇವನು ಪೂರ್ವಕರಾವಳಿಯ ಚಿತ್ರವನ್ನು ಸಮರ್ಪಕವಾಗಿ ಬಿಡಿಸಿದವರಲ್ಲಿ ಮೊದಲಿಗನೆನ್ನಬಹುದು. ಇವನ ನಂತರ 1824ರಲ್ಲಿ A.Campbell ಇವನ 'Peninsular India' ಎಂಬ ಪಟವೂ 1852ರಲ್ಲಿ James Wyld ಮತ್ತು 1856ರಲ್ಲಿ John Walker ಇವರು ಚಿತ್ರಿಸಿದ ಹಿಂದೂಸ್ಥಾನದ ಪಟಗಳನ್ನೂ ಪುನಃ ಪರಿಷ್ಕರಿಸಿ ಚಿತ್ರಿಸಲಾಗಿತ್ತು.

H. L. Day ಇವನು 1829ರಲ್ಲಿ ಬಣ್ಣ ಚಿತ್ರಗಳೊಡಗೂಡಿ ಬರೆದ Dictionary of Ancient India ಎಂಬ ಭೂಗೋಳ ಶಾಸ್ತ್ರ ಗ್ರಂಥವು

ಅತೀ ಉತ್ತಮವಾದುದಾಗಿತ್ತು. Sir Cunningham ಇವನು 1870 ರಲ್ಲಿ Geography of Ancient India ಎಂಬ ಭೂಗೋಳ ವಿವರಣೆ, ಮತ್ತು ಟಾಲೆಮಿಯ ಗ್ರಂಥದ ಆಧಾರದ ಮೇಲೆ 1884 ರಲ್ಲಿ J. W. Macrindle ಇವನು ಬರೆದ ಭೂಗೋಳ ಗ್ರಂಥವೂ ಈ ದೇಶದ ಪ್ರಾಚೀನ ಮತ್ತು ಆಧುನಿಕ ಭೂಗೋಳ ವಿವರಣೆಯನ್ನು ಸಮನ್ವಯಗೊಳಿಸುವಂತಾದುವು.

**೩. ನಾಡಿನ ಇತಿಹಾಸವನ್ನು ನೋಲಿಂದ ನೋಲೆ ಬಣ್ಣಿಸಿದರು :—**

ಹಿಂದೂಸ್ಥಾನದ ಕೆಲವು ಪ್ರಸಿದ್ಧ ಇತಿಹಾಸಕಾರರು ಯಾರಾರೆಂದು ಹಿಂದೆಯೇ ಸೂಚಿಸಲಾಗಿದೆ. ಆದರೆ ಫೆರಿಷ್ಟಾನಂತೆ ಮಹ್ಮದೀಯರ ಕಾಲದ ಕೆಲವು ಚಾರಿತ್ರಿಕ ಘಟನೆಗಳನ್ನು ಕಣ್ಣಾರೆ ನೋಡಿ ಅವುಗಳನ್ನು ಕುರಿತು ಬರೆದ ಕೆಲವು ಪಾಶ್ಚಾತ್ಯರ ಪ್ರವಾಸ ಗ್ರಂಥಗಳು ೧೯ ನೇ ಶತಮಾನದ ಚರಿತ್ರಕರ್ತರಿಗೆ ಆಧಾರ ವಸ್ತುಗಳಾದುವು. ಅಹ್ಮದ್ ನಗರದಲ್ಲಿ ಚಾಂದ್‌ಬೀಬಿಯು ನಡೆಸಿದ ಹೋರಾಟವನ್ನು ನೋಡಿ Major J. S. King ಇವನು ಆ ಕಾಲದ ಚರಿತ್ರೆಯನ್ನು ಬರೆದುದರ ಜತೆಗೆ History of Bahmini Dynasty ಎಂಬುದಾಗಿ ಇನ್ನೊಂದು ಗ್ರಂಥವನ್ನೂ ಬರೆದನು.

M. S. Elphinstone ಇವನು 1840 ರಲ್ಲಿ ಬರೆದ ಭಾರತದ ಚರಿತ್ರೆ, J. Cassell ಮತ್ತು Vincent smith ಇವರು ಬರೆದ History of India ಇವುಗಳ ಪ್ರಕಟಣೆಯ ನಂತರ Henry Beveridge ಇವನ A Comprehensive History of India ಇದು 1871 ರಲ್ಲಿ ಹೊರ ಬಿದ್ದಾಗ ಅದು ಬಹು ಸವಿಸ್ತಾರವಾದ ಚರಿತ್ರೆ ಗ್ರಂಥವೆಂದು ಪ್ರಸಿದ್ಧವಾಯಿತು. ಅದರೊಡನೆಯೆ The Cambrige History of India ಇದೂ ಪ್ರಕಟ ವಾಯಿತು. ಇವೆಲ್ಲಾ 1890 ರ ಒಳಗಾಗಿಯೇ ಮೂರೋ ನಾಲ್ಕೋ ಬಾರಿ ಪುನರ್ಮುದ್ರಣವಾದುವು.

ಕಳೆದ ಶತಮಾನದಲ್ಲಿ ಮತ್ತು ಅದಕ್ಕೂ ಹಿಂದೆ ಈ ದೇಶಕ್ಕೆ ಬಂದ ಪಾಶ್ಚಾತ್ಯರು ತಮ್ಮ ಆತ್ಮಕಥೆ, ಪ್ರವಾಸ ಚರಿತ್ರೆ ಇತ್ಯಾದಿಗಳಾಗಿ ಬರೆದ ಗ್ರಂಥಗಳು ನೂರಾರು ಇವೆ. ಇವೆಲ್ಲಾ ದೇಶದ ಅಂದಿನ ಪರಿಸ್ಥಿತಿಯನ್ನು ಅರುಹಲು ತುಂಬಾ ಸಹಾಯಕ ವಾಗಿವೆ. J. Forster ಇವನ ಪ್ರವಾಸದ ವರದಿ, W. Fryer ಇವನ ಪ್ರವಾಸ ಕಥನ ಹೀಗೆ ಇನ್ನೂ ಹಲವು ತುಂಬಾ ಪ್ರಸಿದ್ಧವಾದುದಾಗಿವೆ. ಅಂದಿನ ಚರಿತ್ರ ಕರ್ತರು ಅವುಗಳಿಂದಲೂ ಹಲವು ವಿಷಯಗಳನ್ನು ಆಧಾರವಾಗಿ ತೆಗೆದುಕೊಂಡಿದ್ದಾರೆ. Dr. F. Buchanan ಇವನ ಪ್ರವಾಸ ಗ್ರಂಥದಿಂದ James Mill ಇವನು ಉದಾಹರಿಸಿದಂಥಾ ಈ ಕೆಳಗೆ ಕೊಟ್ಟ ಹಲವು ತರಹದ ಹೇಳಿಕೆಗಳೂ ಅಲ್ಲಲ್ಲಿ ಇವೆ. ಅವೆಲ್ಲಾ ಈ ದೇಶದ ದಾರುಣ ಪರಿಸ್ಥಿತಿಯನ್ನು ಇಂದು ಹೇಗೋ ಅಂದೂ ಇತ್ತೆಂಬು ದನ್ನು ತಿಳಿಸುತ್ತವೆ :—

•The unwholesomeness of the water in many places, is in part, to be attributed to the common nastiness of the Hindus,

who wash their clothes, bodies and cattle in the very tanks or wells from which they take their own drink——*.

H. G. Keene ಇವನ 'Fall of the Mughal Empire' ಇದರ ಮೂರನೇ ಮುದ್ರಣವು 1887 ರಲ್ಲಾಯಿತು. ಅದೇ ವೇಳೆಗೆ ಇವನ History of Hindustan ಇದೂ ಪ್ರಕಟವಾಯಿತು. ಇವನ Madhavarao Scindia ಮತ್ತು A Servant of John Company ಇವು ಸಹ 1897ರ ಒಳಗಾಗಿ ಮೂರು ಬಾರಿ ಪುನರ್ಮುದ್ರಣವಾದುವು. 1857 ರಲ್ಲಾದ 'ಸಿಪಾಯಿ ದಂಗೆ' ಅಥವಾ 'ಸ್ವಾತಂತ್ರ್ಯ ಸಮರ'ವನ್ನು ಕುರಿತು ಹಲವರು ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾರೆ. ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಅದನ್ನು ಕುರಿತು ಹಲವು ಗ್ರಂಥಗಳು ಬರೆಯಲ್ಪಟ್ಟಿವೆ. ಇವರಲ್ಲಿ Col. Malleson ಇವನೊಬ್ಬನು. ಇವನು History of Indian Mutiny, History of French India, Decisive Battles of India ಮತ್ತು Life of Lord Clive ಈ ಪುಸ್ತಕಗಳನ್ನು 1898 ರ ಒಳಗಾಗಿ ಬರೆದನು. ಇದೇ ರೀತಿ ಇನ್ನೂ ಹಲವು ಇತಿಹಾಸಕಾರರು ಕಳೆದ ಶತಮಾನದಲ್ಲಿ ಇದ್ದರು.

**೪. ಈ ದೇಶದ ನೈಸರ್ಗಿಕ ಸೌಂದರ್ಯವನ್ನು ಚಿತ್ರಿಸಿದರು :—**

ಬಣ್ಣ ಚಿತ್ರಗಳನ್ನು ಬಿಡಿಸುವ ಕಲೆಯಲ್ಲಿ ನಮ್ಮ ದೇಶವು ಮೊಗಲರ ಕಾಲದಲ್ಲಿ ಮತ್ತು ಅದಕ್ಕೂ ಹಿಂದೆ ಬಹು ಪ್ರಸಿದ್ಧವಾಗಿತ್ತೆಂಬುದು ಜನಜನಿತವಾಗಿದೆ ಅಜಂತಾ, ಎಲ್ಲೋರದಂಥಾ ಗುಹಾಂತರ್ಗತ ಕಟ್ಟೋಣಗಳಲ್ಲಿ, ದೇಶೀಯ ರಾಜರ ಮತ್ತು ನವಾಬರ ಅರಮನೆಗಳಲ್ಲಿ ಮತ್ತು ಪ್ರಾಚೀನ ಕಾಲದ ಸಾರ್ವಜನಿಕ ಕಟ್ಟಡಗಳಲ್ಲಿ ಅತೀ ಉತ್ತಮ ವರ್ಗದ ಬಣ್ಣಚಿತ್ರಗಳು ಬಹು ಕುಶಲರಾದ ಕಲಾವಿದರಿಂದ ಬಿಡಿಸಲ್ಪಟ್ಟುದು ಸಹಸ್ರಾರು ಇಂದಿಗೂ ಇವೆ. ಪಾಶ್ಚಾತ್ಯ ಕಲಾವಿದರೂ ಈ ದೇಶದ ಸೃಷ್ಟಿ ಸೌಂದರ್ಯಕ್ಕೆ ಮನಸೋತು ಅದೇ ರೀತಿ ಹಲವು ಸುಂದರ ದೃಶ್ಯಗಳನ್ನು ಚಿತ್ರಿಸಿದರು.

ಕ್ರಿ.ಶ. 1800 ಕ್ಕೂ ಹಿಂದೆ Oriental Scenery ಗಳನ್ನು ಬಿಡಿಸಿ ಚಿತ್ರಿಸಿವವರಲ್ಲಿ Thomas Daniel ಮತ್ತು William Daniel ಎಂಬಿರ್ವರು ಸಹೋದರರು ಪ್ರಮುಖರಾಗಿದ್ದರು. ಅವರು ಹಿಮಾಲಯದ ಕಾಡು ಕಣಿವೆಗಳ ಚಿತ್ರಗಳನ್ನು ಬಹು ಸಂಖ್ಯೆಯಲ್ಲಿ ಬಿಡಿಸಿದರು. ಅದರನಂತರ George Chinnery ಇವನು ಹಿಂದುಸ್ಥಾನದ ಗ್ರಾಮಗಳ ದೃಶ್ಯಗಳನ್ನು ಬಹು ಸುಂದರವಾಗಿ ನೂರಾರು ಚಿತ್ರಗಳ ಮೂಲಕ ತೋರಿಸಿದನು. ಸುಮಾರು 1835 ರ ಕಾಲದಲ್ಲಿ Charles D'Oyly ಇವನು ಮತ್ತು Major Henry Ainsle ಇವನು ಈ ದೇಶದ ಹಲವು ಪ್ರಾಂತಗಳಲ್ಲಿ ಸಂಚರಿಸಿ ರಮಣೀಯ ದೃಶ್ಯಗಳನ್ನೆಲ್ಲಾ ಚಿತ್ರಿಸಿ ಅವುಗಳನ್ನೆಲ್ಲಾ ಯೂರೋಪು ಖಂಡದಲ್ಲೂ ಪ್ರಚಾರ ಪಡಿಸಿದರು. ಇನ್ನೂ ಹಲವರು ಜನಜೀವನಕ್ಕೆ ಸಂಬಂಧವಾದ ಮತ್ತು ಯುದ್ಧರಂಗಗಳನ್ನು ಬಣ್ಣಿಸುವ ಚಿತ್ರಗಳನ್ನು ಬಿಡಿಸಿದ್ದು

ಹಲವು ಇಂದಿಗೂ ಈ ದೇಶದ ಮತ್ತು ಯೂರೋಪು ಖಂಡದ Art Gallery ಗಳಲ್ಲಿ ಅಂತೆಯೇ ಇವೆ.

ಈ ದೇಶದಲ್ಲಿ ಇದ್ದ ಸಾಹಿತಿಗಳು ಮತ್ತು ಅಧಿಕಾರ ವರ್ಗದವರು ಕೆಲವರು ಉತ್ತಮ ಚಿತ್ರ ಕಲಾ ನಿಪುಣರಾಗಿದ್ದರು. ಇವರಲ್ಲಿ J. Prinsep, H. L. Dey, John Walker, Col. Meadows Taylor ಹೀಗೆ ಹಲವರ ಇದ್ದರು. ಹಲವು ಕ್ರೈಸ್ತ ಗುರುಗಳೂ ಚಿತ್ರಕಲೆಯಲ್ಲಿ ಆಸಕ್ತಿಯನ್ನು ತೋರಿಸಿ ಉತ್ತಮ ಬಣ್ಣ ಚಿತ್ರಗಳನ್ನು ತಯಾರಿಸಿದರು.

ಕರ್ಣಾಟಕವನ್ನು ಕುರಿತು ಹೇಳುವುದಾದರೆ ಹಲವು ಪಾಶ್ಚಾತ್ಯರು ಶ್ರೀರಂಗ ಪಟ್ಟಣ, ಜೋಗು ಜಲಪಾತ, ಮಲೆನಾಡು ದೃಶ್ಯ ಇತ್ಯಾದಿಗಳನ್ನು ಚಿತ್ರಿಸಿದ್ದಾರೆ. ಇಂಥಾ ರಸಿಕರಿಗೆ ಜೋಗು ಜಲಪಾತದಂಥಾ ದೃಶ್ಯಗಳು ವಿಶೇಷ ಭಾವೋದ್ರೇಕ ವನ್ನುಂಟು ಮಾಡಿದವು. ಸುಮಾರು 1800 ರ ಕಾಲದಲ್ಲಿ ಸ್ಪೇಯಿನ್ ದೇಶದ La Dame Blanche ಇವನು ಈ ಜಲಪಾತದ ಒಂದು ಪ್ರವಾಹ ಶಾಖೆಯನ್ನು 'ರಾಣಿ'ಯೆಂಬುದಾಗಿ ಕರೆದನು. Capt Newbold ಇವನು 1840 ರಲ್ಲಿ ಉಳಿದ ಪ್ರವಾಹಗಳನ್ನು Raja, Roarer ಮತ್ತು Rocket ಎಂಬುದಾಗಿ ಹೇಳಿದನು; ಅಲ್ಲದೆ ಈ ಜಲಪಾತದಲ್ಲಿ ಒಂದು ಕ್ಷಣಕ್ಕೆ (One Second) 43,000 ಘನ ಅಡಿಗಳ ಪ್ರಮಾಣದಲ್ಲಿ ನೀರು ಬೀಳುತ್ತದೆಂದು ಅಂದಾಜು ಮಾಡಿದನು. 1860 ರಲ್ಲಿ ಈ ಜಲಪಾತವನ್ನು ನೋಡಿದ Gordon Forbes ಇವನು ಅದನ್ನು ವರ್ಣಿಸಿ ಬರೆದ ಕವನವೊಂದನ್ನು ಈ ಗ್ರಂಥದಲ್ಲಿ ಕೊಡಲಾಗಿದೆ. 1880 ರಲ್ಲಿ ಈ ಅಮೋಘ ದೃಶ್ಯವನ್ನು ನೋಡಿದ Dr. James Burgess ಇವನು G. Forbes ಇವನು ಸಂದರ್ಶಕರ ಪುಸ್ತಕದಲ್ಲಿ ಬರೆದಿಟ್ಟ ಕವನವನ್ನು ಅಲ್ಲಿಂದೆತ್ತಿ ತನ್ನ ಪತ್ರಿಕೆಯಲ್ಲಿ ಪ್ರಕಟಿಸಿದನು. 1898 ರ ಕಾಲದಲ್ಲಿ Lord Curzon ಇವನು ಈ ಸುಂದರ ಸ್ಥಳ ವನ್ನು ನೋಡಿ ಮೆಚ್ಚಿದನಲ್ಲದೆ ಆ ಪ್ರೇಕ್ಷಣೀಯವಾದ ಸ್ಥಳದ ಸೌಂದರ್ಯವನ್ನು ಹಾಳುಗೆಡಹದೆ ಅಂತೆಯೇ ಇಡಬೇಕೆಂದು ವಿಧಿಸಿದ್ದನು.

**೫. ಯೂರೋಪಿನಲ್ಲಿ ಭಾರತೀಯ ಸಾಹಿತ್ಯವನ್ನು ಬಿತ್ತರಿಸಿದರು :—**

ಕಳೆದ ಶತಮಾನದ ಮೊದಲಲ್ಲಿ ಐರೋಪ್ಯಾ ಸಾಹಿತಿಗಳೂ ಸಂಶೋಧಕರೂ ಈ ದೇಶವನ್ನು ಕುರಿತು ಮತ್ತು ಈ ದೇಶದ ಪ್ರಾಚೀನ ಗ್ರಂಥಗಳನ್ನು ಅನ್ವೇಷಿಸಿ ಬರೆದ ಪುಸ್ತಕಗಳಲ್ಲಿ ಶೇಕಡ 75 ರಷ್ಟು ಲಂಡನ್‌ನಲ್ಲೇ ಮುದ್ರಣವಾದುವು. ಜರ್ಮನ್, ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳಿಗಿಳಿಸಲ್ಪಟ್ಟ ಭಾರತೀಯ ಗ್ರಂಥಗಳು 1830 ರ ವರೆಗೂ Sir Charles Wilkins ಇವನ ಪರಿಶ್ರಮದ ಪರಿಣಾಮವಾಗಿ ಇಂಗ್ಲೆಂಡಿನಲ್ಲಿ ಮುದ್ರಣವಾಗಿ ಅಲ್ಲಿಂದ ಅವು ಇತರ ದೇಶಗಳಿಗೆ ಕಳುಹಿಸಲಾದುವು.

ಭಾರತೀಯ ಸಾಹಿತ್ಯ ಮತ್ತು ತತ್ವಶಾಸ್ತ್ರ ಗ್ರಂಥಗಳ ಪ್ರಚಾರ ಕಾರ್ಯವು ಒಂದು ಅಮೋಘ ಕಾರ್ಯಕ್ರಮವೆಂದು Governor-General Warren Hastings ಇವನು ಭಾವಿಸಿ ಅದಕ್ಕೆ ತಕ್ಕ ಪ್ರೋತ್ಸಾಹವಿತ್ತನೆಂಬುದನ್ನು ಪುನಃ

ಹೇಳಬೇಕಾಗಿದೆ. ಅವನ ಪ್ರೋತ್ಸಾಹದಿಂದಲೇ Charles Wilkins ಇವನು ಭಗವದ್ಗೀತೆ, ವೇದ ಮತ್ತು ನ್ಯಾಯಶಾಸ್ತ್ರಗಳನ್ನು ಭಾಷಾಂತರಿಸಲಾರಂಭಿಸಿದನು. Warren Hastings ಇವನ ಪ್ರೇರಣೆಯಿಂದಲೇ N. Halhed ಇವನು ಬಂಗಾಳೀ ಭಾಷಾ ವ್ಯಾಕರಣ ಮತ್ತು ಮನುಸ್ಮೃತಿಯನ್ನು ಇಂಗ್ಲಿಷ್‌ನಲ್ಲಿ ಬರೆದನು. ಇದೇ ಕಾರ್ಯಕ್ರಮವನ್ನು Sri William Jones ಇವನು ಮುಂದುವರಿಸಿದನು. ಅಷ್ಟರಲ್ಲಿ Charles Wilkins ಇವನು ಭಾಷಾಂತರಿಸಿದ ಆ ಗ್ರಂಥಗಳನ್ನೆಲ್ಲಾ ಮುದ್ರಿಸಿ ಪ್ರಕಟಿಸಲಿಕ್ಕೂ ಲಂಡನ್ನಿನ ಇಂಡಿಯಾ ಗ್ರಂಥಭಂಡಾರವನ್ನು ವಿಸ್ತರಿಸಲಿಕ್ಕೂ ಇಂಗ್ಲೆಂಡಿಗೆ ಹೋದನು.

1800 ರ ಕಾಲದಲ್ಲಿ ಯೂರೋಪಿನಲ್ಲಿ ಪ್ರಬಲರಾದ ಭಾರತೀಯ ಭಾಷಾ ಪಂಡಿತರು ಇದ್ದರು. ಜರ್ಮನಿಯಲ್ಲಿ Von Schelegel, Frenz Bopp, V. Bernier ಮೊದಲಾದವರ ಮೂಲಕ ಹಲವು ಭಾರತೀಯ ಗ್ರಂಥಗಳು ಅದಾಗಲೇ ಪ್ರಚಾರವಾಗಿದ್ದುವು. ಅವರನ್ನನುಸರಿಸಿ Grimm, Pott, Schleicher, Brugmann, Delbruck ಮೊದಲಾದವರೂ ಪ್ರಬಲ ಸಂಸ್ಕೃತ ವಿದ್ವಾಂಸರೆಂದೆನ್ನಿಸಿದ್ದರು. ಸುಮಾರು 1850 ರ ಕಾಲಕ್ಕೆ ಜರ್ಮನಿಯ ಗೋಟಿಙ್ಗನ್, ಟುಬಿನ್ಗಾನ್, ಲೈಪ್‌ಜಿಗ್ ಮತ್ತು ಬರ್ಲಿನ್ ನಗರಗಳಲ್ಲಿ ಅಲ್ಲದೆ ಕೊಪನ್‌ಹೇಗನ್, ವಿಯೆನ್ನಾ, ರೋಮ್, ಲಿಸ್ಬನ್, ಪ್ಯಾರಿಸ್ ಮೊದಲಾದ ಕೇಂದ್ರಗಳಲ್ಲೂ ಭಾರತೀಯ ಗ್ರಂಥಗಳ ಪ್ರಚಾರಕ್ಕೆ ಶಾಖೆಗಳನ್ನು ಸ್ಥಾಪಿಸಲಾಗಿತ್ತು. ಈ ಎಲ್ಲಾ ಸ್ಥಳಗಳ ವಿಶ್ವವಿದ್ಯಾಲಯಗಳಲ್ಲೂ ಸಂಸ್ಕೃತ ಭಾಷೆಯನ್ನೂ ಕಲಿಸುತ್ತಿದ್ದರು.

ಇಷ್ಟೇ ಅಲ್ಲ, Royal Asiatic Society ಇದರ ಶಾಖೆಗಳನ್ನು ಯೂರೋಪಿನ ಕೆಲವು ಸ್ಥಳಗಳಲ್ಲಿ ಸ್ಥಾಪಿಸಲಾಯಿತು. Asiatic Researches ಎಂಬ ಸಂಶೋಧನಾ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ವಿದ್ವತ್ಪೂರ್ಣವಾದ ಲೇಖನಗಳು ಇಂಗ್ಲಿಷ್‌ನಿಂದ ಇತರ ಐರೋಪ್ಯಾ ಭಾಷೆಗಳಿಗೂ ಭಾಷಾಂತರವಾಗುತಿದ್ದುವು. ಹಿಂದೂದೇಶದಲ್ಲಿ ಆಗ ಪ್ರಕಟವಾಗುತ್ತಿದ್ದ Asiatic Society Journal, Indian Evengelical Journal, Literary Review, Indian Antiquary ಇತ್ಯಾದಿ ಪತ್ರಿಕೆಗಳೂ ಯೂರೋಪು ಖಂಡದಲ್ಲೆಲ್ಲಾ ಪ್ರಚಾರವಾಗುತ್ತಿದ್ದುವು. ಬ್ರಿಟಿಷ್ ಸರಕಾರದ ಗಜೆಟಿಯರುಗಳೂ, ವಾರ್ತಾಪತ್ರಿಕೆಗಳೂ, ಕಿರುಹೊತ್ತಗೆಗಳೂ ಈ ದೇಶದ ಪ್ರಾಚೀನ ಚರಿತ್ರೆ, ಸಾಹಿತ್ಯ, ಧರ್ಮಶಾಸ್ತ್ರಾದಿ ವಿಷಯಗಳನ್ನೊಳಗೊಂಡು ಬಹು ಸಂಖ್ಯೆಯಲ್ಲಿ ವಿದೇಶಗಳಲ್ಲಿ ಪ್ರಚಾರವಿದ್ದುವು.

**೬. ಇಂಗ್ಲೆಂಡಿನಲ್ಲಿ "ಭಾಷಾಂತರ ಸಮಿತಿ"ಯೊಂದನ್ನು ಸ್ಥಾಪಿಸಿದರು :—**

Henry Colebrooke, Charles Wilkins ಮತ್ತು ಕೆಲವು ವಿದ್ವಾಂಸರ ಪ್ರಯತ್ನದಿಂದ Royal Asiatic Society of Great Britain and Ireland ಈ ಸಂಸ್ಥೆಯು 1823 ರಲ್ಲಿ ಸ್ಥಾಪನೆಯಾಯಿತು. ಕೆಲವು ಉತ್ಸಾಹೀ ಸಾಹಿತಿಗಳು ಲಂಡನ್ನಿನ ಸೇಂಟ್‌ಜೇಮ್ಸ್ ಬೀದಿಯಲ್ಲಿ Henry

Colebrooke ಇವನ ಅಧ್ಯಕ್ಷತೆಯಲ್ಲಿ ಅದನ್ನು ಸ್ಥಾಪಿಸಿದಲ್ಲದೆ ಭಾರತೀಯ ಹಾಗೂ ಪೂರ್ವ ಏಷ್ಯಾ ದೇಶಗಳ ಪ್ರಾಚೀನ ಗ್ರಂಥಗಳನ್ನು ಭಾಷಾಂತರಿಸಿ ಪ್ರಕಟಿಸುವ ಉದ್ದೇಶವನ್ನು ಕುರಿತು ಚರ್ಚಿಸಿದರು. ಈ ಸಂಸ್ಥೆಗೆ ಪೋಷಕನಾಗಿ ಅಂದಿನ ಬ್ರಿಟಿಷ್ ಚಕ್ರಾಧಿಪತ್ಯದ ಅರಸನನ್ನು ಕಾರ್ಯಕಾರಿ ಮಂಡಳಿಯಲ್ಲಿ Marquess of Wellesley, Sir John Malcolm, Col. Mark Wilks, ಈ ಮೊದಲಾದವರಿಂದ ಕೂಡಿದ ೨೦ ಜನ ಸದಸ್ಯರನ್ನೂ ಆರಿಸಿದರು. ಈ ಸಭೆಯಲ್ಲಿ Henry Colebrooke ಇವನು ಹೇಳಿದ ಕೆಲವು ಮಾತುಗಳು ಗಮನಾರ್ಹವಾಗಿವೆ :—

"To those countries of Asia, in which civilization may be justly considered to have had its origin, or to have attained its earliest growth, the rest of the civilised world owes a large debt of gratitude---In speaking of the history of Asiatic nations (and, it is in Asia that recorded and authentic history of mankind commences), I do not refer merely to the succession of political struggles—–It is the history of human mind, which is most diligently to be investigated——Mythology then however futile, must, for those reasons, be noticed. It influences the manners, it pervades the literature, of nations which have admitted it——The ancient language of India, the polished Sanskrit not unallied to Greek and various other languages of Europe, may yet contribute something to their (European, Arabic and Greek philosophy) elucidation ; and still more to the not unimportant subject of general grammar."

ಹೀಗೆ ಹೇಳುತ್ತಾ ಈ ದೇಶದ ಪ್ರಾಚೀನ ಗ್ರಂಥಗಳನ್ನೂ ಓಲೆಕಟ್ಟುಗಳನ್ನೂ ಸಂಗ್ರಹಿಸಿ ಅವನ್ನೆಲ್ಲಾ ಇಂಗ್ಲೆಂಡಿನಲ್ಲಿ ಎಚ್ಚರಿಕೆಯಲ್ಲಿ ಇಟ್ಟು ಮುಂದಕ್ಕೆ ಹಾಳಾಗಿ ಹೋಗದಂತೆ ರಕ್ಷಿಸಬೇಕೆಂಬುದಾಗಿ ಈ ರೀತಿ ಹೇಳುತ್ತಾನೆ:—

"Here may bc arranged the treasured knowledge which they bring with them ; the written or remembered information, which they have gathered. Here are preserved in public and private repositories, manuscript books collected in the East, exempt from the prompt decay, which would there have overtaken them——."

ಹೀಗೆ ಸ್ಥಾಪಿತವಾದ ಪೌರಸ್ತ್ಯ ಸಾಹಿತ್ಯ ಪ್ರಚಾರ ಸಂಸ್ಥೆಯೊಡನೆ ಈ ದೇಶದ ಪುರಾತನ ಗ್ರಂಥಗಳನ್ನು ಭಾಷಾಂತರಿಸಲು ಮತ್ತು ಅದಕ್ಕೆ ತಕ್ಕಂಥಾ ಏರ್ಪಾಡುಗಳನ್ನು ಮಾಡಲು ಒಂದು "Oriental Translation Fund" ಇದನ್ನು 1827 ರಲ್ಲಿ ಲಂಡನ್‌ನಲ್ಲಿ ಸ್ಥಾಪಿಸಿದನು ಅಂದಿನ ಬ್ರಿಟಿಷ್ ರಾಜ George IV ಇವನು ಅದರ ಪೋಷಕನಾಗಿಯೂ, Duke of Clarence, Duke of

Cambridge, Duke of Gloucester, Lord Spencer, Lord W. Bentink, Robert Peel ಮೊದಲಾದವರು ಆ ಸಮಿತಿಯ ಸದಸ್ಯರಾಗಿಯೂ ನೇಮಿತರಾದರು. ಉದ್ದಾಮ ಸಾಹಿತಿಗಳ ಪೈಕಿ ಸಂಸ್ಕೃತ ವಿದ್ವಾಂಸರಾದ Henry Colebooke, William Carey, ಚೀನೀ ಭಾಷಾ ಪರಿಣತನಾದ J. F. Davis, ಅರಬೀಭಾಷಾ ಪಂಡಿತ F. C. Belfour, ಹೆಬ್ರ್ಯೂ ವಿದ್ವಾಂಸ Rev. A. Baird ಮೊದಲಾದವರು ಆ ಸಮಿತಿಯಲ್ಲಿ ಇದ್ದರು. ಇಂಗ್ಲೆಂಡ್ ಮತ್ತು ಹಾಲೆಂಡಿನ ಅರಸರು ಅಲ್ಲದೆ ನೂರಾರು ಜನರು ಈ ಸಂಸ್ಥೆಗೆ ಧನ ಸಹಾಯವನ್ನು ಮಾಡಿದರು. ವಿಯೆನ್ನಾ, ಬರ್ಲಿನ್, ಮ್ಯೂನಿಚ್, ಲಂಡನ್, ಆಕ್ಸ್‌ಫರ್ಡ್, ಹ್ಯಾನೊವರ್ ಮೊದಲಾದ ಸ್ಥಳಗಳ ಸಾಹಿತ್ಯ ಸಂಸ್ಥೆಗಳು ಈ ಭಾಷಾಂತರ ನಿಧಿಗೆ ಧನ ಸಹಾಯವನ್ನು ಮಾಡಿದುವು. ಈ ಸಂಸ್ಥೆಯ ಮೂರನೇ ವಾರ್ಷಿಕ ಸಭೆಯು Lord Amherst ಇವನ ಅಧ್ಯಕ್ಷತೆಯಲ್ಲಿ 1830 ರಲ್ಲಿ ನಡೆಯಿತು. ಆಗ ಅದರ ಉದ್ದೇಶವನ್ನು ಕುರಿತು ಈ ರೀತಿ ಹೇಳಲಾಗಿತ್ತು :—

"The object of the Committee is to publish free of expense to the authors, translations of the whole or parts of works in the Oriental languages, accompanied occasionally by the original texts, and such illustrations as may be considered necessary. These translations are to be generally printed in English but in peculiar cases may be printed in Latin or French."

೭. ಸಂಸ್ಕೃತ ಸಾಹಿತ್ಯ ಪ್ರಚಾರ ಕ್ಷೇತ್ರವನ್ನು ವಿಸ್ತರಿಸಿದರು :—

1830 ರ ಒಳಗಾಗಿ ಸಂಸ್ಕೃತ, ಪರ್ಶಿಯನ್, ಚೀನೀ ಇತ್ಯಾದಿ ಭಾಷೆಗಳ ಹನ್ನೊಂದು ಗ್ರಂಥಗಳು ಈ ಭಾಷಾಂತರ ನಿಧಿಯ ಮೂಲಕವಾಗಿ ಪ್ರಕಟವಾದುವು. ಬ್ರಿಟಿಷ್ ಅರಸನಾದ George IV ಇವನು ಉತ್ತಮವಾಗಿ ಭಾಷಾಂತರವಾದ ಗ್ರಂಥದ ಲೇಖಕರಿಗೆ ಬಹುಮಾನವಾಗಿ ಎರಡು ಚಿನ್ನದ ಪದಕಗಳನ್ನು ಪ್ರತಿ ವರ್ಷವೂ ಕೊಡುವಂತೆ ಒಪ್ಪಿದನು. ಇಬ್ನೂ ಬಟೂಟನ ಪರ್ಶಿಯನ್ ಪ್ರವಾಸ ಗ್ರಂಥವನ್ನು ಭಾಷಾಂತರಿಸಿದ Prof. Lee ಇವನಿಗೆ ವೆಟಿಕನ್ ಗ್ರಂಥಭಂಡಾರದಲ್ಲಿ ಪರಿಶೋಧನೆಯನ್ನೆಸಗಲು ಪೋಪ್ ಮಹಾಗುರುವು ಅನುಮತಿಯನ್ನಿತ್ತು ಅವನ ಸಹಾನುಭೂತಿಯನ್ನು ವ್ಯಕ್ತಪಡಿಸಿದನು. ಅಲ್ಲದೆ ಸಂಸ್ಕೃತ ಗ್ರಂಥಪ್ರಚಾರವನ್ನು Irish Academy, Copen Hagen ಮತ್ತು Petersburg Oriental Club ಅಲ್ಲದೆ ಇನ್ನೂ ಹಲವು ಸಾಹಿತ್ಯ ಸಂಸ್ಥೆಗಳು ಶ್ರದ್ಧೆಯಿಂದ ಕೈಗೊಂಡುವು.

ಲಂಡನ್ನಿನ Asiatic Society Journal ಇದರಲ್ಲಿ Major Todd ಇವನು ಪೂರ್ವಕಾಲದ ಯವನರ ಮತ್ತು ಹಿಂದೂ ಅರಸರ ಕಾಲದ ನಾಣ್ಯಗಳನ್ನು ಕುರಿತು, J. Moorecroft ಇವನು ಟಿಬೇಟ್ ಸಂಸ್ಕೃತಿ, J. F. Davis ಇವನು ಚೀನೀ ಧರ್ಮಶಾಸ್ತ್ರ, Prof. H. H. Wilson ಇವನು 'ಪಂಚತಂತ್ರ'ದ ಮೇಲೆ ವ್ಯಾಖ್ಯಾನ, Dr. F. Buchanan ಇವನು ಬಿಹಾರದ ಶಿಲಾಶಾಸನಗಳು,

Capt. F. Franklin ಇವನು ಬಂಡೆಲ್‌ಕಂಡದ ವರದಿಗಳು ಮತ್ತು Sir. H. Colebooke ಇವನು ಸಟ್ಲೆಜ್ ನದಿಯ ಐತಿಹ್ಯಗಳನ್ನು ಕುರಿತಾಗಿ ಉದ್ಬೋಧಕವಾದ ಲೇಖನಗಳನ್ನು ಬರೆದರು. ಇದೇ ರೀತಿ 1827 ರಿಂದ ಮೊದಲ್ಗೊಂಡು ಹಲವು ವಿದ್ವಾಂಸರು ನೂರಾರು ವಿಚಾರಾತ್ಮಕವಾದ ಲೇಖನಗಳನ್ನು ಐರೋಪ್ಯಾದ ಸಾಹಿತ್ಯ ಪತ್ರಿಕೆಗಳಲ್ಲಿ ಬರೆಯುತ್ತಾ ಇದ್ದರು. ಒಂದೊಂದು ಲೇಖನವೂ 25 folio ಪುಟಗಳಿಗೆ ಕಡಿಮೆಯಿಲ್ಲದೆ ದೀರ್ಘವಾಗಿಯಿರುತಿದ್ದುವು.

ಇಂಗ್ಲೆಂಡ್ ಮತ್ತಿತರ ಐರೋಪ್ಯಾ ದೇಶಗಳಲ್ಲಿ ಸಂಸ್ಕೃತ ವಿದ್ಯೆಯ ಪ್ರಚಾರ, ಸಂಸ್ಕೃತ ಗ್ರಂಥಗಳ ಸಂಗ್ರಹ ಮೊದಲಾದುವನ್ನು ಕೈಗೊಂಡ ಹಿರಿಯ ಸಂಸ್ಕೃತ ಮತ್ತು ಪರ್ಷಿಯನ್ ವಿದ್ವಾಂಸರ ಪೈಕಿ Major William Yule (1764–1839), Fredrich August Rosen (1805–1837) Claudius James Rich (1786–1821), Sir william Jones, Major Robert Leech, Prof. Frenz Bopp, Monsieur Chazy ಹೀಗೆ ಮೊದಲಾದ ಹಲವು ಜರ್ಮನ್, ಇಂಗ್ಲಿಷ್ ಮತ್ತು ಫ್ರೆಂಚ್ ಸಾಹಿತಿಗಳು ಪ್ರಮುಖರಾಗಿದ್ದಾರೆ, ಇಂಥಾ ಉದ್ದಾಮ ಪಂಡಿತರ ಪ್ರಯತ್ನದ ಪರಿಣಾಮವಾಗಿಯೇ ಪಾಶ್ಚಾತ್ಯ ರಾಷ್ಟ್ರಗಳ ಅಂದಿನ ಸರಕಾರಗಳು ನಮ್ಮ ವಿದ್ಯಾ ಪೀಠಗಳಲ್ಲಿ ಭಾರತೀಯ ವಿದ್ಯೆಗೂ, ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯದ ಸಂಶೋಧನೆಗೂ ವಿಶೇಷ ಅವಕಾಶವನ್ನು ಇತ್ತರು.

**೮. ಡೆನ್ಮಾರ್ಕ್ ಪಂಡಿತರು ಪಾಲಿ ಭಾಷೆಯಲ್ಲಿ ಆಸಕ್ತಿವಹಿಸಿದರು :—**

ಪಾಲೀ ಭಾಷೆಯನ್ನು ಹಲವು ಆಂಗ್ಲೇಯ ಸಂಶೋಧಕರು ಕಲಿತು ಪ್ರಾಚೀನ ಶಾಸನಗಳನ್ನೂ ಓಲೆಗಳನ್ನೂ ಅನುವಾದಿಸಿದರಾದರೂ ಇದರಲ್ಲಿ ಡೇನಿಷ್ ಜನವು ಅಭಿರುಚಿಯಿಟ್ಟಷ್ಟು ಇತರರು ಇಟ್ಟಂತೆ ಕಾಣುವುದಿಲ್ಲ. ಪಾಲೀ ಭಾಷೆಯಲ್ಲಿ ವಿಶೇಷ ಪಾಂಡಿತ್ಯವನ್ನು ಪಡೆದವರಲ್ಲಿ ಡೆನ್ಮಾರ್ಕಿನ V. Trenkner ಇವನು. 1824 ರಲ್ಲಿ ಹುಟ್ಟಿದ ಇವನು ಕೋಪೆನ್‌ಹೇಗನ್ ವಿಶ್ವವಿದ್ಯಾಲಯದಿಂದ 1841 ರಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಸಂಸ್ಕೃತ ಮತ್ತು ಬರ್ಮಿ ಭಾಷೆಗಳನ್ನು ಕಲಿತನು. 1855 ರಿಂದ ಪಾಲೀ ಮತ್ತು ಸಿನ್ಹಾಲಿ ಭಾಷೆಗಳನ್ನು ಕಲಿತು ಹಲವು ಬೌದ್ಧ ಗ್ರಂಥಗಳನ್ನು ಸಂಶೋಧಿಸಿ ಅವುಗಳನ್ನು ಡೇನಿಷ್ ಮತ್ತು ಲ್ಯಾಟಿನ್ ಭಾಷೆಗಳಿಗಿಳಿಸಿದನು.

Dr. V. Trenkner ಇವನ A Critical Pali Dictionary ಇದು 1870 ರ ಕಾಲದಲ್ಲಿ ಪ್ರಕಟವಾಯಿತು. ಇದನ್ನು D. Anderson ಮತ್ತು H. Smith ಇವರು ಪರಿಷ್ಕರಿಸಿ ಪುನರ್ಮುದ್ರಿಸಿದರು. ಅಲ್ಲದೆ ಇದೇ ಪಾಲಿ ನಿಘಂಟನ್ನು ಇತ್ತೀಚೆಗೆ Rhys Davids ಮತ್ತು W. Stede ಇವರು ಇಂಗ್ಲೆಂಡಿನ Surrey Pali Text Society ಇದರ ಆಶ್ರಯದಲ್ಲಿ ಪುನಃ ಪರಿಶೋಧಿಸಿದರು. 1872 ರಲ್ಲಿ ಪಾಲೀ – ಇಂಗ್ಲಿಷ್ ಅರ್ಥಕೋಶವನ್ನು ಬರೆದ R. C. Childers ಇವನು Dr. V. Trenckner ಇವನನ್ನು "a ripe and graceful Pali scholar" ಎಂಬುದಾಗಿ ಪ್ರಶಂಸಿಸಿದ್ದಾನೆ.

ಗಳು, ಇವೆಲ್ಲವನ್ನು ಸಂಪಾದಿಸಿ ಪ್ರಕಟಿಸುವ ವಿಷಯವಾಗಿ ಚರ್ಚೆಯು ನಡೆದುವು. ಅಲ್ಲದೆ ಪ್ರತಿವರ್ಷವೂ ಇಂಥಾ ಅಂತರ್ರಾಷ್ಟ್ರೀಯ ಸಾಹಿತ್ಯ ಸಮ್ಮೇಳನವನ್ನು ನೆರೆಯಿಸಿ ವಿಚಾರ ವಿನಿಮಯ ನಡೆಸುವಂತೆ ತೀರ್ಮಾನಿಸಿದರು. ಅದರಂತೆ ಕಳೆದ ಶತಮಾನದಲ್ಲಿ 1899 ರ ವರೆಗೂ ಬೇರೆ ಬೇರೆ ಕೇಂದ್ರಗಳಲ್ಲಿ ಪ್ರಪಂಚದ ಸಾಹಿತಿಗಳು ನೆರೆದರು. ಪ್ರತಿವರ್ಷವೂ ಸದಸ್ಯ ರಾಷ್ಟ್ರಗಳ ಸಂಖ್ಯೆಯು ಏರುತಿದ್ದಿತು. ಮಧ್ಯಪ್ರಾಚ್ಯ ರಾಷ್ಟ್ರಗಳು, ಸಿಲೋನ್, ಮಲೆಯಾ, ಕೋರಿಯಾ, ಮಧ್ಯಏಷ್ಯಾ ರಾಷ್ಟ್ರಗಳಲ್ಲದೆ ಈ ಶತಮಾನದ ಪ್ರಾರಂಭಕ್ಕೆ ಉತ್ತರ ಆಫ್ರಿಕಾದ ಈಜಿಪ್ಟ್, ಇಥಿಯೋಪ್ಯ, ಲಿಬಿಯಾ ರಾಜ್ಯಗಳೂ ಅಮೆರಿಕಾದ ವಿದ್ವಾಂಸರ ಪ್ರತಿನಿಧಿಗಳು ಈ ಸಮ್ಮೇಳನಕ್ಕೆ ಸೇರುತ್ತಿದ್ದರು. ಲ್ಯಾಟಿನ್, ಗ್ರೀಕ್, ಹೆಬ್ರ್ಯೂ, ಚೀನೀ, ಸಂಸ್ಕೃತ ಹೀಗೆ ಪುರಾತನ ಭಾಷಾ ಪಂಡಿತರು ಅಧ್ಯಕ್ಷಸ್ಥಾನಕ್ಕೆ ಆರಿಸಲ್ಪಡುತ್ತಿದ್ದರು.

ಇಂಥಾ ಸಮ್ಮೇಳನವು 1874 ರಲ್ಲಿ ಲಂಡನ್‌ನಲ್ಲಿ, 1876 ರಲ್ಲಿ ಪೀಟರ್ಸ್‌ಬರ್ಗ್‌ನಲ್ಲಿ, 1878 ರಲ್ಲಿ ಫ್ಲೋರೆನ್ಸ್‌ನಲ್ಲಿ, 1881 ರಲ್ಲಿ ಬರ್ಲಿನ್, 1883 ಲೈಡನ್, 1886 ರಲ್ಲಿ ವೀಯೆನ್ನಾ, 1889 ರಲ್ಲಿ ಸ್ಟಾಕ್‌ಹೋಮ್, 1792 ರಲ್ಲಿ ಲಂಡನ್, 1897 ರಲ್ಲಿ ಜಿನೇವಾ ಮತ್ತು 1899 ರಲ್ಲಿ ರೋಮ್ ನಗರದಲ್ಲೂ ನಡೆದುವು. ಈ ಶತಮಾನದ ಮೊದಲ ಹತ್ತಿಪ್ಪತ್ತು ವರ್ಷಗಳ ಕಾಲವೂ ಈ International Congress of Orientalists ಇದು ಪ್ರಸಿದ್ಧ ವಿಶ್ವವಿದ್ಯಾಲಯ ಕೇಂದ್ರಗಳಲ್ಲಿ ಪ್ರತಿವರ್ಷವೂ ನಡೆಸಲ್ಪಡುತಿದ್ದಿತು.

## ೧೧. ಭಾರತದಲ್ಲಿ ಜನತೆಗೆ ವಿಚಾರ ಜ್ಞಾನವನ್ನು ನೀಡಿದರು :—

ಲೋಕವೆಲ್ಲಾ ಈ ರೀತಿ ಭಾರತೀಯ ಧರ್ಮ ಶಾಸ್ತ್ರಗಳನ್ನು ಪ್ರಚಾರ ಪಡಿಸಲು ಪಾಶ್ಚಾತ್ಯ ವಿದ್ವಾಂಸರು ಹೆಣಗುತ್ತಿದ್ದಾಗ ಈ ದೇಶದಲ್ಲಿ ಜನರ ಅಜ್ಞಾನ ಅವಿಚಾರಗಳನ್ನು ಕಂಡು ಅವನ್ನೆಲ್ಲಾ ತೊಡೆದು ಹಾಕಲು ಬ್ರಿಟಿಷ್ ರಾಜಕಾರಿಣಿಗಳಿಗಿಂತಾ ವೇದೋಪನಿಷತ್ತುಗಳನ್ನು ಕರತಲಾಮಲಕವಾಗಿರಿಸಿಕೊಂಡ ಪಾಶ್ಚಾತ್ಯ ವಿದ್ವಾಂಸರೇ ಮುಂದಾದರು. ಈ ದೇಶದ ಸಾಮಾಜಿಕ ಸಂಸ್ಕರಣೆಗೆ Warren Hastings, Lord Cornwallis, Lord Baron Minto ಇವರಂಥಾ ಅಧಿಕಾರಿಗಳು ತಳಹದಿಯನ್ನು ಹಾಕಿದರು. ಹಿಂದೂ ಶಾಸ್ತ್ರಗಳಾವುದರಲ್ಲೂ ಹೇಳಲ್ಪಡದ ಹಲವು ಕ್ರೂರನೀತಿಗಳನ್ನು ನಿರ್ಮೂಲಿಸಲು Sri William Jones, Sri Henry Colcbrook, Dr. William Carrey ಇವರಂಥಾ ಪ್ರತಿಭಾವಂತ ವಿದ್ವಾಂಸರು ಶಾಸ್ತ್ರಾಧಾರಗಳ ಸಹಿತವಾಗಿ ಸರಕಾರಕ್ಕೆ ನಿವೇದಿಸಿದರು.

ಅಷ್ಟೇ ಅಲ್ಲ, ಕಳೆದ ಶತಮಾನಾರಂಭದಿಂದಲೇ ಈ ದೇಶದ ಎಲ್ಲಾ ಭಾಗಗಳಲ್ಲೂ ಸಂಚರಿಸುತ್ತಿದ್ದ ಪಾಶ್ಚಾತ್ಯ ಕ್ರೈಸ್ತಮತೋಪದೇಶಕರು ಅಲ್ಲಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದರು ; ಚಿಕಿತ್ಸಾ ಶಿಬಿರಗಳನ್ನು ಸ್ಥಾಪಿಸಿದರು ; ಆಧುನಿಕ ವ್ಯವಸಾಯ ಕೇಂದ್ರಗಳನ್ನೂ ಸ್ಥಾಪಿಸಿ ಜನರಿಗೆ ಕೃಷಿ, ಆರೋಗ್ಯ, ವಿದ್ಯೆ ಇತ್ಯಾದಿಗಳನ್ನು ಕುರಿತು ಜ್ಞಾನಪ್ರಸಾರವನ್ನು ಮಾಡುವ ಕಾರ್ಯದಲ್ಲಿ ನಿರತರಾದರು. ಕ್ರಿ. ಶ. 1850 ರ

ಒಳಗಾಗಿ Lord Hardinge, Lord Dalhousie ಇವರು ಇನ್ನೂ ಒಂದು ಹೆಜ್ಜೆ ಮುಂದು ಹೋಗಿ ದೇಶದಲ್ಲಿ ಅವ್ಯಾಹತವಾಗಿ ನಡೆಸಲ್ಪಡುತ್ತಿದ್ದ ನರಬಲಿ, ಚಿತ್ರಹಿಂಸೆ ಮಹ್ಮದೀಯರ ಆಳ್ವಿಕೆಯ ಕಾಲದಲ್ಲಿ ಪ್ರಚಾರವಿದ್ದ ಗುಲಾಮ ವ್ಯಾಪಾರ ಇತ್ಯಾದಿಗಳನ್ನೂ ತೊಡೆದುಹಾಕಿದರು. ಸುದೈವವಶಾತ್ ಆಗ ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ Sir Thomas Munroe, Sir W. Elphinstone, Sir John Walcolm ಮತ್ತು Sir Arthur Cotton ಇವರಂಥಾ ಉತ್ತಮ ಹಾಗೂ ಜನಪ್ರಿಯ ಆಡಳಿತಗಾರರು ಈ ಎಲ್ಲಾ ದುಷ್ಟಪದ್ಧತಿಗಳನ್ನು ನಿರ್ಮೂಲಿಸಲು ಬಹು ಕಠಿಣವಾದ ಕ್ರಮವನ್ನೇ ಕೈಗೊಂಡರು.

ದೇಶೀಯ ಭಾಷೆಗಳನ್ನು ಕಲಿತ ಪಾಶ್ಚಾತ್ಯ ಅಧಿಕಾರೀವರ್ಗದವರ ಪೈಕಿ ಇದ್ದ ಸಾಹಿತಿಗಳು ಜನರಿಗೆ ಆಧುನಿಕ ಜ್ಞಾನವನ್ನೀಯುವ ಸಲುವಾಗಿ ನೂರಾರು ಕಿರು ಹೊತ್ತಗೆಗಳನ್ನು ಆಯಾ ಭಾಗದ ಜನರಿಗೆ ಅರ್ಥವಾಗುವ ಭಾಷೆಗಳಲ್ಲಿ ಬರೆದು ಹಂಚಿದರು. ಸುಮಾರು 1880 ರ ಕಾಲಕ್ಕೆ ಇಂಥಾ ಚಿಕ್ಕ ಪುಸ್ತಕಗಳ ಸಂಖ್ಯೆಯು ಅದೆಷ್ಟೋ ಹೆಚ್ಚಿತು. ನರಬಲಿಯನ್ನು ನಿರ್ಮೂಲ ಮಾಡುವಿಕೆ, ಠಕ್ಕರನ್ನೂ ದರೋಡೆಗಾರರನ್ನೂ ಶಿಕ್ಷಿಸುವ ಅವಶ್ಯಕತೆ, ಮಿತಪಾನದ ಪ್ರಯೋಜನ, ಹಿಂದೂಧರ್ಮಶಾಸ್ತ್ರ, ವೇದಗಳಲ್ಲಿ ಪ್ರತಿಪಾದಿಸಲಾದ ತತ್ವಗಳು— ಹೀಗೆ ಆ ವರೆಗೂ ಜನಸಾಮಾನ್ಯಕ್ಕೆ ತಿಳಿಯದಿದ್ದ ಮತ್ತು ನೀತಿಪ್ರಚೋದಕವಾದ ವಿಚಾರಗಳನ್ನು ಕುರಿತು ಬರೆದದ್ದು ಜನರಲ್ಲಿ ವಿಚಾರಜ್ಞಾನವನ್ನು ಮೊಳಗಿಸಿತು. ಅಷ್ಟೇ ಅಲ್ಲ, ಈ ವಿಶಾಲದೇಶದ ಜನವು ತಮ್ಮ ಊರಲ್ಲದೆ ಇನ್ನೊಂದು ಪಕ್ಕದ ಊರಿನ ವಿಷಯವಾಗಿ ಏನೂ ತಿಳಿಯದಿದ್ದ ಆ ಕಾಲದಲ್ಲಿ ಪಾಶ್ಚಾತ್ಯ ಸಮಾಜ ಸುಧಾರಕರು ಜನಸಂಪರ್ಕಕ್ಕೆ ಸಾಧಕವಾಗುವಂತೆ ಹಲವು ಚಾರಿತ್ರಿಕ ಸ್ಥಳಗಳ, ಪ್ರಾಮುಖ್ಯ ಊರುಗಳ ಮತ್ತು ಸೃಷ್ಟಿ ಸೌಂದರ್ಯಕ್ಕೆ ಹೆಸರಾಂತ ಪ್ರದೇಶಗಳ ಭೂಪಠಗಳನ್ನೂ ಬಿಡಿಸಿ " Pictorial Tour of India " ಎಂಬೀ ಬಗೆಯ ಹೊತ್ತಗೆಗಳನ್ನೂ ಬರೆದು ಮುದ್ರಿಸಿ ಪ್ರಚಾರಪಡಿಸಿದರು.

**೧೨. ಇನ್ನೂ ಹಲವು ದುಷ್ಟ ಪದ್ಧತಿಗಳನ್ನು ನಿಲ್ಲಿಸಿದರು :—**

ಬ್ರಿಟಿಷ್ ಸರಕಾರವು ವಿದ್ಯಾ ಪ್ರಚಾರ, ಮತ್ತು ಸಮಾಜ ಸಂಸ್ಕಾರಗಳಿವೆರಡನ್ನೂ ಏಕ ಕಾಲದಲ್ಲಿ ನಡೆಸುತ್ತಾ ಇದ್ದಾಗ ಕಳೆದ ಶತಮಾನದ ಪೂರ್ವಾರ್ಧದಲ್ಲಿ ಈ ದೇಶದಲ್ಲಿ ಇದ್ದ ಪ್ರಸಿದ್ಧ ವಿದ್ವಾಂಸ Prof. Horace H. Wilson ಇವನು ಸರಕಾರದ ಧ್ಯೇಯವೇನಿತ್ತೆಂಬುದನ್ನು ಕುರಿತು ಈ ರೀತಿ ಹೇಳಿದ್ದಾನೆ :—

" East India Company .....make the various races of India known to all the world...through their literature, their instiutions, their laws, their traditions there remains .....".

ಬ್ರಿಟಿಷ್ ಸರ್ಕಾರವು ಈ ದೇಶದಲ್ಲಿ ಅಂದು ಕೈಗೊಂಡ ಉನ್ನತ ಮಟ್ಟದ ಸೇವೆಯೆಂದರೆ ಈ ದೇಶದ ಸಾಮಾಜಿಕ ಕ್ಷೇತ್ರದಲ್ಲಿಯೇ ಆಗಿದೆ. ಅವರು ಬೇರಾವ ಆತಂಕವೂ ಇಲ್ಲದೆ ಇನ್ನೊಂದು ಐವತ್ತೋ ನೂರೋ ವರ್ಷಗಳ ಕಾಲ ಈ ದೇಶದ ಆಡಳಿತೆ

ಯನ್ನು ನಡೆಸಿದ್ದರೆ ನಮ್ಮ ಸಮಾಜದಲ್ಲಿರುವ ಜಾತಿ ಭೇದ ಕುಲ ಭೇದಗಳನ್ನೆಲ್ಲಾ ಕಿತ್ತು ಹಾಕಿ ಒಂದು ಸಾಮಾಜಿಕ ಸಂಘಟನೆಯನ್ನು ಸಾಧಿಸಿ ಅಗಲುತಿದ್ದರು. ಇಂದು ನಮ್ಮ ಸರಕಾರವೇ ಆಗಿ ಅದಾವುದನ್ನು ಮಾಡಬೇಕೋ ಅಂಥಾದ್ದನ್ನೆಲ್ಲಾ ಧೈರ್ಯ ದಿಂದ ಮಾಡಲು ಅಂಜುತ್ತಿರುವಲ್ಲಿ ಆ ವಿದೇಶೀಯ ಸರಕಾರವು ಕಾನೂನು ಬದ್ಧವಾಗಿ ಹಲವು ಅನೀತಿ ಅಕೃತ್ಯಗಳನ್ನೆಲ್ಲಾ ಕೂಡಲೇ ನಿಲ್ಲಿಸುತಿದ್ದರು. ಅವರು ಈ ದೇಶದಲ್ಲಿ ಇದ್ದ ಬರೇ ನೂರಿನ್ನೂರು ವರ್ಷಗಳ ಸಮಯವು ಚಾರಿತ್ರಿಕವಾಗಿ ಬಹು ಅಲ್ಪವೆಂದೇ ಹೇಳಬೇಕಾಗಿದೆ.

ಹೇಗೂ ಪಾಶ್ಚಾತ್ಯ ಪಂಡಿತರು ಹಿಂದೂ ಶಾಸ್ತ್ರಗಳನ್ನೆಲ್ಲಾ ತಿರುವಿಹಾಕಿ ನೋಡು ವಾಗ ಅವುಗಳಲ್ಲಿ ಕಾಣದಿದ್ದ, ಮತ್ತು ಹಾಗಿದ್ದರೂ ಸಮಾಜದಲ್ಲಿ ಪ್ರಚಾರವಿದ್ದ ಕೆಲವು ಅಸಹ್ಯ ಪದ್ಧತಿಗಳನ್ನು ನೋಡಿ ಅವನ್ನೆಲ್ಲಾ ಕೂಡಲೇ ನಿಲ್ಲಿಸಬೇಕೆಂದು ಆಗಿಂದಾಗ್ಗೆ ಸರಕಾರವನ್ನು ಕೇಳಿಕೊಂಡಿದ್ದರು. ಸತೀ ಸಹಗಮನ ಪದ್ಧತಿಯು ಯಾವ ಧರ್ಮ ಶಾಸ್ತ್ರದಲ್ಲೂ ಪ್ರತಿಪಾದಿಸದಂಥಾ ಪಾಪಕೃತ್ಯವೆಂದು ಅವರು ಬಾರಿಬಾರಿಗೂ ಹೇಳಿ ದರು. ಇದನ್ನು ಕುರಿತು W. H. D. Adams ಇವನು ಹೀಗೆ ಹೇಳಿದನು.

" SATI-a custom instituted by the Brahmins for sacerdotal reasons but no-where enjoined in the sacred books......".

ಹೀಗೆ ಶಾಸ್ತ್ರಾಧಾರಗಳನ್ನು ಕೊಟ್ಟು ಅದನ್ನು ನಿಲ್ಲಿಸಲು ಐರೋಪ್ಯಾ ಕ್ರೈಸ್ತ ಗುರು ಗಳೂ ವಿದ್ವಾಂಸರೂ ಹೇಳಿದ್ದರಿಂದ Lord Amherst ಇವನು ಆ ವಿಚಾರದ ಬಗ್ಗೆ ಒಂದು ಇಸ್ತಿಹಾರುನಾಮೆಯನ್ನು ಬರೆಯಿಸಿದನು. ಆದರೆ ಬ್ರಾಹ್ಮಣರು ಸರಕಾರ ದೊಡನೆ ಹೋರಾಡಿ ಆ ಪದ್ಧತಿಯನ್ನು ನಿಲ್ಲಿಸಕೂಡದೆಂದು ಹೇಳಿದರು. ಹೇಗೂ 1829ರ ಡಿಸೆಂಬರ್ ತಿಂಗಳಲ್ಲಿ Lord William Bentinck ಇವನು ಅದನ್ನು ನಿಲ್ಲಿಸಿಯೇ ನಿಲ್ಲಿಸಿದನು. ಆ ಸಂದರ್ಭದಲ್ಲಿ ಹೊರಡಿಸಿದ ಪ್ರಕಟಣೆಯ ಒಂದು ಭಾಗವು ಹೀಗಿತ್ತು :—

"......All persons convicted of aiding or abetting in the sacrifice of a Hindu widow by burning or burying her alive, whether the sacrifice be voluntary on her part or not, shall de deemed guilty of culpable homicide and shall be liable to punishment......".

Lord W. Bentinck ಇವನ ಈ ಜನಪ್ರಿಯವಾದ ದೋರಣೆಯಿಂದ ಅವನು ಈ ದೇಶದ ಜನರ ಆದರಕ್ಕೆ ಪಾತ್ರನಾದನು. ಯೂರೋಪು ಖಂಡದಲ್ಲೂ ಅವನ ಸಮಾಜ ಸೇವೆಯನ್ನು ಕುರಿತು ಶ್ಲಾಘಿಸಲಾಗಿತ್ತು. 1828 ರಿಂದ 1835 ರ ವರೆಗೆ ಈ ದೇಶವನ್ನು ಆಳಿದ ಈ ರಾಜಕಾರಿಣಿಯನ್ನು ಕುರಿತು Lord Mecaulay ಇವನು ಹೀಗೆ ಹೇಳಿದನು :—

"... Lord William Bentinck..... abolished cruel rites..... he effaced humiliating distinctions, he gave liberty to the expression of public opinion......".

**೧೩. ಮೊಗಲ್ ಚಕ್ರವರ್ತಿಯೋರ್ವನನ್ನು ಕುಳ್ಳಿರಿಸಿಕೊಂಡೇ ಮಾಡಿದರು :–**

ಮೊಗಲರ ಕಾಲದಲ್ಲಿ ಮತ್ತು ಅದಕ್ಕೂ ಹಿಂದೆ ಧಿಲ್ಲಿಯೇ ಹಿಂದೂಸ್ಥಾನದ ರಾಜಧಾನಿಯಾಗಿತ್ತು. ಬ್ರಿಟಿಷರು ಈ ದೇಶಕ್ಕೆ ಬಂದನಂತರ ಅವರ ವ್ಯಾಪಾರ ವ್ಯವಹಾರಗಳು ಹೆಚ್ಚಾಗಿ ಕಲ್ಕತ್ತಾ, ಬೊಂಬಾಯಿ ಮತ್ತು ಮದ್ರಾಸ್ ಕೇಂದ್ರಗಳಲ್ಲಿ ನಡೆಸಲ್ಪಡುತಿದ್ದುವು. ಇವಗಳ ಪೈಕಿ ಕ್ರಿ. ಶ. 18 ನೇ ಶತಮಾನದ ಪ್ರಾರಂಭದಿಂದ ಕಲ್ಕತ್ತಾವು ಅವರ ಪ್ರಮುಖ ವ್ಯಾಪಾರ ಹಾಗೂ ರಾಜಕೀಯ ಕೇಂದ್ರವಾಗಿತ್ತು. ಆದರೆ ಕ್ರಿ. ಶ. 1757 ರ ವರೆಗೂ ಅದು ದೇಶದ ರಾಜಧಾನಿಯೆಂದು ಪರಿಗಣಿಸಲ್ಪಟ್ಟಿರಲಿಲ್ಲ. ಧಿಲ್ಲಿಯಲ್ಲಿ ಮೊಗಲ್ ಚಕ್ರವರ್ತಿಯೋರ್ವನು ಇದ್ದೇ ಇದ್ದನು. ಅವನನ್ನು ಅಲ್ಲಿ ಕುಳ್ಳಿರಿಸಿಕೊಂಡೇ ಬ್ರಿಟಿಷರು ಈ ದೇಶದಲ್ಲಿ ತಾವು ಮಾಡಬೇಕಾದ್ದೆಲ್ಲವನ್ನೂ ತಮ್ಮ ಚತುರೋಪಾಯಗಳನ್ನು ಉಪಯೋಗಿಸಿ ಮಾಡಿದರು.

ಪ್ಲಾಸೀ ಯುದ್ಧದನಂತರ Robert Clive ಇವನು ಬಂಗಾಳವನ್ನು ವಶಪಡಿಸಿಕೊಂಡು ಕಲ್ಕತ್ತಾದ Fort William ಕೋಟೆಯ ಗೋಡೆಯ ಮೇಲೆ ಕ್ರಿ. ಶ. 1757 ನೇ ವರ್ಷದ ಜನವರಿ ತಿಂಗಳಲ್ಲಿ ಬ್ರಿಟಿಷ್ ಪತಾಕೆಯನ್ನು ಹಾರಿಸಿ ಕಲ್ಕತ್ತಾವನ್ನೇ ಈ ದೇಶದ ರಾಜಧಾನಿಯೆಂದು ಸಾರಿದನು. ಅದರನಂತರ ತಾವು ವಶಪಡಿಸಿಕೊಂಡಿದ್ದ ವಸಾಹತ್ತುಗಳ ಆಳ್ವಿಕೆಗೆ ತಕ್ಕ ಕ್ರಮಗಳನ್ನು ನಿರ್ಮಿಸಿ ಆಧುನಿಕ ರೀತಿಯಲ್ಲಿ ಈ ದೇಶವನ್ನು ಕೊಂಡೊಯ್ಯಲು ಶ್ರಮಿಸಿದರು.

Warren Hastings ಮತ್ತು Lord Cornwallis ಇವರ ಕಾಲದಲ್ಲಿ ಇಂಗ್ಲಿಷ್ ಭಾಷೆಯನ್ನು ಬಂಗಾಳ ಮತ್ತು ಉತ್ತರ ಹಿಂದೂಸ್ಥಾನದ ಕೆಲವೆಡೆಗಳಲ್ಲಿ ಪ್ರಚಾರಪಡಿಸಲು ಶಾಲೆಗಳನ್ನು ಸ್ಥಾಪಿಸಲಾಗಿದ್ದುವು. ಕ್ರೈಸ್ತಮತ ಪ್ರಚಾರಕರೂ ಇದರಲ್ಲಿ ಆಸಕ್ತಿವಹಿಸಿದರು. ರಾಜ್ಯದ ಆಡಳಿತೆಗೆ ಪರ್ಶಿಯನ್ ಮತ್ತು ಇಂಗ್ಲಿಷ್ ಭಾಷೆಗಳೆರಡನ್ನೂ ಉಪಯೋಗಿಸುತ್ತಿದ್ದರು. ಇದಕ್ಕಾಗಿ ಭಾರತೀಯ ನ್ಯಾಯಶಾಸ್ತ್ರ ಗ್ರಂಥಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಐರೋಪ್ಯಾ ನೌಕರರಿಗೆ ಈ ದೇಶದ ಜನಜೀವನದ ಪರಿಚಯವನ್ನು ಮಾಡಿಕೊಡತೊಡಗಿದರು. ಇಂಗ್ಲಿಷ್ ಭಾಷೆಯು ಕ್ರಮೇಣವಾಗಿ ಮತ್ತು ಹೆಚ್ಚಾಗಿ ಉಪಯೋಗವಾಗತೊಡಗಿತು. ಈ ದೇಶದ ಜನರೂ ಇಂಗ್ಲಿಷನ್ನು ಕಲಿಯಲಿಕ್ಕೆ ಹಾತೊರೆದರು. ಸರಕಾರಿ ಕಚೇರಿಗಳಲ್ಲಿ ಪರ್ಶಿಯನ್ ಭಾಷೆಯ ಬದಲಾಗಿ ಇಂಗ್ಲಿಷನ್ನು ಬಳಸಲು ಆರಂಭಿಸಿದರು. ಹೀಗೆ ಇಂಗ್ಲಿಷನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದುದು ಕಂಡುಬಂದಾಗ ಕ್ರಿ. ಶ. 1796 ರಲ್ಲಿ Sri Charles Grant ಇವನು ಹೀಗೆ ಹೇಳಿದನು :—

" By planting our language, our knowledge, our opinions and our religion in our Asiatic territories, we shall put great work beyond the reach of contingencies......".

**೧೪. ಕಲ್ಕತ್ತಾದಲ್ಲಿ ಹಿಂದೂ ಭಾಷಾ ಶಾಲೆಯನ್ನು ಸ್ಥಾಪಿಸಿದರು :—**

ವಿವಿಧ ಜನಾಂಗ, ವಿವಿಧ ಸಂಸ್ಕೃತಿ, ವಿವಿಧ ಭಾಷೆ ಇತ್ಯಾದಿಗಳಿಂದ ಕೂಡಿದ ಈ

ವಿಶಾಲ ದೇಶವನ್ನು ಆಳಲು ಪಾಶ್ಚಾತ್ಯ ದೇಶಗಳಿಂದ ಆಗಿಂದಾಗ್ಗೆ ಬರುತ್ತಿದ್ದ ಬಿಳಿ ಜನಕ್ಕೆ ಈ ದೇಶದ ಭಾಷೆಗಳನ್ನು ಕಲಿಸಲು ಮತ್ತು ಅದಕ್ಕಾಗಿ ಒಂದು ಯೋಜನೆಯನ್ನು ತಯಾರಿಸಲು Marquess of Wellesley ಇವನು ಒಂದು ಸಮಿತಿಯನ್ನು ನೇಮಿಸಿದನು. ಆ ಸಮಿತಿಯಲ್ಲಿ W. B. Martin, W. Bayley, J. Sunderland, Prof H. H. Wilson –ಹೀಗೆ ಕೆಲವು ಭಾರತೀಯ ಭಾಷಾ ಪರಿಣತರು ಇದ್ದರು. ಇವರ ಸಲಹೆಯಂತೆ ಪಾಶ್ಚಾತ್ಯರಿಗೆ ಸಂಸ್ಕೃತ, ಪರ್ಷಿಯನ್, ಹಿಂದೂಸ್ಥಾನೀ, ಇತ್ಯಾದಿ ದೇಶೀಯ ಭಾಷೆಗಳನ್ನು ಕಲಿಸಲು ಒಂದು ಶಾಲೆಯನ್ನು ಕಲ್ಕತ್ತಾ ಅಥವಾ ಫೋರ್ಟ್ ವಿಲಿಯಂನಲ್ಲಿ ಸ್ಥಾಪಿಸಲಾಯಿತು.

ಈ ಭಾಷಾ ಶಾಲೆಯ ಆವಶ್ಯಕತೆಯನ್ನು ಕುರಿತು Marquess of Wellesley ಇವನು ಕಂಪೆನೀ ಸರಕಾರದ ಅಧಿಕಾರಿಗಳಿಗೆ 1800 ರಲ್ಲಿ ಬರೆದ ವರದಿಯಲ್ಲಿ ಹೀಗೆ ಹೇಳಿದೆ :—

"......The early education of the civil servants of the Company is the source from which will ultimately be derived the happiniss or misery of our native subjects and the stability of the Government, will bear a due proportion to its wisdom, liberality and justice......The expense of the institution will be provided for by a small contribution from all the civil servants in India......The early attention of the Governor-General will be directed to the Muhammaden College founded at Calcutta and the Hindu College at Benares .... These may be made the means of aiding the study of laws and languages in the College at Fort William......An establishment of Munshi and native teachers of the languages, under the control of the collegiate offices at Fort William, will be attached to the new college......".

ಈ ಫೋರ್ಟ್ ವಿಲಿಯಂ ಭಾಷಾ ಶಾಲೆಯಲ್ಲಿ ಸಂಸ್ಕೃತ, ಬಂಗಾಳಿ, ಇತ್ಯಾದಿ ಭಾಷೆಗಳನ್ನಲ್ಲದೆ ಈ ದೇಶಕ್ಕೆ ತಕ್ಕುದಾದ ಮತ್ತು ಇಲ್ಲಿಯ ಪರಿಸ್ಥಿತಿಗನುವಾದ ಆಡಳಿತ ನೀತಿಯನ್ನೂ ಹೊಸತಾಗಿ ಯೂರೋಪಿನಿಂದ ಬಂದ ನೌಕರರಿಗೂ ಭಾರತೀಯ ವಿದ್ಯಾರ್ಥಿಗಳಿಗೂ ಕಲಿಸುತ್ತಿದ್ದರು. ಇದರೊಡನೆಯೇ ದೇಶದಲ್ಲಿ ಪ್ರಾಥಮಿಕ ಶಾಲೆಗಳೂ ಕ್ರೈಸ್ತಮತ ಪ್ರಚಾರಕರ ಮೂಲಕ ಅಲ್ಲಲ್ಲಿ ಸ್ಥಾಪಿತವಾಯಿತು. ಅಂತೆಯೇ ಶ್ರೀರಾಂಪುರ ವಿದ್ಯಾಪೀಠವೊಂದು Rev. William Carey ಮತ್ತು J. Marshman ಇವರ ಉತ್ಸಾಹದಿಂದ ಉಚ್ಚವರ್ಗದ ಶಾಲೆಯಾಗಿ ಮಾರ್ಪಟ್ಟಿತು. ಇದನ್ನು ಕುರಿತು William Carey ಇವನು ತನ್ನ 1700 Folio ಪುಟಗಳ ರಾಮಾಯಣ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾನೆ :—

"The Asiatic Society and the College of Fort William being desirous of promoting the knowledge of the Literature of India, and, at the same time, of disclosing to the Learned in

Europe the stores which lie hid in the ancient languages of India, have accepted a proposal which has been made to them by the Brethren of the Mission of Serampore, of translating successively the principal works to be found in the Sanskrit language, particularly those held sacred by the Hindoos, or those which may be most illustrative of their history, or their religion, including also the principal works of science......".

**೧೫. ವಿದ್ಯಾಕ್ರಮ ಎಂತಿರಬೇಕೆಂಬುದನ್ನು ಕುರಿತು ವಾದಿಸಿದರು :—**

ಫೋರ್ಟ್‌ವಿಲಿಯಂ ಭಾಷಾಶಾಲೆಯು ಕೆಲವೇ ವರ್ಷಗಳಲ್ಲಿ ಅಭಿವೃದ್ಧಿಗೊಂಡು ಯೂರೋಪಿನಿಂದ ಬಂದ ಜನಕ್ಕೆ ಭಾರತೀಯ ಭಾಷೆಗಳಲ್ಲಿ ತಕ್ಕ ಪರಿಣತಿಯನ್ನು ಹೊಂದಲು ಸಹಾಯಕವಾಯಿತು. ಕ್ರಿ. ಶ. 1790 ರಿಂದ ಕಲ್ಕತ್ತಾ ಮತ್ತು ಕಾಶೀ ವಿದ್ಯಾಲಯಗಳೂ ಇದೇ ರೀತಿ ಮುಂದುವರಿದು ಉತ್ತಮ ಶಾಲೆಗಳೆಂದು ಪ್ರಸಿದ್ಧ ವಾದುವು. ಆದರೆ ಸರಕಾರೀ ನೌಕರರಾಗಿರತಕ್ಕಂಥಾ ಪಾಶ್ಚಾತ್ಯರು ತಮ್ಮ ಆರಂಭದ ತರಬೇತನ್ನು ಫೋರ್ಟ್‌ವಿಲಿಯಂ ಭಾಷಾಶಾಲೆಯಲ್ಲಿಯೇ ಹೊಂದಿರುತ್ತಿದ್ದರು. ಕ್ರೈಸ್ತ ಮತೋಪದೇಶಕರಾಗಿ ಬಂದವರು ಶ್ರೀರಾಂಪುರ ವಿದ್ಯಾಮಂದಿರದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದರು. ಇದರಲ್ಲಿ ಹಿಂದೂ ವಿದ್ಯಾರ್ಥಿಗಳು ಹಲವರು ಇರುತ್ತಿದ್ದರು. ಇದರ ಸ್ಥಾಪನೆಗೆ ಕಾರಣನಾದ William Carey ಇವನು ಒಮ್ಮೆ ಹೀಗೆ ಹೇಳಿದ್ದನು :—

"The Serampore College of Indian languages is a Christian Benares where Christian scholars would be steeped in Oriental and Western learning, and Indians of all castes would have access to all that the East and the West could provide ".

ಹೀಗೆ ಬ್ರಿಟಿಷ್ ಸರಕಾರವೂ ಕ್ರೈಸ್ತಮತ ಪ್ರಚಾರಕರೂ ಸಂಸ್ಕೃತ ಮತ್ತು ದೇಶೀಯ ಭಾಷೆಗಳನ್ನು ಪಾಶ್ಚಾತ್ಯರಿಗೂ ಭಾರತೀಯರಿಗೂ ಏಕಪ್ರಕಾರವಾಗಿ ಮತ್ತು ಶಾಸ್ತ್ರೀಯ ವಾಗಿ ಕಲಿಸುತ್ತಿದ್ದರು. ಈ ಎಲ್ಲಾ ಶಾಲೆಗಳಲ್ಲೂ ವಯಸ್ಕರಾದ ವಿದ್ಯಾರ್ಥಿಗಳ ಸಂಖ್ಯೆಯೂ ಎಷ್ಟೋ ಹೆಚ್ಚಿತು.

ಫೋರ್ಟ್‌ವಿಲಿಯಂ ಭಾಷಾಶಾಲೆಯನ್ನು ಸ್ಥಾಪಿಸಲು ಕಾರಣರಾದ ಆ ತಜ್ಞ ಸಮಿತಿಯು ಅದೇ ಬಗೆಯ ಶಾಲೆಗಳನ್ನು ಫೋರ್ಟ್‌ಡೇವಿಡ್ ಎಂದು ಕರೆಯಲ್ಪಟ್ಟಿದ್ದ ಬೊಂಬಾಯಿಯಲ್ಲೂ ಮತ್ತು ಫೋರ್ಟ್ ಸೆಂಟ್ ಜಾರ್ಜ್ ಎಂದು ಕರೆಯಲ್ಪಡುತ್ತಿದ್ದ ಮದ್ರಾಸಿನಲ್ಲೂ ಸ್ಥಾಪಿಸಬೇಕೆಂದು ಹಿಂದೆಯೇ ಸೂಚಿಸಿತ್ತು. ಆದರೆ ಆ ಕಾಲದಲ್ಲಿ ಬ್ರಿಟಿಷ್ ಅಧಿಕಾರಿಗಳೊಳಗೆ ಎರಡು ಪಕ್ಷಗಳಿದ್ದು ಅವುಗಳಲ್ಲಿ ಒಂದು ಪಕ್ಷವು ಈ ದೇಶ ದಲ್ಲಿ ಇಂಗ್ಲಿಷ್ ಭಾಷೆ ಮತ್ತು ಇಂಗ್ಲಿಷ್ ವಿದ್ಯಾಕ್ರಮಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಬೇಕೆಂದು ಹೇಳಿತು. ಇನ್ನೊಂದು ಪಕ್ಷವು Colebrooke, Carey, Wilson ಮೊದಲಾದ ಪ್ರಬಲ ಸಂಸ್ಕೃತ ವಿದ್ವಾಂಸರ ಬೆಂಬಲದಿಂದ ಭಾರತೀಯ ಭಾಷಾ ಬೆಳವಣಿಗೆ ಮತ್ತು ಸಾಹಿತ್ಯ ಸಂಶೋಧನೆಗೆ ಹೆಚ್ಚು ಅವಕಾಶವನ್ನು ಕಲ್ಪಿಸ ಬೇಕೆಂದು ಹೇಳಿತು. ಹೀಗೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಕಳೆದ ಶತ

ಮಾನದ ಆರಂಭದಲ್ಲಿ ಹತ್ತಿಪ್ಪತ್ತು ವರ್ಷಗಳವರೆಗೂ ಇದ್ದುವು. ಅದರೊಡನೆಯೇ Lord Baron Minto ಮತ್ತು Marquess of Hastings ಇವರ ಅಧಿಕಾರಾವಧಿಯಲ್ಲಿ ಭಾರತೀಯ ಸಾಹಿತ್ಯ ಸಂಶೋಧನೆ ಮತ್ತು ಐತಿಹಾಸಿಕ ಪರಿಶೋಧನೆಯ ಕಾರ್ಯವೂ ಭರದಿಂದ ಮುಂದುವರಿಸಲ್ಪಟ್ಟಿತು.

**೧೬. ಮದ್ರಾಸಿನಲ್ಲಿ ದೇಶೀಯ ಭಾಷಾ ಶಾಲೆಯನ್ನು ಸ್ಥಾಪಿಸಿದರು :—**

ಮದ್ರಾಸಿನಲ್ಲಿ ಇಂಥಾ ಒಂದು ದೇಶೀಯ ಭಾಷಾಶಾಲೆಯು ಕ್ರಿ. ಶ 1812 ರ ಮೇ ತಿಂಗಳಲ್ಲಿ ಸ್ಥಾಪಿತವಾಯಿತು. ಕಲ್ಕತ್ತೆ ಮತ್ತು ಬೊಂಬಾಯಿ ಶಾಲೆಗಳಲ್ಲಿ ಇದ್ದಂತೆ ಸಂಸ್ಕೃತ ಭಾಷೆಯ ಜತೆಗೆ ಪ್ರಾದೇಶಿಕ ಭಾಷೆಗಳಾದ ಕನ್ನಡ, ತಮಿಳು, ತೆಲಗು, ಮಲೆಯಾಳ, ಒರಿಯಾ, ಉರ್ದೂ ಮತ್ತು ಪರ್ಷಿಯನ್ ಇವುಗಳನ್ನು ಕಲಿಸುತ್ತಿದ್ದರು. ಪ್ರತಿಯೋರ್ವ ವಿದ್ಯಾರ್ಥಿಯೂ ಇವುಗಳಲ್ಲಿ ಒಂದೆರಡು ಭಾಷೆಗಳನ್ನು ಐಚ್ಛಿಕವಾಗಿ ತೆಗೆದುಕೊಂಡು ಕಲಿಯಬೇಕಾಗಿತ್ತು. ಆಯಾ ಭಾಷೆಗಳಲ್ಲಿ ಪರಿಣತರಾದ ಪಂಡಿತರನ್ನೂ ನೇಮಿಸಿದರು. ಈ ಶಾಲೆಯ ಆಡಳಿತ ಮಂಡಳಿಯಲ್ಲಿ ಮೂರು ಜನ ಸರಕಾರದ ಅಧಿಕಾರಿಗಳು ಸದಸ್ಯರಾಗಿದ್ದರು. ಯಾವುದಾದರೂ ಒಂದೆರಡು ಭಾಷೆಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ ಪಾಶ್ಚಾತ್ಯರಿಗೆ ಸರಕಾರವು ಪ್ರತಿ ವರ್ಷವೂ ರೂ. 1000 ದಂತೆ ಸಂಭಾವನೆಯನ್ನು ಕೊಟ್ಟು ಪ್ರೋತ್ಸಾಹಿಸಿತು. ಶ್ರೇಷ್ಠದರ್ಜೆಯಲ್ಲಿ ಉತ್ತೀರ್ಣರಾದವರಿಗೆ ಚಿನ್ನದ ಪದಕಗಳನ್ನಿತ್ತು ಸನ್ಮಾನಿಸಿದರು.

ಈ ದೇಶದ ಭಾಷೆಗಳು ಪುರಾತನವಾದುವೆಂದೂ ಸಾಹಿತ್ಯ ಸಂಪತ್ತಿನಿಂದ ತುಂಬಿದ್ದುವೆಂದೂ ಬ್ರಿಟಿಷರು ಅಂದೆಯೇ ತಿಳಿದಿದ್ದರು. ಅಂಥಾ ಭಾಷೆಗಳು ಅದೇಕೋ ಹಿಂದೆ ಬಿದ್ದಿವೆಯೆಂಬುದನ್ನು ಮನಗಂಡು ಅವುಗಳ ಅಭಿವೃದ್ಧಿಗಾಗಿ ಶ್ರಮಿಸಿದರು. ಮದ್ರಾಸು ಸರಕಾರವು ಈ ಸಂದರ್ಭದಲ್ಲಿ ಒಂದು ಹೇಳಿಕೆಯನ್ನು ಹೊರಡಿಸಿದಾಗ ಅವರು ಹೀಗೆಂದರು :—

"The general neglect of the country's languages, was attributed to the want of sufficient encouragement by the Government."

ಪಾಶ್ಚಾತ್ಯರಿಗೆ ಈ ದೇಶದ ಭಾಷೆಗಳನ್ನು ಕಲಿಸುವ ಅವರ ಇನ್ನೊಂದು ಉದ್ದೇಶವೇನಿತ್ತೆಂದರೆ ಅವರಿಗೆ ಈ ದೇಶದ ರಾಜ್ಯಾಡಳಿತೆಯನ್ನೂ ಸುಗಮವಾಗಿ ಸಾಗಿಸಲು ಅನುಕೂಲತೆಯನ್ನೊದಗಿಸುವುದೂ ಆಗಿತ್ತು. ಆ ಕಾರಣದಿಂದ ಮದ್ರಾಸು ಸರಕಾರವು 1812 ರಲ್ಲಿ ಈ ಭಾಷಾಶಾಲೆಯನ್ನು ಸ್ಥಾಪಿಸುವಾಗ ಈ ದೇಶೀಯ ಭಾಷೆಗಳನ್ನು ಕಲಿಸುವುದು, "for the exclusive purpose of expediting and perfecting the preparation of candidates for those important public offices." ಎಂದು ಹೇಳಿದರಲ್ಲದೆ ಸರಕಾರೀ ಹುದ್ದೆಯನ್ನು ಈ ದೇಶದಲ್ಲಿ ಪಡೆಯುವ ಪಾಶ್ಚಾತ್ಯರು ಆಯಾ ಭಾಗದಲ್ಲಿ ಪ್ರಚಾರವಿರುವ ಒಂದೆರಡು ಭಾಷೆಗಳನ್ನು ಕಲಿತರೆ, "their personal advantage and

public interests were equally served," ಎಂಬುದಾಗಿಯೂ ಅಭಿಪ್ರಾಯಪಟ್ಟರು. ಹೇಗೂ ತಮ್ಮ ವೈಯ್ಯಕ್ತಿಕ ಅನುಕೂಲತೆ ಮತ್ತು ರಾಜ್ಯಾಡಳಿತೆಯನ್ನು ಸುಗಮವಾಗಿ ನಡೆಸುವ ಸಾಧ್ಯತೆ, ಇವೆರಡು ಧ್ಯೇಯಗಳನ್ನೂ ಅವರು ಪರಿಗಣಿಸಿದುದಲ್ಲದೆ ಆ ಮೂಲಕ ಅವರ ಪೈಕಿ ಪ್ರಬಲ ವಿದ್ವತ್ತನ್ನು ಸಂಪಾದಿಸಿದ ಪಾಶ್ಚಾತ್ಯ ಭಾಷಾಶಾಸ್ತ್ರಜ್ಞರ ಮೂಲಕ ಈ ದೇಶದ ಸಾಹಿತ್ಯ ಮತ್ತು ಐತಿಹಾಸಿಕ ಸಂಶೋಧನಾ ಕಾರ್ಯವನ್ನೂ ಬ್ರಿಟಿಷ್ ಸರಕಾರವು ಬಹು ಜಾಣ್ಮೆಯಿಂದ ನಡೆಸಿತು ಎಂಬುದನ್ನೂ ಗಮನಿಸಬೇಕಾಗಿದೆ.

**೧೭. ಭಾರತೀಯರು ತಮಗೆ ಪಾಶ್ಚಾತ್ಯವಿದ್ಯೆ ಬೇಕೆಂದು ಹೇಳಿದರು ;—**

ಕ್ರಿ. ಶ. 1800 ರಿಂದ ಸುಮಾರು ಮೂವತ್ತು ವರ್ಷಗಳ ಅವಧಿಯಲ್ಲಿ ಹಿಂದೂಸ್ಥಾನದ ಎಲ್ಲಾ ಭಾಗಗಳಲ್ಲೂ ನೂರಾರು ಐರೋಪ್ಯಾ ಸಾಹಿತಿಗಳೂ ಕ್ರೈಸ್ತಮತ ಪ್ರಚಾರಕರೂ ಈ ದೇಶದ ಎಲ್ಲಾ ಭಾಷೆಗಳಲ್ಲೂ ವ್ಯಾಕರಣ, ನಿಘಂಟು, ಪ್ರಾಚೀನ ಕಾವ್ಯಗಳ ಭಾಷಾಂತರ, ಇತ್ಯಾದಿಗಳ ರಚನೆಯಲ್ಲಿ ನಿರತರಾದರು. ಸಾಹಿತ್ಯ ಸಂಶೋಧನೆ ಮತ್ತು ಐತಿಹಾಸಿಕ ವಿಚಾರಗಳ ಪರಿಶೋಧನೆ ಕಾರ್ಯಗಳು ಬಿರುಸಾಗಿ ನಡೆದು ಈ ದೇಶದ ಜನರಿಗೆ ತಿಳಿಯದೇ ಇದ್ದ ಹಲವು ವಿಚಾರಗಳು ಬೆಳಕಿಗೆ ಬಂದುವು. ತಮ್ಮ ಸಾಹಿತ್ಯವೂ ಪ್ರಾಚೀನ ಚಾರಿತ್ರಿಕ ವಿವರಗಳೂ ಅಪಾರವಾಗಿವೆಯೆಂಬುದನ್ನು ಆಗ ಈ ದೇಶದ ಜನರು ತಿಳಿದರು. ಸಂಸ್ಕೃತ ಮತ್ತು ಇತರ ಭಾಷಾ ಶಾಲೆಗಳೂ ಅಲ್ಲಲ್ಲಿ ತೆರೆಯಲ್ಪಟ್ಟವು. ಕಲ್ಕತ್ತಾ, ಕಾಶೀ, ಬೊಂಬಾಯಿ, ಪೂನಾ, ಹೀಗೆ ಇನ್ನೂ ಹಲವು ಕೇಂದ್ರಗಳಲ್ಲಿ ಇದ್ದ ವಿದ್ಯಾ ಮಂದಿರಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದುವು. ಈ ರೀತಿ ಸಂಸ್ಕೃತ ಮತ್ತು ಇತರ ಭಾಷೆಗಳನ್ನು ಶಾಸ್ತ್ರೀಯವಾಗಿ ಕಲಿಯುವವರ ಸಂಖ್ಯೆಯು ಏರಿದಾಗ ಆಯಾ ಭಾಷಾ ಸಾಹಿತ್ಯಗಳ ಪುನರುದ್ಧಾರದ ಚಿಹ್ನೆಯು ಎಲ್ಲೆಡೆಯೂ ತೋರಿತು.

ಆದರೆ ಬ್ರಿಟಿಷರು ಸ್ಥಾಪಿಸಿದ ಈ ಹಲವು ಭಾಷಾ ಪಾಠಶಾಲೆಗಳು ಈ ದೇಶದ ಜನಕ್ಕೆ ಅಷ್ಟೇನೂ ಹಿಡಿಸಲಿಲ್ಲ. ಈ ದೇಶದ ಮಕ್ಕಳಿಗೆ ಆಧುನಿಕ ವಿದ್ಯಾವ್ಯಾಸಂಗಕ್ಕೆ ಅನುವೀಯದೆ ಸಹಸ್ರಾರು ವರ್ಷಗಳಿಂದಲೇ ಇರುವ ಸಂಸ್ಕೃತ ಮತ್ತು ಪ್ರಾಂತೀಯ ಭಾಷೆಗಳನ್ನು ಕಲಿಸುವುದರಲ್ಲಿ ಏನು ಪ್ರಯೋಜನವೆಂದು ಅವರು ಬ್ರಿಟಿಷ್ ಸರಕಾರದ ವಿರುದ್ಧವಾಗಿ ಗುಲ್ಲೆಬ್ಬಿಸಿದರು. ಇವರಲ್ಲಿ ಪ್ರಮುಖನು ಬಂಗಾಳದ ರಾಜಾ ರಾಮಮೋಹನ ರಾಯನು ! ಕ್ರಿ. ಶ. 1827 ರಲ್ಲಿ ಕಲ್ಕತ್ತಾದಲ್ಲಿ ಸಂಸ್ಕೃತ ವಿದ್ಯಾಲಯದ ಕಟ್ಟಡಕ್ಕೆ ಅಸ್ತಿಭಾರವನ್ನು ಹಾಕುವ ಸಮಯದಲ್ಲಿ ಅವನು ಅಂದಿನ Governor-General Lord Amherst ಇವನಿಗೆ ಬರೆದ ಒಂದು ಪತ್ರದಲ್ಲಿ ಈ ರೀತಿ ಹೇಳಿದನು :—

"......We were filled with sanguine hopes that this sum would be laid out in employing European gentlemen of talent and education to instruct the natives of India in mathematics, natural philosophy, chemistry, anatomy and other useful

sciences which the nations of Europe have carried to a degree of perfection that have raised them above the inhabitants of other parts of the world We looked forward with pleasing hope to the dawn of knowledge thus promised to the rising generation. We find that the Government are establishing a Sanskrit School under Hindu pandits to impart the same knowledge as is already current in India ......The pupils will there acquire what was known 2,000 years ago with the addition of vain and empty subtleties since produced by speculative men......"
ಇದೇ ಅಭಿಪ್ರಾಯವನ್ನು ದೇಶದ ಎಲ್ಲಾ ಭಾಗದ ಜನರೂ ಎತ್ತಿದರು. ಎಲ್ಲೆಲ್ಲೂ ತಮಗೆ ಪಾಶ್ಚಾತ್ಯ ವಿದ್ಯೆ, ಆಂಗ್ಲೇಯ ಭಾಷೆ, ಶಾಲೆಗಳು, ಅವಕ್ಕೆ ತಕ್ಕುದಾದ ಆಧುನಿಕ ತರಹದ ಕಟ್ಟಡಗಳು, ಇತ್ಯಾದಿ ಬೇಕೆಂಬುದಾಗಿ ಜನರು ಬ್ರಿಟಿಷ್ ಸರಕಾರಕ್ಕೆ ಮನವಿಗಳನ್ನು ಬರೆದು ಕೇಳಿಕೊಂಡರು :—

"......The great influx of the European settlers......makes the education of our children all the more necessary to our minds since our own ignorance renders our intercourse with them most difficult, unsatisfactory and disadvantageous......We earnestly wish that our daughters also should receive some education......We, there-fore, beg of the Government to have all the rcquired buildings .....How much nobler would be the task if our present rulers assisted us in erecting the desired building for our sons and daughters and entertained them in the halls of wisdom and knowledge......"*

**೧೮. ಲಾರ್ಡ್ ಮೆಕ್ಕಾಲೆಯ ಅಧಿಕಪ್ರಸಂಗವನ್ನು ಸಹಿಸದಾದರು :—**

ಭಾರತೀಯರೇ ಈರೀತಿ ತಮಗೆ ದೇಶೀಯ ಭಾಷೆಗಳ ಶಿಕ್ಷಣವು ಬೇಡವೆಂದೂ ಹೊಸ ಜ್ಞಾನವಿಕಾಸಕ್ಕೆ ಅವಕಾಶವನ್ನೀಯಬೇಕೆಂದೂ ಹೇಳುವಾಗ ಸುಮಾರು 1830ರ ಕಾಲದಲ್ಲಿ, ಆ ಐರೋಪ್ಯ ವಿದ್ವಾಂಸರೊಳಗೆ ಇದ್ದ ಎರಡು ಅಭಿಪ್ರಾಯ ಭೇದಗಳ ಪಕ್ಷಗಳು ಆ ವಿಷಯವಾಗಿ ವಾದಿಸುತ್ತಲೇ ಇದ್ದರು. ಇಂಗ್ಲಿಷನ್ನು ಖಡ್ಡಾಯವಾಗಿ ಈ ದೇಶದ ಜನರಿಗೆ ಕಲಿಸಬೇಕೆಂದು ಹೇಳುತಿದ್ದ ಒಂದು ಪಕ್ಷವು ಸಂಸ್ಕೃತ ಮತ್ತು ಇತರ ದೇಶೀಯ ಭಾಷೆಗಳಲ್ಲಿ ಯಾವ ಹುರುಳೂ ಇಲ್ಲವೆಂದೂ ಹೇಳುತ್ತಾ ಇದ್ದರು. ಆದಕ್ಕೆ ಸಾಕ್ಷ್ಯವಾಗಿ ಅವರು ರಾಜಾರಾಮ ಮೋಹನರಾಯನು ಮೇಲೆ ಹೇಳಿದ ಮಾತುಗಳನ್ನು ಉದಾಹರಿಸುತ್ತಾ ಭಾರತದಲ್ಲಿ ಆಂಗ್ಲ ವಿದ್ಯೆಯನ್ನು ಕಲಿಸಲು ಏರ್ಪಡಿಸಬೇಕೆಂದು ಸರಕಾರವನ್ನು ಕೇಳಿಕೊಂಡರು.

ಇದಕ್ಕನುಸಾರವಾಗಿ Lord Macaulay ಇವನ ವಿದ್ಯಾಯೋಜನೆ

* A petition by the people of Kodagu in 1860.

ಯೊಂದು ಕ್ರಿ. ಶ. 1832ರ ಒಳಗಾಗಿ ಸಿದ್ಧವಾಯಿತು. ದೇಶೀಯರಿಗೆ ಆಧ ನಿಕ ವಿದ್ಯಾಭ್ಯಾಸವನ್ನೀಯಬೇಕೆಂದು ಆಗ ಕೋರಿಕೆಗಳು ಹಲವು ಇದ್ದವಾದರೂ Lord Macaulay ಇವನು ಸಂಸ್ಕೃತ, ಪರ್ಷಿಯನ್ ಇತ್ಯಾದಿ ಭಾಷೆಗಳು ಕೇವಲ ನಿಷ್ಪ್ರಯೋಜನವಾದುವುಗಳೆಂದೂ ಅವುಗಳಲ್ಲಿ ಉತ್ತಮ ಗ್ರಂಥಗಳು ಯಾವುವೂ ಇಲ್ಲವೆಂದೂ ಹೇಳಿ ಈ ದೇಶದ ಪೌರಾಣಿಕ ವಿದ್ಯಾಸಂಪತ್ತನ್ನು ಅಲ್ಪವಾದುದೆಂದು ತನ್ನ ಶಿಕ್ಷಣಯೋಜನೆಯಲ್ಲಿ ಮೂದಲಿಸಿದ್ದನ್ನು ದೇಶೀಯರು ಸಹಿಸದಾದರು. ಇಂಗ್ಲಿಷ್ ಜ್ಞಾನ, ಇಂಗ್ಲಿಷ್ ಶಿಕ್ಷಣಕ್ರಮ, ವಿಜ್ಞಾನ, ಗಣಿತ, ಭೂಗೋಳ ಶಾಸ್ತ್ರಾದಿಗಳನ್ನೆಲ್ಲಾ ಕಾಲದ ಪರಿಸ್ಥಿತಿಗೆ ತಕ್ಕಂತೆ ಕಲಿಸಬೇಕೆಂದು ಹೇಳಿದಾಗ ಅವನು ಈ ದೇಶದ ಭಾಷೆಗಳನ್ನೂ ಸಾಹಿತ್ಯವನ್ನೂ ಕುರಿತು ಹೇಳಿದ ಮಾತುಗಳು ಅಧಿಕ ಪ್ರಸಂಗವೆಂದೇ ಹೇಳಬಹುದಾಗಿದೆ. ಆದರೂ ಅವನ ಹೇಳಿಕೆಯು ಒಂದು ವಿಧದಲ್ಲಿ ಸ್ವಾರಸ್ಯವಿದೆ :—

"The whole question seems to be which language is the best worth-knowing. I have no knowledge of either Sanskrit or Arabic. But I have done what I could to form a correct estimate of their value. I have read translalions of the best Arabic and Sanskrit works ...I am quite willing to take the Oriental learning at the valuation of orientalists themselves. I have never found one among them who could deny that a single shelf of a good European library was worth the whole native literature of India and Arabia...I certainly never met with an Orientalist who ventured to maintain that the Arabic and Sanskrit poetry could be compared to that of the great European nations......".

**೧೯. ಮೆಕ್ಕಾಲೆಯ ಹೇಳಿಕೆಯನ್ನು ಅವನ ಮಿತ್ರರೇ ಪ್ರತಿಭಟಿಸಿದರು :—**

Lord Maeaulay ಇವನು ಓರ್ವ ಶಿಕ್ಷಣತಜ್ಞನು, ಸಮರ್ಥರಾಜಕಾರಣಿ ಮತ್ತು ಮೇಧಾವಿ! ಇವನ ವಿದ್ಯಾಯೋಜನೆಯು ಆಧುನಿಕ ಭಾರತದ ವಿದ್ಯಾಪ್ರಗತಿಗೆ ತಕ್ಕ ತಳಹದಿಯನ್ನು ಹಾಕಿತು. ಇಂಗ್ಲಿಷ್ ಭಾಷೆಯನ್ನು ತಮ್ಮ ಆಡಳಿತದ ಅನುಕೂಲತೆಗೂ ಜನತೆಯ ಜ್ಞಾನಾಭಿವೃದ್ಧಿಯ ಸಲುವಾಗಿಯೂ ಜಾರಿಗೆ ತರುವಂತೆ ಮಾಡಿದ್ದಲ್ಲದೆ ವಿಜ್ಞಾನ, ಗಣಿತ, ಇತಿಹಾಸ, ನ್ಯಾಯಶಾಸ್ತ್ರ, ತರ್ಕಶಾಸ್ತ್ರ, ವೈದ್ಯಕೀಯವೆಲ್ಲವನ್ನೂ ಶಾಸ್ತ್ರೀಯವಾಗಿ ಕಲಿಸುವ ದೃಷ್ಟಿಯಿಂದ ಹೊಸ ಸಲಹೆಗಳನ್ನೂ ಸರಕಾರಕ್ಕೆ ಇತ್ತನು.

ಆದರೆ ಆ ಶಿಕ್ಷಣ ಸಮಿತಿಯಲ್ಲಿ ಇದ್ದ ಕೆಲವು ನಿಷ್ಠಾವಂತರಾದ ಪೌರಸ್ತ್ಯ ವಿದ್ವಾಂಸರಾದ ಆಂಗ್ಲೇಯರು Macaulay ಇವನ ಅಭಿಪ್ರಾಯವನ್ನು ಸುಲಭದಲ್ಲಿ ಒಪ್ಪಲಿಲ್ಲ. ಅವನಿಗೆ ಉತ್ತರವಾಗಿ Mc. Naughton, James Prinsep ಮತ್ತು ಕೆಲವರು ಈ ದೇಶದ ಸಾಹಿತ್ಯ ಸಂಪತ್ತನ್ನು ಕುರಿತು ಈ ರೀತಿ ಹೇಳಿದ್ದು ಸಮಂಜಸವಾಗಿದೆ :—

*......Some degree of moderation is required......Gentlemen without any pretensions to Oriental eruditions are declaring their belief that the cherished literature of some 100 millions of people is an unmixed mass of falsehood and absurdity......We would earnestly suggest that no exclusive preference should be shown to the cultivation of English language .....".

ಹೇಗೂ ಅಲ್ಲಿಂದ ನಂತರ ಬ್ರಿಟಿಷ್ ಸರಕಾರವೂ ಐರೋಪ್ಯ ಸಾಹಿತಿಗಳೂ ಭಾರತೀಯ ವಿದ್ಯೆಗೆ ತಕ್ಕಷ್ಟು ಪ್ರೋತ್ಸಾಹವನ್ನು ಕೊಡುತ್ತಾ ಬಂದರು. ಅವರಲ್ಲಿ ಹಲವರು ಸಂಸ್ಕೃತ ಭಾಷೆಯ ಮಹತ್ವವನ್ನು ಇನ್ನಷ್ಟು ಕೊಂಡಾಡಿದರು. ಹಿಂದೂ ನ್ಯಾಯ ಶಾಸ್ತ್ರವನ್ನು ಆದ್ಯಂತವಾಗಿ ಪರಿಸಿದ್ದ Jones, Halhed, Colebrooke ಮೊದಲಾದವರು ಪ್ರಾಚೀನ ಭಾರತದ ರಾಜಕೀಯ, ಸಾಮಾಜಿಕ ಮತ್ತು ನೈತಿಕ ಜೀವನವನ್ನು ಪ್ರಶಂಸಿಸಿದರು. ಅಲ್ಲದೆ ಪ್ರಸಿದ್ಧ ನ್ಯಾಯಶಾಸ್ತ್ರಜ್ಞನಾದ Sir Henry Maine ಇವನು Macaulay ಇವನಿಗೆ ಕೊಟ್ಟ ಉತ್ತರವೋ ಎಂಬಂತೆ ಈ ರೀತಿ ಹೇಳಿದನು :—

*..... For India not only contains an Aryan language older than any other descendant of the common mother-tongue, and a variety of natural objects less perfectly crystallised than elsewhere into fabulous personages, but it includes a whole world of Aryan institutions, Aryan customs, Aryan laws, Aryan ideas, in a far earlier stage of growth and development than any which survive beyond its borders .....".

ವೇದೋಪನಿಷತ್ತುಗಳನ್ನೂ ಸಂಸ್ಕೃತ ಕಾವ್ಯಶಾಸ್ತ್ರಾದಿ ಗ್ರಂಥಗಳನ್ನೂ ಓದಿದ್ದ ಈ ನ್ಯಾಯಾಧೀಶನು ಸಂಸ್ಕೃತ ಭಾಷೆಯನ್ನು ಬಿಟ್ಟರೆ ತುಲನಾತ್ಮಕವಾದ ನ್ಯಾಯ ಶಾಸ್ತ್ರವೇ ಲೋಕದಲ್ಲಿ ಇರಲಾರದು ಎಂದು ಸಾರಿ ಹೇಳಿದ್ದಾನೆ. ಅವನ ಹೇಳಿಕೆಯಂತೆ "Without Sanskrit, the science of comparative Jurisprudence cannot come into existence." ಇದು ಅತ್ಯುಕ್ತಿಯಲ್ಲ ಎಂಬುದನ್ನು ಹಿಂದೂ ನ್ಯಾಯಶಾಸ್ತ್ರವನ್ನು ವ್ಯಾಸಂಗಮಾಡಿದ ಯಾವನೂ ಒಪ್ಪಬೇಕಾಗಿದೆ.

---

೪

"ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿ ಸಂತತಿ
ವಾಮನಕ್ರಮಂ।
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರ
ನೊತ್ತಿ ಗಂಟಲಂ।
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊ
ಳೊತ್ತಿ ಕಟ್ಟಿದರ್।
ಮುಟ್ಟಿದರೊತ್ತಿ ಮೆಟ್ಟಿದರದೇನಳವಗ್ಗಳ
ವೋ ಕವೀಂದ್ರರಾ॥

[ನೇಮಿಚಂದ್ರ]

ಕ್ರಿ. ಶ. 18 ನೇ ಶತಮಾನದ ಅಂತ್ಯದಲ್ಲಿ ಆರಂಭವಾದ ಈ ದೇಶದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಅನ್ವೇಷಣೆಯ ಪರಿಮಿತಿಯನ್ನು ನಮ್ಮ ಹಿಂದಿನ ಸಾಹಿತಿಗಳು ಮತ್ತು ಇತಿಹಾಸಕಾರರು ತಕ್ಕ ರೀತಿಯಲ್ಲಿ ಪರಿಶೀಲಿಸಿರುವರೇ ಎಂಬ ಸಂದೇಹ ವುಂಟಾಗಿದೆ :—

"The decline of learning in India was very much noticeable at the end of the eighteenth century. Long continued acquiescence in an old system had brought about almost universal torpor of the national mind ......"*

ಆ ವರೆಗೂ ಮಹಮ್ಮದೀಯರ ಕರಾಳ ಕೃತ್ಯ ಮತ್ತು ದುರಾಡಂಭರದ ಆಳ್ವಿಕೆಯ ಪರಿಣಾಮವಾಗಿ ಹಿಂದೂದೇಶವು ಬಹುಮಟ್ಟಿಗೆ ಎಲ್ಲಾ ವಿಧದಲ್ಲೂ ಹಿಂದಕ್ಕೆ ಸರಿದಿತ್ತು. ದೇಶೀಯ ಸಾಹಿತ್ಯ ಸಂಸ್ಕೃತಿಗಳಂತೂ ಬಹುಮಟ್ಟಿಗೆ ಮೂಲೆಪಾಲಾಗಿತ್ತು. ಆ ವರೆಗೂ ಕನ್ನಡ ಮತ್ತು ಇತರ ಪ್ರಾಂತೀಯ ಭಾಷೆಗಳು ಬರೇ ಗ್ರಾಮೀಣರಾಡಿಕೊಳ್ಳುತ್ತಿದ್ದ ಭಾಷೆಗಳೆಂದು ಒಂದು ವಿಧದ ಭಾವನೆಯು ಜನಸಾಮಾನ್ಯರಲ್ಲಿ ಇದ್ದಿತು. ಸಂಸ್ಕೃತವು ಗೀರ್ವಾಣ ಭಾಷೆಯೆಂದೂ ಪರ್ಶಿಯನ್ ರಾಜಭಾಷೆಯೆಂದೂ ಆ ಕಾಲಕ್ಕೆ ಇದ್ದುದರ ಬದಲಾಗಿ ಇಂಗ್ಲಿಷ್ ರಾಜಭಾಷೆಯಾಯಿತು. ಹಾಗಿದ್ದರೂ ಮೃತವಾದುವೆಂದೆಣಿಸಲ್ಪಟ್ಟ ಸಂಸ್ಕೃತ ಮತ್ತು ದೇಶೀಯ ಭಾಷೆಗಳಲ್ಲಿರುವ ಪುರಾತನ ಗ್ರಂಥಸಂಪತ್ತಿನ ಅನ್ವೇಷಣೆಗೆ ಪಾಶ್ಚಾತ್ಯ ವಿದ್ವಾಂಸರು ಒಡನೆಯೇ ಇಳಿದರು.

ಅಷ್ಟೇ ಅಲ್ಲ, 1781 ರಿಂದ ಮೊದಲ್ಗೊಂಡು ಈ ದೇಶದ ಜನವನ್ನು ಆಧುನಿಕ ವಿದ್ಯೆಯನ್ನಿತ್ತು ಮುಂದಕ್ಕೆ ತರಲು ಕುಂಪೆನೀ ಸರಕಾರವು ನಿರ್ಧರಿಸಿದಲ್ಲದೆ Warren Hastings ಇವನ ಪ್ರೇರಣೆಯಂತೆ ಕಲ್ಕತ್ತಾದಲ್ಲಿ ಒಂದು ಆಂಗ್ಲ ಪಾಠಶಾಲೆಯನ್ನು ತೆರೆದರು. ಆಧುನಿಕ ವಿದ್ಯಾ ವ್ಯಾಸಂಗಕ್ಕೆ ತಕ್ಕ ಪ್ರೋತ್ಸಾಹವನ್ನಿತ್ತರು. 1792 ರಲ್ಲಿ ಕಾಶಿಯಲ್ಲಿ ಒಂದು ಸಂಸ್ಕೃತ ಶಾಲೆಯನ್ನು ಸ್ಥಾಪಿಸಿದರು. ಪ್ರಸಿದ್ಧ ಸಾಹಿತಿ

* The Calcutta University Volume (1957)

Jonathan Scott ಇವನು ಸಂಸ್ಕೃತ ಮತ್ತು ದೇಶೀಯ ಭಾಷಾಶಾಲೆಗಳನ್ನು ಸ್ಥಾಪಿಸಿ ಅವುಗಳನ್ನು ಆಧುನಿಕ ರೀತಿಯಲ್ಲಿ ನಡೆಸಲು ತುಂಬಾ ಶ್ರಮವಹಿಸಿದನು.

**೨. ಭಾರತೀಯರು ತಮ್ಮ ಸಾಂಸ್ಕೃತಿಕ ನೀತಿಯಲ್ಲಿ ತಪ್ಪಿದ್ದರು:—**

ಈ ದೇಶದ ಜನರು ಹಿಂದಿನ ಕೆಲವು ಶತಮಾನಗಳ ಕಾಲ ಮುಂದುವರಿಯದೆ ಹಿಂದುವರಿದಿದ್ದರೆ ಅದಕ್ಕೆ ಕಾರಣ ಭಾರತೀಯರೇ ಅಲ್ಲದೆ ಇತರರಲ್ಲ. ಹಾಗಾಗಲು ಕಾರಣವು ನೂರಾರು ಇವೆ. ಕಳೆದ ಶತಮಾನದಲ್ಲಿ ಕೆಲವು ಜರ್ಮನ್, ಫ್ರೆಂಚ್ ಮತ್ತು ಆಂಗ್ಲ ವಿದ್ವಾಂಸರು ವೇದಾಭ್ಯಾಸವನ್ನು ಮಾಡಿದ ರೀತಿಯಲ್ಲಿ, ಮತ್ತು ಅವುಗಳ ಮೇಲೆ ವ್ಯಾಖ್ಯಾನವನ್ನು ಬರೆದ ಪ್ರಮಾಣದಲ್ಲಿ ಕಳೆದ 300 ಯಾ 400 ವರ್ಷಗಳ ಕಾಲದ ಹಿಂದೂಸ್ಥಾನದಲ್ಲಿ ಇನ್ನಾರು ಅಂಥಾ ವೇದಾಂತಿಗಳಾಗಿದ್ದರೆಂದು ಹುಡುಕಬೇಕಾಗಿದೆ. ಶಂಕರ, ಮಧ್ವ, ಚೈತನ್ಯ, ಸಾಯಣಾಚಾರ್ಯರೇ ಕೆಲವರನ್ನು ಬಿಟ್ಟರೆ ಇನ್ನೆಷ್ಟು ಜನರು ಕಳೆದ ಶತಮಾನದಲ್ಲಿ ನಾಲ್ಕಾರು ಜರ್ಮನ್ ವಿದ್ವಾಂಸರು ಬರೆದ ಪ್ರಮಾಣದಲ್ಲಿ ವೇದಗಳ ಮೇಲೆ, ಭಾಷ್ಯಗಳನ್ನು ಬರೆದಿದ್ದಾರೆ? ಅಷ್ಟಲ್ಲವಾದರೂ ಭರತಖಂಡದ ಗತಕಾಲದ ಮಹತ್ವವನ್ನರುಹಲು ದೇಶೀಯರ ಪೈಕಿ ಇನ್ನೆಷ್ಟು ಜನರು ಶ್ರಮಿಸಿದರು ಎಂದು ಬಹು ಪ್ರಯಾಸಪಟ್ಟು ಆಲೋಚಿಸಬೇಕಿದೆ.

ಶಂಕರರೇ ಮೊದಲಾದ ಆಚಾರ್ಯರು ಏನೋ ಎಂತೋ ಪ್ರಸಿದ್ಧರಾದರು. ಇದ್ದ ಒಂದು ಸನಾತನ ಧರ್ಮಕ್ಕೆ ಮತ್ತೊಂದು ರೀತಿಯಲ್ಲಿ ವ್ಯಾಖ್ಯೆಯನ್ನು ಹೇಳಿ ತಮ್ಮ ಅಭಿಪ್ರಾಯವನ್ನು ಸಮರ್ಥಿಸಲು ಒಂದೊಂದು ಪಂಥವನ್ನು ಪ್ರಾರಂಭಿಸಿದರು. ತಮ್ಮ ಆ ಪಂಥವನ್ನು ಒಪ್ಪಿದವರನ್ನು ಕೂಡಿಕೊಂಡು ಮಠಗಳನ್ನು ಸ್ಥಾಪಿಸಿದರು. ವೇದಗಳ ಮೇಲೆ ಊಹಾಪೋಹವಾದ ಭಾಷ್ಯಗಳನ್ನು ಬರೆದು ಹಿಂದೂಧರ್ಮವನ್ನು ಇನ್ನಷ್ಟು ಕಲಕಿ ಅದನ್ನು ಬಹು ಆಳಕ್ಕೆ ದಬ್ಬಿದರು. ವರ್ಣಭೇದ, ಜಾತಿಭೇದ ಇತ್ಯಾದಿಗಳ ಅವಶ್ಯಕತೆಯನ್ನು ಸಮರ್ಥಿಸಿದರು. ಹೆಂಗಸರ ಮತ್ತು ದಲಿತ ಜನದ ಕಡೆಗೆ ಕ್ರೂರವಾದ ಸಂಪ್ರದಾಯವನ್ನು ಸೃಷ್ಟಿಸಿದರು. ಈ ರೀತಿಯಲ್ಲಿ ತಮ್ಮ ವೈಯ್ಯಕ್ತಿಕ ಸಾಮರ್ಥ್ಯವನ್ನು ತೋರಿಸುತ್ತಾ ಧರ್ಮಶಾಸ್ತ್ರಗಳೆಲ್ಲವನ್ನೂ ಭಿನ್ನಾರ್ಥದಲ್ಲಿ ಉಪಯೋಗಿಸುತ್ತಾ ತಮ್ಮ ಹಿಂಬಾಲಕರಿಂದ ಪೂಜಿಸಿಕೊಂಡು ಜಾತೀಯವಾದದ ರಾಜಕೀಯವನ್ನೇ ಅಂದು ಹಲವರು ನಡೆಸಿದರು.

ಹೇಗೂ ಕಳೆದ ಒಂದೆರಡು ಶತಮಾನಗಳಲ್ಲಿ ಅಂಧಕಾರದಿಂದ ತೊಳಲುತ್ತಿದ್ದ ಈ ದೇಶದ ಕೋಟ್ಯಾದಿ ಜನಕ್ಕೆ ಒಂದು ನವ ಅರುಣೋದಯವು ಹೊಮ್ಮಿದಂತೆ ತೋರಿತು. ಹಿಂದಿನ ಆಚಾರ್ಯರ ಅಲ್ಲೋಲಕಲ್ಲೋಲವಾದ ವಾದ ವಿವಾದಗಳು ಸಮಾಜದ ಐಕ್ಯತೆಗೆ ಭಂಗವನ್ನುಂಟುಮಾಡಿತ್ತು. ಪರಿಣಾಮವಾಗಿ ಮತ್ತು ನ್ಯಾಯವಾಗಿ ನಮ್ಮ ವೇದೋಪನಿಷತ್ತುಗಳೆಲ್ಲಾ ಇವರು 'ಮ್ಲೇಂಛ'ರೆಂದು ಮೂದಲಿಸಿದ ಮಹಾ ವಿದ್ವಾಂಸರ ಕೈಸೇರಿ ಅದರ ಒಳಗಿದ್ದ ಗುಟ್ಟೆಲ್ಲಾ ರಟ್ಟಾಯಿತು. Sir William Jones, Sir Henry Colebrooke, Dr. Von Schelegel, Prof. Frenz Bopp, Prof. Horace Wilson,

Von Schoroeder, Dr. Albrecht Weber, Prof. F. Max Mueller ಈ ಮೊದಲಾದವರಂಥಾ ವಿದ್ವಾಂಸರು ಹಿಂದೂಶಾಸ್ತ್ರ ಗ್ರಂಥಗಳ ಅನ್ವೇಷಣೆಗಾಗಿ ಹುಟ್ಟಿದ ಅವತಾರ ಪುರುಷರಾಗಿ ತೋರಿಬಂದರು. ಇಂಥಾ ವಿದ್ವಾಂಸರ ಪ್ರಯತ್ನದ ಪರಿಣಾಮವಾಗಿಯೇ ಸುಸಂಸ್ಕೃತರಾದ ಬ್ರಿಟಿಷ್ ರಾಜಕಾರಣಿಗಳು ಈ ದೇಶದ ಉದ್ಧಗಲಕ್ಕೂ ಇದ್ದ ನೂರಾರು ಕ್ರೂರ ನೀತಿಗಳನ್ನು ಪಾಪಕಾರ್ಯವೆಂದು ಅವನ್ನೆಲ್ಲಾ ಖಂಡಿಸಿ ಕಾನೂನು ಬದ್ಧವಾಗಿ ನಿಲ್ಲಿಸಿದರು. ಈ ಕ್ರಾಂತಿಕಾರಕವಾದ ಸಾಂಸ್ಕೃತಿಕ ಬದಲಾವಣೆಯ ಪರಿಣಾಮವಾಗಿಯೇ ಆಧುನಿಕ ಆಚಾರ್ಯರ ತಂಡವೊಂದು ರಾಜಾರಾಮಮೋಹನರಾಯ, ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮಾ ಗಾಂಧಿಯವರಂಥಾ ಶ್ರೇಷ್ಠ ಪುರುಷರೊಡಗೂಡಿ ಜನ್ಮವೆತ್ತಿತು.

**೩. ಗುಮಾಸ್ತಗಿರಿ ಮತ್ತು ಸಿಪಾಯಿಗಿರಿಗಳು ಕಾದಿಡಲ್ಪಟ್ಟಿದ್ದುವು :—**

ಮಹಮ್ಮದೀಯರ ಆಳ್ವಿಕೆಯ ಕಾಲದಲ್ಲಿ ಈ ದೇಶದ ಶೇಕಡ 95 ರಷ್ಟು ಜನಕ್ಕೆ ಅಕ್ಷರಜ್ಞಾನವಾಗಲೀ ವಿಚಾರ ಜ್ಞಾನವಾಗಲೀ ಇರಲಿಲ್ಲ. ಉಳಿದ ಶೇಕಡ 5 ರಷ್ಟು ಜನರಲ್ಲಿ ಶಿವಾಜಿ, ರಣಜಿತ್‌ಸಿಂಹ, ಹೈದರಾಲಿ ಈ ಮೊದಲಾದವರಂಥಾ ಅಕ್ಷರಸ್ಥ ಹಾಗೂ ನಿರಕ್ಷರಸ್ಥ ರಾಜಕಾರಣಿಗಳೂ, ಪೂರ್ಣಯ್ಯ, ಬಾಬಾಸಾಹೇಬ, ಮೊರೋರಿ ಪಂಥ ಇವರಂಥಾ ಗುಮಾಸ್ತ ವರ್ಗದ ಮಂತ್ರಿಗಳೂ, ಹಲಕೆಲವು ಬ್ರಾಹ್ಮಣ ಪಂಡಿತರೂ ಸೇರಿದ್ದರು. ಈ ಶೇಕಡ 5 ರಷ್ಟು ಜನರು ಉಳಿದ ಶೇಕಡ 95 ರಷ್ಟು ಜನವನ್ನು ಕುರಿಮಂದೆಗಳಂತೆ ಭಾವಿಸಿ ಅಧಿಕಾರ ನಡೆಸುತ್ತಿದ್ದಾಗ ಕ್ರಿ. ಶ. 18 ನೇ ಶತಮಾನಾಂತ್ಯದಲ್ಲಿ ಪಾಶ್ಚಾತ್ಯರು ಆ ಶೇಕಡ 5 ರಷ್ಟು ಜನರಿಂದ ಈ ದೇಶದ ರಾಜಕೀಯ ಅಧಿಕಾರ, ಶಿಕ್ಷಣ ಪ್ರಚಾರ, ಇತ್ಯಾದಿಗಳ ಹೊಣೆಯನ್ನು ಹೊತ್ತರು. ಆದರೆ ಈ ವಿಶಾಲ ದೇಶವನ್ನು ಆಳಲು, ಮತ್ತು ಅದರ ವಿವಿಧ ಕಾರ್ಯಕಲಾಪಗಳನ್ನು ನಡೆಸಲು ಅವರಿಗೆ ವಿದ್ಯಾವಂತರಾದ ಜನರು ಬೇಕಾಗಿದ್ದರು. ದೇಶೀಯ ಭಾಷೆಗಳಲ್ಲಿ ನುರಿತ ಹಲಕೆಲವು ಬ್ರಾಹ್ಮಣರನ್ನು ಖಚೇರಿಗಳಲ್ಲಿ ಗುಮಾಸ್ತರಾಗಿ ನೇಮಿಸಿದರು. ಉಳಿದ ಶೇಕಡ 95 ರಷ್ಟು ಜನರ ಪೈಕಿ ಯೋಗ್ಯರಾಗಿ ಕಂಡುಬಂದವರನ್ನು ಕುಂಪೆನೀ ಸರಕಾರದ ಸೈನ್ಯದಲ್ಲಿ ಸಿಪಾಯಿಗಳಾಗಿ ಆರಿಸಿದರು.

ಹೀಗಿದ್ದ, ಪರಿಸ್ಥಿತಿಯಿಂದ ಕ್ರಿ. ಶ. 1800 ರ ನಂತರ ಬ್ರಿಟಿಷರು ಆಂಗ್ಲ ಪಾಠಶಾಲೆಗಳನ್ನು ಪಾಶ್ಚಾತ್ಯ ಕ್ರೈಸ್ತ ಮತಪ್ರಚಾರಕರ ಮೂಲಕವಾಗಿ ಅಲ್ಲಲ್ಲಿ ಸ್ಥಾಪಿಸಿದರು. ಅಂಥಾ ಶಾಲೆಗಳ ಸ್ಥಾಪನೆಗಾಗಿ ಈ ದೇಶದ ಜನರ ಬೇಡಿಕೆಗಳು ಹೆಚ್ಚಿದುವು, ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಕಳೆದ ಶತಮಾನದಲ್ಲಿ ಅಲ್ಲೊಬ್ಬ ಇಲ್ಲೊಬ್ಬನಂತೆ ಕೆಲವರು ಇಂಗ್ಲಿಷ್ ಶಾಲೆಗೆ ಹೋಗಿ ಅಲ್ಪ ಸ್ವಲ್ಪ ಇಂಗ್ಲಿಷ್ ವಿದ್ಯೆಯನ್ನು ಕಲಿತಾಗ ಅಂದಿನ ಸುಮಾರು ಶೇಕಡ 90 ರಷ್ಟು ಜನರು ಅಂಥವರನ್ನು ಸರ್ವವಿದ್ಯಾಸಂಪನ್ನರೆಂದು ಗಣಿಸುತಿದ್ದರು. ತಮ್ಮ ಮಕ್ಕಳಿಗೂ ಅದೇ ರೀತಿ ಇಂಗ್ಲಿಷ್ ವಿದ್ಯೆಯನ್ನು ಕಲಿಸಿದರೆ ಸರಕಾರದಲ್ಲಿ ಗುಮಾಸ್ತ ಪದವಿಯನ್ನಾದರೂ ನಿರಾಯಾಸವಾಗಿ ಪಡೆಯಬಹುದೆಂದು ತಿಳಿದು ಆರ್ಥಿಕವಾಗಿ ಚೆನ್ನಾಗಿದ್ದ ಜನರು ತಮ್ಮ ಮಕ್ಕಳನ್ನು

ಇಂಗ್ಲಿಷ್ ಶಾಲೆಗಳಿಗೆ ಕಳುಹಿಸಿದರು. ಹೀಗಾಗಿ ನಮ್ಮ ಹಿರಿಯರು ತಮ್ಮ ಸ್ವಭಾಷೆ ಮತ್ತು ಸಂಸ್ಕೃತ ವಿದ್ಯೆಯೆಲ್ಲವೂ ನಿಸ್ಪ್ರಯೋಜನವೆಂದೂ ಇಂಗ್ಲಿಷ್‌ನಿಂದಲೇ ತಮಗೆ ಮುಕ್ತಿಯೆಂದೂ ತಿಳಿದಿದ್ದಾಗ ದೇಶೀಯ ಭಾಷೆಗಳ ವರ್ಚಸ್ಸು ಅದೆಷ್ಟೋ ಕೆಳಗಿಳಿಯಿತು. ಆದ್ದರಿಂದ Lord Macaulay ಇವನೊಬ್ಬನೇ ಅಲ್ಲ, ಅವನೊಡನೆ ಈ ದೇಶದ ಕೆಲವು ಅಂದಿನ ಮುಂದಾಳುಗಳು, ಬರೇ ನಾಲ್ಕೈದು ದರ್ಜೆಗಳ ವರೆಗೆ ಇಂಗ್ಲಿಷನ್ನು ಕಲಿತವರೂ ನಮ್ಮ ಭಾಷೆಗಳಲ್ಲಿ ಮತ್ತು ಸಾಹಿತ್ಯದಲ್ಲಿ ಯಾವ ಹುರುಳೂ ಇಲ್ಲವೆಂದೆನ್ನತೊಡಗಿದರು.

**೪. ಇಂಗ್ಲಿಷನ್ನು ಕಲಿಯುವ ಹಂಬಲವು ಹೆಚ್ಚಾಯಿತು :—**

ಈ ದೇಶದ ಜನರೇ ತಮಗೆ ಇಂಗ್ಲಿಷ್ ವಿದ್ಯೆ ಬೇಕೆಂದು ಹೇಳಿದ ಕಾರಣದಿಂದಲೇ ಬ್ರಿಟಿಷರು ಆಂಗ್ಲ ವಿದ್ಯಾ ವಾಙ್ಮಯವನ್ನು ಇಲ್ಲಿ ಹರಡಿದರೆಂಬುದಕ್ಕೆ ಇನ್ನೂ ಹಲವು ಉದಾಹರಣೆಗಳನ್ನು ಕೊಡಬಹುದು. ಅಂದಿನ ದೇಶೀಯ ಪ್ರಮುಖರು ಮತ್ತು ದೇಶೀಯ ರಾಜರು ತಮಗೆ ಇಂಗ್ಲಿಷ್ ವಿದ್ಯೆ ಬೇಕೆಂದೂ ತಮ್ಮ ಮಕ್ಕಳಿಗೆ ಇಂಗ್ಲಿಷನ್ನು ಕಲಿಸಬೇಕೆಂದೂ ಇಚ್ಛಿಸಿ ಸ್ವಂತವಾಗಿ ಇಂಗ್ಲಿಷ್ ಅಧ್ಯಾಪಕರನ್ನು ಮನೆಗಳಲ್ಲಿರಿಸಿಕೊಂಡು ತಾವು ಕಲಿತರು, ತಮ್ಮ ಮಕ್ಕಳಿಗೂ ಕಲಿಸಿದರು. ಹೈದರಾಬಾದಿನ ನೈಜಾಮ, ಮೈಸೂರಿನ ರಾಜರೇ ಮೊದಲಾದವರೆಲ್ಲಾ ಆಂಗ್ಲ ಅಧ್ಯಾಪಕರನ್ನು ತಮ್ಮ ಅರಮನೆಯಲ್ಲಿರಿಸಿಕೊಂಡರು. ತಿರುವಾಂಕೂರಿನ ಸ್ವಾತಿ ತಿರುನಾಳ್ ಎಂಬ ಪ್ರಚಂಡ ವಿದ್ವಾಂಸನಾದ ರಾಜಕುಮಾರನಿಗೆ 16 ವರ್ಷ ಪ್ರಾಯವಾಗುವ ವರೆಗೂ Cal. Monroe ಇವನೇ ಶಿಕ್ಷಕನಾಗಿದ್ದು ಅವನ ವೈದಿಕ ವಿದ್ಯೆ, ಸಂಗೀತ ವಿದ್ಯೆ, ಆಡಳಿತ ಕೌಶಲ್ಯ ಇತ್ಯಾದಿಗಳಿಗೆ ಕಾರಣನಾದನು. ದೇಶಾಭಿಮಾನವನ್ನೇ ತನ್ನ ಜೀವನದ ಉಸುರಾಗಿ ಇರಿಸಿಕೊಂಡಿದ್ದ ಸುರಪುರದ ರಾಜಕುಮಾರ ವೆಂಕಟಪ್ಪನಿಗೆ Col. Meadows Taylor ಇವನೇ ಗುರುವಾಗಿದ್ದನು. ವೆಂಕಟಪ್ಪನು ಈ ಆಂಗ್ಲ ಗುರುವನ್ನು ಕಡೇ ವರೆಗೂ 'ಅಪ್ಪಾ' ಎಂದೇ ಕರೆಯುತ್ತಿದ್ದನು. ಹೀಗೆ ಇನ್ನೆಷ್ಟೋ ಉದಾಹರಣೆಗಳಿವೆ.

ಕಳೆದ ಶತಮಾನದ ಮಧ್ಯಕಾಲದಿಂದ ಬ್ರಿಟಿಷ್ ವಿದ್ಯೆ, ಮತ್ತು ವಿದ್ಯಾ ಕ್ರಮವು ಜನರಲ್ಲಿ ದೇಶಾಭಿಮಾನವನ್ನೂ ಆಡಳಿತ ಕೌಶಲ್ಯವನ್ನೂ ಹೆಚ್ಚಿಸಿದೆಯಲ್ಲದೆ ಕಡಿಮೆಯಾಗಿಸಲಿಲ್ಲವೆಂಬುದಕ್ಕೆ ಕಳೆದ ಶತಮಾನದ ಅಂತ್ಯದಲ್ಲಿ ಇದ್ದ ಶ್ರೇಷ್ಠ ಭಾರತೀಯ ವಿದ್ವಾಂಸರನ್ನೂ, ದಾದಾಬಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ಸುರೇಂದ್ರನಾಥ ಬ್ಯಾನರ್ಜಿ ಇಂಥಾ ಮುಂದಾಳುಗಳನ್ನೂ ನೆನೆದುಕೊಳ್ಳಬಹುದು.

ಪೂರ್ವಕಾಲದಲ್ಲಿ ಈ ದೇಶದಲ್ಲಿ ಉನ್ನತಮಟ್ಟದ ಹಲವು ವಿದ್ಯಾಪೀಠಗಳೂ ವಿಶ್ವವಿದ್ಯಾಲಯಗಳೂ ಇದ್ದುವೆಂಬುದು ಸರ್ವವಿದಿತವಾಗಿದೆ. ಆದರೆ ಮಧ್ಯಕಾಲದ ಹಲವು ಶತಮಾನಗಳ ಅವಧಿಯಲ್ಲಿ ಮತ್ತು ಮಹ್ಮದೀಯರ ಆಳ್ವಿಕೆಯ ಕಾಲದಲ್ಲಿ ಅವೆಲ್ಲಾ ಸೊರಗಿ ಮೂಲೆಪಾಲಾದುವು. ಹೇಗೂ ಕಳೆದ ಶತಮಾನಾರಂಭದಲ್ಲಿ ಈ ದೇಶದಲ್ಲಿ ನೂರಾರು ಆಧುನಿಕ ವಿದ್ಯಾಪೀಠಗಳೂ, ಕ್ರೈಸ್ತ 'ಮಿಷನರಿ' ಶಾಲೆಗಳೂ

ಇಂಗ್ಲಿಷ್ ವಿದ್ಯೆಯನ್ನು ಪಡೆದ ಒಂದು ಹೊಸ ಜನಾಂಗದ ಪೀಳಿಗೆಯನ್ನೇ ನಿರ್ಮಿಸಿದುವು. ಮದ್ರಾಸು, ಬೊಂಬಾಯಿ ಮತ್ತು ಕಲ್ಕತ್ತೆಯಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವ ಮಸೂದೆಯನ್ನು ಬ್ರಿಟಿಷ್ ಸರಕಾರವು ಮೊದಲ ಬಾರಿಗೆ 1854 ರಲ್ಲಿ ಜಾರಿಗೆ ತಂದಾಗ ಅವರು ಅದರ ಉದ್ದೇಶವೇನೆಂಬುದನ್ನು ವಿವರಿಸುತ್ತಾ ಹೀಗೆ ಹೇಳಿದರು :—

"......Better encouragement of Her Majesty's subjects of all classes and denomination......in the pursuit of a regular and liberal course of Education ......"

ಇದಕ್ಕನುಸಾರವಾಗಿ 1857 ರಿಂದ ಈ ಮೂರು ವಿಶ್ವವಿದ್ಯಾಲಯಗಳು ಈ ದೇಶದಲ್ಲಿ ಮೊದಲ ಬಾರಿಗೆ ಸ್ಥಾಪಿತವಾದುವು. ಈ ಹಿರಿಯ ವಿಶ್ವವಿದ್ಯಾಲಯಗಳಿಂದ ಹೊರಬಂದ ದೇಶೀಯ ವಿದ್ಯಾಪಾರಂಗತರೇ ಕಳೆದ ಶತಮಾನಾಂತ್ಯದಲ್ಲಿ ಈ ದೇಶದ ಭವಿಷ್ಯವನ್ನು ರೂಪಿಸುವ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡುವ ಕಾರ್ಯದಲ್ಲಿ ಮುಂದಾದರು.

### ೫. ಬಂಗಾಳದ ಜನರು ಇತರರಿಗಿಂತಲೂ ಮುಂದಾದರು :—

ಕಳೆದ ಶತಮಾನದಲ್ಲಿ ಬಂಗಾಳದ ಜನರು ದೇಶದ ಇತರ ಭಾಗದ ಜನರಿಗಿಂತಲೂ ಆಧುನಿಕ ವಿದ್ಯೆಯಲ್ಲಿ ಮುಂದುವರಿದರು. ಬಂಗಾಳದ ಅಂದಿನ ನಾಯಕರು ಇಂಗ್ಲಿಷ್ ವಿದ್ಯೆಯಲ್ಲಿ ಎಷ್ಟು ಪ್ರಬಲರಾದರೋ ಅದೇ ಪ್ರಮಾಣದಲ್ಲಿ ಪ್ರಚಂಡ ರಾಷ್ಟ್ರಾಭಿಮಾನಿಗಳೂ ಆದರು. ಕಳೆದ ಶತಮಾನದ ಆರಂಭದ ಮೂವತ್ತು ವರ್ಷಗಳವರೆಗೂ ಈ ದೇಶದ ಜನರು ಪ್ರಾಚೀನ ಕವಿಗಳ ಬರೆಹಗಳನ್ನೂ ದಾಸರ ಹಾಡುಗಳನ್ನೂ ಆಳ್ವಾರರ ಕೀರ್ತನೆಗಳನ್ನೂ ಮೀರಾ ಕಬೀರರಾದಿ ಭಕ್ತರ ಗೀತೆಗಳನ್ನೂ ಹಾಡುತ್ತಾ ಅವೇ ತಮ್ಮ ಸರ್ವಸಂಪತ್ತು ಎಂದೆಣಿಸಿ ಕಾಲವನ್ನು ತಳ್ಳುತ್ತಿರುವಾಗ ಬಂಗಾಳದ ಜನರು ಲೋಕಜ್ಞಾನದಲ್ಲಿ ಮುಂದುವರಿದರು. ದೇಶದ ಇತರ ಭಾಗಗಳಿಗಿಂತ ಹೆಚ್ಚಾಗಿ ಬಂಗಾಳದ ಜನರೇ ಮಹ್ಮದೀಯ ಮತ್ತು ಕ್ರೈಸ್ತ ಮತವನ್ನೂ ಅವಲಂಬಿಸಿದರು. ಇಂದಿಗೂ ಮಹ್ಮದೀಯ ಮತ್ತು ಕ್ರೈಸ್ತರ ಸಂಖ್ಯೆಯು ಪಶ್ಚಿಮ ಬಂಗಾಳ ಮತ್ತು ಪಾಕೀಸ್ಥಾನಕ್ಕೆ ಸೇರಿದ ಪೂರ್ವ ಬಂಗಾಳದಲ್ಲಿಯೇ ಹೆಚ್ಚು ಇದೆ, ಸನಾತನ ಧರ್ಮವು ಹಿಂದುಳಿದವರನ್ನು ಮುಂದುವರಿಯಲು ಅವಕಾಶವೀಯದಿದ್ದಾಗ ಈ ವಿದೇಶೀಯ ಮತ ಧರ್ಮಗಳು ಅಂಥಾ ಜನಕ್ಕೆ ತಮ್ಮ ಉದಾರ ಹಸ್ತವನ್ನು ನೀಡಿ ಅವರಿಗೆ ನೆರವಾದುವು ರಾಜಕೀಯದಲ್ಲಿ ಒಂದು ಪಕ್ಷದಲ್ಲಿದ್ದು ಇನ್ನೊಂದಕ್ಕೆ ಹಾಯುವ ಪರಿಪಾಟವು ಅದೊಂದು ಬಗೆಯ ಪ್ರಗತಿಯ ಚಿಹ್ನೆಯೆಂದು ಕೆಲವರು ಹೇಳಿದರೆ ಜಾತಿಭೇದದ ಅಧೋಗತಿಗೆ ಒಳಗಾದ ಜನವು ತಮ್ಮ ಜಾತಿಯನ್ನು ಯಾ ಮತವನ್ನು ಬಿಟ್ಟು ಇನ್ನೊಂದು ಮತವನ್ನು ಅವಲಂಬಿಸಿದರೆ ಅದೂ ಅವರ ವೈಯ್ಯಕ್ತಿಕ ದೃಷ್ಟಿಯಿಂದ ಒಂದು ಬಗೆಯ ಅಭಿವೃದ್ಧಿಯೆಂದೇ ಅವರು ಹೇಳುತ್ತಾರೆ.

ಬಂಗಾಳವು ಇನ್ನೂ ಅನೇಕ ರೀತಿಯಲ್ಲಿ ಅಂದು ಬದಲಾವಣೆಗೆ ಒಳಗಾಯಿತು.

ರಾಜಕೀಯ ಚಟುವಟಿಕೆಯೂ ವಿದ್ಯಾಪ್ರಗತಿಯೂ ಅಲ್ಲಿಯೇ ಹೆಚ್ಚಾಗಿ ತೋರಿ ಬಂದುವು. ಜಗನ್ನಾಥ ಪಂಚಾನನ, ಈಶ್ವರ ಚಂದ್ರ ವಿದ್ಯಾಸಾಗರ, ರಾಮಮೋಹನ ರಾಯ, ಮಹೇಂದ್ರಪಾಲ ಸರಕಾರ, ಸುರೇಂದ್ರನಾಥ ಬ್ಯಾನರ್ಜಿ, ಜಗದೀಶಚಂದ್ರ ಘೋಷ್, ಸ್ವಾಮಿ ವಿವೇಕಾನಂದ, ಆಶ್ಫೋತೋಷ್ ಮುಖರ್ಜಿ, ಟಾಗೋರ್ ವಂಶ ದವರೇ ಮೊದಲಾಗಿ ಅನೇಕರು ಅಲ್ಲಿ ಕಾಣಿಸಿಕೊಂಡರು. ಅವರ ಪರಂಪರೆಯಲ್ಲಿ ಈ ಶತಮಾನದಲ್ಲೂ ಇದ್ದ ಅರವಿಂದ ಘೋಷ್, ಚಿತ್ತರಂಜನದಾಸ್, ಪ್ರಫುಲ್ಲಚಂದ್ರ ರೇ, ಸುಭಾಷ್ಚಂದ್ರಬೋಸ್, ಶ್ಯಾಮಪ್ರಸಾದ್ ಮುಖರ್ಜಿ ಮೊದಲಾದ ಹುಲಿಗಳೂ ಇದ್ದರು. ಈಗ ಅಂದಿನ ಆ ಬಂಗಾಳವು ಎಲ್ಲಿಗೆ ಹೋಯಿತು? ಅಂದಿನ ಆ ಹುಲಿಗಳ ಮರಿಗಳಿಗೂ ಸಮನಾದ ಒರ್ವ ವ್ಯಕ್ತಿಯೂ ಇಂದು ಅಲ್ಲಿಲ್ಲ, ಏಕೆ?

**೬. ಬಂಗಾಳವು ಅಂದಿನ ರಾಜಧಾನಿಯಾಗಿದ್ದುದರ ಪರಿಣಾಮ :—**

ಇದರಲ್ಲಿರುವ ಗುಟ್ಟು ಇಷ್ಟೆ! ಕ್ರಿ. ಶ. 1767 ರಲ್ಲಿ Robert Clive ಇವನು ಕಲ್ಕತ್ತಾದ Fort William ಕೋಟೆಯಲ್ಲಿ ಬ್ರಿಟಿಷ್ ಧ್ವಜವನ್ನು ಹಾರಿಸಿ ಅದನ್ನೇ ತಮ್ಮ ವಸಾಹತುಗಳ ರಾಜಧಾನಿಯೆಂದು ಸಾರಿದ ಆ ದಿನದಿಂದ ಸುಮಾರು 150 ವರ್ಷಗಳ ಕಾಲ ಅದು ಈ ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಬರೇ ನಾಲ್ಕಾರು ಸಾವಿರ ಜನರಿಂದ ಕೂಡಿದ್ದ ಆ ಚಿಕ್ಕ ಪಟ್ಟಣವು ಆ ಅವಧಿಯಲ್ಲಿ ಮಿಲ್ಲಿಯಗಟ್ಲೆ ಜನರಿಂದ ತುಂಬಿದ ನಗರವಾಯಿತು. ಬ್ರಿಟಿಷ್ ಸರಕಾರ, ವಿದೇಶೀಯ ವ್ಯಾಪಾರ, ಕ್ರೈಸ್ತಮತ ಪ್ರಚಾರ, ಸಂಸ್ಕೃತ, ಬಂಗಾಳೀ ಮತ್ತು ಇಂಗ್ಲಿಷ್ ವಿದ್ಯಾಲಯಗಳ ಅಸ್ತಿಭಾರ, ಶ್ರೇಷ್ಠ ಪಾಶ್ಚಾತ್ಯ ವಿದ್ವಾಂಸರ ಪರಿವಾರ, ಆಧುನಿಕ ಜೀವನಕ್ರಮದ ಆಡಂಬರ ಇತ್ಯಾದಿ ಕಲ್ಕತ್ತಾಕ್ಕೆ ಮಾತ್ರವಲ್ಲ, ಇಡೀ ಬಂಗಾಳಕ್ಕೂ ವ್ಯಾಪಿಸಿದುವು.

ಪಾಶ್ಚಾತ್ಯ ಜನರ ಸಂಪರ್ಕವು ಬಂಗಾಳದ ಜನಕ್ಕೆ 17ನೇ ಶತಮಾನದಿಂದಲೇ ಇದ್ದಿತು. ಡಚ್ಚರು, ಪೋರ್ಚುಗೀಸರು, ಇಂಗ್ಲಿಷರು ಮತ್ತು ಡೇನಿಷ್ ಜನರೂ ಬಂಗಾಳದ ವಿವಿಧ ಕರಾವಳೀ ಊರುಗಳಲ್ಲಿ ತಮ್ಮ ವ್ಯಾಪಾರ ಕೋಠಿಗಳನ್ನು ಸ್ಥಾಪಿಸಿದ್ದರು. 1767 ರಿಂದ ಆ ಪ್ರಾಂತವಿಡೀ ಇಂಗ್ಲಿಷರ ಪಾಲಿಗೆ ಬಂದನಂತರ ಕ್ರೈಸ್ತಮತ ಪ್ರಚಾರಕರು ಅಲ್ಲಿ ಸಮಾಜ ಸೇವೆಗೆ ತೊಡಗಿದರು. James Rennel ಎಂಬ ಭೌಗೋಲಿಕ ಶಾಸ್ತ್ರಜ್ಞನೂ, Hensy Forster ಎಂಬ ಪ್ರಚಂಡ ಸಂಸ್ಕೃತ ವಿದ್ವಾಂಸನೂ, William Lambton ಎಂಬ ಭೂಪ್ರಮಾಣವನ್ನಳೆಯುವ ತಜ್ಞನೂ, Sir William Jones, N. Halhed ಎಂಬೀ ಹಲವು ಪ್ರಚಂಡ ನ್ಯಾಯಶಾಸ್ತ್ರಜ್ಞರೂ. Warren Hastings, Lord Cornwallis ಇವರೇ ಮೊದಲ್ಗೊಂಡು ಹಲವು ರಾಜಕಾರಿಣಿಗಳೂ ಬಂಗಾಳದಲ್ಲಿಯೇ ತಮ್ಮ ಕಾರ್ಯಭಾರದ ಬಹು ಪಾಲನ್ನು ಕೈಗೊಂಡು ಅಲ್ಲಿಯ ಜನರಲ್ಲಿ ಒಂದು ಬಗೆಯ ಪರಿಣಾಮವನ್ನುಂಟು ಮಾಡಿದರು.

ಪಾಶ್ಚಾತ್ಯ ಭೂಗೋಳ ಶಾಸ್ತ್ರಜ್ಞರು ಬಂಗಾಳದ ಭೂಪಟವನ್ನು ನೂರಾರು

ವಿಧದಲ್ಲಿ ಬಿಡಿಸಿ ಪ್ರಚಾರಪಡಿಸಿದರು. Halhed, Wilkins, Forster, Jones, Carey, Buchanan ಮೊದಲಾದವರು 19 ನೇ ಶತಮಾನಕ್ಕೆ ಹಿಂದೆಯೇ ಬಂಗಾಳಿಭಾಷಾ ಗ್ರಂಥಗಳನ್ನೂ ಅರ್ಥಕೋಶಗಳನ್ನೂ ವ್ಯಾಕರಣಗಳನ್ನೂ ಬರೆದು ಆ ಪ್ರಾಂತದ ಜನಕ್ಕೆ ತಮ್ಮ ಸಾಹಿತ್ಯವನ್ನು ಆಧುನಿಕ ರೀತಿಯಲ್ಲಿ ಅಭ್ಯಸಿಸಲನುವಿತ್ತರು. ಕಳೆದ ಶತಮಾನದಲ್ಲಿ ಉತ್ತರ ಹಿಂದೂಸ್ಥಾನದಲ್ಲಿ ಎಲ್ಲಾ ಪಾಶ್ಚಾತ್ಯ ವಿದ್ವಾಂಸರು ಬಂಗಾಳಿಯನ್ನು ಕಲಿತೇ ಕಲಿತಿದ್ದರು. James Princep, Alex Cunningham, W. W. Hunter ಇವರಿಂದೊಡಗೂಡಿ ನೂರಾರು ವಿದ್ವಾಂಸರು ಬಂಗಾಳೀಭಾಷೆಯು, ಜನದ, ನೆಲದ ವಿಷಯವಾಗಿ ವಿವಿಧ ರೀತಿಯ ಗ್ರಂಥಗಳನ್ನು ಬರೆದಿದ್ದಾರೆ Carey, Colebrooke ಮೊದಲಾದವರಲ್ಲದೆ Prof. Max Mueller ಇವನಂಥಾ ಶ್ರೇಷ್ಠ ಜರ್ಮನ್ ವಿದ್ವನ್ಮಣಿಯೂ ಬಂಗಾಳೀ ವ್ಯಾಕರಣವನ್ನು ಫ್ರೆಂಚ್ ಭಾಷೆಗಿಳಿಸಿದನೆಂದರೆ ಈ ಭಾಷೆಯು ಪಾಶ್ಚಾತ್ಯರ ಮೂಲಕ ಎಷ್ಟು ಪ್ರಚಾರವಾಗಿದೆಯೆಂದು ತಿಳಿದುಕೊಳ್ಳಬಹುದು. ಆಗ ಯೂರೋಪು ಖಂಡದ ವಿಶ್ವವಿದ್ಯಾಲಯಗಳಲ್ಲಿ ಕಲಿಸಲ್ಪಡುತಿದ್ದ ಭಾರತೀಯ ಭಾಷೆಗಳಲ್ಲಿ ಸಂಸ್ಕೃತ ಮತ್ತು ಬಂಗಾಳೀ ಇವು ಮಾತ್ರ ಆಗಿದ್ದುವು. ಬಂಗಾಳೀಭಾಷೆಗೆ ಈ ಪ್ರಾಧಾನ್ಯತೆಯು ದೊರೆಯಲು ಕಾರಣವೆಂದರೆ ಆಗ ಬಂಗಾಳವು ಬ್ರಿಟಿಷರ ರಾಜಧಾನಿಯಾಗಿದ್ದ ಪ್ರಾಂತವಾದುದರಿಂದಲೇ ಆಗಿದೆ.

**೭. ಭಾರತದ ಸಾಹಿತ್ಯಚರಿತ್ರೆಯಲ್ಲಿ ಒಂದು ಪರ್ವಕಾಲ :—**

ಹೇಗೂ ಬಂಗಾಳವು ಅಂದಿನ ಆ ವರ್ಚಸ್ಸನ್ನು ಅದಾಗಲೇ ಕಳೆದುಕೊಂಡಿತು. ಅನಂತರ ಮಹ್ಮದೀಯರ ತುಂಬುಬೀಡಾಗಿದ್ದ ಪುರಾತನ ಹಸ್ತಿನಾಪುರದ ಸನಿಹದಲ್ಲಿ ಎದ್ದು ಬಂದ ಡಿಲ್ಲಿಯು 1911 ರಿಂದ ಅಭಿವೃದ್ಧಿಯಾಯಿತು. ಕೇವಲ ಕೆಂಪುಕೋಟೆ ಮತ್ತು ಖುತುಬ್‌ಮಿನಾರ್ ಕಂಬದ ಸುತ್ತುಮುತ್ತಲೂ ಹರಡಿದ ಪಾಳುಬಿದ್ದ ಊರು, ಹಳೆ ಅಂಗಡಿ ಮಳಿಗೆಗಳು ಮತ್ತು ಮಹ್ಮದೀಯರ ಗೋರಿಗಳಿಂದ ಕೂಡಿದ್ದ ಆ ಪಟ್ಟಣವು ಬ್ರಿಟಿಷ್ ಹಿಂದೂಸ್ಥಾನದ ರಾಜಧಾನಿಯಾಯಿತು. ದೇಶದ ಜನಸಂಖ್ಯೆಯು 1800 ಕ್ಕೆ ಹನ್ನೆರಡು ಕೋಟಿಯಿದ್ದುದು, ನೂರು ವರ್ಷಗಳಲ್ಲಿ, ಎಂದರೆ ಕ್ರಿ. ಶ. 1900 ಕ್ಕೆ 27 ಕೋಟಿಯಷ್ಟಾಯಿತು. ಭಾರತದ ಎಲ್ಲಾ ಪಟ್ಟಣಗಳೂ ಜನಸಂದಣಿಯಿಂದ ಕೂಡಿದ ನಗರಗಳಾಗಿ ಮಾರ್ಪಟ್ಟುವು. ಹಲವು ಊರುಗಳು ಜನನಿಬಿಡವಾದ ಪಟ್ಟಣಗಳಾಗಿ ಪರಿವರ್ತನೆಗೊಂಡುವು.

ಬ್ರಿಟಿಷರು ಕ್ರಿ. ಶ. 1767 ರಿಂದ 1857 ರ 'ಸಿಪಾಯಿ ದಂಗೆ'ಯ ಕಾಲದ ವರೆಗಿನ 90 ವರ್ಷಗಳ ಅವಧಿಯಲ್ಲಿ ಸಾಧಿಸಿದ್ದನ್ನು ಅನಂತರ 1857 ರಿಂದ 1947 ರ ವರೆಗೆ ಆ 90 ವರ್ಷಗಳ ಅವಧಿಯಲ್ಲಿ ಅದರ ಇಮ್ಮಡಿಯಷ್ಟು ಸಮೃದ್ಧಿಗೊಳಿಸಿದರು. ಕಳೆದ ಶತಮಾನದ ಮೊದಲ ಐವತ್ತು ವರ್ಷಗಳಲ್ಲಿ ಅವರು ಈ ದೇಶಕ್ಕೆ ಒಂದು ಹೊಸ ವಾಙ್ಮಯವನ್ನು ಸೃಷ್ಟಿಸಿದರು. ಹಿಂದೂಸ್ಥಾನವು ಐಶ್ವರ್ಯ ಸಂಪನ್ನತೆಯಿಂದ ಕೂಡಿದ ರಾಷ್ಟ್ರವಾಗಿದ್ದಿತೆಂಬ ಕೀರ್ತಿಯು ಪೂರ್ವದಿಂದಲೇ ಇದ್ದಿತ್ತೇನೋ ನಿಜ!

ಆದರೆ ನಾಮಿಕಾವಸ್ಥೆಗಾದರೂ 1857 ರ ವರೆಗೆ ಮೊಗಲ್ ಚಕ್ರವರ್ತಿಯೊರ್ವನು ಇದ್ದವರೆಗೂ ಈ ವಿಶಾಲದೇಶವು ಮಹ್ಮದೀಯ ರಾಜ್ಯವಾಗಿದ್ದಿತ್ತೆಂಬುದನ್ನೂ ಮರೆಯಲು ಸಾಧ್ಯವಿಲ್ಲ; ಪಾಶ್ಚಾತ್ಯರೂ ಅದನ್ನು ಚೆನ್ನಾಗಿ ತಿಳಿದಿದ್ದರು.

ಇಂಥಾ ಸಂದಿಗ್ಧ ಪರಿಸ್ಥಿತಿಯಲ್ಲಿ ಬ್ರಿಟಿಷರು ಬಂದು ಮಹ್ಮದೀಯರ ಪ್ರಾಬಲ್ಯವನ್ನು ತೊಡೆದು ಹಾಕಿ ಇದೊಂದು ಹಿಂದೂರಾಷ್ಟ್ರವೆಂಬುದನ್ನು ಹಿಂದೂಶಾಸ್ತ್ರ, ಸಾಹಿತ್ಯ, ಸಂಸ್ಕೃತಿಗಳೇ ಮೊದಲಾದುವುಗಳ ಮೂಲಕ ಜಗತ್ತಿಗೆ ತಿಳಿಸಿ ಈ ದೇಶಕ್ಕೆ ಒಂದು ವರ್ಚಸ್ಸನ್ನು ನೀಡಿದ ಕೀರ್ತಿಯು ಅವರದಾಗಿದೆ. Von Schroeder, Garbe, Colebrooke ಮತ್ತು Albrecht Weber ಇವರಂಥಾ ಪ್ರಚಂಡ ವಿದ್ವಾಂಸರು ತಮ್ಮ ಅಪಾರ ಸಾಹಿತ್ಯ ಸಂಶೋಧನೆಯ ಬಲದಿಂದ "India—the birth-place of the ideas" ಎಂಬುದಾಗಿ ಪ್ರಪಂಚಕ್ಕೆ ಸಾರಿದರು. ಸ್ವಾಮಿ ವಿವೇಕಾನಂದ, ಅರವಿಂದ ಘೋಷ್ ಮತ್ತು ಕವಿ ಟಾಗೋರ್ ಇವರಂಥವರು ಪಾಶ್ಚಾತ್ಯ ದೇಶಗಳಿಗೆ ನಮ್ಮ ಆರ್ಯೇಯ ಸಂಸ್ಕೃತಿಯ ಆಧಿಕ್ಯವೆಷ್ಟೆಂಬುದನ್ನು ಹೇಳಿದ್ದರೂ ಇವರೆಲ್ಲಾ ಕೇವಲ ಇತ್ತೀಚೆಗೆ ಇದ್ದವರು, ಮಾತ್ರವಲ್ಲ, ಇದೇ ದೇಶದವರು! ಆದರೆ ಸುಮಾರು 150 ವರ್ಷಗಳಿಗೆ ಹಿಂದೆ ಪಾಶ್ಚಾತ್ಯ ದೇಶಗಳಿಂದ ಇಲ್ಲಿಗೆ ಬಂದು ಜ್ಞಾನಾನ್ವೇಷಣೆಯನ್ನು ನಡೆಸಿ ಅವರು ಸಾಧಿಸಿದ್ದು ಹಿಂದಾವ ಕಾಲದಲ್ಲೂ ಪ್ರಪಂಚದ ಬೇರಾವ ಭಾಗದಲ್ಲೂ ನಡೆಯದ ವಿಚಾರವಾಗಿದೆ. ಹೀಗೆ ಕ್ರಿ. ಶ. 1757 ರಿಂದ 1857 ರ ವರೆಗಿನ ಆ ನೂರು ವರ್ಷಗಳ ಕಾಲ ವಿದೇಶೀಯ ವಿದ್ವಾಂಸರು ಈ ದೇಶಕ್ಕೆ ಯಾತ್ರಾರ್ಥಿಗಳಂತೆ ಬಂದು ಹಿಂದಿರಳಿದರೆಂದೇ ಹೇಳಬಹುದಾಗಿದೆ. ನಿಜಕ್ಕೂ ಭಾರತದ ಸಾಹಿತ್ಯ ಚರಿತ್ರೆಯಲ್ಲಿ ಕಳೆದ ಶತಮಾನವು ಒಂದು ಸ್ವರ್ಣಕಾಲವಾಗಿ ದೇಶದ ಸ್ಥಿತಿಗತಿಗಳನ್ನು ಬದಲಾಯಿಸಿತು. ಕತ್ತಲೆಯಲ್ಲಿ ತೊಳಲುತಿದ್ದ ಈ ಪುರಾತನ ರಾಷ್ಟ್ರವು ಪಕ್ಕನೆ ಬೆಳಕಿಗೆ ಬಿದ್ದಂತಾಯಿತು ಎಂದರೆ ಅದು ಅತ್ಯುಕ್ತಿಯಾಗಲಾರದು.

## ೮. ಟರ್ನರ್, ಫಾರ್ಸ್ಟರ್ ಮತ್ತು ಜೇಮ್ಸ್ ರೆನ್ನೆಲ್ ಇವರು :—

ಕ್ರಿ. ಶ. 18ನೇ ಶತಮಾನದ ಅಪರಾರ್ಧದಲ್ಲಿ Warren Hastings ಇವನ ಮನೋಧರ್ಮಕ್ಕೆ ಅನುಗುಣವಾಗಿ ಈ ದೇಶದ ಪ್ರಾಚೀನ ಕಾವ್ಯ ಮತ್ತು ಶಾಸ್ತ್ರಗ್ರಂಥಗಳನ್ನು ಅನ್ವೇಷಿಸಿದವರಲ್ಲಿ ಪೋರ್ಚುಗೀಸರು, ಡಚ್ಚರು, ಜರ್ಮನ್ನರೇ ಮೊದಲಾಗಿ ಯೂರೋಪು ಖಂಡದ ವಿವಿಧ ಜನಾಂಗದವರೂ ಇದ್ದರು. ಇವರಲ್ಲಿ ಹಲವರು ಬಂಗಾಳದಲ್ಲಿಯೇ ನೆಲೆಸಿದ್ದರು. ಕಲ್ಕತ್ತೆಯ ಸಮೀಪವಿರುವ ಶ್ರೀರಾಂಪುರದಲ್ಲಿ ಡೆನ್ಮಾರ್ಕಿನ ಜನರೂ ವ್ಯಾಪಾರ ವ್ಯವಹಾರಗಳನ್ನು ಕೈಗೊಂಡಿದ್ದರು. 1784 ರ ಕಾಲದಲ್ಲಿ M. O. Bie ಇವನು ಅದರ ಪ್ರಧಾನ ಸಂಚಾಲಕನಾಗಿ ಡೇನಿಷ್ ಕ್ರೈಸ್ತ ಮತಪ್ರಚಾರಕರನ್ನೂ ಸಾಹಿತಿಗಳನ್ನೂ ಹಿಂದೂ ಸಾಹಿತ್ಯ ಗ್ರಂಥಗಳ ಅನ್ವೇಷಣೆಯೆಸಗಲು ಪ್ರೋತ್ಸಾಹಿಸಿದನು. Samuel Turner ಈ ಭಾಷಾ ಪಂಡಿತನನ್ನು Warner Hastings ಇವನು ತಿಬೇಟ್ ದೇಶಕ್ಕೆ ರಾಯಭಾರಿಯಾಗಿ 1783ರಲ್ಲಿ ಕಳುಹಿಸಿದನು. ರಾಜಕೀಯವಾಗಿಯೂ ಸಾಂಸ್ಕೃತಿಕವಾಗಿಯೂ ಈ ವಿಚಾರವು

ಇಂದಿನ ಸಂದರ್ಭದಲ್ಲಿ ಗಮನಾರ್ಹವಾಗಿದೆ.

Henry Pitts Forster ಇವನನ್ನು "a celebrated Oriental Scholar" ಎಂದು ಹೇಳಲಾಗಿದೆ. 1783ರಲ್ಲಿ ಬಂಗಾಳ ಪ್ರಾಂತದ ಜಿಲ್ಲಾಧಿಕಾರಿಯಾಗಿ ನೇಮಿಸಲ್ಪಟ್ಟ ಇವನು Lord Charles Cornwallis ಇವನು ಜಾರಿಗೆ ತಂದ ಖಾನೂನುಗಳೆಲ್ಲವನ್ನೂ ಗ್ರಂಥರೂಪದಲ್ಲಿ ಬಂಗಾಳೀ ಭಾಷೆಯಲ್ಲಿ ಬರೆದನು. ಬಂಗಾಳೀ ಶಬ್ದಕೋಶವನ್ನು ರಚಿಸಿದನು. ಸಂಸ್ಕೃತ ಸಾಹಿತ್ಯ ಮತ್ತು ವ್ಯಾಕರಣ ಸೂತ್ರಗಳನ್ನು ವ್ಯಾಖ್ಯಾನಿಸಿ ಹಲವು ಲೇಖನಗಳನ್ನೂ ಬರೆದನು.

1742ರಲ್ಲಿ ಜನಿಸಿದ ಭೂಗೋಳ ಶಾಸ್ತ್ರಜ್ಞ Major James Rennel ಇವನು ಬ್ರಿಟಿಷ್ ನೌಕಾದಳದ ಒರ್ವ Engineer ಆಗಿದ್ದನು. ಉತ್ತರ ಭಾರತದ ಹಲವು ಪ್ರಾಂತಗಳನ್ನು ಅಳೆದು ಚಿತ್ರಿಸಿದನೆಂಬುದನ್ನು ಹಿಂದೆಯೇ ಹೇಳಲಾಗಿದೆ. Major Rennel ಇವನು Robert Clive ಇವನ ಅಧೀನದಲ್ಲಿ ಸೇನಾಧಿಕಾರಿಯಾಗಿಯೂ ಇದ್ದನು. 1782 ರಲ್ಲಿ ತನ್ನ ಸ್ವದೇಶಕ್ಕೆ ಹಿಂದಿರುಗಿ ಅಲ್ಲಿ ಈ ದೇಶದ ಭೂಗೋಳ ವಿವರಣೆಯುನ್ನು Memoir of a map of Hindustan ಎಂಬ ಗ್ರಂಥವನ್ನೂ A Theatric of Comparative Geography of Western Asia ಇದನ್ನೂ ಬರೆದನು. ಈ ದೇಶದ ಮೊದಲನೇ Surveyor—General ಆಗಿದ್ದ ಇವನು 1830 ರಲ್ಲಿ ಮೃತನಾದನು.

### ೯. ಹಾಲ್ಹೆಡ್, ವಿಲ್ಕಿನ್ಸ್ ಮತ್ತು ಲಾರ್ಡ್ ಲ್ಯಾಂಬ್ಸನ್ ಇವರು :—

Nathaniel Halhed ಇವನು Royal Asiatic Society ಇದರ ಸ್ಥಾಪನೆಗೆ ಕಾರಣಕರ್ತರಾದವರಲ್ಲಿ ಒಬ್ಬನಾಗಿದ್ದು ಅರಬೀ, ಪರ್ಷಿಯನ್, ಲ್ಯಾಟಿನ್, ಸಂಸ್ಕೃತ ಇತ್ಯಾದಿ ಭಾಷೆಗಳಲ್ಲಿ ಪಾರಂಗತನಾದ ಶ್ರೇಷ್ಠ ವಿದ್ವಾಂಸನಾಗಿದ್ದನು. 1776 ರಲ್ಲಿ ಇವನು ಹಿಂದೂ ನ್ಯಾಯಶಾಸ್ತ್ರವನ್ನೆಲ್ಲಾ ಸಮೀಕರಿಸಿ The Code of Hindu Laws ಎಂಬ ಗ್ರಂಥವನ್ನು ಎರಡು ಕಾಂಡಗಳಾಗಿ ಪ್ರಕಟಿಸಿದನು. 1778 ರಲ್ಲಿ A Grammar of Bengali Language ಇದನ್ನು ಬರೆದು ಆಧುನಿಕ ರೀತಿಯಲ್ಲಿ ವ್ಯಾಕರಣ ಗ್ರಂಥಗಳನ್ನು ಬರೆದವರಲ್ಲಿ ಮೊದಲಿಗನಾದನು. Nathaniel Halhed ಇವನು ಹುಗ್ಲಿಯಲ್ಲಿ ಒಂದು ಮುದ್ರಣಾಲಯವನ್ನು ಸ್ಥಾಪಿಸಿ ಹಲವು ದೇಶೀಯ ಗ್ರಂಥಗಳನ್ನು ಮುದ್ರಿಸಿದನು. ಇವನು ಒರ್ವ ನಿರ್ಭೀತ ಸಾಹಿತಿಯಾಗಿ ರಾಜಕೀಯ ವಿಚಾರದ ಮೇಲೂ ಉತ್ತಮ ಗ್ರಂಥಗಳನ್ನು ಬರೆದನು. ಹಿಂದೂ ನ್ಯಾಯಶಾಸ್ತ್ರ ಗ್ರಂಥಗಳನ್ನು ಇವನು ಇಂಗ್ಲಿಷ್‌ನಲ್ಲಿ ಬರೆದಾಗ Warren Hastings ಇವನು ಹೀಗಂದಿದ್ದನು :— "....... Mr. Halhed ........whose labours and incomparable genius in two useful productions have been crowned with every success........"

Sir Charles Wilkins ಇವನು 1748ರಲ್ಲಿ ಜನಿಸಿದನು. 1768ರಲ್ಲಿ

ಹಿಂದೂಸ್ಥಾನಕ್ಕೆ ಬಂದು ಒಂದು ಹುದ್ದೆಯನ್ನು ಪಡೆದನು. ಪರ್ಶಿಯನ್, ಬಂಗಾಳೀ ಮತ್ತು ಸಂಸ್ಕೃತ ಭಾಷೆಗಳಲ್ಲಿ ಮಹಾಪಂಡಿತನಾಗಿದ್ದನು. ಭಗವದ್ಗೀತೆಯನ್ನು 1784ರಲ್ಲಿ ಮೊದಲ ಬಾರಿಗೆ ಇಂಗ್ಲಿಷ್‌ನಲ್ಲಿ ಬರೆದು ಪ್ರಸಿದ್ಧನಾದನು. 1786 ರಲ್ಲಿ 'ಹಿತೋಪದೇಶ'ವನ್ನೂ 1790 ರಲ್ಲಿ ಸಂಸ್ಕೃತ ವ್ಯಾಕರಣವನ್ನೂ ಇಂಗ್ಲಿಷ್‌ನಲ್ಲಿ ಬರೆದನು. ಮುದ್ರಣ ಕಲೆಯಲ್ಲಿ ಪ್ರೌಢತೆಯನ್ನು ಗಳಿಸಿದ್ದ ಇವನು ಪರ್ಶಿಯನ್ ಮತ್ತು ಬಂಗಾಳೀ ಭಾಷಾ ಅಕ್ಷರಗಳ ಮೊಳೆಗಳನ್ನು ನಿರ್ಮಿಸುವ ಕಲೆಯನ್ನೂ ತಿಳಿದಿದ್ದನು. ಕಲ್ಕತ್ತೆಯಲ್ಲಿ ಕೆಲವು ಮುದ್ರಣಾಲಯಗಳನ್ನು ಸ್ಥಾಪಿಸಿದ Charles Wilkins ಇವನನ್ನು "Caxton of India" ಎಂದು ಕರೆಯುತ್ತಿದ್ದರು.

Charles Wilkins ಇವನು 1784 ರಲ್ಲಿ Sir Willim Jones ಇವನೊಡನೆ ಮತ್ತು 1824 ರಲ್ಲಿ Sir Henry Colebrooke ಇವನೊಡನೆ ಸೇರಿ Royal Asiatic Society ಇದನ್ನು ಕಲ್ಕತ್ತಾದಲ್ಲೂ ಲಂಡನ್ನಿನಲ್ಲೂ ಸ್ಥಾಪಿಸಿದವರಲ್ಲೊಬ್ಬನಾಗಿದ್ದನು. ಇವನು 1801 ರಲ್ಲಿ East India Library ಇದರ ಮುಖ್ಯಾಧಿಕಾರಿಯಾಗಿ ಇಂಗ್ಲೆಂಡಿಗೆ ಹೋಗಿ ಹಲವು ಭಾರತೀಯ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದನು. ಭೂಗೋಳ ಮತ್ತು ಇತಿಹಾಸ ಗ್ರಂಥಗಳನ್ನೂ ಪರಿಷ್ಕರಿಸಿ ಸರಕಾರದ ಮೂಲಕವಾಗಿಯೇ ಮುದ್ರಿಸಲು ಏರ್ಪಡಿಸಿದನು; ಲಂಡನ್ನಿನ ಭಾರತೀಯ ಗ್ರಂಥ ಭಂಡಾರವನ್ನು ವಿಸ್ತರಿಸಿದನು. ಇವನು 1836ರಲ್ಲಿ ಮೃತನಾದನು.

N. Halhed ಇವನು "a pioneer among the modern philologists" ಎಂದೂ, C. Wilkins ಇವನು "Caxton of India" ಎಂದೂ ಪ್ರಸಿದ್ಧರಾದಾಗ Lord William Lambton ಇವನು "founder of Trigonometrial Survey of India" ಎಂದು ವಿಖ್ಯಾತನಾದನು. 1797ರಲ್ಲಿ ಇವನು ಟಿಪ್ಪುವಿಗೆ ಸೇರಿದ್ದ ರಾಜ್ಯವನ್ನು ಅಳೆದು ಅದರ ವರದಿಯನ್ನು ಒಪ್ಪಿಸಿದನು. Sir Arthur Wellesly ಇವನೊಡನೆ 1799ರಲ್ಲಿ ಶ್ರೀರಂಗಪಟ್ಟಣ ಯುದ್ಧದಲ್ಲಿ ಭಾಗವಹಿಸಿದನು. James Rennel ಮತ್ತು Colin Mackenzie ಇವರಂತೆ ಈ ದೇಶದ ಬಹು ಭಾಗವನ್ನು ಅಳೆದ ಭೌಗೋಲಿಕ ತಜ್ಞನಾಗಿದ್ದನು. ಗೌರೀಶಂಕರ ಶಿಖರವನ್ನು ಅಳೆದ George Everest ಇವನಿಗೂ ಹಿರಿಯವನಾಗಿದ್ದು ಈ ದೇಶದ ಗುಡ್ಡಗಾಡು ನೆಲ ಹೊಲಗಳ ಬಗ್ಗೆ ಅಪಾರ ಸಂಶೋಧನೆಯನ್ನು ಎಸಗಿ ಅವುಗಳ ಪ್ರಮಾಣಗಳನ್ನು ಶಾಸ್ತ್ರೀಯವಾಗಿ ಪರಿಶೀಲಿಸಿದನು.

೧೦. ಇವರನ್ನು ನಾಸ್ತಿಕರೆಂದು ಹೇಗೆ ಅನ್ನಬಹುದು ?

Goveror-General Warren Hastings ಇವನು "Indians should be ruled according to their own laws" ಎಂದು ಹೇಳಿದುದಕ್ಕನುಗುಣವಾಗಿ ಹಿಂದೂ ನ್ಯಾಯಶಾಸ್ತ್ರವನ್ನೆಲ್ಲಾ ಇಂಗ್ಲಿಷ್ ಭಾಷೆಗೆ ಪರಿ

ವರ್ತಿಸಲು ಶ್ರೇಷ್ಠ ವಿದ್ವಾಂಸರ ಮೂಲಕವಾಗಿ ದುಡಿದುದಲ್ಲದೆ ಅದೇ ಮನೋಧರ್ಮದಿಂದ ಹಿಂದೂ ತತ್ವಶಾಸ್ತ್ರವನ್ನೂ ಭಾಷಾಂತರಿಸಲು ಪಾಶ್ಚಾತ್ಯರು ಆರಂಭಿಸಿದರು. ಹೀಗೆ ಭಾಷಾಂತರವಾಗಿ ಮುದ್ರಣವಾದ ಹಿಂದೂ ಶಾಸ್ತ್ರಗ್ರಂಥಗಳಲ್ಲಿ ಭಗವದ್ಗೀತೆಯೇ ಮೊದಲನೆಯದೆಂದೆನ್ನಬಹುದು.

ಶ್ರೀಮದ್ಭಗವದ್ಗೀತೆಯಂತೆ ಜಗತ್ತಿನ ನೂರಾರು ಭಾಷೆಗಳಲ್ಲಿ ಮಿಲ್ಯಾಂತರ ಪ್ರತಿಗಳಾಗಿ ಹಬ್ಬಿದ ಗ್ರಂಥವು ಬೇರೊಂದು ಇರಲಾರದು. ವೇದವ್ಯಾಸರು ಮಹಾಭಾರತ ಭೀಷ್ಮಪರ್ವದ ಒಂದು ಭಾಗವಾಗಿ ಇದನ್ನು ಬರೆದರೆಂದು ಹೇಳಲ್ಪಟ್ಟ ಆ 702 ಶ್ಲೋಕಗಳು ಕ್ರಿ. ಶ. 16 ನೇ ಶತಮಾನದ ವರೆಗೂ ಹಿಂದೂಸ್ಥಾನದ ಎಲ್ಲಾ ಭಾಷೆಗಳಲ್ಲೂ ಕಾವ್ಯರೂಪದಲ್ಲಿ ಪ್ರತಿಧ್ವನಿಸಿದುವು. ಅದರನಂತರ ಆ ಕೆಲಸವು ಪಾಶ್ಚಾತ್ಯ ಪಂಡಿತರ ಪಾಲಿಗೆ ಬಿತ್ತು. ಕ್ರಿ. ಶ. 18 ನೇ ಶತಮಾನಾಂತ್ಯದೊಳಗಾಗಿ ಭಗವದ್ಗೀತೆಯು ಇಂಗ್ಲಿಷ್, ಫ್ರೆಂಚ್, ರಷ್ಯನ್, ಲ್ಯಾಟಿನ್, ಜರ್ಮನ್, ಗ್ರೀಕ್ ಮೊದಲಾದ ಭಾಷೆಗಳಿಗಿಳಿಸಲ್ಪಟ್ಟು ಅದೊಂದು ವಿಶ್ವವಿಖ್ಯಾತವಾದ ಧರ್ಮಗ್ರಂಥವಾಯಿತು.

ಗೀತೆಯ ಇಂಗ್ಲಿಷ್ ಅನುವಾದವನ್ನು East India Company ಇದರ ಅಧಿಕಾರಿಗಳು Warren Hastings ಇವನ ಶಿಫಾರಸ್ಸಿಗನುಸಾರ 1785 ರಲ್ಲಿ ಲಂಡನ್ನಿನಲ್ಲಿ ಮುದ್ರಿಸಿ ಪ್ರಕಟಿಸಿದರು. ಈ ಸಂದರ್ಭದಲ್ಲಿ ಇದರ ಭಾಷಾಂತರಕಾರನಾದ Charles Wilkins ಇವನು ತನಗೆ ಈ ಕೆಲಸದಲ್ಲಿ Warren Hastings ಇವನಿಂದ ದೊರೆತ ಪ್ರೋತ್ಸಾಹವನ್ನು ಕುರಿತು ಹೀಗೆ ಹೇಳಿದ್ದಾನೆ :–

"......Unconscious of the liberal purpose for which you intended the Gita, when, at your request, I had the honour to present you with a copy of the manuscript .....The world, Sir, is so well acquainted with your boundless patronage in general and of the personal encouragement you have constantly given to my fellow-servants in particular......As that personal encouragement alone first excited emulation in my breast and urged me to prosecute particular studies, even beyond the line of pecuniary reward......".

ಈ ರೀತಿ ಭಗವದ್ಗೀತೆಯನ್ನು ಎಷ್ಟು ನಿಷ್ಠೆಯಿಂದ ಪ್ರಕಟಿಸಿ ಹೊರದೇಶಗಳಲ್ಲೆಲ್ಲಾ ಪ್ರಚಾರಪಡಿಸಿದರೋ ಅದೇ ರೀತಿ ಇನ್ನೂ ನೂರಾರು ಪೌರಾಣಿಕ ಗ್ರಂಥಗಳನ್ನೂ ಜನಪ್ರಿಯರಾದ ಅಂದಿನ ಅಧಿಕಾರ ವರ್ಗವು ತಮ್ಮ ದೇಶದ ವಿದ್ವಾಂಸರಿಂದಲೇ ಸಂಶೋಧಿಸಿ, ಬರೆಯಿಸಿ, ಪರಿಷ್ಕರಿಸಿ ಮತ್ತು ಪ್ರಕಟಿಸಿ ಉಪಕಾರ ಮಾಡಿದ್ದಾರೆ.

ಪಾಶ್ಚಾತ್ಯರು ನಾಸ್ತಿಕರೆಂದೂ ನಾವು ಆಸ್ತಿಕರೆಂದೂ ಅವರು ಪರಮತ ಸಹಿಷ್ಣುತೆ ಇಲ್ಲದವರೆಂದೂ ನಾವು ಅಂಥಾ ಸಹಿಷ್ಣುತೆಯು ಧಾರಾಳವಾಗಿ ಇರುವವರೆಂದೂ ನಾವೇ ಹೇಳಿಕೊಂಡರೆ ಅವು ಕೇವಲ ನಿಷ್ಪ್ರಯೋಜಕವಾದ ಮಾತುಗಳೆಂದು ಮೇಲಿನ ಉದಾಹರಣೆಯಿಂದಲೇ ತಿಳಿಯುತ್ತದೆ.

## ೧೧. ಭಗವದ್ಗೀತೆಯನ್ನು ಕುರಿತು ಯೂರೋಪಿನ ತತ್ವಜ್ಞರು :—

ಭಾರತೀಯ ಸಾಹಿತ್ಯ ಗ್ರಂಥಗಳಲ್ಲಿ 'ಅಭಿಜ್ಞಾನ ಶಾಕುಂತಲಾ' ನಾಟಕವಾದರೆ ಧರ್ಮಗ್ರಂಥಗಳ ಪೈಕಿ ಶ್ರೀಮದ್ಭಗವದ್ಗೀತೆಯು ವಿದೇಶೀಯರ ಮೆಚ್ಚಿಗೆಯನ್ನು ಪಡೆಯಿತು. Sir Charles Wilkins ಇವನು ಗೀತೆಯನ್ನು ಮೊದಲಬಾರಿಗೆ ಭಾಷಾಂತರಿಸಿದಾಗ Warren Hastings ಇವನು ಅದೊಂದು ಅಪೂರ್ವಗ್ರಂಥವೆಂದು ಶ್ಲಾಘಿಸಿದನೆಂಬುದನ್ನು ಹಿಂದೆಯೇ ಹೇಳಲಾಗಿದೆ. ಅದರ ನಂತರ ಜರ್ಮನ್ ಭಾಷೆಯಲ್ಲಿ Von Schelegel ಮತ್ತು W. de Humboldt ಇವರು ಗೀತೆಯನ್ನು ತಮ್ಮ ಟೀಕೆಯ ಸಮೇತವಾಗಿ ಬರೆದರು. 1847 ರಲ್ಲಿ G. H. Weigle ಮತ್ತು 1855 ರಲ್ಲಿ J. C. Thomson ಇವರು ಗೀತೆಯನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದರು. ಇವುಗಳೊಡನೆಯೇ ಇಟಾಲಿಯನ್, ರಷ್ಯನ್, ಡಚ್ಚ್, ಫ್ರೆಂಚ್ ಮತ್ತು ಲ್ಯಾಟಿನ್ ಭಾಷೆಗಳಲ್ಲೂ ಗೀತೆಯು ಬರೆಯಲ್ಪಟ್ಟಿತು. ಈ ಎಲ್ಲಾ ಭಾಷಾಂತರಕಾರರಿಗೆ Von Schelegel ಇವನ ಜರ್ಮನ್ ಗೀತೆಯು ವಿಶೇಷ ಸ್ಫೂರ್ತಿಯನ್ನೊದಗಿಸಿತ್ತು. ಈ ಧರ್ಮಗ್ರಂಥವನ್ನು ಕುರಿತು ಅವನು ಹೀಗೆ ಅಭಿಪ್ರಾಯಪಟ್ಟನು :—

" It is the most beautiful and perhaps the only truly philosophical poem, that the whole range of literature known to us has produced. "

ಸುಮಾರು 150 ವರ್ಷಗಳಿಗೆ ಹಿಂದೆ ಇದ್ದ ಆ ಶ್ರೇಷ್ಠ ಸಾಹಿತಿಗಳಿಗೆ ತಮ್ಮ ತಾತ್ವಿಕ ವಿವೇಚನೆಗೆ ಒಂದು ಹೊಸ ಮೆರುಗನ್ನು ಕೊಡಲು ಭಗವದ್ಗೀತೆಯು ಸಹಾಯಕವಾಯಿತೆಂದು ಅನ್ನಬಹುದು. W. Milmann ಎಂಬ ತತ್ವ ಶಾಸ್ತ್ರಜ್ಞನಿಗೆ ಗೀತೆಯು ಹೀಗೆ ಕಂಡುಬಂತು :—

" It reads like a noble fragment of Empedoeles or Lucretius, introduced into the midst of an Homeric epic. "

Wheeler Tolboys ಇವನು ಭಗವದ್ಗೀತೆಯನ್ನು ಕುರಿತು ಹೀಗಂದನು :—

" There is something singularly striking and magnificent in the introduction of this solemn discussion on the nature of the godhead and the destiny of man, in the midst of the fury and tumult in which it occurs. "

ಭಾರತೀಯ ಕಾವ್ಯಗಳೂ ಶಾಸ್ತ್ರಗ್ರಂಥಗಳೂ ವಿದೇಶೀಯರಿಗೆ ಆ ಕಾಲದಲ್ಲಿ ಇಂಥಾ ಮನೋಭಾವವನ್ನು ಕಲ್ಪಿಸಿದ್ದು ಹೆಮ್ಮೆ ಪಡತಕ್ಕ ವಿಚಾರವಾಗಿದೆ. ಕಳೆದ ಶತಮಾನದ ಅಪರಾರ್ಧದಲ್ಲಿ ಭಗವದ್ಗೀತೆಯನ್ನು ಇನ್ನೂ ಹಲವು ಪಾಶ್ಚಾತ್ಯರು ಭಾಷಾಂತರಿಸಿದರು ಅಥವಾ ಟೀಕೆಗಳನ್ನು ಬರೆದರು. ಅವರಲ್ಲಿ 1883 ರಲ್ಲಿ Prof. Max Mueller, 1885 ರಲ್ಲಿ Rev. John Davies ಮತ್ತು 1895 ರಲ್ಲಿ Dr. (Mrs.) Anne Besant ಇವರು ಪ್ರಮುಖರಾಗಿದ್ದಾರೆ. Dr. E. Burnouf ಮತ್ತು A. Sadous ಇವರು ಫ್ರೆಂಚ್ ಭಾಷೆಯಲ್ಲಿ ಬರೆದ ಗೀತೆಯು ಫ್ರೆಂಚ್

ಸಾಹಿತಿಗಳಲ್ಲಿ ತುಂಬಾ ಜನಪ್ರಿಯವಾಗಿದ್ದುವು. ಹೇಗೂ 200 ವರ್ಷಗಳಿಗೆ ಹಿಂದೆ ಮೊದಲ ಬಾರಿಗೆ ಗೀತೆಯನ್ನು ವಿದೇಶಗಳಲ್ಲಿ ಹರಡಲು ಕಾರಣನಾದ Warren Hastings ಮತ್ತು ಭಾಷಾಂತರಕಾರ Charles Wilkins ಇವರು ಅಂದೇ ಈ ರೀತಿ ಹೇಳಿದ್ದರು :—

"On the whole, the Bhagavad Gita is certainly one of the most curious and the most char acteristic works we have received from the East."

**೧೨. ಆರ್ಯಭಾಷಾ ಸೇವೆಯಲ್ಲಿ ಜರ್ಮನ್ನರೇ ಮುಂದಾದರು :—**

ಕಳೆದ ಶತಮಾನದ ಪೂರ್ವಾರ್ಧದಲ್ಲಿ ಭಾರತೀಯ ಭಾಷಾ ಸೇವೆಗೆ ತೊಡಗಿದ್ದ ಅಸಂಖ್ಯ ಪಾಶ್ಚಾತ್ಯ ವಿದ್ವಾಂಸರ ಪೈಕಿ ಜರ್ಮನ್ ಸಾಹಿತಿಗಳೇ ಎಲ್ಲರಿಗಿಂತಲೂ ಮುಂದಾದರು. ಈ ದೇಶದ ಗ್ರಂಥಗಳ ಭಾಷಾಂತರವನ್ನು ಮಾಡುವುದರಲ್ಲಿ ಇಂಗ್ಲಿಷ್, ಫ್ರೆಂಚ್ ಮತ್ತು ಜರ್ಮನ್ ಸಾಹಿತಿಗಳು ಏಕ ಪ್ರಕಾರವಾಗಿ ದುಡಿದರು. ಡಚ್ಚರು ಮತ್ತು ಪೋರ್ಚುಗೀಸರು ಐತಿಹಾಸಿಕ ವಿಚಾರಗಳ ಮೇಲೂ ಇಟಾಲಿಯನ್ ಮತ್ತು ರಷ್ಯನ್ ವಿದ್ವಾಂಸರು ಭಾರತೀಯ ಕಾವ್ಯಗ್ರಂಥಗಳ ಕುರಿತಾಗಿಯೂ ಸಾಕಷ್ಟು ಭಾಷಾಂತರ ಮತ್ತು ವಿಮರ್ಶೆಗಳನ್ನು ನಡೆಸಿದ್ದಾರೆ. ಇವರೆಲ್ಲರಿಗೂ ಯಾವ ಭೇದ ವನ್ನು ಇಡದೆ ಬ್ರಿಟಿಷ್ ಸರಕಾರವೂ ಆಯಾ ದೇಶಗಳ ಸರಕಾರಗಳೂ ಸಹಾಯವ ನ್ನಿತ್ತಿವೆ.

ಕ್ರಿ. ಶ. 1850 ರ ಒಳಗಾಗಿಯೇ ಕಡಿಮೆ ಪಕ್ಷ 2500 ಭಾರತೀಯ ಭಾಷಾ ಗ್ರಂಥಗಳು ಇಂಗ್ಲಿಷ್ ಮತ್ತು ಇತರ ಐರೋಪ್ಯಾ ಭಾಷೆಗಳಿಗೆ ಅನುವಾದವಾಗಿವೆ. ಇನ್ನೊಂದು 2000 ಕ್ಕೂ ಮಿಕ್ಕಿ ಇತಿಹಾಸ ಮತ್ತು ತತ್ವಶಾಸ್ತ್ರಗಳ ಲೇಖನಗಳೂ ವಿಮರ್ಶೆಗಳೂ ಪ್ರವಾಸ ವರದಿಗಳೂ ಪ್ರಕಟವಾಗಿವೆ. ಇವುಗಳಲ್ಲದೆ ನೂರಾರು ವ್ಯಾಕರಣ,ಅರ್ಥಕೋಶ ಮತ್ತು ಭಾಷಾಶಾಸ್ತ್ರ ಗ್ರಂಥಗಳೂ ಈ ಅವಧಿಯಲ್ಲಿ ಬರೆಯ ಲ್ಪಟ್ಟಿವೆ.

ಹೇಗೂ ಈ ದೇಶದಲ್ಲಿ ಯಾವ ರೀತಿಯಲ್ಲೂ ತಮ್ಮ ಪ್ರಭಾವವನ್ನು ಬೀರದೇ ಇದ್ದ ಜರ್ಮನ್ನರು ನಮ್ಮ ಸಾಹಿತ್ಯ ಮತ್ತು ಸಂಸ್ಕೃತಿ ಪ್ರಚಾರ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿದರು. ಪ್ರಾಚೀನ ಗ್ರಂಥಗಳನ್ನು ಹೊರಗೆಡವಿ ಬ್ರಿಟಿಷ್ ಸರಕಾರದ ಆಶ್ರಯದಲ್ಲಿಯೇ ಅವುಗಳನ್ನು ಭಾಷಾಂತರಿಸಿ ಅನಂತರ ಅವನ್ನು ಅವುಗಳ ಮೂಲ ಪ್ರತಿಗಳ ಸಮೇತವಾಗಿ ಯೂರೋಪು ಖಂಡಕ್ಕೆ ಸಾಗಿಸಿದ ಜನಾಂಗದವರ ಪೈಕಿ ಜರ್ಮನ್ನರೇ ಹೆಚ್ಚು ಎಂದು ಹೇಳಬಹುದು. ಹಿಂದೆಯೇ ಹೇಳಿದಂತೆ ಸಾಹಿತ್ಯವು ಒಬ್ಬನ ಅಥವಾ ಒಂದು ದೇಶದ ಆಸ್ತಿ ಮಾತ್ರವಲ್ಲ; ಅದು ವಿಶ್ವದಲ್ಲಿಯೇ ಹರಡ ಬೇಕಾದ ಅಮೂಲ್ಯ ಹಾಗೂ ದಿವ್ಯ ಸಂಜೀವಿನಿಯೆಂದು ಅವರು ಭಾವಿಸಿ ನಮ್ಮ ಸಂಸ್ಕೃತಿಯ ಕುರುಹನ್ನು ಯೂರೋಪಿನಲ್ಲೆಲ್ಲಾ ಅಂದೆಯೇ ಬಿತ್ತರಿಸಿದರು.

ಯೂರೋಪಿನ ಜನರಲ್ಲಿ ಆರ್ಯರ ರಕ್ತವು ಹರಿಯುತ್ತಿದೆ ಎಂದಾಗ ಆ ವಿಷಯ

ದಲ್ಲಿ ಹೆಮ್ಮೆಗೊಂಡ ಒಂದು ಜನಾಂಗವು Adolph Hitler ಇವನಿಂದ ಮೊದಲ್ಗೊಂಡು ಇದ್ದ ಸಹಸ್ರಾರು ಜರ್ಮನ್ನರೇ ಆಗಿದ್ದಾರೆ. ಅದಕ್ಕನುಸಾರವಾಗಿಯೋ ಎಂಬಂತೆ ಅವರು ಇತರ ಜನಾಂಗಗಳಿಗಿಂತಲೂ ಹೆಚ್ಚಾಗಿ ಭಾರತೀಯ ಸಾಹಿತ್ಯ ಸಮೃದ್ಧಿಯನ್ನು ಕಂಡು ಅದನ್ನು ಆಸ್ವಾದಿಸಿ ಅರಗಿಸಿಕೊಂಡರು.

ಕಳೆವ ಶತಮಾನದ ಮೊದಲ ಭಾಗದಲ್ಲಿ Royal Asiatic Society ಇದರ ಮುಖ್ಯ ಕಾರ್ಯನಿರ್ವಾಹಕರಲ್ಲೊಬ್ಬನಾದ ಪ್ರಸಿದ್ಧ ಜರ್ಮನ್ ವಿದ್ವಾಂಸ John Anstruther ಇವನು ಭಾರತೀಯ ಗ್ರಂಥಗಳನ್ನು ಐರೋಪ್ಯಾ ಭಾಷೆಗಳಿಗಿಳಿಸಲು ಒಂದು ಸಮಿತಿಯನ್ನು ರಚಿಸಿದನು. ಅದರಲ್ಲಿ ಎಲ್ಲಾ ಪಾಶ್ಚಾತ್ಯ ಭಾಷಾ ಪ್ರತಿನಿಧಿಗಳೂ ಇದ್ದರು. ಈ ದೇಶದಲ್ಲಿ ಇದ್ದ ಜರ್ಮನ್ ಪಂಡಿತರಲ್ಲಿ ಹಲವರು ಕ್ರೈಸ್ತ ಮತ ಪ್ರಚಾರಕರಾಗಿದ್ದರು. ಬ್ರಿಟಿಷ್ ಸರಕಾರವು ಅವರ ಭಾಷಾ ಪಾಂಡಿತ್ಯವನ್ನು ಕಂಡು ಹಲವರಿಗೆ ಅವರ ಅಭಿರುಚಿಗೆ ತಕ್ಕಂಥಾ ಹುದ್ದೆಗಳನ್ನು ಕೊಟ್ಟು ಈ ದೇಶದಲ್ಲಿ ಅವರ ಸಾಹಿತ್ಯ ಮತ್ತು ಪ್ರಾಕ್ತನ ವಿಚಾರ ಸಂಶೋಧನಾ ಕಾರ್ಯವನ್ನೂ ವಿಶೇಷವಾಗಿ ಪ್ರೋತ್ಸಾಹಿಸಿತು.

**೧೩. ಹಲವು ಜರ್ಮನ್ ವಿದ್ವಾಂಸರು ವೇದವನ್ನು ಭಾಷಾಂತರಿಸಿದರು :—**

ಈ ದೇಶದ ಪ್ರಾಚೀನ ತತ್ವಶಾಸ್ತ್ರಗಳಲ್ಲಿ ಕಂಡು ಬಂದ ವಿಚಾರಧಾರೆ, ಪ್ರಾಚೀನ ಚರಿತ್ರೆ, ವಿಜ್ಞಾನ, ಭೂಗೋಳಶಾಸ್ತ್ರ, ವೈದ್ಯಶಾಸ್ತ್ರ, ಗಣಿತಶಾಸ್ತ್ರ, ಶಿಲ್ಪಶಾಸ್ತ್ರ, ನ್ಯಾಯಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಮೊದಲಾದುವುಗಳ ಅಪಾರ ವಿದ್ವತ್ತನ್ನೂ ಜ್ಞಾನ ಸಂಪತ್ತನ್ನೂ ಅವರು ಆದ್ಯಂತವಾಗಿ ಅನ್ವೇಷಿಸಲು ತೊಡಗಿದರು. ಚಾರಕ, ಸುಶ್ರುತ, ವರಾಹಮಿಹಿರ, ಮನು, ಮಿತಾಕ್ಷರ, ಯಾಜ್ಞವಲ್ಕ, ಭಾಸ್ಕರ, ಹೀಗೆ ಹಲವರ ಗ್ರಂಥಗಳನ್ನೂ, ವೇದ, ಉಪನಿಷತ್ತು, ಪುರಾಣಗಳೇ ಮೊದಲಾದುವನ್ನೂ ಅವರು ಭಾಷಾಂತರಿಸಿದರು. ಸಂಸ್ಕೃತದಿಂದ ಜರ್ಮನ್ ಭಾಷೆಗೆ, ಜರ್ಮನ್‌ನಿಂದ ಗ್ರೀಕ್‌ಯಾ ಲ್ಯಾಟಿನಿಗೆ ಅಥವಾ ಇಂಗ್ಲಿಷ್‌ಗೆ ಅವೆಲ್ಲವನ್ನೂ ಉರುಳಿಸಿದರು. ಅವುಗಳೊಡನೆಯೇ ಜರ್ಮನ್, ಲ್ಯಾಟಿನ್, ಸಂಸ್ಕೃತ, ಅರಬೀ, ಪರ್ಷಿಯನ್ ಇತ್ಯಾದಿ ಭಾಷೆಗಳನ್ನು ಸಮನ್ವಯಗೊಳಿಸಿ ಹಲವು ಭಾಷಾಶಾಸ್ತ್ರ, ವ್ಯಾಕರಣ, ಅರ್ಥಕೋಶಗಳನ್ನೂ ಬರೆದರು.

ಕಳೆದ ಶತಮಾನದಲ್ಲಿ ಪ್ರಚಂಡ ಜರ್ಮನ್ ಭಾಷಾಶಾಸ್ತ್ರಜ್ಞ Fredrich Von Schelegel ಇವನು ಕ್ರಿ. ಶ. 1800 ರ ಕಾಲದಲ್ಲಿ ಜರ್ಮನಿಯಲ್ಲಿ ಹಿಂದೂ ವೇದಾಂತದ ಕಹಳೆಯನ್ನು ಮೊಳಗಿಸಿದನು ಅವನ ಕಾಲದಿಂದ ಹಿಡಿದು ಕ್ರಿ. ಶ. 1900 ರಲ್ಲಿ ಗತಿಸಿದ Fredrich Max Mueller ಇವನ ವರೆಗೂ ಅಸಂಖ್ಯ ಜರ್ಮನ್ನರು ಸಂಸ್ಕೃತದ ಸೇವೆಯನ್ನು ತಮ್ಮ ಸ್ವಭಾಷಾ ಸೇವೆಗಿಂತಲೂ ಮಿಗಿಲಾದ ಉತ್ಸಾಹದಿಂದ ಕೈಗೊಂಡರು.

F. Von Schelegel, Frenz Bopp ಮತ್ತು Von Schroeder ಇವರು ಆ ಕಾಲದ ಹಿರಿಯ ಜರ್ಮನ್ ಸಾಹಿತಿಗಳಾಗಿದ್ದರು. ಇವರಿಂದ ಮೊದ

ಲ್ಗೊಂಡು ಕಳೆದ ಶತಮಾನದಲ್ಲಿ ಸುಮಾರು ಇಪ್ಪತ್ತು ಜನಕ್ಕೂ ಮಿಕ್ಕಿ ಜರ್ಮನ್ ಪಂಡಿತರು ವೇದಗಳನ್ನು ಭಾಷಾಂತರಿಸಿದ್ದಾರೆ, ಅಥವಾ ವೇದ ಸಂಹಿತೆಗಳ ಮೇಲೆ ಟೀಕೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. Prof. Max Mueller ಇವನ ಸಮಕಾಲೀನರಾಗಿ ಮತ್ತು ಅವನಿಗೂ ಹಿರಿಯರಾಗಿದ್ದ ವೇದಭಾಷ್ಯಕಾರರಲ್ಲಿ Dr. A. Roth, Prof. T. Benfey, Hermann Grassmann, Dr. John Muir, Dr. A. Weber ಎಂಬೀ ಕೆಲವರು ಪ್ರಮುಖರಾಗಿದ್ದರು. ತನಗಿಂತಲೂ ಹಿಂದಿದ್ದು ಭಾರತೀಯ ತತ್ವಶಾಸ್ತ್ರ ಗ್ರಂಥಗಳ ಪ್ರಚಾರದ ಬಗ್ಗೆ ಅಪಾರ ಸೇವೆಯನ್ನು ಸಲ್ಲಿಸಿದ ಆ ಹಿರಿಯ ವಿದ್ವಾಂಸರನ್ನು ಕುರಿತು Dr. Albrecht Weber ಇವನು 1852ರಲ್ಲಿ ಹೀಗೆ ಹೇಳಿದನು :—

"They are entitled to the credit of preserving these venerable works from destruction........"

### ೧೪. ಅದ್ವಿತೀಯ ಭಾಷಾ ಪಂಡಿತ— ವಾನ್ ಸ್ಕೆಲ್‌ಗೆಲ್ :—

ಜರ್ಮನ್ ಮತ್ತು ಇತರ ಭಾಷೆಗಳಿಗೆ ಶಾಸ್ತ್ರೀಯ ಸಮನ್ವಯವನ್ನೊದಗಿಸಿದ ಜರ್ಮನ್ ಪಂಡಿತರಲ್ಲಿ Fredrich Von Schelegel ಇವನು ಮೊದಲಿಗನೆನ್ನ ಬಹುದು. ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳಲ್ಲಿ ಹೇಗೋ ಹಾಗೆಯೇ ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳಲ್ಲೂ ಅವನು ಪ್ರೌಢ ವಿದ್ವಾಂಸನಾಗಿದ್ದನು. ತನ್ನ ಬಾಲ್ಯದಲ್ಲಿ ಸಂಸ್ಕೃತ ವಿದ್ಯಾಭ್ಯಾಸಕ್ಕೆ ಪ್ಯಾರಿಸ್‌ಗೆ ಹೋಗಿ ಅಲ್ಲಿಯೇ 1802ರಲ್ಲಿ ಭಗವದ್ಗೀತೆಯನ್ನು ಜರ್ಮನ್‌ಗೆ ಭಾಷಾಂತರಿಸಿದನು.

1808ರಲ್ಲಿ ಜರ್ಮನ್, ಲ್ಯಾಟಿನ್ ಮತ್ತು ಸಂಸ್ಕೃತ ಭಾಷೆಗಳನ್ನು ಕುರಿತಾದ ತುಲನಾತ್ಮಕ ಭಾಷಾಗ್ರಂಥವನ್ನು ಬರೆದು ಜರ್ಮನ್ ಸಾಹಿತ್ಯಕ್ಕೆ ಒಂದು ಹೊಸ ವರ್ಚಸ್ಸನ್ನೂ ನಾವಿನ್ಯತೆಯನ್ನೂ ಕೊಟ್ಟನು. ಅದರನಂತರ ಸಂಸ್ಕೃತ ಸಾಹಿತ್ಯವನ್ನು ಕುರಿತು ಬಹು ಪ್ರೌಢ ವ್ಯಾಸಂಗವನ್ನು ಕೈಗೊಂಡು ಪಾಣಿನಿಯ ವ್ಯಾಕರಣವನ್ನನುಸರಿಸಿ ಸಂಸ್ಕೃತ—ಜರ್ಮನ್ ವ್ಯಾಕರಣವನ್ನು ಬರೆದನು. ಸಂಸ್ಕೃತ ವ್ಯಾಕರಣವನ್ನು ಕುರಿತು ಅವನ ಅಭಿಪ್ರಾಯವು ಹೀಗಿತ್ತು :—

"...... The Indian grammar offers the best example of perfect simplicity, combined with the richest artistic construcion."

Von Schelegel ಇವನು ಅದ್ವಿತೀಯ ಭಾಷಾಪಂಡಿತನಾಗಿದ್ದನು. ಯಜುರ್ವೇದವನ್ನು ಜರ್ಮನ್‌ಗೂ ಅದರ ಕೆಲವು ಭಾಗಗಳನ್ನು ಲ್ಯಾಟಿನ್‌ಗೂ ಇಳಿಸಿದನು. ಋಗ್ವೇದ ಸಂಹಿತೆಗಳು, ಪುರಾಣಗಳು, ಮತ್ತು ಇತರ ಕಾವ್ಯ ಗ್ರಂಥಗಳನ್ನು ಪಠಿಸಿ ಮತ್ತು ವಿಮರ್ಶಿಸಿ ಅವುಗಳ ಮೇಲೆ ಉದ್ಗ್ರಂಥಗಳನ್ನು ಬರೆದನು. ಜಾಥಕ ಕಥೆಗಳನ್ನು ಭಾಷಾಂತರಿಸಿದನು. ಸಂಸ್ಕೃತ ಸಾಹಿತ್ಯ ಸಂಪತ್ತು ಅದೆಷ್ಟು ಸಮೃದ್ಧವಾಗಿದೆಯೆಂಬುದನ್ನು F. Von Schelegel ಇವನು ಹೀಗೆ ಹೇಳಿದ್ದಾನೆ:

Philosople Indorum ಎಂಬುದಾಗಿ ಬೆಂಗಳೂರಿನಲ್ಲಿ 1868 ರಲ್ಲಿ ಮುದ್ರಣ ವಾಯಿತು. Brevis Exposito ಎಂಬುದಾಗಿ ಹೇಳಲ್ಪಟ್ಟ ಈ ಜರ್ಮನ್ ಪುಸ್ತಕವನ್ನು Jhon Garrett ಇವನು ಬರೆದುದಾಗಿರಬಹುದೆಂದು ಊಹಿಸ ಲಾಗಿದೆ. R. T. H. Griffith ಇವನು 'ಕುಮಾರ ಸಂಭವ'ವನ್ನೂ H. Kern ಇವನು 'ಜಾತಕಕಥೆ'ಗಳನ್ನೂ Dr. J. S. Speijer ಇವನು 1886 ರಲ್ಲಿ ಸಂಸ್ಕೃತ ವ್ಯಾಕರಣವನ್ನು ಕುರಿತಾದ 390 ಪುಟಗಳ ಪುಸ್ತಕವನ್ನು ಜರ್ಮನ್ ಭಾಷೆಯಲ್ಲಿ ಬರೆದರು.

ಇನ್ನೂ ಕೆಲವು ಜರ್ಮನ್ ವಿದ್ವಾಂಸರ ಪೈಕಿ Betty Heimann ಇವನು ಆನಂದತೀರ್ಥ ಕಠೋಪನಿಷತ್ತನ್ನೂ Ernest Meier ಇವನು 1874 ರಲ್ಲಿ ಶಾಕುಂತಳಾ ನಾಟಕವನ್ನೂ ಮತ್ತು Richard Simon ಇವನು "Katha-kam—Ausgabe" ಎಂದು ಕಥಕಗಳನ್ನೂ ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಬರೆದರು. ಹೀಗೆ ಸಂಸ್ಕೃತ, ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಬರೆದವರಲ್ಲಿ Dr. Von Schroeder ಇವನು ಒಬ್ಬನು. ಯಜುರ್ವೇದ ಮತ್ತು ಕಥಕಗಳನ್ನು ಭಾಷಾಂತರಿಸಿದ ಇವನು ಪ್ರತಿಭಾವಂತನಾದ ಸಂಸ್ಕೃತ ವಿದ್ವಾಂಸನಾಗಿದ್ದನು. Prof. F. A. Rosen ಇವನು ಮತ್ತೊರ್ವ ಪ್ರಸಿದ್ಧವೇದಾಭ್ಯಾಸಿ ಯಾಗಿದ್ದನು. Prof. Max Mueller ಇವನಿಗೆ ಗುರುವಾಗಿದ್ದು Royal Asiatic Society ಇದರ ಜರ್ಮನ್ ಶಾಖೆಯ ಕಾರ್ಯದರ್ಶಿಯಾಗಿದ್ದು 1832ರ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಬಗ್ಗೆ ವಿಶೇಷ ವಿಚಾರ ಅನ್ವೇಷಣೆಯನ್ನು ನಡೆಸಿದ್ದಾನೆ.

### ೧೭. ಕೀಲ್‌ಹಾರ್ನ್, ಗೋಲ್ಡ್‌ಸ್ಟಕ್ಕರ್ ಮತ್ತು ಓಡೆನ್‌ಬರ್ಗ್ ಇವರು:—

ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳೆರಡರಲ್ಲೂ ಹಿಂದೂ ಪೌರಾಣಿಕ ಗ್ರಂಥ ಗಳನ್ನೂ ನೂರಾರು ಲೇಖನಗಳನ್ನೂ ಬರೆದು ಪ್ರಸಿದ್ಧರಾದ ಸಾಹಿತಿಗಳಲ್ಲಿ ಈ ಕೆಲವರ ಹೆಸರುಗಳನ್ನು ಹೇಳಲೇಬೇಕಾಗುತ್ತದೆ. ಡೆಕ್ಕನ್ ಕೊಲೇಜಿನ ಮುಖ್ಯಾಧಿಕಾರಿಯೂ ಭಾರತೀಯ ಸಂಸ್ಕೃತ ಶಾಲೆಗಳ ಮುಖ್ಯ ಪರಿಶೀಲಕನೂ ಆಗಿದ್ದ Dr. F. Kielhorn ಇವನು 'ಅಮರಕೋಶ'ವನ್ನು ತನ್ನ ಟೀಕಾಸಮೇತವಾಗಿ 1885 ರಲ್ಲಿ ಪ್ರಕಟಿಸಿದನು. ನಾಗೋಜಿಭಟ್ಟನ "ಪರಿಭಾಷೇಂದು ಶೇಖರ" ಇದನ್ನು ಸಂಪಾದಿಸಿ, ಭಾಷಾಂತರಿಸಿ ಮತ್ತು ವಿಮರ್ಶಿಸಿ ಸುಮಾರು 1000 demy ಪುಟಗಳ ಗ್ರಂಥ ವನ್ನು ಪ್ರಕಟಿಸಿದನು. ಪೌರಾಣಿಕ ಕೃತಿಗಳು, ಶಾಸನಗಳು, ಚಾರಿತ್ರಿಕ ವಿಷಯಗಳು ಮತ್ತು ಪರಿಶೋಧನಾ ವರದಿಗಳನ್ನು ಕುರಿತು ಹಲವು ಪತ್ರಿಕೆಗಳಲ್ಲಿ ಅಸಂಖ್ಯ ಲೇಖನ ಗಳನ್ನು ಬರೆದಿದ್ದಾನೆ. Prof. Kielhorn ಇವನ ಲೇಖನಗಳು Indian Antiquary ಪತ್ರಿಕೆಯೊಂದರಲ್ಲಿಯೇ ಸುಮಾರು 1750 folio ಪುಟಗಳಷ್ಟು ಆಗಿವೆ. ಇವನು ಪ್ರಸಿದ್ಧ ವಿದ್ವಾಂಸನು ಹೇಗೋ ಅದೇ ರೀತಿ ಪರಿಶೋಧಕನೂ ವಿಮರ್ಶ ಕನೂ ಆಗಿದ್ದು ಇವನ ಲೇಖನಗಳು ಜರ್ಮನ್ ಪತ್ರಿಕೆಗಳಲ್ಲೂ ಪ್ರಕಟವಾಗಿವೆ.

Theodor Goldstucker ಇವನು 1860 ರಲ್ಲಿ ಪಾಣಿನಿಯ ವ್ಯಾಕರಣ

ವನ್ನನುಸರಿಸಿ ಸಂಸ್ಕೃತ ವ್ಯಾಕರಣವನ್ನು ಬರೆದನಲ್ಲದೆ ಪಾಣಿನಿಯು ಸಂಸ್ಕೃತ ಸಾಹಿತ್ಯಕ್ಕೆ ಇತ್ತ ಕಾಣಿಕೆಯೇನು ಎಂಬುದರ ಮೇಲೆ 268 folio ಪುಟಗಳ ವಿಚಾರ ಗರ್ಭಿತವಾದ ಗ್ರಂಥವನ್ನು ಬರೆದನು. 'ಮಾನವ ಕಲ್ಪಸೂತ್ರ' ಎಂದು ವೇದಕರ್ಮಗಳನ್ನು ಕುರಿತಾದ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿದನು. ಮೀಮಾಂಸ ವಿದ್ಯೆಯನ್ನು ಕುರಿತು ಇರುವ ಎಲ್ಲಾ ಸಂಸ್ಕೃತ ಗ್ರಂಥಗಳನ್ನೂ ಸಂಪಾದಿಸಿದನು.

'Hermann Oldenberg ಇವನು ಮತ್ತೊರ್ವ ಪ್ರಸಿದ್ಧ ಜರ್ಮನ್ ಪ್ರಾಧ್ಯಾಪಕ, ವೇದಾಭ್ಯಾಸಿ, ಭಾಷಾಂತರಕಾರ ಮತ್ತು ವಿಮರ್ಶಕ! ಜರ್ಮನ್ ಭಾಷೆಯಲ್ಲಿ ಬರೆದ ಇವನ ಮಹಾಭಾರತವು ಹಲವು ಬಾರಿ ಪುನರ್ಮುದ್ರಣವಾದಾಗ Dr. Oldenberg ಇವನು ಯೂರೋಪಿನಲ್ಲೆಲ್ಲಾ ಪರಿಚಿತನಾದನು. ಋಗ್ವೇದ ಸಂಹಿತೆಗಳನ್ನು ಟೀಕಾ ಸಮೇತವಾಗಿ 1000 folio ಪುಟಗಳಷ್ಟು ವಿಸ್ತಾರವಾಗಿ ಬರೆದನು. ಜರ್ಮನಿಯಿಂದಲೇ ಇವನು ಭಾರತೀಯ ಚರಿತ್ರೆ ಮತ್ತು ಸಾಹಿತ್ಯವನ್ನು ಕುರಿತು Asiatic Society Journal ಮತ್ತು Indian Antiquary ಪತ್ರಿಕೆಗಳಲ್ಲಿ ನೂರಾರು ವಿದ್ವತ್ಪೂರ್ಣವಾದ ಲೇಖನಗಳನ್ನು ಬರೆದಿದ್ದಾನೆ. ಪ್ರಸಿದ್ಧ ಜರ್ಮನ್ ವೇದಾಭ್ಯಾಸಿಗಳೂ ಟೀಕಾಕಾರರೂ ಆದ R. Garbe, J. Grill, K. F. Geldner, R. Roth ಈ ಮೊದಲಾದ ವಿದ್ವಾಂಸರ ಮಟ್ಟದಲ್ಲಿ ನಿಲ್ಲಬಹುದಾದ H. Oldenberg ಇವನು Prof. Max Mueller ಇವನಿಗೂ ಹಲವು ರೀತಿಯಲ್ಲಿ ಸಹಾಯಕನಾಗಿದ್ದ ಶ್ರೇಷ್ಠ ಪಂಡಿತನಾಗಿದ್ದನು.

**೧೮. ವ್ಹಿಟ್‌ನೀ, ಮ್ಯಾಕ್ಡೊನಾಲ್ ಮತ್ತು ಗ್ರಿಫ್ಹೀ ಇವರು :—**

ಲೈಪ್‌ಜ್ಹಿಂಗ್ ವಿಶ್ವವಿದ್ಯಾಲಯದಲ್ಲಿದ್ದ W. D. Whitney ಇವನು ಅಗ್ರಗಣ್ಯ ವಿದ್ವಾಂಸರಲ್ಲಿ ಒಬ್ಬನು. ಐರೋಪ್ಯಾದ ಜನಕ್ಕೆ ಸಂಸ್ಕೃತವನ್ನು ಕಲಿಸಲು 1885 ರಲ್ಲಿ 280 demy ಪುಟಗಳ ಸಂಸ್ಕೃತ ಮೂಲ ವ್ಯಾಕರಣವನ್ನು ಬರೆದನು. 1889 ರಲ್ಲಿ ಅದನ್ನೇ ಇನ್ನೂ ವಿಸ್ತಾರವಾಗಿ 560 demy ಪುಟಗಳಲ್ಲಿ ಬರೆದನು. Prof. Max Mueller ಇವನ 'Sacred Books of the East' ಈ ಗ್ರಂಥಮಾಲೆಗೆ Prof. Whitney ಇವನು ವೇದ ಸಂಹಿತೆಗಳನ್ನು ಕುರಿತಾಗಿ ಒಂದೆರಡು ಗ್ರಂಥಕಾಂಡಗಳನ್ನು ಸುಮಾರು 950 demy ಪುಟಗಳಲ್ಲಿ ಬರೆದನು. ಅಲ್ಲದೆ Harvard Oriental Series ಪ್ರಕಟಣೆಗಳಿಗೆ ಅಥರ್ವಣವೇದ ಸಂಹಿತೆಗಳ ಭಾಷಾಂತರ ಮತ್ತು ವ್ಯಾಖ್ಯಾನವನ್ನು Dr. Bloomfield ಮತ್ತು Prof. A. Weber ಇವರೊಡನೆ ಸೇರಿ 4500 folio ಪುಟಗಳಷ್ಟು ಭಾಷ್ಯವನ್ನು ಬರೆದದ್ದು ಇವನ ಅದ್ಭುತ ರಚನೆಯಾಗಿತ್ತು. ವೇದ ಮಂತ್ರಗಳನ್ನು ಕುರಿತು ಹೇಳುವಾಗ Prof. Whitney ಇವನ ಅಭಿಪ್ರಾಯವು ಹೀಗಿತ್ತು :—

"The greater portion of the hymns are plainly shown, both by their language and internal character, to be of much later date than the general contents of the other historic Vedas........".

ಸುಮಾರು 35 ವರ್ಷಗಳ ಕಾಲ ಹಿಂದೂಸ್ಥಾನದಲ್ಲಿದ್ದ Prof. A. A. Macdonall ಇವನು ಇನ್ನೊರ್ವ ಪ್ರಚಂಡ ವೇದಾಭ್ಯಾಸಿಯಾಗಿದ್ದನು. ಇವನ Vedic Mythology, Vedic Index ಎಂಬೀ ಬಗೆಯ folio ಪುಟಗಳ ಗ್ರಂಥಗಳು ಕಳೆದ ಶತಮಾನಾಂತ್ಯದಲ್ಲಿ ತುಂಬಾ ಜನಪ್ರಿಯವಾಗಿದ್ದುವು. ಇವನು 1870 ರಲ್ಲಿ ಪ್ರಕಟಿಸಿದ ಸಂಸ್ಕೃತ ಮೂಲವ್ಯಾಕರಣವೂ ಸಂಸ್ಕೃತ—ಇಂಗ್ಲಿಷ್ ನಿಘಂಟೂ ಅಂದೆಯೇ ಒಂದೆರಡು ಬಾರಿ ಪುನರ್ಮುದ್ರಣವಾದುವು. 'ಬೃಹದ್ದೇವತಾ' ಎಂಬ 334 ಪುಟಗಳ ಮತ್ತು ಕಾತ್ಯಾಯನನ ಋಗ್ವೇದ ಭಾಷ್ಯದ 224 demy ಪುಟಗಳ ಗ್ರಂಥಗಳೂ ವಿಶೇಷ ಜನಪ್ರಿಯವಾಗಿದ್ದುವು. Prof. Macdonall ಇವನು ಯೂರೋಪಿಗೆ ಹಿಂದಿರುಗಿದನಂತರ ಓಕ್ಸ್‌ಫರ್ಡ್‌ನಲ್ಲಿಯೇ ತನ್ನ ಕಡೇ ದಿನಗಳನ್ನು ಕಳೆದನು. ಭಾರತೀಯ ಸಾಹಿತ್ಯ ಮತ್ತು ಜನಜೀವನದ ಮೇಲೂ ಆರೆಂಟು ಉದ್ಗ್ರಂಥಗಳನ್ನು ಬರೆದಿದ್ದು ಅವುಗಳಲ್ಲಿ ಒಂದೆರಡು ಕೂಡಲೇ ಪುನರ್ಮುದ್ರಣವಾದುವು.

Prof. R. T. H. Griffith ಇವನು ಸಂಸ್ಕೃತ ಕಾವ್ಯಗ್ರಂಥಗಳ ಮೇಲೆ ಹಲವು ಕಿರುಹೊತ್ತಗೆಗಳನ್ನು ಬರೆದ ಒರ್ವ ಹಿರಿಯ ವರ್ಗಕ್ಕೆ ಸೇರಿದ ಸಾಹಿತಿಯಾಗಿದ್ದನು. ಇಂಗ್ಲಿಷ್‌ನಲ್ಲೂ ಜರ್ಮನ್‌ನಲ್ಲೂ ಏಕಪ್ರಕಾರವಾಗಿ ಗ್ರಂಥಗಳನ್ನು ರಚಿಸಿದ್ದಾನೆ. 'ಕುಮಾರ ಸಂಭವ'ವನ್ನು ಜರ್ಮನ್‌ಗೆ ತಿಳಿಸಿ ಅದೇ ಶೈಲಿಯಲ್ಲಿ ವಾಲ್ಮೀಕಿ ರಾಮಾಯಣವನ್ನು ಇಂಗ್ಲಿಷ್‌ನಲ್ಲಿ ಸರಳ ರಗಳೆಯಲ್ಲಿ ಬರೆದದ್ದು 600 folio ಪುಟಗಳ ಸುಂದರವಾದ ಕಾವ್ಯಗ್ರಂಥವಾಯಿತು. ವಾಲ್ಮೀಕಿಯನ್ನು ಬ್ರಹ್ಮನೆಂದೇ ಸಂಬೋಧಿಸಿ ಬರೆದ ಈ ಸರಳ ಸುಂದರ ಕಾವ್ಯವು ಇಂದಿಗೂ ಪುನರ್ಮುದ್ರಣವಾಗುವಷ್ಟು ಅರ್ಹವಾಗಿದೆ :—

"The tale that saintly Narada told
In all its glorious length unfold
In all thy poem, through my grace,
No word of falsehood shall have place."

## ೧೯. ಜಾನ್ ಮೂರ್ ಮತ್ತು ಇತರರ ಭಾಷಾಂತರಗಳು :—

ಕಳೆದ ಶತಮಾನದಲ್ಲಿ ಜರ್ಮನ್ ವಿದ್ವಾಂಸರಲ್ಲಿ ಭಾರತೀಯ ಗ್ರಂಥಗಳನ್ನು ಲ್ಯಾಟಿನ್ ಗ್ರೀಕ್, ಇಟಾಲಿಯನ್ ಮೊದಲಾದ ಭಾಷೆಗಳಿಗಿಳಿಸಿದವರು ಹಲವರು ಇದ್ದಾರೆ. ಆದರೆ ಇವರು ಮೂಲತಃ ಜರ್ಮನ್ ಭಾಷೆಯಲ್ಲಿ ಬರೆದ ಗ್ರಂಥಗಳೇ ಯೂರೋಪಿನಲ್ಲಿ ಬಹು ಸಂಖ್ಯೆಯಲ್ಲಿ ಪ್ರಚಾರವಾದುವು. ಈ ಕೆಲವು ಇಂಗ್ಲಿಷ್ ಮತ್ತು ಜರ್ಮನ್ ಸಾಹಿತಿಗಳಲ್ಲಿ Dr. Taylor ಇವನು ವೇದಾಂತವನ್ನು "ಆತ್ಮ ಬೋಧೆ"ಯೆಂದು ಬರೆದನು. "ಪ್ರಬೋಧ ಚಂದ್ರೋದಯ"ವೆಂಬ ನಾಟಕವನ್ನು "ಲೀಲಾವತಿ" ಗಣಿತಶಾಸ್ತ್ರವನ್ನೂ ಇಂಗ್ಲಿಷ್‌ನಲ್ಲಿ ಬರೆದನು.

ಅಶ್ವಘೋಷನು ಪ್ರತಿಪಾದಿಸಿದ ಬೌದ್ಧ ತತ್ವವನ್ನು B. H. Hodgson

ಇವನು ಇಂಗ್ಲಿಷ್‌ನಲ್ಲಿ ಬರೆದನು. Prof. Wilson ಇವನು ಬರೆದ ಮಹಾಭಾರತದ ಮೇಲೆ ಒಂದು ವಿದ್ವತ್ಪೂರ್ಣವಾದ ವಿಮರ್ಶೆಯನ್ನು F. Johnson ಇವನು ಬರೆದನು. J. Stevenson ಇವನು ಸಾಮವೇದ ಸಂಹಿತೆಗಳನ್ನು 1842 ರಲ್ಲಿ ಭಾಷಾಂತರಿಸಿದನು. E. Rosen ಇವನು 1835 ರಲ್ಲಿ ಋಗ್ವೇದ ಸಂಹಿತೆಗಳನ್ನೂ, A. F. Stenzler ಇವನು 1838 ರಲ್ಲಿ ಮಹಾಭಾರತದ ಸಾವಿತ್ರಿ ಮತ್ತಿತರ ಉಪಾಖ್ಯಾನಗಳನ್ನೂ ಲ್ಯಾಟಿನ್ ಭಾಷೆಯಲ್ಲಿ ಬರೆದರು.

ಸಂಸ್ಕೃತ–ಇಂಗ್ಲಿಷ್, ಸಂಸ್ಕೃತ–ಜರ್ಮನ್, ಸಂಸ್ಕೃತ—ಲ್ಯಾಟಿನ್ ಇತ್ಯಾದಿ ಅರ್ಥಕೋಶಗಳನ್ನೂ ಸಂಸ್ಕೃತ ವ್ಯಾಕರಣಗಳನ್ನೂ ನೂರಾರು ವಿದ್ವಾಂಸರು ಆಗಾಗಲೇ ಬರೆದಿದ್ದಾರೆ. ಇವರ ಪೈಕಿ H. P. Forester ಎಂಬ ಆಂಗ್ಲ ಪಂಡಿತನು 1810 ರಷ್ಟು ಹಿಂದೆಯೇ ಬರೆದ Principles of Sanskrit Language ಐರೋಪ್ಯಾ ಸಾಹಿತಿಗಳಿಗೆ ಕೈಗನ್ನಡಿಯಾಗಿತ್ತು. ಅದಕ್ಕಿಂತಲೂ ಹಿಂದೆ 1800 ರಲ್ಲಿ ಇವನು ಬರೆದ Travels along the Ganges and Jumna ಎಂಬ folio ಪುಟಗಳ ಪ್ರವಾಸ ವರದಿಯು ಬಣ್ಣ ಚಿತ್ರಗಳಿಂದ ಕೂಡಿ ತುಂಬಾ ಆಕರ್ಷಕ ವಾದ ಗ್ರಂಥವಾಗಿದೆ. ಶ್ರೀರಾಮ್‌ಪುರ ಕ್ರೈಸ್ತಮತ ಪ್ರಚಾರ ಶಿಬಿರದಲ್ಲಿದ್ದ Rev. W. Ward ಇವನು 1815 ರಲ್ಲಿ ಬರೆದ A View of the History, Literature and Religion of Hindus ಎಂಬ 1200 folio ಪುಟ ಗಳ ಪುಸ್ತಕವು ಎರಡು ಕಾಂಡಗಳಾಗಿ ಪ್ರಕಟವಾಯಿತು.

Dr. John Muir ಇವನು ಓರ್ವ ಶ್ರೇಷ್ಠ ಸಂಸ್ಕೃತ ವಿದ್ವಾಂಸನೂ ಪ್ರಾಧ್ಯಾಪಕನೂ ಆಗಿದ್ದನು. ಅರಣ್ಯಕ ಮತ್ತು ಬ್ರಾಹ್ಮಣಗಳ ಮೇಲೆ Prof. Weber ಮತ್ತು ಅಮೇರಿಕಾದ M. Bloomfield ಇವರೊಡನೆ ಸೇರಿ ಪ್ರೌಢ ವಿಮರ್ಶೆಯನ್ನು ನಡೆಸಿದನು. ಈ ಗ್ರಂಥಗಳಲ್ಲಿ ಕಂಡು ಬರುವ ಹಿಂದೂ ಆರಾಧ್ಯ ದೇವತೆಗಳ ಪಾತ್ರವನ್ನು ಕುರಿತು Dr. Muir ಇವನು ಹೀಗೆನ್ನುತ್ತಾನೆ :—

" The conceptions of the god-head expressed in these texts are of a wavering and undetermined character. It is clear that the authors had not attained to a distinct and logical comprehension of the characteristics which they ascribed to the objects of their adoration .....".

Dr. John Muir ಇವನು ಬೌದ್ಧ ಧರ್ಮ ಗ್ರಂಥಗಳಲ್ಲಿ ಹಲವನ್ನು ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಿಗೆ ಇಳಿಸಿರುವನು. 1873 ರಲ್ಲಿ ಇವನ "ಲಲಿತ ವಿಸ್ತಾರ" ಇದರ ಭಾಷಾಂತರ ಪ್ರಕಟವಾಯಿತು. ಅದರ ಇಂಗ್ಲಿಷ್ ಅನುವಾದದ ಕೆಲವು ಪಂಕ್ತಿಗಳನ್ನು ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

" On Himalaya's lonely steep
There lived of old a holy sage
Of shrivelled form, and bent with age

I mured to meditation deep......
He, when great Buddha had been born
The glory of the Sakya race,
Endowed with every holy grace,
To save the suffering world forlorn........"

---

೫

" ಅರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರನ್ನಂ.
ಕನ್ನಡಮೆರಡರು ನೂರರ
ಕನ್ನಡಮಾ ತಿರುಳಕನ್ನಡಂ ಮಧು ರವ್ಯೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗಳ್ದುಭಯ ಕವಿತೆಯೊಳ್ ಕವಿರನ್ನಂ.

(ರನ್ನಂ)

ಪಾಶ್ಚಾತ್ಯ ವಿದ್ವಾಂಸರು ಸಂಸ್ಕೃತ ಮತ್ತು ವಿವಿಧ ಪ್ರಾಂತೀಯ ಭಾಷೆಗಳ ಪ್ರಾಚೀನ ಗ್ರಂಥಗಳೆಲ್ಲವನ್ನೂ ಸಂಪಾದಿಸಿ, ಪರಿಷ್ಕರಿಸಿ, ಮತ್ತು ಪ್ರಕಟಿಸಿ ಮಾಡಿದ ಸೇವೆಯು ಅಪಾರವಾದುದು. ಅವರಲ್ಲಿ ಶೇಕಡ 95 ರಷ್ಟು ಜನರು ಸಂಸ್ಕೃತದಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದರು. ಹೇಗೂ ಈ ಗ್ರಂಥದಲ್ಲಿ ಕನ್ನಡ ಭಾಷೆಗೆ ಅವರು ಸಲ್ಲಿಸಿದ ಸೇವೆಯನ್ನು ಮಾತ್ರ ವಿಶದವಾಗಿ ಪ್ರಸ್ತಾಪಿಸಲಾಗಿದೆಯಲ್ಲದೆ ಉಳಿದ ಎಲ್ಲಾ ಭಾಷೆಗಳ ಅನ್ವೇಷಣೆಯನ್ನೆಸಗಿದ ಸಹಸ್ರಾರು ವಿದ್ವಾಂಸರ ಹೆಸರುಗಳನ್ನೂ ಅವರು ಭಾರತದ ವಿವಿಧ ಭಾಷೆಗಳಲ್ಲಿ ಬರೆದ ಪುಸ್ತಕಗಳು, ಭಾಷಾಂತರಗಳು, ಅರ್ಥ ಕೋಶಗಳು, ವ್ಯಾಕರಣಗಳು ಇತ್ಯಾದಿಗಳೆಲ್ಲವನ್ನೂ ಇಲ್ಲಿ ಹೇಳುವುದು ಅಸಾಧ್ಯವೂ ಅನೌಚಿತ್ಯವೂ ಆಗಿದೆ.

ಆದರೆ ಸಂಸ್ಕೃತವು ಈ ದೇಶದ ಎಲ್ಲಾ ಭಾಷೆಗಳಿಗೆ ಮತ್ತು ಉಪಭಾಷೆಗಳಿಗೆ ಆಧಾರಪ್ರಾಯವಾದ ಗೀರ್ವಾಣ ಭಾಷೆಯಾದುದರಿಂದ ಅದರ ಮೂಲಕವಾಗಿಯೇ ಪಾಶ್ಚಾತ್ಯರು ಈ ದೇಶದ ಪ್ರಾಚೀನ ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳೆಲ್ಲವನ್ನೂ ಅನ್ವೇಷಿಸಿದರು. ಪ್ರಾಚೀನ ಸಂಸ್ಕೃತ ಕಾವ್ಯ, ವ್ಯಾಕರಣ ಮತ್ತು ಧರ್ಮಶಾಸ್ತ್ರಗ್ರಂಥ ಗಳನ್ನು ಮೊಟ್ಟಮೊದಲಾಗಿ ಭಾಷಾಂತರಿಸಿದರು. ತಾವು ಪಡೆದ ಸಂಸ್ಕೃತವಿದ್ವತ್ತನ್ನು ತಮ್ಮ ಸ್ವದೇಶಗಳಿಗೆ ಹೊತ್ತುಕೊಂಡು ಹೋಗಿ ಅಲ್ಲಿಂದಲೂ ಈ ದೇಶದ ಸಾಹಿತ್ಯ ಮತ್ತು ಚರಿತ್ರೆಯ ಬಗ್ಗೆ ವ್ಯಾಸಂಗ ನಡೆಸಿದರು. ಅವರ ಪೈಕಿ ಈ ವರೆಗೆ ಹೇಳಲ್ಪಟ್ಟ ಕೆಲವರು ಮಾತ್ರವಲ್ಲದೆ ಅದೇ ವರ್ಗದ ಇನ್ನೂ ಹಲವು ಉದ್ದಾಮ ಪಂಡಿತರ ಹೆಸರು ಗಳನ್ನೂ ಇಲ್ಲಿ ಸೂಚಿಸುವದು ಅವಶ್ಯವಿದೆ. ಮುಂದಿನ ನಾಲ್ಕಾರು ಅಧ್ಯಾಯಗಳಲ್ಲಿ ಅಂಥಾ ಕೆಲವು ಶ್ರೇಷ್ಠ ಸಾಹಿತಿಗಳು ಮತ್ತು ಅವರು ಸಾಧಿಸಿದ ಕೆಲಸವನ್ನು ಸೂಕ್ಷ್ಮ ವಾಗಿ ನಿರೂಪಿಸಲಾಗಿದೆ.

**೨. ಡಚ್ಚ್, ಇಟಾಲಿಯನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ :—**

**ಡಚ್ಚ್, ಇಟಾಲಿಯನ್ ಮತ್ತು ಲ್ಯಾಟನ್ ಭಾಷೆಗಳಿಗೆ ಪರಿವರ್ತಿಸಲಾದ**

ಕೆಲವು ಪ್ರಾಮುಖ್ಯ ಭಾರತೀಯ ಗ್ರಂಥಗಳನ್ನು ಅವುಗಳ ಲೇಖಕರನ್ನೂ ಇಲ್ಲಿ ಹೆಸರಿಸುವುದು ಅಗತ್ಯವಿದೆ. K. F. Johansson ಇವನು ಕಠೋಪನಿಷತನ್ನು ಡಚ್ಚ್ ಭಾಷೆಗೂ Antonio Morazzi ಇವನು 1871 ರಲ್ಲಿ ಕಾಳಿದಾಸನ ಕಾವ್ಯಗಳನ್ನು ಇಟಾಲಿಯನ್ ಭಾಷೆಗೂ ಇಳಿಸಿದನು. Dr. Caland ಇವನು ಗೌತಮನ ಬೌದ್ಧಯಾನ ಮತ್ತು ಕಥಕಗಳನ್ನು ಡಚ್ಚ್ ಭಾಷೆಗಿಳಿಸಿದುದಲ್ಲದೆ ವೇದ ಮತ್ತು ಉಪನಿಷತ್ತುಗಳನ್ನು ಕುರಿತಾಗಿ ದೀರ್ಘಾನ್ವೇಷಣೆಯನ್ನು ನಡೆಸಿದ ಪ್ರಸಿದ್ಧ ಸಾಹಿತಿಯಾಗಿದ್ದನು.

E. G. F. Olbers ಇವನು ಹಲವು ಪುರಾಣ ಕಥೆಗಳನ್ನು ಲ್ಯಾಟಿನ್ ಭಾಷೆಯಲ್ಲಿ ಬರೆದನು. P. E. Faucaux ಇವನು ಋಗ್ವೇದವನ್ನು 1872 ರಲ್ಲಿ ಲ್ಯಾಟಿನ್‌ನಲ್ಲಿ ಬರೆದನು. L. Von Schroeder, Dr. W. Neisser, Prof. A. Weber, Prof. Keith, Dr. Caland, ಮತ್ತು Prof. Pischel ಇವರು ಹಲವು ಸಂಸ್ಕೃತ ಕಾವ್ಯ ಮತ್ತು ಶಾಸ್ತ್ರಗ್ರಂಥಗಳನ್ನು ಒಟ್ಟಾಗಿ ಮತ್ತು ಬೇರೆಬೇರೆಯಾಗಿ ಜರ್ಮನ್, ಲ್ಯಾಟಿನ್, ಡಚ್ಚ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಬರೆದಿದ್ದಾರೆ.

Otto Walter ಇವನು ವಾಲ್ಮೀಕಿ ರಾಮಾಯಣವನ್ನು, Dr. Luders ಮತ್ತು Prof. Jacobi ಇವರು ಒಟ್ಟು ಸೇರಿ ಮಹಾಭಾರತದ ಭಾಷಾಂತರ ಮತ್ತು ವಿಮರ್ಶೆಯನ್ನು ಬರೆದರು. ಲ್ಯಾಟಿನ್ ಮತ್ತು ಜರ್ಮನ್ ಭಾಷೆಗಳೆರಡರಲ್ಲೂ ಬರೆದ ಇತರ ಕೆಲವು ವಿದ್ವಾಂಸರಲ್ಲಿ ಜರ್ಮನಿಯ ಹೇಲ್ ವಿಶ್ವವಿದ್ಯಾಲಯದ Dr. Gosche, Dr. Schlottman ಮತ್ತು ಲೈಪ್‌ಸ್ಜಿಗ್ ವಿಶ್ವವಿದ್ಯಾಲಯದ Dr. Fleischer, Prof. Krehl ಮತ್ತು Prof. Ludolf Kreht ಇವರು ವಿವಿಧ ಸಂಸ್ಕೃತ ಗ್ರಂಥಗಳ ಮೇಲೆ ವಿಮರ್ಶೆ ಮತ್ತು ವ್ಯಾಖ್ಯಾನವನ್ನು ಬೇರೆಬೇರೆ ಗ್ರಂಥಗಳಾಗಿ ಬರೆದಿದ್ದಾರೆ.

Prof. A. Ludwig ಇವನ ಶಿಷ್ಯನಾದ Dr. M. Winternitz ಇವನು ಬರ್ಲಿನ್ ವಿಶ್ವವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪಕನಾಗಿದ್ದು ಇಂಗ್ಲಿಷ್ ಮತ್ತು ಜರ್ಮನ್‌ಗಳೆರಡರಲ್ಲೂ ಗ್ರಂಥಗಳನ್ನು ಬರೆದಿದ್ದಾನೆ. ದಕ್ಷಿಣ ಹಿಂದೂಸ್ಥಾನದ ಓಲೆಗ್ರಂಥಗಳ ಪಟ್ಟಿಯನ್ನು ತಯಾರಿಸಿದನು. ಇವನು ಸಂಸ್ಕೃತ ಸಾಹಿತ್ಯಚರಿತ್ರೆಯನ್ನು ಬರೆದದ್ದು 1880 ರಿಂದ ಹಲವು ಬಾರಿ ಪುನರ್ಮುದ್ರಣವಾಯಿತು. Prof. Max Mueller ಇವನೊಡನೆ ಸೇರಿ ವೇದ ಮತ್ತು ಪುರಾಣಗಳ ಮೇಲೂ ಪೀಠಿಕೆಯನ್ನು ಬರೆದನು. ಇವನ ಆಪಸ್ತಂಬ ನ್ಯಾಯಸೂತ್ರ ಮತ್ತು ವೇದಗಳ ಮೇಲಿನ ವಿಮರ್ಶೆಗ್ರಂಥಗಳು ಜರ್ಮನ್ ಮತ್ತು ಇಂಗ್ಲಿಷ್‌ಭಾಷೆಗಳೆರಡರಲ್ಲೂ ಪ್ರಕಟವಾದುವು. ಇದೇ ರೀತಿ ಇನ್ನೂ ಹಲವು ಜರ್ಮನ್ ಪಂಡಿತರು ಫ್ರೆಂಚ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಭಾರತೀಯ ಭಾಷಾಗ್ರಂಥಗಳನ್ನೂ ವ್ಯಾಕರಣಗಳನ್ನೂ ಗ್ರೀಕ್ ಇಟಾಲಿಯನ್, ಡಚ್ಚ್ ಮತ್ತಿತರ ಭಾಷೆಗಳಿಗಿಳಿಸಿದ್ದಾರೆ.

**೩. ಇನ್ನೂ ಕೆಲವು ರಷ್ಯನ್, ಲ್ಯಾಟಿನ್ ಮತ್ತು ಇಂಗ್ಲಿಷ್ ಬರಹಗಾರರು :—**

W. O. Windisch ಇವನು ಬೌದ್ಧಸಾಹಿತ್ಯ, ಸೂತ್ರಪೀಠಕಾ. ಮತ್ತು 'ಲಲಿತವಿಸ್ತಾರ' ಇವುಗಳನ್ನು ರಷ್ಯನ್ ಭಾಷೆಯಲ್ಲಿ ಬರೆದನು. C. Bruce ಮತ್ತು Dr. Ruckart ಇವರು ರಷ್ಯನ್ ಭಾಷಾಪಂಡಿತರಾಗಿ ಕೆಲವು ಸಂಸ್ಕೃತ ಶಾಸ್ತ್ರೀಯ ಗ್ರಂಥಗಳನ್ನು ಭಾಷಾಂತರಿಸಿದರು. Kosowicz ಇವನು ಇನ್ನೋರ್ವ ರಷ್ಯನ್ ಮತ್ತು ಸಂಸ್ಕೃತ ಪಂಡಿತನಾಗಿದ್ದನು. ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದ ಹಲವು ರಷ್ಯನ್ ಪ್ರಾಧ್ಯಾಪಕರು ಭಾರತೀಯ ಸಾಹಿತ್ಯದ ಬಗ್ಗೆ ವಿಶೇಷ ಅನ್ವೇಷಣೆಯನ್ನು ನಡೆಸಿದ್ದಾರೆ.

ಇಂಗ್ಲಿಷ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಬರೆದ ಸಂಸ್ಕೃತ ವಿದ್ವಾಂಸರ ಪೈಕಿ ಮಾಳವಿಕಾಗ್ನಿಮಿತ್ರ ನಾಟಕವನ್ನು 1875ರಲ್ಲಿ ಭಾಷಾಂತರಿಸಿದ C. T. Tawney ಇವನು ಪ್ರಸಿದ್ಧನು. Dr. Barth ಇವನು ಹಿಂದೂಸ್ಥಾನದ ವಿವಿಧ ಮತಧರ್ಮ ವನ್ನು ಕುರಿತು ವಿವರಣಾತ್ಮಕವಾದ ಗ್ರಂಥವನ್ನು ಬರೆದನು. ಸಂಸ್ಕೃತ, ಗ್ರೀಕ್ ಮತ್ತು ಲ್ಯಾಟಿನ್ ಭಾಷಾ ಶಾಸ್ತ್ರಜ್ಞ C. E Little ಇವನು ಛಾಂದೋಗ್ಯೋಪ ನಿಷತ್ತನ್ನು ಭಾಷಾಂತರಿಸಿದನು. Prof. Dowson ಇವನು ಹಿಂದೂ ಪೌರಾಣಿಕ ಅರ್ಥಕೋಶವೆಂಬ 600 demy ಪುಟಗಳ ಗ್ರಂಥವನ್ನು ಇಂಗ್ಲಿಷ್‌ನಲ್ಲಿ ಬರೆದನು.

W. J. Wilkins ಇವನು ಹಿಂದೂ ದೇವತೆಗಳು, ದಶಾವತಾರಗಳು, ಋಷಿಗಳು ಮೊದಲಾದವರನ್ನು ಕುರಿತು ಬರೆದ 550 demy ಪುಟಗಳ ಗ್ರಂಥವು ಎರಡನೇ ಬಾರಿಗೆ 1882 ರಲ್ಲಿ ಪ್ರಕಟವಾಯಿತು. Dr. Murray, Mitchell ಇವನು ಉಪನಿಷತ್ತು ಮತ್ತು Rev. Stevenson ಇವನು ಸಾಮವೇದವನ್ನು ಭಾಷಾಂತರಿಸಿದನು. Dr. John Muir ಇವನು ವೇದ ಉಪನಿಷತ್ತು ಮತ್ತು ಆರಣ್ಯಕಗಳ ಮೇಲೆ ಟೀಕೆಯನ್ನು ಬರೆದನು.

J. T. Hatfield ಇವನು ಅಥರ್ವಣವೇದವನ್ನೂ P. Peterson ಇವನು ಋಗ್ವೇದ ಸಂಹಿತೆಗಳನ್ನೂ ಇಂಗ್ಲಿಷ್‌ಗೆ ಭಾಷಾಂತರಿಸಿದರು. A. Bruining ಇವನು ಶಂಕರ ಬ್ರಹ್ಮಸೂತ್ರದ ವ್ಯಾಖ್ಯಾನವನ್ನು ಬರೆದನು. A. Berriedel Keith ಇವನು ಸಂಸ್ಕೃತ ಸಾಹಿತ್ಯ ಮತ್ತು ನಾಟಕ ಕಲೆಯನ್ನು ಕುರಿತು 800 ಪುಟ ಗಳಷ್ಟು ದೊಡ್ಡ ಗ್ರಂಥವನ್ನು ಬರೆದನು. ಅಮೇರಿಕಾದ Prof. E. W. Hopkins ಇವನು Great Epics of India ಎಂಬ 500 demy ಪುಟಗಳ ಮತ್ತು Religions of India ಎಂಬ 1220 demy ಪುಟಗಳ ಗ್ರಂಥವನ್ನೂ ಎರಡು ಕಾಂಡಗಳಲ್ಲಿ ಬರೆದನು D. Anderson ಇವನು ಪಾಲೀ ಭಾಷಾ ಪರಿ ಚಯ ಗ್ರಂಥವನ್ನು 600 demy ಪುಟಗಳಷ್ಟು ಬರೆದನು.

ಬೊಂಬಾಯಿ ಎಲ್ಫಿನ್‌ಸ್ಟನ್ ಕೊಲೇಜಿನಲ್ಲಿದ್ದ Prof Peter Peterson ಇವನು 1889 ರಲ್ಲಿ ಬಾಣನ ಕಾದಂಬರಿಯನ್ನು ಇಂಗ್ಲಿಷ್ ಮತ್ತು ಸಂಸ್ಕೃತದಲ್ಲಿ ಅದರ ವಿಮರ್ಶೆಸಹಿತವಾಗಿ ಬರೆದನು Louis H. Gray ಇವನು 'ವಾಸವದತ್ತಾ' ಇದನ್ನು ಇಂಗ್ಲಿಷ್‌ನಲ್ಲಿ ಬರೆದನು. Archibald Gough ಇವನು 1873 ರಲ್ಲಿ

ಕಾನಡನ ವೈಶೇಕ ಎಂಬ ಶಾಸ್ತ್ರೀಯ ಗ್ರಂಥವನ್ನು ತನ್ನ ಟೀಕೆಯೊಡಗೂಡಿ 315 demy ಪುಟಗಳಷ್ಟು ಬರೆದನು. ಭಾರತೀಯ ಸಾಹಿತ್ಯ ಮತ್ತು ಜನಜೀವನದ ವಿಷಯವಾಗಿ ಬರೆದ ಮತ್ತು 1860 ರ ಕಾಲದಲ್ಲಿದ್ದ Mrs. Manning ಇವಳು ನಾಲ್ಕಾರು ಉತ್ತಮ ಗ್ರಂಥಗಳನ್ನು ಬರೆದಿದ್ದಾಳೆ. ಅವುಗಳ ಪೈಕಿ ಸಂಸ್ಕೃತ ಶ್ಲೋಕಾಧಾರಗಳ ಸಮೇತವಾಗಿ ಉತ್ತಮ ಪರಿಶೋಧನಾ ಗ್ರಂಥವಾದ Ancient and Medieaval India ಎಂಬ 350 demy ಪುಟಗಳ ಗ್ರಂಥವು 1869 ರಲ್ಲಿ ಪ್ರಕಟವಾಯಿತು. ಹಿಂದೂ ಪುರಾಣ, ಸ್ಮೃತಿಗಳು, ವಾಸ್ತುಶಿಲ್ಪ ಇತ್ಯಾದಿಗಳ ಮೇಲೆ ಇವಳು ಬರೆದ 480 demy ಪುಟಗಳ ಗ್ರಂಥವು ಮತ್ತೊಂದು ಉತ್ತಮ ಸಂಶೋಧನಾ ಗ್ರಂಥವಾಗಿದೆ.

**೪. ಅಂದಿನ ಕೆಲವು ಪ್ರಸಿದ್ಧ ಫ್ರೆಂಚ್ ವಿದ್ವಾಂಸರು :—**

ಕಳೆದ ಶತಮಾನದಲ್ಲಿ ಹಲವು ಫ್ರೆಂಚ್ ವಿದ್ವಾಂಸರು ವೇದಗಳು ಮತ್ತು ಪುರಾಣ ಗ್ರಂಥಗಳು ಇವನು ತಮ್ಮ ಟೀಕೆಗಳ ಸಮೇತವಾಗಿ ಫ್ರೆಂಚ್ ಭಾಷೆಗಿಳಿಸಿದ್ದರೂ ಅವರ ಸೇವೆಯೂ ಹೆಚ್ಚಾಗಿ ಈ ದೇಶದ ಪ್ರಾಕ್ತನ ವಿಚಾರ ಪರಿಶೋಧನೆಗಾಗಿಯೇ ವಿನಿಯೋಗಿಸಲಾಗಿತ್ತೆಂದೆನ್ನಬಹುದು. ಅಂದಿನ ಕೆಲವು ಹಿರಿಯ ಫ್ರೆಂಚ್ ವಿದ್ವಾಂಸರಲ್ಲಿ B. De. Sorsum ಇವನು 1803 ರಲ್ಲಿ ಶಾಕುಂತಳಾ ನಾಟಕವನ್ನು ಫ್ರೆಂಚ್ ಜನಕ್ಕೆ ಪರಿಚಯ ಮಾಡಿಕೊಟ್ಟನು. ಜರ್ಮನ್ ಕವಿ Goethe ಇವನ ಮಿತ್ರನಾಗಿದ್ದ ಮತ್ತು ಸಂಸ್ಕೃತದಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದ A. L. Chazy ಇವನು ವಾಲ್ಮೀಕಿ ರಾಮಾಯಣವನ್ನೂ 1826 ರಲ್ಲಿ ಫ್ರೆಂಚ್ ಸಾಹಿತ್ಯಗಳ ಬಾಂಧವ್ಯವನ್ನು ಕುರಿತಾಗಿಯೂ ಸಂಶೋಧನೆಯನ್ನು ನಡೆಸಿದನು.

Dr. A. Langolis ಇವನು ಮತ್ತೊರ್ವ ಫ್ರೆಂಚ್ ವೇದಾಂತಿಯಾಗಿದ್ದನು. 1835 ರಲ್ಲಿ ಮಹಾಭಾರತವನ್ನೂ ಅನಂತರ ಋಗ್ವೇದದ ಭಾಷಾಂತರ ಮತ್ತು ಟೀಕೆಗಳನ್ನೂ ಬರೆದನು. ಭಾರತದ ತತ್ವಶಾಸ್ತ್ರಗಳನ್ನು ಕುರಿತಾದ ಕೆಲವು ಪುಸ್ತಕಗಳನ್ನೂ ಲೇಖನಗಳನ್ನೂ ಬರೆದು ಅಂದಿನ ಫ್ರೆಂಚ್ ಜನಾಂಗಕ್ಕೆ ಭಾರತ ಸಂಸ್ಕೃತಿಯ ಮತ್ತು ಸಾಹಿತ್ಯದ ಪರಿಚಯವನ್ನು ಮಾಡಿದವರಲ್ಲಿ ಇವನು ಅಗ್ರಗಣ್ಯನು A. Loiseleur ಇವನು 'ಅಮರಕೋಶ'ವನ್ನು 1839 ರಲ್ಲೂ, A. Troyer ಇವನು ಕಲ್ಹಣನ 'ರಾಜತರಂಗಿಣಿ'ಯನ್ನು 1840 ರಲ್ಲೂ ಭಾಷಾಂತರಿಸಿದರು. Francis Mason ಇವನು ಫ್ರೆಂಚ್‌ನಲ್ಲಿ ಬರೆದ ಪಾಲೀಭಾಷಾ ವ್ಯಾಕರಣವು 1848 ರಲ್ಲಿ ಪ್ರಕಟವಾಯಿತು.

Prof. Max Mueller ಇವನಿಗೆ ಗುರುವಾಗಿದ್ದ Prof. E. Burnouf ಇವನು ಮತ್ತೊರ್ವ ಹಿರಿಯ ತತ್ವಜ್ಞಾನಿಯೂ ವೇದಾಭ್ಯಾಸಿಯೂ ಆಗಿದ್ದನು. ಬೌದ್ಧ ಸಾಹಿತ್ಯದ ಹಲವು ಗ್ರಂಥಗಳನ್ನು ಮತ್ತು 'ಸದ್ಧರ್ಮ ಪುಂಡರೀಕ' ಇದನ್ನೂ ಫ್ರೆಂಚ್ ಭಾಷೆಯಲ್ಲಿ ಬರೆದನು John Peile ಇವನು 1881 ರಲ್ಲಿ ನಳೋಪಾಖ್ಯಾನವನ್ನು 248 demy ಪುಟಗಳಲ್ಲಿ ಬರೆದನು. Felix Lacote

ಇವನು 1896 ರಲ್ಲಿ ಗುಣಾಢ್ಯನ ಬೃಹತ್ಕಥೆಯನ್ನೂ Paul Regnaud ಇವನು 1884 ರಲ್ಲಿ ಭಾರತೀಯ ನಾಟ್ಯಕಲೆಯನ್ನು ಕುರಿತು 397 ಪುಟಗಳಷ್ಟು ಫ್ರೆಂಚ್ ಭಾಷೆಯಲ್ಲಿ ಬರೆದರು.

Bloachmann ಮತ್ತು Jarret ಇವರು ಅಕ್ಬರನು ಬರೆಯಿಸಿದ 'Ain-i-Akbari' ಇದನ್ನು ಭಾಷಾಂತರಿಸಿದರು. Hardwick ಮತ್ತು M. Cossin ಇವರು ಹಿಂದೂ ದೇವತೆಗಳು, ಪೂಜೆಗಳು ಪುನರ್ಜನ್ಮಗಳೇ ಮೊದಲಾದುವನ್ನು ಕುರಿತು ಫ್ರೆಂಚ್ ಮತ್ತು ಜರ್ಮನ್ ಭಾಷೆಗಳೆರಡರಲ್ಲೂ ಬರೆದರು. Prof. H. Kern ಇವನು ಆರ್ಯಭಟ್ಟನ ಖಗೋಳಶಾಸ್ತ್ರವನ್ನು 1874 ರಲ್ಲಿ ಬರೆದನು. Par A. Foucher ಇವನು ಗ್ರೀಕ್ ಮತ್ತು ಬೌದ್ಧರ ಕಾಲದ ಭಾರತೀಯ ವಾಸ್ತುಶಿಲ್ಪದ ಕುರಿತಾಗಿ 1898ರ ಕಾಲದಲ್ಲಿ ಸಚಿತ್ರ ಗ್ರಂಥವನ್ನು ಬರೆವನು. Hippolyte Fouche ಇವನು ರಾಮಾಯಣ ಮತ್ತು ಒಂದೆರಡು ಹಿಂದೂ ಪುರಾಣಗಳನ್ನೂ G. Pouthier ಇವನು ಕೆಲವು ಹಿಂದೂಶಾಸ್ತ್ರ ಗ್ರಂಥಗಳನ್ನೂ ಫ್ರೆಂಚ್ ಭಾಷೆಗೆ ಇಳಿಸಿದ್ದಾರೆ ಇದೇ ರೀತಿ ಇನ್ನೂ ಕೆಲವರು ವೇದಗಳ ಮೇಲೆ ಟೀಕೆ, ಭಾಷಾಂತರ, ಸಂಸ್ಕೃತ ವ್ಯಾಕರಣ, ಹಿಂದೂಸ್ಥಾನದ ಪ್ರಾಚೀನ ಚರಿತ್ರೆ ಇತ್ಯಾದಿಗಳನ್ನು ಕುರಿತು ನೂರಾರು ಲೇಖನಗಳನ್ನೂ ಕಿರುಹೊತ್ತಗೆಗಳನ್ನೂ ಫ್ರೆಂಚ್ ಭಾಷೆಯಲ್ಲಿ ಪ್ರಕಟಿಸಿದ್ದಾರೆ.

## ೫. ಜಾತಕ ಕಥೆಗಳು ಮತ್ತು ಸಂಶೋಧನಾ ಲೇಖನಗಳು :—

ಜಾತಕ ಕಥೆಗಳನ್ನು ಸಂಸ್ಕೃತದಿಂದಲೂ ಪಾಲೀಭಾಷೆಯಿಂದಲೂ ಭಾಷಾಂತರಿಸಿದ ಪಂಡಿತರು ಹಲವರು ಇದ್ದಾರೆ. ಇದನ್ನು ಇಂಗ್ಲಿಷ್‌ನಲ್ಲಿ H. T. Colebrooke ಇವನೂ ಜರ್ಮನ್‌ನಲ್ಲಿ Von Schroeder ಇವನೂ ಆರಂಭಿಸಿದರು. ಅವರನ್ನನುಸರಿಸಿ Prof. H. Kert ಇವನು 'ಜಾತಕಮಾಲಾ' ಎಂಬುದಾಗಿ ಜರ್ಮನ್ ಭಾಷೆಯಲ್ಲೂ Prof. Speyer ಇವನು ಅದೇ ಹೆಸರಿನಿಂದ ಇಂಗ್ಲಿಷ್‌ನಲ್ಲೂ ಬರೆದರು. Dr. Fausball ಇವನು ಪಾಲೀಭಾಷೆಯಿಂದ 550 ಜಾತಕ ಕಥೆಗಳನ್ನು ಭಾಷಾಂತರಿಸಿದನು.

H. T. Francis, R. A. Neil. R. Chalmers ಮತ್ತು W. R. D. Rouse ಇವರು ಒಡಗೂಡಿ ಜಾತಕ ಕಥಾ ಸಾಹಿತ್ಯವನ್ನೆಲ್ಲಾ ಒಟ್ಟಾಗಿ "Garland of Birth Stories" ಎಂಬುದಾಗಿ ಬರೆದರು. ಇವುಗಳ ಪೈಕಿ Dr. Fausball ಇವನು ಈ ಬೌದ್ಧ ಜಾತಕ ಸಾಹಿತ್ಯವನ್ನು ಆರುಕಾಂಡಗಳ ಉದ್ಗ್ರಂಥವಾಗಿ ಬರೆದದ್ದು 1896 ರಲ್ಲಿ ಪ್ರಕಟವಾಯಿತು. ಇದರ ಕೆಲವು ಭಾಗಗಳನ್ನು ಡಚ್ಚ್ ಭಾಷೆಗೂ ಅನುವಾದಿಸಲಾಯಿತು.

ಭರತಖಂಡದ ಚರಿತ್ರೆ, ಸಾಹಿತ್ಯ, ಪ್ರಾಚೀನ ಶಾಸನಗಳು, ನಾಣ್ಯಗಳು ವಾಸ್ತುಶಿಲ್ಪ ಇತ್ಯಾದಿಗಳ ಮೇಲೆ ಸಂಶೋಧನಾ ಲೇಖನಗಳನ್ನು ಬರೆದವರ ಸಂಖ್ಯೆ ಸುಮಾರು ೨೦೦೦ಕ್ಕೂ ಮಿಕ್ಕಿ ಇದೆ. 1784 ರಲ್ಲಿ ಸ್ಥಾಪಿತವಾದ 'Asiatic Researches'

ಪತ್ರಿಕೆ, ಅನಂತರದ Asiatic Journal, Calcutta Review, Madras literary Review, Indian Antiquary ಇತ್ಯಾದಿ ಪತ್ರಿಕೆಗಳಲ್ಲದೆ ಯೂರೋಪು ಖಂಡದ Asiatic Society ಶಾಖೆಗಳ ಪತ್ರಿಕೆಗಳು, ಸಾಹಿತ್ಯ ಪತ್ರಿಕೆಗಳು ಮೊದಲಾದುವು ಸಹಸ್ರಾರು ಸಂಶೋಧನಾ ಲೇಖನಗಳನ್ನು ಪ್ರಕಟಿಸಿವೆ. 'Societa Asiatica Italiana' ಎಂಬ ಇಟಲಿಯ Asiatic Society Journal ಇದರ ಮಾದರಿಯ ಪತ್ರಿಕೆಗಳು ಯೂರೋಪಿನ ಎಲ್ಲಾ ದೇಶಗಳಲ್ಲೂ ಇದ್ದುವು. ಈ ಎಲ್ಲಾ ಲೇಖನಗಳನ್ನು ಇಂದು ಬಯಲಿಗೆಳೆದು folio ಪುಟಗಳ ಗ್ರಂಥ ವಾಗಿ ಮುದ್ರಿಸಿದರೆ ಅದು ಕಡಿಮೆ ಪಕ್ಷ 40.000 ಪುಟಗಳಷ್ಟು ದೊಡ್ಡದಾದ ಉದ್ಗ್ರಂಥವು ಗ್ರಂಥವಾಗಬಹುದೆಂದರೆ ಅದು ಸಾಮಾನ್ಯ ವಿಚಾರವೇನೂ ಅಲ್ಲ, ಈ ಎಲ್ಲಾ ಲೇಖಕರ ಸಂಖ್ಯೆಯು ಒಟ್ಟಾಗಿ 500ಕ್ಕೂ ಮಿಕ್ಕುವುದೆಂದರೆ ಪಾಶ್ಚಾತ್ಯರು ಈ ದೇಶದ ಅನ್ವೇಷಣೆಯನ್ನೆಸಗಿದ ಪರಿಮಿತಿಯೆಷ್ಟೆಂದು ತಿಳಿಯಬಹುದು.

ಈ ವರೆಗೆ ಹೇಳಲ್ಪಟ್ಟ ಎಲ್ಲಾ ಗ್ರಂಥಕರ್ತರೂ ಅವರ ಅವಗಾಹನೆಗೆಟಕಿದ ವಿವಿಧ ವಿಚಾರಗಳ ಮೇಲೆ ಅಂದಿನ ಹತ್ತಾರು ಸಾಹಿತ್ಯ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ. 1784 ರಿಂದ ಕ್ರಿ. ಶ. 1900 ರ ವರೆಗೆ ಬರೆಯಲ್ಪಟ್ಟ ಲೇಖನಗಳ ಸಂಖ್ಯೆಯು ಕಡಿಮೆ ಪಕ್ಷ ೨೦,೦೦೦ ದಷ್ಟಾದರೂ ಆಗಬಹುದೆಂದು ಅಂದಾಜು ಮಾಡಲಾಗಿದೆ. ಹಿಂದೂಸ್ಥಾನದ ವಿಚಾರ ಮಾತ್ರವಲ್ಲ, ಅದರ ಸುತ್ತಮುತ್ತಲಿನ ದ್ವೀಪಗಳ ಮೇಲೂ ಬಹು ವಿಚಾರ ಪೂರ್ಣವಾದ ಲೇಖನಗಳನ್ನು ಬರೆದಿದ್ದಾರೆಂಬು ದಕ್ಕೆ Richard C. Temple ಇವನು ಅಂಡಮಾನ್ ದ್ವೀಪಗಳ ಜನರ ಭಾಷೆ ಮತ್ತು ಸಾಹಿತ್ಯದ ವಿಷಯವಾಗಿ, ಮತ್ತು E. H. Mann ಇವನು ನಿಕೋಬಾರಿ ದ್ವೀಪಗಳ ಜನರ ಜೀವನ, ಕಲೆ ಇತ್ಯಾದಿಗಳ ವಿಷಯವಾಗಿ ಬರೆದ ಲೇಖನಗಳೇ ಸಾಕ್ಷ್ಯವಾಗಿವೆ.

೬. ಪೌರಸ್ತ್ಯ ಸಾಹಿತ್ಯ, ಮತ ಧರ್ಮಗಳನ್ನು ಕುರಿತು ಗ್ರಂಥಮಾಲೆ:—

Prof. Max Mueller ಇವನು 1870 ರಿಂದ "Sacred Books of the East" ಎಂಬ ಗ್ರಂಥಮಾಲೆಯು ಐವತ್ತಕ್ಕೂ ಮಿಕ್ಕಿ ಸಂಚಿಕೆಗಳನ್ನು ಪೌರಸ್ತ್ಯ ದೇಶಗಳ ಸಾಹಿತ್ಯ. ವಿದ್ಯೆ. ಮತ, ಧರ್ಮಗಳ ವಿಷಯವಾಗಿ ಸಂಪಾದಿಸಿ ಬ್ರಿಟಿಷ್ ಸರಕಾರದ ಆಶ್ರಯದಿಂದ ಪ್ರಕಟಿಸಿದಾಗ ಆ ಒಂದೊಂದು ಗ್ರಂಥವನ್ನು ಬೇರೆ ಬೇರೆ ವಿದ್ವಾಂಸರು ಬರೆದರು. ಈ ಗ್ರಂಥ ಸಂಪಾದನಾ ಕಾರ್ಯವು ಸುಮಾರು ೨೫ ವರ್ಷಗಳ ಕಾಲ ಅವ್ಯಾಹತವಾಗಿ ನಡೆಯಿತು. ಹಿಂದೂಸ್ಥಾನ, ಚೀನಾ, ಟಿಬೆಟ್ ಪರ್ಷಿಯಾ, ಬರ್ಮಾ ಮೊದಲಾದ ದೇಶಗಳ ಸಾಹಿತ್ಯ, ಸಂಸ್ಕೃತಿ ಮತ್ತು ಮತಧರ್ಮ ಗಳನ್ನು ಕುರಿತು ವ್ಯಾಸಂಗ ನಡೆಸಿದ ಪ್ರಬುದ್ಧ ಪಂಡಿತರು ಈ ಸಂಕಲನ ಕಾರ್ಯದಲ್ಲಿ ನೆರವಾದರು

ತೈತೀರ್ಯ ಉಪನಿಷತ್ತು ಮತ್ತು ಬೌದ್ಧಮತದ ಮಹಾರ್ಯ ಧರ್ಮವನ್ನು ಕುರಿತಾಗಿ ಮತ್ತು ಸಂಸ್ಕೃತ ಕಾವ್ಯಗಳ ವಿಮರ್ಶೆ ನಡೆಸಿ ಉದ್ಗ್ರಂಥವನ್ನು E. B.

Cowell ಇವನು ಬರೆದನು. ಐತರೇಯ ಬ್ರಾಹ್ಮಣವೊಂದರ ಮೇಲೆಯೇ Dr. Haug ಇವನು 500 demy ಪುಟಗಳ ಗ್ರಂಥಕಾಂಡವನ್ನೂ ಶತಪಥ ಬ್ರಾಹ್ಮಣ, ವೇದಗಳು ಮತ್ತು ಹಿಂದೂಶಾಸ್ತ್ರಗಳನ್ನು ಕುರಿತಾಗಿ Julius Eggeling ಇವನು ಬೇರೆ ಬೇರೆ ಐದು ಗ್ರಂಥಕಾಂಡಗಳನ್ನೂ ಬರೆದರು. Dr. George Buhler ಇವನು ಮನುಸ್ಮೃತಿಯ ಮೇಲೆ 650 demy ಪುಟಗಳ ಗ್ರಂಥಕಾಂಡವನ್ನು ಬರೆದನು.

ಹಿಂದೂ ಖಗೋಳ ಶಾಸ್ತ್ರವನ್ನು ಕುರಿತು ಬರೆದ George Thibaut ಇವನು ಶಂಕರನ ವೇದಾಂತ ಸೂತ್ರ ಮತ್ತು ವೇದ ಸಂಹಿತೆಗಳ ಮೇಲೆ ನಾಲ್ಕು ಗ್ರಂಥ ಕಾಂಡಗಳನ್ನು ಬರೆದನು. ಭಾರತೀಯ ವೈದ್ಯ ಶಾಸ್ತ್ರವನ್ನು ಕುರಿತು ಉತ್ತಮ ಸಂಶೋಧನಾ ಗ್ರಂಥವನ್ನು ಬರೆದು ಪ್ರಸಿದ್ಧನಾದ Julius Jolly ಇವನು ನಾರದೀಯ ಬ್ರಹ್ಮಶಾಸ್ತ್ರದ ಮೇಲೆ ಒಂದು ವಿದ್ವತ್ಪೂರ್ಣವಾದ ಗ್ರಂಥಕಾಂಡವನ್ನು ಬರೆದನು. ಇದೇ ರೀತಿ H. Oldenburg, A. Weber, Arthur Burnell ಮೊದಲಾದ ಪಂಡಿತರು ವೇದ, ಪುರಾಣ, ವಾಸ್ತುಶಿಲ್ಪಕಲೆ ಇತ್ಯಾದಿಗಳ ಮೇಲೆ ಬರೆದಿದ್ದಾರೆ. ಏಷ್ಯಾಖಂಡದ ಇತರ ದೇಶಗಳ ಧರ್ಮಶಾಸ್ತ್ರಗಳನ್ನು ಕುರಿತು ಆಯಾ ದೇಶಗಳಲ್ಲಿದ್ದ ಪಾಶ್ಚಾತ್ಯ ವಿದ್ವಾಂಸರು ಬರೆದರು. Dr. M. Winternitz ಇವನು ಈ ಎಲ್ಲಾ ಗ್ರಂಥಗಳ ಮೇಲೆ ಒಂದು ಉತ್ತಮ ಸೂಚೀ ಪತ್ರವನ್ನೇ ಒಂದು ಗ್ರಂಥ ಕಾಂಡವಾಗಿ ಬರೆದನು. ಈ Sacred Books of the East ಗ್ರಂಥ ಸಂಚಿಕೆಗಳ ಒಂದೊಂದು ಭಾಗವು 450 ರಿಂದ ಹಿಡಿದು 1000 demy ಪುಟಗಳಷ್ಟು ದೊಡ್ಡದಿದ್ದು ಒಟ್ಟಾಗಿ ಇದು ಸುಮಾರು 35 000 demy ಪುಟಗಳಷ್ಟು ಅಗಾಧವಾದ ಸಾಹಿತ್ಯರಾಶಿಯಾಗಿದೆ.

**೭. ಪ್ರೊ. ವೆಬರ್ ಇವನ ವೇದಾಂತ ಮತ್ತು ಭಾಷಾಶಾಸ್ತ್ರ ಗ್ರಂಥಗಳು :—**

ಜರ್ಮನ್ ವಿದ್ವಾಂಸನಾದ Prof. Albrecht Weber ಇವನು ಲ್ಯಾಟಿನ್, ಗ್ರೀಕ್, ಪರ್ಶಿಯನ್. ಹಿಂದೂಸ್ಥಾನೀ, ಬಂಗಾಳೀ ಮತ್ತು ತಮಿಳು ಭಾಷೆಗಳಲ್ಲೂ ಪಾರಂಗತನೆನಿಸಿ ಈ ಎಲ್ಲಾ ಭಾಷಾ ಶಬ್ದಗಳನ್ನು ಕುರಿತು ಶಾಸ್ತ್ರೀಯ ವಾಗಿ ಅನ್ವೇಷಣೆಯನ್ನು ನಡೆಸಿದ ಭಾಷಾಶಾಸ್ತ್ರಜ್ಞನು. ಶ್ರೀಮದ್ರಾಮಾಯಣವನ್ನೂ ಕೆಲವು ಸಂಸ್ಕೃತ ಕಾವ್ಯ ಭಾಗಗಳನ್ನೂ ಜರ್ಮನ್ ಭಾಷೆಗೂ ಅವುಗಳ ಕೆಲವು ಭಾಗ ಗಳನ್ನು ಲ್ಯಾಟಿನ್‌ಗೂ ಇಳಿಸಿದ ಕೀರ್ತಿಯು ಅವನದಾಗಿದೆ. Prof. Weber ಇವನು F. Max Mueller ಇವನಿಗೂ ಗುರುವಂತೆ ಇದ್ದ ಓರ್ವ ಹಿರಿಯ ಹಾಗೂ ಗೌರವಾನ್ವಿತನಾದ ವಿದ್ವಾಂಸನಾಗಿದ್ದನು.

ಹಿಂದೂಸ್ಥಾನದಲ್ಲಿ ಬಹುಕಾಲ ಇದ್ದ ಈ ಭಾಷಾಶಾಸ್ತ್ರಜ್ಞನು 1849 ರಲ್ಲಿ ಯಜುರ್ವೇದವನ್ನು ಜರ್ಮನ್‌ಗೆ ಭಾಷಾಂತರಿಸಿದನು. “ ಶ್ರೀಲಗಧ ಮುನಿಪ್ರಣೀತ ಜ್ಯೋತಿಷ್ಯಂ ” ಎಂಬುದಾಗಿ ಇವನ ಜ್ಯೋತಿಷ್ಯ ಗ್ರಂಥದ ಭಾಷಾಂತರವು ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳೆರಡರಲ್ಲೂ ಮುದ್ರಣವಾಯಿತು. ತನ್ನ ಸ್ವದೇಶಕ್ಕೆ

ಹಿಂತಿರುಗಿದನಂತರ Prof. Albrecht Weber ಇವನು ಯೂರೋಪುಖಂಡದ ಬಹುಭಾಗಗಳಲ್ಲಿ ಸಂಚರಿಸಿ Royal Asiatic Society ಇದರ ಕಾರ್ಯಕ್ಷೇತ್ರವನ್ನು ಇನ್ನಷ್ಟು ವಿಸ್ತರಿಸಿದನು. "Sacred Books of the East", ಈ ಗ್ರಂಥಮಾಲೆಗೆ ಭಾರತೀಯ ವೇದಾಂತ ಶಾಸ್ತ್ರವನ್ನು ಕುರಿತು ಒಂದೆರಡು ಗ್ರಂಥ ಕಾಂಡಗಳನ್ನು ಬರೆದನು. ವೇದ ಮತ್ತು ಪುರಾಣಗಳ ಮೇಲೆ ಇವನು ಬರೆದ ವ್ಯಾಖ್ಯಾನವು ಭಾರತೀಯ ಮತ್ತು ಐರೋಪ್ಯಾದ ನಾಲ್ಕಾರು ಭಾಷೆಗಳಲ್ಲೂ ಪ್ರಕಟವಾದವು.

ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿದ್ದ Prof. Weber ಇವನು ಸಂಸ್ಕೃತ, ಲ್ಯಾಟಿನ್, ಗ್ರೀಕ್ ಮತ್ತು ಪರ್ಷಿಯನ್ ಭಾಷೆಗಳ ಮೇಲೆ ತುಲನಾತ್ಮಕವಾದ ವಿಮರ್ಶೆಯನ್ನು ನಡೆಸಿ, ಅತಿ ಅಮೂಲ್ಯವಾದ ಶಾಸ್ತ್ರೀಯ ಗ್ರಂಥವನ್ನು ಬರೆದನು. Indian Antiquary ಪತ್ರಿಕೆಯೊಂದರಲ್ಲಿಯೇ ಇವನ ಬರೆದ ವಿದ್ವತ್ಪೂರ್ಣವಾದ ಲೇಖನಗಳು 3000 Folio ಪುಟಗಳಿಗೂ ಮಿಕ್ಕಿ ಇವೆ. ಸಂಸ್ಕೃತದಲ್ಲಿ ಹಲವು ಪ್ರಬಂಧಗಳನ್ನು ಬರೆದಿದ್ದ ಇವನು 'God Save the Queen' ಈ ಪದವನ್ನು ಸಂಸ್ಕೃತಕ್ಕೆ ಭಾಷಾಂತರಿಸಿದನು. ಭಾರತೀಯ ವಿದ್ಯಾಪ್ರಚಾರಕ್ಕೆ ತನ್ನ ಕಡೇ ದಿನಗಳವರೆಗೂ ನಿಷ್ಠೆಯಿಂದ ದುಡಿದನು. ಯೂರೋಪಿನಲ್ಲಿ ಹಲವು ವಿದ್ಯಾರ್ಥಿಗಳಿಗೆ ಸಂಸ್ಕೃತ ಸಾಹಿತ್ಯದಲ್ಲಿ ಅಭಿರುಚಿಯುಂಟಾಗುವಂತೆ ಪ್ರಯತ್ನಿಸಿದನು. ಹಿಂದೂದೇಶದ ಆರ್ಷೇಯ ಸಂಸ್ಕೃತಿಯ ವಿಷಯದಲ್ಲಿ ಅಭಿಮಾನವನ್ನು ತಳೆದಿದ್ದ Prof. Weber ಇವನು ಈ ದೇಶದ ಭವಿಷ್ಯದ ಬಗ್ಗೆ 1887ರಲ್ಲಿ ಹೀಗೆ ಹೇಳಿದ್ದನು :—

"May India enjoy, for a long time to come, the benefits of British rule amid undisturbed peace. May it especially, be spared premature experiments in the direction of 'Home Rule.'"

ಇದು ಕೇವಲ ನಿಷ್ಕಲ್ಮಷ ವ್ಯಕ್ತಿತ್ವದಿಂದೊಡಗೂಡಿದ ಓರ್ವ ಪ್ರಚಂಡ ಜರ್ಮನ್ ಸಾಹಿತಿಯ ಅಭಿಪ್ರಾಯವಾಗಿದ್ದು ರಾಜಕೀಯ ದೃಷ್ಟಿಯಿಂದ ಅಂದುದಲ್ಲವೆಂದು ಇವನ ಪ್ರತಿಭೆಯನ್ನರಿತ ಯಾವನೂ ಒಪ್ಪಲೇ ಬೇಕಾಗುತ್ತದೆ.

**೮. ಮೊನ್ಯರ್ ವಿಲಿಯಮ್ಸ್—ಇವನ ಸಾಹಿತ್ಯ ಸೇವೆ :—**

ಕಳೆದ ಶತಮಾನದ ಮಧ್ಯಕಾಲದಲ್ಲಿ ಮತ್ತೋರ್ವ ಗಣನೀಯ ಸಂಸ್ಕೃತ ವಿದ್ವಾಂಸನು Dr. Monier Williams ಇವನು ಭಾರತೀಯ ಕಾವ್ಯಗ್ರಂಥಗಳನ್ನು ಆಮೂಲಾಗ್ರವಾಗಿ ಅನ್ವೇಷಿಸಿ ವ್ಯಾಖ್ಯನಿಸಿದ. ಇವನು Von Schelegel, A. Von Humboldt, Prof. Max Mueller ಮೊದಲಾದ ವಿದ್ವಾಂಸರ ಪ್ರಶಂಸೆಗೆ ಪಾತ್ರನಾಗಿದ್ದನು. ಅವನ ಪಾಂಡಿತ್ಯಕ್ಕೆ ಕಲ್ಕತ್ತಾ ವಿಶ್ವವಿದ್ಯಾಲಯವು ಅವನಿಗೆ Doctor of Laws ಪ್ರಶಸ್ತಿಯನ್ನೂ ಬ್ರಿಟಿಷ್ ಸರಕಾರವು

'Sir' ಪದವಿಯನ್ನೂ ಕೊಟ್ಟು ಗೌರವಿಸಿದುವು.

Sir Monier Williams ಇವನು 1851 ರಿಂದ ಹೈಲ್‌ಬರಿಯ East India College ಇದರ ಸಂಸ್ಕೃತ ಪ್ರಾಧ್ಯಾಪಕನಾಗಿ ಇದ್ದನು. ಅದೇ ವರ್ಷ ಅವನ ಇಂಗ್ಲಿಷ್-ಸಂಸ್ಕೃತ ಅರ್ಥಕೋಶವು ಪ್ರಕಟವಾಗಲು ಅದು ಅತ್ಯುತ್ತಮವಾದ ಗ್ರಂಥವೆಂದು ಸರ್ವರಿಂದಲೂ ಶ್ಲಾಘಿಸಲ್ಪಟ್ಟಿತಲ್ಲದೆ 850 Folio ಪುಟಗಳ ಈ ಅರ್ಥ ಕೋಶದಲ್ಲಿ ಅವನು ಭಾಷಾಶಾಸ್ತ್ರದ ವಿಷಯವಾಗಿ ಸುದೀರ್ಘವಾದ ಒಂದು ಪ್ರಬಂಧ ವನ್ನು ಬರೆಯುತ್ತಾ ಈ ರೀತಿಯಾಗಿ ಹೇಳಿದನು :—

Since it is found that no vernacular tongue is adequate to express the ideas of religion and science without borrowing its terms from the Sanskrit, the utility of an English-Sanskrit dictionary will be recognised by all those who have to compose in these dialects whether in Hindi, Bengali, Oriya, Telugu, Kannada, Tamil, Marathi and Malayalam ... ..".

Dr. Monier Williams ಇವನು 1860 ರಲ್ಲಿ Prof. Wilson ಇವನ ನಂತರ ಓಕ್ಸ್‌ಫರ್ಡ್ ವಿಶ್ವವಿದ್ಯಾಲಯದ Boden Professor of Sanskrit ಈ ಸ್ಥಾನಕ್ಕೆ ನೇಮಿಸಲ್ಪಟ್ಟನು. 1885 ರ ಕಾಲದಲ್ಲಿ ಇವನು ಯೂರೋಪು ಮತ್ತು ಹಿಂದೂಸ್ಥಾನದಿಂದ ಹಣವನ್ನು ಸಂಗ್ರಹಿಸಿ ಓಕ್ಸ್‌ಫರ್ಡ್‌ನಲ್ಲಿ Indian Institute ಇವನ್ನು ಸ್ಥಾಪಿಸಲು ತುಂಬಾ ಶ್ರಮವಹಿಸಿದನು. ತನ್ನಲ್ಲಿದ್ದ ಸಹಸ್ರಾರು ಭಾರತೀಯ ಭಾಷಾ ಗ್ರಂಥಗಳನ್ನೆಲ್ಲಾ ಈ ಸಂಸ್ಥೆಯ ಗ್ರಂಥ ಭಂಡಾರಕ್ಕೆ ಕೊಟ್ಟದ್ದು ಇಂದಿಗೂ ಅವನ ಹೆಸರು ಅಲ್ಲಿ ಚಿರಸ್ಥಾಯಿಯಾಗಿದೆ.

Dr. M. Williams ಇವನು 1875ರ ಕಾಲದಲ್ಲಿ ಇಂಗ್ಲೆಂಡಿನ Royal Asiatic Society ಇದರ ಶಾಖೆಯ ಮೂಲಕ ಹಲವು ಸಂಸ್ಕೃತ ಗ್ರಂಥಗಳ ಭಾಷಾಂತರ, ಪ್ರಕಟಣೆ ಮತ್ತು ಪ್ರಚಾರಕ್ಕೆ ಕಾರಣನಾದನು. ಭಾರತೀಯ ಭಾಷೆ, ಧರ್ಮ ಮತ್ತು ಸಂಸ್ಕೃತಿಗಳ ಪ್ರಚಾರದ ಸಲುವಾಗಿ ಬಹು ನಿಷ್ಠೆಯಿಂದ ದುಡಿದನು. ಉಪನ್ಯಾಸಕ, ವಿಮರ್ಶಕ, ಸಂಶೋಧಕ ಮತ್ತು ಭಾಷಾಂತರಕಾರನಾಗಿ ಹಲವು ಸಂಸ್ಕೃತ ಗ್ರಂಥಗಳ ಮೇಲೆ ತತ್ವಗರ್ಭಿತವಾದ ವ್ಯಾಖ್ಯೆಯನ್ನು ಬರೆದನು. ಅವನ Practical Grammar of Sanskrit ಇದು 418 demy ಪುಟಗಳ ಗ್ರಂಥವಾಗಿ ಸಂಸ್ಕೃತವನ್ನು ಕಲಿಯತಕ್ಕವರಿಗೆ ತುಂಬಾ ಪ್ರಯೋಜನವಾದುದಾಗಿತ್ತು.

**೯. ಮೊನ್ಯರ್ ವಿಲಿಯಮ್ಸ್—ಇವನಿಂದ 'ಶಾಕುಂತಲಾ' ಭಾಷಾಂತರ :—**

Dr. Monier Williams ಇವನು ರಾಮಾಯಣ ಮತ್ತು ಮಹಾಭಾರತದ ಕೆಲವು ಭಾಗಗಳನ್ನು ಭಾಷಾಂತರಿಸಿ ಅವುಗಳನ್ನು ಕುರಿತು ವಿಮರ್ಶಾತ್ಮಕವಾದ ಉದ್ಗ್ರಂಥವನ್ನು ಬರೆದದ್ದು 1863ರಲ್ಲಿ ಪ್ರಕಟವಾಯಿತು. 'ನಳೋಪಾಖ್ಯಾನ' ವನ್ನು ಪ್ರತ್ಯೇಕವಾಗಿ 330 demy ಪುಟಗಳಷ್ಟು ಬರೆದನು. "Indian Wisdom" ಎಂಬುದಾಗಿ ಬರೆದ ಇವನ 570 demy ಪುಟಗಳ ಗ್ರಂಥವು

ಮಹತ್ತ್ವಾದುದಾಗಿದೆ. ವೇದ, ನೀತಿ ಶಾಸ್ತ್ರಗಳು, ಹಿತೋಪದೇಶ. ಪ್ರಾಚೀನ ಸಂಸ್ಕೃತ ಕಾವ್ಯ. ನಾಟಕ. ಪುರಾಣ ಗ್ರಂಥಗಳೆಲ್ಲದರ ಸತ್ವಸಾರವನ್ನು ಸಂಗ್ರಹಿಸಿ ಬರೆದ ಈ ಪುಸ್ತಕವು 1893ರ ಒಳಗಾಗಿ ನಾಲ್ಕನೇ ಬಾರಿಗೆ ಪುನರ್ಮುದ್ರಣವಾಯಿತು.

Dr. Williams ಇವನ " ಅಭಿಜ್ಞಾನ ಶಾಂಕುತಲಾ " ನಾಟಕದ ಭಾಷಾಂತರವು ಯೂರೋಪಿನಲ್ಲಿ ಇನ್ನಷ್ಟು ಜನಪ್ರಿಯವಾದ ಗ್ರಂಥವಾಯಿತು. ಅವನ ಭಾಷಾಂತರ ಶೈಲಿಯೂ ಭಾಷೆಯೂ ಈ ಎಲ್ಲಾ ಗ್ರಂಥಗಳಲ್ಲೂ ಸರಳ ಸುಂದರ ವಾಗಿ ಬಿದ್ದಿವೆ. ಉದಾಹರಣೆಗೆ ಅವನ ' ಶಾಕುಂತಲಾ ' ನಾಟಕದ ' ಸುತನು ಹೃದಯಾತ್ಪ್ರತ್ಯಾದೇಶ.... .. " ಎಂಬ ಶ್ಲೋಕದ ಭಾಷಾಂತರವನ್ನು ಇಲ್ಲಿ ಕೊಡ ಲಾಗಿದೆ :--

" Fairest of woman, banish from thy mind
The memory of my cruelty ; reproach
The fell delusion that over-powered my soul
And blame not me, thy husband ; 'tis the curse
Of him in whom the power of darkness reigns,
That he mistakes the gifts of those he loves
For deadly evils, even though a friend
Should wreathe a garland on a blind man's brow
Will he not cast it from him as a serpent ?"

" ಶುಶ್ರೂಷ್ಯ ಗುರೂನ್‌ಕುರು ಪ್ರಿಯಸಖೀ ವೃತ್ತಿಂ........" ಈ ಶ್ಲೋಕವು ಈ ರೀತಿ ಯಾಗಿ ಭಾಷಾಂತರವಾಗಿದೆ :—

' Honour the betters ; ever be respectful
To those above thee ; and should others share
Thy husband's love, ne'er yield thyself a prey
To jealousy ; but ever be a friend,
A loving friend, to those who rival thee
In his affections. Should thy wedded lord
Treat thee with harness, thou must never be
Harsh in return, but patient and submissive.
Be to thy menials courteous, and to all
Placed under thee, considerate and kind ;
Be never self-indulgent, but avoid
Excess in pleasure ; and when fortune smiles
Be not puffed up. Thus to thy husband's house
Wilt thou a blessing prove, and not a curse. '

## ೧೦. ಶಾಕುಂತಲಾ ನಾಟಕದ ಬಗ್ಗೆ ಯೂರೋಪಿನಲ್ಲಿ ಪ್ರಶಂಸೆ :—

Sir William Jones ಇವನು ಕಾಳಿದಾಸನ "ಅಭಿಜ್ಞಾನ ಶಾಕುಂತಲಾ"

ವನ್ನು 1790 ರಷ್ಟು ಹಿಂದೆಯೇ ಭಾಷಾಂತರಿಸಿ ಅದರ ಇಂಗ್ಲಿಷ್ ಮತ್ತು ಲ್ಯಾಟಿನ್ ಪ್ರತಿಗಳನ್ನೆಲ್ಲಾ ಯೂರೋಪಿನಲ್ಲಿ ಬಿತ್ತರಿಸಿದಾಗ ಭಾರತೀಯ ಕಾವ್ಯ ಸೌಂದರ್ಯದ ಕಡೆಗೆ ಪಾಶ್ಚಾತ್ಯರ ಕಣ್ದೆರೆಯಿಸಿ ಅವರು ಈ ದೇಶದ ಪ್ರಾಚೀನ ಸಾಹಿತ್ಯವನ್ನು ಇನ್ನಷ್ಟು ಆಳವಾಗಿ ಪರಿಶೀಲಿಸಲು ಅವಕಾಶವನ್ನು ಕಲ್ಪಿಸಿತೆಂದು ಹೇಳಿದ್ದು ಹಲವು ಕಾರಣಗಳಲ್ಲಿ ಒಂದಾಗಿದೆ. ಕ್ರಿ. ಶ. 1785 ರಲ್ಲಿ Royal Asiatic Society ಇದರ ಉದ್ಘಾಟನಾ ಭಾಷಣವನ್ನು ಮಾಡುತ್ತಾ Sir Jones ಇವನು "The treasure of Sanskrit, we may now hope—to see unlocked," ಎಂದು ಹೇಳಿದ್ದನು.

ಅಲ್ಲಿಂದ ನಂತರ ಯೂರೋಪಿನ ವಿದ್ವಾಂಸರು Colebrook, Schlegel, Chazy ಈ ಮೊದಲಾದ ಪ್ರಬಲ ಭಾರತೀಯ ಭಾಷಾ ಪಂಡಿತರನ್ನನುಸರಿಸಿ ಸಹಸ್ರಾರು ಸಂಸ್ಕೃತ ಗ್ರಂಥಗಳನ್ನು ಯೂರೋಪಿನ ಭಾಷೆಗಳಿಗಿಳಿಸಿದರು. ಅವುಗಳ ಪೈಕಿ 'ಶಾಕುಂತಲಾ' ನಾಟಕವು ಸರ್ವರ ಅವಗಾಹನೆಗೆ ಬಂದ ಒಂದು ಪ್ರಧಾನ ಗ್ರಂಥವಾಗಿತ್ತು. ಜರ್ಮನಿಯ ಗೊಟಿಜ್ಜನ್ ವಿಶ್ವವಿದ್ಯಾಲಯದಲ್ಲಿದ್ದ ಸಂಸ್ಕೃತ ವಿದ್ವಾಂಸ Prof. Benfey ಇವನ ಶಿಷ್ಯನಾದ Dr. G. Buhler ಇವನು 1860 ರಲ್ಲಿ ಐರೋಪ್ಯಾ ದೇಶಗಳ ಸಾಹಿತಿಗಳಿಗೆ ಭಾರತೀಯ ಗ್ರಂಥಗಳಲ್ಲಿ ಅಭಿರುಚಿ ಹುಟ್ಟಲು ಕಾರಣವೇನೆಂದು ಪ್ರಸ್ತಾಪಿಸುತ್ತಾ ಈ ರೀತಿ ನುಡಿದನು :—

"Full seventy years have passed since Sir William Jones published his translation of Shakuntala—a work which may fairly be considered as the starting point of Sanskrit philology. The first appearance of this beautiful specimen of dramatic art created at the time a sensation throughout Europe, and the most rapturous praise was bestowed upon it by men of high authority......".

೨೦೦ ವರ್ಷಗಳಿಗೆ ಹಿಂದೆ Sir William Jones ಇವನು ಈ ದೇಶದಲ್ಲಿ Warren Hastings ಇವನಂಥಾ ಅಧಿಕಾರಿಯೊಡಗೂಡಿ ಆರಂಭಿಸಿದ ಆ ಜ್ಞಾನಾನ್ವೇಷಣಕಾರ್ಯವು ಅದೆಷ್ಟು ವ್ಯಾಪಕವಾಗಿ ಮತ್ತು ಜಯಪ್ರದವಾಗಿ ಲೋಕ ಪ್ರಸಿದ್ಧವಾಯಿತು ಎಂದು ಈ ಮೇಲಿನ ಮಾತುಗಳಿಂದ ತಿಳಿಯಬಹುದು. ಜರ್ಮನ್ ವಿದ್ವಾಂಸ Goethe ಇವನು ತನ್ನ "Italian Travels at Naples" ಇದರಲ್ಲಿ ಶಾಕುಂತಲಾ ನಾಟಕವನ್ನು ಕುರಿತು ತನ್ನ ಮೆಚ್ಚಿಕೆಯನ್ನು ಪ್ರದರ್ಶಿಸಿದನಲ್ಲದೆ ಅದನ್ನು ಕುರಿತು ತನ್ನ ಮಿತ್ರನೂ ಫ್ರೆಂಚ್ ಮತ್ತು ಸಂಸ್ಕೃತ ವಿದ್ವಾಂಸನೂ ಆದ Mon. Chazy ಇವನಿಗೂ ಅದರ ಪರಿಚಯ ಮಾಡಿಕೊಟ್ಟನು. Goethe ಇವನ ಆ ಪ್ರಶಂಸಾಪೂರ್ವಕ ಕವನ ಪಂಕ್ತಿಗಳನ್ನು ಜರ್ಮನ್ ಭಾಷೆಯಿಂದ ಇಂಗ್ಲಿಷ್‌ಗೆ E. B. Eastwick ಇವನು ಹೀಗೆ ಭಾಷಾಂತರಿಸಿದನು :—

"Wouldst thou the young year's blossoms and
the fruits of its decline,

And all by which the soul is charmed, enraptured,
feasted, fed?
Wouldst thou the earth and heaven, itself is one
sole name combine?
I name thee, Oh Shakuntala! and, all at once is said."

ಇದೇ ರೀತಿ Von Sehlegel, Alex. Humboldt ಮೊದಲಾದವರೂ ಈ ನಾಟಕವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. Monier Williams ಇವನು ಅವೆಲ್ಲವನ್ನೂ ಒಟ್ಟುಗೂಡಿಸಿ ಆ ವಿಷಯವಾಗಿ ಹೀಗೆ ಹೇಳಿದನು:—

"The poetical merit of "Shakuntala" is so universally admitted that any remarks on this head would be superfluous."

## ೧೧. ವೇದಮಂತ್ರಗಳನ್ನು ಕುರಿತು ಮ್ಯಾಕ್ಡನಾಲ್ಡನ ಟೀಕೆ:—

"Sacred Books of the East" ಈ ಗ್ರಂಥಮಾಲೆಗೆ ಸುಮಾರು 1200 demy ಪುಟಗಳಿಗೂ ಮೇಲ್ಪಟ್ಟು ವೇದಗಳನ್ನು ಕುರಿತಾಗಿ ಬರೆದ K. S. Macdonald ಇವನು ಮತ್ತೊರ್ವ ಪ್ರಬಲ ವಿದ್ವಾಂಸನಾಗಿದ್ದನು. ವೇದಗಳ ಮೇಲೆ ಬರೆದ ಇತರ ಸಾಹಿತಿಗಳಿಗಿಂತಾ ಇವನು ನಿರ್ಭೀತಿ ಮತ್ತು ನಿರ್ದಾಕ್ಷಿಣ್ಯದ ಟೀಕೆ ಮತ್ತು ವ್ಯಾಖ್ಯಾನವನ್ನು ಬರೆದಿದ್ದಾನೆ. ಇವನ ಟೀಕೆಗಳು ಕಟುವಾಗಿವೆ. ಸಂಸ್ಕೃತ ಸಾಹಿತ್ಯವನ್ನು ಕರತಲಾಮಲಕವಾಗಿಸಿಕೊಂಡ ಇವನು ಕೆಳಗೆ ಕೊಟ್ಟಂಥಾ ಹಲವು ಮಾತುಗಳನ್ನು ಅಲ್ಲಲ್ಲಿ ಹೇಳಿ ಜನರಲ್ಲಿ ವಿಚಾರ ಜಾಗೃತಿಯನ್ನು ಎಬ್ಬಿಸಿದ್ದಾನೆ:—

"The horizon of the (Vedic) Rishi is confined almost invariably to himself. He prays for the happiness of neither wife nor child, not for the good of his village or his clan, nor yet for his nation or people. His eye is shut to the sufferings of his fellows. He manifests no common joys, any more than common sorrows.........."

Macdonald ಇವನು ಇಷ್ಟರಿಂದಲೇ ನಿಲ್ಲಿಸಲಾರನು. ಮುಂದುವರಿಯುತ್ತಾ ಪೂರ್ವಕಾಲದ ಬ್ರಾಹ್ಮಣರು ತಮ್ಮ ವಿದ್ಯೆಯನ್ನು ಹೇಗೆ ಉಪಯೋಗಿಸಿದರೆಂಬುದಕ್ಕೆ ಈ ಕೆಲವು ನಿದರ್ಶನಗಳನ್ನು ಕೊಡುತ್ತಾನೆ:—

"The Aryans did not regard the non-Aryan races as brothers; they simply wished their destruction, and to obtain their wealth;

'Slay ye our Aryan foes, O Lord of heroes, slay our Dasa foes............

Slay everyone who pours no gift.........

Bestow on us what wealth he hath; this even the worshipper awaits....... ....

Demolish thou the Dasas' might; May we with Indra's help divide the treasure he hath gathered up ; Let all the others die away "

ಧರ್ಮಗ್ರಂಥಗಳೆಂದು ಹೇಳಲ್ಪಡುವ ಈ ಹೊತ್ತಗೆಗಳಲ್ಲಿ ಇಂಥಾ ವಿಷಯಗಳು ಪ್ರತಿಪಾದಿಸಲ್ಪಟ್ಟಿರುವಾಗ ವಿದೇಶೀಯರು ಬೇರೆ ಏನನ್ನು ತಾನೇ ಹೇಳಬೇಕು? ಇದಕ್ಕಾಗಿಯೇ ಬ್ರಾಹ್ಮಣರು ವೇದಗಳನ್ನು ಇತರರಿಗೆ ತೋರಿಸದೆ ಬಚ್ಚಿಟ್ಟದ್ದರೆ? ಮುಕ್ತಿಯನ್ನು ಹೊಂದುವ ಬಗೆಯೇನು, ಅದರ ಸಾಧನೆಗಿರುವ ರಹಸ್ಯವೇನು ಎಂದು ವೇದಗಳಲ್ಲಿ ಎಲ್ಲೂ ಹೇಳಲಿಲ್ಲವೆಂದು ಈ ವಿದ್ವಾಂಸರು ಮೇಲಿಂದ ಮೇಲೆ ಹೇಳಿದ್ದಾರೆ. ಆ ವೇದ ಋಷಿಗಳನ್ನು ಕುರಿತಾದರೋ Prof. Macdonald ಇವನು ಹೀಗೆನ್ನುತ್ತಾನೆ:—

"No Rishi, as far as I am aware, has ever claimed to be commissioned by God or by the gods to enlighten men.......No one claimed to have any authoritative announcement to make as to whence man came, or whither he is going, what his chief end here or hereafter."

ಹೀಗೆ ಹೇಳಿದರೂ ವೇದಗಳಲ್ಲಿ ಹಲವು ಉತ್ತಮ ವಿಷಯಗಳಿವೆಯೆಂಬುದನ್ನು ಈ ವಿಮರ್ಶಕನು ಹೇಳುತ್ತಾನೆ. ಪ್ರಾರ್ಥನೆ, ದೇವರ ಸ್ತುತಿ, ದೇವರ ಮಹಿಮಾತೀತವಾದ ಮಹಿಮೆ, ಪಾಪಕ್ಕೆ ಪ್ರಾಯಶ್ಚಿತ್ತ ಇತ್ಯಾದಿಗಳನ್ನು ಪ್ರಸ್ತಾಪಿಸುವ ಹಲವು ಮಂತ್ರಗಳಿವೆಯೆಂಬುದಕ್ಕೆ ಉದಾಹರಣೆಗಳನ್ನು ಕೊಡುತ್ತಾನೆ. ಪಾಪವನ್ನು ಕ್ಷಮಿಸೆಂದು ದೇವರನ್ನು ಕೋರುವ ಇಂಥಾ ಹೇಳಿಕೆಗಳು ಕ್ರೈಸ್ತ ಧರ್ಮಕ್ಕೆ ಸಮೀಪವಿವೆ:—

"Oh, bright and powerful God, through want of strength I erred and went astray ; Have mercy, spare me, mighty Lord."

ಹಲವು ಮಂತ್ರಗಳು ಬಹು ಇತರ ಬ್ರಾಹ್ಮಣರಿಂದ ಬರೆಯಲ್ಪಟ್ಟು ಸೇರಿಸಿದ್ದಾಗಿರಬೇಕೆಂದು Macdonald ಇವನ ನಿಶ್ಚಯವಾದ ಅಭಿಪ್ರಾಯವಾಗಿದೆ. ಆರಣ್ಯಕ ಮತ್ತು ಬ್ರಾಹ್ಮಣಗಳ ರಚನೆಯನ್ನೂ ಇತರ ವಿದ್ವಾಂಸರಂತೆ ಇವನೂ ಟೀಕಿಸಿದ್ದಾನೆ:—

"In describing the Brahamanas, it most not be forgotten that there is a common stock in the Barahamanas of each Veda; the ceremony is described the same doubts are raised, similar solutions are proposed, and many chapters are repeated in the same words."

Macdonald ಇವನ ಭಾಷಾಂತರ ಶೈಲಿಯಾದರೋ ತುಂಬಾ ಚೆಲೋದಾಗಿ ಬಂದಿದೆ. "ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ" ಎಂಬುದನ್ನು ಈ ರೀತಿಯಾಗಿ ಹೇಳಿದ್ದಾನೆ.

'I am sin, I commit sin, my soul is sinful, I am conceived in sin."

ಆಟವಾಡುವಾಗಲು ಸಹ ತಪ್ಪಿದ್ದರೆ ತನ್ನನ್ನು ಕ್ಷಮಿಸೆಂದು ದೇವರಲ್ಲಿ ಮೊರೆಯಿಡುವ ಮಂತ್ರವು ಹೀಗೆ ಅನುವಾದಿಸಲ್ಪಟ್ಟಿದೆ:—

"If we have sinned with both our hands desiring to take the host of dice for our possession, may both Apsaras today forgive us that debt."

## ೧೨. ಭಗವದ್ಗೀತೆಯನ್ನು ಕುರಿತು ಡಾ. ಕಾಲ್ಡ್‌ವೆಲ್ಲನ ಅಭಿಪ್ರಾಯ :—

ದ್ರಾವಿಡ ಭಾಷಾಶಾಸ್ತ್ರಜ್ಞನಾದ Dr. Robert Caldwell ಇವನು ಭಗವದ್ಗೀತೆಯ ಕಾವ್ಯಶೈಲಿ. ರಚನಾ ಕೌಶಲ್ಯ, ತತ್ವ ಪ್ರತಿಪಾದನೆಗಳ ಬಗ್ಗೆ ಇತರ ಪಾಶ್ಚಾತ್ಯ ವಿದ್ವಾಂಸರಂತೆ ಬೆರಗಾಗಿದ್ದಾನೆ; ಆದರೆ ಅದರಲ್ಲಿ ತನಗೆ ಕಂಡುಬಂದ ನ್ಯೂನತೆಗಳ ವಿಷಯವಾಗಿಯೂ ಅವನು ಕಟುವಾಗಿ ಟೀಕಿಸಿದ್ದಾನೆ. ಹಾಗೆ ಟೀಕಿಸಿದ ಕೆಲವರಲ್ಲಿ ಇವನೇ ಪ್ರಮುಖನೆಂದೆನ್ನಬಹುದು. ಇದರಿಂದ Bishop Caldwell ಇವನು ತನ್ನ ಬಿಚ್ಚು ನುಡಿಗಳಿಗೂ ನಿಸ್ಪಕ್ಷಪಾತವಾದ ವಾದಗಳಿಗೂ ಹೆಸರಾಂತ ಒರ್ವ ತತ್ವಶಾಸ್ತ್ರಜ್ಞನೆಂದು ಪ್ರಸಿದ್ಧಿ ಹೊಂದಿದನು. ಅವನು ಗೀತೆಯನ್ನು ಕುರಿತು ಹೇಳಿದ ಈ ಕೆಲವು ಮಾತುಗಳನ್ನು ಎಲ್ಲರೂ ಗಮನಿಸಬೇಕಾದುದೇ ಆಗಿದೆ :—

"The Gita nowhere exhibits any sense of the evil of sin considered as a violation of law, as defiling the conscience, and as counter-acting the end for which man was created. It makes no provision for the re-establishment of the authority of the Divine Law-giver by the expiation of sin in such a manner as to render forgiveness compatible with justice. It teaches us nothing and knows nothing respecting the forgiveness of sin. It makes no provision for the healing of the wound of the sin-sick soul by the communication of sanctifying grace, and instruction in sanctifying truth. The salvation it teaches is not a salvation from sin by means of new birth to righteousness, commencing in the present life and perfecting hereafter, but merely a salvation from the necessity of being born in repeated births, by means of final emancipation of spirit from matter.

"The moral system of the Gita fails therefore in the most essential points the vindication of the justice of the moral Governor of the Universe, and the restoration of harmony between man's moral nature and the constitution of things under which he is placed."

ಈ ರೀತಿ ತನ್ನ ಕ್ರೈಸ್ತಧರ್ಮ ದೃಷ್ಟಿಯಿಂದ ಗೀತೆಯನ್ನು ವಿಮರ್ಶಿಸುತ್ತಾ ಅದರಲ್ಲೂ ಜಾತೀಯವಾದ ಅಥವಾ ವರ್ಣಭೇದವು ಪ್ರಚೋದಿಸಲ್ಪಟ್ಟಿದೆಯೆಂಬುವಕ್ಕೆ ಹೀಗನ್ನುತ್ತಾನೆ :—

"The poem bears internal evidence that it was written by a Vaishnava brahmin, who had the ordinary Hindu polytheistic and pantheistic ideas, who sought to uphold caste and privileges of his order, while he endeavoured to harmonise some doctrines of Hindu philosophy, and, give prominence to Krishna Bhakti. A blasphemous claim is made that 'the Deity' spoke the words which he wrote and the book was foisted into the Mahabharata to get the support of its authority."

ಮುಂದುವರಿಯುತ್ತಾ ಈ ವಿಮರ್ಶಕನಿಗೆ ಭಗವದ್ಗೀತೆಯು ಹೀಗೆ ಕಂಡುಬಂದಿದೆ:—

"The style of the composition is flowing and elegant; but the philosophy taught is unsound and the doctrine immoral. It is poison administered in honey."

Dr. Robert Caldwell ಇವನ ಈ ಕಡೇ ಮಾತುಗಳು ಕಠೋರವಾಗಿ ಬಿದ್ದಿವೆ. ಹೇಗೂ ಆ ವಿಧರ್ಮೀಯರ ಮತ್ತು ಬ್ರಾಹ್ಮಣೇತರರ ದೃಷ್ಟಿಯಿಂದ ಈ ವಿದ್ವಾಂಸರ ಅಭಿಪ್ರಾಯಗಳನ್ನು ಸಾವಧಾನದಿಂದ ಪರಿಶೀಲಿಸಬೇಕಿದೆ; ಅಲ್ಲದೆ, ಅವರು ಏಕೆ ಹಾಗಂದರೆಂಬುದನ್ನು ನಮ್ಮಿಂದ ನಾವೇ ಕೇಳಿಕೊಳ್ಳಬೇಕಾಗಿದೆ:—

"ಬ್ರಾಹ್ಮಣ ಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ
ಶಮೋ ದಮಸ್ತಪಶ್ಶೌಚಂ ಶಾಂತಿರಾರ್ಜವಮೇವ ಚ
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ"

ಇಂಥಾ ಶ್ಲೋಕಗಳು ಗೀತೆಯಲ್ಲಿ ಹೇಗೆ ಸ್ಥಾನವನ್ನು ಪಡೆದುವು, ತಪಸ್ಸು, ಋಜುತ್ವ, ಜ್ಞಾನ, ಆಸ್ತಿಕ್ಯ ಇತ್ಯಾದಿಗಳು ಇತರರಿಗೂ ಜನ್ಮಸಿದ್ಧ ಹಕ್ಕಾಗಲಾರವೇ? ನಾಲ್ಕು ಜಾತಿಭೇಧಗಳನ್ನು ಪುರಸ್ಕರಿಸಿ ಬರೆದ ಗೀತೆಯು ಕಡೇ ಅಧ್ಯಾಯದ ನಾಲ್ಕಾರು ಶ್ಲೋಕಗಳನ್ನು ಅಲ್ಲಿ ತುಂಬಲು ಏನು ಕಾರಣ? ಇಂಥಾ ವಿಷಯಗಳನ್ನೂ ವಿಶ್ವರೂಪಿ ನಿರಾಮಯನಾದ ಭಗವಂತನೇ ಅಂದನೆಂದು ಏಕೆ ಹೇಳಬೇಕು?

ಇಂಥಾ ಕೆಲವು ವಾದಾಸ್ಪದವಾದ ವಿಚಾರಗಳನ್ನು ಬಿಟ್ಟರೆ ಶ್ರೀಮದ್ಭಗವದ್ಗೀತೆಯು ಅತ್ಯುತ್ತಮವಾದ ತಾತ್ವಿಕ ಗ್ರಂಥವೆಂದು Dr. Caldwell ಮತ್ತು ಇತರ ಪಾಶ್ಚಾತ್ಯರು ಒಪ್ಪಿದ್ದಾರೆ. ಗೀತೆ ಮತ್ತು ವೇದಪುರಾಣಗಳ ಭಾಷಾಂತರ ಮತ್ತು ಪ್ರಚಾರ ಕಾರ್ಯವನ್ನು ಭಾರತೀಯರು ಹಿಂದೆಂದೂ ಕೈಗೊಳ್ಳದಿದ್ದಾಗ ಅವರೇ ಅವುಗಳನ್ನು ಕತ್ತಲೆಯಿಂದ ಬೆಳಕಿಗೆ ಕಿತ್ತೊಗೆದು ಜಗತ್ತಿನ ಮುಂದೆ ಇಟ್ಟಿದ್ದಾರೆ. ಹಾಗಿದ್ದರೂ ನಮ್ಮ ಸನಾತನಿಗಳು ಅವುಗಳಲ್ಲಿ ಇರುವ ಹಲವು ಅನವಶ್ಯಕ ವಿಷಯಗಳನ್ನು ಕುರಿತು ನಿಷ್ಪಕ್ಷಪಾತ ದೃಷ್ಟಿಯಿಂದ ಆಲೋಚಿಸಬೇಕಿದೆ.

**೧೩. ಸರ್ ಎಡ್ವಿನ್ ಆರ್ನಾಲ್ಡ್—ಇವನ 'ಏಷ್ಯಾದ ಬೆಳಕು':—**

"Sir Edwin Arnold's poem "The Light of Asia" is the

most sympathetic account ever published in Europe of the life and teaching of the Sakya Saint Gautama Siddharta, the Lord Buddha."

ಎಂಬುದಾಗಿ ಲಂಡನ್ನಿನ "The Times" ಪತ್ರಿಕೆಯು ಒಂದೊಮ್ಮೆ Sir Edwin Arnold ಇವನ "ಏಷ್ಯಾದ ಬೆಳಕು" ಎಂಬ ಕಾವ್ಯವನ್ನು ವಿಮರ್ಶಿಸುತ್ತಾ ಹೇಳಿತು. ಓಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ತನ್ನ ವಿದ್ಯಾರ್ಥಿ ದೆಸೆಯಲ್ಲಿಯೇ ಉತ್ತಮ ಕವಿಯೆಂದು Newdigate ಬಹುಮಾನವನ್ನು 1856 ರಲ್ಲಿ ಹೊಂದಿದ ಇವನು ಅದೇ ವರ್ಷ ಪೂನಾದ ಡೆಕ್ಕನ್ ಕೋಲೇಜಿನ ಮುಖ್ಯ ಪ್ರಾಧ್ಯಾಪಕನಾಗಿ ನೇಮಿತವಾಗಿ ಈ ದೇಶಕ್ಕೆ ಬಂದನು. ಇಲ್ಲಿಗೆ ಬಂದ ಕೂಡಲೇ ಅವನು ಈ ದೇಶದ ಪುರಾತನ ಕಾವ್ಯರಾಶಿಯನ್ನು ಪಠಿಸಿದನು. ರಾಮಾಯಣ ಮತ್ತು ಮಹಾಭಾರತ ಕಾವ್ಯಗಳು ಅವನಲ್ಲಿ ಉತ್ತಮ ಪರಿಣಾಮವನ್ನುಂಟುಮಾಡಿದುವು. 1861 ರಲ್ಲಿ Edwin Arnold ಇವನು ಈ ರೀತಿ ಉದ್ಗರಿಸಿದನು :—

"A long residence in India, and close intercourse with (her people) have given the author a lively desire to subserve their advancement. No one now listens to the precipitate ignorance which would set aside as 'heathenish' the high civilization of this great race; but justice is not (yet) done to their past development and present capacities."

Sir E. Arnold ಇವನು ಹಿಂದೂಸ್ಥಾನದಲ್ಲಿದ್ದಾಗ ಈ ದೇಶದ ಕಾವ್ಯ ಸೃಷ್ಟಿಯನ್ನು ಕುರಿತಾಗಿ ಇಂಗ್ಲೆಂಡಿನ ಪತ್ರಿಕೆಗಳಲ್ಲಿ ನೂರಾರು ಲೇಖನಗಳನ್ನು ಬರೆದಿದ್ದನು. ಇವನು ಬೊಂಬಾಯಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕನಾಗಿದ್ದಾಗ 'ಗೀತ ಗೋವಿಂದ'ವನ್ನು ಭಾಷಾಂತರಿಸಿದನು. ಇವನ ಪ್ರಸಿದ್ಧವಾದ "Light of Asia" ಎಂಬ ಬುದ್ಧನ ಜೀವನ ಮತ್ತು ಬೌದ್ಧ ಧರ್ಮವನ್ನು ಕುರಿತಾದ ಸರಳ ರಗಳೆಯ ಸುಂದರ ಇಂಗ್ಲಿಷ್ ಕಾವ್ಯವು 1879ರಲ್ಲಿ ಪ್ರಕಟವಾಯಿತು. ಕೂಡಲೇ ಇದು ಅಮೇರಿಕಾ ಮತ್ತು ಯೂರೋಪು ಖಂಡಗಳಲ್ಲಿ ಮೇಲಿಂದ ಮೇಲೆ ಸುಮಾರು 150 ಬಾರಿ ಪುನರ್ಮುದ್ರಣವಾಯಿತೆಂದರೆ ಈ ಗ್ರಂಥದ ಮಹತ್ವವೂ ರಚನಾ ಗಾಂಭೀರ್ಯವೂ ಹೇಗಿದೆಯೆಂಬುದನ್ನು ಇಲ್ಲಿ ಹೇಳುವ ಅವಶ್ಯಕತೆಯೇ ಇಲ್ಲ. ಇದರ ಮೊದಲ ಮುದ್ರಣವು ಪ್ರಕಟವಾದ ಕೂಡಲೇ Dr. George Buhler ಇವನು ಅದರ ಮೇಲೆ ಒಂದು ವಿದ್ವತ್ಪೂರ್ಣವಾದ ವಿಮರ್ಶೆಯನ್ನು Indian Antiquary ಪತ್ರಿಕೆಯಲ್ಲಿ ಬರೆದನು. Edwin Arnold ಇವನ ಜೀವನ ತತ್ವವೇನಿತ್ತೆಂಬುದಕ್ಕೆ ಆ "Light of Asia' ಗ್ರಂಥದಿಂದ ಈ ಪಂಕ್ತಿಗಳನ್ನು ಉದಾಹರಿಸಿದ್ದಾನೆ :—

"Ah! Blessed Lord, Oh High Deliverer!
Forgive this feeble script, which doth thee wrong.
Measuring with little wit thy lofty love,
Ah! Lover, Brother, Guide! Lamp of the Law!
I take my refuge in thy name thee!



I take my refuge in thy order ! ' Om '!
The dew is on the lotus ! Rise, Great Sun !
Om Manipadme hum, the Sunrise comes !
The Dewdrop slip into the shining sea !

Edwin Arnold ಇವನು ಭಗವದ್ಗೀತೆಯನ್ನು 1885 ರಲ್ಲಿ ' Song Celestial ' ಎಂದು ಇದೇ ರೀತಿ ಸರಳ ರಗಳೆಯಲ್ಲಿ ಬರೆದನು. ಭಾರತೀಯ ತತ್ವಶಾಸ್ತ್ರಗಳ ಮೇಲೆ ಹಲವು ವಿಮರ್ಶಾತ್ಮಕ ಪ್ರಬಂಧಗಳನ್ನೂ ರಚಿಸಿದನು. ಹಿಂದೂಸ್ಥಾನದ ಆರ್ಶೀಯ ಸಂಸ್ಕೃತಿ ಮತ್ತು ಜೀವನವನ್ನು ಕುರಿತಾಗಿಯೂ ಒಂದೆರೆಡು ಗ್ರಂಥಗಳನ್ನು ರಚಿಸಿದನು. ಇವನ ಗ್ರಂಥಗಳೆಲ್ಲಾ ಮಿಲ್ಯಾಂತರ ಪ್ರತಿಗಳಾಗಿ ಲೋಕ ಪ್ರಸಿದ್ಧವಾಗಲು ಕಾರಣ ಅವನ ರಚನಾಕೌಶಲ್ಯ ಮತ್ತು ಭಾಷಾ ಶೈಲಿಯೇ ಆಗಿದೆ. ಉದಾಹರಣೆಗೆ ಅವನ ' ಗೀತ ಗೋವಿಂದ ' ಇದರ ಕೆಲವು ಪಂಕ್ತಿಗಳು ಹೀಗಿವೆ :—

' So came she where he stood, awaiting her
At the bower's entry, like a god to see,
With marraige—gladness in the grace of heaven.
The great pearl set upon his glorious head
Shone like a moon among the leaves, and shone
Like stars the gems that kept her gold gown close :
But still a little while she paused—abashed
At her delight, of her deep joy afraid -
And they that tended her sang once more this :

Sir Edwin Arnold ಇವನ ಪಾಂಡಿತ್ಯಕ್ಕೂ ಭಾರತೀಯ ಭಾಷಾ ಸೇವೆಗೂ ಬ್ರಿಟಿಷ್ ಸರಕಾರವು ಅವನಿಗೆ ಅತ್ಯುಚ್ಚ ಬಿರುದುಗಳನ್ನಿತ್ತು ಸನ್ಮಾನಿಸಿತು. ಅವನು ತನ್ನ ಕಡೇ ದಿನಗಳವರೆಗೂ ಒರ್ವ ತತ್ವಜ್ಞಾನಿಯಾಗಿಯೇ ಇದ್ದನು. ಈ ಸರ್ವ ಧರ್ಮ ಸಮನ್ವಯಿಯಾದ ವಿದ್ವಾಂಸನು ಕ್ರಿ. ಶ. 1904 ರಲ್ಲಿ ವಿಧಿವಶನಾದನು.

## ೧೪. ಡಾ. ಜಾರ್ಜ್ ಬ್ಯೂಲ್ಹರ್—* ಇವನ ಜೀವನ ಪರಿಚಯ :—

Dr. George Bhuler ಇವನು ಜರ್ಮನಿಯ ಹ್ಯಾನೊವರ್ ಪ್ರಾಂತದಲ್ಲಿ 1837 ರಲ್ಲಿ ಜನಿಸಿದನು. ತನ್ನ ಎಳೆ ಪ್ರಾಯದಲ್ಲಿಯೇ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಯಲ್ಲಿ ಪ್ರಬಲ ವಿದ್ವಾಂಸನೆಂದೆನ್ನಿಸಿದನು. ಗೊಟಿಜ್ಜೆನ್ ವಿಶ್ವವಿದ್ಯಾಲಯದಲ್ಲಿ ಇವನು Prof. Benfey ಇವನಂಥಾ ಪಂಡಿತನ ಶಿಷ್ಯನಾಗಿ ಭಾರತೀಯ ಸಾಹಿತ್ಯದಲ್ಲಿ ವಿಶೇಷ ಅಭಿರುಚಿಯನ್ನು ತಾಳಿದನು. 1858ರಲ್ಲಿ ಅವನು ಅದೇ ವಿಶ್ವವಿದ್ಯಾಲಯದಿಂದ ತತ್ವಶಾಸ್ತ್ರದಲ್ಲಿ ಡಾಕ್ಟರೆಟ್ ಪದವಿಯನ್ನು ಹೊಂದಿದನು. ಅನಂತರ ಸ್ವಲ್ಪ ಸಮಯದಲ್ಲಿಯೇ ಪ್ರಬುದ್ಧನಾದ ವಿದ್ವಾಂಸನೆಂದು ವಿಖ್ಯಾತನಾದನು.

Dr. G. Buhler ಇವನು ಓಕ್ಸ್‌ಫರ್ಡ್‌ನಲ್ಲಿ ತನ್ನ ವಿದ್ಯಾಭ್ಯಾಸಗವನ್ನು

* ಇವನ ಭಾವಚಿತ್ರವನ್ನು ಬೇರೊಂದೆಡೆಯಲ್ಲಿ ಕೊಡಲಾಗಿದೆ.

1859 ರ ಕಾಲದಲ್ಲಿ ಕೈಗೊಂಡಿದ್ದಾಗ Prof. Wilson, Dr. Max-Mueller ಈ ಮೊದಲಾದ ವಿದ್ವಾಂಸರ ಸಂಪರ್ಕದಿಂದ ಸಂಸ್ಕೃತ ಭಾಷೆಯಲ್ಲಿ ಪ್ರೌಢಿಮೆಯನ್ನು ಹೊಂದಿ ವೇದಗಳ ಕಾಲದ ಜನಜೀವನವನ್ನು ಕುರಿತಾಗಿ ಉದ್ಬೋಧಕವಾದ ಲೇಖನಗಳನ್ನು ಬರೆದನು. ಯೂರೋಪು ಮತ್ತು ಹಿಂದೂಸ್ಥಾನದ ಭಾಷೆಗಳನ್ನು ಶಾಸ್ತ್ರೀಯವಾಗಿ ಮತ್ತು ತುಲನಾತ್ಮಕವಾಗಿ ಅಭ್ಯಸಿಸಿದನು.

ಕ್ರಿ.ಶ. 1863 ರಲ್ಲಿ George Buhler ಇವನು ಹಿಂದೂಸ್ಥಾನಕ್ಕೆ ಬಂದನು. ಬೊಂಬಾಯಿ ಆಧಿಪತ್ಯದ ಸರಕಾರವು ಇವನನ್ನು ಆ ಪ್ರಾಂತದ ಉತ್ತರ ಭಾಗದ ಶಾಲೆಗಳ ಅಧಿಕಾರಿಯಾಗಿ ನೇಮಿಸಿತು. 1864 ರಲ್ಲಿ ಸಂಸ್ಕೃತ ಸಾಹಿತ್ಯದ ಮೂಲವನ್ನು ಕುರಿತು ಇವನು ಬರೆದ ಪರಿಶೋಧನಾ ಪ್ರಬಂಧಗಳು ಮದ್ರಾಸಿನ Literary Journal ಇದರಲ್ಲಿ ಪ್ರಕಟವಾದುವು. ಇವುಗಳೊಡನೆಯೇ ಹಿಂದೂ ನ್ಯಾಯ ಶಾಸ್ತ್ರವನ್ನು ಕುರಿತಾಗಿ ಒಂದು ಗ್ರಂಥವನ್ನು ಬರೆದನು. Dr. Buhler ಇವನು ಬೊಂಬಾಯಿ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಭಾರತೀಯ ಭಾಷೆಗಳ ಪ್ರಾಧ್ಯಾಪಕನಾಗಿ ಸಂಸ್ಕೃತ ಇಲಾಖೆಯ ಮುಖ್ಯಾಧಿಕಾರಿಯಾಗಿ ಮತ್ತು ಒಬ್ಬ ನಿಷ್ಠಾವಂತ ಸಂಶೋಧಕನಾಗಿ ಪ್ರಾಚೀನಕಾಲದ ಸಾಹಿತ್ಯ ಮತ್ತು ಇತಿಹಾಸದ ಬಗ್ಗೆ ಅಪರಿಮಿತ ಅನ್ವೇಷಣೆಯನ್ನು ನಡೆಸಿದನು. ಹಿಂದೂ ಮತ್ತು ಜೈನಮತಗಳ ಧರ್ಮಗ್ರಂಥಗಳನ್ನೂ ಸಂಪೂರ್ಣವಾಗಿ ಸಂಶೋಧಿಸಿ ಪರಿಷ್ಕರಿಸಿ ಭಾಷಾಂತರಿಸಿದನು.

Dr. George Buhler ಇವನು 1870 ರಿಂದ ಶಾಲೆಗಳ ಅಧಿಕಾರಿಯಾಗಿ ಮತ್ತು ತನ್ನ ಸಂಶೋಧನಾರ್ಥವಾಗಿ ಉತ್ತರ ಹಿಂದೂಸ್ಥಾನದ ಹಲವು ಭಾಗಗಳಲ್ಲಿ ಸಂಚರಿಸಿ ಆ ವರೆಗೂ ತಿಳಿಯದೇ ಇದ್ದ ನೂರಾರು ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ಸಂಪಾದಿಸಿ ಬೆಳಕಿಗೆ ತಂದನು. ಹಿಂದೂ ನ್ಯಾಯ ಶಾಸ್ತ್ರ, ಆಪಸ್ತಂಭ ನ್ಯಾಯಸೂತ್ರ ಜೈನಧರ್ಮ, ಆರ್ಯರ ಸ್ಮೃತಿಸೂತ್ರಗಳು ಎಂದಿತ್ಯಾದಿಯಾಗಿ ಅವನು ಬರೆದ ಗ್ರಂಥಗಳ ಪರಿಪುಷ್ಟತೆಯನ್ನೂ ಸಂಶೋಧನೆ ಅಪಾರತೆಯನ್ನೂ ಗಮನಿಸಿ ಬ್ರಿಟಿಷ್ ಸರಕಾರವು ಅವನಿಗೆ ಬಿರುದುಗಳನ್ನಿತ್ತು ಗೌರವಿಸಿತು

Prof. G. Buhler ಇವನು ಒಬ್ಬ ಮೇಧಾವಿಯೂ ಕಾರ್ಯತತ್ಪರನೂ ಭಾರತೀಯ ಭಾಷಾಭಿಮಾನಿಯೂ ಆಗಿದ್ದನು ವೇದಗಳಿಂದ ಹಿಡಿದು ನ್ಯಾಯ ಶಾಸ್ತ್ರ, ಜೈನಧರ್ಮ, ಸಾಹಿತ್ಯಚರಿತ್ರೆ ಇವೆಲ್ಲವನ್ನೂ ಕುರಿತು ಬರೆದ ಗ್ರಂಥಗಳಲ್ಲಿ ಕೆಲವು ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಲ್ಲೂ ಪ್ರಕಟವಾಗಿವೆ. ಕ್ರಿ.ಶ. 1863 ರಿಂದ 1890 ರ ವರೆಗೂ ಅವನು ಈ ದೇಶದಲ್ಲಿ ಇದ್ದನು. ಅಲ್ಲಿಂದನಂತರ ವಿಯೆನ್ನಾ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಮತ್ತು ಪ್ರಾಕೃತ ವಿಚಾರಗಳ ಪ್ರಾಧ್ಯಾಪಕನಾಗಿಯೂ ಇದ್ದನು. 1898 ನೇ ವರ್ಷದ ಒಂದು ದಿನ ಇವನು ಸಮೀಪದ ಕಾನ್‌ಸ್ಟೆನ್ಸಾ ಸರೋವರದಲ್ಲಿ ಈಜಾಡಲು ಹೋಗಿದ್ದಾಗ್ಗೆ ಆಕಸ್ಮಿಕವಾಗಿ ಮುಳುಗಿ ಮೃತನಾದನು. ಆಗ ಅವನಿಗೆ 61 ವರ್ಷ ಪ್ರಾಯವಾಗಿತ್ತು. ಯೂರೋಪಿನ ವಿದ್ವಾಂಸರು ಇವನಿಂದ ಇನ್ನೂ ಹೆಚ್ಚಿನ ಸೇವೆಯನ್ನು ನಿರೀಕ್ಷಿಸಿದ್ದರು. ಹೇಗೂ ಅವನು ಕೈಗೊಂಡಿದ್ದ ಸಾಹಿತ್ಯ ಕಾರ್ಯಕ್ರಮಗಳನ್ನು Prof. Kielhorn, J. Fleet

ಮತ್ತು Dr. Hultzsch ಇವರು ಮುಂದುವರಿಸಿದರು.

೧೫. ಡಾ. ಬ್ಯೂಲ್ಹರ್ ಇವನ ಸೇವೆಯು ಕನ್ನಡ ನಾಡಿಗೂ ಸಂದಿದೆ:—

Dr. Buhler ಇವನು ಯೂರೋಪಿನಲ್ಲಿದ್ದಾಗ ಅವನ ಪರಿಶೋಧನಾ ಲೇಖನಗಳು ಇಂಗ್ಲಿಷ್, ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಪ್ರಕಟವಾಗುತ್ತಿದ್ದುವು. Indian Antiquary ಪತ್ರಿಕೆಯೊಂದರಲ್ಲಿಯೇ ಸುಮಾರು 1,000 folio ಪುಟಗಳಿಗೂ ಮೀರಿ ಅವನ ಲೇಖನಗಳು ಮುದ್ರಣವಾಗಿವೆ ಅವನು Sacred Books of the East ಗ್ರಂಥಮಾಲೆಗೂ ವೇದಾಂತದ ವಿಚಾರವಾಗಿ ಒಂದೆರಡು ಗ್ರಂಥಕಾಂಡಗಳನ್ನು ಬರೆದಿದ್ದನೆಂದೂ ಹಿಂದೆಯೇ ಹೇಳಲಾಗಿದೆ.

Prof. Buhler ಇವನು James Burgers ಇವನಂತೆ ಪಶ್ಚಿಮ ಹಿಂದೂಸ್ಥಾನದ ಪ್ರಾಕ್ತನ ವಿಚಾರ ಸಂಶೋಧನೆಯನ್ನು ಬಹು ಆಳವಾಗಿ ಕೈಗೊಂಡನು. ಕರ್ಣಾಟಕದ ಕೊನ್ನೂರು. ಐಹೊಳೆ. ಬಾದಾಮಿ. ಬಿಜಾಪುರ ಮೊದಲಾದ ಸ್ಥಳಗಳ ಐತಿಹ್ಯವನ್ನೂ ಶೋಧಿಸಿ ವಿವರಣಾತ್ಮಕವಾದ ವರದಿಯನ್ನು ಪ್ರಕಟಿಸಿದನು. ಗದಗ, ಲಕ್ಷ್ಮೇಶ್ವರ, ಲಕ್ಕುಂಡಿ, ದಂಬಳ ಇತ್ಯಾದಿ ದೇವಾಲಯಗಳನ್ನೂ ಎಲ್ಲೋರದ ಬೌದ್ಧ ಗುಹಾಂತರ್ಗತ ಕಟ್ಟೋಣಗಳನ್ನೂ J. Burgers ಇವನೊಡನೆ ಪರಿಶೀಲಿಸಿ ಅವುಗಳ ಮೇಲೆ ವಿಸ್ತೃತಪೂರ್ಣವಾದ ಲೇಖನಗಳನ್ನು ಬರೆದನು. ಹೀಗೆ ಪ್ರಾರಂಭವಾದ ಅವನ ಅನ್ವೇಷಣಾ ಕಾರ್ಯಕ್ರಮವು ಅನಂತರ ಕಾಶ್ಮೀರ, ರಾಜಸ್ಥಾನ ಮತ್ತು ಮಧ್ಯ ಹಿಂದೂಸ್ಥಾನದ ಪ್ರಾಂತಗಳಿಗೆ ವ್ಯಾಪಿಸಿ ಅಲ್ಲಿಲ್ಲಾ ದೊರಕಿದ ಸಾಹಿತ್ಯ ಮತ್ತು ಶಾಸನಗಳ ಲಿಖಿತಪಟ್ಟಿಗಳನ್ನೆಲ್ಲಾ ಸಂಗ್ರಹಿಸಿ, ಸಂಪಾದಿಸಿ ಅನಂತರ ತನ್ನ ಸ್ವದೇಶಕ್ಕೆ ಮರಳಿದನು.

ಯೂರೋಪಿನಲ್ಲಿ George Buhler ಇವನನ್ನು ಹಲವು ಸಾಹಿತ್ಯ ಸಂಘಗಳು ಗೌರವ ಸದಸ್ಯನನ್ನಾಗಿ ಮಾಡಿ ಸನ್ಮಾನಿಸಿದುವು. 1871 ರಲ್ಲಿ ಜರ್ಮನ್ Oriental Society 1873 ರಲ್ಲಿ ಅಮೇರಿಕಾದ Oriental Society, 1878 ರಲ್ಲಿ ಬರ್ಲಿನ್ನಿನ Academy of Scienee, 1885 ರಲ್ಲಿ ವಿಯೆನ್ನಾದ Academy of Science, 1883 ರಲ್ಲಿ ಗೊಟಿಙ್ಗೆನ್ ವಿಶ್ವವಿದ್ಯಾಲಯದ Royal Academy of Science ಮತ್ತು 1893 ರಲ್ಲಿ ರಷ್ಯಾದ Petersburg Academy ಸಂಸ್ಥೆಗಳು ಅವನನ್ನು ಅವುಗಳ ಗೌರವ ಸದಸ್ಯನನ್ನಾಗಿ ಆರಿಸಿದುವು.

1886 ರಲ್ಲಿ ವಿಯೆನ್ನಾದಲ್ಲಿ ಸೇರಿದ್ದ Oriental Congress ಇದರಲ್ಲಿ ಅವನು ಭಾಗವಹಿಸಿದ್ದನು. ಅಲ್ಲಿ ಭಾರತ ಸರಕಾರದ Linguistic Survey ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ Dr. G. A. Grierson ಇವನನ್ನು ಭೇಟಿಯಾಗಿ ಭಾರತೀಯ ಭಾಷೆಗಳ ಪುನರುದ್ಧಾರಕ್ಕೆ ತಕ್ಕ ಯೋಜನೆಯನ್ನು ತಯಾರಿಸುವ ವಿಷಯವಾಗಿ George Buhler ಇವನು ಅವನೊಡನೆ ಚರ್ಚಿಸಿದನು. ಅದರಂತೆಯೇ Dr. Grierson ಇವನು ಕರ್ಣಾಟಕದ ಹಾಗೂ ಭಾರತದ

ವಿವಿಧ ಭಾಷೆಗಳ ಮತ್ತು ಭಾಷಾವಾರು ಪ್ರದೇಶಗಳ ವಿಷಯವಾಗಿ ಸರ್ವ ವಿಷಯಗಳನ್ನೂ ಸಂಗ್ರಹಿಸಿದನು. 1897 ರಲ್ಲಿ ಪ್ಯಾರಿಸ್‌ನಲ್ಲಿ ನಡೆದ Oriental Congress ಇದರಲ್ಲಿ George Buhler ಇವನು Dr. Grierson ಇವನೊಡನೆ ಈ ವಿಷಯುವಕಗಿ ಪುನಃ ಚರ್ಚಿಸಿ ಆ ಯೋಜನೆಯನ್ನು ಜಯಪ್ರದವಾಗಿಸಲು ತಕ್ಕ ಸಲಹೆಯನ್ನಿತ್ತನು.

**೧೬. ಕಳೆದ ಶತಮಾನದ ಕೆಲವು ಪ್ರಖ್ಯಾತ ಭಾಷಾಶಾಸ್ತ್ರಜ್ಞರು :—**

ಕ್ರಿ. ಶ. 18 ನೇ ಶತಮಾನಾಂತ್ಯದಲ್ಲಿ ಇದ್ದು ಸಂಸ್ಕೃತ, ಪರ್ಶಿಯನ್, ಹಿಂದೂಸ್ಥಾನೀ, ಬಂಗಾಳೀ ಇತ್ಯಾದಿ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿ, ಸಂಸ್ಕೃತ ಅರ್ಥಕೋಶ, ವ್ಯಾಕರಣ, ದೇಶೀಯ ಭಾಷೆಗಳ ವಿಷಯವಾಗಿ ತುಲನಾತ್ಮಕ ವಿಚಾರ ವಿಮರ್ಶೆ ಮೊದಲಾದ ಗ್ರಂಥಗಳನ್ನು ಆಗಲೇ ಹಲವರು ಬರೆದರು. ಇವರಲ್ಲಿ Nathaniel Halhed, William Jones, ಮತ್ತು Charles Wilkins ಇವರು ಪ್ರಮುಖರು. ಕಳೆದ ೧೯ ನೇ ಶತಮಾನದ ಪ್ರಾರಂಭದಲ್ಲಿ ಈ ದೇಶದ ನೂರಾರು ಭಾಷೆಗಳನ್ನು ಶಾಸ್ತ್ರೀಯವಾಗಿ ಮತ್ತು ತುಲನಾತ್ಮಕವಾಗಿ ಅನ್ವೇಷಿಸಿ ಹಿಂದೂ ಭಾಷಾಶಾಸ್ತ್ರದ ಸಬಲ ರೂಪುರೇಷೆಗಳನ್ನೂ ವಿವರಣಾತ್ಮಕವಾಗಿ ಬರೆದರು. ಇವರಲ್ಲಿ Dr. William Carey ಇವನೊಬ್ಬನೇ 28 ಭಾಷೆಗಳು ಮತ್ತು ಉಪಭಾಷೆಗಳನ್ನು ಅಭ್ಯಸಿಸಿ ಅವುಗಳ ವಿಷಯವಾಗಿ ಶಾಸ್ತ್ರೀಯವಾಗಿ ಪ್ರತಿಪಾದಿಸಿದನು.

Major Robert Leech ಇವನು ಕ್ರಿ. ಶ. 1838 ರಿಂದ 1843 ರ ವರೆಗೆ ಬ್ರಾಹ್ವೀ, ಬಲೂಚಿ, ಪಂಜಾಬೀ. ಪುಷ್ಟು. ಬಂಡೆಲೀ, ಕಾಶ್ಮೀರೀ ಮೊದಲಾದ ಹಲವು ಭಾಷೆ ಮತ್ತು ಉಪಭಾಷೆಗಳನ್ನು ಕುರಿತು ವ್ಯಾಕರಣ, ಶಬ್ದಕೋಶ ಮೊದಲಾದುವನ್ನು ತಯಾರಿಸಿ ಭಾರತೀಯ ಭಾಷಾಶಾಸ್ತ್ರಕ್ಕೆ ಅಮೋಘ ಸೇವೆಯನ್ನು ಸಲ್ಲಿಸಿದ್ದಾನೆ. ಬೊಂಬಾಯಿ ಆಧಿಪತ್ಯದ ಮುಖ್ಯ ನ್ಯಾಯಾಧೀಶನೂ, Royal Asiatic Society ಇದರ ಬೊಂಬಾಯಿ ಶಾಖೆಯ ಅಧ್ಯಕ್ಷನೂ ಆಗಿದ್ದ T- Erskine Perry ಇವನು 1853 ರಲ್ಲಿ " The Geographical Distibution of the Principal Languages of India " ಎಂಬುದರ ಮೇಲೆ ಬಹು ವಿಸ್ತಾರವಾದ ಒಂದು ವರದಿಯನ್ನು ತಯಾರಿಸಿ ಭಾಷಾಶಾಸ್ತ್ರಜ್ಞರಿಗೆ ಈ ದೇಶದಲ್ಲಿ ಪ್ರಚಲಿತವಿರುವ ಸಹಸ್ರಾರು ಭಾಷೆಗಳ ಪರಿಚಯವನ್ನು ಶಾಸ್ತ್ರೀಯವಾಗಿ ಮಾಡಿಕೊಟ್ಟನು. ಇವನು ದಕ್ಷಿಣ ಹಿಂದೂಸ್ಥಾನದ ಭಾಷೆಗಳು Tamiloid ಅಥವಾ Turanian ವರ್ಗಕ್ಕೆ ಸೇರಿದ ಭಾಷೆಗಳೆಂದು ವರ್ಗೀಕರಿಸಿದ್ದನು

1860 ರಲ್ಲಿ J. Stevenson ಇವನು " Comparative Vocabulary of the non-Sanskrit Vocables of the Vernacular Languages of India " ಎಂಬುದಾಗಿ ಮತ್ತೊಂದು ಉಪ

ಯುಕ್ತವಾದ ಗ್ರಂಥವನ್ನು ಬರೆದನು. Dr. Hoernle ಇವನು 1872 ರಲ್ಲಿ "Grammar of Eastern Hindi compared with the Gowdian Languages" ಎಂಬುದಾಗಿ ಬೋಧಪ್ರದವಾದ ಲೇಖನಗಳನ್ನು Royal Asiatic Society Journal ಇದರಲ್ಲಿ ಬರೆದನು. ಇವನು ಪ್ರಾಕೃತ ಭಾಷಾ ವರ್ಗವನ್ನು ಶೌರಸೇವಿ, ಮಹರಾಷ್ಟ್ರಿ, ಮಾಗಧಿ ಎಂದಿತ್ಯಾದಿಯಾಗಿ ವಿಭಾಗಿಸಿ ಅವುಗಳ ಮೇಲೆ ತುಲನಾತ್ಮಕವಾದ ಪ್ರಬಂಧಗಳನ್ನು ಬರೆದದ್ದು ಅನಂತರ ಗ್ರಂಥರೂಪದಲ್ಲೂ ಪ್ರಕಟವಾಯಿತು.

Dr. Paul Tesco ಇವನು ಆರ್ಯರ ಕಾಲದ ಭಾಷೆಗಳ ಮೇಲೆ ವಿಚಾರ ಗರ್ಭಿತವಾದ ಲೇಖನಗಳನ್ನು ಬರೆದನು. 1870 ರಲ್ಲಿ Sir William W. Hunter ಇವನು ತನ್ನ ಇತರ ಹಲವು ಪ್ರಕಟಣೆಗಳೊಂದಿಗೆ "Comparative Dictionary of the Languages of India and High Asia" ಎಂಬುದಾಗಿ ಬರೆದದ್ದು ಉದ್ಧಾನು ಗ್ರಂಥವೆಂದು ಪ್ರಸಿದ್ಧವಾಯಿತಲ್ಲದೆ ಅದು ಅವನ ಪ್ರತಿಭೆಗೆ ಇನ್ನಷ್ಟು ದೊಡ್ಡ ಕಳಶವಿಟ್ಟಂತಾಗಿಸಿದ ಅಪೂರ್ವ ಗ್ರಂಥವಾಯಿತು. ಅಷ್ಟೇ ಅಲ್ಲ. ಇಂಗ್ಲೆಂಡಿನಲ್ಲಿಯೇ ಇದ್ದ Prof. Max Mueller ಇವನು ಭಾರತೀಯ ಭಾಷೆಗಳನ್ನು ಶಾಸ್ತ್ರೀಯವಾಗಿ ಅನ್ವೇಷಿಸಿದನಲ್ಲದೆ 1854 ರಲ್ಲಿ ಅವನು Chevalier Bunsen ಇವನಿಗೆ ಬರೆದ ಪತ್ರವೊಂದರಲ್ಲಿ ದ್ರಾವಿಡ ಭಾಷೆಗಳಲ್ಲದೆ ಮುಂಡ ಭಾಷೆಗಳೆಂಬ ಬೇರೊಂದು ವರ್ಗದ ಭಾಷೆಗಳವೆಯೆಂದೂ ಪ್ರತಿಪಾದಿಸಿದ್ದನು.

೧೭. ಪ್ರಚಂಡ ಭಾಷಾಶಾಸ್ತ್ರಜ್ಞ–ಬ್ರ್ಯಾನ್ ಹಾಗ್‌ಸನ್ :—

Brian Haughtson Hodgson ಇವನು ಕಳೆದ ಶತಮಾನದ ಆರಂಭದಲ್ಲಿ ಇದ್ದ ಅಗ್ರಗಣ್ಯ ಭಾಷಾಶಾಸ್ತ್ರಜ್ಞನಾಗಿದ್ದನು. Royal Asiatic Society ಇದರ ಆಶ್ರಯದಲ್ಲಿ ಹೊರಡುತ್ತಿದ್ದ "Researches" ಸಾಹಿತ್ಯ ಪತ್ರಿಕೆಯ 16 ನೇ ಸಂಚಿಕೆಯಲ್ಲಿ ಇವನು ಹಿಂದೂಸ್ಥಾನದ ನೂರಾರು ಭಾಷೆಗಳನ್ನು ಆಗಲೇ ಶಾಸ್ತ್ರೀಯವಾಗಿ ಕರತಲಾಮಲಕವಾಗಿಸಿಕೊಂಡ ಪ್ರಚಂಡ ವಿದ್ವಾಂಸನಾಗಿದ್ದನೆಂಬುದನ್ನು ತೋರ್ಪಡಿಸಿದನು. ಭಾರತದ ಭಾಷೆಗಳೊಡನೆ ನೇಪಾಳ, ಸಿಕ್ಕಿಂ, ತಿಬೇಟ್, ಮಧ್ಯಏಷ್ಯಾ, ಬರ್ಮಾ ಇತ್ಯಾದಿ ದೇಶಗಳ ಭಾಷಾ ಶಬ್ದಗಳನ್ನು ಹೋಲಿಸಿ ಅವನು 1828 ರಲ್ಲಿ ಬರೆದ ಲೇಖನಗಳೂ ಗ್ರಂಥವೂ ಅಂದೇ ಲೋಕ ಪ್ರಸಿದ್ಧವಾಯಿತು. Dr. William Carey ಇವನ ಭಾರತೀಯ ಭಾಷಾಶಾಸ್ತ್ರದ ಅಭ್ಯಾಸಕ್ಕೆ ಕನ್ನಡ ಭಾಷೆಯೂ ಒಳಪಟ್ಟಿತ್ತು. ಆದರೆ B. H. Hodgson ಇವನ ಸಂಶೋಧನೆಯು ಕನ್ನಡವನ್ನೊಳಗೊಂಡು ಈ ದೇಶದ ಎಲ್ಲ ಭಾಷೆಗಳಿಗೂ ಅನ್ವಯಿಸಿತ್ತು. ಇವೆಲ್ಲಾ ಭಾಷೆಗಳನ್ನೂ ಮಧ್ಯ ಏಷ್ಯಾದ ಭಾಷೆಗಳಿಗೆ ಹೋಲಿಸಿ ಅಪಾರ ಶಬ್ದಕೋಶಗಳನ್ನು ತಯಾರಿಸಿದ ಸಾಹಸವು ಇವನದಾಗಿತ್ತು.

ದಕ್ಷಿಣ ಹಿಂದೂಸ್ಥಾನದ ಭಾಷೆಗಳನ್ನು 'ದ್ರಾವಿಡ' ವರ್ಗಕ್ಕೆ ಸೇರಿದ ಭಾಷೆ

ಗಳೆಂದು ಕರೆದವರಲ್ಲಿ B. H. Hodgson ಇವನೇ ಮೊದಲನೆಯವನೆಂಬುದನ್ನು ಗಮನಿಸಬೇಕಿದೆ. ಕ್ರಿ. ಶ. 1830 ರಷ್ಟು ಹಿಂದೆಯೇ ಆರ್ಯ, ದ್ರಾವಿಡ, ಮುಂಡ, ಬ್ರಾಹ್ಮೀ ಇತ್ಯಾದಿಯಾಗಿ ಭಾಷಾಂತರಿಸಿ ಅವುಗಳ ಮೇಲೆ ಪ್ರತ್ಯೇಕವಾದ ವಿವರಣೆಗಳನ್ನು ಕೊಟ್ಟು ಬರೆದ ಇವನ ಗ್ರಂಥವು ನೂರಾರು folio ಪುಟಗಳ ವಿವಿಧ ಕಾಂಡಗಳಾಗಿ ಪ್ರಕಟವಾಯಿತು. Sir George Grierson ಇವನು B. H. Hodgson ಇವನ ಪರಿಶ್ರಮವನ್ನು ಕುರಿತು ಹೀಗೆ ಹೇಳಿದನು :—

"Brian Houghtson Hodgson was a man fashioned in the model of Sir William Jones himself. He was truly a great scholar and lived a fruitful 95 years, won him admiration and affection by the entire world of learning of Assia."

ಮುಂದುವರಿಯುತ್ತಾ ಅವನು ಈ ರೀತಿ ಬರೆದನು :—

"Space will not allow me to give even a dry catalogue of the subjects which he adorned. Suffice it to say that he gave comparative vocabularies of nearly all the Indo-Chinese languages spoken in India and the neighbouring countries and of the Munda and Dravidian forms of speech ... ..."

B. H. Hodgson ಇವನ ಕಾಲದವರೆಗೂ ದಕ್ಷಿಣ ಹಿಂದೂಸ್ಥಾನದ ಭಾಷೆಗಳು ದ್ರಾವಿಡ ಭಾಷಾವರ್ಗಕ್ಕೆ ಸೇರಿದ್ದೆಂದು ಯಾರಿಂದಲೂ ಹೇಳಲ್ಪಟ್ಟಿರಲಿಲ್ಲ. ಅವುಗಳ ಅಧಿಕೃತವಾದ ಭಾಷಾಶಾಸ್ತ್ರಕ್ಕೆ Hodgson ಇವನೇ ಮೂಲಪುರುಷನಾದನೆಂಬುದಾಗಿ Sir Grierson ಇವನು ಹೀಗೆ ಹೇಳುತ್ತಾನೆ :—

"...... This shows that the Dravidian languages were not yet recognised as a separate family. They had to await the acute discernment of Hodgson. Here they are looked upon as being just as much Sanskritic as Bengalee or Hindustanee......"

ಕಳೆದ ಶತಮಾನದಲ್ಲಿ B. H. Hodgson ಅವನ ನಂತರದ ನೂರಾರು ಪಾಶ್ಚಾತ್ಯ ವಿದ್ವಾಂಸರ ಕೃತಜ್ಞತೆಗೆ ಪಾತ್ರನಾದ ಸಾಹಸಿ ಭಾಷಾಶಾಸ್ತ್ರಜ್ಞನಾಗಿದ್ದನು. Sir W. W. Hunter ಇವನು ಬರೆದ "Life of Hodgson" ಎಂಬ ಗ್ರಂಥವು 1896 ರಲ್ಲಿ ಲಂಡನ್‌ನಲ್ಲಿ ಪ್ರಕಟವಾಯಿತು.

## ೧೮. ದ್ರಾವಿಡ ಭಾಷಾವಿಶಾರದ ಡಾ. ರಾಬರ್ಟ್ ಕಾಲ್ಡ್ವೆಲ್ :—

Brian H. Hodgson ಇವನ ಭಾರತೀಯ ಭಾಷಾಶಾಸ್ತ್ರದ ವಿಷಯವಾಗಿ ಬರೆದ ಲೇಖನಗಳ ಕಡೇ ಪ್ರಕರಣಗಳು ನೇಪಾಳೀ, ಭೂತಾನೀ ಇತ್ಯಾದಿ ಭಾಷೆಗಳನ್ನೊಡಗೊಂಡು ಸವಿಸ್ತಾರವಾಗಿದ್ದವು. ಅವೆಲ್ಲಾ Asiatic 'Researches' ಪತ್ರಿಕೆಯ 27 ನೇ ಸಂಚಿಕೆಯಲ್ಲಿ 1858 ರಲ್ಲಿ ಮುದ್ರಣವಾಗಿದ್ದು ಅವೇ ಅವನ ಕಡೆ ಪ್ರಕಟಣೆಗಳಾಗಿದ್ದುವು. ಇಷ್ಟರಲ್ಲಿ Dr. Robert Caldwell ಇವನು ಬರೆದ ದ್ರಾವಿಡ ಭಾಷಾಶಾಸ್ತ್ರವನ್ನು ಕುರಿತ ಗ್ರಂಥವು 1856 ರಲ್ಲಿ ಲಂಡನ್‌ನಲ್ಲಿ ಪ್ರಕಟ

ವಾಯಿತು. ದಕ್ಷಿಣದ ಭಾಷೆಗಳನ್ನು B. H. Hodgson ಇವನ ನಂತರ Dr. Caldwell ಇವನೇ ಅವುಗಳನ್ನು 'ದ್ರಾವಿಡ ಭಾಷೆ' ಗಳೆಂದು ಕರೆದು ಆ ಹೆಸರನ್ನು ಸಮರ್ಥಿಸಿದ್ದನು. 610 demy ಪುಟಗಳ ಈ ಗ್ರಂಥದಲ್ಲಿ ದಕ್ಷಿಣ ಹಿಂದೂಸ್ಥಾನದ ಕನ್ನಡ. ತಮಿಳು, ತೆಲುಗು, ಮಲೆಯಾಳ, ತುಳು, ಕೊಡವ, ತೋಡ, ಬಡಗ, ಕೋಟ ಇತ್ಯಾದಿ ದ್ರಾವಿಡ ಭಾಷೆಗಳನ್ನು ಶಾಸ್ತ್ರೀಯವಾಗಿ ಪರಿಶೀಲಿಸಿದನು. ಈ ಪ್ರತಿಯೊಂದು ಭಾಷೆಯ ಪದಗಳು, ಪದಕಟ್ಟು, ಪದಪ್ರಯೋಗಗಳನ್ನು ಕುರಿತು ತುಲನಾತ್ಮಕವಾದ ವಿವರಣೆಯನ್ನು ಕೊಟ್ಟಿದ್ದಾನೆ. ಇದಕ್ಕೆ ಪ್ರಸ್ತಾವನೆಯಾಗಿ 154 ಪುಟಗಳ ಮುನ್ನುಡಿಯನ್ನು ಬರೆಯುತ್ತ ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಭಾಷೆಗಳನ್ನು ಶಾಸ್ತ್ರೀಯವಾಗಿ ಪ್ರತಿಪಾದಿಸತೊಡಗಿದ್ದು ಈ ದೇಶದ ಸಾಹಿತ್ಯ ಚರಿತ್ರೆಯಲ್ಲಿ ಒಂದು ಕ್ರಾಂತಿಕಾರಕವಾದ ಸನ್ನಿವೇಶವೆಂಬುದನ್ನು ಸೂಚಿಸಿದ್ದಾನೆ :—

"The natives of India have always shown a great liking for grammatical studies, but they confined themselves to the study of the grammars of their own languages without any attempt at comparing their languages with others, and consequently, their philology not being comparative, has remained unscientific and unprogressive......"

Dr. R. Caldwell ಇವನು "A Comparative Grammar of the Dravidian or South Indian Family of Languages" ಎಂಬೀ ಭಾಷಾಶಾಸ್ತ್ರ ಗ್ರಂಥದಿಂದ ತನ್ನ ಹೆಸರನ್ನು ಈ ದೇಶದಲ್ಲಿ ಚಿರಸ್ಥಾಯಿಗೊಳಿಸಿದ್ದಾನೆ. ಅದರಲ್ಲಿ ಬರೀ ದ್ರಾವಿಡ ಭಾಷಾ ಶಬ್ದಗಳು ಮಾತ್ರವಲ್ಲ, ಅವುಗಳೊಡನೆ ಹಿಂದೂಸ್ಥಾನೀ. ಪರ್ಷಿಯನ್, ಸಿಥಿಯನ್, ಚೀನಾ, ಜಪಾನ್, ಟರ್ಕಿ, ಮಂಗೋಲಿಯನ್, ಲ್ಯಾಟಿನ್ ಇತ್ಯಾದಿ ಶಬ್ದಗಳನ್ನೂ ಸಮನ್ವಯಗೊಳಿಸಿ ಬಹು ದೊಡ್ಡ ಸಂಶೋಧನಾ ಕಾರ್ಯವನ್ನು ಸಾಧಿಸಿದ್ದಾನೆ. ಈ ಹಲವು ಭಾಷಾಪದ ಪ್ರಯೋಗದಲ್ಲಿ ಅವುಗಳಿಗಿರುವ ಬಾಂಧವ್ಯವೆಷ್ಟೆಂಬುದನ್ನು ಆಧಾರ ಪೂರ್ವಕವಾಗಿ ನಿರೂಪಿಸಿದ್ದಾನೆ.

ಭಾರತೀಯರು ಪಾಣಿನಿಯ ಕಾಲದಿಂದಲೇ ಭಾಷೆ, ಅಕ್ಷರ, ಪದಪ್ರಯೋಗ ಇತ್ಯಾದಿಗಳಿಗೆ ಎಷ್ಟು ಬೆಲೆ ಕಟ್ಟಿದ್ದರೆಂಬುದನ್ನು Dr. R. Caldwell ಇವನು ಅರಿತಿದ್ದನು. ಅದಕ್ಕನುಸಾರವಾಗಿ ದ್ರಾವಿಡ ಭಾಷಾಶಬ್ದಗಳ ಮೂಲವನ್ನು ಭಾಷೆಯಿಂದ ಭಾಷೆಗೆ ಹೋಲಿಸಿ ಉತ್ತಮವಾದ ಮತ್ತು ಸ್ವಾರಸ್ಯವಾದ ನಿರೂಪಣೆಯನ್ನು ಉದ್ದಕ್ಕೂ ಕೊಟ್ಟಿದ್ದಾನೆ, ಅವನ ಈ ಬರೆವಣಿಗೆಗೆ ಸಹಾಯಕವಾಗಿ 1830 ಕ್ಕೂ ಹಿಂದೆ ಪ್ರಕಟವಾದ Prof. H. H. Wilson ಇವನ ಸಂಸ್ಕೃತ ಅರ್ಥಕೋಶ, Rev. A. D. Campbell ಇವನ ತೆಲುಗು ನಿಘಂಟು, William Reeve ಇವನ ಕನ್ನಡ ನಿಘಂಟು, J. M. Mckerrel ಇವನ ಕನ್ನಡ ವ್ಯಾಕರಣ, Dr. Gilchrist ಇವನ ಹಿಂದೂಸ್ಥಾನೀ ನಿಘಂಟು ಮತ್ತು Prof. Benfey ಇವನ

ಸಂಸ್ಕೃತ ಅರ್ಥಕೋಶ ಇವುಗಳಿಂದ ಹಲವು ಶಬ್ದಗಳನ್ನು ಹೆಕ್ಕಿ ವ್ಯಾಖ್ಯೆಯನ್ನು ನಡೆಸಿದ್ದಾನೆ.

**೧೯. ಡಾ. ರಾಬರ್ಟ್ ಕಾಲ್ಡ್ವೆಲ್—ಇವನ ಜೀವನ ಪರಿಚಯ :—**

Rev. Robert Caldwell ಇವನು ಐರ್ಲೆಂಡಿನ ಬೆಲ್‌ಫಾಸ್ಟ್‌ನಲ್ಲಿ ಕ್ರಿ.ಶ. 1814ರಲ್ಲಿ ಜನಿಸಿದನು. ಸ್ಕಾಟ್ಲೆಂಡಿನ ಗ್ಲಾಸ್ಗೋ ನಗರದಲ್ಲಿ ವಿದ್ಯಾಭ್ಯಾಸವನ್ನು ಮಾಡುತಿದ್ದಾಗಲೇ ಅವನು ಭಾಷಾಶಾಸ್ತ್ರದಲ್ಲಿ ವಿಶೇಷ ಅಭಿರುಚಿಯನ್ನು ತೋರಿಸಿದ್ದನು. ಅನಂತರ ಇವನು London Mission Society ಇದಕ್ಕೆ ಸೇರಿ ಕ್ರೈಸ್ತಮತ ಪ್ರಚಾರ ಕಾರ್ಯವನ್ನೆಸಗಲು ನಿರ್ಧರಿಸಿದನು. ಅದರಂತೆ ಆ ಕ್ರೈಸ್ತಮತ ಪ್ರಚಾರ ಸಂಸ್ಥೆಯು ಅವನನ್ನು ಮದ್ರಾಸಿಗೆ ಕಳುಹಿಸಲು ನಿರ್ಧರಿಸಿದರು. ಕ್ರಿ.ಶ. 1837 ರಲ್ಲಿ Robert Caldwell ಇವನು ತನ್ನ ಮನೆಯಿಂದ ಹೊರಡುವ ವೇಳೆಗೆ ಅವನ ತಾಯಿಯು ಅಸ್ವಸ್ಥಳಾಗಿದ್ದಳು. ಹೇಗೂ ಮಗನು ತನ್ನ ತಾಯಿಯನ್ನು ಕಡೇ ಬಾರಿಗೆ ಕಾಣುವಾಗ ಅವಳ ಮಂಚದ ಬಳಿಯಲ್ಲಿ ಮೊಣಕಾಲೂರಿದನು. ಆಗ ತಾಯಿಯು ನಿಟ್ಟುಸಿರನ್ನು ಬಿಡುತ್ತಾ: "I freely give you up to God without one murmuring of thought--without one murmuring of thought", ಎಂದು ಮಗನನ್ನು ಆಶೀರ್ವದಿಸಿದಳು.

Robert Caldwell ಇವನು ಇಂಗ್ಲೆಂಡಿನಿಂದ ಭಾರತಕ್ಕೆ ಬರುತ್ತಿದ್ದ ಹಡಗಿನಲ್ಲಿ ಅಂದು ಮದ್ರಾಸು ಸರಕಾರದ ನ್ಯಾಯಾಧೀಶ ಮತ್ತು ಜಿಲ್ಲಾಧಿಕಾರಿಯಾಗಿದ್ದ ಮತ್ತು ತೆಲುಗು, ಸಂಸ್ಕೃತ, ತಮಿಳು. ಒರಿಯಾ, ಮರಾಠಿ. ಕನ್ನಡ ಇತ್ಯಾದಿ ಭಾಷೆಗಳಲ್ಲಿ ಪಂಡಿತನೂ ಆಗಿದ್ದ Charles Philip Brown ಇವನೂ ತನ್ನ ತವರೂರಿನಿಂದ ಹಿಂಪಕ್ಕೆ ತನ್ನ ರಜೆಯನ್ನು ಮುಗಿಸಿ ಬರುತಿದ್ದನು. R. Caldwell ಇವನಿಗೆ ಇಂಥಾ ಒರ್ವ ವಿದ್ವಾಂಸನ ಪರಿಚಯವಾದದ್ದು ಅವನ ಮುಂದಿನ ಪಾಂಡಿತ್ಯಕ್ಕೆ ದ್ಯೋತಕವಾದಂತಾಯಿತು. ಅನರಿರ್ವರೂ 1838ರಲ್ಲಿ ಮದ್ರಾಸಿನಲ್ಲಿ ಬಂದಿಳಿದರು. ಕೂಡಲೇ Caldwell ಇವನು ತಮಿಳು, ಸಂಸ್ಕೃತ ಇತ್ಯಾದಿ ಭಾಷೆಗಳನ್ನು ಶಾಸ್ತ್ರೀಯವಾಗಿ ಕಲಿಯಲು ತೊಡಗಿದನು.

Robert Caldwell ಇವನನ್ನು ಮದ್ರಾಸು ಕ್ರೈಸ್ತಮತ ಪ್ರಚಾರ ಸಂಸ್ಥೆಯು ತಿನ್ನವೆಲ್ಲಿ ಜಿಲ್ಲೆಗೆ ಮತಪ್ರಚಾರ ಕಾರ್ಯಕ್ಕೆಂದು ಕಳುಹಿಸಿದರು. ಅಲ್ಲಿ ಅವನು ಆ ಕ್ಷೇತ್ರದಲ್ಲಿ ಅಮೋಘವಾಗಿ ದುಡಿದನು. 1844 ರಲ್ಲಿ ಅವನು ನಾಗರ್ ಕೊಯಲ್‌ನಲ್ಲಿ ಮತಪ್ರಚಾರಿಕೆಯಾಗಿದ್ದ ಒರ್ವ ಆಂಗ್ಲ ತರುಣಿಯನ್ನು ವಿವಾಹವಾದನು. ಕಲವೇ ವರ್ಷಗಳಲ್ಲಿ ಅವನು ಸ್ಥಳೀಯ ಕ್ರೈಸ್ತಗುರು ಆಗಿ Bishop ಪದವಿಗೆ ಏರಿಸಲ್ಪಟ್ಟನು.

Caldwell ಇವನು ಎಷ್ಟು ಪ್ರಬಲ ಭಾಷಾಶಾಸ್ತ್ರಜ್ಞನೋ ಅಷ್ಟೇ ಪ್ರಮಾಣದಲ್ಲಿ ವೇದ, ಪುರಾಣ ಮತ್ತು ಹಿಂದೂ ಶಾಸ್ತ್ರ ಗ್ರಂಥಗಳೆಲ್ಲವನ್ನೂ ಪಠಿಸಿದ್ದ ಪ್ರಚಂಡ ವಿದ್ವಾಂಸನೂ ಆದನು. ಗೀತೆಯ ಮೇಲೆ ಅವನ ಅಭಿಪ್ರಾಯವೆಂತೆಂದು ಹಿಂದೆಯೇ

ಹೇಳಲಾಗಿದೆ. 1874 ರಲ್ಲಿ ಇಂಗ್ಲೆಂಡಿಗೆ ಹೋಗಿದ್ದ ಇವನು ಬ್ರೈಟನ್‌ನಲ್ಲಿ ನಡೆದ ಕ್ರೈಸ್ತಮತ ಸಮ್ಮೇಳದಲ್ಲಿ "ಕ್ರೈಸ್ತಮತ ಮತ್ತು ಹಿಂದೂಮತ" ಎಂಬುದರ ಮೇಲೆ ವಿಚಾರಗರ್ಭಿತವಾದ ಭಾಷಣವನ್ನು ಮಾಡಿದನು. ಅಲ್ಲೂ ಅವನು ಕ್ರೈಸ್ತಮತ ಪಕ್ಷಪಾತಿಯೆಂಬುದನ್ನು ತೋರಿಸಿಕೊಂಡನು. ನಿಷ್ಠಾವಂತ ಕ್ರೈಸ್ತಮತ ಪ್ರತಿಪಾದಕನಾದ ಅವನು ಆ ಸಭೆಯಲ್ಲಿ ತನ್ನ ಮತದ ಮೇಲ್ಮೆಯನ್ನು ಕುರಿತು ಈ ರೀತಿ ಹೇಳಿದ್ದನ್ನು ಗಮನಿಸಬೇಕಿದೆ :—

"Christian teaching is the only moral and religious teaching in the world which rises above the level of ordinary human nature ... It is the only religion which is suited to every country, race and class ; that it aims at the peaceful conquest of the whole earth ; that now nineteen centuries after its first appearance in the world, it is as full of missionary zeal as it was during any previous period of its history......."

ಪಾಶ್ಚಾತ್ಯ ವಿದ್ವಾಂಸರಲ್ಲಿ ಇಷ್ಟು ದಿಟ್ಟತನದಿಂದ ತನ್ನ ಮತವನ್ನು ಕುರಿತು ಹೇಳಿದವರಲ್ಲಿ Bishop Caldwell ಇವನೇ ಅಗ್ರಗಣ್ಯನೆಂದು ಹೇಳಬಹುದು. ಅವನು ತನ್ನ ವೃತ್ತಿಯಿಂದ ಜನವರಿ 1891ರಲ್ಲಿ ನಿವೃತ್ತನಾಗಿ ಕೊಡಿಯಕ್ಕಾನಲ್‌ನಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದನು. ಆದರೆ ಅದೇ ವರ್ಷ ಆಗಷ್ಟ್ ತಿಂಗಳಲ್ಲಿ ತನ್ನ 78ನೇ ವರ್ಷ ಪ್ರಾಯದಲ್ಲಿ ಅವನು ಕ್ರೈಸ್ತವಶನಾದನು. ಆ ಸಂದರ್ಭದಲ್ಲಿ ಈ ದೇಶದ ಮತ್ತು ಯೂರೋಪು ಖಂಡದ ಹಲವು ವಿದ್ವಾಂಸರು ತುಂಬಾ ಮರುಗಿದರು. ಭಾರತದ Imperial Gazetteers ಇವನ್ನು ಬರೆದು ಪ್ರಖ್ಯಾತನಾದ Sir W. W. Hunter ಇವನು 1891ರ ಅಕ್ಟೋಬರ್ 19ರ London Times ಪತ್ರಿಕೆಯಲ್ಲಿ ಅವನ ವಿಷಯವಾಗಿ ಹೀಗೆ ಬರೆದನು :—

"By the death of the Rt. Rev. Dr. Caldwell, Bishop of Tinnevelly, Christian community in India loses one of its most venerated fathers and Indian scholarship one of its great original workers.......It is, however, as the investigator of the South Indian family of languages that Bishop Caldwell was most widely known. His 'Comparative Grammar of Dravidian or South Indian Family of Languages', was a revelation to Western philologers."

ಈ ಮಹಾ ವಿದ್ವಾಂಸನು ಭಾರತೀಯ ಭಾಷಾ ಶಾಸ್ತ್ರಕ್ಕೂ ಕನ್ನಡ ಭಾಷೆಗೂ ಸಲ್ಲಿಸಿದ ಸೇವೆಯನ್ನು ಕುರಿತು ಮುಂದೆ ಕ್ರಮಶಃ ಹೇಳಲಾಗುವುದು.

---

" ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯ
ಸಮುದ್ರದ ತಡಿಯಲ್ಲಿ ಮನೆಯ ಮಾಡಿ
ನೊರೆ ತೆರೆಗಳಿಗಂಜಿದಡೆಂತಯ್ಯ
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯ
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದೊಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು !

[ಮಹದೇವಿ ಅಕ್ಕ]

ಕ್ರಿ. ಶ. ೧೯ನೇ ಶತಮಾನಕ್ಕೂ ಹಿಂದೆ ಬ್ರಿಟಿಷ್ ಸರಕಾರವು ಈ ದೇಶದ ಸಾಹಿತ್ಯ ಮತ್ತು ಐತಿಹಾಸಿಕ ಸಂಶೋಧನೆಗಾಗಿ ಶ್ರಮಿಸುವುದಕ್ಕೆ ಎಷ್ಟೋ ಮೊದಲಾಗಿ ಈ ದೇಶದ ರಾಜ್ಯಭಾರವನ್ನು ವ್ಯವಸ್ಥಿತ ಪರಿಸ್ಥಿತಿಯಲ್ಲಿ ಸಾಗಿಸಲು ಹಲವು ಕ್ರಮಗಳನ್ನು ಕೈಗೊಂಡಿತು. Lord Cornwallis ಇವನು ಪಾಶ್ಚಾತ್ಯ ನೌಕರರೆಲ್ಲರೂ ಈ ದೇಶಕ್ಕೆ ಬಂದು ಅಧಿಕಾರ ಸ್ಥಾನವನ್ನು ಹೊತ್ತಾಗ ನಿಸ್ವಾರ್ಥದೃಷ್ಟಿಯಿಂದ ಮತ್ತು ಬಹು ದಕ್ಷತೆಯಿಂದ ತಾವು ಆಡಳಿತ ವ್ಯವಹಾರಗಳನ್ನು ನಡೆಸಬೇಕೆಂದು ವಿಧಿಸಿದ್ದನು. Indian Civil Service ಎಂಬ ಒಂದು ವ್ಯಾವಹಾರಿಕ ಪೀಳಿಗೆಯನ್ನೇ ಬಹು ಶಿಸ್ತಿನಿಂದ ಸ್ಥಾಪಿಸಲು ಉದ್ಯುಕ್ತನಾದನು. ಹೀಗೆ ಸ್ಥಾಪಿಸಲ್ಪಟ್ಟ ಐರೋಪ್ಯ ಆಡಳಿತಗಾರರ 'Corps d elite' ಇದರಲ್ಲಿ, "Every civilian entered into a solemn engagement with his employers, had to perform his duties faithfully and to eschew private trade and presents from natives," ಎಂಬುದಾಗಿ ವಿಧಿಸಲ್ಪಟ್ಟಿತ್ತು.

ಇಂಥಾ ಶಿಸ್ತು, ನಿಯಮ, ನಿಷ್ಠೆಗಳಿಂದ ಆರಂಭಗೊಂಡ ಅಂದಿನ ನೌಕರಶಾಹಿಯು ದೇಶದ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ಜಾರಿಗೆ ತಂದಿತು. ಅದಕ್ಕಾಗಿ ಕುಂಪೆನೀ ಸರಕಾರವು ಎಳೆ ಪ್ರಾಯದ ಜನವನ್ನೇ ತಮ್ಮ ದೇಶದಿಂದ ಕರೆಯಿಸಿ ಅವರಿಗೆ ಈ ದೇಶದ ವಿವಿಧ ಜನಾಂಗ, ಜನಜೀವನ, ಭಾಷೆ, ಇತ್ಯಾದಿಗಳ ಪರಿಚಯವನ್ನು ಕೊಟ್ಟು ಉತ್ತಮ ಅಧಿಕಾರೀ ವರ್ಗವನ್ನು ನಿರ್ಮಿಸುವುದರಲ್ಲಿ ಶ್ರಮವಹಿಸಿದರು. ಆ ಪರಿಣಾಮವಾಗಿ ಯಾವುದೇ ಇಲಾಖೆಯಲ್ಲಿ ದುಡಿಯುತಿದ್ದ ಪಾಶ್ಚಾತ್ಯನೂ ತನ್ನ ಪಾಲಿನ ಕರ್ತವ್ಯವನ್ನು ಬಹು ದಕ್ಷತೆಯಿಂದ ಮಾಡಿದ್ದಾನೆಂಬುದು ಅವರೂ ಬಿಟ್ಟುಹೋದ ಅಪಾರ ಸಾಹಿತ್ಯ ಸಂಪತ್ತಿನ ಮೂಲಕ ತಿಳಿಯಬಹುದಾಗಿದೆ. ತಮ್ಮ ಜವಾಬ್ದಾರಿಕೆಯು ಅದೆಷ್ಟು ಮಹತ್ವವಾದುದೆಂಬುದಾಗಿ ಕ್ರಿ. ಶ. 1800 ರಲ್ಲಿ Marquess of Wellesley ಇವನು ಬ್ರಿಟಿಷ್ ಸರಕಾರದ ಅಧಿಕಾರಿಗಳಿಗೆ ಬರೆದ ಪತ್ರವೊಂದರಲ್ಲಿ ಹೀಗೆ ಹೇಳಿದ್ದನು :—

"The British possessions in India now constitute one of the most extensive and populous empires in the world......To dispense justice to millions of people of various languages, manners, usages and religions, to administer a vast and complicated system of revenue throughout districts equal in extent to some of the most considerable kingdoms in Europe, to maintain civil order in one of the most populous and litiguous regions of the world ......The civil servants of the East India Company can no longer be considered as the agents of the commercial concern, they are in fact the ministers and officers of a powerful sovereign......they are required to discharge their functions of magistrates and judges, ambassadors and governors of provinces............".

ಈ ರೀತಿಯಾಗಿ ವಿವಿಧ ಹೊಣೆಗಾರಿಕೆಯನ್ನು ಹೊತ್ತು ದುಡಿಯುತ್ತಿದ್ದ ಹಲವರೇ ಈ ದೇಶದ ಪ್ರಾಕ್ತನ ವಿಚಾರ ಪರಿಶೋಧನೆ, ಸಾಹಿತ್ಯ ಸಂಶೋಧನೆ ಇತ್ಯಾದಿಗಳನ್ನೂ ನಡೆಸಿದರೆಂದು ತಿಳಿದುಬರುತ್ತದೆ. ಈ ಭಾಗದಲ್ಲಿ ಕಳೆದ ಶತಮಾನದಲ್ಲಿದ್ದ ಕೆಲವು ಪ್ರಸಿದ್ಧ ಅನ್ವೇಷಕರ, ಶಿಲಾಶಾಸನ ಸಂಶೋಧಕರ ಮತ್ತು ಪ್ರಾಕ್ತನ ವಿಚಾರ ಪರಿಶೋಧಕರನ್ನು ಕುರಿತು ಪ್ರಸ್ತಾಪಿಸಲಾಗಿದೆ. ಇದೀಗ ವಾಸ್ತು ಶಿಲ್ಪಕಲಾ ತಜ್ಞರ ಸಾಹಸಪೂರ್ಣವಾದ ಸಂಶೋಧನೆಯನ್ನೂ ಈ ಭಾಗದಲ್ಲಿ ಪ್ರಸ್ತಾಪಿಸಲಾಗಿದೆ. ಇವರೆಲ್ಲರ ಸೇವೆಯು ಕನ್ನಡ ನಾಡಿಗೆ ಅನ್ವಯವಾಗುವ ಸಂದರ್ಭದಲ್ಲಿ ಆ ವಿಚಾರವನ್ನು ವಿಶದವಾಗಿ ಪ್ರಸ್ತಾಪಿಸಲೂ ಪ್ರಯತ್ನಿಸಲಾಗಿದೆ.

### ೨. ಧೀಮಂತ ಸಂಶೋಧಕ ಕರ್ನಲ್ ಕಾಲಿನ್ ಮೆಕೆನ್ಸೀ :—

ಕಳೆದ ಶತಮಾನದಲ್ಲಿ ಮತ್ತು ಅದಕ್ಕೂ ಹಿಂದೆ ಭಾರತದ ಉದ್ದಗಲಕ್ಕೂ ಓಡಾಡಿ ಎಲ್ಲಾ ಭಾಗದ ಪ್ರಾಚೀನ ಶಾಸನಗಳು, ತಾಳೆವೋಲೆಗಳು, ಕಾವ್ಯಗ್ರಂಥಗಳು ಮತ್ತು ವಾಸ್ತು ಶಿಲ್ಪ ವಿಶೇಷಗಳನ್ನೆಲ್ಲಾ ಅನ್ವೇಷಿಸಿದ ಪಾಶ್ಚಾತ್ಯರು ಹಲವರು ಇದ್ದಾರೆ. ಅವರ ಪೈಕಿ ದಕ್ಷಿಣ ಹಿಂದೂಸ್ತಾನದ ಯಾವುದೇ ಭಾಗದಲ್ಲಿ ಅನ್ವೇಷಣೆಯನ್ನು ನಡೆಸಿದ ಸಾಹಸಿಗರು ಕರ್ಣಾಟಕಕ್ಕೆ ಸಂಬಂಧಿಸಿದ ನೂರಾರು ಐತಿಹಾಸಿಕ ಕುರುಹುಗಳನ್ನು ಪರಿಶೋಧಿಸಿ ಕನ್ನಡ ನಾಡಿನ ಗತಕಾಲದ ಚರಿತ್ರೆಯು ವೈಭವಪ್ರದವಾಗಿತ್ತೆಂಬುದನ್ನು ಸಾದಾರಪೂರ್ವಕವಾಗಿ ಉಲ್ಲೇಖಿಸಿದ್ದಾರೆ.

Col. Colin Maekenzie ಇವನು ಕುಂಪೆನೀ ಸರಕಾರದ ಒರ್ವ ಸೈನ್ಯಾಧಿಕಾರಿ ಮತ್ತು ಇಂಜನಿಯರ್‌ಆಗಿ ಇದ್ದನು. ಕ್ರಿ. ಶ 1782 ರಿಂದ ಬ್ರಿಟಿಶರು ದೇಶೀಯ ಪ್ರಮುಖರೊಡನೆ ನಡೆಸಿದ ಹಲವು ಯುದ್ಧಗಳಲ್ಲಿ ಭಾಗವಹಿಸಿದನು. ಹೈದರಾಬಾದಿನ ನೈಜಾಮನ ರಾಜ್ಯ, ಹೈದರಾಲಿಗೆ ಸೇರಿದ್ದ ವಿಶಾಲ ರಾಜ್ಯ ಮತ್ತು ಆರ್ಕಾಟು ನವಾಬನ ಸೀಮೆಗಳಲ್ಲೆಲ್ಲಾ ಇವನು ತನ್ನ ಕಾರ್ಯಾರ್ಥವಾಗಿ ಸಂಚರಿಸಿದಾಗ ದಕ್ಷಿಣದ ಭೂಗೋಲಿಕ ಪರಿಚಯವನ್ನು ಕೊಡುವ ವಿಷಯಗಳನ್ನು ಉಲ್ಲೇಖಿ

ಸಿದನು. ಆಂಧ್ರ, ತಮಿಳು ಮತ್ತು ಕನ್ನಡ ನಾಡುಗಳಿಗೆ ಸೇರಿದ್ದ ಜಿಲ್ಲೆಗಳಲ್ಲೆಲ್ಲಾ ಸಂಚರಿಸಿ ಅವನು ನೂರಾರು ಶಿಲಾಶಾಸನಗಳನ್ನೂ ತಾಳೆಯೋಲೆಗಳನ್ನೂ ಪ್ರಾಚೀನ ನಾಣ್ಯಗಳನ್ನೂ ಸಂಗ್ರಹಿಸಿದನು.

ಕ್ರಿ. ಶ. 1796 ರಲ್ಲಿ Col. Mackenzie ಇವನು ನೈಜಾಮನ ರಾಜ್ಯದ ಭೂಪಟವನ್ನು ಬಿಡಿಸಿ ಸರಕಾರಕ್ಕೆ ಕಳುಹಿಸಿಕೊಟ್ಟನು. 1795 ರಲ್ಲಿ ದಕ್ಷಿಣ ಹಿಂದೂಸ್ಥಾನದ ಪಟವನ್ನು ಆಗ ಇದ್ದ ವಿವಿಧ ಪ್ರಾಂತಗಳನ್ನು ಅಳೆದು ಸೂಚಿಸಿ ಬಿಡಿಸಿದನು. Lord Cornwallis ಇವನ ಆಜ್ಞಾನುಸಾರವಾಗಿ ಮೂರನೇ ಮೈಸೂರು ಯುದ್ಧದಲ್ಲಿ ಭಾಗವಹಿಸಿದಾಗ ಮೈಸೂರಿನಿಂದಲೂ ಹಲವು ಸ್ಮಾರಕಾವಶೇಷಗಳನ್ನು ಸಂಗ್ರಹಿಸಿದನು. 1797 ರ ಒಳಗಾಗಿ ನೈಜಾಮನ ರಾಜ್ಯದ ಅವಶೇಷಗಳನ್ನೂ ಸಂಶೋಧಿಸಿ ಸಂಗ್ರಹಿಸಿದನಲ್ಲದೆ ಅಮರಾವತಿಯ ಸ್ತೂಪವನ್ನೂ ಭೂಮಿಯಿಂದ ಅಗೆದು ತೆಗೆಯಿಸಿದನು.

ಕಿ. ಶ. 1799 ರಲ್ಲಿ ಕಡೇ ಮೈಸೂರು ಯುದ್ಧದನಂತರ ಟಿಪ್ಪುವಿಗೆ ಸೇರಿದ್ದ ರಾಜ್ಯದ ವಿಸ್ತೀರ್ಣವನ್ನು ಕಂಡುಹಿಡಿಯಲು Col. Wellesley ಇವನು Colin Mackenzie ಇವನಿಗೆ ಹೇಳಿದನು. ಅದರಂತೆ ಸುಮಾರು 40,000 ಚದರ ಮೈಲು ವಿಸ್ತಾರದ ಭೂಭಾಗವನ್ನು ಅಳೆನು ಅದರ ಪಟವನ್ನು ಬಿಡಿಸಿದ್ದಲ್ಲದೆ ಪ್ರತಿ ಜಿಲ್ಲೆ, ತಾಲ್ಲೋಕು ಮತ್ತು ಗ್ರಾಮಗಳನ್ನೂ ಅಳೆದು ಭೂಪಟದಲ್ಲಿ ತೋರಿಸಿದನು. ಹೀಗೆ ಅಳೆಯುವಾಗ ಆಯಾ ಸ್ಥಳಗಳಲ್ಲಿ ಕಂಡುಬಂದ ಸಹಸ್ರಾರು ಶಾಸನಗಳು, ಓಲೆಗಳು, ವಿಗ್ರಹಗಳು ಇತ್ಯಾದಿಯಾಗಿ ಸಂಗ್ರಹಿಸಿದನು. ನೂರಾರು ದೇವಾಲಯಗಳನ್ನೂ ಬ್ರಾಹ್ಮಣ, ಜೈನ ಮತ್ತು ವೀರಶೈವ ಮಠಗಳನ್ನೂ ಪ್ರಾಚೀನ ಗ್ರಂಥಗಳಿಗಾಗಿ ಕೊಳ್ಳೆ ಹೊಡೆದನು. ಹೀಗೆ ಅವನು ದಖ್ಖಣದಲ್ಲಿ ತನ್ನ ೨೦ ವರ್ಷದ ಅವಧಿಯಲ್ಲಿ ಸಂಗ್ರಹಿಸಿದ ಪ್ರಾಚೀನ ಐತಿಹಾಸಿಕ ಕುರುಹುಗಳನ್ನು ಕುರಿತು ಬರೆದ ವಿವರಗಳು ಮತ್ತು ಭೂಪಟಗಳು folio ಪುಟಗಳ ಏಳುಕಾಂಡಗಳ ಉದ್ಗ್ರಂಥಗಳಾಗಿ ಅನಂತರ ಪ್ರಕಟವಾದುವು.

**೩. ಕ|| ಮೆಕೆನ್ಸಿಯು ದಕ್ಷಿಣ ಭಾರತವನ್ನೆಲ್ಲಾ ಸಂಶೋಧಿಸಿದನು :—**

Colin Mackenzie ಇವನು ಮಧ್ಯ ಹಿಂದೂಸ್ತಾನದಿಂದ ಹಿಡಿದು ದಖ್ಖಣದ ಎಲ್ಲಾ ಸೀಮೆಗಳಲ್ಲೂ 1811 ರ ವರೆಗೆ ತನ್ನ ಚಾರಿತ್ರಿಕ ಸಂಶೋಧನೆಯ ನಿಮಿತ್ತವಾಗಿ ಸಂಚರಿಸಿದನು. ಹಿಂದೂಸ್ಥಾನದಲ್ಲಿ ಜೈನಮತವೂ ಪ್ರಧಾನವಾದುದೆಂದು ಇವನು ಮೊದಲನೇ ಬಾರಿಗೆ ಪಾಶ್ಚಾತ್ಯರಿಗೆ ತಿಳಿಯಪಡಿಸಿದ್ದು ಅವನ ಪರಿಶೋಧನೆಯ ಒಂದು ಮುಖ್ಯಾಂಶವಾಗಿದೆ. ಪಶ್ಚಿಮ ಹಿಂದೂಸ್ಥಾನದ ನೂರಾರು ಜೈನ ಬಸದಿಗಳಿಂದ ಅಸಂಖ್ಯ ಗ್ರಂಥಗಳನ್ನೂ ಶಾಸನಗಳನ್ನೂ ಸಂಗ್ರಹಿಸಿದನು.

Colin Mackenzie ಇವನಷ್ಟು ಉತ್ಸಾಹದಿಂದ ದುಡಿದ ಸಂಶೋಧಕನು ಇನ್ನೊಬ್ಬನಿದ್ದಿಲ್ಲ. ಕಳೆದ ಶತಮಾನದಲ್ಲಿದ್ದ ಎಲ್ಲಾ ಪಾಶ್ಚಾತ್ಯ ವಿದ್ವಾಂಸರು ಇವನನ್ನು "an ardent and successful collector of antiqui-

ties" ಎಂಬುದಾಗಿ ಪ್ರಶಂಸಿಸಿದರು. ಈ ದೇಶದ ನೂರಾರು ದೇವಾಲಯಗಳನ್ನು ಪರಿಶೋಧನಾ ದೃಷ್ಟಿಯಿಂದ ನೋಡಿದನು. ಹಾಗೆ ನೋಡಿದ ಎಲ್ಲಾ ಚಾರಿತ್ರಿಕ ವಸ್ತುಗಳ ಮತ್ತು ವಾಸ್ತುಶಿಲ್ಪ ಕಟ್ಟೋಣಗಳ ಮೇಲೆ ನೂರಾರು ವಿವರಣಾತ್ಮಕವಾದ ಲೇಖನಗಳನ್ನು ಬರೆದನು ಹಳೇಬೀಡು ದೇವಾಲಯವೊಂದರ ಮೇಲೆಯೇ ಹದಿನೈದು ಲೇಖನಗಳನ್ನು ಬರೆದಿದ್ದಾನೆ. ಹಾಗೆ ಬರೆದ ಒಂದು ಲೇಖನದಲ್ಲಿ ಹೀಗೊಂದು ವಿಷಯವನ್ನೂ ಹೇಳಿದ್ದು ಸ್ವಾರಸ್ಯವಿದೆ :—

"It is difficult to believe that the builders of the neighbouring mud-huts are descendants of the great masons whose brains planned, and whose hands fashioned, this monument of their skill and taste. What has become of them and where have they gone, are questions which, though hard to answer, are none the less interesting, and may well form the subject of antiquarian research."

ಕ್ರಿ. ಶ. 1811 ರಲ್ಲಿ ಬ್ರಿಟಿಷರಿಗೂ ಡಚ್ಚರಿಗೂ ಜಾವಾದಲ್ಲಿ ಕಾದಾಟವಾದಾಗ ಇಂಡೋನೇಷ್ಯಕ್ಕೆ ಕಳುಹಿಸಲ್ಪಟ್ಟ ಸೈನ್ಯದೊಡನೆ Chief Engineer ಆಗಿ, Col. Mackenzie ಇವನೂ ಹೋದನು. 1813 ರಲ್ಲಿ ಅವನು ಜಾವಾದಿಂದ ಹಿಂದಿರುಗಿದನು. ಕೂಡಲೇ ಮದ್ರಾಸು ಸರಕಾರವು ಅವನನ್ನು ದಕ್ಷಿಣ ಹಿಂದೂಸ್ಥಾನದ Surveyor-General ಆಗಿ ನೇಮಿಸಿತು. ಅಲ್ಲಿಂದನಂತರ Col. Mackenzie ಇವನು ಇಡೀ ದಕ್ಷಿಣ ಹಿಂದೂಸ್ಥಾನವನ್ನು ಇನ್ನಷ್ಟು ಕೂಲಂಕುಶವಾಗಿ ಸಂಶೋಧಿಸಿದನಲ್ಲದೆ ಈ ಎಲ್ಲಾ ಭೂಭಾಗಗಳನ್ನು ಶಾಸ್ತ್ರೀಯವಾಗಿ ಅಳೆದು ಭೂಪಟಗಳನ್ನು ತಯಾರಿಸಿದನು. 1815 ರಲ್ಲಿ ಅವನು ಭಾರತ ಸರಕಾರದ Surveyor General ಆಗಿ ನೇಮಿಸಲ್ಪಟ್ಟಾಗ ಉತ್ತರ ಹಿಂದೂಸ್ಥಾನದಲ್ಲೂ ಇವೇ ರೀತಿಯಲ್ಲಿ ತನ್ನ ಪರಿಶೋಧನಾ ಕಾರ್ಯವನ್ನು ಮುಂದುವರಿಸಿದನು. ಸಹಸ್ರಾರು ಪ್ರಾಕ್ತನ ಅವಶೇಷಗಳನ್ನು ಸಂಪಾದಿಸಿದನು. ಅವೆಲ್ಲಾ "Mackenzie Collections" ಎಂಬುದಾಗಿ ಅಂತೆಯೇ ಸಂಗ್ರಹಿಸಲ್ಪಟ್ಟುವು. ಅವನು ಸಂಪಾದಿಸಿದ ಅದೆಷ್ಟೋ ಪ್ರಾಕ್ತನ ವಸ್ತುಗಳು ತಕ್ಕರೀತಿಯಲ್ಲಿ ಪರಿಶೀಲಿಸಲ್ಪಡದೆ ಬಿಟ್ಟು ಹೋದುವೆಂಬುದಾಗಿ ಅವನೇ ಅನಂತರ ಹೇಳಿದನು :—

"...... In the whole of this period in which I have wandered over most of the areas, I look back with regrets to objects now known to exist that could have been examined ......"

### ೪. ಮೆಕೆನ್ಸೀ ಸಂಶೋಧನಾ ವರದಿಯೇ ಒಂದು ಗ್ರಂಥ ಭಂಡಾರವಾಯಿತು :—

Col. Mackenzie ಇವನು ಒರ್ವ ಧೀರ ಸಂಶೋಧಕನು. ನೂರಾರು ಜನರು ಬಹುಕಾಲ ಮಾಡುವಂಥಾ ಕೆಲಸವನ್ನು ಇವನೋರ್ವನೇ ಆ ಕಾಲದಲ್ಲಿ ತನ್ನ

ನೂರು ಜನ ಸಹೋದ್ಯೋಗಿಗಳೂ ಮತ್ತೋರ್ವ ವೈದ್ಯಕೀಯ ತಜ್ಞನ ಒಡಗೂಡಿ ದೇಶವೆಲ್ಲಾ ಸಂಚರಿಸಿ ಕೈಗೊಂಡು ಈ ದೇಶದ ಪ್ರಾಕ್ತನ ಪರಿಶೋಧನಾ ಕ್ಷೇತ್ರದಲ್ಲಿ ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದನು. Col. Mackenzie ಇವನ ಪರಿಶೋಧನಾ ವರದಿಗಳು ನೂರಾರು ಗ್ರಂಥಕಾಂಡಗಳಾಗಿವೆ. ಕರ್ನಾಟಕವನ್ನು ಕುರಿತಾಗಿ ಬರೆದ ಐತಿಹಾಸಿಕ ವಿವರಗಳು ಐವತ್ತಕ್ಕೂ ಮಿಕ್ಕಿ folio ಪುಟಗಳ ಗ್ರಂಥ ಕಾಂಡಗಳಾಗಿವೆ. ಆಂಧ್ರಪ್ರದೇಶದ ಚಾರಿತ್ರಿಕ ವಿವರಗಳನ್ನು ಕೊಡುವ foolscap ಪುಟಗಳ ಗ್ರಂಥಕಾಂಡಗಳು 64 ಇವೆ.

Col. Mackenzie ಇವನು ತನ್ನ ಹುದ್ದೆಯಿಂದ ನಿವೃತ್ತನಾದನಂತರ ಅವನು ಸಂಗ್ರಹಿಸಿದ ಎಲ್ಲಾ ಪ್ರಾಕ್ತನ ವಸ್ತುಗಳನ್ನು ಪರಿಶೀಲಿಸಿ ಅದರ ಐತಿಹ್ಯವನ್ನು ವಿವರಿಸುವ ಕೆಲಸವನ್ನು ಭಾರತ ಸರಕಾರವು Prof. H. H. Wilson ಇವನಿಗೆ ಒಪ್ಪಿಸಿತು. ಈ ಸಂಬಂಧವಾಗಿ Prof. Wilson ಇವನು ದೇಶದ ಬಹುಭಾಗದಲ್ಲಿ ಸಂಚರಿಸಿದನು. ಅವನ ಹೇಳಿಕೆಯಂತೆ Col. Mackenzie ಇವನು ದಕ್ಷಿಣ ಹಿಂದೂಸ್ಥಾನದಿಂದ 1,568 ತಾಳೆವೋಲೆಗಳೂ 2,070 ಕೈ ಬರೆಹದ ಹೊತ್ತಗೆಗಳೂ 6,218 ಪ್ರಾಚೀನಕಾಲದ ನಾಣ್ಯಗಳೂ, 146 ಶಿಲಾ ಪ್ರತಿಮೆಗಳೂ, 8,076 ಶಿಲಾ ಲಿಪಿಗಳ ಪ್ರತಿಗಳೂ, 2,079 ಇತರ ಕಲಾವಸ್ತುಗಳೂ. 2,150 ಇತರ ಭಾಷೆಗಳಿಂದ ಅನುವಾದಿಸಲ್ಪಟ್ಟ ಐತಿಹಾಸಿಕ ಓಲೆಬರೆಹಗಳೂ ಸಂಪಾದಿತವಾಗಿವೆ. ಅಷ್ಟೇ ಅಲ್ಲ, Col. Mackenzie ಇವನು ಅವುಗಳೆಲ್ಲದರ ಮೇಲೂ ವಿವರಣಾತ್ಮಕವಾದ ಟೀಕೆ ಯನ್ನೂ ಕೊಟ್ಟಿದ್ದಾನೆ.

ಹೀಗೂ "Mackenzie Collections" ಈ ಬೃಹತ್ಸಂಪುಟಗಳ ರಾಶಿಯು ಕಳೆದ ಶತಮಾನದಲ್ಲಿ ನೂರಾರು ಸಂಶೋಧಕರಿಗೆ ಆಧಾರವಸ್ತುಗಳಾದುವು. ಈ ಎಲ್ಲಾ ಗ್ರಂಥಗಳನ್ನೂ ಪ್ರತಿಯೊಂದು ಕಾಂಡದಲ್ಲೂ ಸಹಸ್ರಾರು ಪುಟಗಳಂತೆ ಕುಂಪೆನೀ ಸರಕಾರವು ಇಂಗ್ಲೆಂಡಿನಲ್ಲಿ ಆವಾಗಲೇ ಮುದ್ರಿಸಿ ಪ್ರಚಾರಪಡಿಸಿತು. ಒಟ್ಟಾಗಿ ಹೇಳುವುದಿದ್ದರೆ Col. Mackenzie ಇವನು ಸಾಧಿಸಿದಂಥಾ ಅಪಾರ ಕೆಲಸವನ್ನು ಅವನನಂತರವೂ ಅವನಿಗಿಂತಲೂ ಹಿಂದೆಯೂ ಯಾರೂ ಕೈಗೊಂಡದಿಲ್ಲ. 1821ರಲ್ಲಿ ಮೃತನಾದ ಇವನ ಸಾಹಸಕರ ಜೀವನವನ್ನು ಕುರಿತು ಹಲವರು ಆವನ ವಿಷಯವಾಗಿ ಪ್ರಶಂಸಾ ಗ್ರಂಥಗಳನ್ನು ಬರೆದಿದ್ದಾರೆ. Prof. Johnston ಇವನು Mackenzie ಇವನ ಜೀವನ ಚರಿತ್ರೆಯನ್ನು ಬರೆಯುತ್ತಾ ಅವನು ಈ ದೇಶದ ಇತಿಹಾಸಕ್ಕೆ ಅಭೂತಪೂರ್ವ ಸೇವೆಯನ್ನು ಮಾಡಿದ ಮಹಾವ್ಯಕ್ತಿಯೆಂದು ಪ್ರಶಂಸಿಸಿದ್ದಾನೆ. ಇಂದು Mackenzie ಇವನ ಪರಿಶೋಧನಾ ವರದಿಗಳು ಹಲವು ಗ್ರಂಥ ಭಂಡಾರ ಗಳಿಗೆ ಅಲಂಕಾರಪ್ರಾಯವಾಗಿವೆ. ಕಲ್ಕತ್ತೆಯ ರಾಷ್ಟ್ರೀಯ ಗ್ರಂಥ ಭಂಡಾರದಲ್ಲಿ ಅವನ ಭವ್ಯವಾದ ಭಾವಚಿತ್ರವೊಂದು ಆಗ ಇಟ್ಟಿದ್ದು ಇಂದಿಗೂ ಆ ಮಹಾವ್ಯಕ್ತಿಯ ಸ್ಫೂರ್ತಿದಾಯಕವಾದ ಜೀವನವನ್ನು ನೆನಪಿಗೆ ತರುವಂತೆ ಇದೆ.

**೫. ಜಾನ್ ಲೈಡನ್ ಸಸ್ಯ ಮತ್ತು ಖನಿಜಸಂಪತ್ತನ್ನು ಶೋಧಿಸಿದನು :—**

ಕಳೆದ ಶತಮಾನದ ಪ್ರಾರಂಭದಲ್ಲಿ ಹಿಂದೂಸ್ಥಾನದಲ್ಲಿದ್ದ ಮತ್ತೊರ್ವ ಸಾಹಸೀ ಸಸ್ಯಶಾಸ್ತ್ರ ತಜ್ಞನು John Leydon ಇವನು. ಉತ್ತರ ಭಾರತದ ಅರಣ್ಯ ಸಂಪತ್ತನ್ನು ಕುರಿತು ವಿಶೇಷ ವರದಿಯನ್ನು ತಯಾರಿಸಿದ ಇವನು ಒರ್ವ ಗಣ್ಯ ಖನಿಜ ಶಾಸ್ತ್ರಜ್ಞನೆಂದೂ ಕೀರ್ತಿ ಹೊಂದಿದ್ದನು. Colin Mackenzie ಇವನು ದಕ್ಷಿಣ ಹಿಂದೂಸ್ಥಾನದಲ್ಲಿ ಐತಿಹಾಸಿಕ ಅನ್ವೇಷಣೆಯನ್ನು ನಡೆಸುತಿದ್ದಾಗ John Leydon ಇವನೂ ಅದೇ ಅನ್ವೇಷಣಾರ್ಥವಾಗಿ ದಕ್ಷಿಣಕ್ಕೆ ಬಂದನು. ಹಳೇ ಮೈಸೂರು ರಾಜ್ಯದ ಬೆಂಗಳೂರು ಜಿಲ್ಲೆ, ತುಮಕೂರು, ಹಾಸನ, ಮೈಸೂರು ಜಿಲ್ಲೆಗಳಲ್ಲೆಲ್ಲಾ ಸಂಚರಿಸಿ ಈ ಭಾಗದ ಅರಣ್ಯ ಮತ್ತು ಖನಿಜ ಸಂಪತ್ತುಗಳ ಪರಿಶೀಲನೆಯನ್ನು ನಡೆಸಿದನು. ಅದರೊಡನೆಯೇ ಈ ದೇಶದ ಪ್ರಾಕ್ತನ ವಿಚಾರ ಪರಿಶೋಧನೆಯನ್ನೂ ಕೈಗೊಂಡನು. ಹಳೇ ಮೈಸೂರು ರಾಜ್ಯದ ಅಂದಿನ ಅಧಿಕಾರಿಯಾಗಿದ್ದ Sir John Malcolm ಇವನು John Leydon ಇವನ ಅಸಾಧಾರಣವಾದ ವಿದ್ವತ್ತು ಮತ್ತು ಸೇವೆಯನ್ನು ಕುರಿತು ಹೀಗೆ ಹೇಳಿದನು :—

"...He rose by the power of native genius, from the humblest origin to a very distinguished rank in the literary world. His studies included every branch of human science."

Col. Mackenzie ಇವನು 1811ರಲ್ಲಿ ಅವನ ಸೈನಿಕ ತಂಡದೊಡನೆ ಜಾವಾ ದ್ವೀಪಕ್ಕೆ ಕಳುಹಿಸಲ್ಪಟ್ಟಾಗ ಅವನೊಡನೆ John Leydon ಇವನೂ ಹೋದನು. ಇವರೊಂದಿಗೆ Governor-General Lord Baron Minto ಇವನೂ ಅಲ್ಲಿಗೆ ಪ್ರವಾಸವನ್ನು ಕೈಕೊಂಡನು. ಇಂಡೋನೇಷ್ಯಾದ ಬಟೇವ್ಯಾ ನಗರದ ಗ್ರಂಥಭಂಡಾರದಲ್ಲಿ ಭಾರತೀಯ ಗ್ರಂಥವೋಲೆಗಳು ಇವೆಯೆಂಬುದನ್ನು ತಿಳಿದಿದ್ದ John Leydon ಇವನು ಅಲ್ಲಿ ಐತಿಹಾಸಿಕ ವಿಚಾರಗಳ ಅನ್ವೇಷಣೆಗೆ ತೊಡಗಿದನು. ಆದರೆ ದುರ್ದೈವವಶಾತ್ ಒಂದು ದಿನ ಆ ಗ್ರಂಥಭಂಡಾರದ ಒಂದು ಕತ್ತಲೆಕೋಣೆಯ ಒಳಗೆ ಅಕಸ್ಮಾತ್ತಾಗಿ ಎದ್ದ ವಿಷವಾಯು ಬಾಧೆಗೆ ಒಳಗಾಗಿ ಅವನು ಅಲ್ಲಿ ಅನಿರೀಕ್ಷಿತ ಮರಣಕ್ಕೊಳಗಾದನು.

John Leydon ಇಷ್ಟರಲ್ಲಿ ಹಿಂದೂಸ್ಥಾನದ ಮತ್ತು ಯೂರೋಪಿನಲ್ಲಿ ಒರ್ವ ಪ್ರಬಲ ಸಸ್ಯ ಮತ್ತು ಖನಿಜ ಶಾಸ್ತ್ರಜ್ಞನೆಂದು ಪ್ರಖ್ಯಾತನಾಗಿದ್ದನು. ಇವನ ಮರಣದಿಂದ ಭಾರತವು ಒರ್ವ ಶ್ರದ್ಧಾವಂತ ನೌಕರನನ್ನು ಕಳಕೊಂಡಿತೆಂದು ಎಲ್ಲರೂ ಮರುಗಿದರು. ಈ ದೇಶದ ಹಾಗೂ ಹಳೇ ಮೈಸೂರು ರಾಜ್ಯದ ಅರಣ್ಯ ಇಲಾಖೆಯ ಅಸ್ತಿತ್ವಕ್ಕೆ ತಳಹದಿಯನ್ನು ಅವನು ಹಾಕಿದ್ದನು. ಆಂಗ್ಲ ಕವಿ Southey ಇವನು J. Leydon ಇವನ ವಿಷಯವಾಗಿ ಬರೆಯುತ್ತಾ "that Java had remained in the hands of enemy, so Leydon were alive" ಎಂಬುದಾಗಿ ತನ್ನ ವ್ಯಸನವನ್ನು ಸೂಚಿಸಿದನು. ಪ್ರಸಿದ್ಧ ಸಾಹಿತಿ Sir Walter Scott ಇವನು John Leydon ಇವನನ್ನು ಕುರಿತು ಹೀಗೆ ಬರೆದನು :—

"His bright and brief career is o'er,
And mute his tuneful strains,
Quenched is his lamp of varied lore,
That loved the light of song to pour,
A distant and deadly shore
Has Leydon's cold remains."

**೬. ಮತ್ತೊರ್ವ ಖನಿಜ ಮತ್ತು ಸಸ್ಯಶಾಸ್ತ್ರಜ್ಞ, ಡಾ. ಬೆಂಜಾಮಿನ್ ಹೈನ್:**

ಕರ್ಣಾಟಕದ ಹಾಗೂ ಹಳೇ ಮೈಸೂರು ರಾಜ್ಯದ ನಿಸರ್ಗ ಸಂಪತ್ತಿನ ಅನ್ವೇಷಣೆಯನ್ನು ನಡೆಸಿದ ಇನ್ನೊರ್ವ ಪ್ರತಿಭಾಶಾಲಿ ಸಸ್ಯಶಾಸ್ತ್ರಜ್ಞನು Dr. Benjamin Heyne ಇವನು. John Leydon ಇವನು ದಕ್ಷಿಣ ಕರ್ಣಾಟಕದ ಜಿಲ್ಲೆಗಳಲ್ಲಿ ಸಂಚರಿಸುತಿದ್ದಾಗ Dr. Heyne ಇವನು ಉತ್ತರ ಕರ್ಣಾಟಕ ಮತ್ತು ಕೆಲವು ಆಂಧ್ರ ಜಿಲ್ಲೆಗಳಲ್ಲಿ ಸಂಚರಿಸಿ ನಾಡಿನ ಮಣ್ಣು ಬೆಳೆಗಳ ವಿಷಯವಾಗಿ ಬಹು ವಿವರಣಾತ್ಮಕವಾದ ವರದಿಯನ್ನು ತಯಾರಿಸಿದನು.

Dr. B. Heyne ಇವನು ಬಳ್ಳಾರಿ, ಕೋಲಾರ, ಚಿತ್ರದುರ್ಗ ಮೊದಲಾದ ಜಿಲ್ಲೆಗಳ ವಿಷಯವಾಗಿ ಬರೆದ ವಿಚಾರಗಳು ಇಂದಿಗೂ ಅರಣ್ಯ ಮತ್ತು ಖನಿಜ ಸಂಪತ್ತು ಸಂಶೋಧಕರಿಗೆ ಆದರ್ಶವಾಗಿವೆ. ಇವನ ಪರಿಶೋಧನಾ ವರದಿಯ ಉದ್ಗ್ರಂಥಗಳು 1820ರ ಕಾಲದಲ್ಲಿ ಲಂಡನ್‌ನಲ್ಲಿ Sir Charles Wilkins ಇವನ ಆಶ್ರಯದಲ್ಲಿ ಮೊದಲ ಬಾರಿಗೆ ಮುದ್ರಣವಾಯಿತು. ಅದರ ಪುನರಾವೃತ್ತಿಗಳು ಕಳೆದ ಶತಮಾನದಲ್ಲಿಯೇ ಒಂದೆರಡು ಬಾರಿ ಆದುವು. 1840ರ ಕಾಲದಲ್ಲಿ Dr. Heyne ಇವನು Capt. Newbold ಇವನೊಡನೆ ಅಂದಿನ ಮದ್ರಾಸು ಆಧಿಪತ್ಯದ ಬಹು ಭಾಗವನ್ನೂ ಸಂದರ್ಶಿಸಿದಲ್ಲದೆ ಬಳ್ಳಾರಿ ಜಿಲ್ಲೆಯನ್ನು ಪೂರ್ತಿಯಾಗಿ ಅನ್ವೇಷಿಸಿದನು. ಇವನ ಸೇವೆಯು ಹೆಚ್ಚಾಗಿ ಬೆಂಗಳೂರಿಗೆ ಸಂದಿತ್ತು ಎಂದೆನ್ನಬಹುದು.

Col. Mackenzie, John Leydon ಮತ್ತು Dr. Heyne ಇವರು ಅಖಿಲ ಭಾರತದಲ್ಲಿ ವಿಖ್ಯಾತರಾದ ಪರಿಶೋಧಕರಾಗಿದ್ದರು. ಇವರಂಥಾ ಮೇಧಾವಿಗಳನ್ನು ಕುಂಪೆನೀ ಸರಕಾರವು ಅಂದು ಹೇಗೆ ಪಡೆದರೆಂಬುದೇ ಕೌತುಕದ ವಿಚಾರವಾಗಿದೆ. ಅಂದು ಇವರಂಥಾ ಆಂಗ್ಲೇಯರು ಈ ದೇಶದ ಸಾಹಿತ್ಯ, ಐತಿಹಾಸಿಕ ಮತ್ತು ಭೌಗೋಲಿಕ ಸಂಶೋಧನೆಯನ್ನು ಕೈಗೊಳ್ಳದೇ ಹೋಗಿದ್ದರೆ ಈ ದೇಶವು ಇನ್ನಾವ ರೀತಿಯಲ್ಲಿ ಇರುತಿತ್ತು ಎಂಬುದನ್ನು ಪುನಃ ಪುನಃ ಕೇಳುತ್ತಲೇ ಇರಬೇಕಾಗಿದೆ. ಇಂದು ರಾಜ್ಯದಲ್ಲಿರುವ ಚಿನ್ನದ ಗಣಿಗಳು, ಕಬ್ಬಿಣದ ಮತ್ತು ಉಕ್ಕಿನ ಕಾರ್ಖಾನೆಗಳು, ಅರಣ್ಯ ಇಲಾಖೆಯ ವಿವಿಧ ಯೋಜನೆಗಳೆಲ್ಲಕ್ಕೂ ಈ ಸಂಶೋಧಕರ ಸಾಹಸವೇ ಮೂಲವಾಗಿವೆಯೆಂದರೆ ಅದು ಅತ್ಯುಕ್ತಿಯಾಗಲಾರದು. ಇವರನ್ನನುಸರಿಸಿಯೇ ಇತರ ನೂರಾರು ಪಾಶ್ಚಾತ್ಯ ತಜ್ಞರು ಈ ದೇಶದ ನಿಸರ್ಗ ಸಂಪತ್ತನ್ನು

ಅನ್ವೇಷಿಸಿ ಅದನ್ನು ಸದುಪಯೋಗಪಡಿಸುವ ಯೋಜನೆಗಳನ್ನು ಶಾಸ್ತ್ರೀಯವಾಗಿ ಜಾರಿಗೆ ತಂದರು.

**೭. ಜೆ. ಪ್ರಿನ್ಸೆಪ್ ಮತ್ತು ಕನ್ನಿಂಗ್‌ಹಾಂ–ಶಿಲಾಶಾಸನ ಪರಿಶೋಧಕರು :–**

ಸಾಹಿತ್ಯ ಗ್ರಂಥಗಳ ಸಂಶೋಧನೆಯೊಡನೆ ಕಳೆದ ಶತಮಾನದ ಆರಂಭದಲ್ಲಿ ಈ ದೇಶದ ಪ್ರಾಚೀನ ಶಿಲಾಲೇಖಗಳ ಪರಿಶೋಧನಾ ಕಾರ್ಯವೂ ಭರದಿಂದ ಸಾಗಿಸಲ್ಪಟ್ಟಿತು. ಬ್ರಿಟಿಷ್ ಸರಕಾರವು ಪ್ರಾಕ್ತನ ಪರಿಶೋಧನಾ ಇಲಾಖೆಗಳನ್ನು ಹಲವು ಪ್ರಾಂತಗಳ ಕೇಂದ್ರಗಳಲ್ಲಿ ಸ್ಥಾಪಿಸುವುದಕ್ಕಿಂತ ಎಷ್ಟೋ ಹಿಂದೆ James Prinsep ಇವನು ಅಸಂಖ್ಯ ಶಿಲಾಶಾಸನಗಳನ್ನು ಉತ್ತರ ಭಾರತದ ವಿವಿಧ ಭಾಗಗಳಿಂದ ಸಂಗ್ರಹಿಸಿದ್ದನು. ಸಂಸ್ಕೃತ, ಬ್ರಾಹ್ಮೀ, ಪಾಲೀ, ಪರ್ಷಿಯನ್ ಮೊದಲಾದ ಭಾಷೆಗಳಲ್ಲಿ ಪಾರಂಗತನೆನಿಸಿದ ಇವನು ಅಶೋಕನ ಕಾಲದ ನೂರಾರು ಶಾಸನಗಳನ್ನು ಪಾಲೀ ಭಾಷೆಯಿಂದ ಇಂಗ್ಲೀಷಿಗೆ ಅನುವಾದಿಸಿದನು. ಇತರ ನೂರಾರು ಬ್ರಾಹ್ಮೀ, ಪಾಲೀ ಮತ್ತು ಸಂಸ್ಕೃತ ತಾಳೆವೋಲೆಗಳನ್ನೆಲ್ಲಾ ದೇಶೀಯ ಭಾಷಾ ಲಿಪಿಗಳಲ್ಲಿ ಬರೆದನು.

ಪ್ರಾಚೀನ ಶಿಲಾಲೇಖಗಳ ಪರಿಶೋಧನಾ ವಿದ್ಯೆ (Palaeography)ಯಲ್ಲಿ ಬಹು ತಜ್ಞನೆನಿಸಿದ್ದ James Prinsep ಇವನು ಈ ದೇಶದ ನೂರಾರು ಶಿಲಾಶಾಸನ, ತಾಮ್ರಶಾಸನ ಇತ್ಯಾದಿಗಳನ್ನು ಆಧುನಿಕ ಭಾಷಾ ಲಿಪಿಗಳಿಗಿಳಿಸಿ ಬರೆದವರಲ್ಲಿ ಮೊದಲಿಗನೆಂದೆನ್ನಬಹುದು. ಕ್ರಿ.ಶ. 1799 ರಿಂದ 1840ರ ವರೆಗೂ Royal Asiatic Society ಇದರ ಕಾರ್ಯದರ್ಶಿಗಳಲ್ಲೊರ್ವನೂ ಆಗಿದ್ದನು. Asiatic Society Journal ಇದರ ಸ್ಥಾಪನೆಗೂ ಇವನು ಕಾರಣನಾಗಿದ್ದನು. ದಕ್ಷಿಣ ಹಿಂದೂಸ್ಥಾನದಲ್ಲಿ Colin Mackenzie ಹೇಗೋ ಅದೇ ರೀತಿಯಲ್ಲಿ ಉತ್ತರದಲ್ಲಿ James Prinsep ಇವನು ಈ ವರೆಗೂ ಬೇರಾರೂ ಕೈಗೊಳ್ಳದಷ್ಟು ಬೃಹತ್ಪ್ರಮಾಣದಲ್ಲಿ ಅದ್ಭುತ ಸಂಶೋಧನೆಯನ್ನು ನಡೆಸಿದ ಸಾಹಸಿಯಾಗಿದ್ದನು. ಇವನು ತನ್ನ ಐವತ್ತರ ಹರೆಯದಲ್ಲಿಯೆ ಮೃತನಾದಾಗ ವಾಸ್ತುಶಿಲ್ಪತಜ್ಞ James Fergusson ಇವನು ಈ ರೀತಿ ಹೇಳಿದನು :—

"Had James Prinsep lived for a few more years...he would have raised the veil which still shrouded in obscurity the antiquities of India."

James Prinsep ಇವನೊಡನೆಯೇ ಇದ್ದು ಪ್ರಾಚೀನ ಶಿಲಾಲೇಖಗಳನ್ನು ಓದಿ ಪರಿಷ್ಕರಿಸಿ ನೂತನವಾಗಿ ಬರೆಯುವ ವಿದ್ಯೆಯಲ್ಲಿ ತಜ್ಞತೆಯನ್ನು ಗಳಿಸಿದ H. S. Cunningham ಇವನು 1850ರ ಕಾಲದಲ್ಲಿ ಹಿಂದೂಸ್ಥಾನದ ಪ್ರಾಕ್ತನ ಪರಿಶೋಧನಾ ಇಲಾಖೆಯ ಮುಖ್ಯಾಧಿಕಾರಿಯಾಗಿ ನೇಮಿಸಲ್ಪಟ್ಟನು. ಇವನ ಉತ್ಸಾಹದ ಪರಿಣಾಮವಾಗಿ ದೇಶದ ಎಲ್ಲಾ ಕಡೆಗಳಲ್ಲೂ ಗತಕಾಲದ ಶಾಸನಗಳು, ತಾಳೆವೋಲೆಗಳು, ಗ್ರಂಥಗಳು, ಸ್ಮಾರಕಾವಶೇಷಗಳು, ಶಿಲಾವಿಗ್ರಹಗಳು ಇತ್ಯಾದಿ

ಯಾಗಿ ಸಹಸ್ರಾರರಂತೆ ಶೋಧಿಸಿ ಹೊರತರಲಾಯಿತು. ಅಲ್ಲದೆ ಕಲ್ಕತ್ತಾ, ಬೊಂಬಾಯಿ, ಮದ್ರಾಸು, ಹೈದರಾಬಾದುಗಳಂಥಾ ನಗರಗಳಲ್ಲಿ ಪ್ರಾಕ್ತನ ವಸ್ತು ಪ್ರದರ್ಶನಾಲಯುಗಳನ್ನೂ ಸ್ಥಾಪಿಸಲಾದುವು. Sir H S. Cunningham ಇವನು ಬಹು ಉತ್ಸಾಹಿಗಳಾದ ಪರಿಶೋಧಕ ಸಹೋದ್ಯೋಗಿಗಳನ್ನು ಕೂಡಿಕೊಂಡು ಈ ದೇಶದ ಐತಿಹ್ಯವನ್ನೆಲ್ಲಾ ಶೋಧಿಸಲು ತಕ್ಕ ಯೋಜನೆಗಳನ್ನು ನಿರ್ಮಿಸಿದನು. ಅವರಿಗೆ ಆಗಿಂದಾಗ್ಗೆ, "Archaeology is not limited to broken sculptures, old buildings and mounds of ruin, but includes everything that belonged to the world's history", ಎಂಬುದಾಗಿ ಹೇಳುತ್ತಲೇ ಇದ್ದನು. Sir Cunningham ಇವನನ್ನು ಅಂದಿನ ಪಾಶ್ಚಾತ್ಯ ವಿದ್ವಾಂಸರು, "the Creator of the Archaeological Survey of India" ಎಂದು ಸನ್ಮಾನಿಸಿ ಗೌರವಿಸಿದರು.

**೮. ಭಾರತೀಯ ವಾಸ್ತುಶಿಲ್ಪವು ಅಸಮಾನ್ಯವಾದುದು :—**

ಭಾರತದ ವಾಸ್ತುಶಿಲ್ಪ ವಿದ್ಯೆಯು ವೇದಗಳಷ್ಟೇ ಪುರಾತನವಾದುದು. ಈ ದೇಶದ ಹಲವು ಪುರಾತನ ಕಟ್ಟೋಣಗಳು ಹರಪ್ಪಾ ಮತ್ತು ಮೋಹೆಂಜೋದಾರ ದಷ್ಟೂ ಹಿಂದಿನ ಕಾಲಕ್ಕೆ ಸೇರಿದ್ದು ಅವುಗಳಲ್ಲಿ ಈಗ ಹಲವು ನೆಲಸಮವಾಗಿವೆ; ಇನ್ನು ಕೆಲವು ಪಾಳುಬಿದ್ದು ಉಳಿದಿವೆ; ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಾಸ್ತುಶಿಲ್ಪವು ಕೇವಲ ಎರಡು ಸಾವಿರ ವರ್ಷಗಳಿಂದಿತ್ತಣದಾದರೆ ಹಿಂದೂಸ್ಥಾನ ಮತ್ತು ಪೂರ್ವ ಏಷ್ಯಾದ ರಾಷ್ಟ್ರಗಳ ಶಿಲ್ಪಕಲಾ ಪ್ರೌಢಿಮೆಯು ಕಡಿಮೆ ಪಕ್ಷ 4000 ವರ್ಷಗಳಿಗೂ ಹಿಂದಣದಾಗಿವೆಯೆಂದು ತಜ್ಞರು ಮನಗಂಡಿದ್ದಾರೆ. ಏಷ್ಯಾಖಂಡದ ಅಸಂಖ್ಯಾತ ಶಿಲಾ ಕಟ್ಟೋಣಗಳು ಪಾಶ್ಚಾತ್ಯರನ್ನು ವಿಶೇಷ ಬೆರಗಾಗಿಸಿವೆ; ಅಂತೆಯೇ ತಮ್ಮ ಮೆಚ್ಚಿಗೆಯನ್ನೂ ವ್ಯಕ್ತಪಡಿಸಿದ್ದಾರೆ.

ಅಂದಿನ ಆ ವೈಭವದ ಕಾಲದಲ್ಲಿ ಅಂಥಾ ಒಂದೊಂದು ಕಟ್ಟೋಣ, ಕೋಟೆ ಕೊತ್ತಲಗಳು ಮಾತ್ರವಲ್ಲ; ಒಂದೊಂದು ನಗರವೇ ಬಹು ಚೆಲೋದಾಗಿ ಭವ್ಯವಾಗಿ ಕಟ್ಟಲ್ಪಟ್ಟದ್ದಿತೆಂಬುದಕ್ಕೆ ಹಲವು ಉದಾಹರಣೆಗಳಿವೆ. ಉದಾಹರಣೆಗೆ ಕಾಶ್ಮೀರದಿಂದ ಬಂದು ಕರ್ಣಾಟಕದಲ್ಲಿ ನೆಲೆಸಿದ್ದ ಬಿಲ್ಹಣನು ಕಲ್ಯಾಣಿ ನಗರದ ಸೌಂದರ್ಯ ಹಾಗೂ ವೈಭವವನ್ನು ಕಂಡು ಹೀಗೆಂದು ಉದ್ಗರಿಸಿದನು: "There has not been, there is not and there will not be on the surface of the earth, a city like Kalyani." ಇಂಥಾ ಹೇಳಿಕೆಗಳು ಪ್ರಾಚೀನ ಭಾರತದ ಹಲವು ನಗರಗಳ ಮತ್ತು ಅದ್ಭುತ ಕಟ್ಟೋಣಗಳನ್ನು ಕುರಿತು ಆಗಿಂದಾಗ್ಗೆ ಅಂದೇ ಉಲ್ಲೇಖಿಸಲ್ಪಟ್ಟವೆ. ಕರ್ಣಾಟಕದ ವಾಸ್ತುಶಿಲ್ಪ ಕೌಶಲ್ಯವನ್ನು ಕುರಿತು ನೂರಾರು ಪಾಶ್ಚಾತ್ಯರು ಬರೆದ ತಮ್ಮ ಪ್ರವಾಸ ಗ್ರಂಥಗಳ ಉಲ್ಲೇಖಗಳೇ ಸಾಕ್ಷಿ ಯಾಗಿವೆ. ಕ್ರಿ.ಶ. 15ನೇ ಶತಮಾನದಲ್ಲಿ ಬಂದ ಮಧ್ಯಪ್ರಾಚ್ಯ ದೇಶದ ಪ್ರವಾಸಿಕ ನೋರ್ಮನು ಬೇಲೂರು ಮತ್ತು ಹಳೇಬೀಡು ದೇವಾಲಯಗಳನ್ನು ನೋಡಿದಾಗ,

" he dared not attempt any description lest he should be accused of exaggeration ", ಎಂದು ಹೇಳಲಾಗಿದೆ.

೧೯ನೇ ಶತಮಾನದ ಪೂರ್ವಾರ್ಧದಲ್ಲಿ ಕುಂಪೆನೀ ಸರಕಾರದ ಪ್ರಾಕ್ತನ ಪರಿಶೋಧನಾ ಇಲಾಖೆಯ ಮುಖ್ಯಾಧಿಕಾರಿಗಳಾಗಿ Colin Mackenzie, ಗೌರೀಶಂಖರ ಶಿಖರದ ಎತ್ತರವನ್ನು ಅಳೆದ George Everest, Sir H. S. Cunningham ಮೊದಲಾದವರಂಥಾ ಸಾಹಸೀ ತಜ್ಞರನ್ನು ದೊರೆತುದು ಈ ದೇಶದ ಸುದೈವವೆಂದೇ ಹೇಳಬೇಕು. ಇವರನಂತರ ಅದೇ ಪರಿಶೋಧನೆಯನ್ನು ಮುಂದುವರಿಸಿ ಉತ್ತರ ಹಿಂದೂಸ್ಥಾನದಲ್ಲಿ Sir A. Cunningham, Sir William Hunter, ಮೊದಲಾದವರೂ ಬೊಂಬಾಯಿ ಆಧಿಪತ್ಯದಲ್ಲಿ J. Burgess, ಒರಿಸ್ಸಾ ಮತ್ತು ಪೂರ್ವ ಹಿಂದೂಸ್ಥಾನದಲ್ಲಿ H. H. Locke, ಮದ್ರಾಸು ಆಧಿಪತ್ಯದಲ್ಲಿ Dr. J. F. Fleet ಹೀಗೆ ಹಲವರು ಈ ಅದ್ಭುತ ಪರಿಶೋಧನೆಯನ್ನು ಮುಂದುವರಿಸಿ ಬರೇ ಕಲ್ಲುದಿನ್ನೆಗಳಲ್ಲಿ ಮಾತ್ರ ಉಳಿದಿದ್ದ ಪ್ರಾಚೀನ ಭಾರತದ ವಿಶಿಷ್ಟತೆಯನ್ನು ಜಗತ್ತಿನೆದುರಿಗೆ ಬಿಚ್ಚಿಟ್ಟರು. ಈ ಶ್ರದ್ಧಾವಂತ ಸಂಶೋಧಕರ ಪರಂಪರೆಯು ಈ ಶತಮಾನದಲ್ಲೂ ಮುಂದುವರಿಯಿತೆಂಬುದಕ್ಕೆ ಹರಪ್ಪಾ ಮತ್ತು ಮೋಹೆಂಜದಾರೋಗಳ ಐತಿಹ್ಯವನ್ನು ಪರಿಶೋಧಿಸಿದ ಪ್ರಸಿದ್ಧ ಪ್ರಾಕ್ತನ ವಿಚಾರ ತಜ್ಞ Sir John Marshall ಇವನ ಸಾಹಸಪೂರ್ಣವಾದ ವ್ಯಕ್ತಿತ್ವವೇ ಸಾಕ್ಷಿಯಾಗಿದೆ.

### ೯. ಎಲ್ಲಾ ದೇವಾಲಯಗಳ ಪ್ರದಕ್ಷಿಣೆಯನ್ನು ಮಾಡಿದ ಜೆ. ಫರ್ಗುಸನ್ :

ಹಿಂದೂಸ್ಥಾನದ ಮತ್ತು ಏಷ್ಯಾಖಂಡದ ಹಲವು ದೇಶಗಳ ವಾಸ್ತುಶಿಲ್ಪ ವೈಶಿಷ್ಟ್ಯವನ್ನು ಆದ್ಯಂತವಾಗಿ ಪರಿಶೀಲಿಸಿ ಜಗತ್ತಿಗೆ ತಿಳಿಸಿ ಪ್ರಖ್ಯಾತನಾದ ಶಿಲ್ಪಿ ಶಾಸ್ತ್ರಜ್ಞನೆಂದರೆ Dr. James Fergusson ಇವನು. ಕ್ರಿ.ಶ. 1844ರ ಕಾಲಕ್ಕೆ ಇವನು ಏಷ್ಯಾ ಖಂಡದ ನೂರಾರು ಪ್ರಾಚೀನ ದೇವಾಲಯ ಕಟ್ಟೋಣಗಳನ್ನು ಸಂದರ್ಶಿಸಿದ ಒರ್ವ ಯಾತ್ರಾರ್ಥಿಯಾಗಿದ್ದನು. ನಿಜಕ್ಕೂ ಇವನ ಜ್ಞಾನಾನ್ವೇಷಣೆಯ ಸಂಚಾರವು ಯಾವ ತೀರ್ಥಯಾತ್ರಿಕನ ಸಂಚಾರವನ್ನೂ ಮೀರಿಸಿದ ಸಾಹಸಪೂರ್ಣ ಪ್ರಯತ್ನವಾಗಿದೆ. ಯೂರೋಪಿನ ನೂರಾರು ದೇಗುಲಗಳನ್ನು ನೋಡಿ, ಮಧ್ಯಪ್ರಾಚ್ಯ, ಪರ್ಷಿಯಾ, ಹಿಂದೂಸ್ಥಾನ, ಮಲೆಯಾ, ಥ್ಯಾಲೇಂಡ್, ಕೆಂಬೋಡಿಯಾ, ಇಂಡೋನೇಷ್ಯಾ ಇತ್ಯಾದಿ ದೇಶಗಳಲ್ಲಿರುವ ದೇವಾಲಯಗಳನ್ನೆಲ್ಲಾ ನೋಡಿದನು. ಭಾರತದ ಗುಹಾಂತರ್ಗತ ದೇವಾಲಯಗಳು ಇವನ ಮನಸ್ಸನ್ನು ಸೆಳೆದುವು. 1844ರಲ್ಲಿ Royal Asiatic Society ಇದರ ಸಭೆಯಲ್ಲಿ ಈ ವಿಷಯವನ್ನು ಕುರಿತಾದ ತನ್ನ ಪ್ರಬಂಧವನ್ನು ಓದಿದನು. ಅದೇ ವರ್ಷ ಅವನ "Cave Temples of India" ಎಂಬ ಗ್ರಂಥವು ಪ್ರಕಟವಾದಾಗ ಭಾರತದ ಅದ್ಭುತ ಶಿಲ್ಪಶಾಸ್ತ್ರದ ಪರಿಚಯವು ವಿದೇಶೀಯರಿಗೆ ಮೊದಲಬಾರಿಗೆ ಉಂಟಾಯಿತು.

ಇದರ ನಂತರ 1845ರಲ್ಲಿ Illustrations of the Rock-cut Temples of India ಎಂಬ ಅವನ ಸಚಿತ್ರಸಹಿತವಾದ ಗ್ರಂಥವು ಇನ್ನಷ್ಟು

ವಿಚಾರಗರ್ಭಿತವಾದುದಾಗಿತ್ತು. 1850ರಲ್ಲಿ J. Fergusson ಇವನ Memoir on the Cave Temple ಎಂಬ ಗ್ರಂಥವು ಪ್ರಕಟವಾದಾಗ ಐರೋಪ್ಯಾದ ಶಿಲ್ಪಕಲಾ ತಜ್ಞರು ಅದನ್ನು ವಿಮರ್ಶಿಸುತ್ತಾ ಹೀಗೆ ಬರೆದರು:—

"The Royal Asiatic Society of Great Britain and Ireland having on the suggestion of James Fergusson to whom we are much indebted for the artistic and critical illustration of the architectural antiquities of India."

James Fergusson ಇವನು ಆ ಕಾಲದಲ್ಲಿ ಒರ್ವ ವಿಶ್ವವಿಖ್ಯಾತನಾದ ಶಿಲ್ಪಕಲಾ ತಜ್ಞನಾಗಿದ್ದನು. 1855 ರಲ್ಲಿ ಮುದ್ರಣವಾದ ಅವನ History of Architecture ಎಂಬ ಪ್ರಸಿದ್ಧ ಗ್ರಂಥವು 1862ರಲ್ಲಿ ಪರಿಪುಷ್ಟವಾಗಿ ಪುನರ್ಮುದ್ರಣವಾಯಿತು. ಇವೆಲ್ಲಕ್ಕಿಂತಲೂ ಮೇಲಾಗಿ ಅವನ History of Indian and Eastern Architecture ಎಂಬ 1,000 demy ಪುಟಗಳ ಮಹಾಗ್ರಂಥವು ಎರಡು ಕಾಂಡಗಳಾಗಿ ಪ್ರಕಟವಾದಾಗ ಅಮೇರಿಕಾ ಮತ್ತು ಯೂರೋಪಿನ ವಿದ್ವಾಂಸರು Fergusson ಇವನ ಅದ್ಭುತ ಸಂಶೋಧನೆಯನ್ನು ನೋಡಿ ಮುಗ್ಧರಾದರು. ಈ ಗ್ರಂಥವು 1886 ರಲ್ಲಿ ಮತ್ತು ಪುನಃ 1891 ರಲ್ಲಿ ಅಮೇರಿಕಾದಲ್ಲಿಯೇ ಮುದ್ರಣವಾಗಿ ಪ್ರಕಟವಾಯಿತು. ಸುಮಾರು 120 ವರ್ಷಗಳಿಗೆ ಹಿಂದಿನ ಆ ಕಾಲದಲ್ಲಿ ಇವನು ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗಿನ ಎಲ್ಲಾ ಪ್ರಾಮುಖ್ಯ ಪ್ರಾಚೀನ ಕಟ್ಟೋಣಗಳನ್ನೆಲ್ಲಾ ನೋಡುತ್ತಾ ಹೇಗೆ ಸಂಚರಿಸಿದನೆಂಬುದನ್ನು ಊಹಿಸಲಿಕ್ಕೆ ಅಸಾಧ್ಯವಾದ ವಿಚಾರವಾಗಿದೆ.

## ೧೦. ದಖ್ಖಣದ ಕಟ್ಟೋಣಗಳನ್ನು ಕುರಿತು ಫರ್ಗುಸನ್ನನ ಹೇಳಿಕೆ:—

ಪ್ರಾಚೀನ ಕಾಲದ ವಾಸ್ತುಶಿಲ್ಪವನ್ನು ಕುರಿತಾಗಿ ವಿಚಾರಪ್ರಚೋದನೆಯನ್ನು ನಡೆಸಿದ ಈ ಪ್ರಸಿದ್ಧ ಅನ್ವೇಷಕನೂ ಯಾತ್ರಿಕನೂ ಆದ James Fergusson ಇವನು ಅಜಂತಾ, ಎಲ್ಲೋರ, ಕೊನರಕ್, ತಂಜಾವೂರು, ಮಧುರೆ, ಹಂಪಿ, ರಾಮೇಶ್ವರ ಇತ್ಯಾದಿ ದೇವಾಲಯಗಳಷ್ಟೇ ಅಲ್ಲ, ಈ ವಿಶಾಲ ದೇಶದ ಪ್ರತಿಯೊಂದು ಚಾರಿತ್ರಿಕ ಸ್ಥಳಗಳನ್ನೂ ಅಲ್ಲಿರುವ ಸ್ಮಾರಕಾವಶೇಷಗಳನ್ನೆಲ್ಲವನ್ನೂ ಪರಿಶೀಲಿಸಿ ಅವುಗಳ ಮೇಲೆ ಶಾಸ್ತ್ರೀಯವಾದ ವಿವರಣೆಯನ್ನು ಕೊಟ್ಟಿದ್ದಾನೆ. ದಕ್ಷಿಣ ಹಿಂದೂಸ್ಥಾನದ ಯಾವ ಪ್ರಾಚೀನ ಕಟ್ಟೋಣವೂ ಪಾಳುಬಿದ್ದ ಐತಿಹಾಸಿಕ ಕುರುಹುಗಳೂ ಇವನ ದೃಷ್ಟಿಯಿಂದ ಪಾರಾಗಲಿಲ್ಲ. ಉದಾಹರಣೆಗೆ ಅವನು ನಾಗಾರ್ಜುನಕೊಂಡದ ಐತಿಹ್ಯವನ್ನು ಕುರಿತು ಹೇಳಿದ್ದನ್ನು ಈ ಕೆಳಗೆ ಕೊಡಲಾಗಿದೆ:—

"... ..It was built by one of the Andhra kings as a monastery for Nagarjuna. It had lofty halls in five tiers, each with four courts and temples containing golden images of the Budha...... The Tibetan works state that Nagarjuna died at the great monastery of......Srisailam .....The place is difficult of access,

but was visited by Col. Mackenzie in 1794......Mackenzie had mentioned the animals carved on the surrounding walls in a way that seemed to follow the arrangement described by Fah-Hian......"

ಬೆಟ್ಟವನ್ನೂ ಮೀರಿದ ಬೆಟ್ಟವಿದೆಯೆಂದು ಹೇಳಿದಂತೆ ಆ ಕಾಲದಲ್ಲಿ ಕಾಡು ಬಿದ್ದ ಮತ್ತು ಪಾಳುಬಿದ್ದ ಆ ಸ್ಥಳಕ್ಕೆ Fergusson ಇವನು ಮಾತ್ರ ಅಲ್ಲ, ಅವನಿಗಿಂತಲೂ ಐವತ್ತು ವರ್ಷಗಳಿಗೆ ಹಿಂದೆಯೇ Col. Mackenzie ಇವನು ಇನ್ನೆಷ್ಟು ಪ್ರಯಾಸದಿಂದ ಹೋದನೋ ಎಂದು ಊಹಿಸಿಕೊಳ್ಳಬೇಕಿದೆ. ದಕ್ಷಿಣ ಹಿಂದೂ ಸ್ಥಾನದ ಹಲವು ಪಾಳುಬಿದ್ದ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿದ ಈ ಮಹಾ ಯಾತ್ರಿಕ Dr. Fergusson ಇವನು ಆಯಾ ಸ್ಥಳಗಳ ಮೇಲೆ ಕೊಡುವ ವಿವರಣೆಗಳು ಉದ್ಬೋಧಕವಾಗಿವೆ.

"Whoever these Dolmens or stone circles may have belonged to, we know, at least, that they never were developed into architectural objects...No Dravidian tomb or canotaph is known to exist anywhere..."

ಎಂಬುದಾಗಿ ಇವನ ಸ್ಥಳಪರೀಕ್ಷೆಯ ವರದಿಯು ಬೇರೆ ಬೇರೆ ವಿಷಯಗಳ ಮೇಲೆ ಹೇಳಲ್ಪಟ್ಟಿದೆ. ಮಧ್ಯಕಾಲದ ಮತ್ತು ಆಧುನಿಕ ಕಟ್ಟೋಣಗಳನ್ನು ಕುರಿತು ಅವನು ಹೇಳಿದ ಮಾತುಗಳು ಸ್ವಾರಸ್ಯವಾಗಿವೆ :—

"The modern palaccs of the Nawabs of the Karnatic, of the Rajas of Ramnad and Travancore are all in the bastard Italian style, adapted by the Nawabs of Lucknow and the Babus of Calcutta...."

## ೧೧. ಕರ್ಣಾಟಕದ ವಾಸ್ತುಶಿಲ್ಪದ ಬಗ್ಗೆ ಫರ್ಗುಸನ್ನನ ಪ್ರಶಂಸೆ :—

Dr. Fergusson ಇವನು ಹೇಳಿದ ಅಥವಾ ಪ್ರತಿಪಾದಿಸಿದ ಎಲ್ಲಾ ವಿಷಯಗಳನ್ನು ಇಲ್ಲಿ ಹೇಳುವುದು ನಮ್ಮ ಉದ್ದೇಶವಲ್ಲವಾದರೂ ದಿಗ್ದರ್ಶನಾರ್ಥವಾಗಿ ಒಂದೆರಡು ಹೇಳಿಕೆಯನ್ನಾದರೂ ಇಲ್ಲಿ ಉಲ್ಲೇಖಿಸುವುದು ಅವಶ್ಯವಿದೆ. ಕನ್ನಡನಾಡಿನ ವಾಸ್ತುಶಿಲ್ಪ ಕೌಶಲ್ಯದ ಬಗ್ಗೆ ಈ ಶಿಲ್ಪಕಲಾ ಪಂಡಿತನು ಹೇಳುವ ಮಾತುಗಳು ಚಾರಿತ್ರಿಕವಾಗಿ ಸಮರ್ಪಕವಾಗಿವೆಯೆಂಬುದಕ್ಕೆ ಈ ಕೆಲವು ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ :—

"The Chalukyan style was naturally evolved from the Dravidian, and the earliest temples within its area are not always clearly marked off from that type; it was only by degrees that it acquired its distinctive character. Unfortunately, most of the earlier and the finer examples perished during the Muslim invasions and under the later rule of the various

Muhammaden dynasties of the Deccan. The area over which the style extended includes Mysore and all the Kannada country —its birth place—in the West; eastwards its southern limit was the Tungabhadra and the Kistna rivers..."

"The Dravidian temples at Badami, Pattadkal, Ellora and elsewhere, pierced stone windows... are not unfrequent, but the most richly carved examples of these belong specially to the Chalukyan style... The Dharwar district may be regarded as the cradle of the style...."

"The Ittagi temple near Gadag, is a Shaiva temple surrounded by the ruins of small shrines of the eleventh century..."

ಜಗತ್ತಿನ ಅತ್ಯಾದ್ಭುತ ಕಟ್ಟೋಣಗಳೆಲ್ಲವನ್ನೂ ಕಣ್ಣಾರೆ ನೋಡಿ ಪರಾಮರ್ಶಿಸಿದ ಈ ಮಹಾ ತಪಸ್ವಿ ಶಿಲ್ಪಶಾಸ್ತ್ರಜ್ಞನಿಗೆ ಕರ್ಣಾಟಕದ ಬೇಲೂರು ಮತ್ತು ಹಳೇಬೀಡು ದೇವಾಲಯಗಳು "moved him into ecstasy" ಎಂದು ಹೇಳಲಾಗಿದೆ. ಪೌರಸ್ತ್ಯ ಸಂಸ್ಕೃತಿಯ ಮತ್ತು ಆರ್ಶೇಯ ವಿದ್ಯೆಯ ಹಿರಿಮೆಯನ್ನು Dr. Fergusson ಇವನು ಈ ಕಟ್ಟೋಣಗಳಲ್ಲಿ ಕಂಡನು. ಅವುಗಳನ್ನು ಕುರಿತಾಗಿ ಅವನು ಈ ರೀತಿ ಹೇಳಿದನು:—

"One cannot help wondering at the amount of lovely detail, all finished with scrupulous care tucked away in dark corners — each minute and unseen part, for the gods see everywhere. There are many buildings in India which are unsurpassed for delicacy in detail, but the temples of Belur and Halebid surpass even these, for freedom of handling and richness of fancy.... It may probably be considered as one of the most marvellous exhibitions of human labour to be found in the patient East ..."

"All the pillars of the Parthenon are identical, while no two facets of the Indian temple are the same; every evolution of every scroll is different. No two canopies in the whole building are alike, and every part exhibits a joyous exuberance of fancy scorning every mechanical restraint. All that is wild in human faith or warm in human feeling is found portrayed on these walls .."

ಹೀಗೆ ಈ ಕಟ್ಟೋಣಗಳು ವಾಸ್ತುಶಿಲ್ಪ ಕೌಶಲ್ಯದ ರಮಣೀಯ ಪ್ರತೀಕಗಳಂತೆ ಕಂಡ Dr. Fergusson ಇವನು ಹಳೇಬೀಡಿನ ಕೇದಾರೇಶ್ವರ ದೇಗುಲವನ್ನು ಸಂರಕ್ಷಿಸದೆ ಅಂತೆಯೇ ಬಿಟ್ಟುದನ್ನು ನೋಡಿ ನಿರಾಶನಾಗಿದ್ದಾನೆ; ದಿನದಿಂದ ದಿನಕ್ಕೂ ಈ ಕಟ್ಟೋಣವು ಹಾಳುಗೆಡಹುತ್ತಿದೆಯಲ್ಲಾ ಎಂದು ಕಾತರದಿಂದ ಹೇಳುತ್ತಾನೆ:—

"In a very few years this building will be entirely destroyed

by the trees, which have fastened their roots in the joints of the stones. In a drawing in the Mackenzie Collection....the building is shown entire... a few years more, if some steps are not taken to save it; and, as the country is in our charge, it is hoped that the expenditure will not be grudged."

ಆದರೆ ಇವನ ಮಾತನ್ನು ಯಾರೂ ಕೇಳದಾದರು. ಕೆಲವು ವರ್ಷಗಳನಂತರ ಹಳೇ ಬೀಡಿಗೆ ಹೋಗಿ ಆ ಕಟ್ಟೋಣವನ್ನು ನೋಡಿದ Benjamin Rice ಇವನು ಹಿಗಂದನು :—

"But no attention was paid to this warning! With shame be it written; Mr. Fergusson's gloomy anticipation have been completely fulfilled ...Some of the most perfect figures have been conveyed to Bangalore and set up in the Museum, but divorced from their artistic setting they have lost their meaning."

**೧೨. ಶ್ರವಣಬೆಳ್ಗೊಳದ ಗೊಮ್ಮಟನೆ ಜಗತ್ತಿನಲ್ಲಿ ಎತ್ತರದವನು :—**

Dr. James Fergusson ಇವನು ಕರ್ಣಾಟಕದ ಎಲ್ಲಾ ಪ್ರಾಮುಖ್ಯ ದೇವಾಲಯಗಳನ್ನೂ ಕಟ್ಟೋಣಗಳನ್ನೂ ಬಹುಶ್ರದ್ಧೆಯಿಂದ ಪರಿಶೀಲಿಸಿದ್ದಾನೆ. ಆದರೆ ಬೇಲೂರು ಚೆನ್ನಕೇಶವ ದೇವಾಲಯವನ್ನು ವರ್ಣಿಸಿದಷ್ಟು ಅವನಿಗೆ ಸಮಾಧಾನ ವಾಗದು. ಆ ಅಮೋಘ ಕಲ್ಲುಕುಸುರುಗಳನ್ನು ಕುರಿತು ಅವನು ಹೀಗನ್ನುತ್ತಾನೆ :—

The pierced slabs themselves however, are hardly so remarkable as the richly carved base on which they rest, and the deep cornice which over-shadows and protects them. The amount of labour indeed, which each facet of this porch displays is such as, I believe, never was bestowed on any surface of equal extent in any building in the world."

ಇದರ ನಂತರ ಅವನು ಶ್ರವಣಬೆಳ್ಗೊಳದ ಗುಮ್ಮಟ ವಿಗ್ರಹವನ್ನು ನೋಡಿ ಇನ್ನಷ್ಟು ಆಶ್ಚರ್ಯಚಕಿತನಾಗುತ್ತಾನೆ; ಅಲ್ಲದೆ ಅದು ಜಗತ್ತಿನಲ್ಲಿಯೇ ಎತ್ತರವಾದ ಪ್ರತಿಮೆ ಯೆಂದು ಆಧಾರಪೂರ್ವಕವಾಗಿ ಹೇಳುತ್ತಾನೆ.

"There is nothing grander or more imposing anywhere out of Egypt, and even there, no known statue surpasses this in its height."

ಈ ಕಲ್ಲು ಗುಮ್ಮಟನು ಅಸಂಖ್ಯ ಮಹಾವ್ಯಕ್ತಿಗಳನ್ನು ತನ್ನೆಡೆಗೆ ಆಕರ್ಷಿಸಿದೆ. ಅವರಲ್ಲಿ Duke of Wellington ಎಂದು ಪ್ರಸಿದ್ಧನಾದ Sir Arthur Wellesley ಇವನು ಕಡೇ ಶ್ರೀರಂಗಪಟ್ಟ ಯುದ್ಧದ ನಂತರ ಶ್ರವಣಬೆಳ್ಗೊಳಕ್ಕೆ ಹೋದಾಗ, "was astonished at the amount of labour such a work must have entailed, and puzzled, to know whether it was a part of hill, or had been moved to the spot where it now stands......" ಎಂದು

ಅಭಿಪ್ರಾಯಪಟ್ಟನೆಂದು ಹೇಳಲಾಗಿದೆ. ಮೈಸೂರು ರಾಜ್ಯ ಸರಕಾರದಲ್ಲಿ ಸೈನ್ಯಾಧಿ ಕಾರಿಯಾಗಿದ್ದ Capt. Mackenzie ಇವನು 1873ರಲ್ಲಿ ಈ ವಿಗ್ರಹದ ವಿಷಯ ವಾಗಿ ಒಂದು ಸಂಶೋಧನಾ ಲೇಖನವನ್ನು ಬರೆಯುತ್ತಾ ಹೀಗೆ ತನ್ನ ಒಂದು ಅನು ಭವವನ್ನು ಹೇಳುತ್ತಾನೆ:—

"Once in twenty years, the great Ceremony of washing the god is performed. The last occasion was in June 1871. To perform the ceremony a platform is erected. Mr. Scandon, who happened to be on the spot, took advantage of this to measure the differing parts. Unfortunately before he could complete the work, some of the priests interfered."

58 ಅಡಿ ಎತ್ತರದ ಈ ವಿಗ್ರಹದ ನಂತರ ಇನ್ನೊರ್ವ 42 ಅಡಿ ಎತ್ತರದ ಗುಮ್ಮಟನು ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳದಲ್ಲಿ ನಿಲ್ಲಿಸಲ್ಪಟ್ಟಿದ್ದಾನೆ. ಮದ್ರಾಸಿನಲ್ಲಿದ್ದ W. J. Walhouse ಇವನು ಈ "Kanara Colossi" ಇದನ್ನು ಕುರಿತು 1876 ರಲ್ಲಿ Indian Antiquary ಪತ್ರಿಕೆಯಲ್ಲಿ ಒಂದೆರಡು ಐತಿಹಾಸಿಕ ಲೇಖನ ಗಳನ್ನು ಬರೆದನು. ಈ ಗುಮ್ಮಟನೂ ದಕ್ಷಿಣ ಕನ್ನಡ ಜಿಲ್ಲೆಯ ವೇಣೂರಿನಲ್ಲಿ ನಿಲ್ಲಿಸ ಲ್ಪಟ್ಟ 35 ಅಡಿ ಎತ್ತರದ ಇನ್ನೊರ್ವ ಗುಮ್ಮಟನೂ ಈಜಿಪ್ಟ್ ದೇಶದ ಬೃಹದಾಕಾರದ ಕಲ್ಲು ವಿಗ್ರಹಗಳನ್ನೇ ಹೋಲುತ್ತವೆಯೆಂದು ಅವನು ಹೇಳಿದ್ದಾನೆ. ಇದೇ ರೀತಿ ಮೈಸೂರು ಜಿಲ್ಲೆಯಲ್ಲಿರುವ ಕೆಲವು ಗುಮ್ಮಟ ವಿಗ್ರಹಗಳೂ ಪಾಶ್ಚಾತ್ಯರ ಪರಿಶೀಲನೆಗೆ ಒಳಗಾದುವು. ವೇಣೂರು ಮತ್ತು ಶ್ರವಣಬೆಳಗೊಳದ ವಿಗ್ರಹಗಳನ್ನು ನೋಡಿದ Dr. A. C. Burnell ಇವನು, "These monolithic colossi are of truly Egyptian dimension", ಎಂದು ಮೇಲಿನ ಅಭಿಪ್ರಾಯವನ್ನು ಸಮರ್ಥಿಸಿದನು.

## ೧೩. ವಾಸ್ತುಶಾಸ್ತ್ರ ಗ್ರಂಥಗಳು, ಕರಡು ಚಿತ್ರ ಮತ್ತು ಬಣ್ಣ ಚಿತ್ರಗಳು :—

ಕಳೆದ ಶತಮಾನದಲ್ಲಿ ಹಿಂದೂಸ್ಥಾನದ ವಾಸ್ತುಶಿಲ್ಪವನ್ನು ನೋಡಿ ಆಶ್ಚರ್ಯ ಪಟ್ಟ ಪಾಶ್ಚಾತ್ಯ ವಿದ್ವಾಂಸರು ಇನ್ನೂ ಹಲವರಿದ್ದಾರೆ. Dr. Fergusson ಇವನಂತೆಯೇ ಈ ದೇಶದ ಶಿಲ್ಪಕಲಾ ಪ್ರಾವಿಣ್ಯತೆಯನ್ನು ಕುರಿತು ಉದ್ದಾಮ ಗ್ರಂಥ ಗಳನ್ನು ಬರೆದವರಲ್ಲಿ P. Brown ಇವನು. ಹಿಂದು ಮತ್ತು ಬೌದ್ಧರ ಕಾಲದ ಪ್ರಾಚೀನ ವಾಸ್ತುಶಿಲ್ಪ ಕಲೆಯನ್ನು ಕುರಿತು "Indian Architecture" ಎಂದೂ, ಕ್ರಿ. ಶ. 16 ನೇ ಶತಮಾನದಿಂದಿತ್ತಣದ ಕಟ್ಟೋಣಗಳನ್ನು ಕುರಿತು E. B Havell ಇವನು "Indian Architecture" ಎಂದೂ ಗ್ರಂಥ ಗಳನ್ನು ಬರೆದಿದ್ದಾರೆ. ಪುರಾತನ ಪ್ರಸಿದ್ಧ ನಳಂದಾ ಭೂಶೋಧನೆಯನ್ನು ಕುರಿತು J. A. Page ಇವನು "Nalanda Excavations" ಎಂದೂ ಬರೆದಿ ದ್ದಾನೆ.

ಇನ್ನುಳಿದ ಕೆಲವು ಪ್ರಸಿದ್ಧ ಪ್ರಾಕ್ತನ ವಿಚಾರ ತಜ್ಞರಲ್ಲಿ Capt. Robert

Grinday ಇವನು "Ellora Caves", Dr. F. Buchanan ಇವನು " Ruins of Buddha Gaya ಮತ್ತು Lt.-Col. Brigg ಇವನು ಈ ದೇಶದ ಗುಹಾಂತರ್ಗತ ಕಟ್ಟೋಣಗಳು ಮತ್ತು ಬಣ್ಣ ಚಿತ್ರಗಳ ಮೇಲೆ ಲೇಖನ ಗಳನ್ನೂ ಗ್ರಂಥಗಳನ್ನೂ ಬರೆದಿದ್ದಾರೆ.

ಪ್ರಾಚೀನ ದೇವಾಲಯಗಳ ಮತ್ತು ಕೋಟೆಗಳ ಅಸ್ತಿಭಾರಗಳನ್ನು ಸಂಪೂರ್ಣ ವಾಗಿ ಪರೀಕ್ಷಿಸಿ ಅದೆಷ್ಟೋ ಪಾಶ್ಚಾತ್ಯ ಉತ್ಸಾಹಿಗಳು ಅವುಗಳ ಕರಡು ಚಿತ್ರಗಳನ್ನು (architectural Sketches) ಇವನ್ನು ತಯ್ಯಾರಿಸಿದ್ದಾರೆ. ಬಂಗಾಳ, ಒರಿಸ್ಸಾ, ಕರ್ಣಾಟಕ ಮತ್ತು ತಮಿಳು ನಾಡುಗಳ ನೂರಾರು ದೇವಸ್ಥಾನಗಳ ಕರಡು ಚಿತ್ರಗಳನ್ನು ಬಿಡಿಸಿದವರಲ್ಲಿ R. F. Chisholm ಮತ್ತು H. Cousens ಇವರು ಪ್ರಮುಖರಾಗಿದ್ದಾರೆ. ಇದೇ ರೀತಿ Arthur Gordon ಇವನು ದಕ್ಷಿಣದ ಹಲವು ದೇವಸ್ಥಾನಗಳ, ಗೋರಿಗಳ ಮತ್ತು ಮಸೀದಿಗಳ ಕರಡು ಚಿತ್ರಗಳನ್ನೂ ಬಿಡಿಸಿದ್ದು ಇವೆಲ್ಲವನ್ನೂ ಮೇಲಿನ ಗ್ರಂಥಕರ್ತರು ತಮ್ಮ ವಿವರಣಾತ್ಮಕವಾದ ಬರೆವಣಿಗೆಯಲ್ಲಿ ಸಚಿತ್ರವಾಗಿ ಉಪಯೋಗಿಸಿದ್ದಾರೆ. ಮೊಗಲರ ಕಾಲದ ಅರಮನೆಗಳ ಕರಡು ಚಿತ್ರಗಳನ್ನು ಬಿಡಿಸಿದ John Ogilby ಇವನು ಏಷ್ಯಾ ಖಂಡದಲ್ಲಿಯೇ ಪ್ರಸಿದ್ಧನಾದ ಚಿತ್ರಗಾರನಾಗಿದ್ದನು.

ಅಜಂತಾ ಬಣ್ಣ ಚಿತ್ರಗಳ ನಕಲನ್ನು ಇನ್ನಷ್ಟು ಆಕರ್ಷಕವಾಗಿ ತಯಾರಿಸಿದ Griffith ಇವನೂ, ಭಾರತದ ಎಲ್ಲೆಡೆಯೂ ಕಂಡು ಬಂದ ಅಸಂಖ್ಯ ಬಣ್ಣ ಚಿತ್ರಗಳು ಮತ್ತು ವಾಸ್ತುಶಿಲ್ಪ ಕಟ್ಟೋಣಗಳ ಚಿತ್ರಗಳು ಮತ್ತು ಕರಡು ಚಿತ್ರಗಳು–ಇವನ್ನೆಲ್ಲಾ ಇನ್ನೂ ಶಾಸ್ತ್ರೀಯವಾಗಿ ಬಿಡಿಸಿ ಪಾಶ್ಚಾತ್ಯ ದೇಶಗಳಲ್ಲೆಲ್ಲಾ ಈ ದೇಶದ ಚಿತ್ರಕಲೆ, ಶಿಲ್ಪಕಲೆ ಇತ್ಯಾದಿಗಳನ್ನು ಪ್ರಚಾರಪಡಿಸಿದವರಲ್ಲಿ C. J. Erskine, Licuto Brett, Dr. Stevenson ಮತ್ತು W. Fallen ಇವರು ಪ್ರಮುಖರಾಗಿದ್ದರು.

## ೧೪. ವಾಸ್ತುಶಿಲ್ಪ ಕಲಾನ್ವೇಷಣೆ ಮತ್ತು ಹಲವು ಪ್ರಕಟಣೆಗಳು :—

ಕಳೆದ ಶತಮಾನಾರಂಭದಲ್ಲಿ ಪ್ರಾರಂಭಿಸಲ್ಪಟ್ಟ ಈ ದೇಶದ ವಾಸ್ತುಶಿಲ್ಪ ಕಲಾನ್ವೇಷಣೆಯು ಇನ್ನೂ ಹಲವು ಉದ್ದಾಮ ಪಂಡಿತರಿಂದ ಆಯಾ ಭಾಗಗಳಲ್ಲಿ ಭರದಿಂದ ನಡೆಸಲ್ಪಟ್ಟಿತು. ಬ್ರಿಟಿಷ್ ಸರಕಾರದ ಮೂಲಕವಾಗಿ ಹಲವು ಬೃಹದ್ಗ್ರಂಥ ಗಳು ಸಚಿತ್ರವಾಗಿ ಮತ್ತು ಸಮೂಲಾಗ್ರವಾಗಿ ಪ್ರಕಟವಾದುವು. ಈ ದೇಶದ ಯಾವೊಂದು ವಿಚಾರದ ಮೇಲೆಯೂ ಅವರು ಸಂಪೂರ್ಣ ಸಂಶೋಧನೆಯನ್ನೆಸಗದೆ ಬಿಡಲಿಲ್ಲವೆಂಬುದಕ್ಕೆ ಇವೇ ಉದಾಹರಣೆಗಳಾಗಿವೆ.

1847ರಲ್ಲಿ ಪಶ್ಚಿಮ ಹಿಂದೂಸ್ಥಾನದ ಗುಹಾಂತರ್ಗತ ದೇವಾಲಯಗಳ 'Sculpture in the Caves' ಎಂಬ ವಿಷಯವಾಗಿ Dr. J. Bird ಇವನೂ 1850ರಲ್ಲಿ 'Memoir on the Cave Temples' ಎಂಬ Dr. J. Wilson ಇವನೂ ಉತ್ತಮ ಗ್ರಂಥಗಳನ್ನು ಬರೆದರು. ಕರ್ನಾಡ ಮತ್ತು

ಸತಾರ ದೇವಾಲಯ ಮತ್ತು ಚೈತ್ಯಾಲಯಗಳನ್ನು ಕುರಿತು Sir Bartle Frere ಇವನು 1849 ರಲ್ಲಿ ಮೊದಲ ಬಾರಿಗೆ ಬರೆದನು. ಇವರೆಲ್ಲರೂ ಉತ್ತರ ಕರ್ಣಾಟಕದ ಕಟ್ಟೋಣಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ.

ಮೊಗಲರ ಕಾಲದ ಕಟ್ಟಡಗಳು ಮತ್ತು ವಾಸ್ತುಶಿಲ್ಪವನ್ನು ಕುರಿತಾದ ಸಚಿತ್ರ ಸಹಿತವಾಗಿ ನಾಲ್ಕು ಕಾಂಡಗಳ ಗ್ರಂಥವನ್ನು Edmund W. Smith ಇವನು 'Moghul Architecture' ಎಂದು ಬರೆದು ಪ್ರಕಟಿಸಿದನು. Folio ಪುಟಗಳ ಮತ್ತು ಒಣ್ಣಚಿತ್ರಗಳಿಂದ ಕೂಡಿದ ಈ ಗ್ರಂಥ ಕಾಂಡಗಳು ಆಕರ್ಷಕ ವಾಗಿವೆ. ಮದ್ರಾಸು ಸರಕಾರದ Art Committee ಇವರು ದಕ್ಷಿಣ ಹಿಂದೂ ಸ್ಥಾನದ ಮತ್ತು ಬರ್ಮಾ ದೇಶದ ಲಲಿತಕಲೆ ಮತ್ತು ಶಿಲ್ಪಕಲೆಗಳಿಗನ್ವಯವಾದ ಎಲ್ಲಾ ವಸ್ತುಗಳ ಚಿತ್ರಗಳನ್ನು ಸಂಪಾದಿಸಿದ ಬಣ್ಣಚಿತ್ರಗಳ ದೊಡ್ಡ ಗ್ರಂಥ ವೊಂದು 1886 ರಲ್ಲಿ ಲಂಡನ್ನಿನ Autotype Company ಇವರಿಂದ ಪ್ರಕಟ ವಾಯಿತು.

ಇದೇ ರೀತಿ ಬಂಗಾಳ ಮತ್ತು ಬೊಂಬಾಯಿ ಆಧಿಪತ್ಯಗಳ ಸರಕಾರವೂ ವಾಸ್ತುಶಿಲ್ಪದ ಬಗ್ಗೆ ಇನ್ನೂ ವಿಸ್ತೃತವಾದ ಚಿತ್ರಗ್ರಂಥಗಳನ್ನು ಪ್ರಕಟಿಸಿದುವು. ಭಾರತ ಸರಕಾರದ Archaeological Survey of India ಇದರ ಮೂಲಕವಾಗಿ ಕಳೆದ ಶತಮಾನಾಂತ್ಯದಲ್ಲಿ E. B. Havell ಇವನು ಆರ್ಯರ ಕಾಲದಿಂದ ಮೊದಲ್ಗೊಂಡು ಈ ದೇಶದ ವಾಸ್ತುಶಿಲ್ಪ, ಚಿತ್ರಕಲೆ, ಇತ್ಯಾದಿಗಳನ್ನು ಕುರಿತು 'the Indian Sculpture', 'Ideals of Indian Art', Study of Indo-Aryan Civilization' ಇತ್ಯಾದಿ ಸಚಿತ್ರ ಸಹಿತ folio ಪುಟಗಳ ಗ್ರಂಥಗಳನ್ನು ಪ್ರಕಟಿಸಿದನು. ಇದೇ ರೀತಿ ಭಾರತದ ಶಿಲ್ಪಕಲೆಯ ಸಮಗ್ರ ವಿಷಯಗಳನ್ನೊಳಗೊಂಡ ಗ್ರಂಥಗಳು ಸುಮಾರು ಐವತ್ತು folio ಪುಟಗಳ ಗ್ರಂಥಕಾಂಡಗಳಿಗೂ ಮಿಕ್ಕಿ Dr. Alex Rea ಇವನಿಂದ ಸಂಪಾದಿತವಾಗಿ ಪ್ರಕಟವಾಯಿತು. ಮದ್ರಾಸು ಸರಕಾರದಲ್ಲಿ ದುಡಿಯುತಿದ್ದ ಇವನು ಚಾಳುಕ್ಯರ ಕಾಲದ ವಾಸ್ತುಶಿಲ್ಪದ ಬಗ್ಗೆ ಪ್ರತ್ಯೇಕ ಗ್ರಂಥಕಾಂಡಗಳನ್ನು ಹೊರತಂದನು. ಹೀಗೆ E. B. Havell, Edmand Smith, Alex Rea ಮೊದಲಾದವರು ಕೈಗೊಂಡ ಕೆಲಸವನ್ನು ಈ ಶತಮಾನದ ಪ್ರಾರಂಭದಲ್ಲಿ Sir John Marshall ಇವನು ಇನ್ನಷ್ಟು ಉತ್ಸಾಹದಿಂದ ಮುಂದುವರಿಸಿದನು.

**೧೫. ಸರ್ ವಿಲಿಯಂ ಹಂಟರ್* ಇವನು ಹಿಂದೂಸ್ಥಾನದಲ್ಲಿ :—**

ಕ್ರಿ ಶ. 1870 ರ ಕಾಲದಲ್ಲಿ ಭಾರತ ಸರಕಾರದ ಪ್ರಾಕ್ತನ ಪರಿಶೋಧನಾ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದನು ಬೋಧಿಸತ್ವ, ಬೌದ್ಧಮತ ಇತ್ಯಾದಿಗಳನ್ನು ಕುರಿತು ಹಲವು ಲೇಖನಗಳನ್ನು Asiatic Journal ಇದರಲ್ಲಿ ಬರೆಯುತಿದ್ದ ಮತ್ತು ಈ ದೇಶದ ಐತಿಹ್ಯಗಳನ್ನು ಸಂಪಾದಿಸಿ ಸಚಿತ್ರ ಸಮೇತವಾದ folio ಪುಟಗ

* ಇವನ ಭಾವ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಳಲ್ಲಿ ನಾಲ್ಕು ಗ್ರಂಥಕಾಂಡಗಳನ್ನು ಪ್ರಕಟಿಸಿದನು. Sir Alex Cunningham ಇವನು ಮತ್ತೊರ್ವ ಸಂಶೋಧಕನೆಂಬುದನ್ನು ಹಿಂದೆಯೇ ಹೇಳಲಾಗಿದೆ. ಅವನ ಆದರ್ಶವನ್ನನುಸರಿಸಿ ಮತ್ತು ಅವನ ನಂತರ ಅದೇ ಅಧಿಕಾರ ಸ್ಥಾನಕ್ಕೇರಿ ಅಪಾರ ಸಂಶೋಧನಾ ವ್ಯಾಸಂಗವನ್ನು ನಡೆಸಿದ ಇನ್ನೊರ್ವ ಗಣ್ಯ ವಿದ್ವಾಂಸನು William Wilson Hunter* ಇವನು.

W. W. Hunter ಇವನು ಕ್ರಿ. ಶ. 1840 ರಲ್ಲಿ ಸ್ಕಾಟ್ಲೆಂಡಿನಲ್ಲಿ ಜನಿಸಿದನು. ಗ್ಲಾಸ್ಗೋ ವಿಶ್ವವಿದ್ಯಾಲಯದಿಂದ ತನ್ನ 15ನೇ ವರ್ಷ ಪ್ರಾಯದಲ್ಲಿಯೇ ಪದವೀಧರನಾಗಿ ಹೊರಬಂದು ಅನಂತರ ಲ್ಯಾಟಿನ್, ಗ್ರೀಕ್, ಸಂಸ್ಕೃತ ಮೊದಲಾದ ಭಾಷೆಗಳಲ್ಲೂ ಪ್ರಾವಿಣ್ಯವನ್ನು ಸಂಪಾದಿಸಿ ಆ ಕಾಲದ ಒರ್ವ ಮೇಧಾವಿಯಾದ ವಿದ್ಯಾತಜ್ಞನೆಂದು ಪ್ರಸಿದ್ಧನಾದನು. 1858 ರಿಂದ ಇವನು ಹಲವು ಸಾಹಿತ್ಯ ಗ್ರಂಥಗಳನ್ನು ಬರೆಯಲಾರಂಭಿಸಿದನು. 'The Old Missionary' ಮತ್ತು 'Dictionary of non-Aryan Languages' ಎಂಬೀ ಗ್ರಂಥಗಳನ್ನು ಬರೆದು ಸರ್ವರ ದೃಷ್ಟಿಯನ್ನೂ ತನ್ನೆಡೆಗೆ ಸೆಳೆದಿದ್ದನು. ಇವನು ಹಿಂದೂಸ್ಥಾನಕ್ಕೆ ಬಂದನಂತರ 'A short History of Indian People' ಇದನ್ನು ಬರೆದು ಈ ದೇಶದ ಪ್ರಾಕ್ತನ ವಿಚಾರಗಳಲ್ಲಿ ತನಗಿದ್ದ ಆಸಕ್ತಿಯನ್ನು ಪ್ರದರ್ಶಿಸಿದನು. ಅವನ 'Comparative Dictionary' ಇದಕ್ಕೆ ಏಷ್ಯಾ ಮತ್ತು ಯುರೋಪು ಖಂಡಗಳ ಸುಮಾರು 134 ಭಾಷೆಗಳಿಂದ ವಿವಿಧ ಶಬ್ದಗಳನ್ನು ಹೆಕ್ಕಿ ಒಂದು ಉತ್ತಮ ಭಾಷಾಶಾಸ್ತ್ರ ಗ್ರಂಥವಾಗಿ ರಚಿಸಿದನು. 'England's work for India' ಎಂಬ ಅವನ ಇನ್ನೊಂದು ಗ್ರಂಥವು ಇಂಗ್ಲೆಂಡಿನ ಪ್ರಧಾನಮಂತ್ರಿ W. Gladstone ಇವನ ಪ್ರಶಂಸೆಗೂ ಪಾತ್ರವಾಯಿತು.

ಕೇವಲ ತನ್ನ 28ನೇ ವರ್ಷ ಪ್ರಾಯದಲ್ಲಿಯೇ 'Annals of Rural Bengal' ಎಂಬುದನ್ನು ಬರೆದಿದ್ದು ಅದು ಇಂಗ್ಲಿಷ್ ಸಾಹಿತ್ಯದಲ್ಲಿಯೇ ಅತ್ಯುತ್ತಮವಾದ ಗ್ರಂಥವೆಂದು ಪರಿಗಣಿಸಲ್ಪಟ್ಟಿದ್ದಿತು. ಆಗ ಭಾರತದ Secretary-of-State ಆಗಿದ್ದ Lord Ripon ಇವನೂ ಇಂಗ್ಲೆಂಡಿನ ಶಾಸನ ಸಭೆಯು ಭಾರತದ ಅಭಿವೃದ್ಧಿಗಾಗಿ ಎಷ್ಟರಮಟ್ಟಿಗೆ ಶ್ರಮಿಸಿದೆಯೆಂಬುದನ್ನು ಕುರಿತು ಒಂದು ಗ್ರಂಥವನ್ನು ಬರೆಯುವಂತೆ W. W. Hunter ಇವನನ್ನು ಕೇಳಿಕೊಂಡನು. ಕ್ರಿ. ಶ. 1868 ರಿಂದ ಮೊದಲೊಂಗ್ಗಡು ಇವನು ಹಿಂದೂಸ್ಥಾನದಲ್ಲಿ ಒರ್ವ ಪ್ರಬಲ ವ್ಯಕ್ತಿಯಾಗಿ ಇದ್ದನು. ಭಾರತ ಸರಕಾರವು ಅವನನ್ನು Director–General of Statistics ಈ ಸ್ಥಾನಕ್ಕೆ ಏರಿಸಿ ಅವನಿಂದ ಈ ದೇಶದ 'Gazetteers' ಗಳನ್ನು ಬರೆಯಿಸಲು ಶೀರ್ಮಾನಿಸಿತು.

ಈ ದೇಶದಿಂದ ಹಿಂದಿರುಗಿದನಂತರ W. W. Hunter ಇವನು ಲಂಡನ್ನಿನ Times ಪತ್ರಿಕಾ ಖಚೇರಿಯಲ್ಲಿ ಒರ್ವ ಪ್ರಧಾನ ಸಂಪಾದಕನಾಗಿದ್ದನು. ಕೇವಲ

* ಇವನ ಭಾವಚಿತ್ರವನ್ನು ಬೇರೆಡೆ ಕೊಡಲಾಗಿದೆ.

ತನ್ನ 59ನೇ ವರ್ಷ ಪ್ರಾಯದಲ್ಲಿ ಕ್ರಿ. ಶ. 1899 ರಲ್ಲಿ ಅವನು ಮೃತನಾದನು. ಇವನ ಸ್ಮಾರಕವಾಗಿ ಲಂಡನ್ ಮತ್ತು ಕಲ್ಕತ್ತಾದ ಭಾರತೀಯ ಗ್ರಂಥಭಂಡಾರಗಳು ವಿಸ್ತರಿಸಲ್ಪಟ್ಟವು. ಒಕ್ಸ್‌ಫರ್ಡ್‌ನ Indian Institute ಇದರ ಅಭಿವೃದ್ಧಿಗಾಗಿ ಶ್ರಮಿಸಿದ W. W. Hunter ಇವನ ಕಂಚಿನ ವಿಗ್ರಹವೊಂದೂ ಅಲ್ಲಿ ಇಡಲ್ಪಟ್ಟಿತು.

## ೧೬. ಸರ್ ವಿಲಿಯಂ ಹಂಟರ್—ಇವನ ‘ ಗೆಜಿಟಯರ್ ’ ಗಳು

Sir W. W. Hunter ಇವನು ‘ Indian Empire ‘ ಎಂಬ 748 folio ಪುಟಗಳ ಮಹಾಗ್ರಂಥವು 1886 ರಲ್ಲಿ ಪ್ರಕಟವಾಯಿತು. ಇದರಲ್ಲಿ ಅವನು ಈ ದೇಶದ ಇತಿಹಾಸ, ಜನಜೀವನ, ಕೃಷಿ, ಉತ್ಪಾದನೆ ಮೊದಲಾದುವನ್ನು ಕುರಿತು ಅಪಾರ ಜ್ಞಾನವನ್ನು ಸಂಪಾದಿಸಿದ್ದನೆಂದು ವ್ಯಕ್ತವಾಗುತ್ತದೆ. ಇದರೊಡನೆಯೇ ಅವನು ‘ Rise of British Dominion in India ’ ಎಂಬ ಸುಮಾರು 3,000 demy ಪುಟಗಳ ಮಹಾಗ್ರಂಥವು ಐದು ಕಾಂಡಗಳಲ್ಲಿ ಪ್ರಕಟವಾಗಲು ಇದರಿಂದ W. W. Hunter ಬಹು ಮೇಧಾವಿಯೂ ರಾಜಕಾರಿಣಿಯೂ ಎಂಬುದು ಸ್ಪಷ್ಟವಾಯಿತು. ಈ ರೀತಿ ಪ್ರಸಿದ್ಧ ಇತಿಹಾಸಕಾರನೂ ಆಡಳಿತ ತಜ್ಞನೂ ಆದ Col. Meadows Taylor ಇವನು Sir Hunter ಇವನನ್ನು ಕುರಿತು ಈ ರೀತಿ ಹೇಳಿದನು :—

“ I derived more knowledge of Indian life and native character from him (Sir Hunter) than any other Anglo-Indian writer. His works have given zest and reality to the daily routine of hundreds of young civilians and soldiers teaching them to study facts around them. ”

Sir William Hunter ಇವನು ಸಿಮ್ಲಾದಲ್ಲಿ ಕುಳಿತು “ A short History of Indian People ” ಇದನ್ನು ಬರೆದಾಗ ತನ್ನ ಪತ್ನಿಗೆ ಬರೆದ ಒಂದು ಪತ್ರದಲ್ಲಿ ಹೀಗೆಂದನು :—

“ You remember how despondent I was at Simla, how sorely I felt the hardship of squeezing the history of a continent during 5000 years into 650 pages ?”

Sir Hunter ಇವನ ಚಿರಸ್ಮರಣೀಯವಾದ ಕೆಲಸವೆಂದರೆ ಅವನು 3000 ಪುಟಗಳಿಗೂ ಮೇಲ್ಪಟ್ಟು ಲೇಖನಗಳನ್ನು Imperial Gazetteer of India ಇದಕ್ಕಾಗಿ ಬರೆದುದೇ ಆಗಿದೆ. ಸುಮಾರು 60,000 foolslcap ಪುಟಗಳಿಗೂ ಮಿಾರಿ 128 ಗ್ರಂಥಕಾಂಡಗಳಾಗಿ ಹೊರಟ ಈ ಅದ್ಭುತ ವಿಚಾರ ಕೋಶವು ಈ ದೇಶದ ಸರ್ವ ವಿಷಯಪನ್ನೂ ಪ್ರತಿಪಾದಿಸುವ ಮಹಾ ಗ್ರಂಥವಾಯಿತು. ಈ ದೇಶದ ವಿವಿಧ ಭಾಗಗಳ ಭೂವಿವರಣೆಯನ್ನು ಪ್ರತಿಪಾದಿಸುವ ಭೂಪಟಗಳು, ಚಿತ್ರಗಳು, ಚರಿತ್ರೆ, ಮತ್ತು ಭೌಗೋಲಿಕ ವಿವರಣೆಗಳು, ಜನಜೀವನ, ಕಲೆ, ಇತ್ಯಾದಿಗಳೆಲ್ಲವನ್ನೂ ಈ ಗೆಜಿಟಯರುಗಳಲ್ಲಿ ತುಂಬಿದ್ದು ಆ ಎಲ್ಲಾ ಗ್ರಂಥಕಾಂಡ

ಗಳು 1881 ರ ಒಳಗಾಗಿ ಪ್ರಕಟವಾದುವು. ಇದರ ಕೆಲವು ಭಾಗಗಳು ಅನಂತರ ಜರ್ಮನ್ ಭಾಷೆಗೂ ಇಳಿಸಲ್ಪಟ್ಟುವು. Sir Hunter ಇವನು ಕರ್ಣಾಟಕದ ಇತಿಹಾಸದ ಬಗ್ಗೆಯಾಗಿಯೂ ಆಸಕ್ತಿ ವಹಿಸಿದ್ದಾನೆ. 1876 ಅಲ್ಲಿ ಬೆಂಗಳೂರಿಗೆ ಸಂದರ್ಶನವಿತ್ತು Benjamin Rice ಇವನು ಕೈಗೊಂಡ ಪ್ರಾಕ್ತನ ಪರಿಶೋಧನೆ ಇಲಾಖೆಯ ಕಾರ್ಯಭಾರವನ್ನು ಒಪ್ಪಿ ಪ್ರಶಂಸಿಸಿ ತಕ್ಕ ಸಲಹೆಗಳನ್ನೂ ಇತ್ತನು.

ಭಾರತ ಸರಕಾರದಲ್ಲಿ ಉನ್ನತ ವರ್ಗದ ಅಧಿಕಾರಿಯಾಗಿದ್ದ ಮತ್ತು ವಿದ್ಯಾತಜ್ಞನಾಗಿದ್ದ Sir W. W. Hunter ಇವನನ್ನು ದೇಶದ ವಿದ್ಯಾ ಯೋಜನೆಯನ್ನು ಪರಾಮರ್ಶಿಸುವ ಸಮಿತಿಯ ಅಧ್ಯಕ್ಷನನ್ನಾಗಿ ನೇಮಿಸಿದಾಗ ಅವನು ವಿದ್ಯಾಪ್ರಗತಿಗೆ ಸೂಚಿಸಿದ ಸಲಹೆಗಳು ಸರಕಾರದಿಂದ ಅಂಗೀಕೃತವಾಗಿ ಜಾರಿಗೆ ಬಂದುವು. ಸರ್ವರ ಪ್ರಶಂಸೆಗೂ ಪಾತ್ರವಾದ ಮತ್ತು ಸುದೀರ್ಘವಾಗಿದ್ದ ಈ Hunter Commission ಇದರ ವರದಿಯಲ್ಲಿ ವಿದ್ಯೆಯ ಗುರಿ ವಿದ್ಯಾರ್ಥಿಯ ಭವಿಷ್ಯ ಇತ್ಯಾದಿಗಳ ಬಗ್ಗೆ ಹೇಳುತ್ತಾ ಅವನು ಒಂದೆಡೆ ಹೀಗನ್ನುತ್ತಾನೆ:—

"The seeds of man's destiny are derived from his parents; and by the education and circumstances of his boyhood they are fostered into shrubs. In early manhood the shrubs put forth its boughs in leafy luxuriance and derives its bend from its own thinking and conduct. In middle life the wood becomes hardened and inflexible and the tree must stand up to face the storms of heaven in the position which it has taken, and drop in to the earth the seeds of another generation's destiny......Let the man of a mercurial fancy and tender sentiment beware how he plans for himself twelve or twenty years of the scholar's study or the lawyer's desk ......"

**೧೭. ಜೇಮ್ಸ್ ಬರ್ಜೆಸ್ * ಇವನ ಜೀವನ ಪರಿಚಯ :—**

ಬೆಟ್ಟಗುಡ್ಡಗಳಿಂದ ಕೂಡಿ ರಮಣೀಯ ನಂದನವನದಂತಿರುವ ಸ್ಕಾಟ್ಲೆಂಡ್‌ದೇಶವು ಹಲವು ಶ್ರೇಷ್ಠ ಪುರುಷರನ್ನು ಹಡೆದು ಪ್ರಸಿದ್ಧವಾಗಿದೆ. ಅವರಲ್ಲಿ ಕ್ರಿ. ಶ. 1832ರ ಆಗಸ್ಟ್ 14ರಲ್ಲಿ ಜನಿಸಿದ Dr. James Burgess ಇವನೂ ಒಬ್ಬನು. ಗ್ಲಾಸ್ಗೋ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿದ್ದಾಗ ಗಣಿತ ಶಾಸ್ತ್ರದಲ್ಲಿ ವಿಶೇಷ ಪ್ರವೀಣತೆಯನ್ನು ಪ್ರದರ್ಶಿಸಿದ್ದನು. ಎಡಿನ್‌ಬರೋ ಸಾಂಸ್ಕೃತಿಕ ಸಂಸ್ಥೆಯು ಇವನ ಗಣಿತ ಶಾಸ್ತ್ರ ಪಾಂಡಿತ್ಯಕ್ಕೆ Doctorate ಪದವಿಯನ್ನಿತ್ತು ಗೌರವಿಸಿತು. 1855 ರಲ್ಲಿ ಹಿಂದೂ ದೇಶಕ್ಕೆ ಬಂದ Dr. J. Burgess ಇವನು ಕಲ್ಕತ್ತಾದ Doveton College ನಲ್ಲಿ ಗಣಿತಶಾಸ್ತ್ರ ಪ್ರಾಧ್ಯಾಪಕನಾಗಿ ನೇಮಿತನಾದನು. ಇಲ್ಲಿ ಅವನು

---

* ಇವನ ಭಾವಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಸಂಸ್ಕೃತ, ಪರ್ಷಿಯನ್, ಹಿಂದೂಸ್ಥಾನೀ ಮತ್ತು ಬಂಗಾಳೀ ಭಾಷೆಗಳನ್ನು ಕಲಿತು ಈ ದೇಶದ ಸಾಹಿತ್ಯ ಮತ್ತು ಇತಿಹಾಸಗಳಲ್ಲಿ ಅಭಿರುಚಿಯನ್ನು ತೋರಿಸಿದನು. 1861 ರಲ್ಲಿ ಅವನು ಬೊಂಬಾಯಿಯ ಫಾರ್ಷೀ ವಿದ್ಯಾಲಯದ ಪ್ರಾಧ್ಯಾಪಕನಾಗಿ ವರ್ಗಾಯಿಸಲ್ಪಟ್ಟನು. ಇಲ್ಲಿಂದ ನಂತರ ಅವನ ಬಹುಮುಖವಾದ ಸಾಹಿತ್ಯ ಮತ್ತು ವಾಸ್ತುಶಿಲ್ಪ ಸಂಶೋಧನಾ ಸೇವೆಯು ಪ್ರಾರಂಭವಾಯಿತು.

1868 ರಲ್ಲಿ ಬೊಂಬಾಯಿ ಸರಕಾರವು James Burgess ಇವನನ್ನು ಭೌಗೋಲಿಕ ಶಾಖೆಯ ಅಧಿಕಾರಿಯಾಗಿ ನೇಮಿಸಿತು. ಅಂದಿನಿಂದ ಅವನು ಆ ಅಧಿಪತ್ಯದ ಉದ್ದಗಲಕ್ಕೂ ಸಂಚರಿಸಿ ನಾಡಿನ ಐತಿಹ್ಯದ ದೀರ್ಘಾನ್ವೇಷಣೆಯನ್ನೇ ನಡೆಸಿದನು. 1874 ರಲ್ಲಿ ಅವನು ಪಶ್ಚಿಮ ಭಾರತದ ಪ್ರಾಕ್ತನ ಪರಿಶೋಧನಾ ಇಲಾಖೆಯ ಮುಖ್ಯಾಧಿಕಾರಿಯಾಗಿ ನೇಮಕವಾದನು. ಈ ಹುದ್ದೆಯಲ್ಲಿ ಅವನು ತೋರಿಸಿದ ಉತ್ಸಾಹ ಮತ್ತು ದಕ್ಷತೆಯು ಅವನನ್ನು ಇನ್ನೂ ಮೇಲಿನ ಸ್ಥಾನಕ್ಕೆ ಏರಿಸಿತು. ಹಿಂದೂಸ್ಥಾನದ ಪ್ರಾಕ್ತನ ಪರಿಶೋಧನಾ ಖಾತೆಯ Director-General Sir Cunningham ಇವನು 1886ರಲ್ಲಿ ನಿವೃತ್ತನಾದಾಗ ಆ ಸ್ಥಳಕ್ಕೆ James Burgess ಇವನನ್ನು ಸರಕಾರವು ಆರಿಸಿತು.

1889 ರಲ್ಲಿ ಅವನು ತನ್ನ ಹುದ್ದೆಯಿಂದ ನಿವೃತ್ತನಾಗಿ ಸ್ವದೇಶಕ್ಕೆ ಹಿಂದಿರುಗಿ ಎಡಿನ್‌ಬರೋ ನಗರದಲ್ಲಿ ನೆಲೆಸಿದನು. ಅಷ್ಟರಲ್ಲಿ ಅವನೋರ್ವ ಗಣ್ಯ ವಿದ್ವಾಂಸನೆಂಬ ಕೀರ್ತಿಯು ಯೂರೋಪಿನಲ್ಲೆಲ್ಲಾ ಹಬ್ಬಿತ್ತು. Imperial Russian Archaeological Society, Batavian Literary Society ಮೊದಲಾದ ಹಲವು ಸಂಸ್ಥೆಗಳು J. Burgess ಇವನನ್ನು ಗೌರವ ಸದಸ್ಯನನ್ನಾಗಿ ಆರಿಸಿ ಪುರಸ್ಕರಿಸಿದುವು. ಇನ್ನೂ ಹಲವು ಸಾಹಿತ್ಯ ಸಂಸ್ಥೆಗಳೂ ಬ್ರಿಟಿಷ್ ಸರಕಾರವೂ ಅವನಿಗೆ ಉಚ್ಚ ದರ್ಜೆಯ ಬಿರುದುಗಳನ್ನಿತ್ತು ಗೌರವಿಸಿದುವು. ತನ್ನ ಕಡೇ ದಿನದ ವರೆಗೂ ವಿದ್ವತ್ಪೂರ್ಣವಾದ ಗ್ರಂಥಗಳನ್ನೂ ಲೇಖನಗಳನ್ನೂ ಬರೆದು ಈ ದೇಶಕ್ಕೆ ಕಳುಹಿಸುತ್ತಲೇ ಇದ್ದನು. ಅವನ ಸಂಶೋಧನಾ ಗ್ರಂಥಗಳ ಸಂಖ್ಯೆಯು ಇಪ್ಪತ್ತರಲ್ಲಿ ಐವತ್ತಕ್ಕೂ ಮಿಕ್ಕಿದ್ದಿತು. Dr. Burgess ಇವನು 1916 ರ ಅಕ್ಟೋಬರ್ 3 ನೇ ದಿನ ತನ್ನ 85 ನೇ ವರ್ಷ ಪ್ರಾಯದಲ್ಲಿ ವಿಧಿವಶನಾದನು.

**೧೮. ಬರ್ಜೆಸ್ ಇವನು ಪಶ್ಚಿಮ ಹಿಂದೂಸ್ಥಾನವನ್ನು ಅನ್ವೇಷಿಸಿದನು :—**

ಕ್ರಿ. ಶ. 1868 ರಿಂದ 1886ರ ವರೆಗೆ Dr. James Burgess ಇವನು ಅಂದಿನ ಬೊಂಬಾಯಿ ಆಧಿಪತ್ಯ ಮತ್ತು ಇಡೀ ಪಶ್ಚಿಮ ಭಾರತವನ್ನು ಸ್ವತಃ ಸಂದರ್ಶಿಸಿ ಎಲ್ಲಾ ಚಾರಿತ್ರಿಕ ಸ್ಥಳಗಳ ಐತಿಹ್ಯವನ್ನು ಸಂಗ್ರಹಿಸಿದನು. ಎಲ್ಲೋರ, ಅಜಂತಾ ಗುಹಾಂತರ್ಗತ ದೇವಾಲಯ, ಎಲಿಫೆಂಟಾ, ಕನ್ಹೇರಿ, ಅಹಮ್ಮದಾಬಾದು, ನಾಸಿಕ್, ಠಾಣಾ, ಸತಾರಾ, ಪೂನಾ ಮೊದಲಾದ ಸ್ಥಳಗಳಲ್ಲದೆ ಈ ಭಾಗದ ಎಲ್ಲಾ ಜೈನ ಬಸದಿಗಳು, ಬೌದ್ಧ ಗುಹೆಗಳು, ಅಮರಾವತಿ ಸ್ತೂಪ, ಗಾಂಧಾರ ವಾಸ್ತುಶಿಲ್ಪ ಇತ್ಯಾದಿಗಳನ್ನು ವೈಜ್ಞಾನಿಕವಾಗಿ ಪರಿಶೀಲಿಸಿದನು.

James Burgess ಇವನ ಗ್ರಂಥಗಳಲ್ಲಿ Rock Temples of Western India ಎಂಬುದು ಪ್ರಸಿದ್ಧವಾಗಿದೆ. J. Fergusson ಇವನೊಡನೆ ಸೇರಿ "The Cave Temples of India" ಇದನ್ನು ಬರೆದನು. Prof. George Buhler ಇವನೊಡನೆ ಸೇರಿ ಜೈನ ಸಾಹಿತ್ಯ, ಜೈನ ಧರ್ಮ ಮತ್ತು ಜೈನ ಶಾಸನಗಳನ್ನು ಕುರಿತು ಮಾತ್ರವಲ್ಲದೆ ಇಡೀ ಜೈನ ವಾಙ್ಮಯದ ಪರಿಚಯವನ್ನು ದೇಶಕ್ಕೆ ಮಾಡಿಕೊಟ್ಟನು. ಇಡೀ ಭಾರತದಲ್ಲಿ ಸುಮಾರು ಐವತ್ತಕ್ಕೂ ಮೀರಿದ ವಿವಿಧ ಬಗೆಯ ಶಿಲಾ ಕಟ್ಟೋಣಗಳು ಇವೆಯೆಂಬುದನ್ನು ಈ ದೇಶದ ಶಿಲ್ಪ ಕಲಾ ವೈವಿಧ್ಯಕ್ಕನುವಾಗಿ ವಿಭಾಗಿಸಿದನು. ಸುಮಾರು 3000 ಕ್ಕೂ ಹೆಚ್ಚಾಗಿ ಆ ಎಲ್ಲಾ ಕಟ್ಟೋಣಗಳ ಚಿತ್ರಗಳನ್ನು ಸಂಗ್ರಹಿಸಿದನಲ್ಲದೆ ಅವೆಲ್ಲವನ್ನೂ ಅವನ Archaeological Excavations ಗ್ರಂಥ ಕಾಂಡಗಳಲ್ಲಿ ಮುದ್ರಿಸಿ ಅವುಗಳ ಐತಿಹ್ಯವನ್ನು ವಿವರಿಸಿದನು. J. Fergusson ಇವನ 'History of Indian & Eastern Architechure' ಈ ಗ್ರಂಥವನ್ನು ಪರಿಷ್ಕರಿಸಿ ತಾನು ಸಂಗ್ರಹಿಸಿದ ಹಲವು ವಿಷಯಗಳನ್ನು ಸೇರಿಸಿ ಇಂಗ್ಲೆಂಡಿನಲ್ಲಿ ಪುನರ್ಮುದ್ರಿಸಿದನು.

James Burgess ಇವನು ತನ್ನ ಸ್ವದೇಶಕ್ಕೆ ಹೋದನಂತರ ಗುರ್ಜರ ದೇಶದ ವಾಸ್ತುಶಿಲ್ಪ, ಅಹ್ಮದಾಬಾದಿನ ಬೌದ್ಧಕಲೆ, ಆಧುನಿಕ ಭಾರತದ ಚರಿತ್ರೆ (1494–1894) ಇತ್ಯಾದಿ ಗ್ರಂಥಗಳನ್ನು ಬರೆದನು. ವಿಜಯನಗರ ರಾಜ್ಯದ ಕಾಲಕ್ಕೆ ಸೇರಿದ ಪಶ್ಚಿಮ ಕರಾವಳಿಯ ಶಾಸನಗಳೆಲ್ಲವನ್ನೂ ಆಧುನಿಕ ರೀತಿಯಲ್ಲಿ ಬರೆದು ಕಾಗದಕ್ಕಿಳಿಸಿದನು, "ಪಾಲೀ, ಸಂಸ್ಕೃತ ಮತ್ತು ಹಳೆಗನ್ನಡ ಶಾಸನಗಳು" ಎಂಬುದಾಗಿ ಬರೆದ ಇವನ ಗ್ರಂಥವು ಪ್ರಾಕ್ತನ ಪರಿಶೋಧನೆಯಲ್ಲಿ ಇವನು ಪಡೆದ ವಿದ್ವತ್ತನ್ನು ಪ್ರದರ್ಶಿಸುತ್ತದೆ.

ಹೈದರಾಬಾದು ಮತ್ತು ಬೊಂಬಾಯಿ ಅಧಿಪತ್ಯಕ್ಕೆ ಸೇರಿದ ಕನ್ನಡ ಜಿಲ್ಲೆಗಳನ್ನು ಸಾಮೂಲಾಗ್ರವಾಗಿ ಸಂಚರಿಸಿ ಅಲ್ಲಿ ಇರುವ ಎಲ್ಲಾ ಕಟ್ಟೋಣಗಳನ್ನು ಕುರಿತು ವಿವರಿಸಿದ್ದಾನೆ. ಬಿದರೆ, ಕಾಲಡ್ಗಿ, ಬೆಳಗಾವಿ, ಬಿಜಾಪುರ ಇತ್ಯಾದಿ ಸ್ಥಳಗಳಲ್ಲಿದ್ದ ಶಿಲಾಶಾಸನಗಳನ್ನೆಲ್ಲಾ ಪರೀಕ್ಷಿಸಿದನು. ಇವನ Kanarese Disticts of Bombay Presidency" ಎಂಬ ಗ್ರಂಥವು 1896 ರಲ್ಲಿ ಪ್ರಕಟವಾಯಿತು. ಬೇಲೂರು ಮತ್ತು ಹಳೇಬೀಡು ದೇವಾಲಯಗಳು J. Burgess ಇವನಿಗೆ "the most remarkable in India" ಎಂಬುದಾಗಿ ಕಂಡುಬಂತು. ಬಿದರೆ ಮತ್ತು ಗುಲ್ಬರ್ಗಾದಲ್ಲಿರುವ ಕೋಟೆ ಕೊತ್ತಲಗಳನ್ನೂ ಪ್ರಾಚೀನ ಮತ್ತು ನಡುಗಾಲದ ದೇವಾಲಯ ಮತ್ತು ಮಸೀದಿಗಳನ್ನು ಕುರಿತು ಸಚಿತ್ರವಾಗಿ ಪ್ರತ್ಯೇಕ ಗ್ರಂಥಗಳನ್ನು ಬರೆದನು. ಈ ಎಲ್ಲಾ ಕಟ್ಟೋಣಗಳನ್ನು ಹಾಳಾಗದಂತೆ ರಕ್ಷಿಸಬೇಕೆಂದು ಆಗಿಂದಾಗ್ಗೆ ಸರಕಾರಕ್ಕೆ ಸಲಹೆಗಳನ್ನಿತ್ತನು. ಪಟ್ಟದಕಲ್ಲು ವಿರೂಪಾಕ್ಷ ದೇವಾಲಯದ ವಿಷಯವಾಗಿ ಬರೆಯುತ್ತಾ ಹೀಗಂದುದು ನಮ್ಮ ಜನರ ಕಣ್ತೆರೆಯಿಸಬೇಕಾಗಿದೆ:—

"........Though not the oldest, this is the most important as well as the largest temple in Kannada districts. It is the only one now in use in Pattadkal and the others, mostly of great age and interest, are used as dwellings and cattle sheds."

**೧೯. ಜೇಮ್ಸ್ ಬರ್ಜೆಸ್ ಇವನ "ಇಂಡ್ಯನ್ ಎಂಟಿಕ್ವೆರಿ" ಪತ್ರಿಕೆ:—**

Dr. James Burgess ಇವನ ಪ್ರಾಮುಖ್ಯವಾದ ಕೆಲಸಗಳಲ್ಲಿ ಒಂದು ಅವನು ಕ್ರಿ. ಶ. 1872 ರಲ್ಲಿ ಬೊಂಬಾಯಿಯಲ್ಲಿ Indian Antiquary ಪತ್ರಿಕೆಯನ್ನು ಸ್ಥಾಪಿಸಿದ್ದೇ ಆಗಿದೆ, ಆಗ ಹಿಂದೂಸ್ಥಾನದಲ್ಲಿದ್ದ ಪಾಶ್ಚಾತ್ಯ ವಿದ್ವಾಂಸರು ತಮ್ಮ ಸಂಶೋಧನಾ ವರದಿಗಳನ್ನೆಲ್ಲಾ ಲೇಖನಗಳ ರೂಪದಲ್ಲಿ ಕಲ್ಕತ್ತಾ ಮತ್ತು ಬೊಂಬಾಯಿಯಲ್ಲಿದ್ದ Asiatic Society Journal, ಮದ್ರಾಸಿನ Literary Journal, ಕಲ್ಕತ್ತಾ Literary Review ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಆದರೂ ಆ ಪತ್ರಿಕೆಗಳಲ್ಲಿ ಪ್ರಾಕ್ತನ ವಿಚಾರಗಳಿಗೆ ಹೆಚ್ಚು ಸ್ಥಳ ವೀಯಲು ಅವಕಾಶವಿಲ್ಲದಿದ್ದ ಕಾರಣದಿಂದ ಆ ಕೊರತೆಯನ್ನು ಪರಿಹರಿಸಲು Indian Antiquary ಪತ್ರಿಕೆಯನ್ನು ಸ್ಥಾಪಿಸಿದನು. ಶ್ರೇಷ್ಠ ವಿದ್ವಾಂಸರಾದ Prof. Weber, Dr. Oldenburg, George Bubler, John Beams ಮೊದಲಾದವರು ತಮ್ಮ ವಿದ್ವತ್ಪೂರ್ಣವಾದ ಲೇಖನಗಳನ್ನು ಅದರಲ್ಲಿ ಸುರಿದರು. ಈ ನೂರಾರು ವಿದ್ವಾಂಸರ ಪೈಕಿ ಕೆಲವರು 500 folio ಪುಟಗಳಿಂದ 4000 ಪುಟಗಳಷ್ಟು ವಿಚಾರ ಸರಣಿಯನ್ನು ಒಬ್ಬೊಬ್ಬರಾಗಿಯೇ ಈ ಪತ್ರಿಕೆಯ ಮೂಲಕ ಹರಿಯಿಸಿದ್ದಾರೆ. ಈ ಪತ್ರಿಕೆಯ 1872ರ ಜನವರಿ ತಿಂಗಳ ಆ ಮೊದಲ ಸಂಚಿಕೆಯಲ್ಲಿ J. Burgess ಇವನು ಹೀಗೆ ಹೇಳಿದ್ದನು :—

"Judging from many private communications from all parts of India, it would appear that such a journal as the Indian Antiquary to supplement the journals of the various Asiatic Societies by directing the attention of its readers to the best articles, notes and memoranda as never find their way to the pages of these publications ......"

James Burgess ಇವನು 1872ರಿಂದ 1885 ರವರೆಗೂ Indian Antiquary ಪತ್ರಿಕೆಯ ಸಂಪಾದಕನಾಗಿದ್ದನು. ಅವನೊರ್ವನೇ ಈ ದೇಶದ ಸಾಹಿತ್ಯ, ಚರಿತ್ರೆ, ಶಿಲ್ಪಕಲೆ ಮೊದಲಾದುವುಗಳ ವಿಷಯವಾಗಿ ಬರೆದ ಲೇಖನಗಳು 500ಕ್ಕೂ ಮಿಕ್ಕಿ ಇದ್ದು ಆ ಪತ್ರಿಕೆಯ 5000 folio ಪುಟಗಳಷ್ಟು ಆಗಿವೆಯೆಂದರೆ ನಿಜಕ್ಕೂ ಇವನೊರ್ವ ಧೀಮಂತ ಲೇಖಕನೆಂದೆನ್ನಬಹುದು. ಅವನು ಈ ದೇಶದಿಂದ ಹೋಗುವಾಗ ಈ ಪತ್ರಿಕೆಯ ಸಂಪಾದಕತ್ವವನ್ನು J. F. Fleet ಇವನಿಗೆ ಒಪ್ಪಿಸಿದನು. ಅವನ ನಂತರ 1893 ರಿಂದ ಅದನ್ನು Richard C. Temple ಇವನು ಸಂಪಾದಕನಾಗಿ ನಡೆಸಿದನು. ಅಲ್ಲಿಂದ ನಂತರ ಹಲವು ವಿದ್ವಾಂಸರಿಂದ ಅದು

ಪೋಷಿಸಲ್ಪಟ್ಟು ಇಂದಿಗೂ ಒಂದು ಗಣನೀಯ ಪತ್ರಿಕೆಯಾಗಿ ಉಳಿದಿದೆ.

ಈ Indian Antiquary ಪತ್ರಿಕೆಯೊಂದೇ ಸಾಲದೆಂದು Dr. J. Burgess ಇವನು Epigraphia Indica ಎಂಬ ಇನ್ನೊಂದು ಪತ್ರಿಕೆಯನ್ನು Prof. Hultzsch ಮತ್ತು Dr. Fuhrer ಇವರ ಸಹಕಾರದಿಂದ ಸ್ಥಾಪಿಸಿದ್ದು ಅದು ಇನ್ನಷ್ಟು ಪ್ರಬಲವಾದ ಒಂದು ಶಾಸ್ತ್ರೀಯ ಪತ್ರಿಕೆಯಾಯಿತು. ಇದರ ಮೊದಲ ಸಂಚಿಕೆಯು 1892 ರಲ್ಲಿ ಹೊರಟಿತು. ಇದನ್ನು Prof. Buhler, Prof. Kielhorn, Dr. Jacobi ಮತ್ತು ಕೆಲವರು ತಮ್ಮ ಪರಿಪಕ್ವವಾದ ಬರೆವಣಿಗೆಯಿಂದ ಪೋಷಿಸಿದರು. ತನ್ನ ಹುಟ್ಟೂರಿನಲ್ಲಿದ್ದಾಗಲೂ James Burgess ಇವನ ಹಲವು ವಿಚಾರ ಪ್ರಚೋದಕವಾದ ಲೇಖನಗಳನ್ನು ತನ್ನ ಈ ಎರಡು ಪತ್ರಿಕೆಗಳಲ್ಲಿ ಮಾತ್ರವಲ್ಲದೆ ಯೂರೋಪಿನ ಹಲವು ಪತ್ರಿಕೆಗಳಲ್ಲೂ ಬರೆಯುತ್ತಲೇ ಇದ್ದನು. ಈ ದೇಶದ ಪ್ರಾಚೀನ ಐತಿಹ್ಯವನ್ನು ಪಾಶ್ಚಾತ್ಯ ದೇಶಗಳಿಗೆ ಪರಿಚಯ ಮಾಡಿ ಕೃತಾರ್ಥರಾದವರಲ್ಲಿ ಇವನೂ ಒರ್ವನು; ಹಾಗೂ ಒರ್ವ ಧನ್ಯ ವಿದ್ವಾಂಸ, ಸಾಹಿತಿ, ಸಂಶೋಧಕ, ಗಣಿತ ಮತ್ತು ಭೂಗೋಳ ಶಾಸ್ತ್ರಜ್ಞನು.

---

# ೭

" ಕಬ್ಬಿಗರೋದು ಗಬ್ಬವ ಹಾಡುಗಬ್ಬವ
ಕಬ್ಬದೊಳೊರೆವರಿವೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬಹೇಳಿಲೆ ಸರಸ್ವತಿಯೆ !
ಉಸುರೆಂಬ ಕರಗಸದಿಂದ ದೇಹಾತ್ಮರ
ಬೆಸುಗೆಯ ಬಿಡಿಸಿ ನೋಡಿದರೆ
ಮಸುಳದೆ ತೋರ್ಪ ಮಹಾತ್ಮ ನೀನೆನಗೊಳ್ಪ
ನೆಸಗು ನಿರಂಜನ ಸಿದ್ಧಾ !"

[ರತ್ನಾಕರ.]

ಕ್ರಿ. ಶ. ಹದಿನೆಂಟನೇ ಶತಮಾನದ ವರೆಗೂ ನಮ್ಮ ದೇಶದ ಜನಕ್ಕೆ ನಮ್ಮ ಧರ್ಮ ಗ್ರಂಥಗಳ ಮತ್ತು ಸಾಹಿತ್ಯ ಗ್ರಂಥಗಳ ಪರಿಚಯವು ಅಷ್ಟಕಷ್ಟು ಮಾತ್ರ ಆಗಿತ್ತು. ಆದರೆ ಕಳೆದ ಶತಮಾನದಲ್ಲಿ ಬ್ರಿಟಿಷ್ ಸರಕಾರವು ಎಲ್ಲಾ ಪ್ರಾದೇಶಿಕ ಮತ್ತು ಪ್ರಾಂತೀಯ ರಾಜಧಾನಿಗಳಲ್ಲಿ ಸಾಹಿತ್ಯ ಸಂಶೋಧನೆ, ಪ್ರಾಕ್ತನ ವಿಚಾರ ಪರಿಶೋಧನೆ ಮತ್ತು ತ್ರೈಮಾಸಿಕ ವಿವರಣೆಗಳನ್ನು ಕುರಿತಾದ ಇಲಾಖೆಗಳನ್ನು ಸ್ಥಾಪಿಸಿ ದೇಶದ ಚರಿತ್ರೆ ಮತ್ತು ಸಾಹಿತ್ಯ ಗ್ರಂಥಗಳ ಪರಿಷ್ಕಾರ ಮತ್ತು ಪ್ರಚಾರಕ್ಕೆ ಅವಕಾಶವಿತ್ತು ವಿದ್ವಾಂಸರನ್ನು ಪ್ರೋತ್ಸಾಹಿಸಿತು. ಆ ಕಾರಣದಿಂದ ಕಳೆದ ಶತ ಮಾನವನ್ನು ಭಾರತೀಯ ಧರ್ಮಶಾಸ್ತ್ರ ಮತ್ತು ಸಾಹಿತ್ಯ ರಾಶಿಗಳ ಅನ್ವೇಷಣೆಯ ಯುಗವೆಂದು ಹೇಳಬಹುದು. ನಮ್ಮ ದೇಶದಲ್ಲಿ ಸಾಹಿತ್ಯ ಮತ್ತು ವಿದ್ಯಾ ಕ್ಷೇತ್ರಗಳಲ್ಲಿ ಅಂದಿನ ಐರೋಪ್ಯಾ ವಿದ್ವಾಂಸರು ಆಗ ದುಡಿದಷ್ಟು ದೇಶೀಯರು ದುಡಿಯಲಿಲ್ಲವೆಂ ಬುದು ನಿರ್ವಿವಾದವಾದ ವಿಚಾರವಾಗಿದೆ. ಸುಮಾರು ೨೦೦ ವರ್ಷಗಳಿಗೆ ಹಿಂದೆ ಅವರು ಈ ದೇಶದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಹಾಕಿದ ಭದ್ರವಾದ ತಳಹದಿಯ ಮೇಲೆಯೇ ಅನಂತರ ಹಲವು ಕಾರ್ಯಕಲಾಪಗಳು ನಡೆಸಲ್ಪಟ್ಟುವು.

ಇದೀಗ ಈ ಪರಿಚ್ಛೇದದಲ್ಲೂ ಇನ್ನೂ ಕೆಲವು ಸಾಹಸಿಗಳನ್ನು ಕುರಿತು ಪ್ರಸ್ತಾ ಪಿಸಲಾಗಿದೆ. ಅವರಲ್ಲಿ ಕೆಲವರು ಭಾಷಾ ಶಾಸ್ತ್ರಜ್ಞರು, ಹಲವರು ಸಾಹಿತಿಗಳು, ನಿಘಂಟುಕಾರರು, ವೈಯ್ಯಾಕರಣಿಗಳು, ವೇದಾಭ್ಯಾಸಿಗಳು ಎಂದೀ ಬಗೆಯಲ್ಲಿ ಇದ್ದಾರೆ. ಆದರೆ ಎಲ್ಲರೂ ಮೂಲತಃ ಸಂಸ್ಕೃತ ವಿದ್ವಾಂಸರೇ ಆಗಿದ್ದು ಆ ಸಂಸ್ಕೃತ ಜ್ಞಾನದ ಬಲ ದಿಂದ ಇತರ ಭಾರತೀಯ ಭಾಷೆಗಳ ಅಭಿವೃದ್ಧಿಯನ್ನು ಸಾಧಿಸಿದರು.

**೧. ದೇಶದ ಪರಿಚಯವನ್ನು ಮಾಡುವ ವಿವಿಧ ರೀತಿಯ ಗ್ರಂಥಗಳು :—**

೧೮ ನೇ ಶತಮಾನದ ಅಂತ್ಯದಲ್ಲಿ ಬ್ರಿಟಿಷರು ಈ ದೇಶದ ವಿವಿಧ ಭಾಗಗಳನ್ನು ಅನ್ವೇಷಿಸಿ ಆಯಾ ಸ್ಥಳಗಳ ಭೂವಿವರಣೆ, ಹವಾಮಾನ, ವ್ಯವಸಾಯ, ಜನಜೀವನ, ಕೈಗಾರಿಕೆ ಇತ್ಯಾದಿಗಳನ್ನು ಕುರಿತು ಬರೆದ ಗ್ರಂಥಗಳು Oriental Repertory

ಎಂದು ಹಲವು ಗ್ರಂಥ ಕಾಂಡಗಳಾಗಿ ಪ್ರಕಟವಾದುವು. D. Marylbone ಇವನ 575 Folio ಪುಟಗಳ ಅಂಥಾ ಗ್ರಂಥವೊಂದು 1793 ರಷ್ಟು ಹಿಂದೆಯೇ ಪ್ರಕಟ ವಾಯಿತು. ಪಶ್ಚಿಮ ಕರಾವಳಿಯ ಪರಿಚಯುವನ್ನು ಕೊಡುವ 484 Folio ಪುಟಗಳ ಎರಡನೇ ಕಾಂಡವು Dr. W. Roxburgh ಇವನಿಂದ ಸಂಪಾದಿಸಲಾಯಿತು. ಈ ಗ್ರಂಥಗಳು ಹಲವು ಚಿತ್ರಗಳು ಮತ್ತು ಭೂಪಟಗಳಿಂದ ಕೂಡಿ ಪರಿಪೂರ್ಣವಾಗಿದೆ.

ಇಡೀ ದೇಶದ ವಿಚಾರವಾಗಿ ಇಂಥಾ ಪುಸ್ತಕಗಳು ನೂರಾರು ಪ್ರಕಟವಾದಾಗ ನಮ್ಮ ದೇಶದ ಅಸಂಖ್ಯ ಭಾಷೆಗಳನ್ನು ಶಾಸ್ತ್ರೀಯವಾಗಿ ಅನ್ವೇಷಿಸಿದವರು ಇನ್ನೆಷ್ಟೋ ಜನ ಇದ್ದಾರೆ ; ಭಾರತೀಯ ಭಾಷೆಗಳನ್ನು ನೆರೆನಾಡು ಮತ್ತು ದೇಶಗಳ ಭಾಷೆಗಳಿಗೆ ಹೋಲಿಸಿ ಅವುಗಳೊಳಗಿರುವ ಬಾಂಧವ್ಯವನ್ನು ಕುರಿತು ನಿರೂಪಿಸಿದ ಪಾಶ್ಚಾತ್ಯ ವಿದ್ವಾಂಸರು ಹಲವರು ಇದ್ದಾರೆ. Sir J. F. Davies ಇವನು ಚೀನಾ ದೇಶ ದಿಂದ ಭಾರತೀಯ ಮತ್ತು ಚೀನೀ ಭಾಷೆಗಳ ಸಂಬಂಧವಾಗಿ ಗ್ರಂಥಗಳನ್ನು ರಚಿಸಿ ದನು, ' Nathan Brown ಇವನು 1837 ರಲ್ಲಿ " Indo-Chinese Languages " ಇನ್ನೂ D. J. Leyden ಇವನು " Language and Lterature of Indo-Chinese Nations " ಇದನ್ನು ಬರೆದರು. ನ್ಯಾಯ ಶಾಸ್ತ್ರಜ್ಞ Nathaniel Halhed ಇವನು ಈ ದೇಶದ ಅಂದಿನ ರಾಜ ಕೀಯದ ವಿಷಯವಾಗಿ ಬರೆದಾಗ Sir Walter Scott ಇವನು ಆ ಬರೆವಣಿಗೆ ಯನ್ನು ಮೆಚ್ಚಿ ಅವನನ್ನು " The First political Writer of the Age " ಎಂದು ಶ್ಲಾಘಿಸಿದನು. Dr. Tennant ಇವನು ಬರೆದ Indian Recreation ಎಂಬ ಗ್ರಂಥವು ಅಂದು ತುಂಬ ಜನಪ್ರೀಯವಾದುದಾಗಿತ್ತು.

ಜರ್ಮನ್ ವಿದ್ವಾಂಸ Frenz Bopp ಇವನು 1833 ರಲ್ಲಿ ಸಂಸ್ಕೃತ, ಪರ್ಷಿಯನ್, ಲ್ಯಾಟಿನ್ ಇತ್ಯಾದಿ ಭಾಷೆಗಳ ತುಲನಾತ್ಮಕ ವ್ಯಾಕರಣ ಮತ್ತು ಭಾಷಾ ಶಾಸ್ತ್ರ ಗ್ರಂಥಗಳನ್ನು ಜರ್ಮನ್ ಭಾಷೆಯಲ್ಲಿ ಬರೆದಾಗ ಅದರ ಭಾಷಾಂತರವು E. B. Eastwick ಇವನ ಮೂಲಕ ಎಲ್ಲೆಲ್ಲೂ ಪ್ರಚಾರವಾಯಿತು. ಅಲ್ಲದೆ ಅದೇ ಹಾದಿಯಲ್ಲಿ ಸಾಗಿ Prof. Meillet, Dr. Jesperson, Prof. Delbruck ಮೊದಲಾದ ವಿದ್ವಾಂಸರು ವಿಚಾರಗರ್ಭಿತವಾದ ಭಾಷಾಶಾಸ್ತ್ರ ಗ್ರಂಥ ಗಳನ್ನು ರಚಿಸಿದರು.

**೩. ಪ್ರಾಚೀನ ಕಾಲದ ಕಲೆ ಕೈಗಾರಿಕೆಗಳೆಲ್ಲವನ್ನೂ ಅನ್ವೇಷಿಸಿದರು :—**

ಪರ್ಷಿಯಾ ದೇಶದವರು ಈ ದೇಶವನ್ನು ಹಿಂದೂಸ್ಥಾನವೆಂದು ಕರೆದಾಗ ಅವರು ಸಟ್ಲೇಜ್ ನದಿಯಿಂದ ಹಿಡಿದು ಕಾಶಿಯ ವರೆಗಿನ ಭೂಭಾಗವನ್ನು ಮಾತ್ರ ಹಾಗೆ ತಿಳಿದಿದ್ದರು. ಬಂಗಾಳ ಮತ್ತು ದಕ್ಷಿಣವು ಅವರ ಪಾಲಿಗೆ ಹಿಂದೂಸ್ಥಾನದಿಂದ ಬೇರ್ಪಟ್ಟವುಗಳಾಗಿದ್ದುವು. ಆದರೆ ಪಾಶ್ಚಾತ್ಯರು ಈ ದೇಶದ ಪ್ರಾಚೀನ ಚರಿತ್ರೆ, ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಸಂಶೋಧಿಸಿ ಹಿಂದೂಸ್ಥಾನವು ಎಷ್ಟೋ ವಿಶಾಲ ವಾದ ದೇಶವೆಂಬುದನ್ನು ಸುಮಾರು 1000 ವರ್ಷಗಳಿಗೆ ಹಿಂದಿನ ಕಾಲದ ಚರಿತ್ರೆಯ

ಆಧಾರದಿಂದ ಪ್ರತಿಪಾದಿಸಿದರು. ಈ ದೇಶದ ನಿವಾಸಿಗಳ ಬುಡಕಟ್ಟನ್ನು ಕುರಿತಾಗಿಯೂ ಸಂಶೋಧನೆಯನ್ನು ನಡೆಸಿದರು. ಅಂಥಾ ಹಲವು ಗ್ರಂಥಗಳ ಪೈಕಿ Sir George Campbell ಇವನ Ethnology of India ಎಂದು 1868 ರಲ್ಲಿ ಪ್ರಕಟವಾದುದು ಪ್ರಸಿದ್ಧವಾಗಿದೆ. ಆದರ ನಂತರ Col. Dalton ಇವನ Descriptive Ethnology of Bengal ಇದು 1872 ರಲ್ಲಿ ಹೊರಬಂತು. ಭಾರತದ ವಿವಿಧ ಜನಾಂಗಗಳ ಬುಡಕಟ್ಟು ಮತ್ತು ವೈಕಟ್ಟುಗಳನ್ನು ಪರಿಶೀಲಿಸಿ ಗ್ರಂಥಗಳನ್ನು ಬರೆದ Sir Thomas Holland ಮತ್ತು Castes and Tribes of South India ಎಂಬುದಾಗಿ ಉದ್ಗ್ರಂಥವನ್ನು ಬರೆದ W. Thurston ಇವನು ಸಮಾಜ ಜ್ಞಾನವನ್ನು ಕುರಿತಾಗಿ ಉಪಯುಕ್ತವಾದ ವಿವರಣೆಗಳನ್ನು ಕೊಟ್ಟಿದ್ದಾರೆ.

ಈ ದೇಶದ ಜನರ ಪ್ರಾಚೀನ ಜೀವನ ಕ್ರಮ, ಜೀವನ ವೈವಿಧ್ಯ, ಕೈಗಾರಿಕೆ ಇತ್ಯಾದಿಗಳನ್ನು ಪರಿಚಯ ಮಾಡಿಸುವ ಸುಂದರವಾದ ಮತ್ತು ಸಚಿತ್ರ ಗ್ರಂಥಗಳು ಅದೆಷ್ಟೋ ಪ್ರಕಟವಾಗಿವೆ. Dr. Forbes Watson ಇವನು ಕ್ರಿ. ಶ. ೧೮ನೇ ಮತ್ತು ೧೯ನೇ ಶತಮಾನದ "Industrial Survey" ಇದನ್ನು ಪ್ರಕಟಿಸಿದಾಗ ಅದು ಆ ಕಾಲಕ್ಕೆ ಅಪೂರ್ವವಾದ ಗ್ರಂಥವೆಂದೆನಿಸಿತು. ಕ್ರಿ. ಶ. 1880 ರಲ್ಲಿ George Birdwood ಇವನು ರಚಿಸಿದ 'Industrial Arts of India' ಎಂಬ 600 demy ಪುಟಗಳ ಗ್ರಂಥವು ಹಿಂದಿನ ಕಾಲದ ಜನರ ಕೈಗಾರಿಕೆಗಳೇನು ಎಂಬುವನ್ನು ಬಣ್ಣ ಚಿತ್ರಗಳ ಸಮೇತವಾಗಿ ತಿಳಿಸುತ್ತದೆ. ಪೂರ್ವಕಾಲದಲ್ಲಿ ಬಟ್ಟೆ ನೇಯ್ಗೆ, ಪಾತ್ರೆಗಳನ್ನು ಮಾಡುವ ಕ್ರಮ, ಲೋಹಗಳ ನಗನಾಣ್ಯಗಳು, ಹಡಗು ಕಟ್ಟೋಣ ಕ್ರಮ, ಶಿಲ್ಪಕಲೆ, ಇತ್ಯಾದಿಗಳೆಲ್ಲವನ್ನೂ ವರ್ಣಿಸುವ ಈ ಗ್ರಂಥವು ಎಲ್ಲಾ ಕಾಲಕ್ಕೂ ಉಪಯುಕ್ತವಾದುದಾಗಿದೆ. ಇದೇ ತರಹದ ಪುಸ್ತಕಗಳು ಬೇರೆ ಬೇರೆ ಪ್ರಾಂತಗಳನ್ನು ಕುರಿತಾಗಿಯೂ ಪ್ರತ್ಯೇಕವಾಗಿ ಬರೆಯಲ್ಪಟ್ಟಿವೆ.

೪. ವೈದ್ಯಕೀಯ ತಜ್ಞರೂ ಮಹಾ ಸಂಶೋಧಕರಾದರು :—

ಕಳೆದ ಎರಡು ಶತಮಾನಗಳ ಕಾಲದಲ್ಲಿ ನೂರಾರು ವೈದ್ಯಕೀಯ ತಜ್ಞರು ಹಿಂದೂದೇಶದ ಉದ್ದಗಲಕ್ಕೂ ಓಡಾಡಿದರು. ಭಾರತದ ಪ್ರತಿಯೊಂದು ಪ್ರಾಂತದಲ್ಲೂ ಹಲವು ನಿಷ್ಠಾವಂತ ವೈದ್ಯರು ಈ ದೇಶದಲ್ಲಿ ಪ್ರಚಲಿತವಿದ್ದ ಹಲವು ಬಗೆಯ ರೋಗಗಳನ್ನು ತಡೆಗಟ್ಟಲು ಹೊಡೆದಾಡಿದರು. ಆಧುನಿಕ ಚಿಕಿತ್ಸಾ ಕ್ರಮವನ್ನು ಎಲ್ಲೆಲ್ಲೂ ಜಾರಿಗೆ ತಂದರು. ವೈದ್ಯಾಲಯ ಮತ್ತು ಚಿಕಿತ್ಸಾಲಯಗಳು ಎಲ್ಲಾ ಸ್ಥಳಗಳಲ್ಲೂ ಸ್ಥಾಪಿಸಿದರು. ಚಳಿಜ್ವರ, ಸಿಡುಬು, ನಾಂತಿಭೇದಿ ಮೊದಲಾದ ಖಾಯಿಲೆಗಳನ್ನು ನಿರ್ಮೂಲಿಸಲು ಶ್ರಮಿಸಿದರು.

ಆದರೆ ಅಂಥಾ ಪ್ರಬಲ ವೈದ್ಯ ಶಾಸ್ತ್ರ ನಿಪುಣರೂ ದೇಶದ ಇತಿಹಾಸ, ಸಾಹಿತ್ಯ, ಮತ್ತು ಸಂಸ್ಕೃತಿಗಳಲ್ಲಿ ಆಸಕ್ತಿ ವಹಿಸಿದುದು ಇನ್ನಷ್ಟು ಆಶಾದಾಯಕವಾದ ವಿಚಾರವಾಗಿದೆ. Dr. Benjamin Heyne ಇವನು ವೈದ್ಯಕೀಯ ತಜ್ಞನು

ಹೇಗೋ ಹಾಗೆಯೇ ನಿಷ್ಣಾತ ಸಸ್ಯಶಾಸ್ತ್ರಜ್ಞನಾಗಿದ್ದನು. Prof. Horace Wilson ಇವನು ನಿಷ್ಠಾವಂತ ವೈದ್ಯನಾಗಿ ತನ್ನ ಜೀವನವನ್ನು ಪ್ರಾರಂಭಿಸಿ ಕಡೆಗೆ ವೇದ, ಪುರಾಣ, ಸಂಸ್ಕೃತ, ವ್ಯಾಕರಣ, ನಿಘಂಟು ಇತ್ಯಾದಿಗಳಲ್ಲಿ ಅಡ್ಡಾಡಿದ ಪ್ರಬಲ ವಿದ್ವಾಂಸನಾದನು. ದಕ್ಷಿಣ ಭಾರತದಲ್ಲಿದ್ದ Dr. Cornish ಇವನು ಜನರ ಆರೋಗ್ಯ ರಕ್ಷಣೆಗೆ ಈ ದೇಶದಲ್ಲಿ ಸಾಧಿಸಬೇಕಾದ್ದನ್ನು ಕುರಿತು ವಿದ್ವತ್ಪೂರ್ಣವಾದ ವರದಿಗಳನ್ನು ಬರೆದನು. ಸಸ್ಯ ಶಾಸ್ತ್ರ ಮತ್ತು ಕಾಫೀ ವ್ಯವಸಾಯದ ಬಗ್ಗೆ ವಿಶೇಷ ಸಲಹೆಗಳನ್ನೂ ಇತ್ತನು. ಮಲೆಯಾಳದ ಒಂದು ವಿಶಿಷ್ಟ ಜನಾಂಗದ ಮೇಲೂ ಸಂಶೋಧನೆಯನ್ನು ನಡೆಸಿದನು.

ವಾಯುವ್ಯ ಪ್ರಾಂತ, ಅಸ್ಸಾಮ್, ಬರ್ಮಾ, ಭೂತಾನ್ ಮತ್ತು ದಕ್ಷಿಣ ಹಿಂದೂಸ್ಥಾನದಲ್ಲೆಲ್ಲಾ ತನ್ನ ಉದ್ಯೋಗ ನಿಮಿತ್ತವಾಗಿ ಸಂಚರಿಸಿದ Dr. Griffith ಇವನು ಈ ಎಲ್ಲಾ ಪ್ರಾಂತಗಳಲ್ಲಿ ವ್ಯವಸಾಯ ಅಭಿವೃದ್ಧಿಯ ಬಗೆಯಾಗಿ ರಚಿಸಿದ ವಿಸ್ತಾರವಾದ ವರದಿಗಳು ಅವನು ಆ ವಿಷಯವಾಗಿ ಪಡೆದ ಜ್ಞಾನಾನುಭವಕ್ಕೆ ನಿದರ್ಶನವಾಗಿವೆ. Dr. Griffith ಇವನು ದಲಿತರ ಮತ್ತು ರೋಗಿಗಳ ಶುಶ್ರೂಷೆಗೆ ಶ್ರಮಿಸಿದುದಲ್ಲದೆ ಸಸ್ಯಶಾಸ್ತ್ರ, ಖನಿಜಶಾಸ್ತ್ರ ಮತ್ತು ಭೂಗೋಳ ಶಾಸ್ತ್ರಗಳನ್ನು ಕುರಿತಾಗಿ ಬರೆದ ಅಸಂಖ್ಯ ಲೇಖನಗಳು 1847ರ ಕಾಲದಲ್ಲಿ ಪ್ರಕಟವಾದುವು.

ಮದ್ರಾಸಿನಲ್ಲಿ ನಿಸ್ಸೀಮ ವೈದ್ಯನಾಗಿದ್ದ Dr. Gilchrist ಇವನು 1851ರ ಕಾಲದಲ್ಲಿ ಜಾನುವಾರುಗಳು ಮತ್ತು ಆನೆಗಳಿಗೆ ತಗಲುವ ಖಾಯಿಲೆಯನ್ನು ಕುರಿತಾಗಿ ಬರೆದನು. ಜನರ ಆರೋಗ್ಯವನ್ನು ಸಂರಕ್ಷಿಸುವ ವಿಧಾನವನ್ನು ವಿವರಿಸಿ ಬರೆದ ಅವನ ಪತ್ರಗಳೆಲ್ಲವೂ ಇಂದಿಗೂ ಪಾಶ್ಚಾತ್ಯ ಗ್ರಂಥ ಭಂಡಾರಗಳಲ್ಲಿ ಕಾದಿರಿಸಲ್ಪಟ್ಟಿವೆ. ಬಂಗಾಳ ಮತ್ತು ಬಿಹಾರ ಪ್ರಾಂತಗಳಲ್ಲಿದ್ದ 'Surgeon-General Alfred Etson ಇವನು ತನ್ನ ವೈದ್ಯಕೀಯ ತಜ್ಞತೆಯ ಜತೆಗೆ ಉತ್ತಮ ಇತಿಹಾಸಕಾರನಾಗಿ 1857ರ ಕಾಲದ ಭಾರತದ ಚರಿತ್ರೆಯನ್ನು ವಿಶದವಾಗಿ ನಿರೂಪಿಸಿದ್ದಾನೆ. ಬಂಗಾಳ, ಅಸ್ಸಾಮ್ ಮತ್ತು ಮಣಿಪುರದಲ್ಲಿದ್ದ Dr. Walter Conry ಇವನು ಮಣಿಪುರೀ ಮತ್ತು ನಾಗ ಜನಾಂಗಳ ಭಾಷೆಗಳನ್ನು ಕುರಿತು ಉತ್ತಮ ಭಾಷಾಶಾಸ್ತ್ರವೊಂದನ್ನು 1875 ರಲ್ಲಿ ಬರೆದಿದ್ದಾನೆ. ಅದೇ ರೀತಿ ಮದ್ರಾಸಿನಲ್ಲಿದ್ದ Dr. G. Caswell ಇವನೂ ಓರ್ವ ಉತ್ತಮ ಸಾಹಿತಿಯಾಗಿ ಕಳೆದ ಶತಮಾನದ ಮೊದಲ ಭಾಗದಲ್ಲಿ ಇದ್ದನು. ಹೀಗೆ ಇನ್ನೂ ಹಲವು ವೈದ್ಯಕೀಯ ತಜ್ಞರು ವಿವಿಧ ವಿಷಯಗಳಲ್ಲಿ ಆಸಕ್ತಿ ವಹಿಸಿ ಉತ್ತಮ ಗ್ರಂಥಗಳನ್ನು ಬರೆದಿದ್ದಾರೆ.

**೫. ಸಾಹಿತಿ, ಸಂಶೋಧಕ ಮತ್ತು ವೈಜ್ಞಾನಿಕ-ಡಾ. ಬುಚಾನನ್ :—**

ಕ್ರಿ. ಶ. 1784 ರಲ್ಲಿ ಈ ದೇಶಕ್ಕೆ ಬಂದ Dr. Francis Buchanan ಇವನು ಓರ್ವ ಹಿರಿಯ ವೈದ್ಯಕೀಯ ತಜ್ಞ, ಸಾಹಿತಿ, ರಾಜಕಾರಣಿ, ಮತ್ತು ಸಮಾಜ ಸೇವಕನು. ಇವನು ಮೂವತ್ತು ವರ್ಷಗಳ ಕಾಲ ಇಲ್ಲಿ ಇದ್ದಾಗ Lord Charles Cornwallis, Sir Arthur Wellesley, Lord Baron

Minto ಮೊದಲಾದ ಅಧಿಕಾರಿಗಳ ಮಿತ್ರನಾಗಿ ಬಹು ನಿಷ್ಠೆಯಿಂದ ಹಲವು ಕಾರ್ಯ ಕ್ರಮಗಳನ್ನು ಕೈಗೊಂಡನು. ಬಹುಕಾಲ ಬಂಗಾಳದ ವೈದ್ಯ ಇಲಾಖೆಯಲ್ಲಿ ದುಡಿದ ಇವನು ಸಂಸ್ಕೃತ, ಪರ್ಷಿಯನ್, ಬಂಗಾಳೀ, ಹಿಂದೂಸ್ಥಾನೀ, ಅಸ್ಸಾಮೀ ಮತ್ತು ಬರ್ಮಾ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ಕ್ರಿ. ಶ. 1796 ರಿಂದ Royal Asiatic Society ಇದರ ಉತ್ಸಾಹೀ ಸದಸ್ಯನಾಗಿದ್ದುದಲ್ಲದೆ ಕಡೆಗೆ ಒಂದೆರಡು ವರ್ಷಗಳ ಕಾಲ ಆದರ ಅಧ್ಯಕ್ಷನಾಗಿಯೂ ಇದ್ದನು.

Dr. F. Buchanan ಇವನು ಒರ್ವ ಪ್ರಬಲ ಭಾಷಾಶಾಸ್ತ್ರಜ್ಞನಾಗಿದ್ದನು. ಬರ್ಮಾ ದೇಶದ ಭಾಷೆಗಳನ್ನು ಕುರಿತು Comparative Vocabulary of Burmeese Languages ಎಂಬ ಐದು ಕಾಂಡಗಳ ಗ್ರಂಥಗಳಲ್ಲಿ ಒಂದು ಕಾಂಡ ವನ್ನು ಇವನೇ ಬರೆದನು. ಅಲ್ಲದೆ ಭಾರತೀಯ ಭಾಷೆಗಳ ವಿಷಯವಾಗಿ Asiatic Researches ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆದನು. ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ವಾಸ್ತುಶಿಲ್ಪಕಲೆ, ಭೂಗೋಳಶಾಸ್ತ್ರ, ಸಾಹಿತ್ಯ, ಜನಪದ ಹಾಡು ಇತ್ಯಾದಿಗಳಲ್ಲಿ ಆಸಕ್ತಿ ವಹಿಸಿದ್ದ ಈ ವಿದ್ವಾಂಸನು ಪಾಟ್ನಾ, ಗಯಾ, ಕಾಶೀ, ಮಾಂಘೀರ್ ಮೊದಲಾದ ಪ್ರದೇಶಗಳ ಭೂವಿವರಣೆ ಮತ್ತು ಚರಿತ್ರೆಯನ್ನು ಸಂಶೋಧಿಸಿ ಬರೆದನು. ಪ್ರಯಾಣಕ್ಕೆ ಅನುಕೂಲವಿಲ್ಲದಿದ್ದ ಆ ಕಾಲದಲ್ಲಿ ಅವನು ಪಲ್ಲಕ್ಕಿ, ಎತ್ತಿನಗಾಡಿ, ಅಥವಾ ಆನೆಗಳನ್ನು ಉಪಯೋಗಿಸಿ ಸಂಚರಿಸಿದನಲ್ಲದೆ ಹಲವು ಬಾರಿ ಕಾಲ್ನಡಿಗೆಯಿಂದಲೇ ಸ್ಥಳದಿಂದ ಸ್ಥಳಕ್ಕೆ ಹೋದನು. ಈ ದೇಶದ ಪ್ರಾಣಿ ಮತ್ತು ಪಕ್ಷಿಗಳ ವಿಷಯವಾಗಿಯೂ ಗಂಗಾ ನದಿಯ ವಿವಿಧ ಬಗೆಯ ಮೀನುಗಳ ವಿಷಯ ವಾಗಿಯೂ ಹಲವು ಲೇಖನಗಳನ್ನು ಬರೆದನು. ಪ್ರಾಕೃತಿಕ ದೃಶ್ಯಗಳನ್ನು ಸುಂದರ ವಾಗಿ ಬಿಡಿಸಿದನು. ಹಲವು ಸ್ಥಳಗಳ ಭಾಷೆ, ಸಾಹಿತ್ಯ, ಜನಪದ ಹಾಡು, ಲಲಿತಕಲೆ ಇತ್ಯಾದಿಗಳನ್ನು ಸಂಗ್ರಹಿಸಿ ಅವನು ಅವುಗಳ ವಿಚಾರವಾಗಿ ಶಾಸ್ತ್ರೀಯವಾಗಿ ಟೀಕಿಸಿ ಲೇಖನಗಳನ್ನು ಬರೆದನು.

ಬಂಗಾಳ ಪ್ರಾಂತದ ವಿಷಯವಾಗಿ ಮತ್ತು ಬಂಗಾಳೀ ಭಾಷೆಯನ್ನು ಕುರಿತು ಅದೆಷ್ಟೋ ಜನ ವಿದ್ವಾಂಸರೂ ಗ್ರಂಥಗಳನ್ನು ಬರೆದಿದ್ದಾರೆ. Sir Jones, Sir Colebrooke, Prof. Wilson, Sir Hunter ಇವರೇ ಮೊದಲಾದವ ರಲ್ಲದೆ ಭಾರತಕ್ಕೆ ಬಾರದೇ ಇದ್ದ Prof. Max Mueller ಇವನು ಸಹ ಬಂಗಾಳೀ ವ್ಯಾಕರಣವನ್ನು ಯೂರೋಪಿನಿಂದಲೇ ಬರೆದನು. Dr. William Carey ಇವನು ಬಂಗಾಳೀ ಸಾಹಿತ್ಯದ ಸಮೃದ್ಧಿಗೆ ಕಾರಣಪುರುಷನಾದನು. Baden Powel ಇವನ A Manual of 'Land Revenue and Systems of Tenures ಎಂಬ ೨೨೦೦ demy ಪುಟಗಳ ಮೂರು ಕಾಂಡಗಳ ಗ್ರಂಥ ವೊಂದು 1882 ರಲ್ಲಿ ಪ್ರಕಟವಾಯಿತು. ಅದೇರೀತಿ ಇವರೆಲ್ಲರಿಗಿಂತಲೂ ಎಷ್ಟೋ ಹಿಂದೆ Dr. F. Buchanan ಇವನು Statistical Survery of Bengal ಎಂಬುದಾಗಿ folio ಪುಟಗಳ ಮೂರು ಗ್ರಂಥಕಾಂಡಗಳನ್ನು 1814 ರಲ್ಲಿ ಬರೆದು ಮುಗಿಸಿದ್ದು 1838 ರಲ್ಲಿ ಪ್ರಕಟವಾಯಿತು. ಸಸ್ಯಶಾಸ್ತ್ರದಲ್ಲಿ ಪ್ರವೀಣನೆನಿ

ಸಿದ್ದ Dr. Buchanan ಇವನು 1814 ರಿಂದ ಎರಡು ವರ್ಷಗಳ ಕಾಲ ಶಿಬಪುರದ Botanical Gardens ಇದರ ಮುಖ್ಯಾಧಿಕಾರಿಯಾಗಿದ್ದನು. ಅವನು ತನ್ನ ಸ್ವದೇಶಕ್ಕೆ ಹಿಂದಿರುಗಿದ ಮೇಲೆ 1816 ರಿಂದ ತನ್ನ ಹೆಸರನ್ನು ತನ್ನ ತಾಯಿಯ ಮನೆತನದ ಹೆಸರಿಗೆ ಮಾರ್ಪಡಿಸಿ Dr. Hamilton Buchanan ಎಂದು ಇಂಗ್ಲೆಂಡಿನ ಸಾಹಿತ್ಯ ಮತ್ತು ರಾಜಕೀಯ ವಲಯಗಳಲ್ಲಿ ಪ್ರಸಿದ್ಧನಾದನು.

**೬. ದಕ್ಷಿಣ ಭಾರತ ಮತ್ತು ಕರ್ನಾಟಕದಲ್ಲಿ ಡಾ. ಬುಚಾನನ್ ಇವನು :--**

ಅದೆಷ್ಟೋ ಜನ ಐರೋಪ್ಯಾ ಸಾಹಿತಿಗಳೂ ಪ್ರಯಾಣಿಕರೂ ಕ್ರಿ.ಶ. ಹದಿನೇಳನೇ ಶತಮಾನದಿಂದಲೇ ಈ ದೇಶದ ಹಲವು ಭಾಗಗಳನ್ನು ಸಂದರ್ಶಿಸಿ ಪ್ರವಾಸ ಗ್ರಂಥಗಳನ್ನು ರಚಿಸಿದ್ದು ಉತ್ತಮ ಐತಿಹಾಸಿಕ ವರದಿಗಳಾಗಿ ಇಂದಿಗೂ ಇವೆ. ಇಂಥಾ ಗ್ರಂಥಗಳನ್ನು ಬರೆಯಲು ಬ್ರಿಟಿಷ್ ಸರಕಾರವೇ ಅಂದಿನ ವಿದ್ವಾಂಸರನ್ನು ಪ್ರೋತ್ಸಾಹಿಸಿತ್ತು. ಕಳೆದ ಶತಮಾನಾರಂಭದಲ್ಲಿ ಬರೆದ ಅಂಥಾ ಗ್ರಂಥವೊಂದು Col. Thackeray ಇವನ 'Personal Inspection of Malbar, Kanara and Ceded Districts' ಎಂಬುದಾಗಿತ್ತು. ಇದು 1807 ರಲ್ಲಿ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು.

ಬ್ರಿಟಿಷರು ತಮ್ಮ ವಶಕ್ಕೆ ಬಂದ ಯಾವುದೇ ಪ್ರಾಂತದ ವಿಷಯವಾಗಿ ಕೂಡಲೇ ತಕ್ಕ ತಜ್ಞರಿಂದ ವರದಿಗಳನ್ನು ಬರೆಯಿಸಿ ಪ್ರಕಟಿಸಿದ್ದು ಅವರ ಅಂದಿನ ಒಂದು ವೈಶಿಷ್ಟ್ಯವಾಗಿತ್ತು. ಕ್ರಿ.ಶ. 1799 ರಲ್ಲಿ ಕಡೇ ಮೈಸೂರು ಯುದ್ಧವು ಆದ ಮೇಲೆ ಟಿಪ್ಪುವಿಗೆ ಸೇರಿದ್ದ ರಾಜ್ಯವನ್ನು ಆಳೆಯಲು ಮತ್ತು ಎಲ್ಲಾ ವಿಷಯಗಳನ್ನು ಸಂಗ್ರಹಿಸಲು ಕಂಪೆನೀಸರಕಾರವು Dr. F. Buchanan ಇವನನ್ನು ನೇಮಿಸಿತು. ಇವನ ಹೆಸರನ್ನು ಅಂದಿನ ಮದ್ರಾಸು ಅಧಿಪತ್ಯದ ಅಧಿಕಾರಿ Lord George Clive ಇವನಿಗೆ ಸೂಚಿಸುವಾಗ W. Roxburgh ಇವನು ಕಲ್ಕತ್ತೆಯಿಂದ ಈ ರೀತಿಯಾಗಿ ಬರೆದನು :—

"Dr. Francis Buchanan ..... a very proper person to be employed in your newly acquired territories above the Ghats. He is the best botanist I know of in India ...... Could Mr. Heyne (Benjamin) accompany him as a minerologist and Chemist? I have no doubt that their joint endeavours would soon furnish a more complete acconut of natural history, state of agriculture, etc........".

ಆಗ ಶ್ರೀರಂಗಪಟ್ಟಣದಲ್ಲಿದ್ದ Sir Arthur Wellesley ಇವನು Dr. Buchanan ಇವನನ್ನು ಮೈಸೂರು ಮತ್ತು ಕರಾವಳೀ ಸೀಮೆಗಳನ್ನು ಅನ್ವೇಷಿಸುವಂತೆ ನೇಮಿಸಿದ್ದಲ್ಲದೆ ಆ ಎಲ್ಲಾ ಜಿಲ್ಲೆಗಳ ಸಸ್ಯ ಮತ್ತು ಖನಿಜಸಂಪತ್ತನ್ನೂ ಸಂಶೋಧಿಸಿ ವರದಿಯನ್ನು ಬರೆಯುವಂತೆ ಹೇಳಿದನು. ಅದರಂತೆ Dr. Buchanan ಇವನು ಕ್ರಿ.ಶ. 1800 ರ ಏಪ್ರಿಲ್ ತಿಂಗಳಲ್ಲಿ ಮದ್ರಾಸಿನಿಂದ ಹೊರಟು, ಆರ್ಕಾಟು

ಮಾರ್ಗವಾಗಿ ಮೈಸೂರನ್ನು ತಲುಪಿದನು. ಶ್ರವಣಬೆಳ್ಗೊಳವೇ ಮೊದಲಾದ ಚಾರಿತ್ರಿಕ ಸ್ಥಳಗಳನ್ನು ಸಂದರ್ಶಿಸಿದನು. ಅನಂತರ ಮೈಸೂರಿನಿಂದ ಕೊಡಗಿನ ಮಾರ್ಗವಾಗಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಹಾದು ಮಲೆಯಾಳ ಜಿಲ್ಲೆಯನ್ನು ಸೇರಿದನು. ಅಲ್ಲಿಂದ ಕೊಯಮತ್ತೂರು ಮಾರ್ಗವಾಗಿ ಹಾದು ಆನೆಮಲೆ ಗುಡ್ಡವನ್ನು ದಾಟಿ ಪಶ್ಚಿಮ ಕರಾವಳಿಯ ದಕ್ಷಿಣ ಭಾಗವನ್ನು ಬಳಸಿ 1801 ರ ಜುಲೈ ತಿಂಗಳಲ್ಲಿ ಮದ್ರಾಸನ್ನು ತಲುಪಿದನು. ಹೀಗೆ ಸಂಚರಿಸಿದ ಈ ಸಾಹಸಿಯು ತಾನು ನೋಡಿದ ಸ್ಥಳಗಳ ಭೌಗೋಲಿಕ ವಿವರ, ಚರಿತ್ರೆ, ಜನಜೀವನ, ಕೃಷಿ ಇತ್ಯಾದಿಗಳನ್ನು ಕುರಿತು ವಿಷಯಗಳನ್ನು ಸಂಗ್ರಹಿಸಿದನು. ಪ್ರತಿದಿನವೂ ತಾನು ಹೋಗುತ್ತಾ ಇದ್ದಂತೆ ಅಲ್ಲಲ್ಲಿ ಕಂಡ ಮತ್ತು ಕೇಳಿದ ವಿಚಾರಗಳನ್ನು ತನ್ನ ದಿನಚರಿಯಂತೆ ಬರೆಯುತ್ತಾ ಮುಂದುವರಿದನು. ಹೀಗೆ ಬರೆದ ಅವನ ಆ ಪ್ರವಾಸ ಗ್ರಂಥವು Travels in Mysore, Kanara and Malbar ಎಂಬ 1460 folio ಪುಟಗಳ ಮೂರು ಕಾಂಡಗಳ ಗ್ರಂಥವಾಗಿ 1807 ರಲ್ಲಿ ಲಂಡನ್ನಿನಲ್ಲಿ ಪ್ರಕಟವಾಯಿತು. ಅದರ ಪರಿಷ್ಕೃತ ಮುದ್ರಣವು 1812 ರಲ್ಲೂ, ಅದರ ಮೂರನೇ ಆವೃತಿಯು 1870 ರಲ್ಲೂ ಪ್ರಕಟವಾಯಿತು. Dr. Buchanan ಇವನ ಬರೆವಣಿಗೆಯು ಶೈಲಿ ಹೇಗಿದೆಯೆಂಬುದಕ್ಕೆ ಅವನ ಆ ದಿನಚರಿಯ ವರದಿಯಿಂದ ಈ ಕೆಳಗಿನ ಕೆಲವು ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ:—

"September 10; 1800: Near Peryapatna are many small pools and contain water throughout the year....Rain is not sufficient to bring a crop of rice. I am told that in the Codugu or Coorg Country, the rains are fully sufficient for this purpose....... Peryapatna formerly belonged to a Polygar family named Nanda Raja. These Prince were related to Viraraya of Codugu and both families wore the Linga. The territories of Nanda Raja included two districts of Peryapatna and Bettadapura, producing an annual revenue of 30,000 Pagodas........"

**೭. ಕರ್ನಲ್ ಟಾಡ್ ಮತ್ತಿತರ ಐತಿಹಾಸಿಕಸಂಶೋಧಕರೂ ಕಲಾವಿದರೂ :-**

'Annals and Antiquities of Rajastan' ಈ ಐತಿಹಾಸಿಕ ಗ್ರಂಥವನ್ನು ಬರೆದು ಪ್ರಸಿದ್ಧನಾದ Col. James Tod ಇವನು Travels in India ಎಂಬುದಾಗಿ 500 Folio ಪುಟಗಳ ಸಚಿತ್ರ ಗ್ರಂಥದಲ್ಲಿ ಉತ್ತರ ಹಿಂದೂಸ್ಥಾನದ ಹಲವು ಭಾಗಗಳನ್ನು ವರ್ಣಿಸಿದ್ದಾನೆ. ಈ ಪ್ರವಾಸ ಗ್ರಂಥದೊಡನೆಯೇ ಅವನು ಉತ್ತಮವರ್ಗದ ಸಂಶೋಧನಾ ಲೇಖನಗಳನ್ನೂ ಬರೆದಿದ್ದಾನೆ. ಧಿಲ್ಲಿಯನ್ನು ಆಳಿದ ಹಿಂದೂ ರಾಜರ ಕಾಲದ ಶಿಲಾ ಲೇಖನಗಳನ್ನು ಸಂಗ್ರಹಿಸಿದ್ದಲ್ಲದೆ ಸಂಸ್ಕೃತ ಭಾಷಾ ಬರವಣಿಗೆಗಳನ್ನೇ ಪ್ರತ್ಯೇಕವಾಗಿ ಸಂಪಾದಿಸಿದನು. ಉಜ್ಜಯಿನೀ ಪ್ರಾಂತದ ಶಿಲಾ ಲೇಖನಗಳನ್ನು ಕುರಿತಾಗಿ 1827 ರಲ್ಲಿ ಒಂದು ಗ್ರಂಥವನ್ನು ರಚಿಸಿದನು. 'Religions Establishments of Mewar' ಇದನ್ನು 1830ರಲ್ಲೂ

'Sculpture in Cave Temples of Ellora' ಇದನ್ನು 1838 ರಲ್ಲೂ ಬರೆದು ಪ್ರಕಟಿಸಿದನು. ರಾಜಸ್ಥಾನದ ಪ್ರಾಚೀನ ಮತ್ತು ಮಧ್ಯಕಾಲದ ಇತಿಹಾಸವನ್ನು ಸಾಮೂಲಾಗ್ರವಾಗಿ ಸಂಶೋಧಿಸಿದವರಲ್ಲಿ Col. Tod ಇವನೇ ಅಗ್ರಗ್ರಣ್ಯನು.

ಹಿಂದೂಸ್ಥಾನದ ಚಿತ್ರಕಲೆ, ವಾಸ್ತುಶಿಲ್ಪ ಕಲೆ ಮತ್ತು ಬಣ್ಣ ಚಿತ್ರಗಳ ಕೌಶಲ್ಯವನ್ನು ವಿವರಿಸುವ ಗ್ರಂಥಗಳು ಅದೆಷ್ಟೋ ಮೇಲಿಂದ ಮೇಲೆ ಪ್ರಕಟವಾದುವು. J. Griffittis ಇವನು 'Buddhist Cave Temples of Ajanta' ಎಂಬುದಾಗಿ ಅಜಂತಾದ ಎಲ್ಲಾ ಬಣ್ಣ ಚಿತ್ರಗಳನ್ನು ಯಥಾವತ್ತಾಗಿ ಕಾಗದಕ್ಕಿಳಿಸಿ ಬೃಹದಾಕಾರದ ಗ್ರಂಥಗಳನ್ನು ಪ್ರಕಟಿಸಿದನು. ಇದೇ ರೀತಿ ಈ ದೇಶದ ಎಲ್ಲಾ ಕಟ್ಟೋಣಗಳು, ಚಿತ್ರಗಳು ಮತ್ತು ಪ್ರಾಕೃತಿಕ ದೃಶ್ಯಗಳನ್ನೂ ವಿವಿಧ ರೀತಿಯಲ್ಲಿ ಚಿತ್ರಿಸಿ, ಬಣ್ಣಿಸಿ ಬರೆದು ಮತ್ತು ಬಿಡಿಸಿ ಪ್ರದರ್ಶಿಸಿದರು. ಹಾಗೆ ಬಿಡಿಸಲ್ಪಟ್ಟ ಸಹಸ್ರಾರು ಬಣ್ಣಚಿತ್ರಗಳು ಇಂದಿಗೂ ದೇಶದ ಪ್ರಮುಖ ಕಟ್ಟೋಣಗಳಲ್ಲಿ ಮತ್ತು ಪ್ರದರ್ಶನಾಲಯಗಳಲ್ಲಿ ಇವೆ. ಯೂರೋಪಿನ ರಾಜಧಾನಿಗಳಲ್ಲೂ ಇಂಗ್ಲೆಂಡಿನ ವಿಂಡ್ಸರ್, ಬಕ್ಕಿಂಗ್‌ಹ್ಯಾಂ ಅರಮನೆಗಳು ಮತ್ತಿತರ ಸಾರ್ವಜನಿಕ ಕಟ್ಟೋಣಗಳಲ್ಲೂ ಇಂದು ಅವು ಕಾಣಬಹುದಾಗಿವೆ.

ಕಲಾರಾಧಕರಾದ ಪಾಶ್ಚಾತ್ಯರು ಈ ದೇಶದ ವಾಸ್ತುಶಿಲ್ಪ ಕಲೆಯಲ್ಲಿ ಇನ್ನಷ್ಟು ಆಸಕ್ತಿಯನ್ನಿಟ್ಟಿದ್ದರೆಂಬುದಕ್ಕೆ ಹಿಂದೆಯೇ ಸೂಚಿಸಲಾದ ಕೆಲವರಲ್ಲದೆ ಇನ್ನೂ ಹಲವು ಕಲಾವಿದರು ಅದರ ವಿಷಯವಾಗಿ ಅಪಾರ ಸಂಶೋಧನಾ ಗ್ರಂಥಗಳನ್ನು ಬರೆದಿದ್ದಾರೆ. ಭಾರತ, ಇಂಡೋನೇಷ್ಯಾ, ಮಲೆಯಾ, ಬರ್ಮಾ ಇತ್ಯಾದಿ ದೇಶಗಳ ವಾಸ್ತುಶಿಲ್ಪ ಕಲೆಯನ್ನು ಕುರಿತು R. Phene Spiers ಇವನು 'Eastern Achitecture' ಎಂಬ ಅಮೋಘ ಕೃತಿಯನ್ನು ರಚಿಸಿದನು. Prof. Bernier ಇವನು ಲ್ಯಾಟಿನ್ ಭಾಷೆಯಲ್ಲಿ ಬರೆದ "Empire de Grand Mogol" ಎಂಬ ಗ್ರಂಥದಲ್ಲಿ ಮೊಗಲರ ಕಾಲದ ವಾಸ್ತುಶಿಲ್ಪ ಕಲೆಯನ್ನು ಕುರಿತು ಸುದೀರ್ಘವಾಗಿ ಪ್ರಸ್ತಾಪಿಸಿದ್ದಾನೆ. Dr. J. Fergusson ಇವನ ಗ್ರಂಥಗಳಿಗೆ ಸಮಾನವಾಗಿ Dr. James Burgess ಇವನು 1897 ರಲ್ಲಿ Ancient Monuments and Temples of India ಎಂಬುದಾಗಿ ಎರಡು ಕಾಂಡಗಳ ಗ್ರಂಥವನ್ನು ಬರೆದದ್ದು ಕಳೆದ ಶತಮಾನದಲ್ಲಿ ಪಾಶ್ಚಾತ್ಯರು ಈ ದೇಶದ ವಾಸ್ತುಶಿಲ್ಪದ ಬಗ್ಗೆ ಬರೆದ ಗ್ರಂಥಗಳಲ್ಲಿ ಕಡೇದಾಗಿದೆ.

**೮. ಎಬ್ನೀಸರ್ ಬರ್ಜೆಸ್, ಕವೆಲ್ಲ್ ಮೊದಲಾದ ವಿದ್ವಾಂಸರು :—**

ಲ್ಯಾಟಿನ್, ಜರ್ಮನ್ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಭಾರತೀಯ ಸಾಹಿತ್ಯದ ಬಗ್ಗೆ ಅಮೋಘ ಗ್ರಂಥಗಳನ್ನು ರಚಿಸಿದವರಲ್ಲಿ ಈ ವರೆಗೆ ಹೇಳಲ್ಪಟ್ಟವರಲ್ಲದೆ ಇನ್ನೂ ಹಲವರಿದ್ದಾರೆ.ಅವರಲ್ಲಿ ವೇದಗಳನ್ನು ಜರ್ಮನ್ ಮತ್ತು ಲ್ಯಾಟಿನ್ ಭಾಷೆಗೆ ಇಳಿಸಿದ ಪ್ರಮುಖರಲ್ಲಿ M. Bloomfield, R. Roth, R. Garbe, J. Grill.

K. F. Geldner ಮತ್ತು Prof. Rosen ಇವರು ಗಣ್ಯರಾಗಿದ್ದಾರೆ. Dr. Fitz Edward Hall ಇವನು ಈ ವರ್ಗಕ್ಕೆ ಸೇರಿದ್ದ ಮತ್ತೊರ್ವ ಪ್ರಸಿದ್ಧ ಸಂಸ್ಕೃತ ವಿದ್ವಾಂಸನಾಗಿದ್ದನು. Rev. Ebenezer Burgess ಇವನು "ಸೂರ್ಯಸಿದ್ಧಾಂತ"ವನ್ನೂ ಕೆಲವು ಪ್ರಾಚೀನ ಸಂಸ್ಕೃತ ಕಾವ್ಯ ಭಾಗಗಳನ್ನೂ ಭಾಷಾಂತರಿಸಿದನು.

ಹಿಂದೆಯೇ ಹೇಳಲಾದ Dr. John Muir ಇವನು ಎಡಿನ್‌ಬರೋ ವಿಶ್ವ ವಿದ್ಯಾಲಯದಲ್ಲಿ ವೇದ ಮತ್ತು ಪುರಾಣ ಸಾಹಿತ್ಯ ಗ್ರಂಥಗಳನ್ನು ಸಂಪಾದಿಸುತ್ತಿದ್ದಾಗ Prof. E. B. Cowell ಇವನು ಕೇಂಬ್ರಿಡ್ಜ್‌ನಲ್ಲಿ ಅದೇ ದಿಶೆಯಲ್ಲಿ ದುಡಿಯುತ್ತಿದ್ದನು. "Sacred Books of the East" ಈ ಗ್ರಂಥಮಾಲೆಗೆ ಅವನು ಭಾರತೀಯ ಧರ್ಮಶಾಸ್ತ್ರದ ಬಗ್ಗೆ ಕೆಲವು ಉದ್ದಾಮ ಗ್ರಂಥಗಳನ್ನು ಬರೆದುದಲ್ಲದೆ "ಹರ್ಷಚರಿತ್ರೆ"ಯನ್ನೂ ಇಂಗ್ಲಿಷ್‌ಗೆ ಭಾಷಾಂತರಿಸಿದನು. ಕೆಲವು ಪ್ರಾಚೀನ ಗ್ರಂಥಗಳ ಮೇಲೆ ಟೀಕೆಯನ್ನೂ ವೇದ ಸಂಹಿತೆಗಳ ಭಾಷಾಂತರವನ್ನೂ ಮಾಡಿದನು. ಕೇಂಬ್ರಿಡ್ಜ್‌ನಲ್ಲಿದ್ದ ಇನ್ನೋರ್ವ ಸಂಸ್ಕೃತ ವಿದ್ವಾಂಸ C. M. Ridding ಇವನು ಬಾಣನ 'ಕಾದಂಬರಿ'ಯನ್ನು ಇಂಗ್ಲಿಷ್‌ನಲ್ಲಿ ಬರೆದದ್ದು. 1896ರಲ್ಲಿ Oriental Translation Fund ಸಂಸ್ಥೆಯಿಂದ ಪ್ರಕಟವಾಯಿತು. ಇದಕ್ಕೆ ಬೊಂಬಾಯಿಯಲ್ಲಿದ್ದ Prof. P. Peterson ಇವನು ಅಮೂಲ್ಯವಾದ ಮುನ್ನುಡಿಯನ್ನು ಬರೆದನು.

ಭಾರತೀಯ ಸಾಹಿತ್ಯ ಪ್ರಚಾರಕ್ಕೆ ಅಂದು ಯೂರೋಪಿನಲ್ಲಿ ಹಲವು ಸಂಸ್ಥೆಗಳು ಇದ್ದುವು. ಅವುಗಳಲ್ಲಿ ಜರ್ಮನಿಯ Sanskrit Epic Text Society ಇದು ನೂರಾರು ಗ್ರಂಥಗಳನ್ನು ಪ್ರಕಟಿಸಿ ಹೊರತಂದಿತು. ಋಗ್ವೇದ ಸಂಹಿತೆಗಳು, ಮಹಾಭಾರತ, ಗೃಹ್ಯಸೂತ್ರ ಮತ್ತು ಸಂಸ್ಕೃತ ಸಾಹಿತ್ಯ ಚರಿತ್ರೆ ಇವುಗಳನ್ನು ಬರೆದ Dr. M. Winternitz ಇವನ ಒಂದೆರಡು ಗ್ರಂಥಗಳೂ ಆ ಸಂಸ್ಥೆಯ ಮೂಲಕವಾಗಿಯೇ ಪ್ರಕಟವಾದುವು. ಹಿಂದೂ ನ್ಯಾಯ ಶಾಸ್ತ್ರವನ್ನು ಕಳೆದ ಶತಮಾನದಲ್ಲಿ ಕಡೇ ಬಾರಿಗೆ ಬರೆದ J. H. Nelson ಇವನೂ ಮತ್ತು A Literary History of India ಎಂಬ 400 demy ಪುಟಗಳ ಗ್ರಂಥವನ್ನು 1898 ರಲ್ಲಿ ಪ್ರಕಟಿಸಿದ R. W. Fraser ಇವನೂ ಮಹಾಭಾರತವನ್ನು ಇಂಗ್ಲೀಷ್ ಸರಳ ರಗಳೆಯಲ್ಲಿ ಬರೆದ Stanley P. Rice ಇವನೂ ಕಳೆದ ಶತಮಾನದಲ್ಲಿದ್ದೂ ಈ ಶತಮಾನಕ್ಕೆ ಸೇರಿದ್ದ ಹಲವು ವಿದ್ವಾಂಸರಲ್ಲಿ ಕೆಲವರಾಗಿದ್ದಾರೆ.

**೯. ಪ್ರಾಕ್ತನ ವಿಚಾರ ಸಂಶೋಧಕ ಮತ್ತು ಭಾಷಾಶಾಸ್ತ್ರಜ್ಞ ಡಾ. ಬೀಮ್ಸ್:-**

ಭಾರತೀಯ ಭಾಷಾಶಾಸ್ತ್ರಕ್ಕೆ ತಕ್ಕ ರೂಪನ್ನು ಕೊಟ್ಟು ಆ ದಿಶೆಯಲ್ಲಿ ಬಹು ನಿಷ್ಠೆಯಿಂದ ದುಡಿದವರು N. Halhed, W. Jones, H. Cole brooke, W. Carey ಮತ್ತು Prof. Wilson ಇವರು. ಆದರೆ ಇವರು ಭಾಷಾ ಶಾಸ್ತ್ರವನ್ನಷ್ಟೇ ಅಲ್ಲ, ಇತರ ಹಲವು ಕ್ಷೇತ್ರಗಳಲ್ಲೂ ಬಹು ವಿಧವಾಗಿ ದುಡಿದ ಮೇಧಾವಿಗಳು.

ಭಾರತದ ನೂರಾರು ಭಾಷೆಗಳನ್ನೂ ಏಷ್ಯಾಖಂಡದ ಪ್ರಾಮುಖ್ಯ ಭಾಷೆಗಳನ್ನೂ ಶಾಸ್ತ್ರೀಯವಾಗಿ ಸಮನ್ವಯಗೊಳಿಸಿ ಉದ್ಧಾನು ವ್ಯಾಖ್ಯಾನವನ್ನು ನಡೆಸಿದ Dr. Brian Hodgson ಇವನನ್ನು ಕುರಿತು ಹಿಂದೆಯೇ ಹೇಳಲಾಗಿದೆ. ಇವನನಂತರ Rev. R. Caldwell ಇವನು ದ್ರಾವಿಡ ಭಾಷೆಗಳನ್ನು ಕುರಿತು ತುಲನಾತ್ಮಕ ವಿವೇಚನೆಯನ್ನು ನಡೆಸಿದನು. ಈ ಪ್ರಚಂಡ ವಿದ್ವಾಂಸರ ಮೂಲಕ "The foundations of Sanskrit Philology were thus at last soundly laid" ಎಂಬುದು ದೃಢವಾಯಿತು. ಇದೇ ವೇಳೆಗೆ ಈ ದೇಶದ ನೂರಾರು ಇತರ ಪ್ರಾಂತೀಯ ಭಾಷೆಗಳನ್ನು ಕುರಿತು ತಜ್ಞರಾದ ಪಾಶ್ಚಾತ್ಯ ಸಾಹಿತಿಗಳು ಭಾಷಾಶಾಸ್ತ್ರ ಗ್ರಂಥಗಳನ್ನು ಬರೆಯುತ್ತಲೇ ಇದ್ದರು.

ಇಂಥಾ ಒರ್ವ ಪ್ರಸಿದ್ಧ ಭಾಷಾ ಶಾಸ್ತ್ರಜ್ಞನು Dr. John Beames ಇವನು. ಕೇವಲ ಯುವಕನಾಗಿದ್ದು ಮತ್ತು ಕುಂಪೆನೀ ಸರಕಾರದಲ್ಲಿ ಒಂದು ಅಧಿಕಾರ ಸ್ಥಾನವನ್ನು ಪಡೆದಿದ್ದು ಇವನು ಕ್ಷಿಪ್ರದಲ್ಲಿಯೇ ಸಂಸ್ಕೃತ, ಪರ್ಷಿಯನ್, ಬಂಗಾಳೀ, ಒರಿಯಾ, ಹಿಂದೂಸ್ಥಾನೀ, ಮರಾಠೀ ಇತ್ಯಾದಿ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ಅದರ ಪರಿಣಾಮವಾಗಿ 1867ರಲ್ಲಿ "Outlines of Indian Philology" ಇದನ್ನು ಬರೆದು ಭಾರತೀಯ ಭಾಷಾಶಾಸ್ತ್ರಕ್ಕೆ ತನ್ನ ಮೊದಲನೇ ಕಾಣಿಕೆಯನ್ನರ್ಪಿಸಿದನು. ಇವನ ಅಭಿಪ್ರಾಯದಂತೆ ಮರಾಠಿ, ಕೊಂಕಣಿ ಮತ್ತು ಡೆಕ್ಕನೀ ಭಾಷೆಗಳು ಮೂಲತಃ ಗೋಮಂತ ಯಾ ಗೋಮಂತಕೀ ಯಾ ಗೋವಾ ಭಾಷೆಯಿಂದ ಹುಟ್ಟಿದ್ದುವೆಂದು ಪ್ರತಿಪಾದಿಸಿದನು.

Dr. John Beames ಇವನು ಅದೆಷ್ಟು ದೊಡ್ಡ ಭಾಷಾ ಶಾಸ್ತ್ರಜ್ಞನೋ ಅಷ್ಟೇ ದೊಡ್ಡ ಪ್ರಾಕ್ತನ ವಿಚಾರ ಪರಿಶೋಧಕನೂ ಇತಿಹಾಸಕಾರನೂ ಆಗಿದ್ದನು. ಈ ದೇಶದ ವಿಚಾರವಾಗಿ ಬರೆದ ಅವನ ಹಲವು ಗ್ರಂಥಗಳಲ್ಲಿ ಮೊದಲನೇಯದು 1862 ರಲ್ಲಿ ಪ್ರಕಟವಾಯಿತು. ಇವನು ಬರೆದ ಸಂಶೋಧನಾ ಲೇಖನಗಳೂ ಹಲವು ಇವೆ. ಹಿಂದೂಸ್ಥಾನೀ, ಅಸ್ಸಾಮೀ, ಬಂಗಾಳೀ, ಮತ್ತು ಒರಿಯಾ ಭಾಷೆಗಳ ಮೇಲೆ ಮತ್ತು ಆಯಾ ಭಾಷಾಪ್ರದೇಶಗಳ ಮೇಲೆ ಅವನು ಬರೆದ ಸಂಶೋಧನಾ ಲೇಖನಗಳು Asiatic Journal, Literary Review, Indian Antiquary ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾದುದು ಒಟ್ಟಾಗಿ 600 folio ಪುಟಗಳಷ್ಟು ಆಗಿವೆಯೆಂದರೆ ಅದೊಂದು ಅಸಾಧಾರಣವಾದ ಸಾಹಸವೆಂದೇ ಹೇಳಬೇಕಾಗಿದೆ. Dr. Beames ಇವನ ಅನ್ವೇಷಣಾ ಕಾರ್ಯವು ಬರೇ ಉತ್ತರ ಹಿಂದೂಸ್ಥಾನಕ್ಕೆ ಮಾತ್ರ ವ್ಯಾಪಿಸಿದ್ದಿತು.

**೧೦. ಕ| ಮೆಡೋಸ್ ಟೈಲರ್—ಇವನ ಆದರ್ಶ ಜೀವನ :—**

Philip Meadows Taylor ಇವನು ಇಂಗ್ಲೆಂಡಿನ ಲಿವರ್‌ಪೂಲ್‌ನಲ್ಲಿ 1808ರಲ್ಲಿ ಹುಟ್ಟಿದನು. ಇವನ ತಂದೆಯು ಇಂಗ್ಲೆಂಡಿನ ಒರ್ವ ಪ್ರಾಮುಖ್ಯ ವ್ಯಾಪಾರಸ್ಥನಾಗಿದ್ದನು. ಆದ್ದರಿಂದ ಕೇವಲ ಹುಡುಗನಾಗಿದ್ದಾಗಲೇ ಹಿಂದೂಸ್ಥಾನಕ್ಕೆ ಬರು

ತ್ತಿದ್ದ ಒಂದು ಹಡಗಿನಲ್ಲಿ ತನ್ನ ತಂದೆಯ ವ್ಯಾಪಾರೀ ಮಿತ್ರರೊಡನೆ Philip M. Taylor ಇವನು ಈ ದೇಶಕ್ಕೆ ಬಂದು ಬೊಂಬಾಯಿಯಲ್ಲಿ ಇಳಿದನು. 1824ರಲ್ಲಿ ಅವನಿಗೆ ಹೈದರಾಬಾದು ನೈಜಾಮನ ಸೇನೆಯಲ್ಲಿ Second Lieutenant ಸ್ಥಾನವು ದೊರಕಿತು. ಅಲ್ಲಿಂದನಂತರ 36 ವರ್ಷಗಳ ಕಾಲ ಅವನು ಈ ದೇಶದಲ್ಲಿ ಇದ್ದನು.

Philip Meadows Taylor ಇವನು ಶೀಘ್ರದಲ್ಲಿಯೇ ಭಾರತೀಯ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ಸುಸಂಸ್ಕೃತನಾದ ಈ ಮಹಾವ್ಯಕ್ತಿಯು ಈ ದೇಶದ ಆಚಾರ ವಿಚಾರ, ಇತಿಹಾಸ, ಪ್ರಾಕ್ತನ ವಿಚಾರ, ಭೂಗೋಳ ಶಾಸ್ತ್ರ, ಇತ್ಯಾದಿಗಳಲ್ಲಿ ಆಸಕ್ತಿಯನ್ನು ವಹಿಸಿದನು. ಈ ಎಲ್ಲಾ ವಿಷಯಗಳ ಮೇಲೆ ಲೇಖನಗಳನ್ನು ಬರೆಯಲು ಆರಂಭಿಸಿದನು. ಅವನು ಈ ದೇಶದಲ್ಲಿ ಇದ್ದ ಅವಧಿಯಲ್ಲಿ ರಾಜಕಾರಿಣಿ, ನ್ಯಾಯಾಧೀಶ, ಇಂಜಿನಿಯರ್, ಚಿತ್ರಕಲಾವಿದ, ಕಾದಂಬರಿಕಾರ, ಮತ್ತು ಇತಿಹಾಸಕಾರನಾಗಿ ತನ್ನ ದಿನಗಳನ್ನು ಕಳೆದನು. ಹೈದರಾಬಾದಿನಲ್ಲಿ ಆ ರಾಜ್ಯದ ಪೋಲೀಸ್ ಅಧಿಕಾರಿಯಾಗಿದ್ದಾಗ ಅವನು "The Confessions of a Thug" ಎಂಬ ಪ್ರಖ್ಯಾತ ಕಾದಂಬರಿಯನ್ನು ಬರೆದಿದ್ದು 1840ರಲ್ಲಿ ಪ್ರಕಟವಾಯಿತು. ಅದರನಂತರ "ಟಿಪ್ಪುಸುಲ್ತಾನ್", "ಸೀತಾ", "ತಾರಾ", ಎಂಬೀ ಮೊದಲಾದ ಕಾದಂಬರೀ ಗ್ರಂಥಗಳನ್ನು ಬರೆದಿದ್ದು ಐತಿಹಾಸಿಕವಾಗಿಯೂ ತುಂಬಾ ಜನಪ್ರೀಯವಾದ ಇಂಗ್ಲೀಷ್ ಬರೆವಣಿಗೆಗಳಾದುವು.

Col. Meadows Taylor ಇವನು 1840 ರಿಂದ 1853 ರವರೆಗೆ ಲಂಡನ್ನಿನ The Times ಪತ್ರಿಕೆಯ ಸುದ್ದಿಗಾರನಾಗಿಯೂ ಇದ್ದನು. 1850 ರಲ್ಲಿ ಅವನು ಕರ್ಣಾಟಕದ ಸುರಪುರವೆಂಬ ಚಿಕ್ಕ ರಾಜ್ಯದ ಅಧಿಕಾರಿಯಾಗಿ ನೇಮಿಸಲ್ಪಟ್ಟಾಗ ಅವನು ತನ್ನ ಆಡಳಿತ ಕೌಶಲ್ಯವನ್ನು ತೋರ್ಪಡಿಸಿದನು. ಸುರಪುರದ ರಾಜಕುಮಾರ ವೆಂಕಟಪ್ಪನನ್ನು ತನ್ನ ಮಗನಂತೆ ಭಾವಿಸಿ ಸಲಹಿದನು. ಅನಂತರ ಅವರು ದಕ್ಷಿಣದ 'ಸೀಡೆಡ್' ಜಿಲ್ಲೆಗಳ ಮೇಲಾಧಿಕಾರಿಯಾಗಿಯೂ ಇದ್ದನು. Col. Taylor ಇವನು ತನ್ನ 23ನೇ ವಯಸ್ಸಿನಲ್ಲಿ Mary Palmer ಇವಳನ್ನು ವಿವಾಹವಾಗಿದ್ದನು. ಆದರೆ ಅವಳು 1844 ರಲ್ಲಿ ಕಾಲವಾಗಲು ಅವನು ಏಕಾಂಗಿಯಾಗಿ ಒರ್ವ ಹಿಂದೂ ಋಷಿಯಂತೆಯೇ ತನ್ನ ಜೀವನವನ್ನು ಕಳೆದನು. 1860 ರಲ್ಲಿ ಅವನು ತನ್ನ ಕೆಲಸದಿಂದ ನಿವೃತ್ತನಾಗಿ ಸ್ವದೇಶಕ್ಕೆ ಹಿಂದಿರುಗಿದನು. ತನ್ನ ಜೀವನದ ಉಳಿದ ಅವಧಿಯನ್ನು ಇಂಗ್ಲೆಂಡಿನಲ್ಲಿಯೇ ಕಳೆದನಾದರೂ ಅವನ ಹೃದಯವು ಹಿಂದೂಸ್ಥಾನದಲ್ಲಿ ನೆಲೆಸಿತ್ತೆಂಬುದಕ್ಕೆ ಅವನು ಈ ದೇಶದ ವಿಚಾರವಾಗಿ ಬರೆದ ಗ್ರಂಥಗಳು, ಬಿಡಿಸಿದ ಬಣ್ಣಚಿತ್ರಗಳು ಮತ್ತು ಸಂಶೋಧಿಸಿದ ಪ್ರಾಕ್ತನ ವಿಚಾರ 'ವಿಶೇಷ'ಗಳ ಮೇಲೆ ಬರೆದ ಲೇಖನಗಳು ಸಾಕ್ಷ್ಯವಾಗಿವೆ. 1870 ರಲ್ಲಿ ಅವನು "A Student's Manual of Indian History" ಇದನ್ನು ಬರೆದನು. ಅದರನಂತರ ಅವನು ತನ್ನ ಆತ್ಮಚರಿತ್ರೆಯನ್ನು "Story of My Life" ಎಂಬುದಾಗಿ ಬರೆದನು. ಅದರಲ್ಲಿ ಅವನು ಹೇಳಿದ ಈ ಮಾತು ಅವನ ಸಭ್ಯತೆಗೆ ಮತ್ತು ಸಂಸ್ಕೃತಿಗೆ

ನಿದರ್ಶನವಾದುದಾಗಿದೆ :—

"One word, one last reflection in regard to India, may not be out of place. It is to advice all who go there in whatever capacity, or whatever position they may hold,-use true courtesy." Meadows Taylor ಇವನು ಭಾರತದ ಬಗ್ಗೆ ವಿಶೇಷ ಪ್ರೀತಿಯನ್ನು ತಳೆದಿದ್ದನು. ಹೈದರಾಬಾದು ರಾಜ್ಯದ ಅಂದಿನ ಮುಖ್ಯಮಂತ್ರಿ ಸರ್ ಸಾಲಾರ್ ಜಂಗ್ ಇವನ ಆಮಂತ್ರಣದ ಮೇಲೆ 1875 ರಲ್ಲಿ ಅವನು ಈ ದೇಶಕ್ಕೆ ಬಂದು ಹೋದನು. 1876 ರ ಮೇ ತಿಂಗಳಲ್ಲಿ ತನ್ನ 67ನೇ ವರ್ಷ ಪ್ರಾಯದಲ್ಲಿ ಆವನು ವಿಧಿವಶನಾದನು. ಹಳೇ ಹೈದರಾಬಾದು ರಾಜ್ಯದಲ್ಲಿ ಆವನು ಒರ್ವ ರಾಜಕಾರಿಣಿ, ಸಾಹಿತಿ, ಸಂಶೋಧಕ, ಚಿತ್ರಗಾರ ಮತ್ತು ಇತಿಹಾಸಕಾರನಾಗಿ ಅವನ ಹೆಸರು ಇಂದಿಗೂ ಮನೆಮಾತಾಗಿದೆಯೆಂಬಂತೆ ಅವನು ತನ್ನ ಪ್ರಭಾವವನ್ನು ಬೀರಿದ್ದನು.

**೧೧. ಡಾ. ಆರ್ಥರ್ ಬರ್ನೆಲ್—ಇವನ ವಿದ್ವತ್ತು ಮತ್ತು ಸಂಶೋಧನೆ :—**

ಕಳೆದ ಶತಮಾನದಲ್ಲಿ ಮದ್ರಾಸು ಆಧಿಪತ್ಯದ ಅಧಿಕಾರೀ ವರ್ಗಕ್ಕೆ ಸೇರಿದ್ದ Dr. Arthur Coke Burnell ಇವನು ಮತ್ತೋರ್ವ ಪ್ರಸಿದ್ಧ ಸಂಸ್ಕೃತ ವಿದ್ವಾಂಸನಾಗಿದ್ದನು. ಬಹು ಕಾಲ ತಂಜಾವೂರಿನಲ್ಲಿ ಜಿಲ್ಲಾಧಿಕಾರಿಯಾಗಿದ್ದ ಇವನು ತಂಜಾವೂರು ರಾಜನ ಅರಮನೆಯಿಂದ ಹಲವು ಸಂಸ್ಕೃತ ಸಾಹಿತ್ಯದ ಓಲೆ ಪ್ರತಿಗಳನ್ನು ಸಂಪಾದಿಸಿ ಬೆಳಕಿಗೆ ತಂದನು 'ಮಹಾಭಾರತ' ಮಹಾಕಾವ್ಯದ ಹಲವಾರು ಓಲೆಗಳನ್ನು ಮತ್ತು ಬೇರೆ ಬೇರೆ ಕಾಲದಲ್ಲಿ ಬರೆಯಲ್ಪಟ್ಟ ಆ ಕಾವ್ಯದ ಪ್ರತಿಗಳನ್ನು ಇನ್ನೂರಕ್ಕೂ ಮೇಲ್ಪಟ್ಟು ಸಂಗ್ರಹಿಸಿದನು. ಹೀಗಾಗಿ 'ಮಹಾಭಾರತ' ವನ್ನು ಆಧಾರಪೂರ್ವಕವಾಗಿ ಸಂಶೋಧಿಸಿ ಪ್ರಕಟಿಸಿದ ಪಾಶ್ಚಾತ್ಯರಲ್ಲಿ ಈ Dr. A. C. Burnell ಇವನು ಅಗ್ರಗಣ್ಯನಾಗಿರುವನು. ಸುದೀರ್ಘವಾದ ಶಬ್ದಕೋಶ ಮತ್ತು ಟೀಕೆಯೊಡನೆ ಪ್ರಕಟವಾದ ಆವನ 'ಮಹಾಭಾರತ'ವು 1,000 demy ಪುಟಗಳಲ್ಲಿ 1886 ರಲ್ಲಿ ಮೊದಲನೇ ಬಾರಿಗೆ ಹೊರಬಂತು.

ತಂಜಾವೂರು ಮತ್ತು ದಕ್ಷಿಣ ಹಿಂದೂಸ್ಥಾನದ ಇತರ ಕೇಂದ್ರಗಳಿಂದ ಅಸಂಖ್ಯ ಓಲೆಗ್ರಂಥಗಳನ್ನು ಅನ್ವೇಷಿಸಿದ ಇವನು ತಂಜಾವೂರಿನ ಪ್ರಾಚೀನ ಗ್ರಂಥ ಭಂಡಾರವನ್ನು ವಿಸ್ತರಿಸಿದನು. ಮನುಸ್ಮೃತಿಯನ್ನು ಭಾಷಾಂತರಿಸಿದನು. ಸಾಮವೇದದ ಓಲೆಗ್ರಂಥಗಳನ್ನು ಸಂಪಾದಿಸಿದಲ್ಲದೆ ಅದರ ಹಲವು ಭಾಗಗಳನ್ನು ಭಾಷಾಂತರಿಸಿ ಟೀಕೆಯನ್ನೂ ಬರೆದನು. ದಕ್ಷಿಣ ಭಾರತದ ಚಾರಿತ್ರಿಕ ಘಟನೆಗಳ ಮೇಲೆ ಮತ್ತು ಹಲವು ಪ್ರಸಿದ್ಧ ಸಾಹಿತ್ಯ ಗ್ರಂಥಗಳ ಮೇಲೆ ವಿದ್ವತ್ಪೂರ್ಣವಾದ ಲೇಖನಗಳನ್ನೂ ಅದೆಷ್ಟೋ ಬರೆದನು.

ಪ್ರಾಚೀನ ಶಿಲಾಲೇಖ ಪರಿಶೋಧನಾ ವಿದ್ಯೆಯಲ್ಲಿ ಕುಶಲನಾದ Arthur Coke Burnell ಇವನು ದಕ್ಷಿಣ ಹಿಂದೂಸ್ಥಾನದ ನೂರಾರು ಶಿಲಾಶಾಸನಗಳನ್ನು ಪರಿಶೋಧಿಸಿದ್ದಲ್ಲದೆ ಅವುಗಳ ಐತಿಹಾಸಿಕ ವಿವರಗಳನ್ನು ಕುರಿತಾಗಿಯೂ ಗ್ರಂಥಗಳನ್ನು

ರಚಿಸಿದನು. ಹೀಗೆ ಬರೆದ ಅವನ ಗ್ರಂಥಗಳಲ್ಲಿ South Indian Palaeography ಇದು ಇತಿಹಾಸ ಸಂಶೋಧಕರಿಗೆ ತುಂಬಾ ಪ್ರಯೋಜನವಾಯಿತು. ದಕ್ಷಿಣ ಮತ್ತು ಪಶ್ಚಿಮ ಹಿಂದೂಸ್ಥಾನದ ಸಾಹಿತ್ಯ ಮತ್ತು ಇತಿಹಾಸ ಸಂಶೋಧನೆಯಲ್ಲಿ A. C. Burnell ಇವನು Dr. Bhuler, James Fleet, James Burgess ಈ ಮೊದಲಾದ ವಿದ್ವಾಂಸರಷ್ಟೇ ಪ್ರಸಿದ್ಧನಾಗಿದ್ದನು. ಸಂಸ್ಕೃತ ಭಾಷೆಯಲ್ಲದೆ ತಮಿಳು, ಕನ್ನಡ, ತೆಲುಗು ಇತ್ಯಾದಿ ದಾಕ್ಷಿಣಾತ್ಯ ಭಾಷೆಗಳಲ್ಲೂ ವಿಶೇಷ ಪಂಡಿತನಾಗಿದ್ದನು. ಕೊಂಕಣಿ, ತುಳು, ಒಡಗ ಮತ್ತು ತೋಡ ಭಾಷೆಗಳಲ್ಲೂ ಕುಶಲನಾಗಿದ್ದನು. Dr. Burnell ಇವನ ಕನ್ನಡ ಭಾಷಾ ಸೇವೆಯನ್ನು ಕುರಿತಾಗಿ ಮುಂದಿನ ಪುಟಗಳಲ್ಲಿ ನಿರೂಪಿಸಲಾಗುವುದು.

**೧೨. ಸರ್ ವಾಲ್ಟರ್ ಎಲ್ಯಟ್ ಮತ್ತು ಡಾ. ಜಾರ್ಜ್ ಪೋಪ್ ಇವರು :-**

ಕ್ರಿ.ಶ. ೧೯ನೇ ಶತಮಾನದ ಮೊದಲ ಭಾಗದಲ್ಲಿ ಮದ್ರಾಸು ಸರಕಾರದಲ್ಲಿ ದುಡಿಯುತ್ತಿದ್ದ ಉಚ್ಚವರ್ಗದ ಸಂಶೋಧಕರಲ್ಲಿ Sir Walter Elliot ಇವನೂ ಒಬ್ಬನು. ದಕ್ಷಿಣ ಹಿಂದೂಸ್ಥಾನದಲ್ಲಿ ಹಲವು ವರ್ಷಗಳ ಕಾಲ ಇದ್ದ ಇವನು ಕಲ್ಕತ್ತಾ Royal Asiatic Society ಮತ್ತು ಅದರ ಮದ್ರಾಸು ಶಾಖೆಯ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಪಾರ ಸೇವೆಯನ್ನು ಸಲ್ಲಿಸಿದನು. ಹಲವು ಪ್ರಾಚೀನ ಕನ್ನಡ ಶಿಲಾಶಾಸನಗಳ ಗೂಢಲಿಪಿಗಳನ್ನು ಓದಿ ಅರ್ಥಮಾಡಿ (decipher) ಬರೆದ ಸಾಹಸವು ಇವನದಾಗಿದೆ. ಹಳೆಗನ್ನಡ ಶಾಸನ ಲಿಪಿಗಳನ್ನು ಬಹು ಶ್ರಮವಹಿಸಿ ಅವನ್ನೆಲ್ಲಾ ಹೊಸ ಲಿಪಿಗೆ ತಿಳಿಸಿದ ಅವನ ಲೇಖನವೊಂದು 1833 ರಷ್ಟು ಹಿಂದೆಯೇ ಪ್ರಕಟವಾಯಿತು. ಒಟ್ಟಾಗಿ ಇವನು ಕರ್ಣಾಟಕದ ಮತ್ತು ಇತರ ಪ್ರಾಂತಗಳ 595 ಶಿಲಾಶಾಸನಗಳನ್ನು ಓದಿ ಅವುಗಳನ್ನು ಪರಿಷ್ಕರಿಸಿ ಆಯಾ ಪ್ರಾದೇಶಿಕ ಭಾಷೆಗಳಲ್ಲೂ ಇಂಗ್ಲಿಷ್‌ನಲ್ಲೂ ಬರೆದನು.

Sir Walter Elliot ಇವನು ಬನವಾಸಿಯ ಕದಂಬರನ್ನು ಕುರಿತು ಮತ್ತು ಹಾನಗಲ್ಲು, ಧಾರವಾಡ ಮತ್ತು ಸುತ್ತುಮುತ್ತಣ ಸೀಮೆಗಳ ಪ್ರಾಚೀನತೆಯನ್ನು ಕುರಿತು 1872 ರಲ್ಲಿ ವಿದ್ವತ್ಪೂರ್ವಕವಾದ ಲೇಖನಗಳನ್ನು ಬರೆವನು. ಕನ್ನಡ, ಮರಾಠಿ, ತೆಲುಗು, ತಮಿಳು, ಸಂಸ್ಕೃತ, ಪಾಲೀ ಇತ್ಯಾದಿ ಭಾಷೆಗಳಲ್ಲಿ ಪ್ರೌಢಿಮೆಯನ್ನು ಗಳಿಸಿದ ಈ ಮೇಧಾವಿಯು 1876 ರ ಕಾಲಕ್ಕೆ ಬಹು ನುರಿತ ವಿದ್ವಾಂಸನಾಗಿದ್ದನು. ಗಂಗರ, ಚೇರರ ಮತ್ತು ಚೋಳರ ಕಾಲದ ಪ್ರಾಚೀನ ತಾಮ್ರ ಶಾಸನಗಳನ್ನು ಕುರಿತಾಗಿ ದೀರ್ಘ ಅನ್ವೇಷಣೆಯನ್ನು ನಡೆಸಿದನು.

ಜರ್ಮನ್ Oriental Society ಇದಕ್ಕೆ ಸೇರಿದ್ದು ಮದ್ರಾಸಿನಲ್ಲಿದ್ದ Dr. George U. Pope ಇವನು Robert Caldwell, John Beames, Dr. Bleek ಈ ಮೊದಲಾದವರಂತೆ ಭಾರತೀಯ ಭಾಷಾಶಾಸ್ತ್ರದಲ್ಲಿ ಉದ್ದಾಮ ಪಂಡಿತನೆನಿಸಿದ್ದನು. ಭಾಷಾಶಾಸ್ತ್ರವನ್ನು ಕುರಿತು Literary Review, Asiatic Journal ಮತ್ತು Indian Antiquary ಪತ್ರಿಕೆಗಳಲ್ಲಿ

ಹಲವು ಲೇಖನಗಳನ್ನು ಬರೆದಿದ್ದ ಇವನ ಬರವಣಿಗೆಯು ಸುಮಾರು 1500 folio ಪುಟಗಳನ್ನೂ ಮೀರಿ ಇವೆ. "Dravidian Family of Languages" ಎಂಬುದಾಗಿ ಬರೆದ ವಿಚಾರಗರ್ಭಿತವಾದ ಲೇಖನದಲ್ಲಿ ಅವನು ದಕ್ಷಿಣದ ಭಾಷೆಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿದ್ದಾನೆ. ಹಲವು ಸಂದರ್ಭಗಳಲ್ಲಿ ಅವನು Dr. Caldwell ಇವನ ಅಭಿಪ್ರಾಯಗಳನ್ನು ಒಪ್ಪದೇ ಇದ್ದು ತನಗೆ ತೋರಿದಂತೆ ಸೂಕ್ತವಾದ ಟೀಕೆಗಳನ್ನು ಕೊಟ್ಟಿದ್ದಾನೆ. ಉದಾಹರಣೆಗೆ Dr. G. U. Pope ಇವನ ಲೇಖನಗಳಿಂದ ಈ ಕೆಲವು ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ:—

"In preparing a slight sketch of the Tuda grammar, and in making collections for a similar paper on the real Kurgi dialect, I have felt impressed with the conviction that we must begin with the less cultivated dialects of the family before we can judge fairly of the most cultivated members of it. I may hazard the assertion 'in limini' that Tuda, Kurgi and old Kannada differ far less widely from the Indo-European languages than the cultivated Tamil does."

ಭಾಷೆಗಳೂ ನುಡಿಗಟ್ಟುಗಳೂ ಎಷ್ಟೇ ದೊಡ್ಡದಿರಲಿ, ಅಲ್ಪವಾದುದೇ ಇರಲಿ, ಅವೆಲ್ಲವನ್ನೂ ಬಹು ಆಳವಾಗಿ ಅಭ್ಯಸಿಸಿ ಆ ಎಲ್ಲಾ ಭಾಷೆಗಳ, ಪದಗಳ, ರೂಪಾಂತರವೆಲ್ಲವನ್ನೂ ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸಿ ಅವುಗಳ ಮೇಲೆ ಶಾಸ್ತ್ರೀಯವಾಗಿ ವಿವರಣೆಗಳನ್ನು ಈ ಎಲ್ಲಾ ವಿದ್ವಾಂಸರ ಲೇಖನಗಳನ್ನೂ ಭಾಷಾಶಾಸ್ತ್ರ ಗ್ರಂಥಗಳನ್ನೂ ನೋಡಿದಾಗ ವ್ಯಕ್ತವಾಗುತ್ತದೆ.

೧೩. ಡಾ. ಗ್ರೀಯರ್ಸನ್–ಇವನಿಂದ ಭಾರತೀಯ ಭಾಷೆಗಳ ಪರಿಶೀಲನೆ:-

ಬ್ರಿಟಿಷ್ ಸರಕಾರವು ಈ ದೇಶದ ವಿವಿಧ ಕ್ಷೇತ್ರಗಳಲ್ಲಿ ಎಸಗಿದ ಅಭೂತಪೂರ್ವ ಸಾಹಸಗಳಲ್ಲಿ, ಯೋಜನೆಗಳಲ್ಲಿ, ಚಟುವಟಿಕೆಗಳಲ್ಲಿ ಪ್ರಾಮುಖ್ಯವಾದುದು ಭಾರತೀಯ ಇತಿಹಾಸ, ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳ ಸಂಶೋಧನೆಯೆಂಬುದನ್ನು ಮೇಲಿಂದ ಮೇಲೆ ಹೇಳದೆ ನಿರ್ವಾಹವಿಲ್ಲ. ಕಳೆದ ಶತಮಾನದ ಅಂತ್ಯದಲ್ಲಿ ಭಾರತ ಸರಕಾರದಲ್ಲಿ ಉಚ್ಚವರ್ಗದ ಅಧಿಕಾರಿಯೂ ವಿದ್ವಾಂಸನೂ ಆಗಿದ್ದ George Abraham Grierson ಇವನು ಈ ದೇಶದ Linguistic Survey ಇದನ್ನು ಜಯಪ್ರದವಾಗಿ ಕೈಗೊಂಡು ಒಂದು ಮಹತ್ತಾದ ಕಾರ್ಯವನ್ನು ಸಾಧಿಸಿದನು. ಹಿಂದೂಸ್ಥಾನದಲ್ಲಿ ಹಲವು ಸಾವಿರ ಭಾಷೆಗಳೂ ಉಪಭಾಷೆಗಳೂ ಇವೆ. Dr. G. A. Grierson ಇವನು ಈ ದೇಶದ ಕಡಿಮೆ ಪಕ್ಷ 3000 ಭಾಷೆಗಳನ್ನಾದರೂ ಅನ್ವೇಷಿಸಿ ಅವುಗಳ ಮೇಲೆ ವಿಶೇಷ ವರದಿಯನ್ನು ತಯಾರಿಸಿದ್ದಾನೆ. ಈ ವಿಶಾಲ ದೇಶದ ಮೂಲೆ ಮೂಲೆಗಳಲ್ಲಿರುವ ನುಡಿಗಟ್ಟುಗಳನ್ನೆಲ್ಲಾ ತನ್ನ ಸಹಚರ ಪಾಶ್ಚಾತ್ಯ ವಿದ್ವಾಂಸರ ಮೂಲಕವಾಗಿಯೇ ಹೆಕ್ಕಿಸಿ ಅವುಗಳ ಬುನಾದಿ ಬುಡಕಟ್ಟುಗಳ ಪರಿಚಯವನ್ನು ಮಾಡಿಕೊಟ್ಟಿದ್ದಾನೆ. ಹೀಗಾಗಿ ಕೇವಲ ಸ್ಥಳದಿಂದ ಸ್ಥಳಕ್ಕೆ ಅಡ್ಡಾಡುವ ಜನಾಂಗಗಳ

Gipsy Languages ಇವುಗಳು ಸಹ ಇವನ ಪರ್ಯಾಲೋಚನೆಗೆ ಒಳಗಾಗಿವೆ.

Sir G. A. Grierson ಇವನು ಈ ಭಾಷಾ ಅನ್ವೇಷಣಾ ಕಾರ್ಯವನ್ನು ಸರಕಾರದ ಆದೇಶದಂತೆ ನಡೆಸಿದನು. ಅವನಿಗೆ Dr. G. Buhler, Dr. J. Burgess, R. C. Temple, Dr. Burnell, J. F. Fleet ಮೊದಲಾದ ಹಲವು ವಿದ್ವಾಂಸರು ಆ ಕೆಲಸದಲ್ಲಿ ತಕ್ಕ ಸ್ಫೂರ್ತಿ ಮತ್ತು ಸಲಹೆಗಳನ್ನಿತ್ತರು. ಅಲ್ಲದೆ ಅವನು ಅಂತರಾಷ್ಟ್ರೀಯ ಪೌರಸ್ತ್ಯ ಸಾಹಿತ್ಯ ಸಮ್ಮೇಳನದಲ್ಲೂ ಭಾಗವಹಿಸಿ Linguistic Survey ಇದನ್ನು ಕೈಗೊಳ್ಳುವ ಕ್ರಮವನ್ನೂ ಅರಿತನು. ಹೇಗೂ ಕ್ರಿ. ಶ. 1896ರ ಒಳಗಾಗಿ ಭಾರತದ ಎಲ್ಲಾ ಭಾಷೆಗಳ ಪರಿಚಯವನ್ನು ಕೊಡುವ ಅವನ ಬೃಹದಾಕಾರದ ಗ್ರಂಥಕಾಂಡಗಳು ಹನ್ನೆರಡು ಸಂಚಿಕೆಗಳಾಗಿ, ಇಪ್ಪತ್ತು ಭಾಗವಾಗಿ ಸುಮಾರು 12,000 Foolscap ಮತ್ತು folio ಪುಟಗಳಿಗೂ ಮೀರಿದ್ದು ಪ್ರತಿ ಭಾಷೆಯ ಮೇಲೆ ತಕ್ಕ ವಿವರಣೆಯ ಸಹಿತವಾಗಿ ಪ್ರಕಟವಾದುವು. ಸಾಹಿತ್ಯ ಪ್ರಧಾನವಾದ ಒಂದೇ ಭಾಷೆಯು ಒಂದೇ ಪ್ರಾಂತದ ಬೇರೆ ಬೇರೆ ಭಾಗದಲ್ಲಿ ವಿವಿಧ ರೀತಿಯಲ್ಲಿ ಆಡಲ್ಪಡುತ್ತಿರುವುದನ್ನೂ ಅಂತೆಯೇ ಸಂಗ್ರಹಿಸಿದನು. ಕರ್ಣಾಟಕದಲ್ಲಿ ಪ್ರಚಲಿತವಿರುವ ಹೊಸಗನ್ನಡ, ಹಳೆಗನ್ನಡ, ಬಿಜಾಪುರೀ ಕನ್ನಡ, ತುಳು, ಬಡಗ, ಕೊಡವ, ತೋಡ, ಕೊಂಕಣಿ ಇತ್ಯಾದಿ ಭಾಷೆಗಳೆಲ್ಲಾ ಇದರಲ್ಲಿ ವರ್ಣಿತವಾಗಿವೆ. ಇದೇ ರೀತಿಯಲ್ಲಿ ಭಾರತದ ಸಹಸ್ರಾರು ಭಾಷೆಗಳೂ ನಿದರ್ಶನಾರ್ಥವಾಗಿ ಈ ಬೃಹದ್ಗ್ರಂಥದಲ್ಲಿ ನಿರೂಪಿತವಾಗಿವೆ.

Sir Grierson ಇವನು ತನ್ನ ಈ ಉದ್ಧಾಮ ಗ್ರಂಥಕ್ಕೆ 150 folio ಪುಟಗಳಿಗೂ ಮೇಲ್ಪಟ್ಟ ವಿದ್ವತ್ಪೂರ್ಣವಾದ ಮತ್ತು ಭಾರತೀಯ ಭಾಷಾ ಶಾಸ್ತ್ರವನ್ನು ಕುರಿತಾದ ಮುನ್ನುಡಿಯನ್ನು ಬರೆದಿದ್ದಾನೆ. ತನಗಿಂತ ಹಿಂದಿದ್ದ ಪಾಶ್ಚಾತ್ಯ ಭಾಷಾ ಶಾಸ್ತ್ರಜ್ಞರು ಈ ದಿಸೆಯಲ್ಲಿ ಸಾಧಿಸಿದನ್ನು ಪ್ರಸ್ತಾಪಿಸಿದ್ದಾನೆ; ಅಲ್ಲದೆ ತನ್ನ ಪ್ರಯತ್ನವನ್ನು ಕುರಿತಾಗಿ ಹೇಳುತ್ತಾ ಕಡೆಗೆ ಬ್ರಿಟಿಷರು ಈ ದೇಶದಲ್ಲಿ ಭಾಷೆಗಳ ಅಭಿವೃದ್ಧಿಗೆ ದುಡಿದುದರ ಬಗ್ಗೆ ಈ ರೀತಿಯಾಗಿ ಹೇಳುತ್ತಾನೆ:—

"Without any pretended modesty I confess that no one is more than myself aware of the deficiencies of the Survey (Linguistic)......What has been done in it for India has been done for no other country in the world."

## ೧೪. ವಿಜಯನಗರ ರಾಜ್ಯವನ್ನು ಕುರಿತು ಡಾ. ಸಿವೆಲ್ಲನ ವರ್ಣನಾತ್ಮಕ ಬರೆಹ :—

"In the 1336 A.D., during the reign of Edward III of England, there occurred in India an event which almost instantaneously changed the political condition of the entire South. With that date the volume of ancient history in that tract closes

and the modern begins. It is the epoch of transition from the Old to the New.

" This event was the foundation of the city and kingdom of Vijayanagar......"

ಹೀಗೆ Robert Sewell ಇವನು ವಿಜಯನಗರ ಚಕ್ರಾಧಿಪತ್ಯದ ವಿಷಯವಾಗಿ ಬರೆದ "A Forgotten Empire" ಇದು ಪ್ರಾರಂಭವಾಗುತ್ತದೆ. R. Sewell ಇವನು ಮದ್ರಾಸು ಸರಕಾರದ ಪ್ರಾಕ್ತನ ಪರಿಶೋಧನಾ ಇಲಾಖೆಯ ಒರ್ವ ಅಧಿಕಾರಿಯಾಗಿದ್ದನು. ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಾಕ್ತನ ಪರಿಶೋಧನೆಯನ್ನೆಸಗಿದ ಪಾಶ್ಚಾತ್ಯರಲ್ಲಿ ಇವನೂ ಒರ್ವನಾಗಿದ್ದನು. ಪಲ್ಲವರ, ಚಾಳುಕ್ಯರ ಮತ್ತು ಇತರ ಪ್ರಾಚೀನ ರಾಜವಂಶಕ್ಕೆ ಸೇರಿದ್ದ ಶಾಸನಗಳನ್ನೆಲ್ಲಾ ಪರಿಶೋಧಿಸಿ ಹಲವು ಚಾರಿತ್ರಿಕ ಲೇಖನಗಳನ್ನು ಪ್ರಕಟಿಸಿದ ಒರ್ವ ಗಣ್ಯ ವಿದ್ವಾಂಸನು ಇವನು. ಇವನ ನೇತೃತ್ವದಲ್ಲಿಯೇ ಮದ್ರಾಸಿನಿಂದ Archaeological Survey of India ಎಂಬ ಎರಡು ಕಾಂಡಗಳ folio ಪುಟಗಳ ಸಚಿತ್ರ ಗ್ರಂಥವು 1884 ರಲ್ಲಿ ಪ್ರಕಟವಾಯಿತು.

ವಿಜಯನಗರ ರಾಜ್ಯವನ್ನು ಕುರಿತು ಬ್ರಿಟಿಷರಿಗಿಂತಲೂ ಎಷ್ಟೋ ಹಿಂದೆ ಪರ್ಷಿಯನ್, ಪೋರ್ಚುಗೀಸ್, ಡಚ್ ಮತ್ತು ಇಟಾಲಿಯನ್ ಸಾಹಿತಿಗಳೂ ಪ್ರಯಾಣಿಕರೂ ಬರೆದಿದ್ದಾರೆ. ಆ ರಾಜ್ಯದ ಅಂದಿನ ವೈಭವ, ಆಡಳಿತೆ, ವ್ಯಾಪಾರ ಸಮೃದ್ಧಿ ಇತ್ಯಾದಿಗಳನ್ನು ಕುರಿತು ಹಲವು ಪಾಶ್ಚಾತ್ಯರು ವಿಷದವಾಗಿ ಬರೆದಿದ್ದಾರೆ. ಉದಾಹರಣೆಗೆ ವಿಜಯನಗರದ ಸಂಪತ್ಸಮೃದ್ಧಿಯನ್ನು ಕುರಿತು ಅಬ್ದುಲ್ ರಝಾಕನು ಹೇಳಿದ್ದರ ಅನುವಾದವು ಹೀಗಿದೆ:—

" The city of Bijanagar is such that the pupil of the eye has never seen a place like it; and the ear of intelligence has never been informed that there existed anything to equal it in the world. It is built in such a manner that seven citadels and the same number of walls enclose each other......"

ಹೀಗಿದ್ದ ಆ ಮಹಾಸಾಮ್ರಾಜ್ಯವು ಕ್ರಿ. ಶ. 1565 ರಲ್ಲಿ ಮಹಮ್ಮದೀಯ ಧಾಳಿಗೆ ಮತ್ತು ಲೂಟಿಗೆ ಆಹುತಿಯಾಯಿತು. ಅದರನಂತರ ಎರಡು ವರ್ಷಗಳಲ್ಲಿ ಆ ರಾಜ್ಯದಲ್ಲಿ ಸಂಚರಿಸಿದ ಇಟಾಲಿಯನ್ ಪ್ರಯಾಣಿಕ Caesor Fredrick ಇವನು ಹೀಗಂದನು :—

" The city of Bijanagar is not altogether destroyed, yet the houses stand still, but empty, and there is dwelling in them nothing, as is reported, but tigers and other wild beasts."

ವಿಜಯನಗರ ರಾಜ್ಯದ ಬೊಕ್ಕಸವು ಎಲ್ಲಾ ಬಗೆಯ ರತ್ನದ ಕಟ್ಟಿಗಳಿಂದ ತುಂಬಿದ್ದಿತೆಂದೂ ಹಂಪೀ ನಗರವು ಮಹಮ್ಮದೀಯರ ಲೂಟಿಗೆ ಈಡಾದಾಗ ಅವರಿಗೆ ಕೋಳಿ ಮೊಟ್ಟೆಯ ಗಾತ್ರದ ಒಂದು ವಜ್ರದ ಕಟ್ಟೆಯು ದೊರೆತಿದ್ದು ಆದನ್ನು ಬಿಜಾಪುರದ

ಅದೀಲ್‌ಶಾಹನು ವಶಪಡಿಸಿಕೊಂಡನೆಂದೂ F. Couto ಇವನು ಹೇಳಿದ್ದಾನೆ. ಕೋಹಿನೂರು ರತ್ನದಂಥಾ ಹಲವು ರತ್ನದ ಕಟ್ಟಗಳು ಅಂತರ್ರಾಷ್ಟ್ರೀಯ ವ್ಯಾಪಾರ ಕೇಂದ್ರಗಳಲ್ಲಿ ಮಾರಾಟವಾಗುತಿದ್ದು ವಿಜಯನಗರಕ್ಕೆ ಹೇರಳ ಧನವು ಪ್ರತಿವರ್ಷವೂ ವಿದೇಶಗಳಿಂದ ಸುರಿಸಲ್ಪಡುತಿದ್ದಿತೆಂದೂ ಹೇಳಿದೆ. 1850 ರ ಕಾಲದಲ್ಲಿ ಹಂಪೆಯನ್ನು ಸಂದರ್ಶಿಸಿದ Capt. Newbold ಇವನು ಆ ಪಾಳುಬಿದ್ದ ನಗರವನ್ನು ಹೇಗೆ ಕಂಡನೆಂಬುದನ್ನು ಈ ರೀತಿ ಹೇಳಿದ್ದಾನೆ:—

"So numerous and varied are the relics of this vast open-air museum of Hindu monuments ....The temples are in a state of excellent preservation ...Thanks to the kind care of a cultured government... and... are still standing eloquent epics in granite...."

ಈ ಎಲ್ಲಾ ಹೇಳಿಕೆಗಳನ್ನನುಸರಿಸಿ Robert Sewell ಇವನು ಆ ರಾಜ್ಯದ ದುರಂತ ಚರಿತ್ರೆಯನ್ನು ವರ್ಣಿಸುತ್ತಾ ವಿಧರ್ಮಿಯರು ಆ ನಗರವನ್ನು ಹೇಗೆ ಕೊಳ್ಳೆಹೊಡೆದರೆಂಬುದನ್ನು ಹೀಗನ್ನುತ್ತಾನೆ;—

"This sack of 1565 was, perhaps worse than what Rome experienced at the hands of Alaric ..."

ಎಂದು ಹೇಳಿ ಮುಂದುವರಿಯುತ್ತಾ ಈ ರೀತಿ ಹೇಳುತ್ತಾನೆ:—

"They carried on day after day their work of destruction. Never perhaps in the history of the world has such havoc been wrought so suddenly, on so splendid a city, teaming with a wealthy and industrious population in the full plentitude of prosperity one day, and on the next seized and pillaged and reduced to ruins, amidst scenes of savage massacre and horrors beggaring description ......"

ಈ ವರ್ಣನೆಯು ಬಹು ಗಂಭೀರವಾಗಿ ಹರಿದಿದೆ. ಅಲ್ಲದೆ ಅಂದಿನ ಆ ಕರಾಳ ಕೃತ್ಯವನ್ನು ಓದುಗರ ಕಣ್ಮುಂದೆಯೇ ಇರಿಸಲಾಗಿದೆ. ಕಡೆಗೆ—

"Such was the fate of this great and magnificent city. It never recovered, but remained for ever a scene of desolation and ruin...."

ಎಂದನ್ನುತ್ತಾ ಆ ಹತ್ಯಾಕಾಂಡದ ವರದಿಯನ್ನು ಕೊನೆಗೊಳಿಸುತ್ತಾನೆ. ಆ ನಗರದ ಪಾಳುಬಿದ್ದ ಅವಶೇಷಗಳನ್ನೆಲ್ಲಾ ನಿಷ್ಠಾವಂತರಾದ ಐರೋಪ್ಯಾ ಸಂಶೋಧಕರು ಅವು ಇನ್ನೂ ಹಾಳಾಗಿ ಹೋಗದಂತೆ ಸಂಗ್ರಹಿಸಿ ಅಂತೆಯೇ ಉಳಿಸಿದ್ದಾರೆ

೧೫. ಡಾ. ಜೆಕೋಬಿ, ಫ್ಲೀಟ್, ಓಂಪಲ್ ಮೊದಲಾದ ವಿದ್ವಾಂಸರು :—

ಜರ್ಮನಿಯ ಕೈಲ್ ವಿಶ್ವವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪಕನಾಗಿದ್ದ Dr. Hermann Jacobi ಇವನು ಕಳೆದ ಶತಮಾನದ ಅಂತ್ಯದಲ್ಲಿ ಬೊಂಬಾಯಿ

ಯಲ್ಲಿ ಇದ್ದನು. ಭಾರತದ ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ಸಂಶೋಧಿಸಿದ ಪ್ರಮುಖ ವಿದ್ವಾಂಸರಲ್ಲಿ ಇವನೂ ಒಬ್ಬನು. ಹಿಂದೂ ಕಾಲಗಣನೆ, ಖಗೋಳಶಾಸ್ತ್ರ, ಮತ್ತು ಹಿಂದೂ ಪಂಚಾಂಗವನ್ನು ವರಾಹಮಿಹಿರ, ಭಾಸ್ಕರ ಮೊದಲಾದವರ ಗ್ರಂಥಗಳ ಆಧಾರದಿಂದ ಇವನು 60 folio ಪುಟಗಳಲ್ಲಿ ಬರೆದ ಲೇಖನವು 1880 ರಲ್ಲಿ ಪ್ರಕಟವಾಯಿತು. ಅಷ್ಟೇ ಶ್ರಮವಹಿಸಿ ಇನ್ನಾವ ಭಾರತೀಯ ಪಂಡಿತನು ಆ ಕೆಲಸವನ್ನು ಆ ರೀತಿಯಾಗಿ ಸಾಧಿಸಿದ್ದಾನೆಂಬುದನ್ನು ಆ ಲೇಖನವನ್ನು ನೋಡಿದ ಯಾರೊಬ್ಬನೂ ಹೇಳದಿರಲಾರನು.

Dr. James F. Fleet* ಇವನು ಒರ್ವ ಅವಿಶ್ರಾಂತ ಹಾಗೂ ಶ್ರದ್ಧಾವಂತ ಸಾಹಿತಿಯೂ ಸಂಶೋಧಕನೂ ಆಗಿದ್ದನು. ಇವನ ಬರೆವಣಿಗೆಗಳು ಅಸಂಖ್ಯ ಲೇಖನಗಳಲ್ಲೂ, ಭಾರತ ಸರಕಾರವು ಆಗಿಂದಾಗ್ಗೆ ಹೊರಡಿಸುತ್ತಿದ್ದ ಸರಕಾರೀ ಪತ್ರಗಳಲ್ಲೂ, ಪ್ರಾಂತೀಯ ಸರಕಾರಗಳ ಹಲವಾರು ಪ್ರಕಟಣೆಗಳಲ್ಲೂ ಹರಡಿಹೋಗಿವೆ. Dr. Fleet ಇವನು ಕೇಂದ್ರ ಸರಕಾರದಲ್ಲಿ ಪ್ರಾಕ್ತನ ಪರಿಶೋಧನೆಗಳ ಪರಿಶೀಲನೆಯನ್ನು ಮಾಡಿದ್ದಲ್ಲದೆ ಹಲವು ಪ್ರಾಂತಗಳ Gazetteers ಇವನ್ನು ತಯಾರಿಸುವುದರಲ್ಲೂ, ಮದ್ರಾಸು ಸರಕಾರದ Epigraphia Carnatica ಪ್ರಕಟಣೆಗಳಲ್ಲೂ ಅವನ ಕೈವಾಡವಿದ್ದೇ ಇದ್ದಿತು. ಸಹಸ್ರಾರು ಪ್ರಾಚೀನ ಶಾಸನಗಳ ಗೂಢ ಲಿಪಿಗಳನ್ನು ಓದಿ ಅರ್ಥಮಾಡಿ ವ್ಯಾಖ್ಯೆಯನ್ನು ಬರೆದ ಅವನ ಅಮೂಲ್ಯ ಕೃತಿಗಳು ಅವನ ಸಮಕಾಲೀನ ಪಾಶ್ಚಾತ್ಯ ವಿದ್ವಾಂಸರಿಗೆ ಆಧಾರ ಸಾಹಿತ್ಯವಾದುವು. ಕನ್ನಡ ಭಾಷೆಗೆ ಮತ್ತು ನಾಡಿಗೆ ಇವನು ಸಲ್ಲಿಸಿದ ಸೇವೆಯನ್ನು ಕುರಿತು ಮುಂದೆ ಪ್ರಸ್ತಾಪಿಸಲಾಗುವುದು.

Richard C. Temple ಇವನು ಬೊಂಬಾಯಿ ಅಧಿಸತ್ಯದಲ್ಲಿ ಇದ್ದ ಮತ್ತೊರ್ವ ವಾಸ್ತುಶಿಲ್ಪ ಕಲಾನ್ವೇಷಕನೂ ಸಂಸ್ಕೃತ ವಿದ್ವಾಂಸನೂ ಆಗಿದ್ದನು. 1893ರಿಂದ ಇವನು Indian Antiquary ಪತ್ರಿಕೆಯ ಸಂಪಾದಕನೂ ಆಗಿದ್ದನು. ಉತ್ತರ ಮತ್ತು ಪಶ್ಚಿಮ ಹಿಂದೂಸ್ಥಾನದ ಚರಿತ್ರೆ, ಭೂಗೋಳ, ಜನಜೀವನ, ವಾಸ್ತುಶಿಲ್ಪ, ಕಲೆ ಇತ್ಯಾದಿಗಳನ್ನು ಕುರಿತು ಇವನು ಬರೆದ ಲೇಖನಗಳು ಒಟ್ಟಾಗಿ 5000 folio ಪುಟಗಳಿಗೂ ಮೀರಿ ಇವೆ. ಜೈನ ಸಾಹಿತ್ಯ ಮತ್ತು ಬಸದಿಗಳು, ಬೌದ್ಧ ಗುಹಾಂತರ್ಗತ ದೇವಾಲಯಗಳು, ಮುಹಮ್ಮದೀಯರ ಕಾಲದ ಕಟ್ಟೋಣಗಳು ಮತ್ತು ಅಂದಮಾನ್ ದ್ವೀಪದ ಜನಜೀವನ, ಚರಿತ್ರೆ ಇತ್ಯಾದಿಗಳೆಲ್ಲಾ ಇವನ ಅನ್ವೇಷಣೆಗೆ ಒಳಗಾಗಿವೆ.

ಬೊಂಬಾಯಿ ಸೇನೆಯಲ್ಲಿದ್ದ Col. J. A. Jacob ಇವನು ಮತ್ತೊರ್ವ ಗಣ್ಯ ಸಂಸ್ಕೃತ ವಿದ್ವಾಂಸನು. "ವಾಸುದೇವ ಮತ್ತು ಗೋಪೀಚಂದನ ಉಪನಿಷತ್" ಎಂದು ಮಹಾಭಾರತದ ಶ್ಲೋಕಾಧಾರಗಳನ್ನು ಕೊಡುತ್ತಾ ಬರೆದ ಇವನ ಲೇಖನವು 1887 ರಲ್ಲಿ ಪ್ರಕಟವಾಯಿತು. ಇದು ಅವನ ವಿದ್ವತ್ತು ಮತ್ತು ಸಂಶೋಧನೆಗೆ

* ಇವನ ಭಾವಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಸಾಕ್ಷ್ಯವಾಗಿದೆ. C. R. Markhan ಇವನು A memoir of Indian Surveys" ಇದನ್ನು 1878 ರಲ್ಲಿ ಬರೆದನು. Sir George Campbell ಇವನು 1874 ರಲ್ಲಿ "Specimens of Languages of India" ಎಂಬುದಾಗಿ ಒಂದು ಉತ್ತಮ ಗ್ರಂಥವನ್ನು ಪ್ರಕಟಿಸಿದನು.

ಭಾರತದ ಜನಜೀವನವನ್ನು ಕುರಿತು ಬರೆದ ಆಂಗ್ಲ ಮತ್ತು ಫ್ರೆಂಚ್ ಭಾಷಾ ಗಂಥಗಳು ಅಸಂಖ್ಯಯಿವೆ. ನೂರಾರು ಅಥವಾ ಸಹಸ್ರಾರು ಪ್ರವಾಸ ಗ್ರಂಥಗಳು ಮತ್ತು ಐರೋಪ್ಯಾ ಅಧಿಕಾರಿಗಳ ಮತ್ತು ಸೇನಾನಿಗಳ ಆತ್ಮಕಥೆಗಳಷ್ಟೇ ಅಲ್ಲದೆ E. M. Forester ಇವನ "Passage to India" ಎಂಬೀ ತರಹದ ಕಾದಂಬರಿಗಳೂ Rudyard Kipling ಇವನ ನೂರಾರು ಕವಿತೆಗಳೂ ಇತರ ಬರೆವಣಿಗೆಗಳೂ ಭಾರತೀಯ ಸಾಹಿತ್ಯ ಮತ್ತು ಸಾಹಿತಿಗಳಿಗೆ ಸ್ಫೂರ್ತಿಯನ್ನೊದಗಿಸಿವೆ. Rudyard Kipling ಇವನಂತೆ ಇನ್ನೂ ನೂರಾರು ಆಂಗ್ಲ ಭಾಷಾ ಸಾಹಿತಿಗಳೂ ಹಿಂದೂಸ್ಥಾನದಲ್ಲಿಯೇ ಹುಟ್ಟಿ ಈ ದೇಶವನ್ನು ತಮ್ಮ ಸ್ವದೇಶವನ್ನು ಪ್ರೀತಿಸುವುದಕ್ಕಿಂತಾ ಹೆಚ್ಚಾಗಿ ಪ್ರೀತಿಸಿ ಈ ದೇಶದ ಸಾಹಿತ್ಯ ಮತ್ತು ಜನಜೀವನದ ಬಗ್ಗೆ ಅಪೂರ್ವ ವ್ಯಾಸಂಗವನ್ನು ಕೈಕೊಂಡು ಉತ್ತಮ ಸಾಹಿತ್ಯದ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

**೧೬. ಎಮರ್ಸನ್ ಮತ್ತು ರೋಲಂಡ್-ಭಾರತೀಯ ಕಹಳೆಯನ್ನೂದಿದರು:-**

ಹಿಂದೂಸ್ಥಾನಕ್ಕೆ ಬಾರದೇನೇ ಈ ದೇಶದ ತತ್ವಶಾಸ್ತ್ರ ಮತ್ತು ಸಾಹಿತ್ಯದ ಬಗ್ಗೆ ದುಡಿದ ಕಳೆದ ಶತಮಾನದ ಪ್ರಸಿದ್ಧ ಮೇಧಾವಿಗಳಲ್ಲಿ Prof. F. Max Mueller ಇವನು ಅಗ್ರಗಣ್ಯನು. ಇವನ ವಿಷಯವಾಗಿ ಮುಂದೆ ಪ್ರತ್ಯೇಕವಾಗಿ ಒಂದು ಅಧ್ಯಾಯದಲ್ಲಿ ಹೇಳಲ್ಪಡುವುದು. ಇದೇ ರೀತಿ ಈ ದೇಶಕ್ಕೆ ಬಾರದೆಯೇ ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದ ನೂರಾರು ಪಾಶ್ಚಾತ್ಯ ತತ್ವಜ್ಞಾನಿಗಳಲ್ಲಿ ಅಮೇರಿಕಾದ R. W. Emerson, ಫ್ರಾನ್ಸಿನ Romain Rolland, ರಷ್ಯಾದ Leo Tolstoy ಹೀಗೆ ಕೆಲವರು ಪ್ರಮುಖರಾಗಿದ್ದಾರೆ.

Ralph Waldo Emerson ಇವನು ತನ್ನ 18 ನೇ ವರ್ಷ ಪ್ರಾಯದಲ್ಲಿಯೇ ಭಾರತೀಯ ತತ್ವಶಾಸ್ತ್ರದ ಪ್ರಭಾವಕ್ಕೆ ಒಳಗಾದನು. ಅವನ ಹಲವು ತತ್ವಶಾಸ್ತ್ರ ಗ್ರಂಥಗಳು ಹಿಂದೂ ವೇದಾಂತದ ಸಾರವೇ ಆಗಿದ್ದಿತು. Mathew Arnold, H. Spencer ಮತ್ತು F. Max Mueller ಇವರು Emerson ಇವನ ಕೃತಿಗಳನ್ನು ಓದಿ ಮೆಚ್ಚಿದರು. ಕಳೆದ ಶತಮಾನದ ಪ್ರಾರಂಭದಲ್ಲಿಯೇ ಅವನ ಗ್ರಂಥಗಳು ಫ್ರೆಂಚ್, ಜರ್ಮನ್, ಡೇನಿಷ್ ಮತ್ತು ಸ್ವೀಡಿಷ್ ಭಾಷೆಗಳಲ್ಲೂ ಪ್ರಕಟವಾದುವು. George Santayana ಇವನು R. W. Emerson ಇವನ ಕವಿತೆ ಮತ್ತು ಪ್ರಬಂಧಗಳನ್ನು ಕುರಿತು ಹೀಗೆ ಹೇಳಿದ್ದಾನೆ.

"Emerson won his place if not by the originality of his thought, at least by the beauty of the expression he gave to

thoughts that are old and imperishable."

Emerson ಇವನ ಕವಿತೆಗಳೂ ಹಿಂದೂ ಪುರಾಣಗಳ ಛಾಯಾನುವಾದವೆಂದು ಸುಮಾರು 1830ರ ಕಾಲದಲ್ಲಿ ಪ್ರಕಟವಾದ ಅವನ "ಬ್ರಹ್ಮ" ಎಂಬ ಕವನದಿಂದ ತಿಳಿಯಬಹುದಾಗಿದೆ.

"If the red slayer thinks he Slays
Or, if the slain thinks he is slain,
They know not well the subtle ways
I keep, and pass, and turn again.
............................................
I am the doubter and the doubt,
And I the hymn the Brahmin sings."

"ದಿನ"ಗಳನ್ನು ಕುರಿತು Emerson ಇವನು ಬರೆದ ಒಂದು ಕವನವು ವಿಚಾರ ಗರ್ಭಿತವಾಗಿದೆ. ಅದು ಹೀಗೆ ಪ್ರಾರಂಭವಾಗುತ್ತದೆ :—

"Daughters of Time, the hypocritic Days,
Muffled and dumb like barefoot dervishes
And marching single in an endless file ... ...".

"ಓಂ"ಕಾರ ಸ್ವರೂಪನಾದ ಪರಮಾತ್ಮನು ಸಂಜ್ಞಾರೂಪನಾಗಿ ಪ್ರಕೃತಿಯನ್ನು ನಡೆಸುತ್ತಿರುವನು ಎಂಬುದನ್ನು ಇಂದಿನ ಪರಿಸ್ಥಿತಿಗೆ ತಕ್ಕಂತೆ Emerson ಇವನು ಹೀಗೆ ವಿವರಿಸುತ್ತಾನೆ :—

"We are symbols and inhabit symbols; workmen, work, and tools, words and things, birth and death, all are emblems; but we sympathise with the symbols, and being infatuated with the economical use of things, we do not know that they are thoughts. The poet by an ulterior intellectual perception, gives them a power which makes their old use forgotten, and puts eyes and tongue into every dumb and inanimate object. He perceives the independence of the thoughts on the symbol......".

ಹಿಂದೂ ಶಾಸ್ತ್ರಗ್ರಂಥಗಳನ್ನು ಮಾತ್ರವಲ್ಲ, ಚೀನಾದ ಕಾನ್‌ಫ್ಯೂಷ್ಯಸ್, ಮತ್ತಿತರರ ಗ್ರಂಥಗಳೂ, ಖುರಾನ್, ಮನುಸ್ಮೃತಿ ಇತ್ಯಾದಿಗಳನ್ನೂ ಮಥಿಸಿ ಅವೆಲ್ಲವುಗಳ ಸಾರವನ್ನೂ ಪರ್ಷಿಯನ್ ಕವಿ ಹಫೀಸ್ ಮತ್ತು ಶಾಡೀ ಇವರ ಅಭಿಪ್ರಾಯಗಳನ್ನೂ Emerson ಇವನು ತನ್ನ ಬರೆವಣಿಗೆಗಳಲ್ಲಿ ಹರಿಯಿಸಿದ್ದಾನೆ.

ಫ್ರಾನ್ಸಿನ Romain Rolland ಇವನು "Life of Sri Ramakrishna" ಮತ್ತಿತರ ಹಿಂದೂ ವೇದಾಂತ ಗ್ರಂಥಗಳನ್ನು ಫ್ರೆಂಚ್ ಭಾಷೆಯಲ್ಲಿ ಬರೆದ ಇನ್ನೊರ್ವ ಪ್ರಚಂಡ ತಾತ್ವಿಕನು. ಈ ಶತಮಾನದ ಮೊದಲ ನಲ್ವತ್ತು ವರ್ಷಗಳ ವರೆಗೂ ಇದ್ದ ಈ ವೇದಾಂತಿಯು ಭಾರತದ ಬಗ್ಗೆ ಅಪೂರ್ವಗೌರವವನ್ನಿಟ್ಟಿದ್ದನು.

ವಿವೇಕಾನಂದ, ಟಾಗೂರ್ ಮತ್ತು ಮಹಾತ್ಮಾ ಗಾಂಧಿ ಇವರನ್ನು ಗುರುಗಳಂತೆ ಕಂಡಿದ್ದನು. ಇದೇ ರೀತಿ ರಷ್ಯಾದ Leo Tolstoy ಇವನು ಸಹ ತನ್ನ ರಷ್ಯನ್ ಭಾಷಾ ಗ್ರಂಥಗಳಲ್ಲಿ ಭಾರತೀಯ ತತ್ವಶಾಸ್ತ್ರಗಳ ಛಾಯೆಯನ್ನೇ ಹರಿಯಿಸಿ ಪ್ರಸಿದ್ಧನಾಗಿದ್ದಾನೆ.

**೧೭. ರಾಷ್ಟ್ರಾಭಿಮಾನಕ್ಕೆ ಪ್ರಚೋದನವಿತ್ತ ಕೆಲವು ಗಣ್ಯ ಮೇಧಾವಿಗಳು :–**

ಕ್ರಿ. ಶ. 18 ನೇ ಶತಮಾನದಲ್ಲಿ Warren Hastings ಇವನಿಂದ ಪ್ರಾರಂಭವಾದ ಈ ದೇಶದ ಸಾಹಿತ್ಯದ ಉದ್ಧಾರ ಮತ್ತು ಸಮಾಜದ ಪರಿಷ್ಕಾರ ಕಾರ್ಯವು ಕ್ರಿ. ಶ. 1885 ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯು ಸ್ಥಾಪನೆಯಾಗುವ ವರೆಗೂ ಆ ನೂರು ವರ್ಷಗಳ ಪರ್ವಕಾಲದಲ್ಲಿ ಇನ್ನೂ ಬಿರುಸಾಗಿ ಮುಂದುವರಿಯಿತು. ಈ ಅವಧಿಯಲ್ಲಿ ಈ ವರೆಗೆ ಹೇಳಲ್ಪಟ್ಟ ಹಲವಾರು ಪಾಶ್ಚಾತ್ಯ ಸಾಹಿತಿಗಳೂ, ತಾತ್ವಿಕರೂ, ರಾಜಕಾರಿಣಿಗಳೂ ನಿದ್ರಿಸುತ್ತಿದ್ದ ಈ ದೇಶವನ್ನು ಮುನ್ನಡೆಸಲು ಸಹಾಯಕರಾಗಿದ್ದಾರೆ. ಇವರಲ್ಲಿ Warren Hastings ಇವನೇ ರಾಜಕಾರಿಣಿಗಳಲ್ಲಿ ಮೊದಲಿಗನೆಂದೆನ್ನಬಹುದು. ಸಾಹಿತಿಗಳಲ್ಲಿ Sir William Jones ಇವನೂ ಕ್ರೈಸ್ತಮತಪ್ರಚಾರಕರಲ್ಲಿ Dr. William Carey ಮತ್ತು ಸಮಾಜ ಸುಧಾರಕರಲ್ಲಿ George Thompson ಇವನೂ ಮೊದಲಿಗರೆನ್ನಬಹುದು. W. Hastings ಇವನನ್ನು ಆಪಾದನೆಗೊಳಪಡಿಸಿದಾಗ ಅದನ್ನು ಸಮರ್ಥಿಸಿ Edmund Burke ಇವನು ವಾದಿಸಿ ಖಂಡಿಸಿದ ಮಾತುಗಳನ್ನು ಕುರಿತು Lord Macaulay ಇವನು ಅನಂತರ ಹೀಗೆ ಹೇಳಿದನು :—

"His (Burke's) contemporaries stood aghast at the pictures he painted then of a land he had never seen."

ಹೀಗೆ ಆರಂಭವಾದ ಅಂದಿನ ರಾಜಕೀಯ ವಾತಾವರಣವು ಈ ದೇಶದ ಸಾಹಿತ್ಯ ಮತ್ತು ಸಂಸ್ಕೃತಿಯ ಅನ್ವೇಷಣೆಯೊಂದಿಗೆ ಮುಂದುವರಿಯಿತು. Rev. M. Ward ಇವನು ಬರೆದ "History and Literature of Hindus" ಎಂಬ Folio ಪುಟಗಳ ಮೂರು ಗ್ರಂಥಕಾಂಡಗಳು 1815 ರಷ್ಟು ಹಿಂದೆಯೇ ಪ್ರಕಟವಾಗಿದ್ದು ಅದನ್ನನುಸರಿಸಿ ಇನ್ನೂ ಹಲವು ಗ್ರಂಥಗಳು ಪಾಶ್ಚಾತ್ಯರಿಂದಲೇ ಇಂಗ್ಲಿಷ್‌ನಲ್ಲೂ ಇತರ ಐರೋಪ್ಯಾ ಭಾಷೆಗಳಲ್ಲೂ ಪ್ರಕಟವಾದಾಗ ಅವೆಲ್ಲಾ ಜನತೆಯಲ್ಲಿ ವಿಚಾರ ಜಾಗೃತಿಯನ್ನು ಹುಟ್ಟಿಸಲು ಸಹಾಯಕವಾದುವು. ನೂರಾರು ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರು ದೇಶದ ವಿವಿಧ ಭಾಗಗಳಲ್ಲಿ ಸಮಾಜ ಸುಧಾರಣಾ ಕಾರ್ಯದಲ್ಲಿ ಮಗ್ನರಾಗಿದ್ದಾಗ ಇನ್ನೂ ಕೆಲವರು ದೇಶದ ದಾರಿದ್ರ್ಯ ನಿವಾರಣೆಗೂ ಶ್ರಮಿಸಿದರು. 1838 ರಲ್ಲಿ ಉತ್ತರ ಭಾರತದಲ್ಲಿ ಬರಗಾಲವೆದ್ದಾಗ ಇಂಗ್ಲೆಂಡಿನಲ್ಲಿದ್ದ George Thompson ಇವನು Lord Brougham ಇವನ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ಸೇರಿಸಿ ಬರಗಾಲ ಪೀಡಿತರ ಸಹಾಯಕ್ಕೆ ನಿಧಿಯನ್ನು ಸಂಗ್ರಹಿಸಿದನು. ಇಂಗ್ಲೆಂಡಿನಲ್ಲಿ British India Society ಎಂಬ ಸಂಸ್ಥೆ

ಯನ್ನೂ "British Indian Advocate" ಎಂಬ ವಾರ್ತಾಪತ್ರಿಕೆಯನ್ನೂ ಸ್ಥಾಪಿಸಿ ಭಾರತದ ಬೇಡಿಕೆಗಳನ್ನು ಬ್ರಿಟಿಷ್ ಸರಕಾರದ ಮುಂದಿಡಲು ಪ್ರಯತ್ನಿಸಿದ್ದಲ್ಲದೆ 1841ರಲ್ಲಿ House of Commons ಸಭೆಯ ಸದಸ್ಯನಾಗಿ George Thompson ಇವನು ಭಾರತೀಯರ ಪರವಾಗಿ ಹಲವು ಸುಧಾರಣೆಗಳಿಗಾಗಿ ಹೋರಾಡಿದನು. ಬಂಗಾಳದ ದ್ವಾರಕಾನಾಥ್ ಟಾಗೋರನು ರಾಜಾರಾಮಮೋಹನ ರಾಯನ ನಂತರ ಇಂಗ್ಲೆಂಡಿಗೆ ಹೋದ ಭಾರತೀಯ ಮುಂದಾಳು ಆಗಿದ್ದನು. ಅವನು George Thompson ಇವನನ್ನು ಈ ದೇಶಕ್ಕೆ ಕರೆತರಲು ಯತ್ನಿಸಿದ್ದಲ್ಲದೆ ಏಪ್ರಿಲ್ 1843 ರಲ್ಲಿ ಬಂಗಾಳ ಜಮೀನ್ದಾರರ ಸಂಘವನ್ನು ಸ್ಥಾಪಿಸಿ ಅದನ್ನು George Thompson ಇವನ ಸಲಹೆಯಂತೆ British India Scciety ಈ ಸಂಸ್ಥೆಗೆ ಸೇರಿಸಿ ಅವರಿರ್ವರೂ ಭಾರತೀಯ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳಿಗಾಗಿ ದುಡಿದರು.

George Thompson ಇವನ ನಂತರ ಭಾರತದ ಜನಕ್ಕೆ ರಾಷ್ಟ್ರೀಯ ವಾದದ ಕಹಳೆಯನ್ನು ಮೊಳಗಿಸಿದ ಪಾಶ್ಚಾತ್ಯರು ಕಳೆದ ಶತಮಾನಾಂತ್ಯದಲ್ಲಿ ಇದ್ದು 1885ರ ಕಾಲದಲ್ಲಿ ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲು ಕಾರಣರಾದರಲ್ಲದೆ ಹಲವು ವಿಧದಲ್ಲಿ ಅಪಾರ ಸೇವೆಯನ್ನು ಕೈಗೊಂಡು ವಿಖ್ಯಾತರಾಗಿದ್ದಾರೆ. ಇವರಲ್ಲಿ Sir Octavian Hume, Sir William Wedderburn, Sir William Yule, Sir Arthur Cotton, William Digby, Samuel Smith ಹೀಗೆ ಕೆಲವರ ಹೆಸರುಗಳು ನಮ್ಮ ದೇಶದ ಚರಿತ್ರೆಯಲ್ಲಿ ಚಿರಸ್ಮರಣೀಯವಾಗಿವೆ.

೧೮. ಕಳೆದ ಶತಮಾನಾಂತ್ಯದ ಕೆಲವು ಮಹಿಳಾ ಸಾಹಿತಿಗಳು :—

ಕಳೆದ ಶತಮಾನದಲ್ಲಿ ಪರಿಸ್ಥಿತಿಯು ಹೀಗಿದ್ದಾಗ ಈ ದೇಶದಲ್ಲಿ ಕೆಲವು ಪಾಶ್ಚಾತ್ಯ ಮಹಿಳೆಯರು ಸಾಧಿಸಿದ ಮಹತ್ಕಾರ್ಯವನ್ನು ಪ್ರಸ್ತಾಪಿಸುವುದು ಅವಶ್ಯವಿದೆ. ಕ್ರಿ. ಶ. 1860 ರಲ್ಲಿ Mrs. Charlotte Manning ಇವಳು ಭಾರತೀಯ ಸಾಹಿತ್ಯ, ವಾಸ್ತುಶಿಲ್ಪ ಮತ್ತು ಜನಜೀವನಗಳನ್ನು ಹಲವು ಗ್ರಂಥಗಳನ್ನು ಬರೆದುದನ್ನು ಕುರಿತು ಹಿಂದೆಯೇ ಹೇಳಲಾಗಿದೆ. ಅದೇ ವೇಳೆಗೆ ಕೆಲವು ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಿಕೆಯರೂ ದೇಶದ ವಿವಿಧ ಭಾಷೆಗಳಲ್ಲಿ ಬೈಬಲ್ ಭಾಷಾಂತರಗಳೂ ಬೈಬಲ್ ಗೀತೆಗಳನ್ನೂ ಬರೆದರು–ಕೆಲವರು ಚಿಕ್ಕ ಕತೆಗಳು ಮತ್ತು ಕಾದಂಬರಿಗಳನ್ನೂ ಭಾರತೀಯ ಭಾಷೆಗಳಲ್ಲೂ ಇಂಗ್ಲಿಷ್‌ನಲ್ಲೂ ಬರೆದರು. ಆದರೆ ಭಾರತೀಯ ಧರ್ಮ ಗ್ರಂಥಗಳನ್ನು ಪಠಿಸಿ ಗ್ರಂಥಗಳನ್ನು ಬರೆದ ಆಂಗ್ಲ ಮಹಿಳೆಯರಲ್ಲಿ Miss Margaret Nobel ಅಥವಾ Sister Nivedatta ಇವಳು ಪ್ರಸಿದ್ಧಳಾಗಿದ್ದಾಳೆ. The Web of Indian life, Cradle Tales of Hinduism, Master—As I saw Him, Kali-The Mother ಇತ್ಯಾದಿ ಗ್ರಂಥಗಳನ್ನು ಬರೆದು ಈ ದೇಶದ ಹಿರಿಯರಿಗೆ ಹೇಗೋ ಕಿರಿಯರಿಗೂ

ಪರಿಚಿತಳಾಗಿದ್ದಾಳೆ. ಇವಳು ಉತ್ತಮ ಸಾಹಿತಿ ಹೇಗೋ ಹಾಗೆಯೇ ಶುದ್ಧ ವೇದಾಂತಿಯಾಗಿಯೂ ರಾಮಕೃಷ್ಣ ಪರಮಹಂಸರ ಭಕ್ತೆಯಾಗಿಯೂ ಇದ್ದಳು.

ಆದರೆ ಕಳೆದ ಶತಮಾನದಲ್ಲಿ ಯಾವ ಪುರುಷನನ್ನೂ ಸ್ತ್ರೀಯನ್ನೂ ಮೀರಿಸುವ ಅಗಾಧ ಕಾರ್ಯವನ್ನು ಸಾಧಿಸಿದ ಪಾಶ್ಚಾತ್ಯರಲ್ಲಿ Mrs. Anne Besant ಇವಳು ಪ್ರಮುಖಳಾಗಿದ್ದಾಳೆ. ಹುಟ್ಟುವಾಗಲೇ ಒರ್ವ ಕ್ರಾಂತಿಕಾರಕ ಸ್ತ್ರೀಯಾಗಿ ಇವಳು ಹುಟ್ಟಿಬಂದಿದ್ದಾಳೆ. Anne Besant ಇವಳು 1847 ರಲ್ಲಿ ಇಂಗ್ಲೆಂಡಿನಲ್ಲಿ ಜನ್ಮವೆತ್ತಿದಳು. 1867 ರಲ್ಲಿ ಲಿಂಕನ್‌ಷೈರಿನ ಧರ್ಮಗುರು Rev. Frank Besant ಇವನನ್ನು ವಿವಾಹವಾದಳು. ಅವರಿಗೆ Mabel Besant ಎಂಬೊರ್ವ ಪುತ್ರಿಯಿದ್ದಳು. 1873 ರಲ್ಲಿ ಈ ಬಿಸೆಂಟ್ ದಂಪತಿಗಳು ಬೇರ್ಪಟ್ಟರು. ಅಲ್ಲಿಂದ ನಂತರ Anne Besant ಇವಳು Theosophy ಅಥವಾ ಬ್ರಹ್ಮವಿದ್ಯಾಜ್ಞಾನವನ್ನು ಉಗ್ರವಾಗಿ ಪ್ರತಿಪಾದಿಸಲಾರಂಭಿಸಿದಳು. ಭಾರತೀಯ ತತ್ವಶಾಸ್ತ್ರದ ಅನ್ವೇಷಣೆಯ ನಿಮಿತ್ತವಾಗಿ ಅವಳು 1893 ರಲ್ಲಿ ಹಿಂದೂಸ್ಥಾನಕ್ಕೆ ಬಂದಳು.

ಹಿಂದೂಸ್ಥಾನದಲ್ಲಿ ಮೊದಲ ಸುಮಾರು ಹದಿನೈದು ವರ್ಷಗಳ ಕಾಲ ಅವಳು ಭಾರತೀಯ ತತ್ವಶಾಸ್ತ್ರಗಳ ಅಭ್ಯಾಸದಲ್ಲೂ ಸಮಾಜ ಸೇವೆಯಲ್ಲೂ ನಿರತಳಾಗಿ ಇದ್ದಳು. ಸಂಸ್ಕೃತದಲ್ಲಿ ಮಹಾ ಪಂಡಿತೆಯಾಗಿ ವೇದಗಳ ಕೆಲವು ಸಂಹಿತೆಗಳನ್ನು ಇಂಗ್ಲೀಷ್‌ಗೆ ಇಳಿಸಿದಳು; ಉಪನಿಷತ್ ಮತ್ತು ಪುರಾಣಗಳನ್ನೆಲ್ಲಾ ಅನ್ವೇಷಿಸಿದಳು; ಕಾಶೀ ವಿದ್ಯಾಪೀಠವನ್ನು ಪೋಷಿಸಿದಳು; ತನ್ನ Theosophy ತತ್ವ ಪ್ರತಿಪಾದನೆಗೆ ಮದ್ರಾಸಿನ ಅಡೆಯಾರ್‌ನಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಿದಳು; ಇನ್ನೂ ಹಲವು ಪಾಠಶಾಲೆಗಳನ್ನು ಸ್ಥಾಪಿಸಿದಳು; ಭಾರತೀಯ ಸ್ತ್ರೀಯರ ಏಳಿಗೆಗಾಗಿ ಶ್ರಮಿಸಿದಳು; ಅನಂತರ ಈ ದೇಶದ ಒರ್ವ ಗಣ್ಯ ರಾಜಕೀಯ ಮುಂದಾಳೂ ಆದಳು. ಇವಳು 1933 ರಲ್ಲಿ ತನ್ನ 88ನೇ ವರ್ಷ ಪ್ರಾಯದಲ್ಲಿ ಮದ್ರಾಸಿನಲ್ಲಿ ತನ್ನ ಅಡೆಯಾರ್ ಶಿಬಿರದಲ್ಲಿ ನಿಧನಳಾದಳು.

### ೧೯. ದೇಶದ ಜನಜಾಗೃತಿಗೆ ಕ್ರಾಂತಿಕಾರಕ ಪ್ರಚೋದನವಿತ್ತ ಡಾ. ಅನಿಬಿಸೆಂಟಮ್ಮ :—

Dr. Anne Besant ಇವಳು ತತ್ವಶಾಸ್ತ್ರ ವಿಶಾರದೆ, ಸಾಹಿತಿ, ಪತ್ರಿಕೋದ್ಯಮಿ, ವಾಗ್ಮಿ ಇತ್ಯಾದಿಯಾಗಿ ಈ ದೇಶದಲ್ಲಿ ವಿರಾಜಿಸಿದಳು. ಸಮಾಜ ಸುಧಾರಣೆಗಾಗಿ ಮತ್ತು ದೇಶದ ವಿದ್ಯಾಭಿವೃದ್ಧಿಗಾಗಿ ಇವಳು ಕೈಗೊಂಡ ಪ್ರಯತ್ನದ ಪರಿಣಾಮವಾಗಿ ಇವಳಿಗೆ ದೇಶವಿದೇಶಗಳಿಂದ ಲಕ್ಷಾಂತರ ರೂಪಾಯಿಗಳ ಸಹಾಯ ಧನವು ಅಂತೆಯೇ ಬರುತ್ತಿದ್ದುವು. ಅವನ್ನೆಲ್ಲಾ ಅವಳು ಸ್ಥಾಪಿಸಿದ ವಿವಿಧ ಸಂಸ್ಥೆಗಳಿಗೆ ನೀಡಿ ಅವುಗಳ ಏಳಿಗೆಗೆ ನೆರವಿತ್ತಳು. ಇವಳು ಹಿಂದೂ ತತ್ವಶಾಸ್ತ್ರ ಬ್ರಹ್ಮವಿದ್ಯಾಜ್ಞಾನ ಮತ್ತು ಈ ದೇಶದ ಜನಜೀವನವನ್ನು ಕುರಿತಾಗಿ ಹಲವು ಗ್ರಂಥಗಳನ್ನು ಬರೆದಿದ್ದು ಮಿಲ್ಯಾಂತರ ಪ್ರತಿಗಳಾಗಿ ವಿವಿಧ ದೇಶಗಳಲ್ಲಿ ಪ್ರಚಾರವಾಗಿವೆ. ಭಗವದ್ಗೀತೆಯನ್ನು ಇವಳು ಭಾಷಾಂತರಿಸಿದ್ದು ಅದರ ಪ್ರತಿಗಳು ಮಿಲ್ಯಾಂತರವಾಗಿ

ಮಾರಾಟವಾಗಿವೆ. ಇವಳ ತತ್ವಶಾಸ್ತ್ರ ವ್ಯಾಖ್ಯಾನಗಳು ಬಹು ಪ್ರೌಢತರವಾಗಿದ್ದು ತುಂಬಾ ಜನಪ್ರಿಯವಾಗಿದ್ದುವು. ಇವಳ ಬರವಣಿಗೆಗೆ ಉದಾಹರಣೆಗಾಗಿ ಭಗವದ್ಗೀತೆಯ ಭಾಷಾಂತರದ ಒಂದು ಶ್ಲೋಕವನ್ನು ಇಲ್ಲಿ ಕೊಡಲಾಗಿದೆ :—

ಶ್ರುತಿ ವಿಪ್ರತಿ ಪನ್ನಾತೇ ಯದಾ ಸ್ಥಾಸ್ಯತಿ ನಿಶ್ಚಲಾ
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ.

" When thy mind, bewildered by the scriptures, shall stand immovable, fixed in contemplation, then shalt thou attain unto Yoga. "

(Note :–To union with Atma, the Self ; Yoga implies harmony with the divine will. The word translated contemplation is, as before Samaadhi. ")

Dr. (Mrs.) Anne Besant ಇವಳು ಈ ದೇಶದ ಜನರಲ್ಲಿ ವಿಚಾರ ಜ್ಞಾನವನ್ನು ಮೊಳಗಿಸಲು " New India " ಎಂಬ ಕ್ರಾಂತಿಕಾರಕವಾದ ಪತ್ರಿಕೆಯನ್ನು ನಡೆಸಿದಳು ; ದೇಶದ ಉದ್ದಗಲಕ್ಕೂ ಓಡಾಡಿ ತನ್ನ ವಾಗ್ಬಲದಿಂದ ಜನತೆಯನ್ನು ಸ್ವರಾಜ್ಯಕ್ಕಾಗಿ ಚಳವಳವೆಬ್ಬಿಸಲು ಹುರಿದುಂಬಿಸಿದಳು. ಹೇಗೂ ಈ ಶತಮಾನದ ಆರಂಭಕ್ಕೆ ಅವಳು Sir Edwin Montague ಇವನು ಹೇಳಿದಂತೆ ಒರ್ವ ಮಹಕಾಳಿಯ ಅವತಾರದಂತೆ ತೋರ್ಪಡಿಸಿಕೊಂಡಳು. Anne Besant ಇವಳ ಸೌಮ್ಯ ಹಾಗೂ ಸಭ್ಯಸ್ವಭಾವದ ಪತಿಯು 1917 ರಲ್ಲಿ ಇಂಗ್ಲೆಂಡಿನಲ್ಲಿ ನಿಧನವಾದಾಗ ಅವನ ಪತ್ನಿಯು ಈ ದೇಶದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷೆಯಾಗಿ " ಹೋಂ ರೂಲ್ " ಚಳವಳದ ಮುಖ್ಯ ಪ್ರತಿಪಾದಿಕೆಯಾಗಿ, ಕೋರ್ಟು ಕಚೇರಿಗಳಲ್ಲಿ ಬ್ರಿಟಿಷ್ ಸರಕಾರವನ್ನು ಪ್ರತಿಭಟಿಸುವ ದೇಶಸೇವಕಿಯಾಗಿ, ಅದ್ಭುತ ವಾಗ್ಮಿಯಾಗಿ, ಭಾರತೀಯ ಸ್ತ್ರೀಯರ ಉಡುಪಿನಲ್ಲಿಯೇ ಮೆರೆದ ಶುದ್ಧ ಆದರ್ಶವಾದಿಯಾಗಿ ಪ್ರಸಿದ್ಧಳಾದಳು. ಅವಳು ಅಂದು ಸಾರಿದ Home Rule, Dominion Status, Common-Wealth ಇತ್ಯಾದಿ ರಾಜಕೀಯ ಮಂತ್ರಗಳೇ ಇಂದಿಗೂ ಒಂದಲ್ಲ ಒಂದು ವಿಧದಲ್ಲಿ ತೋರ್ಪಡಿಸಿಕೊಂಡಿದೆ. ಅಂದಿನ ಪ್ರಚಂಡ ರಾಜಕೀಯ ಮುಂದಾಳುಗಳಾಗಿದ್ದ ಶ್ರೀನಿವಾಸ ಶಾಸ್ತ್ರಿ, ಮೋತಿಲಾಲ್ ನೆಹುರು, ತೇಜಬಹದ್ದೂರ್ ಸಪ್ರೂ, ಡಾ. ಭಗವಾನ್ ದಾಸ, ಮಹ್ಮದಾಲಿ ಜಿನ್ನಾ, ರಾಮಸ್ವಾಮಿ ಐಯ್ಯರ್ ಮೊದಲಾದವರೆಲ್ಲರೂ ಈ ಪ್ರಚಂಡ ಮಹಿಳೆಯ ತತ್ವಬಲ ಮತ್ತು ವಾಗ್ಬಲಕ್ಕೆ ಮಣಿದು ರಾಜಕೀಯ ಮುಂದಾಳುಗಳೆಂದೆನಿಸಿದರು. ಕೃಷ್ಣಮೂರ್ತಿ, ಕೃಷ್ಣ ಮೆನನ್, ಬೆನಗಲ್ ಶಿವರಾಯ, ಮೊದಲಾದ ಇನ್ನೆಷ್ಟೋ ಜನವನ್ನು ತನ್ನ ಮಕ್ಕಳಂತೆ ಪೋಷಿಸಿ ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸವನ್ನು ಕೊಟ್ಟು ಅವರ ಪುರೋಭಿವೃದ್ಧಿಗೆ ನೆರವಾದಳು.

ಒಟ್ಟಾಗಿ Mrs. Anne Besant ಈ ದೇಶದ ವಿವಿಧ ಕ್ಷೇತ್ರಗಳಲ್ಲಿ ಸಾಧಿಸಿದ ಅಭೂತಪೂರ್ವ ಸಾಹಸವನ್ನು ಮೀರಿ ದುಡಿದ ಇನ್ನೊಬ್ಬನು ಅಥವಾ ಇನ್ನೊ

ರ್ವಗಳು ನಮ್ಮ ದೇಶದಲ್ಲಿ ಕಾಣುವುದೇ ದುರ್ಲಭವಾಗಿದೆ. ನಮ್ಮ ದೇಶವು ಈ ಮಹಾ ವ್ಯಕ್ತಿಗೆ ಕೊಡತಕ್ಕಷ್ಟು ಮನ್ನಣೆಯನ್ನೂ ಗೌರವವನ್ನೂ ಇನ್ನೂ ಕೊಡದೆ ಕೃತಘ್ನತೆ ಯಿಂದ ವರ್ತಿಸಿದೆ. ಆದರೆ ಮಹಾತ್ಮಾ ಗಾಂಧಿಯನ್ನುಳಿದು ಈ ಶತಮಾನದಲ್ಲಿ ಅಖಿಲ ಭಾರತದ ಪ್ರತಿಭಾವಂತ ವೇದಾಂತಿ, ತತ್ವಜ್ಞಾನಿ, ಮತ್ತು ರಾಜಕಾರಿಣಿಯು ಯಾರೆಂದು ಕೇಳಿದರೆ ಈ (Dr.) Mrs. Anne Besant ಇವಳೆಂದೇ ಹೇಳ ಬೇಕಾಗಿದೆ; ಆದರೆ ಇವಳು ವಿಲಾಯಿತಿಯಲ್ಲಿ ಹುಟ್ಟಿ ಬಂದ "ಮಹಾಕಾಳಿ" ಎಂಬುದನ್ನೂ ನಾವು ನೆನಪಿನಲ್ಲಿಡಬೇಕಾಗಿದೆ!

---

"ಅಲ್ಲಿಗಲ್ಲಿಗೆ ಬೆಳೆದ ಬೆಳೆಗಳಿಂ ಮೆಳೆಗಳಿಂ
ದಲ್ಲಿಗಲ್ಲಿಗೆ ವನಸ್ಥಳಗಳಿಂ ಕೊಳಗಳಿಂ
ದಲ್ಲಿಗಲ್ಲಿಗೆ ರನ್ನದೆರೆಗಳಿಂ ಕೆರೆಗಳಿಂ ಪರಿವ ಕಾಲ್ಗಳಿಂದೆ
ಅಲ್ಲಗಲ್ಲಿಗೆ ತೋರ್ಪ ಗಿರಿಗಳಿಂ ಕರಿಗಳಿಂ
ದಲ್ಲಿಗಲ್ಲಿಗೆ ನೆರೆದ ಶುಕಗಳಿಂ ಪಿಕಗಳಿಂ
ದಲ್ಲಿಗಲ್ಲಿಗೆ ಗವಾಸ್ಪದಗಳಿಂ ನದಗಳಿಂದಾದೇಶನೊಪ್ಪಿರ್ದುದು ."

[ವಿರೂಪಾಕ್ಷ]

ಈ ವರೆಗೂ ಹೇಳುತ್ತಾ ಬಂದ ಕಳೆದ ಶತಮಾನದ ನೂರಾರು ಪಾಶ್ಚಾತ್ಯ ವಿದ್ವಾಂಸರು ಭಾರತೀಯ ವಿದ್ಯಾಬೆಳವಣಿಗೆಗೆ ಯಾವಾವ ರೀತಿಯಲ್ಲಿ ದುಡಿದರೆಂಬುದರ ಸಿಂಹಾವಲೋಕನವನ್ನಷ್ಟೇ ಮಾಡಲಾಯಿತು. ಹಿಂದೆಯೇ ಹೇಳಿದಂತೆ ಈ ದೇಶದ ದೇಶೀಯ ಭಾಷೆಗಳ ಗ್ರಂಥ ಸಂಪಾದನಾ ಕಾರ್ಯವನ್ನೂ ಅನ್ವೇಷಣೆಯನ್ನೂ ಇನ್ನೂ ಸಹಸ್ರಾರು ವಿದ್ವಾಂಸರು ಮಾಡಿರುವರಾದರೂ ಅವರಲ್ಲಿ ಯಾರೊಬ್ಬನ ಹೆಸರನ್ನೂ ಇಲ್ಲಿ ಸೂಚಿಸದೆ ಅಂತೆಯೇ ಬಿಡಲಾಗಿದೆ. ಹೇಗೂ ಕನ್ನಡ ಭಾಷೆಯ ಮತ್ತು ಕನ್ನಡ ನಾಡಿನ ಸಂಶೋಧನೆಗಾಗಿ ದಣಿದವರ ಹೆಸರನ್ನು ಹೇಳುವುದಕ್ಕಿಂತ ಮುಂಚೆ ಭಾರತೀಯ ಸಾಹಿತ್ಯ ಮತ್ತು ವಿದ್ಯೆಗೆ ಪ್ರಚೋದಕವಾದ ಸಂಸ್ಕೃತ ಯಾ ಗೀರ್ವಾಣ ಭಾಷೆ ಮತ್ತು ಸಾಹಿತ್ಯದ ಅನ್ವೇಷಣೆಗೆ ಆಧಾರಪ್ರಾಯರಾದ ನಾಲ್ಕಾರು ಪ್ರಚಂಡ ವಿದ್ವಾಂಸರನ್ನು ಕುರಿತು ಸುದೀರ್ಘವಾಗಿ ಪ್ರಸ್ತಾಪಿಸುವುದು ಅಗತ್ಯವಿದೆ.

ಈ ಅತಿರಥ ಮಹಾರಥರಾದ ವಿದ್ವಾಂಸರಲ್ಲಿ Sir William Jones, Sir Henry Colebrooke, Dr. William Carey, Prof. Horace Wilson ಮತ್ತು Dr. F. Max Mueller ಈ ಐವರ ವಿಷಯವಾಗಿ ಮುಂದಿನ ಎರಡು ಅಧ್ಯಾಯಗಳಲ್ಲೂ ಹೇಳಲಾಗಿದೆ. ಇವರೆಲ್ಲರೂ ಭಾರತೀಯ ವಿದ್ಯಾ ವ್ಯಾಸಂಗ ಮತ್ತು ಸಾಹಿತ್ಯ ಪ್ರಚಾರಕ್ಕೆ ಕ್ರಾಂತಿಕಾರಕವಾದ ಪ್ರಚೋದನವನಿತ್ತ ಮತ್ತು ಯೂರೋಪಿನಲ್ಲಿ ಹುಟ್ಟಿದ ಆಧುನಿಕ ವೈದಿಕ ಋಷಿಗಳು; ವೇದ ಪುರಾಣಗಳನ್ನೆಲ್ಲಾ ಭಾಷಾಂತರಿಸಿ ಮತ್ತು ವ್ಯಾಖ್ಯಾನಿಸಿ ಅವುಗಳನ್ನು ಲೋಕ ಪ್ರಸಿದ್ಧವಾಗಿ ಮಾಡಿದ ಆಧುನಿಕ ಸಂಸ್ಕೃತ ಸಾಹಿತ್ಯದ ಪಿತಾಮಹರು; ಈ ದೇಶದ ಸಮಾಜ ಸಂಸ್ಕರಣೆಗಾಗಿ ಮತ್ತು ಪುರೋಭಿವೃದ್ಧಿಗಾಗಿ ಬ್ರಿಟಿಷ್ ಸರಕಾರಕ್ಕೆ ತಮ್ಮ ಪ್ರಭಾವವನ್ನು ಬೀರಿ ಶ್ರಮಿಸಿದ ಉದಾತ್ತ ತಾತ್ವಿಕರು. ಈ ಐವರು ಮಹನೀಯರಲ್ಲದೆ ಇಂಥಾ ಹಲವು ಪ್ರತಿಭಾವಂತ ಸಾಹಿತಿಗಳೂ ಕಳೆದ ಶತಮಾನದಲ್ಲಿ ಯೂರೋಪು ಖಂಡವು ಭಾರತಕ್ಕೆ ಇತ್ತ ಕೊಡುಗೆಯಾಗಿದೆ. ಇವರ ವಿದ್ವತ್ತು, ಸಾಹಸ, ಪ್ರತಿಭೆ, ವಿಶ್ವ ಕೌಟುಂಬಿಕ ಭಾವ, ಭಾರತೀಯ ಸಂಸ್ಕೃತಿಯ ಅನ್ವೇಷಣೆಗಾಗಿ ತೊಟ್ಟ ದೀಕ್ಷೆ ಮೊದಲಾದವು ಲೋಕಕ್ಕೆ ಆದರ್ಶಪ್ರಾಯವಾಗಿವೆ.

**೨. ಮಹಾ ಕರ್ಮಯೋಗಿ–ಸರ್ ವಿಲಿಯಮ್ ಜೋನ್ಸ್* :—**

William Jones ಇವನ ಹೆಸರನ್ನು ಕೇಳದೇ ಇರುವ ವಿದ್ಯಾವಂತರು ಹಿಂದೂಸ್ಥಾನದಲ್ಲಿ ಯಾರೂ ಇರಲಾರರು. ಇವನು ಒರ್ವ ಮಹಾ ಕರ್ಮಯೋಗಿ, ಭಾರತದ ಅತ್ಯುನ್ನತ ನ್ಯಾಯಾಸ್ಥಾನದಲ್ಲಿ ಪ್ರಚಂಡ ನ್ಯಾಯಾಧೀಶ. ಗ್ರೀಕ್, ಲ್ಯಾಟಿನ್, ಹೆಬ್ರ್ಯೂ, ಅರಬೀ, ಜರ್ಮನ್ ಮೊದಲಾದ ಹದಿಮೂರು ಭಾಷೆಗಳಲ್ಲೂ ಮಹಾ ಪಂಡಿತ! ಐರೋಪ್ಯಾದಲ್ಲಿ ಹುಟ್ಟಿದ ಒರ್ವ ಸನಾತನೀ, ವೈದಿಕ ಋಷಿ, ಮತ್ತು ಜರ್ಮನ್, ಲ್ಯಾಟಿನ್, ಸಂಸ್ಕೃತ, ಬಂಗಾಳೀ ಇತ್ಯಾದಿ ಭಾಷೆಗಳಲ್ಲಿ ಪಳಗಿದ ಮಹಾ ಸಾಹಿತಿ! ಇವನು ಸಾಧಿಸಿದ ಕೆಲಸಗಳೇನೇನು ಎಂಬುದನ್ನು ಹೇಳುವ ಮೊದಲು ಇವನ ಜೀವನ ಪರಿಚಯವನ್ನು ಸೂಕ್ಷ್ಮದಲ್ಲಿ ಕೊಡಲಾಗಿದೆ.

William Jones ಇವನು ಕ್ರಿ. ಶ. 1746 ರಲ್ಲಿ ಲಂಡನ್ ನಗರದಲ್ಲಿ ಜನಿಸಿದನು. ಏಳು ವರ್ಷದ ಹುಡುಗನಾಗಿದ್ದಾಗ ಹ್ಯಾರೋ ವಿದ್ಯಾಪೀಠಕ್ಕೆ ಸೇರಿದನು. ಅನಂತರ ಓಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗವನ್ನು ಪಡೆದನು. 1764 ರಿಂದ 1771ರ ಒಳಗಾಗಿ ಸಂಸ್ಕೃತ, ಪರ್ಷಿಯನ್, ಲ್ಯಾಟಿನ್ ಮೊದಲಾದ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದುದಲ್ಲದೆ ಒಟ್ಟಾಗಿ ೨೮ ಪ್ರಾಮುಖ್ಯ ಭಾಷೆಗಳನ್ನರಿತ್ತಿದ್ದ ಶ್ರೇಷ್ಠ ಭಾಷಾ ಶಾಸ್ತ್ರಜ್ಞನೆಂದೆನಿಸಿದನು. ತನ್ನ ೨೫ನೇ ವರ್ಷ ಪ್ರಾಯದಲ್ಲಿಯೇ ಪರ್ಷಿಯನ್ ಭಾಷಾ ವ್ಯಾಕರಣವನ್ನು ಬರೆದದ್ದು ಆ ಕಾಲದಲ್ಲಿ ಉತ್ತಮವಾದ ಗ್ರಂಥವೆಂದು ಪರಿಗಣಿಸಲ್ಪಟ್ಟಿತ್ತು. 1860ರ ಒಳಗಾಗಿ ಅದು ಆರು ಬಾರಿ ಪುನರ್ಮುದ್ರಣವಾಯಿತು. ಅದನ್ನು Dr. Johnson ಇವನಂಥಾ ವಿದ್ವಾಂಸನೂ ಪ್ರಶಂಸಿಸಿದನಲ್ಲದೆ 1774 ರಲ್ಲಿ ಅದರ ಒಂದು ಪ್ರತಿಯನ್ನು ಅವನು Warren Hastings ಇವನಿಗೂ ಕಳುಹಿಸಿಕೊಟ್ಟನು. ಅದೇ ವರ್ಷ William Jones ಇವನು Commentaries on Asiatic Poetry ಎಂಬ ಆರು ಕಾಂಡಗಳ ಉದ್ಗ್ರಂಥವನ್ನೂ ಬರೆದನು.

ಕ್ರಿ. ಶ. 1772 ರಲ್ಲಿ William Jones ಇವನು Fellow of the Royal Society ಎಂದು ಬಿರುದಾಂಕಿತನಾದ ಮಹಾ ವಿದ್ವಾಂಸನೆಂದೆನ್ನಿಸಿದನು. 1777 ರ ಒಳಗಾಗಿ ಅವನು Manners of Arabs before Muhammad ಎಂಬ ಇನ್ನೊಂದು ಉದ್ಗ್ರಂಥವನ್ನು ಬರೆದದ್ದು ಅವನ ಪ್ರತಿಭೆಗೆ ದ್ಯೋತಕದಂತಿತ್ತು. ಹೀಗೆ ತನ್ನ ಎಳೇ ಪ್ರಾಯದಲ್ಲಿಯೇ ಅನೇಕ ಕ್ರೈಸ್ತ ಗೀತೆಗಳನ್ನೂ ಬೈಬಲ್ ಪ್ರಸಂಗಗಳನ್ನೂ ಪೌರಸ್ತ್ಯ ಸಾಹಿತ್ಯವನ್ನು ಕುರಿತಾಗಿ ಲಘು ಪ್ರಬಂಧಗಳನ್ನೂ ಬರೆದು William Jones ಇವನು ತನ್ನ ದೇಶೀಯರ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದಿದ್ದನು.

**೩. ಪ್ರಚಂಡ ನ್ಯಾಯಾಧೀಶ–ಸರ್ ವಿಲಿಯಮ್ ಜೋನ್ಸ್ :—**

"........What with my judicial appointments, forensic labour,

* ಇವನ ಭಾವಚಿತ್ರದ ಪ್ರತಿಯನ್ನು ಬೇರೆಡೆ ಕೊಡಲಾಗಿದೆ.

continual studies, the preparing of speeches, the pleading of causes and the giving of legal opinions–all this leaves me scarcely an hour for sleeping and for taking food. "*
ಎಂಬುದಾಗಿ ಲಂಡನ್‌ನಲ್ಲಿ ನ್ಯಾಯಾಧೀಶನಾಗಿ ನೇಮಕಹೊಂದಿದ William Jones ಇವನು Lord Chancellor Althorp ಇವನಿಗೆ ಬರೆದ ಪತ್ರವೊಂದರಲ್ಲಿ ಹೇಳಿದನು. ಆಗ ಕುಂಪೆನೀ ಸರಕಾರವು ಹಿಂದೂಸ್ಥಾನದ ಪ್ರಧಾನ ನ್ಯಾಯಾಲಯಕ್ಕೆ ಬಹು ದಕ್ಷನಾದ ಒರ್ವ ನ್ಯಾಯಾಧೀಶನನ್ನು ನೇಮಿಸಲು ಅಭ್ಯರ್ಥಿಗಳನ್ನು ಹುಡುಕುತ್ತಿದ್ದರು. ಆ ಹುದ್ದೆಗೆ William Jones ಇವನೂ ತನ್ನ ಅರ್ಜಿಯನ್ನು ಸಲ್ಲಿಸಿದ್ದನು. ಈ ಸಂದರ್ಭದಲ್ಲಿ ಅವನು Lord Chancellor Althorp ಇವನಿಗೆ ಒಂದು ಪತ್ರವನ್ನು ಬರೆದನು. ಅದರಲ್ಲಿ ತಾನು ಎಷ್ಟು ನಿರ್ಭೀತಿಯಿಂದ ಕೂಡಿದ ಪ್ರಾಮಾಣಿಕ ವ್ಯಕ್ತಿಯೆಂದೂ ವಿಖ್ಯಾತ ವಿದ್ವಾಂಸರಲ್ಲಿರ ಬೇಕಾದ ಧೈರ್ಯ ಮತ್ತು ಬಿಚ್ಚುನುಡಿಗಳಿಗೆ ಅವನು ಎಷ್ಟು ಪ್ರಸಿದ್ಧನಾಗಿದ್ದನೆಂದೂ ತಿಳಿಯುತ್ತದೆ. 1778 ರಲ್ಲಿ ಬರೆದ ಪತ್ರವು ಹೀಗಿತ್ತು :—

"... ....My competitor is not yet nominated (for judgeship in India); many doubt whether he will be ; I think he will not, unless the Chancellor should press it strongly. It is still the opinion, and wish of the Bar, that I should be the man.... ..But be assured, my dear Lord, that if the minister be offended at the style in which I have spoken, do speak, and will speak, of public affairs, and on that account should refuse to give me the judgeship, I shall not be at all mortified ; having already a decent competence without debt, or a care of any kind... ...."
ಹೀಗೆ ಬರೆದು ಪುನಃ 1782ರಲ್ಲಿ ಬರೆದ ಪತ್ರದಲ್ಲಿ ತಾನು ಹಿಂದೂಸ್ಥಾನಕ್ಕೆ ಹೋಗಲು ಹಂಬಲಿಸುವುದು ಏಕೆಂಬುದಕ್ಕೆ ಈ ರೀತಿಯಾಗಿ ಬರೆದನು :—

".. ... I feel and know myself capable of doing some good in Asia.......I should like to see the country and give the finishing stroke to my Oriental knowledge."
ಹೇಗೂ ಅದೇ ವರ್ಷ William Jones ಇವನ ಅಭಿಲಾಷೆಯು ಈಡೇರಿತು. ಭಾರತದ ನ್ಯಾಯಾಧೀಶನಾಗಿ ನೇಮಕವಾದನು. ಅದೇ ವೇಳೆಗೆ William Pitt ಇವನು ಕೇವಲ ತನ್ನ ೨೨ನೇ ವರ್ಷದಲ್ಲಿ ಬ್ರಿಟಿಷ್ ಸರಕಾರದ Chancellor of Exchequer ಆಗಿದ್ದುದು ಆಶ್ಚರ್ಯಕರವಾದ ವಾರ್ತೆಯಾಗಿತ್ತು. ಅನಂತರ ಎರಡೇ ವರ್ಷದಲ್ಲಿ ಆ ಹುಡುಗನು ಬ್ರಿಟಿಷ್ ಸರಕಾರದ ಮತ್ತು ಚಕ್ರಾಧಿಪತ್ಯದ ಪ್ರಧಾನಮಂತ್ರಿಯೂ ಆದನು.

William Jones ಇವನು 1783ರಲ್ಲಿ Anna Marie Shipley

---

* From the " Letters of Sir. W. Jones to Lord Chancellor.

ಇವಳನ್ನು ವಿವಾಹವಾದನು. ಅನಂತರ ನಾಲ್ಕು ದಿವಸಗಳಲ್ಲಿ ತನ್ನ ಪತ್ನಿ ಸಮೇತ ನಾಗಿ ಹಿಂದೂಸ್ಥಾನಕ್ಕೆ ಹಡಗನ್ನೇರಿದನು. ನ್ಯಾಯಾಧೀಶನಾಗಿ ನೇಮಕಗೊಂಡ ಇವನಿಗೆ ಸರಕಾರವು "Sir" ಎಂಬ ಬಿರುದನ್ನಿತ್ತು ಗೌರವಿಸಿತು. ಆಗ ಅವನಿಗೆ 37 ವರ್ಷ ಪ್ರಾಯವಾಗಿತ್ತು.

ಈ ಅವಧಿಯಲ್ಲಿ ಅವನು Maritime Jurisprudence of the Athenians ಎಂಬ ಗ್ರಂಥವನ್ನು ಬರೆದನಲ್ಲದೆ Law of Bailments ಎಂಬ ವಿಚಾರವಾಗಿ ಬರೆದ ಗ್ರಂಥದ ಒಂದು ಪ್ರತಿಯನ್ನು ಪ್ರಸಿದ್ಧ ಐತಿಹಾಸಕಾರ Edward Gibbons ಇವನಿಗೆ ಕಳುಹಿಸಿಕೊಟ್ಟನು.

೪. 'ರಾಯೆಲ್ ಏಷ್ಯಾಟಿಕ್ ಸೊಸೈಟಿ'—ಇದರ ಸ್ಥಾಪನೆ :—

ಕ್ರಿ. ಶ. 1783 ರಲ್ಲಿ ಭಾರತಕ್ಕೆ ಪ್ರಯಾಣ ಬೆಳೆಸಿದ್ದ Sir William Jones ಇವನು ತಾನು ಅದೆಂದು ಹಿಂದೂಸ್ಥಾನಕ್ಕೆ ತಲುಪುವೆನೋ ಎಂದು ತವಕ ಗೊಂಡಿದ್ದನು. ತನ್ನ ತಾಯ್ನಾಡಿಗೆ ಹೋಗುವಷ್ಟೇ ಪುಲಕಿತನಾಗಿ ತಾನು ಭಾರತ ದಲ್ಲಿ ಏನೇನು ಕಾರ್ಯಗಳನ್ನು ಸಾಧಿಸಬಹುದು ಎಂಬುದಾಗಿ ಹಡಗಿನಲ್ಲಿಯೇ ಒಂದು ಯೋಜನೆಯನ್ನು ತಯಾರಿಸಿದನು. ಹಿಂದೂ ನ್ಯಾಯಶಾಸ್ತ್ರ, ಮಹಮ್ಮದೀಯ ನ್ಯಾಯಶಾಸ್ತ್ರ, ವಿಜ್ಞಾನ ಮತ್ತು ಗಣಿತಶಾಸ್ತ್ರ, ಪ್ರಾಚೀನ ವೈದ್ಯಶಾಸ್ತ್ರ, ಭೂಗೋಳ ಶಾಸ್ತ್ರ, ಸಾಹಿತ್ಯ, ಸಂಗೀತ, ರಾಜಕೀಯ ಇತ್ಯಾದಿಗಳ ಮೇಲೆ ದುಡಿಯಲು ಅಂತೆಯೇ ಸಂಕಲ್ಪಿಸಿಕೊಂಡನು.

Sir William Jones ಇವನು ಪ್ರಯಾಣ ಬೆಳೆಸಿದ್ದ ಹಡಗು ಹಿಂದೂ ಸ್ಥಾನಕ್ಕೆ ತಲಪಿದಾಗ ಅವನಿಗೆ ಉಂಟಾದ ಸಂತೋಷವು ಅವರ್ಣನೀಯವಾಗಿತ್ತು. ಆ ಹಡಗು ಮದ್ರಾಸು ಬಂದರದಲ್ಲಿ ಒಂದೆರಡು ದಿನ ನಿಂತು ಕಲ್ಕತ್ತಾಕ್ಕೆ ಮುಂದುವರಿ ಯಿತು. ಮಹಾ ನ್ಯಾಯಾಧೀಶನಾದ ಇವನನ್ನು ಸ್ವಾಗತಿಸಲು ಕುಂಪೆನೀ ಸರಕಾರದ ಅಧಿಕಾರಿಗಳು ಹುಗ್ಲೀ ನದೀ ಬಂದರದಲ್ಲಿ ಕಾದುನಿಂತರು.

ತಾನು ನ್ಯಾಯಾಧೀಶ ಪದವಿಯನ್ನು ಸ್ವೀಕರಿಸಿದೊಡನೆಯೇ ಭಾರತದ ಆರ್ಷೇಯ ಸಂಸ್ಕೃತಿಯ ಅಪಾರತೆಯನ್ನು ಲೋಕವೆಲ್ಲಾ ಪ್ರಚಾರಪಡಿಸಲು ಒಂದು ಸಂಸ್ಥೆಯನ್ನು ಸ್ಥಾಪಿಸುವುದರಲ್ಲಿ ಉದ್ಯುಕ್ತನಾದನು. ದೇಶದ ಸುದೈವವೋ ಎಂಬಂತೆ ಆ ಕೆಲಸದಲ್ಲಿ ಅವನಿಗೆ ನೆರವಾಗಲು Governor-General Warren Hastings ಇವನೂ ಇದ್ದನು. W. Jones, C. Wilkins ಮತ್ತು N. Halhed ಇವರೊಡನೆ ಇತರ ಮೂವತ್ತು ಜನ ಐರೋಪ್ಯಾ ವಿದ್ವಾಂಸರು ಸೇರಿ ಆ ಸಂಸ್ಥೆಯನ್ನು ಸ್ಥಾಪಿಸಿದರು. ಪ್ರಾರಂಭದಲ್ಲಿ ಅದು Royal Asiatic Society of Bengal ಎಂದು ಕರೆಯಲ್ಪಟ್ಟಿತ್ತು. ಅನಂತರ "of Bengal" ಎಂಬ ಶಬ್ದಗಳು ಅದರಿಂದ ತೆಗೆದುಹಾಕಲ್ಪಟ್ಟವು. ಅದರೊಡನೆಯೇ "Asiatic Researches" ಎಂಬ ಪತ್ರಿಕೆಯನ್ನೂ ಸ್ಥಾಪಿಸಿದರು. ಈ ಸಾಹಿತ್ಯ ಸಂಸ್ಥೆ ಮತ್ತು ಪತ್ರಿಕೆಯನ್ನು ಸ್ಥಾಪಿಸಲು ಕಾರಣರಾದವರಲ್ಲಿ John Hyde, William

Jones, Jonathan Duncan, David Anderson, John Casnac ಈ ಮೊದಲಾದ ಎಂಟು ಜನ ಸೇರಿ ಅಂದಿನ ಕುಂಪೆನೀ ಸರಕಾರದ ಆಡಳಿತ ಮಂಡಳಿಯಲ್ಲಿದ್ದ Governor-General W. Hastings, Edward Wheeler, John Macpherson ಮತ್ತು J. Stables ಇವರನ್ನು ಆ ಸಂಸ್ಥೆಯ ಪೋಷಕರಾಗಿರುವಂತೆ ಕೇಳಿಕೊಂಡರು :—

"........A society of which we are members, having been instituted for the purpose of inquiring into the history, civil and natural, the Antiquities, Arts, Sciences and Literature of Asia, we are desirous, that you will honour us with accepting the title of our patrons........"

ಇದಕ್ಕೆ ಉತ್ತರವಾಗಿ ಆ ನಾಲ್ವರು ಈ ರೀತಿ ಬರೆದರು :—

"........We very much approve and applaud your endeavours to promote the extension of knowledge by the means, which your local advantages afford you in a degree perhaps exceeding those of any part of the globe, and we derive great hopes of attainment of so important an end from our personal knowledge of the abilities and talents of the Gentlemen......."

ಹೇಗೂ ಸಾಹಿತ್ಯ ಪ್ರೇಮಿಯೂ ರಾಜಋಷಿಯೂ ಎಂಬಂತೆ ಇದ್ದ ಆ Warren Hastings ಇವನನ್ನೇ ಆ ಸಂಸ್ಥೆಯ ಪ್ರಥಮ ಅಧ್ಯಕ್ಷನಾಗಿರುವಂತೆ ಕೇಳಿಕೊಂಡರು. ಅವನ ನಂತರ 1785 ರಿಂದ ತನ್ನ ಕಡೇ ದಿನಗಳ ವರೆಗೂ William Jones ಇವನೇ ಅದರ ಅಧ್ಯಕ್ಷನಾಗಿದ್ದನು. ಈ Royal Asiatic Society ಇದರ ಸ್ಥಾಪನೆಯಿಂದ ಈ ದೇಶದ ಸಾಹಿತ್ಯ ಪ್ರಪಂಚಕ್ಕೆ ನವ ಅರುಣೋದಯವು ಆದಂತೆ ಆಯಿತು ; ಅಲ್ಲದೆ ಅದನ್ನು ಕುರಿತು ಹೀಗೆ ಹೇಳಲಾಗಿದೆ :—

"........The foundation of the Royal Asiatic Society in January 1784, was a land-mark in the cultural history of India."

### ೫. ಸರ್ ವಿಲಿಯಮ್ ಜೋನ್ಸ್—ಇವನ ಅಪಾರ ಬರೆವಣಿಗೆ :—

"........I am now at the ancient University of Nadeya where I hope to learn the rudiments of that venerable and interesting language which was once vernacular in all India, and in both the peninsulas with their islands."

ಎಂಬುದಾಗಿ 1785 ರಲ್ಲಿ Sir William Jones ಇವನು ತನ್ನ ಮಿತ್ರರಿಗೆ ಬರೆದ ಪತ್ರಗಳಲ್ಲಿ ಹೇಳಿದನು. ತಾನು ಸ್ಥಾಪಿಸಿದ ಸಂಸ್ಥೆಯ ಮೂಲಕ ಪ್ರಾಚೀನ ಭಾರತದ ಸಾಹಿತ್ಯ, ಇತಿಹಾಸ ಮತ್ತು ಸಂಸ್ಕೃತಿಯನ್ನು ಅನ್ವೇಷಿಸತೊಡಗಿದನು. ಈ ದಿಶೆಯಲ್ಲಿ ಅವನ ನಿರಂತರ ಪರಿಶ್ರಮವನ್ನು ಕಂಡು ಯೂರೋಪಿನ ವಿದ್ವಾಂಸರೆಲ್ಲರೂ ಅವನನ್ನು "Asiatic Jones" ಎಂದು ಕರೆಯುತ್ತಿದ್ದರು. ಹಿಂದೂಸ್ಥಾನದ ಬಗ್ಗೆ

ಅವನಿಗೆ ಅದೆಂಥಾ ಭಕ್ತಿ ಅಭಿಮಾನಗಳಿದ್ದುವೆಂಬುದನ್ನು ಅವನ ಮಾತಿನಲ್ಲೇ ಕೇಳ ಬೇಕಾಗಿದೆ. 1784ರ ಜನವರಿ ತಿಂಗಳಲ್ಲಿ Royal Asiatic Society ಇದರ ಉದ್ಘಾಟನೆಯ ವೇಳೆಗೆ ತನ್ನ ಒಂದು ಭಾಷಣದಲ್ಲಿ ಹೀಗಂದನು :—

"When I was at sea last August on my voyage to this country, which I had long and ardently desired to visit, I found one evening, on inspecting the observations of the day, that INDIA lay before us, and PERSIA on our left, whilst a breeze from ARABIA blew nearly on our stern ...... It gave me inexpressible pleasure to find myself in the midst of so noble an amphitheatere, almsot encircled by the vast regions of Asia, which has ever been the esteemed nurse of Sciences, the inventress of dilightful and useful arts, the scene of glorious actions, fertile in the production of human genius, abounding in natural wonders, and infinitely diversified in the forms of riligion and government, in the laws, manners, customs and languages, as well as in the features and complexions, of men. I could not help remarking, how important and extensive a field was yet unexplored, and how many solid advantages unimproved......."

William Jones ಇವನು ಭಾರತೀಯ ಧರ್ಮಶಾಸ್ತ್ರ, ಮತ್ತು ನ್ಯಾಯ ಶಾಸ್ತ್ರಗಳೆಲ್ಲವನ್ನೂ ಸಂಪಾದಿಸಲು ಹಲವು ದೇಶೀಯ ಪಂಡಿತರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿದನು. ಆಗ ಬಂಗಾಳದಲ್ಲಿದ್ದ ಪಂಡಿತರಲ್ಲಿ ಜಗನ್ನಾಥ ಪಂಚಾನನು ಅವನಿಗೆ ಬಹು ವಿಧದಲ್ಲಿ ಸಹಾಯಕನಾದನು. ಇವರಿರ್ವರೂ ಸೇರಿ ಹಲವು ಶಾಸ್ತ್ರೀಯ ಗ್ರಂಥಗಳನ್ನು ಸಂಪಾದಿಸಿದರು. Sir Jones ಇವನು ಶಾಸ್ತ್ರ ಗ್ರಂಥಗಳ ಮೇಲೆ ವಿಮರ್ಶೆಯನ್ನೂ ನಡೆಸಲಾರಂಭಿಸಿದನು. ಸಾಂಖ್ಯ ತತ್ವಕ್ಕೂ ಪೈಥೋಗೊರಸ್ಸನ ತತ್ವಶಾಸ್ತ್ರಕ್ಕೂ ಇರುವ ಸಾಮ್ಯವನ್ನು ಕಂಡು ಸಾಂಖ್ಯ ಶಾಸ್ತ್ರದಿಂದಲೇ ಪೈಥೋಗೊರಸ್ಸನ ವೇದಾಂತವು ಹುಟ್ಟಿದೆಂದು ಪ್ರತಿಪಾದಿಸಿದವರಲ್ಲಿ ಮೊದಲಿಗನಾದನು. ಕ್ರಿ. ಶ. 1790ರ ಒಳಗಾಗಿ ಅವನು ಈ ದೇಶದ ಪ್ರಾಚೀನ ಸಾಹಿತ್ಯ ಮತ್ತು ಸಂಸ್ಕೃತಿಗಳೆಲ್ಲವನ್ನೂ ಅನ್ವೇಷಿಸಿ ಅವುಗಳನ್ನು ಕುರಿತು ಹಲವು ಗ್ರಂಥಗಳನ್ನೂ ತನ್ನ Asiatic Researches ಪತ್ರಿಕೆಯಲ್ಲಿ ಲೇಖನಗಳನ್ನೂ ಬರೆದನು.

೬. ಇಡೀ ಏಷ್ಯಾ ಖಂಡವೇ ಅವನ ಕಾರ್ಯಕ್ಷೇತ್ರವಾಯಿತು :—

"I am no hindu, but I hold doctrine of the Hindus concerning a future state to be incomparably more rational, more pious, and more likely to deter men from vice than the horrid opinions inclucated by Christians on punishments 'without end'."

Warren Hastings ಇವನ ನಂತರ ಸನಾತನ ಧರ್ಮವನ್ನು ಈ ರೀತಿ ಮುಕ್ತ



ಕಂಠದಿಂದ ಹೊಗಳಿದ ಪಾಶ್ಚಾತ್ಯರಲ್ಲಿ Sir William Jones ಇವನು ಪ್ರಸಿದ್ಧ ನಾಗಿದ್ದಾನೆ. ಸಂಸ್ಕೃತ ಸಾಹಿತ್ಯ ಮತ್ತು ಭಾಷೆಯನ್ನು ಕುರಿತು ಇವನು 1786ರಲ್ಲಿ ಹೇಳಿದ ಮಾತುಗಳು ಇನ್ನಷ್ಟು ಭಾವಗರ್ಭಿತವಾಗಿವೆ:—

"......The Sanskrit language, whatever be its antiquity, is of a wonderful structure, more perfect than the Greek, more copious than the Latin. and more exquisitely refined than either, yet bearing to both of them a stronger affinity, both in the roots of verbs and in the forms of grammar......"

ಹಲವು ನ್ಯಾಯಶಾಸ್ತ್ರ ಗ್ರಂಥಗಳನ್ನು ಸಂಶೋಧಿಸಿ ಹೊರತಂದ Sir Charles Wilkins ಇವನು ಮನುಸ್ಮೃತಿಯನ್ನು ಭಾಷಾಂತರಿಸಲು ಪ್ರಾರಂಭಿಸಿದ್ದನು. ಆದರೆ 1786 ರಲ್ಲಿ ಅವನು ಸ್ವದೇಶಕ್ಕೆ ಹಿಂದಿರುಗಬೇಕಾಗಿದ್ದುದರಿಂದ ಆ ಕೆಲಸವನ್ನು William Jones ಇವನಿಗೆ ಒಪ್ಪಿಸಿದನು. ಇದನ್ನು ಭಾಷಾಂತರಿಸುತಿದ್ದ ವೇಳೆಗೆ Sir Jones ಇವನು ತನ್ನ ಮಿತ್ರರಿಗೆ ಬರೆದ ಪತ್ರದಲ್ಲಿ ಹೀಗಂದನು:—

"I have begun to translate Manu in English.... ...I am tolerably strong in Sanskrit......"

ಅವನು ಬರೆದ ಮನುಧರ್ಮಶಾಸ್ತ್ರ ಮತ್ತು ಹಿಂದೂ ನ್ಯಾಯಶಾಸ್ತ್ರ ಗ್ರಂಥಗಳು ಕಳೆದ ಶತಮಾನದಲ್ಲಿ ಆರು ಬಾರಿ ಪುನರ್ಮುದ್ರಣವಾದುವೆಂದರೆ ಈ ಭಾಷಾಂತರ ಗ್ರಂಥಗಳು ಅದೆಷ್ಟು ಪರಿಪೂರ್ಣವಾಗಿದ್ದುವೆಂದು ಊಹಿಸಿಕೊಳ್ಳಬಹುದು. ನ್ಯಾಯಾಧೀಶ ನಾಗಿಯೂ ಅದ್ಭುತ ಸಾಹಿತಿಯಾಗಿಯೂ ಇದ್ದುದರ ಜತೆಗೆ, ಕ್ರಿ. ಶ. 1785 ರಿಂದ Royal Asiatic Society ಇದರ ಪ್ರಮುಖ ಸಂಚಾಲಕನಾಗಿ ಮತ್ತು ಅಧ್ಯಕ್ಷ ನಾಗಿ Sir William Jones ಇವನು ಕುಂಪೆನೀ ಸರಕಾರದ ಪ್ರೋತ್ಸಾಹವನ್ನು ಹೊಂದಿ ಆ ಸಂಸ್ಥೆಯ ಕಾರ್ಯಕಲಾಪಗಳನ್ನು ವಿಸ್ತರಿಸಿದನು. ಹಿಂದೂಸ್ಥಾನ, ಬರ್ಮಾ, ತಿಬೆಟು, ಚೀನಾ, ಪರ್ಷಿಯಾ ಮೊದಲಾದ ದೇಶಗಳ ಸಾಹಿತ್ಯ ಮತ್ತು ಐತಿಹ್ಯದ ಬಗ್ಗೆ ತಾನಾಗಿಯೇ ಗ್ರಂಥಗಳನ್ನು ಬರೆದುದಲ್ಲದೆ ಇತರರಿಗೂ ಮಾರ್ಗದರ್ಶಕ ನಾದನು. ಇಡೀ ಏಷ್ಯಾಖಂಡವನ್ನೇ ತನ್ನ ಕಾರ್ಯಕ್ಷೇತ್ರವಾಗಿ ಮಾಡಿಕೊಂಡನು. ಹಿಂದೆಯೇ ಬರೆದಿದ್ದ ಅವನ ಪರ್ಷಿಯನ್ ಭಾಷಾ ವ್ಯಾಕರಣವು ಅದೆಷ್ಟೋ ಬಾರಿ ಪುನರ್ಮುದ್ರಣವಾಗಿ ಜನಪ್ರಿಯವಾದ ಭಾಷಾ ಗ್ರಂಥವಾಯಿತು. ಅದರ ನಂತರ History of Nadir Shah ಎಂಬ 431 folio ಪುಟಗಳ ಚರಿತ್ರೆಯನ್ನು ಬರೆದನು. ಅದರ ಪ್ರಸ್ತಾವನೆಯಲ್ಲಿ ಅವನು ಹೀಗೆ ಹೇಳಿದನು:—

"History, in its original state, was probably nothing more than the bare relation of public events, which were digested in the form of Annals......"

೭. ಇತಿಹಾಸಕಾರ—ಸರ್ ವಿಲಿಯಮ್ ಜೋನ್ಸ್:—

Sir William Jones ಇವನು ತನ್ನ ವಿವಿಧ ಬಗೆಯ ಕಾರ್ಯಕಲಾಪಗಳ

ಜತೆಗೆ A Short History of Persia ಇದನ್ನು ಬರೆದನು. ಮಹ್ಮದ ಪೈಗಂಬರನಿಗಿಂತಾ ಹಿಂದಿನ ಕಾಲದ ಅರೆಬಿಯಾ ದೇಶದ ಜನಜೀವನವನ್ನು ಕುರಿತು ಅವನು ಇಂಗ್ಲೆಂಡಿನಲ್ಲಿದ್ದಾಗಲೇ ಬರೆದ ಗ್ರಂಥದಲ್ಲಿ ಅಂದಿನ ಈ ಯುವಕ ಲೇಖಕನು ಏಷ್ಯಾಖಂಡದ ಪ್ರಾಚೀನ ಚರಿತ್ರೆಯನ್ನು ಅದೆಷ್ಟು ಆಳವಾಗಿ ಅಭ್ಯಸಿಸಿದ್ದನೆಂಬುದನ್ನು ತೋರ್ಪಡಿಸಿದನು. ಅದರನಂತರ ಪರ್ಷಿಯಾ ದೇಶದ ಚರಿತ್ರೆಯನ್ನು ಸೂಕ್ಷ್ಮವಾಗಿ ಬರೆದು ಅವನ ಐತಿಹಾಸಿಕ ಜ್ಞಾನವನ್ನು ಪ್ರದರ್ಶಿಸಿದನು. ಅದರಲ್ಲಿ ಚರಿತ್ರೆಯೆಂಬುದೂ ಸತ್ಯದ ತಳಹದಿಯ ಮೇಲೆ ಕಟ್ಟಲ್ಪಟ್ಟ ಶಾಸ್ತ್ರೀಯವಾದ ನಿರೂಪಣೆಯೆಂಬುದನ್ನು ಅವನು ಹೇಳುವ ಈ ಕೆಳಗಿನ ಮಾತುಗಳು ಇಂದಿನ ಇತಿಹಾಸಕಾರರಿಗೆ ಉತ್ತಮ ಪಾಠವಾಗಿದೆ :—

"Cicero, who was meditating on History of Rome, had established a set of rules for the conduct of his work which he puts into mouth of Antonius in his treatise on "The Accomplished Orator", where he declares "the basis and ground-work of all History to depend upon these primary laws, that the writer should not dare to set down a falsehood, nor be deterred by fear from divulging an interesting Truth; and, that he should avoid any just suspicion of partiality or resentment...he should adhere to the order of itme, and diversify his narrative with the description of countries ......"

ಚಾರಿತ್ರಿಕ ಗ್ರಂಥಗಳನ್ನು ಅಥವಾ ಆಯಾ ಕಾಲದ ದೈನಂದಿನ ವಿವರಗಳನ್ನು ಬರೆಯುವಂಥವರು ತಮಗೆ ಅಥವಾ ತಮ್ಮ ಪ್ರಭುಗಳಿಗೆ ಅನುಕೂಲವಾಗುವಂತೆ ಬರೆಯುತ್ತಾ ಅದೇ ಚರಿತ್ರೆಯೆಂದು ಹೇಳಿದರೆ ಭವಿಷ್ಯದ ಓದುಗರಿಗೆ ಅನ್ಯಾಯವನ್ನು ಮಾಡಿದಂತಾಗುತ್ತದೆ. ನಮ್ಮ ದೇಶದ ಇತಿಹಾಸ ಗ್ರಂಥಗಳು ಹಲವು ಈ ಕುತ್ಸಿತ ದೃಷ್ಟಿಯಿಂದ ಬರೆಯಲ್ಪಟ್ಟಿವೆ. ಪರ್ಷಿಯಾ ದೇಶದ ಇತಿಹಾಸದಲ್ಲೂ Sir William Jones ಇವನಿಗೆ ಅಂಥಾ ಪ್ರಸಂಗವು ಕಂಡುಬಂದಿದೆ. ಹೇಗೂ ಇತಿಹಾಸ ಬರವಣಿಗೆಯು ಹೇಗಿರಬೇಕೆಂಬುದನ್ನು ಅವರು ಮುಂದುವರಿಸಿ ಹೇಳುವ ಮಾತುಗಳು ಇನ್ನೂ ಉದ್ಬೋಧಕವಾಗಿವೆ :—

"The very soul and essence of History is Truth, without which it can preserve neither its namc nor its nature, and with which the most indifferent circumstances in a barren chronicle are more interesting to a sensible reader, than the greatest events... Yet it is strange, that of so many Histories, ancient or modern, European or Asiatic, there should be so few, which we can read without asking in almost every Page, "Is this true."

### ೮. ವಿಲಿಯಂ ಜೋನ್ಸ್—ಇವನ “ಅಭಿಜ್ಞಾನ ಶಾಕುಂತಲಾ” :—

ಕಾಳಿದಾಸನ ನಾಟಕಗಳು ವಿದೇಶೀಯರಿಗೆ ಪರಿಚಯವಾದುದು William Jones ಇವನ ಭಾಷಾಂತರಗಳ ಮೂಲಕವೇ ಆಗಿದೆ. ಇವನನ್ನುಸರಿಸಿಯೇ Von Schlegel ಇವನು ಜರ್ಮನ್‌ನಲ್ಲೂ, Prof. Wilson ಇವನು ಇಂಗ್ಲೀಷ್‌ನಲ್ಲೂ ಅವುಗಳ ಅನುವಾದ ಕಾರ್ಯವನ್ನು ಹತ್ತಿಪ್ಪತ್ತು ವರ್ಷಗಳನಂತರ ಕೈಗೊಂಡರು. Sir Jones ಇವನು ‘ಅಭಿಜ್ಞಾನ ಶಾಕುಂತಲಾ’ ನಾಟಕವನ್ನು ಮೊದಲಾಗಿ ಲ್ಯಾಟಿನ್ ಭಾಷೆಗೆ ತಿಳಿಸಿದ್ದು ಕ್ರಿ. ಶ. 1789 ರಲ್ಲಿ ಮುದ್ರಣವಾಯಿತು. ಅದರ ನಂತರವೇ ಅದರ ಇಂಗ್ಲಿಷ್ ಭಾಷಾಂತರವು ಅವಸರದಲ್ಲೇ 1790 ರಲ್ಲಿ ಬರೆಯಲ್ಪಟ್ಟುದು ಅದೇ ವರ್ಷ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ಈ ನಾಟಕವು ಕಳೆದ ಶತಮಾನದಲ್ಲಿ ಹನ್ನೆರಡು ಭಾರಿ ಪುನರ್ಮುದ್ರಣವಾಯಿತೆಂದರೆ ಅದೆಷ್ಟು ಜನಪ್ರಿಯವಾಗಿತ್ತೆಂದು ತಿಳಿಯಬಹುದು. ಆ ಗ್ರಂಥದ ಪ್ರಸ್ತಾವನೆಯಲ್ಲಿ ಭಾರತೀಯ ನಾಟ್ಯಶಾಸ್ತ್ರದ ವಿಷಯವಾಗಿ ಬರೆಯುತ್ತ ಅವನು ಹೀಗನ್ನುತ್ತಾನೆ :—

“Dramatic poetry must have been immemorially ancient in India ; the invention of it is commonly ascribed to Bharata, a sage believed to have been inspired....who invented also a system of music which bears his name.”

Sir William Jones ಇವನ ಭಾಷಾಂತರ ಶೈಲಿಯು ಸರಳ ಸುಂದರವಾಗಿ ಇದೆಯೆಂಬುದಕ್ಕೆ ಅವನ ‘ಅಭಿಜ್ಞಾನ ಶಾಕುಂತಲಾ’ ಇದರಿಂದ ಈ ಕೆಳಗಿನ ಭಾಗವನ್ನು ಎತ್ತಿಕೊಡಲಾಗಿದೆ. “The Fatal Ring” ಎಂದು ಕರೆಯಲ್ಪಟ್ಟ ಈ ನಾಟಕವು ಪಾಶ್ಚಾತ್ಯ ವಿದ್ವಾಂಸರ ಪ್ರಶಂಸೆಗೆ ಒಳಗಾಯಿತಲ್ಲದೆ ಭಾರತೀಯ ನಾಟಕ ಕಲೆಯ ವಿಚಾರದಲ್ಲಿ ಇನ್ನಷ್ಟು ಅವರ ಕಣ್ದೆರೆಯಿಸಿತು :—

“Kanwa;—Mayst thou be cherished by thy husband, as Sharmishta was cherished by Yayaati. Mayst thou bring forth a sovereign of the world, as she brought forth Puru.”

“Gautami :—This, my child, is not a mere benediction ; it is a boon actually conferred.

“Kanwa :—Hear, all ye trees of this hallowed forest ; ye trees, in which the sylvan goddesses have their abode ; hear, and proclaim, that Shakuntala is going to the place of her wedded lord : she who drank not, though thirsty, before you were watered, she who cropped not through affection for you, and of your fresh leaves, though she would have been pleased with such an ornament for her looks, she whose chief delight was in the season when your branches are spangled with flowers……”

ಜರ್ಮನ್ ಕವಿ Goethe ಇವನು ಶಾಕುಂತಲ ನಾಟಕವನ್ನು ಓದಿ ಹೇಗೆ ಆನಂದಿಸಿದನೆಂಬುದನ್ನು ಹಿಂದೆಯೇ ಹೇಳಲಾಗಿದೆ. ಅದರಂತೆ H. A. Hamakerr Von Schlegel ಮೊದಲಾದವರೂ Sir Jones ಇವನ ಬರವಣಿಗೆಯಿಂದಲೇ ಸ್ಫೂರ್ತಿಯನ್ನು ಹೊಂದಿದರು. ಇವರನಂತರ ಅವನು 'ಹಿತೋಪದೇಶ'ವನ್ನು ಭಾಷಾಂತರಿಸಿದನು. "Hitopadesha is a charming book" ಎಂಬುದಾಗಿ ಹೇಳಿದನು. ಪರ್ಷಿಯನ್ ಕವಿ ಹಫೀಸ್ ಶಿರಾಜಿಯ ಕಾವ್ಯಗಳನ್ನೂ ಭಾಷಾಂತರಿಸಿದ್ದು ಅವೆಲ್ಲಾ 1810ರ ಒಳಗಾಗಿ ಪ್ರಕಟವಾದುವು. W. Jones ಇವನು ಭಾರತೀಯ ದೇವತೆಗಳನ್ನೂ ನೈಸರ್ಗಿಕ ದೃಶ್ಯಗಳನ್ನೂ ಕುರಿತು ಹಲವು ಸುಂದರವಾದ ಕವಿತೆಗಳನ್ನು ಇಂಗ್ಲಿಷಿನಲ್ಲಿ ಬರೆದಿದ್ದಾನೆ. ಲಕ್ಷ್ಮಿಯ ವಿಷಯವಾಗಿ ಬರೆದ ಅವನ ಕವಿತೆಯ ಕೆಲವು ಪಂಕ್ತಿಗಳು ಹೀಗಿವೆ:—

"Daughter of Ocean, and primevel Night
Who fed with moon beams dropping silver dew,
And cradled in a wild wave dancing light,
Sawest with a smile, new shores and creatures new.
Thee Goddess, I salute ; Thy gifts I sing,
And not with idle wing,
Soar from the fragrant bower through trepid skies......"

೯. ವಿಲಿಯಂ ಜೋನ್ಸ್—ಇವನಿಂದ ಹಲವು ಶಾಸ್ತ್ರೀಯ ಗ್ರಂಥಗಳು:—

Sir William Jones ಇವನ ಪಾಂಡಿತ್ಯವನ್ನು ಕಂಡು Governor-General Lord Charles Cornwallis ಇವನು ಬೆರಗಾದನಲ್ಲದೆ ಪ್ರಬಲ ನ್ಯಾಯಾಧೀಶನೂ ಆದ ಅವನ ಸಲಹೆಗಳಿಗೆ ವಿಶೇಷ ಮನ್ನಣೆಯಿತ್ತು ಅವನ ಕೆಲಸಗಳಲ್ಲಿ ಸಹಕರಿಸಿದನು. ಹಿಂದೂ ಮತ್ತು ಮಹಮ್ಮದೀಯ ಧರ್ಮಶಾಸ್ತ್ರಗಳನ್ನು ಪೂರ್ವಕಾಲದಲ್ಲಿ Emperor Justinian ಇವನು Roman Law ಇದನ್ನು ಬರೆಯಿಸಿದ ರೀತಿಯಲ್ಲಿ ಬರೆಯಬೇಕೆಂಬುದಕ್ಕೆ ಅವನು Lord C. Cornwallis ಇವನ ಸಮ್ಮತಿಯನ್ನು ಪಡೆದು A Complete Digest of Hindu and Muhammaden Law ಎಂಬ ಗ್ರಂಥವನ್ನು ಬರೆದನು.

W. Jones ಇವನು ಪ್ರಚಂಡ ಭಾಷಾಶಾಸ್ತ್ರಜ್ಞನಾಗಿದ್ದನೆಂಬುದಕ್ಕೆ ಅವನು ಪೂರ್ವ ಹಿಂದೂಸ್ಥಾನದ ಬಂಗಾಳೀ, ಅಸ್ಸಾಮಿ, ಒರಿಯಾ ಇತ್ಯಾದಿ ಭಾಷೆಗಳ ತುಲನಾತ್ಮಕ ವ್ಯಾಕರಣ ಗ್ರಂಥವೊಂದನ್ನು ಬರೆದಿದ್ದು 1801 ರಲ್ಲಿ ಲಂಡನ್‌ನಲ್ಲಿ ಪ್ರಕಟವಾಯಿತು. ಅವನ ಹೆಬ್ರೂ—ಇಂಗ್ಲಿಷ್ ಅರ್ಥಕೋಶವು ಮತ್ತೊಂದು ಅಮೋಘ ಗ್ರಂಥವಾಗಿತ್ತು. " ಏಷ್ಯಾ ಖಂಡದ ಚರಿತ್ರೆ ಮತ್ತು ಪ್ರಾಚೀನ ಅವಶೇಷಗಳು " ಎಂಬುದಾಗಿ 1793ರಲ್ಲಿ ಗ್ರಂಥವನ್ನೂ ಸರಕಾರದ ಆಶ್ರಯದಿಂದಲೇ ಪ್ರಕಟಿಸಲಾಯಿತು.

ಶ್ರೇಷ್ಠ ನ್ಯಾಯಶಾಸ್ತ್ರಜ್ಞನಾದ William Jones ಇವನ Law of

Succession ಎಂಬ ಗ್ರೀಕ್ ಭಾಷಾ ಗ್ರಂಥದ ಇಂಗ್ಲಿಷ್ ರೂಪಾಂತರವು ಹಲವು ದೇಶಗಳ ನ್ಯಾಯಾಸ್ಥಾನಗಳ ಗ್ರಂಥಭಂಡಾರಗಳಲ್ಲಿ ವಿರಾಜಿಸಿತು. ಹಿಂದೂ ಧರ್ಮ ಶಾಸ್ತ್ರ, ಯಾಜ್ಞವಲ್ಕ್ಯ, ಮನು ಮೊದಲಾದವರ ಶಾಸ್ತ್ರಗ್ರಂಥಗಳ ಭಾಷಾಂತರವೂ ಕಳೆದ ಶತಮಾನದಲ್ಲಿ ಮೇಲಿಂದ ಮೇಲೆ ಪುನರ್ಮುದ್ರಣವಾದುವು. ಅದೇ ರೀತಿ Law of Bailments ಮತ್ತಿತರ ಕಾನೂನು ಕಾಯಿದೆ ಗ್ರಂಥಗಳೂ ಬಹು ಸಂಖ್ಯೆಯಲ್ಲಿ ಎಲ್ಲೆಲ್ಲೂ ಪ್ರಚಾರವಾದುವು. ವೇದ ಮತ್ತು ಉಪನಿಷತ್ತುಗಳ ಮೇಲೂ ಹಲವು ಲೇಖನಗಳನ್ನು ಬರೆದನು.

Sir Wiliam Jones ಇವನು ಬಹುಶ್ರುತನೆಂಬುದನ್ನು ಹಲವು ವಿಧದಲ್ಲಿ ತೋರಿಸಿದನು. ಸಸ್ಯಶಾಸ್ತ್ರ ಮತ್ತು ವ್ಯವಸಾಯ ವಿಧಾನಗಳ ಮೇಲೂ ಪುಸ್ತಕಗಳನ್ನು ಬರೆದನು. ಸಂಗೀತದ ಮೇಲೆ ಅವನಿಗಿದ್ದ ಅಭಿರುಚಿ ವಿಶೇಷವಾಗಿತ್ತು. Musical Modes of Hindus, Songs of Jayadeva, ಎಂದಿತ್ಯಾದಿಯಾಗಿ ಶಾಸ್ತ್ರೀಯವಾಗಿ ಲೇಖನಗಳನ್ನು ಬರೆದನು. Literature of Hindus, Persians ಎಂದು ಮೊದಲಾಗಿ ಪ್ರತ್ಯೇಕ ಲೇಖನಗಳು ಪ್ರತಿಯೊಂದು 50 folio ಪುಟಗಳಿಗೂ ಕಡಿಮೆಯಿಲ್ಲದಂತೆ ಬರೆದನು. Warren Hastings ಇವನ ಅಭಿಪ್ರಾಯಕ್ಕನುವಾಗಿ Muhammaden Law of Inheritance ಎಂಬ ಗ್ರಂಥವನ್ನು ಬರೆದನು.

Sir William Jones ಇವನು ಒರ್ವ ಅಸಾಮಾನ್ಯ ವ್ಯಕ್ತಿಯೆಂಬುದಕ್ಕೆ Chess ಅಥವಾ ಚದುರಂಗದಾಟದಲ್ಲಿ ಅವನಿಗಿದ್ದ ತಜ್ಞತೆಯು ಇನ್ನೊಂದು ನಿದರ್ಶನವಾಗಿದೆ. ಹಿಂದೂಸ್ಥಾನ, ಚೀನಾ, ಪರ್ಷಿಯಾ ಇತ್ಯಾದಿ ದೇಶಗಳಲ್ಲಿ ಪ್ರಚಲಿತ ವಿದ್ದ ಚದುರಂಗದಾಟಗಳನ್ನು ಕುರಿತು ಉತ್ತಮವಾದ ಗ್ರಂಥಗಳನ್ನು ಬರೆದನು. ಬಹು ಜವಾಬ್ದಾರೀಯುತ ನೌಕರಿಯೊಡನೆ ಇವನು ಅಸಾಧಾರಣವಾದ ವ್ಯಾಸಂಗ ವನ್ನು ವಿವಿಧ ಕ್ಷೇತ್ರಗಳಲ್ಲಿ ಕೈಗೊಂಡು ಪರಿಪೂರ್ಣತೆಯನ್ನು ಪಡೆದನೆಂಬುದು ವಿಸ್ಮಯಕಾರಕವಾದ ವಿಚಾರವಾಗಿದೆ. 1946 ರಲ್ಲಿ ಓಕ್ಸ್‌ಫರ್ಡ್‌ನಲ್ಲಿ W. Jones ಇವನ ಹುಟ್ಟುದಿನದ ಶತಮಾನೋತ್ಸವವನ್ನು ನಡೆಸಿದಾಗ ಆ ಉತ್ಸವ ಸಮಿತಿಯ ಅಧ್ಯಕ್ಷನು ತನ್ನ ಭಾಷಣದಲ್ಲಿ ಈ ಮೇಧಾವಿಯನ್ನು ಕುರಿತು ಹೀಗೆಂದು ಹೇಳಿದನು:

"It is amazing to learn all that he achieved in the course of a life of less than fifty years. He has set us all an example of assiduity in study and of enterprise and courage in launching out into new sphere of learning......"

೧೦. ಸರ್ ವಿಲಿಯಮ್ ಜೋನ್ಸ್—ಇವನ ದಿನಚರಿ :—

ಕ್ರಿ. ಶ. 1783 ರಿಂದ 1794 ರ ವರೆಗೆ ಆ ಹನ್ನೊಂದು ವರ್ಷಗಳ ಕಾಲ William Jones ಇವನು ಭಾರತೀಯ ಧರ್ಮ, ಶಾಸ್ತ್ರ, ಸಾಹಿತ್ಯ, ಚರಿತ್ರೆ ಇತ್ಯಾದಿಗಳ ಅನ್ವೇಷಣಾಕಾರ್ಯದಲ್ಲಿ ಕ್ರಾಂತಿಕಾರಕವಾದ ಕೆಲಸವನ್ನು ಮಾಡಿದನು.

ವೇದ, ಉಪನಿಷತ್ತು, ಪುರಾಣಾದಿಗಳನ್ನು ಸಂಪೂರ್ಣವಾಗಿ ತಿರುವಿ ಹಾಕಿದನು. 1786 ರಲ್ಲಿ ಅವನು ತನ್ನ ಸಂಸ್ಕೃತ ಭಾಷಾ ಅಭ್ಯಾಸವನ್ನು ಕುರಿತು ಹೀಗೆ ಹೇಳಿದನು:

"By rising before the sun, I allot an hour every day to Sanskrit, and charmed with knowing so beautiful a sister of Latin and Greek."

ಪುನಃ 1787 ರಲ್ಲಿ ತನ್ನ ಆಕಾಂಕ್ಷೆಯೇನಿದೆಯೆಂಬುದನ್ನು ಸೂಚಿಸುತ್ತಾ ಹೀಗೆ ಬರೆದನು:—

"It is my ambition to know India better than any other European ever know it..."

ತಾನು ಕಲ್ಕತ್ತಾದಲ್ಲಿ ತನ್ನ ದಿನಗಳನ್ನು ಹೇಗೆ ಕಳೆದನೆಂಬುದಾಗಿ ತನ್ನ ದಿನಚರಿಯನ್ನು ಈ ರೀತಿ ಹೇಳಿದ್ದಾನೆ:—

"ಪ್ರತಿ ನಿತ್ಯವೂ ಬೆಳಿಗ್ಗೆ ಐದು ಘಂಟೆಗೆ ಏಳುವುದು; ಕೂಡಲೇ ನಗರದ ಕೋಟೆಯ ಕಡೆ ಮೂರು ಮೈಲುಗಳ ದೂರ ನಡೆಯುವುದು; ಅನಂತರ ತಣ್ಣೀರಿನಲ್ಲಿ ಸ್ನಾನಮಾಡುವುದು; ಪ್ರಾತಃಕಾಲದ ಉಪಾಹಾರ ಇತ್ಯಾದಿಗಳಾಗುವಷ್ಟರಲ್ಲಿ ಏಳು ಘಂಟೆಯಾಗುವುದು.

"ಅಲ್ಲಿಂದ ನಂತರ ಒಂದು ಘಂಟೆ ಕಾಲ ದೇಶೀಯ ಪಂಡಿತರ ಸಮ್ಮುಖದಲ್ಲಿ ಸಂಸ್ಕೃತ ಸಾಹಿತ್ಯ ಗ್ರಂಥಗಳ ಪಠನೆ, ವಿಮರ್ಶೆ, ಚರ್ಚೆ ಇತ್ಯಾದಿ ನಡೆಸುವುದು; ಎಂಟು ಘಂಟೆಯಿಂದ ಇನ್ನೊಂದು ಘಂಟೆ ಕಾಲ ಅರಬೀ ಮತ್ತು ಪರ್ಷಿಯನ್ ಪಂಡಿತರೊಡನೆ ಅದೇ ರೀತಿ ಸಾಹಿತ್ಯಾವಲೋಕನ ಮತ್ತು ವಿಮರ್ಶೆ; ಇಷ್ಟರಲ್ಲಿ ಒಂಭತ್ತು ಘಂಟೆಗೆ ಮಹಮ್ಮದೀಯ ಮುನಿಷಿಗಳು ತಮಗೆ ಸಂಬಂಧಿಸಿದ ಪತ್ರವ್ಯವಹಾರಗಳ ಬಗ್ಗೆ ಮಾತುಕತೆ ನಡೆಸುವರು.

"ಹತ್ತು ಘಂಟೆಗೆ ನ್ಯಾಯಾಲಯದಿಂದ ವಕೀಲರು ಮತ್ತು ಗುಮಾಸ್ತರು ಆಯಾ ದಿನಕ್ಕೆ ಸಂಬಂಧಿಸಿದ ವಾದವಿವಾದಗಳೇನು ಎಂದು ತಿಳಿಸುವರು. ಅನಂತರ ನ್ಯಾಯಾಲಯದ ಉಪ್ಪರಿಗೆಯಲ್ಲಿ ಖಚೇರಿಗೆ ಹೋಗಿ ಐದು ಗಂಟೆಗಳ ಕಾಲ ಸರಕಾರೀ ಕೆಲಸದಲ್ಲಿ ನಿರತನಾಗುವುದು; ಮಧ್ಯಾಹ್ನ ಮೂರು ಘಂಟೆಯ ವೇಳೆಗೆ ಊಟ ಮಾಡುವುದು.

"ಆದರನಂತರ ಮಿತ್ರರೊಡನೆ ಸರಸಸಲ್ಲಾಪ; ಅಥವಾ ಓದುವುದು ಮತ್ತು ಬರೆಯುವುದು; ಸಾಯಂಕಾಲ ಆರು ಘಂಟೆಯ ಸಮಯಕ್ಕೆ ನೇಪಾಳೀ ಕುದುರೆಗಳಿಂದೆಳೆಯಲ್ಪಟ್ಟ ಗಾಡಿಯಲ್ಲಿ ತನ್ನ ಭವನಕ್ಕೆ ಹಿಂದಿರುಗುವುದು; ಅನಂತರ ತನ್ನ ಸಂಸಾರದೊಡಗೂಡಿ ಉದ್ಯಾನಗಳಲ್ಲಿ ಮತ್ತು ಗಂಗಾನದೀ ತೀರದಲ್ಲಿ ಒಂದು ಘಂಟೆ ಕಾಲ ತಿರುಗಾಡುವುದು.

"ರಜೇ ದಿನಗಳಲ್ಲಿ ಬೆಳಿಗ್ಗೆ ಹನ್ನೊಂದು ಘಂಟೆಯವರೆಗೂ ಸಂಸ್ಕೃತ ಸಾಹಿತ್ಯದ ಓದು ಬರಹಗಳಲ್ಲಿ ನಿರತನಾಗುವುದು; ಅನಂತರ ಒಂದು ಘಂಟೆ ಕಾಲ ಇಟಾಲಿಯನ್, ಪರ್ಷಿಯನ್ ಇತ್ಯಾದಿ ಗ್ರಂಥಗಳ ವ್ಯಾಸಂಗ ನಡೆಸುವುದು; ಸಾಯಂಕಾಲದ

ವೇಳೆಗೆ ಸುಮಾರು ಮೈಲುಗಳಷ್ಟು ದೂರ ಕಾಲ್ನಡಿಗೆಯಿಂದಲೇ ಸಂಚರಿಸುವುದು."'

**೧೧. ಸರ್ ಜೋನ್ಸ್—ಇವನ ಅಸಾಧಾರಣ ಧ್ಯೇಯ ಸಾಹಸಗಳು :—**

ಇಂಥಾ ಆದರ್ಶ ದಿನಚರಿಯಿಂದ ತನ್ನ ಜೀವಮಾನವನ್ನು ಕಳೆದ ಈ ಪ್ರಸಿದ್ಧ ವೇದಾಂತಿಯು ತನ್ನ ಅನಂತರದ ಐರೋಪ್ಯಾ ನ್ಯಾಯಾಧೀಶರಿಗೆ ಉತ್ತಮ ಮೇಲ್ಪಂಕ್ತಿಯನ್ನು ಹಾಕಿದನು. William Jones ಇವನನ್ನು ಸ್ವದೇಶಕ್ಕೆ ಹಿಂದಿರುಗಿ House of Commons ಸಭೆಯ ಸದಸ್ಯನಾಗಿ ಆ ಮೂಲಕ ದೇಶಕ್ಕೆ ತನ್ನ ಅಮೂಲ್ಯ ಸೇವೆಯನ್ನು ಸಲ್ಲಿಸಬೇಕೆಂದು ಅವನ ಮಿತ್ರರು ಆಗಿಂದಾಗ್ಗ ಅವನಿಗೆ ಬರೆಯುತ್ತಿದ್ದರು. ಆದರೆ ಆ ಕೋರಿಕೆಗಳನ್ನೆಲ್ಲಾ ಅವನು ನಿರಾಕರಿಸಿದನು. ಭಾರತದ ನ್ಯಾಯಶಾಸ್ತ್ರ ಮತ್ತು ಧರ್ಮಶಾಸ್ತ್ರಗಳ ಅನ್ವೇಷಣೆಯಲ್ಲಿಯೇ ಅವನು ತೃಪ್ತನಾಗಿ ತನ್ನ ಕಾಲವನ್ನು ಕಳೆದನು. ಕ್ರಿ. ಶ. 1793 ರಲ್ಲಿ ಅವನು ಬರೆದ ಒಂದು ಪತ್ರದಲ್ಲಿ ಹೀಗೆ ಹೇಳಿದನು :—

'.......You will judge,therefore, whether I wish to change this calm course of life for the House of Commons, from which I should return three or four nights in seven with despair and headache."

ಇನ್ನೊಂದು ಪತ್ರದಲ್ಲಿ ಪುನಃ ಈ ರೀತಿ ಬರೆದನು :—

"As to tne House of Commons, as it is now managed, I know of no motive on earth that could induce me to sit in it ....."

ಇಂಥಾ ಮನೋಧರ್ಮದಿಂದ ಬೆಳಗಿದ ಈ ವೇದಾಂತಿಯು ಭಾರತೀಯ ಉಡುಗೆಯಲ್ಲಿ ಭಾರತೀಯ ಸಾಹಿತ್ಯ ಮತ್ತು ಧರ್ಮಶಾಸ್ತ್ರಗಳ ಪಾರಾಯಣದಲ್ಲಿ ಮತ್ತು ಬರವಣಿಗೆಯಲ್ಲಿಯೇ ನಿರತನಾದನು. "Asiatic Jones" ಎಂದು ಪ್ರಖ್ಯಾತನಾದ ಈ ರಸಋಷಿಯು ತನ್ನ "Researches" ಎಂಬ folio ಪುಟಗಳ ಉತ್ತಮ ಸಾಹಿತ್ಯ ಪತ್ರಿಕೆಯ ಮೂಲಕ ಆಧುನಿಕ ಭಾರತದ ಪರಿಚಯವನ್ನು ಲೋಕಕ್ಕೆ ಮಾಡಿಕೊಟ್ಟನು. ತಾನು ಸ್ಥಾಪಿಸಿದ ಆ Royal Asiatic Society ಇದು ಅವನ ಜೀವಾಳವಾಗಿತ್ತಲ್ಲದೆ ಅದರ ಪ್ರಗತಿಗಾಗಿ ತನ್ನ ಜೀವನವನ್ನು ಸವೆದನು. ವೇದ, ಧಮ್ಮಪದ, ಬೈಬಲ್ ಮತ್ತು ಖುರಾನ್ ಧರ್ಮಗ್ರಂಥಗಳ ಮೇಲೆ ವ್ಯಾಖ್ಯಾನ ಟಿಪ್ಪಣಿಗಳನ್ನು ಬರೆದನು. ಅವನ ಬರವಣಿಗೆಯೆಲ್ಲಾ ಒಟ್ಟಾಗಿ ಸುಮಾರು 8000 folio ಪುಟಗಳಿಗೂ ಮೀರಿವೆ. ಅವನ ನ್ಯಾಯಶಾಸ್ತ್ರ ಗ್ರಂಥಗಳೂ ಇತಿಹಾಸ ಗ್ರಂಥಗಳೂ ಸುಮಾರು 10,000 folio ಪುಟಗಳಷ್ಟು ಆಗಿವೆ. ಆ ಬರೆವಣಿಗೆಯಲ್ಲಾ ಹಲವು ಗ್ರಂಥಕಾಂಡಗಳಾಗಿ ವಿಭಾಗಿಸಲ್ಪಟ್ಟಿವೆ :—

'The best monument that can be erected to a man of literary talents, is a good edition of his works."

ಎಂಬುದೇ ಅವನ ಆಶಯವಾಗಿತ್ತು. ಇಂದು ಇವನ ಹಲವಾರು ಗ್ರಂಥಗಳು ಭಾರತದ ಹಾಗೂ ಇತರ ರಾಷ್ಟ್ರಗಳ ಗ್ರಂಥಭಂಡಾರಗಳಿಗೆ ಅಲಂಕಾರ ಪ್ರಾಯವಾಗಿ ಮೆರೆ

ಯುತ್ತಿವೆ. ಅಂಥಾ ಒಂದು ಗ್ರಂಥದ ಮೊದಲ ಪುಟದಲ್ಲಿ ಅವನ ಮಿತ್ರರು ಅರಬೀ ಭಾಷೆಯಿಂದ ಈ ಕೆಳಗಿನ ಒಂದು ನುಡಿ ಮುತ್ತನ್ನು ಎತ್ತಿಕೊಟ್ಟುದು ಅವನ ಸಾತ್ವಿಕ ಜೀವನದ ವಿಶಿಷ್ಟತೆಯನ್ನು ಪ್ರತಿಪಾದಿಸುತ್ತದೆ:—

"He was a pearl too pure on earth to dwell,
And waste his splendour in this mortal shell."

Sir W. Jones ಇವನ ಸಾಹಸ ಮತ್ತು ಪ್ರತಿಭೆಯನ್ನು ಕಂಡು ಬೆರಗಾಗಿ ಒರ್ವ ಅನಾಮಧೇಯನು ಅವನ ವಿಷಯವಾಗಿ ಒಂದು ಕವಿತೆಯನ್ನು ಅವನು ಕಾಲವಾದ ನಂತರ ಬರೆಯುತ್ತಾ, ಈ ರೀತಿ ಹೇಳಿದನು:—

"He too, whom Indus and the Ganges mourn
The glory of their banks from Isis torn,
In learning strength is fled, in judgment's prime,
In science temperate, various aud sublime;
To him familiar every legal doom
The courts of Athens, or the halls of Rome,
Or Hindoo Vedas taught; for him the Muse
Distilled from every flower, Hyblaean dews;

## ೧೨. ಭಾರತೀಯ ಮತ್ತು ಐರೋಪ್ಯ ವಿಧ್ವಾಂಸರು ಬಿಕ್ಕಿ ಬಿಕ್ಕಿ ಅತ್ತರು:—

ತನ್ನ ದೈಹಿಕ ಶಕ್ತಿಯನ್ನು ವಿಪರಿ ಶ್ರಮಿಸಿದ ಕಾರಣದಿಂದ Sir William Jones ಇವನ ಆರೋಗ್ಯವು 1790ರ ಮೊದಲ್ಗೊಂಡು ಇಳಿಮುಖವಾಗಿತ್ತು. ಇವನ ಪತ್ನಿ Anna Marie ಇವಳೂ ಅಸ್ವಸ್ಥಳಾಗಿದ್ದಳು. ಸಸ್ಯಶಾಸ್ತ್ರದಲ್ಲಿ ನಿಸ್ಸೀಮನಾಗಿದ್ದ ಈ ಮಹಾಪಂಡಿತನು ನಿತ್ಯವೂ ತಾನಾಗಿಯೇ ನಿರ್ಮಿಸಿದ ತನ್ನ ಚೆಲೋ ಉದ್ಯಾನದಲ್ಲಿ, ಹುಗ್ಲೀ ನದೀ ತೀರದಲ್ಲಿ ತನ್ನ ಕಡೇ ದಿನಗಳ ಹೆಚ್ಚು ಸಮಯವನ್ನು ಕಳೆಯುತ್ತಿದ್ದನು. ಹೇಗೂ ಕ್ರಿ. ಶ. 1794ನೇ ವರ್ಷದ ಏಪ್ರಿಲ್ 27 ರಲ್ಲಿ ಅವನು ಕೋಣೆಯಲ್ಲಿ ಪೂರ್ವಕಾಲದ ಋಷಿಗಳಂತೆ ಭಾರತೀಯ ಉಡುಪಿನಲ್ಲಿ ಭಾರತೀಯ ರೀತಿಯಲ್ಲಿ ಯೋಗಾಸಕ್ತನಾಗಿ ಪ್ರಾರ್ಥನೆಯಲ್ಲಿ ನಿರತನಾಗಿದ್ದಾಗಲೇ ಪ್ರಾಣವನ್ನು ತ್ಯಜಿಸಿದನು. ದೈವೇಚ್ಛೆಗೆ ಉಪಾಯವಿಲ್ಲವೆಂಬಂತೆ ಕೇವಲ ತನ್ನ 48ನೇ ವರ್ಷದೊಳಗಾಗಿಯೇ ಈ ಆಧುನಿಕ ಋಷಿಯು ಕಾಲವಾದನು.

Sir Jones ಇವನು ಮೃತನಾದ ವಾರ್ತೆಯು ಕ್ಷಣಮಾತ್ರದಲ್ಲಿಯೇ ದೇಶವೆಲ್ಲಾ ಹಬ್ಬಿತು. ವಿದೇಶಗಳಿಗೂ ನೂರಾರು ತಂತಿ ವರ್ತಮಾನಗಳ ಮೂಲಕ ಒಡನೆಯೇ ತಿಳಿಸಲಾದುವು. ಕಲ್ಕತ್ತಾ ನಗರದ ಜನರು ಸಹಸ್ರಗಟ್ಲೆಯಾಗಿ ಅವನ ಶವಸಂಸ್ಕಾರಕ್ಕೆ ನೆರೆದರು. ಕುಂಪೆನೀ ಸರಕಾರದ ಧ್ವಜವು ದುಃಖಸೂಚಕವಾಗಿ ಅರ್ಧಕ್ಕಿಳಿಸಲ್ಪಟ್ಟಿತು. ನೂರಾರು ಭಾರತೀಯ ಮತ್ತು ಐರೋಪ್ಯಾ ವಿದ್ವಾಂಸರೂ ಆ ಸಮಯದಲ್ಲಿ ಬಿಕ್ಕಿ ಬಿಕ್ಕಿ ಅತ್ತರು. ಸರಕಾರವು ಫೋರ್ಟ್ ವಿಲಿಯಮ್ ಗೋಡೆಗಳ ಮೇಲಿಂದ ದುಃಖಸೂಚಕವಾಗಿ ತುಫಾಕೀ ಗುಂಡುಗಳ ಮಳೆಗರೆದರು.

Sir Jones ಇವನನಂತರ ಇನ್ನೂ ನೂರಾರು ಪಾಶ್ಚಾತ್ಯ ವಿದ್ವಾಂಸರು ನಮ್ಮ ಪುರಾತನ ಸಾಹಿತ್ಯ ಸಂಶೋಧನೆಗಳ ಬಗ್ಗ ದುಡಿದರಾದರೂ ಇವನಂಥಾ ಒರ್ವ ನಿಷ್ಠಾವಂತ ಹಾಗೂ ಪ್ರತಿಭಾಶಾಲಿ ವೇದಾಂತಿಯು ಇನ್ನೊಬ್ಬನಿದ್ದಿಲ್ಲ. ಹಲವು ಕ್ಷೇತ್ರಗಳಲ್ಲಿ ಅಪಾರವಾಗಿ ದುಡಿದ ಈ ಕರ್ಮಯೋಗಿಯು ಪ್ರಾರಂಭಿಸಿದ ಕೆಲಸವೆಲ್ಲಾ ವ್ಯರ್ಥವಾಗಲಿಲ್ಲವೆಂಬಂತೆ ಇತರರು ಇನ್ನೂ ಶ್ರದ್ಧೆಯಿಂದ ನಮ್ಮ ಸಾಹಿತ್ಯ ಸಂಶೋಧನೆಗಾಗಿ ಶ್ರಮಿಸಿದರು. ಈ ಶ್ರೇಷ್ಠ ಮಹನೀಯನ ವ್ಯಕ್ತಿತ್ವವನ್ನು ಕುರಿತು ಅವನ ಸಮಾಧಿಕಲ್ಲಿನಲ್ಲಿ ಈ ರೀತಿ ಬರೆಯಲ್ಪಟ್ಟಿದೆ :—

" Here lies deposited the mortal part of a man, who feared God, but not death ; and maintained independence, but sought not riches ; who thought none below him but the base and unjust, none above him, but the wise and virtuous ; who loved his parents, kindred, friends, and country with an ardour which was the chief source of all his pleasure and all his pain... "

Sir Willam Jones ಇವನ ಮರಣವಾರ್ತೆಯನ್ನು ಯೂರೋಪಿನ ನೂರಾರು ಪತ್ರಿಕೆಗಳು ತುಂಬಾ ಶೋಕಪೂರ್ಣವಾಗಿ ಬರೆದುವು. ಕಲ್ಕತ್ತೆಯಲ್ಲಿ ಆಗ ಇದ್ದ William Hicky ಇವನು ಹೀಗೆ ಬರೆದನು :—

" The death of this enlightened and very learned man was properly felt to be a public calamity. The event was equally lamented by the natives as by Europeans, for all felt and acknowledged his extraordinary talents and his unblemished integrity as a judge."

೧೩. ಸರ್ ಜೋನ್ಸ್—ಇವನಿಗೆ ತಕ್ಕುದಾದ ಭವ್ಯ ಸ್ಮಾರಕಗಳು:—

Sir William Jones ಇವನು ಒರ್ವ ತೇಜಸ್ವಿ ಹಾಗೂ ಸ್ಫೂರ್ತಿದಾಯಕವಾದ ಶ್ರೇಷ್ಠ ವಿದ್ವಾಂಸನಾಗಿದ್ದನು. ಇವನು ಗತಿಸಿದ ಕೂಡಲೇ ನೂರಾರು ಪಾಶ್ಚಾತ್ಯ ಕವಿಗಳು ಇವನ ವಿಷಯವಾಗಿ ಕವಿತೆಗಳನ್ನು ರಚಿಸಿ ತಮ್ಮ ದುಃಖಾಶ್ರುಗಳನ್ನು ಹರಿಸಿದರು. ಬರೇ ತನ್ನ 47½ ವರ್ಷ ಪ್ರಾಯದಲ್ಲಿ ಗತಿಸಿದ ಈ ತಾತ್ವಿಕನು Warren Hestings, Lord Cornwallis, Isaac Newton, Samuel Johnson, Edmund Burke, Edward Gibbon ಮೊದಲಾದವರಂಥಾ ಶ್ರೇಷ್ಠ ವ್ಯಕ್ತಿಗಳ ಮಿತ್ರನಾಗಿ ಅವರೆಲ್ಲರ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಅವನು ಸಾಯುವುದಕ್ಕಿಂತ ಬರೇ ಎರಡು ದಿನಕ್ಕೆ ಮುಂಚೆ Royal Asiatic Society ಇದರ ಆಶ್ರಯದಲ್ಲಿ " Philosophy of the Asiatics " ಎಂಬ ವಿಚಾರವಾಗಿ ತನ್ನ ಕಡೇ ಉಪನ್ಯಾಸವನ್ನು ಕೊಟ್ಟನು. William Hayley ಇವನು Sir Jones ಇವನ ವಿಷಯವಾಗಿ. ಬರೆದ ಕವಿತೆಯ ನಾಲ್ಕು ಪಂಕ್ತಿಗಳು ಹೀಗಿವೆ :—

"Far off she finds her darling Jones inurned
India's mild sages, dropping many a tear
With admiration into anguish turn'd,
Mourn that enlighten'd Judge they joy'd to hear."

Thomas Twining ಇವನು Sir Jones ಮೃತನಾದಾಗ ಕಲ್ಕತ್ತಾ ನಗರವು ಅದೆಷ್ಟು ಶೋಕಭರಿತವಾಗಿತ್ತು ಎಂದು ವರ್ಣಿಸುತ್ತಾ ಹೀಗನ್ನುತ್ತಾನೆ:—

"Sir W. Jones died at Calcutta after a short illness. His death was deeply lamented by all classes, European and native, and was, indeed, a public misfortune, interrupting literary labours for it was scarcely possible to find another individual uniting similar qualifications—such as knowledge of Asiatic languages, so refined a judgment, and such indefatigable zeal."

Prof. A. G. Arberry ಇವನು "British Orientalists" ಎಂಬ ವಿಚಾರದಲ್ಲಿ ಬರೆಯುತ್ತಾ Sir Jones ಇವನಿಗೆ ಪಾಶ್ಚಾತ್ಯ ಭಾರತೀಯ ವಿದ್ವಾಂಸರಲ್ಲಿ ಅಗ್ರಸ್ಥಾನವನ್ನು ಕೊಡುತ್ತಾನೆ. Sir Jones ಇವನ ಗುಣಗಾನವನ್ನು ಮಾಡುವ ಅವನ ಈ ಹೇಳಿಕೆಯು ಅಕ್ಷರಶಃ ನಿಜವಾಗಿದೆ:—

"........Jones died in 1794, a man still in the prime of his tireless energies and matchless intellect Like many other great Orientalists, he was a competent poet as well as a scholar...He wrote French excellently; his researches included observations on law, education, astronomy, medicine, and botany, and he translated from Italian, Greak, Latin, Arabic, Persian, Turkish and Sanskrit. But it is as the "Uuiversal linguist"—'par Excellence' that William Jones lives in the annals of fame; he was truely the father of British Orientalism."

Sir Jones ಇವನಿಗೆ ಇರಿಸಲ್ಪಟ್ಟ ಸ್ಮಾರಕದಂತೆ ಜಗತ್ತಿನ ಬೇರಾವ ವಿದ್ವಾಂಸನಿಗೂ ಇರಿಸಲ್ಪಡಲಿಲ್ಲವೆಂದು ಹೇಳಬಹುದು. ಕಲ್ಕತ್ತೆಯ ಪಾರ್ಕ್ ಬೀದಿ ಸ್ಮಶಾನದಲ್ಲಿ ಆವನ ಸಮಾಧಿ ಕಂಬವು ಆ ಮಹಾ ವ್ಯಕ್ತಿಯನ್ನು ನಿತ್ಯವೂ ಸ್ಮರಣೆಗೆ ತರುವಂಥಾದಾಗಿದೆ. ಅವನ ವಿದ್ಯಾಪೀಠವಾದ ಓಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ Sir James ಇವನು ಮೂರು ಜನ ಬ್ರಾಹ್ಮಣ ಪಂಡಿತರೊಡನೆ ವ್ಯಾಸಂಗ ನಡೆಸುತ್ತಿರುವ ಭವ್ಯ ಕಲ್ಲು ವಿಗ್ರಹವು ಆ ಪರಿಶುದ್ಧಾತ್ಮನ ಅಪಾರ ಸೇವೆಗೆ ಒಪ್ಪಿದಂಥಾ ಪ್ರಶಂಸೆಯಾಗಿದೆ. John Gawsworth ಇವನು ಓಕ್ಸ್‌ಫರ್ಡ್‌ನ ಆ ಭವ್ಯ ಬೆಂಗಲ್ಲು ವಿಗ್ರಹದಲ್ಲಿ Sir Jones ಇವನ ಸ್ಮಾರಕವಾಗಿ ತನ್ನ ಕವಿತೆಯನ್ನು ಈ ರೀತಿ ಹರಿಯಿಸಿದ್ದಾನೆ:—

"How far lies Harrow Hill from Hindustan?
Viewing the Hooghley, I reflect a thought

I sense you shared, Bengal was not our plan
Yet it provides still solaces unsought......"

ಇಷ್ಟೇ ಅಲ್ಲ, ಲಂಡನ್ನಿನ ಸೇಂಟ್ ಪಾಲ್ ಇಗರ್ಜಿಯೊಳಗೂ Sir James ಇವನಿಗೆ ಭವ್ಯ ಸ್ಮಾರಕವೊಂದು ಇರಿಸಲ್ಪಟ್ಟಿದೆ. ಮನುಸ್ಮೃತಿಯ ಗ್ರಂಥವನ್ನು ಕೈಯಲ್ಲಿ ಹಿಡಿದುಕೊಂಡು ದೀರ್ಘಾಲೋಚನೆಯಲ್ಲಿ ಮಗ್ನನಾಗಿರುವ ಅವನ ಬಿಳಿ ಶಿಲಾ ವಿಗ್ರಹವು ಸಾರಸ್ವತ ಲೋಕವು ಅವನಿಗೆ ಒಪ್ಪಿಸಿದ ಕಾಣಿಕೆಯಾಗಿ ಇಂದಿಗೂ ಮೆರೆಯುತ್ತಿದೆ. ಅದರ ಕೆಳಗೆ ಈ ರೀತಿ ಕೆತ್ತಿ ಬರೆಯಲ್ಪಟ್ಟಿದೆ :—

"To the memory of Sir William Jones, Knight, one of the Judges of the Supreme Court of Judicature; This statue was erected by the hon. East India Company in testimony of their grateful sense of his public service—their admiration of his genius and learning and their respeet for his character and virtues; He died in Bengal– the 27th April 1794; Aged 47."

೧೪. ಸರ್ ಹೆನ್ರಿಕೊಲ್‌ಬ್ರೂಕ್*—ಇವನು ಹಿಂದೂಸ್ಥಾನದಲ್ಲಿ :—

Sir William Jones ಇವನನಂತರ ೧೮ನೇ ಶತಮಾನದ ಅಂತ್ಯದಲ್ಲಿ ಇದ್ದ ಮತ್ತೊರ್ವ ಪ್ರಸಿದ್ಧ ವಿದ್ವಾಂಸನು Henry Thomas Colebrooke ಇವನು, ಕ್ರಿ. ಶ. 1765 ರಲ್ಲಿ ಲಂಡನ್‌ನಲ್ಲಿ ಜನಿಸಿದ ಇವನು ಯಾವ ಶಾಲೆಗೂ ಹೋಗದೆ ತನ್ನ ಮನೆಯಲ್ಲಿಯೇ ಸ್ವಂತವಾಗಿ ಗುರುಗಳ ಮೂಲಕ ಗಣಿತ ಮತ್ತು ವಿಜ್ಞಾನ ಪಾಠಗಳನ್ನು ಕಲಿತು ಅವುಗಳೊಡನೆಯೇ ಇಂಗ್ಲಿಷ್, ಫ್ರೆಂಚ್, ಜರ್ಮನ್, ಲ್ಯಾಟಿನ್ ಇತ್ಯಾದಿ ಭಾಷೆಗಳನ್ನೂ ಅಭ್ಯಸಿಸಿ ಮುಂಬರುವ ಭವ್ಯ ಭವಿಷ್ಯಕ್ಕೆ ತಕ್ಕ ತಳಹದಿಯನ್ನು ಹಾಕಿದನು.

William Jones ಇವನು 1783 ರಲ್ಲಿ ಒರ್ವ ಉನ್ನತ ನ್ಯಾಯಾಧೀಶನಾಗಿ ಕಲ್ಕತ್ತಾದಲ್ಲಿ ಬಂದಿಳಿದಾಗ ಕೇವಲ 18 ವರ್ಷ ಪ್ರಾಯದ ಹುಡುಗನಾದ H. T. Colebrooke ಇವನು ಅದೇ ವರ್ಷ ಮತ್ತೊಂದು ಹಡಗಿನಲ್ಲಿ ಬಂದು ಮದ್ರಾಸು ಬಂದರದಲ್ಲಿ ಇಳಿದನು. ಆ ಕಾಲದಲ್ಲಿ ಈ ದೇಶವು ಐಶ್ವರ್ಯ ಸಂಪನ್ನತೆಯಿಂದ ಕೂಡಿದ ಒಂದು ಚಿನ್ನದ ಗನಿಯೆಂಬ ಭಾವನೆಯು ಪಾಶ್ಚಾತ್ಯರಲ್ಲಿ ಇದ್ದುದರಿಂದ ಹಲವರು ಇಲ್ಲಿಗೆ ಓಡಿಬಂದರು. ಆದರೆ Colebrooke ಇವನಂಥಾ ಹುಡುಗನು ಜ್ಞಾನಾನ್ವೇಷಣೆಯ ಸಲುವಾಗಿ ಇಲ್ಲಿಗೆ ಬಂದನು. ಹಾಗೆ ಬಂದು ಕುಂಪೆನೀ ಸರಕಾರದ ಖಚೇರಿಯಲ್ಲಿ ಒಂದು ಚಿಕ್ಕ ನೌಕರಿಯನ್ನು ಪಡೆದನು. ಆದರೆ ಅಂಥಾ ಚತುರನಾದ ಹುಡುಗನಿಗೆ ಯೋಗ್ಯವಾದ ಒಂದು ಹುದ್ದೆಯು ದೊರಕದಿದ್ದಾಗ ಅವನು 1786 ರಲ್ಲಿ ತನ್ನ ತಾಯಿಗೆ ಬರೆದ ಪತ್ರದಲ್ಲಿ ಹೀಗಂದನು :—

* ಇವನ ಪ್ರತಿಮೆಯ ಚಿತ್ರವನ್ನು ಬೇರೊಂದೆಡೆ ಕೊಡಲಾಗಿದೆ.

"The truth is, India is no longer a mine of gold......every one is disgusted......"
ಆದರೆ Colebrooke ಇವನು ಹಣವನ್ನು ಗಳಿಸುವ ವರ್ಗಕ್ಕೆ ಸೇರಿದ್ದವನಾಗಿರಲಿಲ್ಲ. ಉತ್ತಮವಾದ ಒಂದು ಹುದ್ದೆಯನ್ನು ಪಡೆದು ತನ್ನ ಸಾಹಿತ್ಯ ವ್ಯಾಸಂಗಕ್ಕೆ ಅನುಕೂಲತೆಯನ್ನು ಹೊಂದಬೇಕೆಂದು ಅವನ ಅಭಿಲಾಷೆಯಾಗಿತ್ತು. Warren Hastings ಇವನು 1785 ರವರೆಗೆ ಈ ದೇಶದಲ್ಲಿ ಇದ್ದ ವರೆಗೂ ಈ ಯುವಕ Colebrooke ಇವನನ್ನು ತುಂಬಾ ಪ್ರೋತ್ಸಾಹಿಸಿದನು. ಅಲ್ಲಿಂದನಂತರ Lord Corn Wallis ಇವನ ಜನಪ್ರಿಯವಾದ ರಾಜಕೀಯ ಸುಧಾರಣೆಗಳು Colebrooke ಇವನಿಗೆ ಮೆಚ್ಚಿಗೆಯಾಯಿತಲ್ಲದೆ ಅವನ ಆಶ್ರಯದಿಂದ ತನ್ನ ಹುದ್ದೆಯಲ್ಲೂ ಸಾಹಿತ್ಯ ವ್ಯಾಸಂಗದಲ್ಲೂ ಮುಂದುವರಿದನು. ಆಗ ಅವನ ಉದ್ದೇಶವೇನಿತ್ತೆಂಬುದಾಗಿ ಮೇಲಿನ ಪತ್ರದಲ್ಲಿ ಹೀಗೆ ಹೇಳಿದ್ದನು :—

"I have thoughts of setting myself down, for a few years in a pleasant and solitary spot, with a little property, the improvement of which might employ my leisure... ..."
ಹೀಗಿದ್ದರೂ H. T. Colebrooke ಇವನು ನ್ಯಾಯಶಾಸ್ತ್ರದಲ್ಲಿ ಪಾರಂಗತನೆನಿಸಿದ್ದರಿಂದ 1795 ರಿಂದ ಮಿರ್ಜಾಪುರದ ನ್ಯಾಯಾಲಯದಲ್ಲಿ ನ್ಯಾಯಾಧೀಶನಾಗಿ ನೇಮಕಹೊಂದಿದನು. 1801 ರಲ್ಲಿ ಕಲ್ಕತ್ತೆಯ ಪ್ರಧಾನ ನ್ಯಾಯಸ್ಥಾನಕ್ಕೆ ವರ್ಗಾಯಿಸಲ್ಪಟ್ಟು 1805 ರಲ್ಲಿ ಭಾರತದ ಪ್ರಧಾನ ನ್ಯಾಯಾಧೀಶನಾಗಿಯೂ ನೇಮಿತನಾದನು. ಅದರೊಡನೆಯೇ ಫೋರ್ಟ್ ವಿಲಿಯಮ್ ವಿದ್ಯಾಪೀಠದಲ್ಲಿ ಸಂಸ್ಕೃತ ಮತ್ತು ಹಿಂದೂ ನ್ಯಾಯಶಾಸ್ತ್ರಗಳ ಪ್ರಾಧ್ಯಾಪಕನಾಗಿಯೂ ಕುಂಪೆನೀ ಸರಕಾರದ ಆಡಳಿತ ಮಂಡಳಿಯ ಸದಸ್ಯನಾಗಿಯೂ ಇದ್ದನು. ಕ್ರಿ. ಶ. 1807 ರಿಂದ 1814 ರವರೆಗೂ Royal Asiatic Society ಇದರ ಅಧ್ಯಕ್ಷನಾಗಿದ್ದನು.

**೧೫. ಭಾರತ ಶಾಸ್ತ್ರೀಯ ಸಾಹಿತ್ಯನಭದಲ್ಲಿ ಇನ್ನೊಂದು ತೇಜಸ್ವೀ ನಕ್ಷತ್ರ :—**

ತನ್ನ ನಲ್ವತ್ತು ವರ್ಷ ಪ್ರಾಯದೊಳಗಾಗಿ ಭಾರತ ಸರಕಾರದಲ್ಲಿ ಅತೀ ಉನ್ನತ ವರ್ಗದ ಅಧಿಕಾರ ಸ್ಥಾನಕ್ಕೇರಿ ಬಹು ಪ್ರತಿಭಾವಂತನೆಂದು ಖ್ಯಾತಿಯನ್ನು ಹೊಂದಿದ Sir Henry Thomas Colebrooke ಇವನು ಅಷ್ಟೇ ಶ್ರೇಷ್ಠ ವರ್ಗದ ಸಾಹಿತಿ ಮತ್ತು ವೇದಾಂತಿಯಾಗಿ ವಿರಾಜಿಸಿದನು. ಕ್ರಿ. ಶ. 1794 ರಿಂದಲೇ Royal Asiatic Society ಇದರ ಉತ್ಸಾಹೀ ಸದಸ್ಯನಾಗಿದ್ದು Researches ಪತ್ರಿಕೆಯಲ್ಲಿ ತನ್ನ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದನು. ತನ್ನ ಮೂವತ್ತು ವರ್ಷ ಪ್ರಾಯದೊಳಗಾಗಿಯೇ ಭಾರತೀಯ ತತ್ವಶಾಸ್ತ್ರ, ನ್ಯಾಯಶಾಸ್ತ್ರ, ಗಣಿತಶಾಸ್ತ್ರ, ಜೋತಿಷ್ಯಶಾಸ್ತ್ರ, ಖಗೋಳಶಾಸ್ತ್ರ, ವ್ಯಾಕರಣ, ಮೀಮಾಂಸೆ ಮೊದಲಾದುವನ್ನು ಪಠಿಸಿ ಬಹು ದೊಡ್ಡ ವಿದ್ವಾಂಸನೆನಿಸಿದನು. ಆ ಹಲವು ಶಾಸ್ತ್ರೀಯ ಗ್ರಂಥಗಳನ್ನು ಇಂಗ್ಲೀಷ್ ಭಾಷೆಗಿಳಿಸಿದನಲ್ಲದೆ ಅವೆಲ್ಲಾ ಕೂಡಲೇ ಜರ್ಮನ್, ಪರ್ಷಿಯನ್ ಇತ್ಯಾದಿ

ಭಾಷೆಗಳಿಗೂ ಅನುವಾದಿಸಲ್ಪಟ್ಟುವು. ತನ್ನ ಹಲವು ಗ್ರಂಥಗಳು ಮತ್ತು ಉಪನ್ಯಾಸಗಳ ಮೂಲಕ ಪ್ರಾಚೀನ ಭಾರತವನ್ನು ಆಧುನಿಕ ಜಗತ್ತಿನೆದುರಿಗೆ ಬಿಚ್ಚಿಟ್ಟನು.

H. T. Colebrooke ಇವನು ಈ ದೇಶದಲ್ಲಿ ಇದ್ದ ಅವಧಿಯಲ್ಲಿ ಬಹು ವ್ಯಾಪಕವಾದ ವ್ಯಾಸಂಗ ಕ್ಷೇತ್ರವನ್ನು ನಿರ್ಮಿಸಿ ಅದರೊಳಗೆ ಬಹು ಶ್ರದ್ಧೆಯಿಂದ ದುಡಿದನೆಂಬುದಕ್ಕೆ ಸಾಕ್ಷ್ಯವಾಗಿ ಅವನ ಗ್ರಂಥಗಳು ಅಸಂಖ್ಯಾತವಾಗಿ ಇವೆ. ತನ್ನ ಈ ವ್ಯಾಸಂಗಕ್ಕೆ Sir John Shore ಇವನು ಇತ್ತ ಪ್ರೋತ್ಸಾಹವನ್ನು ಕುರಿತು ಅವನು ಹೀಗೆ ಹೇಳಿದ್ದಾನೆ :—

"Selected for this...... by Sir John Shore, whose attention extended to promote the happiness of the native inhabitants of the Provinces which he governs, and to encourage the labours of the literary society over which he presides, is no less conspicuous than his successful administration of the British interests in India. I have cheerfully devoted my utmost endeavours to deserve the choice, by which I was honoured........"

ಕ್ರಿ. ಶ. 1798–1801ರ ಕಾಲದಲ್ಲಿ Colebrooke ಇವನು ನಾಗಪುರದಲ್ಲಿ ರಾಜಕೀಯ ಕಾರ್ಯಾರ್ಥವಾಗಿ ಹೋಗಿದ್ದಾಗ ಮಹ್ಮದೀಯ ಮತ್ತು ಹಿಂದೂ ಧರ್ಮಗುರುಗಳ ಮತ್ತು ಧರ್ಮಕ್ಷೇತ್ರಗಳ ವಿಷಯವಾಗಿ ಉತ್ತಮವಾದ ಒಂದು ಗ್ರಂಥವನ್ನು ಬರೆದನು. 1801 ರಿಂದ 1807 ರವರೆಗೆ ಭಾರತ ನ್ಯಾಯಾಲಯದಲ್ಲಿ ನ್ಯಾಯಾಧೀಶನಾಗಿ ಮತ್ತು ಕಲ್ಕತ್ತಾದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿ ಇದ್ದಾಗ ಅವನ A Grammar of Sanskrit Language ಇದನ್ನು ಬರೆದನು. ಇದರ ಮೊದಲನೇ ಕಾಂಡವು ಶೀಘ್ರದಲ್ಲಿಯೆ ಮುದ್ರಣವಾಗಿ ಪ್ರಕಟವಾಯಿತು. Sanskrit and Prakrit Prosody ಎಂಬ ಛಂದೋಶಾಸ್ತ್ರವನ್ನು ಕುರಿತಾದ ಅವನ ಅದ್ಭುತ ಗ್ರಂಥವು ಹತ್ತು ಕಾಂಡಗಳಾಗಿ ಪ್ರಕಟವಾಯಿತು. ಇದರಲ್ಲಿ ಪ್ರಾಚೀನ ಸಂಸ್ಕೃತ ಕಾವ್ಯಗಳನ್ನು ಕುರಿತು ಅವನು ಹೀಗೆ ಹೇಳಿದ್ದಾನೆ :—

"The profane poetry of the Hindus affords better specimens of style and taste, than are to be found in the poems which are concidered by them as sacred ; such are the Puranas, the Mahabharata and the Ramayana... ..."

H. T. Colebrooke ಇವನು 'ಅಮರಕೋಶ'ವನ್ನು ಭಾಷಾಂತರಿಸಿದ್ದು 1808 ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು ; ಕೂಡಲೇ ಅದು ಹಲವು ಬಾರಿ ಪುನರ್ಮುದ್ರಣವಾಯಿತು. ಇದರ ನಂತರ ಅವನು ನಾಗಪುರ, ಕಾಶಿ, ಮೊದಲಾದ ಸ್ಥಳಗಳಲ್ಲಿ ಸಂಚರಿಸಿ ಜೈನ ಮತ್ತು ಹಿಂದೂ ಧರ್ಮಗ್ರಂಥಗಳ ವಿಚಾರವಾಗಿ ಹೆಚ್ಚಿನ ಪರಿಶೀಲನೆಯನ್ನು ನಡೆಸಿದನು. ಅದರೊಡನೆಯೇ ಹಿಮಾಲಯ ಪ್ರಾಂತಗಳ ಭೂಗೋಳ ವಿವರಣೆ, ಖಗೋಳಶಾಸ್ತ್ರ, ಛಂದೋಶಾಸ್ತ್ರ ಇತ್ಯಾದಿಗಳನ್ನು ಕುರಿತು ಪ್ರೌಢ ವ್ಯಾಸಂಗವನ್ನು ಕೈಕೊಂಡು ಆ ಎಲ್ಲಾ ವಿಷಯಗಳ ಮೇಲೆ ಪ್ರತ್ಯೇಕ ಗ್ರಂಥಗಳನ್ನು ಬರೆದಾಗ ಭಾರ

ತದ ಶಾಸ್ತ್ರೀಯ ಸಾಹಿತ್ಯ ನಭದಲ್ಲಿ ಇನ್ನೊಂದು ತೇಜಸ್ವೀ ನಕ್ಷತ್ರವು ಉದಿಸಿತೆಂಬುದು ಖಚಿತವಾಯಿತು.

೧೬. ಅಭೂತಪೂರ್ವ ನ್ಯಾಯಶಾಸ್ತ್ರಜ್ಞ—ಹೆನ್ರಿ ಕೊಲ್‌ಬ್ರೂಕ್ :—

Sir William Jones ಇವನ ಅಕಾಲ ಮರಣದಿಂದ ಅವನು ಪ್ರಾರಂಭಿಸಿದ್ದ ಹಿಂದೂ ಮತ್ತು ಮಹ್ಮದೀಯ ನ್ಯಾಯಶಾಸ್ತ್ರದ ಅನುವಾದ ಮತ್ತು ಟೀಕೆಯ ಬರೆವಣಿಗೆಯು ಅರ್ಧದಲ್ಲಿಯೇ ನಿಂತುಹೋಗಿತ್ತು. H. T. Colebrooke ಇವನು ಅದನ್ನು ಮುಂದುವರಿಸಿ 1792ರ ಒಳಗಾಗಿ ಪೂರ್ತಿಗೊಳಿಸಿದನು. ಇಷ್ಟರಲ್ಲಿ ಅವನು ಸಂಸ್ಕೃತ, ಅರಬೀ ಮತ್ತು ಪರ್ಶಿಯನ್ ಭಾಷೆಗಳಲ್ಲಿ ಅಪಾರ ಪಾಂಡಿತ್ಯವನ್ನು ಸಂಪಾದಿಸಿದನು.

H. T. Colebrooke ಇವನ Digest of Hindu Law (Contracts and Successions) ಎಂಬ ಉದ್ಧಾಮ ಗ್ರಂಥವು 1760 folio ಪುಟಗಳು ಮೂರು ಕಾಂಡಗಳಾಗಿ ಕಲ್ಕತ್ತೆಯ ಸರಕಾರೀ ಮುದ್ರಣಾಲಯದಲ್ಲಿ ಮುದ್ರಣವಾಯಿತು. ಈ ಬೃಹದ್ಗ್ರಂಥವನ್ನು ಅವನು ಮಿರ್ಜಾಪುರದಲ್ಲಿದ್ದಾಗ ಬರೆದನು. ಇದನ್ನು ಬರೆದ ಸಂದರ್ಭವಾವುದೆಂಬುದನ್ನು ಆ ಗ್ರಂಥದ ಮೊದಲ ಕಾಂಡದಲ್ಲಿ ಹೀಗೆ ಹೇಳಿದ್ದಾನೆ :—

"The motives for undertaking the compilation of a new Digest of Indian Law are so well unfolded in a letter addressed by the late Sir William Jones to the Supreme Council of Bengal, that it will suffice to extract there from the sentiments expressed by that venerable magistrate... ...."

ತಾನು ಕೈಕೊಂಡ ಕೆಲಸಿದ ಪರಿಮಿತಿಯೇನೆಂಬುದನ್ನು ಹೀಗೆ ಹೇಳಿದ್ದಾನೆ :—

'On this translation, I shall briefly observe, that the version of many texts come from the pen of Sir William Jones ; for, most of the laws quoted from Manu are found in his translation of the Manava Dharma Shastra, and other texts had been already translated by him when perusing the original Digest formerly compiled by order of Mr. Warren Hastings......'

H. T. Colebrooke ಇವನು 1783 ರಿಂದ 1815 ರವರೆಗೆ 32 ವರ್ಷಗಳ ಕಾಲ ಹಿಂದೂಸ್ಥಾನದಲ್ಲಿ ಇದ್ದನು. ಈ ಅವಧಿಯಲ್ಲಿ ಅವನು Lord Charles Corn Wallis, Sir John Shore, Lord Baron Minto ಮೊದಲಾದ ಅಧಿಕಾರಿಗಳ ಪ್ರಶಂಸೆಗೆ ಪಾತ್ರನಾಗಿ ಅವರ ಪ್ರೋತ್ಸಾಹವನ್ನು ಪಡೆದನು. ಮನು, ಯಾಜ್ಞವಲ್ಕ್ಯ, ದಯಾಭಾಗ ಮತ್ತು ಮಿತಾಕ್ಷರರ ನ್ಯಾಯಶಾಸ್ತ್ರ ಗ್ರಂಥಗಳೆಲ್ಲವನ್ನೂ ಸರಳ ಶೈಲಿಯಲ್ಲಿ ಭಾಷಾಂತರಿಸಿ ಪ್ರಾಚೀನ ಭಾರತದ ಸಾಮಾಜಿಕ ಕಟ್ಟುಕಟ್ಟಳೆಗಳು ಅದೆಷ್ಟು ಕ್ರಮಬದ್ಧವಾಗಿತ್ತೆಂಬುದನ್ನು ಸಾಂ

ಸಾರಿ ಹೇಳಿದನು.

Colebrooke ಇವನ A Treatise on Obligations and Contracts ಇದು 1823 ರಲ್ಲಿ ಅವನು ದಕ್ಷಿಣ ಆಫ್ರಿಕಾಕ್ಕೆ ಪ್ರಯಾಣ ಬೆಳೆಸಿದಾಗ ಬರೆದದ್ದು ಕೂಡಲೇ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ಜೀಮೂತವಾಹನನ ಗ್ರಂಥದ ಮೇಲೆ A Treatise on Hindu Law ಮತ್ತು ದಯಾಭಾಗ, ಯಾಜ್ಞವಲ್ಕ್ಯರ ನ್ಯಾಯಶಾಸ್ತ್ರದ ಮೇಲೆ ವ್ಯಾಖ್ಯಾನ ಮತ್ತು ಭಾಷಾಂತರಗಳು 1830ರ ಒಳಗಾಗಿ ಪ್ರಕಟವಾದುವು. 'A Hindu Law' ಎಂಬ ಇನ್ನೊಂದು ಗ್ರಂಥವು 1849 ರಲ್ಲೂ ವಿಜ್ಞಾನೇಶ್ವರ ಮತು ಮಿತಾಕ್ಷರ ನ್ಯಾಯಶಾಸ್ತ್ರ ಭಾಷಾಂತರಗಳೂ 1865 ರಲ್ಲೂ ಪ್ರಕಟವಾದುವು. ಇವೆಲ್ಲವೂ ಕಳೆದ ಶತಮಾನದಲ್ಲಿ ನಾಲ್ಕಾರು ಬಾರಿ ಪುನರ್ಮುದ್ರಣವಾಗಿ ಯುರೋಪು, ಅಮೇರಿಕಾ ಮತ್ತು ಹಿಂದೂಸ್ಥಾನದಲ್ಲಿ ಬಹು ಸಂಖ್ಯೆಯಲ್ಲಿ ಪ್ರಚಾರವಾದುವು ಭಾರತದ ಪ್ರಧಾನ ನ್ಯಾಯಾಧೀಶನಾಗಿದ್ದ Colebrooke ಇವನು ಭಾರತೀಯ ನ್ಯಾಯಶಾಸ್ತ್ರಕ್ಕೆ ಸಲ್ಲಿಸಿದ ಸೇವೆಯು ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕಂಥಾದ್ದಾಗಿದೆ.

### ೧೭. ವೇದಾಂತ, ಗಣಿತ ಮತ್ತು ಭೂಗೋಳಶಾಸ್ತ್ರ ಪಾರಂಗತೆ-- ಕೋಲ್‌ಬ್ರೂಕ್ :—

H. T. Colebrooke ಇವನು ವೇದಗಳ ಮೇಲೆ ಬರೆದ ವಿಸ್ತಾರವಾದ ಟೀಕೆ, ವ್ಯಾಖ್ಯಾನಗಳೂ ಸನಾತನ ಧರ್ಮವನ್ನು ಕುರಿತಾದ ಪ್ರಬಂಧಗಳೂ 1800 ರ ಕಾಲದಲ್ಲಿ ಪ್ರಕಟವಾದುವು. ಇವರ ಒಂದು ಭಾಗವು 1810ರ ಕಾಲದಲ್ಲಿ ಜರ್ಮನ್ ಭಾಷೆಯಲ್ಲಿ ಪ್ರಕಟವಾಗಿ ಅದು ಬೆಂಗಳೂರಿನಲ್ಲಿ ಮುದ್ರಣವಾಯಿತೆಂದು ಹೇಳಲಾಗಿದೆ. ಭಾರತೀಯ ಶಾಸ್ತ್ರ ಗ್ರಂಥಗಳು, ವೇದ, ಉಪನಿಷತ್ತು ಮತ್ತು ಪುರಾಣಗಳ ಓಲೆಗಳು ಸುಲಭದಲ್ಲಿ ದೊರಕದೇ ಇದ್ದ ಆ ಕಾಲದಲ್ಲಿ Colebrooke ಇವನು ತನಗೆ ಆಪ್ತರಾಗಿದ್ದ ಹಲವು ಬ್ರಾಹ್ಮಣ ಪಂಡಿತರ ಮೂಲಕ ಅವನ್ನೆಲ್ಲಾ ಹೊರದೆಗೆಯಿಸಿ ಸಂಪೂರ್ಣವಾಗಿ ಪರಿಷ್ಕರಿಸಿ ಕಾಗದಕ್ಕಿಳಿಸಿದನು. ಹೀಗೆ ಬರೆದ ಅವನ ಗ್ರಂಥಗಳಲ್ಲಿ 'ಸಾಂಖ್ಯ ಕಾರಿಕಾ' ಇದು ಒಂದಾಗಿದ್ದು ಅದರ ಭಾಷಾಂತರವು 1837 ರಲ್ಲಿ ಲಂಡನ್ನಿನಲ್ಲಿ ಪ್ರಕಟವಾಯಿತು.

Henry Colebrooke ಇವನು ಈ ದೇಶದಲ್ಲಿ ಇದ್ದವರೆಗೂ ತನ್ನ ಉನ್ನತ ಪದವಿಯ ಪ್ರಭಾವವನ್ನು ಸದುಪಯೋಗಪಡಿಸಿ ಈ ದೇಶದ ಸಾಮಾಜಿಕ ಸಂಸ್ಕರಣೆಗೂ ಶ್ರಮಿಸಿದನು. ಸತೀ ಸಹಗಮನ, ನರಬಲಿ, ಇತ್ಯಾದಿ ದುಷ್ಟಪದ್ಧತಿಗಳನ್ನು ನಿಲ್ಲಿಸಲು ಬ್ರಿಟಿಷ್ ಸರಕಾರದೊಡನೆ ಹೋರಾಡಿದನು ಬೈಬಲ್ ಮತ್ತು ವೇದಗಳ ಮೇಲೆ ಕಿರುಹೊತ್ತಗೆಗಳನ್ನು ಬರೆದು ಈ ದೇಶದ ಜನರಿಗೆ ವಿಚಾರ ಜ್ಞಾನವನ್ನೀಯಲು ತುಂಬಾ ಹೆಣಗಿದನು.

ಕ್ರಿ. ಶ. 1815 ರಲ್ಲಿ Sir H. T. Colebrooke ಇವನು ಭಾರತದಿಂದ ಸ್ವದೇಶಕ್ಕೆ ಹಿಂದಿರುಗಿ ಅಲ್ಲಿ ಇನ್ನಷ್ಟು ವ್ಯಾಪಕವಾಗಿ ಭಾರತೀಯ ವಿದ್ಯೆ ಮತ್ತು

ಸಂಸ್ಕೃತಿಯ ಉದ್ಧಾರಕ್ಕಾಗಿ ದುಡಿದನು. ಈ ದೇಶದಲ್ಲಿ ಬರೆಯಲು ಪ್ರಾರಂಭಿಸಿದ್ದ ಭಾಸ್ಕರಾಚಾರ್ಯನ 'ಲೀಲಾವತಿ', ಬ್ರಹ್ಮಗುಪ್ತನ 'ಬೀಜಗಣಿತ', ಭವಭೂತಿಯ ನಾಟಕಗಳ ಭಾಷಾಂತರ, ವೇದಾಂತ, ಸಾಂಖ್ಯಯೋಗ ಮತ್ತು ನ್ಯಾಯಶಾಸ್ತ್ರಗಳ ಮೇಲೆ ಟೀಕೆ ಮತ್ತು ಭಾಷಾಂತರಗಳನ್ನೆಲ್ಲಾ ಅಲ್ಲಿ ಮುಗಿಸಿದನು. ಇವೆಲ್ಲವೂ ಇಂಗ್ಲೆಂಡಿನ ಭಾರತೀಯ ಗ್ರಂಥಭಂಡಾರದ ಮುಖ್ಯಾಧಿಕಾರಿಯಾಗಿದ್ದ Sir Charles Wilkins ಇವನ ಪ್ರಯತ್ನದ ಪರಿಣಾಮವಾಗಿ ಅಲ್ಲಿಯೇ ಮುದ್ರಣವಾದುವು, ಅಲ್ಲದೆ ಅವುಗಳಲ್ಲಿ ಕೆಲವು ಜರ್ಮನ್ ಮತ್ತು ರಷ್ಯನ್‌ಭಾಷೆಗೂ ಇಳಿಸಲ್ಪಟ್ಟವು. ಹೀಗೆ ಇವನ ವ್ಯಾಸಂಗಕ್ಷೇತ್ರವು ತುಂಬಾ ವಿಶಾಲವಾಗಿದ್ದಿತು :—

"Sir Henry Colebrooke's......contribution to human knowledge, quite apart from his special study of linguistics, embraced astronomy, law, philosophy, mathematics, comparative religion, agriculture, economics, geography etc......"

ಎಂಬುದಾಗಿ ಹೇಳಲ್ಪಟ್ಟಿದೆ. ಈ ದೇಶದ ಭೌಗೋಲಿಕ ಅನ್ವೇಷಣೆಯ ಬಗ್ಗೆ ವಿಶೇಷವಾಗಿ ದುಡಿದ, ಮತ್ತು Col. Crawford, Col. Webb ಮೊದಲಾದವರ ಭೌಗೋಲಿಕ ವ್ಯಾಸಂಗಕ್ಕೆ ಪೌರಾಣಿಕ ಆಧಾರಗಳನ್ನಿತ್ತು ಸಹಕರಿಸಿದ Henry Colebrooke ಇವನು ಲಂಡನ್ನಿನ ಖಗೋಳಶಾಸ್ತ್ರ ಸಂಸ್ಥೆಯ ಅಧ್ಯಕ್ಷನಾಗಿ ಈ ದೇಶದ ಭೂಗೋಳ ವಿವರಣೆಯನ್ನು ಕುರಿತು ಕೊಟ್ಟ ಹಲವು ಉಪನ್ಯಾಸಗಳು ಗ್ರಂಥರೂಪದಲ್ಲಿ ಪ್ರಕಟವಾಯಿತು. Major Wilford ಇವನೊಡನೆ ಸೇರಿ ಭಾರತದ ಖಗೋಳಶಾಸ್ತ್ರ, ಜ್ಯೋತಿಷ್ಯ ಮತ್ತು ಗಣಿತಶಾಸ್ತ್ರಗಳ ಪರಿಶೋಧನೆಯನ್ನು ಬಹು ಆಳವಾಗಿ ಎಸಗಿದಾಗ ಅವನಿಗೆ ಕಂಡುಬಂದ ಅಂಶವೇನೆಂದರೆ ಈ ಶಾಸ್ತ್ರಗಳೆಲ್ಲಾ ಪೂರ್ವಕಾಲದಲ್ಲಿ ಹಿಂದೂಗಳು ಅರಬೀ ದೇಶದ ಜನರಿಂದಲೂ ಮತ್ತು ಅರಬೀ ದೇಶದ ಜನರು ಹಿಂದೂಗಳಿಂದಲೂ ಅತ್ತಿತ್ತ ಎರವಾಗಿ ಪಡೆದಿದ್ದಾರೆಂದೇ ಆಗಿದೆ. Sir Colebrooke ಇವನು ರೇಖಾಗಣಿತ ಮತ್ತು ಆರ್ಯಭಟ್ಟ, ವರಾಹಮಿಹಿರ ಮತ್ತಿತರರು ರಚಿಸಿದ ಶಾಸ್ತ್ರಗ್ರಂಥಗಳ ಮೇಲೆ ಬರೆದ ವ್ಯಾಖ್ಯಾನವೂ ಅವನ ಅಪಾರ ಜ್ಞಾನಭಂಡಾರವನ್ನು ಪ್ರದರ್ಶಿಸುತ್ತದೆ.

### ೧೮. ಯೂರೋಪಿನಲ್ಲಿ ಕೋಲ್‌ಬ್ರೂಕ್‌ನಿಂದ ಭಾರತೀಯ ಸಾಹಿತ್ಯಪ್ರಚಾರ :

Sir Henry Colebrooke ಇವನು ಇಂಗ್ಲೆಂಡಿನಲ್ಲಿ Royal Asiatic Society of Great Britain and Ireland ಇದನ್ನು ಮಾರ್ಚ್ 1823 ರಲ್ಲಿ ಸ್ಥಾಪಿಸಿದ್ದು ಒಂದು ಮಹತ್ವವಾದ ಕೆಲಸವಾಗಿದೆ. ಈ ಸಂಸ್ಥೆಯ ಶಾಖೆಗಳು ಹಲವು ಸ್ಥಳಗಳಲ್ಲಿ ಅಷ್ಟರಲ್ಲಿಯೇ ಸ್ಥಾಪಿತವಾಗಿದ್ದುವು. Sri James Mackintosh ಇವನು ಬೊಂಬಾಯಿಯಲ್ಲಿ 1804 ರಲ್ಲೂ, Sri John Newbolt ಇವನು ಮದ್ರಾಸಿನಲ್ಲಿ 1822ರಲ್ಲೂ B. G. Babington ಇವನು ಪ್ಯಾರಿಸ್‌ನಲ್ಲಿ 1822 ರಲ್ಲೂ Asiatic Society ಇವರ ಶಾಖೆಗಳನ್ನು

ಸ್ಥಾಪಿಸಿದ್ದರು. ಇಂಗ್ಲೆಂಡಿನಲ್ಲಿ Sir G. T. Staunton, Sir J. Malcolm ಮತ್ತಿತರರೂ ಅದರ ಸ್ಥಾಪನೆಗೆ Sir Colebrooke ಇವನೊಡನೆ ಸಹಕರಿಸಿದರು. ಅದರೊಡನೆಯೇ Asiatic 'Researches' ಪತ್ರಿಕೆಯಂತೆಯೇ ಉತ್ತಮವಾದ ಮತ್ತು Folio ಪುಟಗಳ ಸಾಹಿತ್ಯಪತ್ರಿಕೆಯನ್ನೂ ಆರಂಭಿಸಿದನು. Sir C. Williams Wynn ಇವನು ಇಂಗ್ಲೆಂಡಿನಲ್ಲಿ ಆ ಸಂಸ್ಥೆಯ ಪ್ರಥಮ ಅಧ್ಯಕ್ಷನಾದನು. Colebrooke ಇವನು ತನ್ನ ಕಡೇ ದಿನಗಳ ವರೆಗೂ ಅದರ ಪ್ರಮುಖ ಸಂಚಾಲಕನಾಗಿಯೇ ಇದ್ದನು.

ಅದೇ ರೀತಿಯಲ್ಲಿ ಅವನು ಒಂದು ಭಾಷಾಂತರ ಸಮಿತಿ ಅಥವಾ Oriental Translation Committee ಇದನ್ನು Sir Charles Wilkins ಇವನೊಡಗೂಡಿ ಸ್ಥಾಪಿಸಿದ ವಿಷಯವಾಗಿ ಹಿಂದೆಯೇ ಹೇಳಲಾಗಿದೆ. ಈ ಭಾಷಾಂತರ ನಿಧಿಗೆ ಯೂರೋಪಿನ ಮತ್ತಿತರ ದೇಶಗಳ ಸಾಹಿತ್ಯ ಸಂಸ್ಥೆಗಳಿಂದ ಮತ್ತು Royal Asiatic Society ಇದರ ಎಲ್ಲಾ ಶಾಖೆಗಳಿಂದ ವಂತಿಗೆ ಹಣವನ್ನೂ ಸಂಗ್ರಹಿಸಿದನು. ಈ ಸಮಿತಿಯು ಪ್ರಕಟಣೆಗೆಂದು ಆರಿಸಿದ ಮೊದಲನೇ ಗ್ರಂಥವು Sir Colebrooke ಇವನಿಂದ ಭಾಷಾಂತರವಾದ ಗೌರಪಾದನ 'ಸಾಂಖ್ಯ ಕಾರಿಕಾ' ಇದೇ ಆಗಿತ್ತು. ಈ ಎಲ್ಲಾ ಕೆಲಸಗಳ ಮಧ್ಯೆ ಅವನ ಸಾಹಿತ್ಯಸೇವೆಯು ಯಥಾವತ್ತಾಗಿ ನಡೆಯುತ್ತಲೇ ಇತ್ತು. ಹಿಂದೆಯೇ ಬರೆದಿದ್ದ ಕಾಳಿದಾಸನ 'ರಘುವಂಶ'ದ ಭಾಷಾಂತರವೂ ಪ್ರಕಟವಾಯಿತು. ಬೌದ್ಧ ಮತ್ತು ಜೈನಧರ್ಮಗಳು, ಮತ್ತು ಸಂಸ್ಕೃತ ಸಾಹಿತ್ಯ, ವೇದ ಮತ್ತು ಪುರಾಣಗಳ ಮೇಲೆ Prof. Wilson ಇವನಿಗೆ ಬರೆದ ಪತ್ರಗಳೆಲ್ಲವೂ ಅನಂತರ ಅವನ ಮಗ Edward Colebrooke ಇವನು ಸಂಪಾದಿಸಿ ಸುಮಾರು 1800 demy ಪುಟಗಳ ಮೂರು ಕಾಂಡಗಳ ಗ್ರಂಥವಾಗಿ ಪ್ರಕಟಿಸಿದನು. ಇವನ್ನೇ ಪುನಃ 1873 ರಲ್ಲಿ E. B. Cowell ಇವನು ಪರಿಷ್ಕರಿಸಿ ಪುನರ್ಮುದ್ರಿಸಿ ಹೊರತಂದನು.

Sir William Jones ಇವನು ಎಂತೋ ಅಂತೆಯೇ Sir Henry Colebrooke ಇವನೂ ಬಹುಶ್ರುತನಾದ ಪರ್ವ ಶ್ರೇಷ್ಠ ನ್ಯಾಯಶಾಸ್ತ್ರಜ್ಞನೂ, ನ್ಯಾಯಾಧೀಶನೂ, ವೇದಾಭ್ಯಾಸಿಯೂ, ಬಹುಭಾಷಾ ಪಂಡಿತನೂ, ಸಾಹಿತ್ಯ ಸಂಸ್ಥೆಗಳ ಸ್ಥಾಪಕನೂ, ಬ್ರಿಟಿಷ್ ಸರಕಾರದ ಅಧಿಕಾರೀಶಾಹಿಯ ಮಿತ್ರನೂ, ಈ ದೇಶದ ಅಭಿವೃದ್ಧಿಗಾಗಿ ಮತ್ತು ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂಸ್ಕರಣೆಗಾಗಿ ಹೆಣಗಿದ ವೀರ ಅಭಿಮಾನಿಯೂ ಆಗಿದ್ದನು. ಆದರೆ Sir Jones ಇವನು ಅಕಾಲ ಮರಣಕ್ಕೆ ತುತ್ತಾಗಿ ಅವನ ಸೇವೆಯು ಈ ದೇಶಕ್ಕೆ ಇನ್ನೂ ದೊರಕುವ ಸೌಲಭ್ಯವು ಇಲ್ಲದಾಯಿತು; ಆದರೆ Sir Colebrooke ಇವನು ಈ ದೇಶದಿಂದ ಹಿಂದಿರುಗಿ ಸಾಕಷ್ಟು ಕಾಲ ಬದುಕಿ ಯೂರೋಪಿನಲ್ಲೂ ಈ ದೇಶದ ಪ್ರಾಚೀನ ಸಂಸ್ಕೃತಿಯ ಅಪಾರತೆಯನ್ನು ಬಚ್ಚಿಟ್ಟನಲ್ಲದೆ ಆದಕ್ಕಾಗಿ ತನ್ನ ಕಡೇ ದಿನಗಳ ವರೆಗೂ ಶ್ರಮಿಸಿದನು.

**೧೯. ಸರ್ ಕೊಲ್‌ಬ್ರೂಕ್–ಇವನಲ್ಲಿ ಭಾರತೀಯ ಗ್ರಂಥಭಂಡಾರ :—**

Henry Thomas Colebrooke ಇವನು ಬರೆದ ಗ್ರಂಥಗಳ ಹಸ್ತ ಪ್ರತಿಗಳ ಸಂಖ್ಯೆಯು ಕ್ರಿ. ಶ. 1832ರ ಕಾಲಕ್ಕೆ ಇನ್ನೂರಕ್ಕೂ ಮಿಕ್ಕಿತ್ತು. ಇವನು ಬರೆಯದೇ ಬಿಟ್ಟ ವಿಚಾರಗಳಾವುವೂ ಇಲ್ಲವೆಂಬಂತೆ ಭಾರತದ ವಿವಿಧ ಧಾರ್ಮಿಕ ಮತ್ತು ವೈಜ್ಞಾನಿಕ ವಿಷಯಗಳ ಮೇಲೆ ತನ್ನ ಲೇಖನಿಯನ್ನು ಹರಿಯಿಸಿದನು. ಅವನು ಹಿಂದೂಸ್ಥಾನದಿಂದ ಹೊತ್ತುಕೊಂಡು ಹೋದ ತಾಳೆ ಓಲೆ ಬರೆಹಗಳು, ಕೈಬರೆವಣಿಗೆ ಪುಸ್ತಕಗಳು, ಶಾಸನಗಳೇ ಮೊದಲಾದ ಪ್ರಾಚೀನ ಲಿಖಿತಗಳ ಸಂಗ್ರಹ ವೆಲ್ಲಾ ಒಟ್ಟಾಗಿ 4000ಕ್ಕೂ ಮಿಕ್ಕಿ ಇದ್ದುವು. ವೇದ, ಪುರಾಣ, ಸಾಂಖ್ಯ, ಯೋಗ, ನ್ಯಾಯ, ಇತ್ಯಾದಿ ಶಾಸ್ತ್ರ ಗ್ರಂಥಗಳು, ರಾಮಾಯಣ, ಮಹಾಭಾರತ, ಭಾಗವತ, ಹಿತೋಪದೇಶ, ಅಮರಕೋಶಾದಿಗಳ ಓಲೆಗಳು, ಭಾಸ್ಕರ, ಬ್ರಹ್ಮಗುಪ್ತ, ಆರ್ಯಭಟ್ಟ, ಮನು, ಯಾಜ್ಞವಲ್ಕ್ಯ, ಮಿತಾಕ್ಷರ ಮೊದಲಾದವರ ಗಣಿತ, ಖಗೋಳ, ನ್ಯಾಯ ಶಾಸ್ತ್ರಾದಿಗಳ ಗ್ರಂಥಗಳು, ಇನ್ನೂ ಹಲವು ಪ್ರಾಚೀನಕಾಲದ ಲಿಖಿತಗಳು, ಸಂಸ್ಕೃತ, ಪಾಲೀ, ಬ್ರಾಹ್ಮೀ ಗ್ರಂಥಗಳೆಲ್ಲಾ ಅವನ ಸ್ವಂತ ಗ್ರಂಥಭಂಡಾರವಾಗಿ ಆ ಕಾಲದಲ್ಲಿದ್ದ ಸಾರ್ವಜನಿಕ ಗ್ರಂಥಭಂಡಾರಗಳ ಪ್ರಮಾಣವನ್ನು ಮೀರಿಸಿತ್ತು. ತನ್ನ ಈ ಅಪಾರ ಗ್ರಂಥರಾಶಿಯನ್ನು Sir H. T. Colebrooke ಇವನು ಕ್ರಿ. ಶ. 1819 ರಲ್ಲಿ ಲಂಡನ್ನಿನ East India Library ಇದಕ್ಕೆ ಒಪ್ಪಿಸಿದನು. ಹಾಗೆ ಕೊಡುವಾಗ ಅವನು ಆ ಗ್ರಂಥಭಂಡಾರದ ಅಧಿಕಾರಿ Sir Charles Wilkins ಇವರಿಗೆ ಹೀಗೆ ಬರೆದನು :—

"......Intending to present the honourable East India Company to be deposited in their library and museum my collections or Oriental maunscripts consisting chiefly of Sanskrit and Prakrit Works......".

Sir Colebrooke ಇವನ ಆ ಸಹಸ್ರಾರು ಪ್ರಾಚೀನ ಗ್ರಂಥಗಳ ಕೊಡುಗೆಯಿಂದ ಆ ಗ್ರಂಥಭಂಡಾರವು ಇನ್ನಷ್ಟು ಸಮೃದ್ಧವಾಯಿತು. ಅವನು ಭಾರತೀಯ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯು ಬಹುಭಾಗವೇ ಆ ಗ್ರಂಥಭಂಡಾರವಾಗಿದೆ. ಅವನ ಶಿಲಾ ಪ್ರತಿಮೆಯೊಂದು ಇಂದಿಗೂ ಅದರಲ್ಲಿ ಅಲಂಕೃತವಾಗಿದೆ.

Sir Henry Colebrooke ಇವನು ಒರ್ವ ಸಾರ್ಥಕ ಜೀವಿ; ಸರಸ್ವತೀ ಆರಾಧನೆ ಮತ್ತು ಸೇವೆಯಲ್ಲಿಯೇ ಬಾಳನ್ನು ಕಳೆದ ಒರ್ವ ಕರ್ಮಯೋಗಿ! ಇಡೀ ಪಾಶ್ಚಾತ್ಯ ಲೋಕಕ್ಕೆ ಪ್ರಾಚೀನ ಭಾರತದ ವಿದ್ವತ್ತು ಮತ್ತು ವಿಜ್ಞಾನದ ಪರಿಚಯ ವನ್ನೊದಗಿಸಿದ ಒರ್ವ ಧೀಮಂತ ಮಾನವ!

Sir Colebrooke ಇವನು 1810 ರಲ್ಲಿ Elizabeth Wilkinson ಇವಳನ್ನು ವಿವಾಹವಾಗಿದ್ದನು. ಮೂರು ಮಕ್ಕಳನ್ನು ಹಡೆದು ಅವರಲ್ಲೊಬ್ಬನನ್ನು ಈ ದಂಪತಿಗಳು ಕೂಡಲೇ ಕಳೆದುಕೊಂಡರಲ್ಲದೆ Elizabeth ಇವಳೂ ವಿವಾಹದ ನಂತರ ನಾಲ್ಕೈದು ವರ್ಷಗಳಲ್ಲಿಯೇ ಗತಿಸಿದಳು. ಅದರ ನಂತರವೇ ಭಾರತ ಸರ

ಕಾರದ ಪ್ರಧಾನ ನ್ಯಾಯಾಧೀಶನಾಗಿದ್ದ Colebrooke ಇವನು ತನ್ನ ಹುದ್ದೆಯಿಂದ ನಿವೃತ್ತನಾಗಿ 1815 ರಲ್ಲಿ ಸ್ವದೇಶಕ್ಕೆ ಮರಳಿದನು. ಅನಂತರ ತನ್ನ 22 ವರ್ಷಗಳ ಜೀವನವನ್ನು ಭಾರತೀಯ ಸಾಹಿತ್ಯ ಸಂಶೋಧನೆ ಮತ್ತು ಪ್ರಚಾರ ಕಾರ್ಯದಲ್ಲಿಯೇ ಕಳೆದನು. ಕಲ್ಕತ್ತಾದಲ್ಲಿ ಹೇಗೋ ಹಾಗೆಯೇ ಲಂಡನ್ನಿನಲ್ಲೂ Royal Asiatic Society ಇದರ ಆಧಾರಸ್ತಂಭದಂತೆ ಕಡೇ ದಿನಗಳವರೆಗೂ ದುಡಿದನು. ತನ್ನ ಉದಾರ ಕೊಡುಗೆಯಿಂದ ಮೇಲೆ ಹೇಳಿದಂತೆ ಲಂಡನ್ನಿನ ಭಾರತೀಯ ಗ್ರಂಥ ಭಂಡಾರವನ್ನು ವಿಸ್ತರಿಸಿದನು ; ತನ್ನ ಮತ್ತು ಇತರರ ಅಸಂಖ್ಯ ಗ್ರಂಥಗಳ ಪ್ರಕಟಣೆಗೆ ಕಾರಣನಾದನು. ಇಂದು ಅವನ ನೂರಾರು ಗ್ರಂಥಗಳು ಇಂಗ್ಲಿಷ್, ಸಂಸ್ಕೃತ, ಪರ್ಶಿಯನ್, ಅರಬೀ, ಜರ್ಮನ್, ಲ್ಯಾಟಿನ್, ಫ್ರೆಂಚ್ ಮೊದಲಾದ ಭಾಷೆಗಳಲ್ಲಿ ಆಯಾ ಭಾಷಾ ಪ್ರದೇಶಗಳ ಗ್ರಂಥ ಭಂಡಾರಗಳಲ್ಲಿ ನಂದಾದೀಪದಂತೆ ಬೆಳಗುತ್ತಿವೆ. ಅವನು ಕ್ರಿ. ಶ. 1837 ರಲ್ಲಿ ತನ್ನ 75 ನೇ ವರ್ಷ ಪ್ರಾಯದಲ್ಲಿ ಮೃತನಾದನು. ಭಾರತ ಸಂಸ್ಕೃತಿಯನ್ನು ವಿದೇಶಗಳಿಗೆ ಹೊತ್ತುಕೊಂಡು ಹೋದ ಅನಧಿಕೃತ ಪಾಶ್ಚಾತ್ಯ ರಾಯಭಾರಿಗಳಲ್ಲಿ Sir Colebrooke ಇವನು ಅಗ್ರಗಣ್ಯನು !

---

" ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ
ವೆಲ್ಲರಿಗಿಲ್ಲ ಸರ್ವಜ್ಞ !

ಹೇಳಿದ್ದ ಹೇಳುವರು ಕೇಳಿದ್ದ ಕೇಳುವರು
ಕೇಳಿದ್ದ ಕೇಳಿ ಸುಖಿಸುವರು_ಹಿರಿಯರ
ಹೇಳಿಕೆಯೆ ಬೇರೆ ಸರ್ವಜ್ಞ !"

[ಸರ್ವಜ್ಞ]

" Unless Government interposed with a fostering hand, the Revival of letters may mostly become hopeless from want of books and persons capable of explaining them. "*
ಎಂಬುದಾಗಿ Governor-General Lord Minto ಇವನು ಬ್ರಿಟಿಷ್ ಸರಕಾರಕ್ಕೆ 1811 ರಲ್ಲಿ ಬರೆದು ದೇಶೀಯ ಸಾಹಿತ್ಯದ ಅವನತಿಯೆಂತಾಗುತ್ತಿದೆ ಯೆಂಬುದನ್ನು ವಿವರಿಸಿದ್ದನು. ಅಂದಿನ ಪ್ರಸಿದ್ಧ ಹಿಂದೂ ವಿದ್ಯಾಕ್ಷೇತ್ರಗಳಾಗಿದ್ದ ಕಾಶಿ, ಟಿರ್‌ಹಟ್ ಮತ್ತು ನಾಡ್ಯಾ ಈ ಸ್ಥಳಗಳಲ್ಲೂ ಭಾರತೀಯ ವಿದ್ಯೆಯು ಅಧೋಗತಿಗಿಳಿಯುತಿದ್ದಿತು. ಆ ಕಾರಣದಿಂದ ದೇಶದ ವಿದ್ಯಾಪ್ರಗತಿಗೆ ತಕ್ಕ ಕ್ರಮವನ್ನು ಕೈಕೊಳ್ಳಬೇಕೆಂದು ಕಳೆದ ಶತಮಾನದ ಪ್ರಾರಂಭದಲ್ಲಿ ಬಂಗಾಳದಲ್ಲಿದ್ದ ಆಂಗ್ಲೇಯ ವಿದ್ವಾಂಸರು ಬ್ರಿಟಿಷ್ ಸರಕಾರವನ್ನು ಮೇಲಿಂದ ಮೇಲೆ ಕೇಳಿಕೊಂಡರು. ಅದಕ್ಕನುಸಾರವಾಗಿ ಸರಕಾರವು ಈ ಕೆಳಗಿನ ಶರತ್ತನ್ನು ತನ್ನ ಆಳ್ವಿಕೆಯ ಧೋರಣೆಯಾಗಿ ಅನುಸರಿಸತೊಡಗಿತು:—

" A sum of not less than one lac of rupees in each year shall be set apart and applied to the revival and improvement of literature and the encouragement of the learned natives of India, and for the introduction and promotion of a knowledge of the sciences among the inhabitants of the British territories in India. "*
ಆದರೆ ಯಾವುದೇ ಯೋಜನೆಯು ಫಲಕಾರಿಯಾಗಬೇಕಾದರೂ ಆಯಾ ಕ್ಷೇತ್ರದಲ್ಲಿ ನುರಿತ ವ್ಯಕ್ತಿಗಳು ಯಾವ ಕಾಲಕ್ಕೂ ಬೇಕಾಗುತ್ತದೆ. ಬಂಗಾಳದಲ್ಲಿ ಜಗನ್ನಾಥನಂಥಾ ದೇಶೀಯ ವಿದ್ವಾಂಸರ ಪೀಳಿಗೆಯೂ ೧೮ನೇ ಶತಮಾನಾಂತ್ಯದಲ್ಲಿಯೇ ಕೊನೆಗೊಂಡಿತ್ತು. ಹೀಗಾಗಿ ಭಾರತದ ಇತರ ಸ್ಥಳಗಳಲ್ಲಿ ಹೇಗೋ ಹಾಗೆಯೇ ಕುಂಪೆನೀ ಸರಕಾರದ ರಾಜಧಾನಿಯಿದ್ದ ಬಂಗಾಳದಲ್ಲೂ ಪರಿಸ್ಥಿತಿಯು ಬಿಗುಡಾಗಿದ್ದಾಗ ಆಂಗ್ಲೇಯ ವಿದ್ವಾಂಸರೇ ಈ ದೇಶದ ವಿದ್ಯಾಪ್ರಗತಿಗೆ ಮಾರ್ಗದರ್ಶಕರಾದರು.

* A clause in the East India Company Charter.

**೨. ವಿಲಿಯೆಂ ಕ್ಯಾರಿ—ಇವನಾರು ಎಂದು ಗೊತ್ತೇ ? :—**

Rev. Dr. William Carey ಇವನು ಅಂದಿನ ಭಾರತದಲ್ಲಿ ಇನ್ನೊರ್ವ ಸೇವಾಪುರುಷ! ಒರ್ವ ಕ್ರೈಸ್ತ ಗುರು; ಬಹು ಭಾಷಾ ವಿಶಾರದ; ನಿಘಂಟುಕಾರ; ವೈಯ್ಯಾಕರಣಿ; ಸಮಾಜ ಸುಧಾರಕ ಹಾಗೂ ಒರ್ವ ರಸಿಕ! ಕ್ರೈಸ್ತಗುರುಗಳು ಇವನಿಗಿಂತ ಹಿಂದೆ ಮತ್ತು ಇವನ ಕಾಲಾನಂತರವೂ ಹಿಂದೂದೇಶದಲ್ಲಿ ಬಹು ಜನ ಇದ್ದರು, ಮತ್ತು ಇದ್ದಾರೆ. ಆದರೆ ಅವರೆಲ್ಲರ ಪೈಕಿ ಈ Rev. Dr. W. Carey ಇವನು ಒರ್ವ ಕ್ರೈಸ್ತಗುರು ಮಾತ್ರ ಅಲ್ಲ, ಒರ್ವ ರಾಜಗುರು ಮತ್ತು ವಿದ್ಯಾಗುರುವೂ ಆಗಿ ಶೋಭಿಸಿದನು. ಇವನ ವಿಷಯವಾಗಿ, He stands in a class by himself as one of the great influences on the intellectual advancement of Bengal * ಎಂದು ಹೇಳಲಾಗಿದೆ.

ಇವನು ಲಂಡನ್ ನಗರದ ಪ್ಯಾಡಿಂಗ್ಟನ್ ಎಂಬ ಊರಿನಲ್ಲಿ ಕ್ರಿ. ಶ. 1761 ರಲ್ಲಿ ಜನ್ಮವೆತ್ತಿದನು. ಇವನ ತಂದೆಯು ಪಾದರಕ್ಷೆಗಳ ಮಾರಾಟದ ಅಂಗಡಿಯನ್ನಿಟ್ಟುಕೊಂಡಿದ್ದ ಸಾಮಾನ್ಯ ವ್ಯಕ್ತಿಯಾಗಿದ್ದನು. William Carey ಇವನು ಸಮೀಪದ ಶಾಲೆಯಲ್ಲಿಯೇ ತನ್ನ ವಿದ್ಯಾವ್ಯಾಸಂಗವನ್ನು ಮಾಡಿದನು. ಬಾಲ್ಯದಲ್ಲಿಯೇ ಇವನಿಗೆ ಭಾಷೆಗಳನ್ನು ಕಲಿಯುವ ಹುಚ್ಚು ಇದ್ದಿತು. ಅಷ್ಟೇ ಅಲ್ಲ, ಎಳೆ ಪ್ರಾಯದಲ್ಲಿಯೇ ಬೈಬಲ್ ಧರ್ಮಗ್ರಂಥದ ಪಾರಾಯಣದಲ್ಲಿ ವಿಶೇಷ ಆಕಾಂಕ್ಷೆಯನ್ನು ತೋರಿಸಿದ್ದನು. ಹೀಗಾಗಿ ಗ್ರೀಕ್, ಹೆಬ್ರ್ಯೂ, ಡಚ್ಚ್, ಜರ್ಮನ್ ಮೊದಲಾದ ಭಾಷೆಗಳನ್ನು ಸಾಕಷ್ಟು ಕಲಿತು ಆಯಾ ಭಾಷೆಗಳಲ್ಲೂ ಇದ್ದ ಬೈಬಲ್ ಗ್ರಂಥಗಳನ್ನು ಪಠಿಸುತ್ತಿದ್ದನು.

ಹೀಗೆ ದೈವಾಭಿಮಾನಿ ಮತ್ತು ಭಾಷಾಭಿಮಾನಿಯಾಗಿ ತೋರಿಬಂದ ಈ ಹುಡುಗನಿಗೆ ಕ್ರಿ. ಶ. 1779 ರಲ್ಲಿ ತನ್ನ ೧೮ ನೇ ವರ್ಷದಲ್ಲಿ ಕ್ರೈಸ್ತ ಧರ್ಮೋಪದೀಕ್ಷೆಯು ವಿಧಿಸಲ್ಪಟ್ಟಿತು. ಅನಂತರ ಎರಡು ವರ್ಷದಲ್ಲಿ ಅವನು Miss Dorothy ಎಂಬುವಳನ್ನು ವಿವಾಹವಾದನು. 1785 ರಲ್ಲಿ ಇವನು ಒಂದು ಚಿಕ್ಕ ಕ್ಷೇತ್ರಕ್ಕೆ ಕ್ರೈಸ್ತ ಮತೋಪದೇಶಕನಾಗಿ ನೇಮಿಸಲ್ಪಟ್ಟನು.

**೩. "ಎಲೋ ಯುವಕನೆ, ಕುಳಿತುಕೊ," ಎಂಬ ಅರ್ಭಟಕೊಳಗಾದನು :-**

ಆ ಕಾಲದಲ್ಲಿ ಮತ್ತು ಎಲ್ಲಾ ಕಾಲದಲ್ಲೂ ಲಂಡನ್ ನಗರದ ಬೇರೆ ಬೇರೆ ಸ್ಥಳಗಳಲ್ಲಿ ಕ್ರೈಸ್ತ ಮತೋಪದೇಶಕರು ವಾರಕ್ಕೊಮ್ಮೆ ಸೇರಿ ತಮ್ಮ ಮತ, ಧರ್ಮ, ತತ್ವಗಳ ಮೇಲೆ ವಿಚಾರ ವಿನಿಮಯವನ್ನು ನಡೆಸುತ್ತಿದ್ದರು. ಕೆಲವು ಪ್ರಮುಖರಾದ ಹಿರಿಯರ ಪೈಕಿ Dr. Thomas, Rev. Ryland ಮೊದಲಾದವರು ಆಗ ಇಂಥಾ ಚರ್ಚೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಿ ಕಿರಿಯರಿಗೆ ತಮ್ಮ ಬೋಧನೆಗಳನ್ನು ಕುರಿತು ಉಪದೇಶ ಹಾಗೂ ಉಪನ್ಯಾಸಗಳನ್ನು ಮಾಡುತ್ತಿದ್ದರು. ಅದೇ ವೇಳೆಗೆ

* Calcuatta 'Varsity Centenary Valume (1957)

ಜನಸೇವೆ, ಸಮಾಜಸೇವೆಯನ್ನು ಕುರಿತಾಗಿಯೂ ತಕ್ಕ ತರಬೇತನ್ನು ಹೊಸದಾಗಿ ನೇಮಿಸಲ್ಪಟ್ಟ ಮತೋಪದೇಶಕರಿಗೆ ಕೊಡುತ್ತಿದ್ದರು.

William Carey ಇವನು ಮತೀಯ ವಿಚಾರದಲ್ಲಿ ಒರ್ವ ತೀವ್ರಗಾಮಿಯಾಗಿದ್ದನು. ನಗರದ ಯಾವ ಭಾಗದಲ್ಲಿ ಧಾರ್ಮಿಕ ಸಭೆಗಳು ಸೇರಿದ್ದರೂ ಅವನು ತಪ್ಪದೆ ಹಾಜರಾಗಿ ಚರ್ಚೆಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದನು. ಮುಂದಕ್ಕೆ ತಾನೊರ್ವ ಬಹು ದೊಡ್ಡ ಮತಪ್ರಚಾರಕನಾಗುವೆನೆಂಬ ಆಶಾದಾಯಕವಾದ ಚಿಹ್ನೆಯನ್ನು ಇತರರಿಗೆ ಪ್ರದರ್ಶಿಸಿದ್ದನು.

ಒಂದು ದಿನ ಅಂಥಾ ಒಂದು ಚರ್ಚೆಯು ನಡೆಯುತ್ತಿದ್ದಾಗ ಕ್ರೈಸ್ತಮತವು ಬರೇ ತಮ್ಮ ಮನೆಗಳಲ್ಲಿ, ಊರುಗಳಲ್ಲಿ ಮಾತ್ರವಲ್ಲ; ಅದು ಇಡೀ ಪ್ರಪಂಚದಲ್ಲಿ ಹಬ್ಬುವಂತಾಗಬೇಕು; ಅದಕ್ಕೇನು ಕ್ರಮ ಕೈಗೊಳ್ಳಲಾಗಿದೆ ಎಂದು ಆವನು ಆ ಸಭೆಯಲ್ಲಿ ಪ್ರಶ್ನಿಸಿದನು. ಹಾಗೆ ಪ್ರಶ್ನಿಸುವಾಗ ಅದಕ್ಕೆ ಆಧಾರವಾಗಿ ಏಸುಕ್ರಿಸ್ತನು ಹೇಳಿದ, "Lo, I am with you always even into the end of the world" ಎಂಬ ಹೇಳಿಕೆಯನ್ನೂ ಸಭೆಯ ಮುಂದಿಟ್ಟನು. ಎಲ್ಲಾ ಕಾಲಕ್ಕೂ ಕ್ರೈಸ್ತಧರ್ಮ ಪ್ರಚಾರಕರು ತಮ್ಮ ಧರ್ಮವನ್ನು ಜಗತ್ತಿನಲ್ಲೆಲ್ಲಾ ಹರಡಲು ಪ್ರಯತ್ನಿಸಬೇಕೆಂಬುದಾಗಿ ವಾದಿಸಿ ಕೇಳಿದ ಆ ಪ್ರಶ್ನೆಯು John Calvin ಇವನ ಕ್ರೈಸ್ತ ಪಂಥಕ್ಕೆ ಸೇರಿದ್ದ Rev. Ryland ಇವನಿಗೆ ಅಷ್ಟೇನೂ ಹಿಡಿಸಲಿಲ್ಲ. ಅವನು ಈ ಹುಡುಗನ ಪ್ರಶ್ನೆಗೆ ತಕ್ಕುದಾದ ಉತ್ತರವನ್ನೀಯುವುದರ ಬದಲಾಗಿ ಈ ರೀತಿ ಹೇಳಿದನು:—

"Sit down, young man; when God wants to convert the world, He will do it without your help."

"ಎಲೋ ಯುವಕನೆ, ಕುಳಿತುಕೊ," ಎಂಬುದಾಗಿ ಅಷ್ಟು ದೊಡ್ಡ ಸಭೆಯಲ್ಲಿ ಒರ್ವ ಧರ್ಮಗುರುವಿನಿಂದ ಅವಹೇಳನಕೊಳಗಾದರೂ William Carey ಇವನು ತನ್ನ ಪ್ರತಿಭೆಯನ್ನು ಇನ್ನಷ್ಟು ವಾದವಿವಾದಗಳ ಮೂಲಕ ತೋರಿಸಿ ತಾನು ಎಷ್ಟು ನಿಷ್ಠಾವಂತ ಕ್ರೈಸ್ತನಿರುವೆಯೆಂಬುದನ್ನು ಪ್ರಕಟಿಸಿದ್ದನು.

ಳ. ಹಿಂದೂಸ್ಥಾನದಲ್ಲಿ ವಿಲಿಯಂ ಕ್ಯಾರಿ *—ಇವನ ಸಮಾಜಸೇವೆ:—

Robert Clive ಇವನು ಹಿಂದೂಸ್ಥಾನದಿಂದ ಹೋದನಂತರ ಮತ್ತು Black Hole of Calcutta ಎಂಬ ದುರಂತ ಘಟನೆಯು ನಡೆದು ಆರು ವರ್ಷಗಳಲ್ಲಿ, ಎಂದರೆ, ಕ್ರಿ. ಶ. 1783 ರಲ್ಲಿ ಈ ದೇಶದ ದಲಿತರ ಮತ್ತು ಅಸ್ಪೃಷ್ಠತೆಯಿಂದ ನರಳುವಂಥಾ ಜನರ ಶುಶ್ರೂಷೆಯನ್ನು ಕೈಕೊಳ್ಳಲು Dr. Thomas ಇವನು ಭಾರತಕ್ಕೆ ಬಂದನು. ಇವನು ಬಂಗಾಳ ಪ್ರಾಂತವೆಲ್ಲಾ ಸುತ್ತಾಡಿ ಬಡಜನರ ಆರೋಗ್ಯ ನಿಮಿತ್ತ ಶ್ರಮಿಸುತಿದ್ದ ವಾರ್ತೆಯು ಇಂಗ್ಲೆಂಡಿನಲ್ಲೆಲ್ಲಾ ಹಬ್ಬಿತು. ಇವನ್ನನುಸರಿಸಿ William Carey ಇವನು ಈ ದೇಶಕ್ಕೆ ಬರಲು ಹಂಬಲಿಸಿದನು. ಆಗ ಕುಂಪೆನೀ

* ಇವನ ಭಾವಚಿತ್ರವನ್ನು ಬೇರೊಂದೆಡೆ ಕೊಡಲಾಗಿದೆ.

ಸರಕಾರವು ಕೆಲವು ಜನಕ್ಕೆ ಈ ದೇಶಕ್ಕೆ ಬರಲು ತಡೆಯನ್ನು ಹಾಕಿತ್ತು. ಹಾಗಿದ್ದರೂ ಸರಕಾರದ ಆ ಆಜ್ಞೆಯನ್ನು ಪ್ರತಿಭಟಿಸಿ ಇವನು 1793 ರ ನವಂಬರ್ ತಿಂಗಳಲ್ಲಿ ಕಲ್ಕತ್ತೆಯಲ್ಲಿ ಬಂದು ಇಳಿದನು.

William Carey ಇವನು ಬಂದ ಕೂಡಲೇ Dr. Thomas ಇವನೊಡಗೂಡಿ ಅಂದಿನ ವಿಶಾಲವಾದ ಬಂಗಾಳ ಪ್ರಾಂತದಲ್ಲೆಲ್ಲಾ ಸಂಚರಿಸಿದನು. ಅಲ್ಲಲ್ಲಿ ಜನರಿಗೆ ಕ್ರೈಸ್ತ ಮತೋಪದೇಶವನ್ನೂ ಮಾಡಿದನು. ಜನತೆಯನ್ನು ತನ್ನೆಡೆಗೆ ಆಕರ್ಷಿಸಿ ಜನಪ್ರೀಯನಾದ 'ಫಾದ್ರಿ'ಯೆಂದು ಪ್ರಸಿದ್ಧನಾದನು. ಹಿಂದೂಗಳು ಮತ್ತು ಮಹ್ಮದೀಯರು ಬಹು ಸಂಖ್ಯೆಯಲ್ಲಿ ಇವನ ಮಿತ್ರರಾದರು. ಅಂತೆಯೇ ಹಲವು ದೇಶೀಯರನ್ನು ಕ್ರೈಸ್ತಮತಕ್ಕೆ ಸೇರಿಸಿದನು. ಒಮ್ಮೆ ಇವನು ಗ್ರಾಮಾಂತರದಲ್ಲಿ ಸಂಚರಿಸುತ್ತಿದ್ದಾಗ ಒಂದು ಊರಿನ ಮಸೀದಿಯ ಹೊರಜಗಲಿಯಲ್ಲಿ ಒರ್ವನು ಖುರಾನ್ ಧರ್ಮಗ್ರಂಥವನ್ನು ಓದುತ್ತಿದ್ದುದನ್ನು ಕಂಡನು. William Carey ಇವನು ಆ ಮುದುಕನನ್ನು ಕುರಿತು ಇವನು ಓದುತ್ತಿರುವುದರ ಅರ್ಥವೇನೆಂದು ಕೇಳಿದನು. ಅದಕ್ಕೆ ಉತ್ತರವಾಗಿ ಆ ಮಹ್ಮದೀಯನು ಹೀಗಂದನು; "The meaning, Saheb, is another matter, I cannot tell that."

1796 ರ ಮೊದಲ್ಗೊಂಡು W. Carey ಇವನು ಹಲವು ಪ್ರಾಥಮಿಕ ಪಾಠಶಾಲೆಗಳನ್ನು ಅಲ್ಲಲ್ಲಿ ಸ್ಥಾಪಿಸಿ ಆಧುನಿಕ ವಿದ್ಯಾಕ್ರಮವನ್ನು ಜಾರಿಗೆ ತಂದನು. Fort William College ಇದರಲ್ಲಿ ಬಂಗಾಳೀ ಮತ್ತು ಸಂಸ್ಕೃತ ಭಾಷಾ ಪ್ರಾಧ್ಯಾಪಕನಾಗಿದ್ದುದರ ಜತೆಗೆ ಕಲ್ಕತ್ತೆಯಿಂದ ಹದಿನಾಲ್ಕು ಮೈಲು ದೂರದ ಶ್ರೀರಾಮ್‌ಪುರದಲ್ಲಿ ಒಂದು ಶಾಲೆಯನ್ನೂ ಸ್ಥಾಪಿಸಿದನು. 1814 ರಿಂದ ಅವನು ಒಂದು ಯೋಜನೆಯನ್ನು "for instructing the natives of India in European Science" ಎಂಬುದಾಗಿ ಆ ಶಾಲೆಯಲ್ಲಿ ಆಧುನಿಕ ರೀತಿಯಲ್ಲಿ ವಿದ್ಯಾಭ್ಯಾಸವನ್ನು ಈಯಲು ವ್ಯವಸ್ಥೆಯನ್ನು ಮಾಡಿದನು. ಶಾಲೆಗಳು, ಚಿಕಿತ್ಸಾ ಶಿಬಿರಗಳು ಮತ್ತು ಎಲ್ಲಾ ಮತಧರ್ಮಗಳ ಮೇಲೆ ಉಪನ್ಯಾಸಗಳು—ಹೀಗೆಯೇ ಅವನು ಎಡೆಬಿಡದೆ ದುಡಿದನು. ಸಹಗಮನ ಪದ್ಧತಿ, ನರಬಲಿ, ಚಿತ್ರಹಿಂಸೆ ಮೊದಲಾದ ದುಷ್ಟಪದ್ಧತಿಗಳನ್ನು ತೊಡೆದುಹಾಕಲು ಸರಕಾರದೊಡನೆ ನಿರಂತರ ಹೋರಾಡಿದನು.

ಶ್ರೀರಾಮ್‌ಪುರ ಪಟ್ಟದಲ್ಲಿ ಕ್ರೈಸ್ತಮತಕ್ಕೆ ಸಂಬಂಧಿಸಿದ ಹೊತ್ತಗೆಗಳನ್ನು ಮುದ್ರಿಸಲು ಇದ್ದ ಚಿಕ್ಕ ಛಾಪಖಾನೆಯನ್ನು ಇನ್ನಷ್ಟು ವಿಸ್ತರಿಸಿದನು. 1797 ರ ಕಾಲದಲ್ಲಿ ಇವನು ಭೂತಾನ್ ಪ್ರಾಂತದವರೆಗೂ ತನ್ನ ಮತಪ್ರಚಾರ ಕಾರ್ಯಾರ್ಥವಾಗಿ ಸಂಚರಿಸಿ ಭೂತಾನೀ, ಅಸ್ಸಾಮಿ ಇತ್ಯಾದಿ ಭಾಷೆಗಳನ್ನೂ ಕಲಿತು ಪ್ರವೀಣ ಭಾಷಾ ಶಾಸ್ತ್ರಜ್ಞನೆಂದೆನಿಸಿದನು.

**೫. ಕ್ಯಾರಿಯಿಂದ ಅರ್ಥಕೋಶ ಮತ್ತು ವ್ಯಾಕರಣ ಗ್ರಂಥಗಳು :—**

William Jones ಇವನಂತೆ William Carey ಇವನೂ ಭಾರತಕ್ಕೆ ತನ್ನ ಜೀವನವನ್ನು ತನ್ನ ಕಡೆದಿನಗಳ ವರೆಗೂ ಸವೆದನು. ಇವನು Baptist

ಕ್ರೈಸ್ತ ಪ್ರಚಾರ ಸಂಸ್ಥೆಗೆ ಸೇರಿದ್ದ ಶ್ರದ್ಧಾವಂತ ಕ್ರೈಸ್ತ ಮತೋಪದೇಶಕನಾಗಿ ತನ್ನ ಆಪ್ತರಾದ Rev. Ward ಮತ್ತು Marshman ಇವರೊಡನೆ ಸೇರಿ ಬೈಬಲನ್ನು ಬಂಗಾಳಿ ಮತ್ತು ಇನ್ನಿತರ ಕೆಲವು ಭಾರತೀಯ ಭಾಷೆಗಳಿಗೂ ಭಾಷಾಂತರಿಸಿ, ಬೈಬಲನ್ನು ಕುರಿತು ನೂರಾರು ಪುಸ್ತಕಗಳನ್ನು ಬರೆದು ಅವುಗಳನ್ನೆಲ್ಲಾ ತನ್ನ ಶ್ರೀರಾಮ್‌ಪುರ ಮುದ್ರಣಾಲಯದಲ್ಲಿ ಅಚ್ಚುಹಾಕಿ ಜನಕ್ಕೆ ಹಂಚಿದ ಮತ್ತು ಬಂಗಾಳೀ ಭಾಷಾ ಸೇವೆಯನ್ನು ಮಾಡಿದ ಇವನ ಅಪಾರ ಸಾಹಸವನ್ನು ಆ ವರೆಗೂ ಈ ದೇಶ ದಲ್ಲಿ ಇನ್ನಾವ ಕ್ರೈಸ್ತ ಗುರುವೂ ಪ್ರದರ್ಶಿಸಿರಲಿಲ್ಲ.

William Carey ಇವನು ನಲ್ವತ್ತು ವರ್ಷಗಳ ಕಾಲ ಈ ದೇಶದಲ್ಲಿ ಇದ್ದು ಸಾಧಿಸಿದ ಕೆಲಸಗಳು ಸುವರ್ಣಾಕ್ಷರದಲ್ಲಿ ಬರೆಯಲ್ಪಡತಕ್ಕಂಥಾಗಿವೆ. ಇವನ ಪಾಂಡಿತ್ಯವು ಮೇರೆ ಇಲ್ಲದಷ್ಟು ವಿಸ್ತಾರವಾಗಿತ್ತು. ಇಂಗ್ಲಿಷ್, ಫ್ರೆಂಚ್, ಜರ್ಮನ್, ಗ್ರೀಕ್, ಹೆಬ್ರ್ಯೂ, ಚೀನೀ, ಸಂಸ್ಕೃತ, ಪರ್ಶಿಯನ್, ಹಿಂದೂಸ್ಥಾನೀ, ಪಂಜಾಬೀ, ಬಂಗಾಳಿ, ಒರಿಯಾ, ಭೂತಾನೀ, ಮರಾಠೀ, ತೆಲುಗು ಮತ್ತು ಕನ್ನಡ ಭಾಷೆಗಳನ್ನೂ ಕಲಿತಿದ್ದನಲ್ಲದೆ ಈ ಎಲ್ಲಾ ಭಾಷೆಗಳಲ್ಲೂ ಗ್ರಂಥಗಳನ್ನು, ಕೆಲವಕ್ಕೆ ಅರ್ಥಕೋಶ ಗಳನ್ನೂ ಇನ್ನೂ ಕೆಲವಕ್ಕೆ ವ್ಯಾಕರಣಗಳನ್ನೂ ಬರೆದ ಒರ್ವ ವೀರ ಸಾಹಿತಿ! ಇವನು ಕನ್ನಡವನ್ನೂ ಬಲ್ಲವನಾಗಿದ್ದುದರಿಂದ ಆ ವಿಚಾರವಾಗಿ ಮುಂದೆ ಪ್ರತ್ಯೇಕ ವಾಗಿ ಹೇಳಲಾಗುವುದು.

ಬಂಗಾಳೀ ಭಾಷೆಯಲ್ಲಿ ನೂರಾರು ಬೈಬಲ್ ಮತ್ತು ಸಾಹಿತ್ಯ ಗ್ರಂಥಗಳನ್ನು ಬರೆದ ಇವನು 1801 ರಲ್ಲಿ "Dialogues to Acquire Bengali, ಇದನ್ನು ಬರೆದನು. ಅವನ ಬಂಗಾಳೀ–ಇಂಗ್ಲಿಷ್ ಅರ್ಥಕೋಶವು ಬಹು ದೊಡ್ಡ ಗಾತ್ರದ ಮತ್ತು Folio ಪುಟಗಳ ಮಹಾಗ್ರಂಥವಾಗಿ 1815ರಲ್ಲಿ ಪ್ರಕಟವಾಯಿತು. ಬಂಗಾಳೀ ಸಾಹಿತ್ಯಕ್ಕೆ ಕ್ರಾಂತಿಕಾರಕವಾದ ಹೊಸ ವರ್ಚಸ್ಸನ್ನು ಇವನು ಇತ್ತ ನೆಂದರೆ ಅದು ಅತ್ಯುಕ್ತಿಯಾಗಲಾರದು: ಬಂಗಾಳಿಯು ಇವನಿಗೆ ತನ್ನ ತಾಯ್ನುಡಿ ಗಿಂತ ವಿಶೇಷವಾಗಿ ಬಳಕೆಯಾಗಿತ್ತು. ಇವನು ಬಂಗಾಳೀ ಸಾಹಿತ್ಯಕ್ಕೆ ಇತ್ತ ಸೇವೆ ಯನ್ನು ಈ ರೀತಿ ಪ್ರಶಂಸಿಸಲಾಗಿದೆ—

"......William Carey......did much to form the Bengali language, and thus made Bengali literature possible......".

ಇವನ ಸಂಸ್ಕೃತ ವ್ಯಾಸಂಗವಾದರೋ ಅಷ್ಟೇ ಪರಿಪೂರ್ಣವಾದುದಾಗಿತ್ತು. ಪಾಣಿನಿಯ ವ್ಯಾಕರಣವನ್ನನುಸರಿಸಿ ಬರೆದ ಇವನ ಸಂಸ್ಕೃತ ವ್ಯಾಕರಣವು 1806ರಲ್ಲಿ ಮುದ್ರಣವಾಯಿತು. ಅದರೊಡನೆಯೇ J. Marshman ಇವನೊಡನೆ ಸೇರಿ ವಾಲ್ಮೀಕಿ ರಾಮಾಯಣವನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದನು.

ಇವನ ಇತರ ದೇಶೀಯ ಭಾಷಾಗ್ರಂಥಗಳ ಪೈಕಿ 1805 ರಲ್ಲಿ ಮರಾಠಿಭಾಷಾ ವ್ಯಾಕರಣವೂ, 1812ರಲ್ಲಿ ಪಂಜಾಬಿ ವ್ಯಾಕರಣವೂ, 1814 ರಲ್ಲಿ ತೆಲುಗು ವ್ಯಾಕ ರಣವೂ, 1817 ರಲ್ಲಿ ಕನ್ನಡ ವ್ಯಾಕರಣವೂ ಶ್ರೀರಾಮ್‌ಪುರ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾದುವು. ಇವುಗಳಲ್ಲಿ ತೆಲಗು ವ್ಯಾಕರಣವು 1821 ರಲ್ಲೂ

ಬಂಗಾಳೀ-ಇಂಗ್ಲಿಷ್ ಅರ್ಥಕೋಶವು 1827 ರಲ್ಲೂ ಪುನರ್ಮುದ್ರಣವಾದುವು.

William Carey ಇವನ ಪ್ರಯತ್ನವು ಇಷ್ಟಕ್ಕೆ ಕೊನೆಗೊಳ್ಳಲಿಲ್ಲ. F. C. G. Schooeter ಇವನು ಹಿಂದೆಯೇ ಬರೆದಿದ್ದ ಭೂತಾನೀ-ಇಂಗ್ಲಿಷ್ ಅರ್ಥಕೋಶವನ್ನು ಪರಿಷ್ಕರಿಸಿ 1819 ರಲ್ಲಿ ಎರಡನೇ ಬಾರಿಗೆ ಮುದ್ರಿಸಿ ಪ್ರಕಟಿಸಿದನು. ಇಷ್ಟರಲ್ಲಿ ಇವನ ಬೈಬಲ್ ಗ್ರಂಥಗಳು ಆರು ಭಾರತೀಯ ಭಾಷೆಗಳಿಗೆ ಪರಿವರ್ತನೆಯಾದುವು. ಇವನು ಬರೆದ ಬಂಗಾಳೀ ಭಾಷೆಯ New Testament ಇದು 23 ಭಾಷೆಗಳಲ್ಲಿ ಬರೆದು ಪ್ರಕಟವಾಗಿವೆ. ಕ್ರೈಸ್ತಧರ್ಮ ತತ್ವಗಳನ್ನು ಕುರಿತು ಐದು ಭಾಷೆಗಳಲ್ಲಿ ಬರೆದಿದ್ದಾನೆ. ಒಟ್ಟಾಗಿ ಇವನ ಗ್ರಂಥಗಳು 34 ಭಾಷೆಗಳಲ್ಲಿ ಬರೆಯಲ್ಪಟ್ಟು ಅವೆಲ್ಲಾ ಪ್ರಕಟವಾಗಿವೆಯೆಂಬರೆ ಯಾರನ್ನೂ ಬೆರಗಾಗಿಸುವ ವಿಚಾರವೇ ಆಗಿದೆ.

**೬. ಕ್ಯಾರಿ-ಇವನ ಶ್ರೀರಾಮ್‌ಪುರ ಮುದ್ರಣಾಲಯ :—**

ಶ್ರೀರಾಮ್‌ಪುರ ಕ್ರೈಸ್ತಮತಪ್ರಚಾರ ಕೇಂದ್ರವು ಕ್ರಿ. ಶ. 1780ರ ವರೆಗೂ Danish ಜನರ ವಸಾಹತಿಯಾಗಿದ್ದಿತು. Rev. J. Marshman ಇವನು ಅಲ್ಲಿ ಪ್ರಮುಖ ಕ್ರೈಸ್ತಮತ ಪ್ರಚಾರಕನಾಗಿದ್ದನು. ಅಲ್ಲಿ ಇದ್ದ ಚಿಕ್ಕ ಮುದ್ರಣಾಲಯವನ್ನು William Carey ಇವನ ಪ್ರಯತ್ನದಿಂದ ಬಹು ದೊಡ್ಡದಾಗಿ ವಿಸ್ತರಿಸಲಾಗಿತ್ತು. ಹಲವು ಭಾಷೆಗಳಲ್ಲಿ ಸಾಹಿತ್ಯ ಮತ್ತು ಬೈಬಲ್ ಗ್ರಂಥಗಳು ಅಲ್ಲಿ ಎಡೆಬಿಡದೆ ಮುದ್ರಣವಾಗುತ್ತಿದ್ದುವು. ಅದರಲ್ಲಿ ಅರಬೀ, ಪರ್ಷಿಯನ್, ದೇವನಾಗರಿ, ಬರ್ಮಾ, ಚೀನೀ, ಹೆಬ್ರ್ಯೂ, ಗ್ರೀಕ್, ಇಂಗ್ಲಿಷ್, ಬಂಗಾಳಿ, ಮರಾಠಿ, ಕನ್ನಡ, ತೆಲುಗು, ಒರಿಯಾ ಮತ್ತು ಪಂಜಾಬೀ ಭಾಷೆಗಳ ಅಕ್ಷರಗಳ ಅಚ್ಚುಮೊಳೆಗಳು ಇದ್ದು ಈ ಎಲ್ಲಾ ಭಾಷೆಗಳಲ್ಲಿ ಗ್ರಂಥಗಳು ಮುದ್ರಿಸಲ್ಪಡುತ್ತಿದ್ದುವು.

1812ನೇ ವರ್ಷದ ಮಾರ್ಚ್ ತಿಂಗಳ ಒಂದು ದಿನದಲ್ಲಿ ಅಲ್ಲಿ ಒಂದು ದುರಂತವು ಸಂಭವಿಸಿತು. ಆ ಮುದ್ರಣಾಲಯದಲ್ಲಿ ನೂರಾರು ಹಿಂದೂ ಮತ್ತು ಮಹಮ್ಮದೀಯ ಕೆಲಸಗಾರರು ದುಡಿಯುತಿದ್ದರು. ಆಗ ಪಕ್ಕನೆ ಒಂದು ಅಪಾಯಸೂಚಕ ಗಂಟೆಯು ಬಾರಿಸಲ್ಪಟ್ಟಿತು. ಕ್ಷಣಮಾತ್ರದಲ್ಲಿ ಅಲ್ಲೆಲ್ಲಾ ಹೊಗೆಯು ಆವರಿಸಿತು; ಮುದ್ರಣಾಲಯಕ್ಕೆ ಆದಾಗಲೇ ಬೆಂಕಿ ಹಿಡಿದಿತ್ತು. ಕೂಡಲೇ Rev. Ward ಮತ್ತು Rev. Marshman ಇವರು ಓಡಿಬಂದರು. ಕೆಲಸಗಾರರೆಲ್ಲಾ ತಂಬಿಗೆಗಳಲ್ಲಿ ನೀರನ್ನು ತಂದು ಬೆಂಕಿಯನ್ನು ನಂದಿಸಲು ಯತ್ನಿಸಿದರು. ಹೆಚ್ಚೇನೂ ಪ್ರಯೋಜನವಿಲ್ಲದಾಯಿತು. William Carey ಇವನ ಸುಮಾರು ಇಪ್ಪತ್ತು ವರ್ಷದ ಶ್ರಮವೆಲ್ಲಾ ಬೆಂದು ಬೂದಿಯಾಗಿತ್ತು. ಆ ಕಾಲಕ್ಕೆ ಎಣಿಸಬಹುದಾದ ಸುಮಾರು ಒಂದೂವರೆ ಲಕ್ಷ ರೂಪಾಯಿಗಳ ನಷ್ಟವಾಗಿತ್ತು.

ಈ ದುರಂತವು ಸಂಭವಿಸಿದಾಗ William Carey ಇವನು ಕಲ್ಕತ್ತೆಯಲ್ಲಿದ್ದನು. ಈ ವಾರ್ತೆಯನ್ನು ತಿಳಿದಕೂಡಲೇ ಅಲ್ಲಿಗೆ ಓಡಿಹೋದನು. ಎಲ್ಲವೂ ದೈವೇಚ್ಛೆಯೆಂದು ಭಾವಿಸಿದನು. ಅನಂತರ ಕುಂಪೆನೀ ಸರಕಾರದಿಂದಲೂ ಯೂರೋಪಿ

ನಿಂದ ಕ್ರೈಸ್ತಮತ ಪ್ರಚಾರ ಸಂಸ್ಥೆಗಳ ಮೂಲಕವಾಗಿಯೂ ಸಹಾಯಧನವನ್ನು ಪಡೆದು ಆ ಮುದ್ರಣಾಲಯಕ್ಕೆ ಪುನಃ ಜೀವವಿತ್ತನು. ಅಲ್ಲಿ ಬೆಂದು ಹೋದ ಹಲವು ಗ್ರಂಥಗಳೂ ಕಾಗದಪತ್ರಗಳೂ ಪುನಃ ಮುದ್ರಣವಾಗಿ ಪ್ರಕಟವಾಗಲು ಹಲವು ವರ್ಷಗಳೇ ಹಿಡಿದುವು. ಹೀಗೆ ಬೆಂದು ಭಸ್ಮವಾದ ಹಲವು ಭಾಷಾ ಗ್ರಂಥಗಳ ಹಸ್ತಪ್ರತಿಗಳ ಪೈಕಿ William Carey ಮತ್ತು John Hands ಇವನು ಕನ್ನಡದಲ್ಲಿ ಬರೆದ ಬೈಬಲ್ ಭಾಷಾಂತರಗಳೂ ಇದ್ದುವು.

### ೭. ಪ್ರಚಂಡ ಭಾಷಾ ಶಾಸ್ತ್ರಜ್ಞ—ವಿಲಿಯಮ್ ಕ್ಯಾರಿ :—

ಕ್ರಿ. ಶ. ೧೮ನೇ ಶತಮಾನಾಂತ್ಯದಲ್ಲಿ ಮತ್ತು ಕಳೆದ ಶತಮಾನದ ಪ್ರಾರಂಭದಲ್ಲಿ ಇತರ ನೂರಾರು ಪಾಶ್ಚಾತ್ಯ ವಿದ್ವಾಂಸರಿಗೆ ಸ್ಫೂರ್ತಿಯನ್ನೊದಗಿಸಿದ ಉದ್ಧಾಮ ಪಂಡಿತನು ಈ Rev. William Carey ಇವನು. ಇವನು ನೇಪಾಳೀ, ಭೂತಾನೀ ಮತ್ತು ಅಸ್ಸಾಮಿ ಭಾಷೆಗಳ ಸಹಿತವಾಗಿ ಒಟ್ಟು ಮೂವತ್ತೂರು ಭಾಷೆಗಳನ್ನು ತಿಳಿದಿದ್ದ ಮೇಧಾವಿಯಾಗಿದ್ದನು. ತನ್ನ ವಿದ್ವಾಂಸ ಮಿತ್ರರಾದ Rev. J. Marshman ಮತ್ತು Rev. W. Ward ಇವರೊಡನೆ ಸೇರಿ ಬಂಗಾಳದ ಶ್ರೀರಾಮಪುರ ಪಟ್ಟಣವನ್ನು ಒಂದು ವಿದ್ಯಾಕ್ಷೇತ್ರವಾಗಿಯೂ ಕೈಗಾರಿಕಾ ಕೇಂದ್ರವಾಗಿಯೂ ಪರಿವರ್ತಿಸಿದ ಸಾಹಸವು ಅವನದಾಗಿದೆ. ತಾನು ಕಲಿತಿದ್ದ ಎಲ್ಲಾ ಭಾಷೆಗಳನ್ನು ಕುರಿತಾಗಿ ಒಂದು ಐತಿಹಾಸಿಕ ಅನ್ವೇಷಣೆಯನ್ನೆಸಗಿ ವಿದ್ವತ್ಪೂರ್ಣವಾದ ಒಂದು ವರದಿಯನ್ನು ಬರೆದನು. ಸಂಸ್ಕೃತ, ಚೀನೀ, ಬಂಗಾಳೀ, ಹಿಂದೀ, ಕಾಶ್ಮೀರೀ ಡೋಗ್ರಾ, ಪೂಚ್, ಸಿಂಧೀ, ಕಚ್ಛ್, ಗುಜರಾಥೀ, ಕೊಂಕಣಿ, ಪಂಜಾಬೀ, ಬಿಕಾಸಿರೀ, ಮಾರವಾರೀ, ಜೈಪುರೀ, ಉದಯಪುರೀ, ಹರೂತೀ, ಮಾಳ್ವ, ಮೈಥಿಲೀ, ನೇಪಾಳೀ, ಅಸ್ಸಾಮಿ, ಒರಿಯಾ, ತೆಲುಗು, ಕನ್ನಡ, ಬಲೂಚೀ, ಪುಷ್ಟೋ, ಖಾಸೀ, ಬರ್ಮಿ ಹೀಗೆ ಹಲವು ಭಾಷೆ ಮತ್ತು ಉಪಭಾಷೆಗಳನ್ನೆಲ್ಲಾ ಶಾಸ್ತ್ರೀಯವಾಗಿ ಮತ್ತು ತುಲನಾತ್ಮಕವಾಗಿ ಅಭ್ಯಸಿಸಿ ಅವುಗಳ ಮೇಲೆ ತನ್ನ ಟೀಕೆಯನ್ನು ಬರೆದದ್ದು ಮುಂದಿನ ಭಾಷಾ ಶಾಸ್ತ್ರಜ್ಞರಿಗೆ ತುಂಬಾ ಪ್ರಯೋಜನವಾಯಿತು. William Carey ಇವನು ಅದೆಷ್ಟು ಆಳವಾಗಿ ಇವುಗಳ ವಿಚಾರ ವಿಮರ್ಶೆಯನ್ನು ಮಾಡಿದನೆಂಬುದಕ್ಕೆ ಅವನ ಅಪಾರ ಬರೆವಣಿಗೆಯೇ ಸಾಕ್ಷಿಯಾಗಿವೆ. ಕ್ರಿ. ಶ. 1816 ರಲ್ಲಿ ಅವನು ಬರೆದ ಭಾಷಾಶಾಸ್ತ್ರ ಪ್ರಬಂಧದಲ್ಲಿ ಒಂದೆಡೆ ಈ ರೀತಿ ಹೇಳಿದ್ದು ಅವನ ಭಾಷಾಜ್ಞಾನಕ್ಕೆ ಒಂದು ನಿದರ್ಶನವಾಗಿದೆ :—

"Our ideas relative to the number of languages which sprang from Sanskrit were far from being accurate. The fact is, that in the point of view, India is today almost an unexplored country. That eight or nine languages had sprung from that great philological root, the Sanskrit, we well know. But we imagined that the Tamil, the Bengalee, the Maharatta, the Punjabee, the Karnata, the Telugu, the Guzarattee, the Orissa,

and the Hindustanee comprised nearly all the collateral branches springing from the Sanskrit language......"

William Carey ಇವನಿಗಿಂತ ಹಿಂದಿನ ಬಹು ಭಾಷಾ ಪರಿಣಾತನೂ ಭಾಷಾ ಶಾಸ್ತ್ರಜ್ಞನೂ ಆಗಿದ್ದ Sir William Jones ಇವನು ಭಾರತೀಯ ಭಾಷಾ ಶಾಸ್ತ್ರ of N. Halhed, C. Wilkins ಮೊದಲಾದವರೊಡನೇ ಸೇರಿ ತಕ್ಕ ತಳಹದಿಯನ್ನು ಹಾಕಿದ್ದನು. ಅದನ್ನು ಮುಂದುವರಿಸಿ ಅದಕ್ಕೆ ತಕ್ಕ ರೂಪನ್ನೂ ಕೊಟ್ಟವರು Sir Henry Colebrooke ಮತ್ತು Dr. William Carey ಇವರು. ಆದರೆ ಇವರೆಲ್ಲರೂ ಭಾಷಾಶಾಸ್ತ್ರಕ್ಕೆ ಮಾತ್ರ ತಮ್ಮ ಪರಿಶ್ರಮ ವನ್ನು ವಿನಿಯೋಗಿಸದೆ ಇತರ ಹಲವು ಕ್ಷೇತ್ರಗಳಲ್ಲೂ ದುಡಿದರು. ಆದರೆ ಇವರ ನಂತರ ಕ್ರಿ. ಶ. 1830ರ ಕಾಲದಲ್ಲಿ Dr. Carey ಇವನ ಆದರ್ಶವನ್ನನುಸರಿಸಿ ಭಾರತೀಯ ಭಾಷಾಶಾಸ್ತ್ರದ ಪಿತಮಹಾನೆಂದೆನಿಸಿದವನು B. H. Hodgson ಇವನು. ಇವನ ವಿಷಯವಾಗಿ ಬೇರೆಡೆಯಲ್ಲಿ ಹೇಳಲಾಗಿದೆ.

Dr. William Carey ಇವನು ತಾನು ಕಲಿತ ಹಲವಾರು ಭಾಷೆಗಳ ಶಬ್ದಮಂಜರಿಗಳನ್ನೂ, ಸಂಸ್ಕೃತ, ಬಂಗಾಳೀ, ಪಂಜಾಬೀ, ಒರಿಯಾ, ಮರಾಠಿ, ಕನ್ನಡ, ತೆಲುಗು ಇತ್ಯಾದಿ ವ್ಯಾಕರಣಗಳನ್ನೂ ಬಂಗಾಳೀ, ಮರಾಠಿ, ಪಂಜಾಬೀ, ಅರ್ಥಕೋಶಗಳನ್ನೂ ಇನ್ನೆಷ್ಟೋ ಬಗೆಯ ನೂರಾರು ಗ್ರಂಥಗಳನ್ನೂ ಈ ದೇಶದ ಭಾಷೆಗಳಲ್ಲಿಯೇ ಬರೆದ ಸಾಹಸವು ಹಿಂದಿನ ಮತ್ತು ಇಂದಿನ ಕಾಲದ ಭಾರತೀಯ ಪಂಡಿತರನ್ನೆಲ್ಲಾ ನಾಚಿಕೆಗೊಳಪಡಿಸುವಂಥಾದಾಗಿದೆ. ಚೀನೀ ಭಾಷೆಯನ್ನೂ ಕಲಿತು ಅದರಲ್ಲೂ ಬೈಬಲ್ ಗ್ರಂಥಗಳನ್ನು ಬರೆದನಲ್ಲದೆ ಭಾರತೀಯ ಮತ್ತು ಚೀನೀ ಭಾಷೆ ಗಳಿಗೆ ಇರುವ ಬಾಂಧವ್ಯವನ್ನು ಕುರಿತು ಶಾಸ್ತ್ರೀಯವಾಗಿ ಅನ್ವೇಷಿಸಿ ಗ್ರಂಥಗಳನ್ನು ಬರೆದ ಸಾಹಸವೂ ಇವನದಾಗಿದೆ.

೮. ಸಾಹಿತ್ಯದಲ್ಲಿ ಹೇಗೋ ಹಾಗೆಯೇ ವ್ಯವಸಾಯದಲ್ಲೂ :—

Rev. William Carey ಇವನ ವಿವಿಧ ಬಗೆಯ ಚಟುವಟಿಕೆಗಳು ಎಂದಿನಂತೆ ಮುಂದುವರಿದುವು. ಭಾರತೀಯ ಧರ್ಮಶಾಸ್ತ್ರಗಳು, ವೇದಗಳು, ಪುರಾಣ ಗಳು, ಪ್ರಾಚೀನ ಸಂಸ್ಕೃತ ಕಾವ್ಯಗಳು ಇತ್ಯಾದಿಗಳಲ್ಲೆಲ್ಲಾ ಅಪಾರ ಜ್ಞಾನನ್ನು ಸಂಪಾ ದಿಸಿದ ಅವನು ಅವುಗಳನ್ನು ಕುರಿತು ಇಂಗ್ಲೀಷ್‌ನಲ್ಲೂ ಬಂಗಾಳಿಯಲ್ಲೂ ಗ್ರಂಥಗಳನ್ನು ಬರೆದು ಈ ದೇಶದ ಜನಕ್ಕೆ ವಿಚಾರಜ್ಞಾನವನ್ನೀಯಲು ಶ್ರಮಿಸಿದನು. ಇವನ ಅಪಾರ ಬರವಣಿಗೆಗಳು 1832 ರ ಒಳಗಾಗಿ ಗ್ರಂಥರೂಪದಲ್ಲಿ ಪ್ರಕಟವಾದುವು. ಅವುಗಳೊಡ ನೆಯೇ ಅವನ ಅರ್ಥಕೋಶ ಮತ್ತು ವ್ಯಾಕರಣ ಗ್ರಂಥಗಳೂ ಪುನರ್ಮುದ್ರಣವಾದುವು. Rev. Joshua Marshman ಇವನೊಡನೆ ಸೇರಿ ಬರೆದ ಮತ್ತು 1806 ರಲ್ಲಿ ಮೊದಲನೇ ಬಾರಿಗೆ ಪ್ರಕಟವಾದ ಅವನ ರಾಮಾಯಣವು 2000 folio ಪುಟಗಳಲ್ಲಿ ಮೂರು ಕಾಂಡಗಳಾಗಿ ಮುದ್ರಣವಾಗಿತ್ತು. 'ಹಿತೋಪದೇಶ'ವನ್ನೂ ಹಿಂದೆಯೇ ಭಾಷಾಂತರಿಸಿ ಪ್ರಕಟಿಸಿದ್ದನು.

Dr. William Carey ಇವನು ಹಲವು ಭಾಷೆಗಳಲ್ಲಿ ಬರೆದ ನೂರೈವತ್ತಕ್ಕೂ ಮಿಕ್ಕಿ ಗ್ರಂಥಗಳೂ ಅವುಗಳ ಪುನರಾವೃತ್ತಿಗಳೂ ಇಂದಿಗೂ ನೂರಾರು ಗ್ರಂಥಭಂಡಾರಗಳಲ್ಲಿ ನಾಲ್ಕಾರು ಕಪಾಟುಗಳುದ್ದಕ್ಕೂ ಅಲಂಕೃತವಾಗಿವೆ. ಅವನು ಎಷ್ಟು ಪುಸ್ತಕಗಳನ್ನು ಬರೆದನೋ ಅಷ್ಟೇ ಪುಸ್ತಕಗಳು ಅವನ ವಿಷಯವಾಗಿ ಅವನ ಮಹತ್ಸಾಧನೆಯನ್ನು ಕುರಿತು ಬರೆಯಲ್ಪಟ್ಟಿವೆ. ಹೀಗೆ ಬರೆದ ಗ್ರಂಥಗಳ ಪೈಕಿ Eustace Carey ಇವನು 1836 ಬರೆದ "Carey's Memoir" ಎಂಬ 630 demy ಪುಟಗಳ ಗ್ರಂಥವು ಪ್ರಸಿದ್ಧವಾಗಿದೆ.. Rev. W. Swan ಇವನು ಈ ಉದ್ಧಾಮ ಸಾಹಿತಿಯ ವಿಚಾರವಾಗಿ ಬರೆಯುತ್ತಾ ಅವನ ಗುಣಕಥನವನ್ನು ಹೀಗೆ ಮಾಡುತ್ತಾನೆ :—

"Dr. William Carey....... of the Baptist Church... was meek, humble, benevolent, undesigning without what some call tact..."

William Carey ಇವನು ತನ್ನ ಸಮಾಜ ಸೇವೆ, ಭಾಷಾ ಸೇವೆ ಮತ್ತು ಕ್ರೈಸ್ತಮತಬೋಧನೆ, ಇವುಗಳ ಜತೆಗೆ ವ್ಯವಸಾಯದಲ್ಲೂ ವಿಶೇಷ ಅಭಿರುಚಿಯನ್ನು ತೋರಿಸಿದ್ದನು. ಅಖಿಲ ಭಾರತ ವ್ಯವಸಾಯ ಸಂಘ, ಹಣ್ಣುಹಂಪಲು ಬೆಳೆಸುವವರ ಸಂಸ್ಥೆ ಇತ್ಯಾದಿಗಳನ್ನು ಸ್ಥಾಪಿಸಿ ವಿಶಾಲವಾದ ಹೊಲ ಮತ್ತು ತೋಟಗಳನ್ನು ತೆರೆದು ಈ ದೇಶದ ಜನಕ್ಕೆ ಆಧುನಿಕ ವ್ಯವಸಾಯ ಕ್ರಮವನ್ನು ಅನುಸರಿಸಲು ತಕ್ಕ ತಿಳುವಳಿಕೆಯನ್ನು ಕೊಟ್ಟನು. ಅವನು ಸ್ಥಾಪಿಸಿದ್ದ Botanical Garden ಇದು ಬಹು ಪ್ರಸಿದ್ಧವಾದ ವ್ಯವಸಾಯ ಕೇಂದ್ರವಾಗಿತ್ತು. ತತ್ವಶಾಸ್ತ್ರ, ಭಾಷಾಶಾಸ್ತ್ರ, ಕ್ರೈಸ್ತಮತ ಬೋಧೆ, ಸಮಾಜ ಜೀವನ ಮೊದಲಾದುವುಗಳ ಬಗ್ಗೆ ಅವನು ಅಸಂಖ್ಯ ಬಾರಿ ಬಂಗಾಳದ ಹಲವೆಡೆಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾ ಇದ್ದುದಲ್ಲದೆ ವ್ಯವಸಾಯದ ಬಗ್ಗೆಯೂ ಅವನು ಅಷ್ಟೇ ಉತ್ಸಾಹದಿಂದ ಜನಕ್ಕೆ ಬೋಧಿಸುತ್ತಾ ಭಾಷಣಗಳನ್ನೂ ಕೊಡುತ್ತಾ ಇದ್ದನು.

## ೯. ಮಾನವೀಯನಾದ ಒಂದು ಶ್ರೇಷ್ಠ ವ್ಯಕ್ತಿತ್ವ :—

William Carey ಇವನ ಪತ್ನಿಯು 1807 ರಲ್ಲಿಯೇ ಮೃತಳಾಗಿದ್ದಳು. ಅನಂತರ 1811 ರಲ್ಲಿ ಅವನು ಪುನರ್ವಿವಾಹವಾಗಿದ್ದನು. ತನ್ನ ಸಾಂಸಾರಿಕ ಜೀವನವು ಸಂತೋಷದಾಯಕವಾಗಿಲ್ಲದಿದ್ದರೂ ಲೋಕದ ಜನರ ಶುಭಕ್ಕಾಗಿ ಹಗಲಿರುಳು ಶ್ರಮಿಸಿದನು. ಈ ದೇಶದಲ್ಲಿ ಪ್ರಚಲಿತವಿದ್ದ ಸಹಗಮನ, ಕಾಳಿಗೆ ನರಬಲಿ ಕೊಡುವುದು, ಗಂಗಾನದಿಗೆ ಶಿಶುಗಳನ್ನು ಎಸೆಯುವುದು ಇತ್ಯಾದಿ ಕ್ರೂರನೀತಿಗಳನ್ನು ಕಟುವಾಗಿ ಖಂಡಿಸಿ ಸರಕಾರದೊಡನೆ ಅವುಗಳನ್ನು ನಿಲ್ಲಿಸಲೆಂದು ಹೋರಾಡುತ್ತಲೇ ಇದ್ದನು. ವಿಧವಾ ವಿವಾಹವನ್ನು ಜಾರಿಗೆ ತರಲು ಒಂದು ಚಳುವಳಿಯನ್ನೇ ಎಬ್ಬಿಸಿದನು.

Dr. Rev. Carey ಇವನ ಸೇವೆ ಬರೇ ಸಂಕೀರ್ಣವಾದ ಸಮಾಜ ಸೇವೆಯಲ್ಲ; ಅದು ಲೋಕಸೇವೆಯೇ ಆಗಿತ್ತು. 1829 ನೇ ವರ್ಷದಲ್ಲಿ ಒಂದು ಆದಿತ್ಯವಾರ ದಿನ ಬೆಳಗ್ಗೆ ಒಂದು ಕ್ರೈಸ್ತ ಗುಡಿಯಲ್ಲಿ ಧರ್ಮಭೋಧನೆಯಲ್ಲಿ ನಿರತನಾಗಿ

ದ್ದಾಗ Governor General Lord W. Bentinck ಇವನು ಒಂದು ಸರಕಾರೀ ಪತ್ರವನ್ನು ಭಾಷಾಂತರಿಸಲಿಕ್ಕೆಂದು ಅವನಿಗೆ ಕಳುಹಿಸಿಕೊಟ್ಟನು. ಆ ಪತ್ರವಾದರೋ ಸಹಗಮನ ಪದ್ಧತಿಯನ್ನು ರದ್ದುಮಾಡುವ ಆಜ್ಞಾಪತ್ರವಾಗಿತ್ತು. ಅದನ್ನು ನೋಡಿದ ಕೂಡಲೇ ಆ ಮಹಾಧರ್ಮ ಗುರುವಿನ ಮುಖವು ಅರಳಿತು. ಕೂಡಲೇ ಅವನು ತನ್ನ ಉಪನ್ಯಾಸವನ್ನು ನಿಲ್ಲಿಸಿದನು :—

"Someone else must preach for me today. I will not delay a minute translating this document, lest some poor women are burnt in the interval......."

ಎಂದು ಹೇಳುತ್ತಾ ಅಲ್ಲಿಯೇ ಒಂದೆಡೆ ಕುಳಿತು ಆ ಪತ್ರವನ್ನು ದೇಶೀಯ ಭಾಷೆಗಳಿಗೆ ಪರಿವರ್ತಿಸಿ ಗವರ್ನರ್ ಜನರಲ್ ಸಾಹೇಬನಿಗೆ ಕಳುಹಿಸಿಕೊಟ್ಟನು. ತನ್ನ ಹತ್ತಾರು ವರ್ಷಗಳ ಕಾಲದ ಪ್ರಯತ್ನವು ಸಾರ್ಥಕವಾಯಿತೆಂದು ಹಿಗ್ಗಿದನು. ಅದೇ ದಿನ ಸರಕಾರವು ಅಂದಿನ ಆ ಕ್ರೂರ ಪದ್ಧತಿಯನ್ನು ಖಂಡಿಸುವ ಇಸ್ತಿಹಾರು ನಾಮೆಯನ್ನು ಎಲ್ಲಾ ದೇಶೀಯ ಭಾಷೆಗಳಲ್ಲೂ ಮುದ್ರಿಸಿ ಪ್ರಕಟಿಸಿತು.

Dr. William Carey ಇವನು ತನ್ನ ಕಡೇ ದಿನಗಳವರೆಗೂ ಕಲ್ಕತ್ತಾ Fort William College ಇದರ ಸಂಸ್ಕೃತ, ಬಂಗಾಳೀ ಮತ್ತು ಮರಾಠೀ ಭಾಷೆಗಳ ಪ್ರಾಧ್ಯಾಪಕನಾಗಿಯೂ ಇದ್ದನು. ಅವನು ಒರ್ವ ಕ್ರೈಸ್ತ ಗುರುವಾಗಿದ್ದನಾದರೂ ತನ್ನ ಅಪಾರ ಸಾಹಿತ್ಯ, ಭಾಷಾ ಸೇವೆ ಮತ್ತು ಸಮಾಜ ಸೇವೆಯಿಂದ ಒರ್ವ ಶುದ್ಧ ವೇದಾಂತಿಯಂತೆ ಮತ್ತು ಆಧುನಿಕ ಋಷಿಯಂತೆ ತನ್ನ ಕಾಲವನ್ನು ಕಳೆದನು. ಅವನು 1834 ನೇ ವರ್ಷದ ಜೂನ್ ತಿಂಗಳಲ್ಲಿ ತನ್ನ 73 ನೇ ವರ್ಷ ಪ್ರಾಯದಲ್ಲಿ ಗತಿಸಿದನು. ತನ್ನ ಬಾಳಿನ 41 ವರ್ಷ ಕಾಲವನ್ನು ಭಾರತದಲ್ಲಿ ಮತ್ತು ಭಾ ರ ತ ದ ಸರ್ವತೋಮುಖದ ಅಭಿವೃದ್ಧಿಯ ಸಲುವಾಗಿಯೇ ಕಳೆದನು. Marquess of Hastings ಇವನು ಆ ಆದರ್ಶ ಜೀವಿಯನ್ನು ಕುರಿತು "a Cheerful old man" ಎಂದು ಹೇಳುತ್ತಿದ್ದನು. Rev. Carey ಇವನದು ಒಂದು ತುಂಬು ಜೀವನ! ಸಾರ್ಥಕವಾದ ಬಾಳು! ಮಾನವೀಯವಾದ ಒಂದು ಶ್ರೇಷ್ಠ ವ್ಯಕ್ತಿತ್ವ! ಅವನ ಸಮಾಧಿ ಕಲ್ಲಿನಲ್ಲಿ ಅವನ ಧೈನ್ಯಗುಣಕ್ಕನುಸಾರವಾಗಿ ಮತ್ತು ಅವನ ಇಚ್ಛೆಯಂತೆ ಬರೇ ಇಂತಿಷ್ಟು ಮಾತ್ರ ಬರೆಯಲ್ಪಟ್ಟಿದೆ :—

"William Carey–Born Nov. 17, 1761; Died..... (June 1834)
A Wretched, poor and helpless worm–On Thy kind arms I Fall"

ಇಂಥಾ ಪುಣ್ಯಜೀವಿಯು ತಾನು ಪ್ರಾರಂಭಿಸಿದ ಹಲವು ಬಗೆಯ ಸೇವಾ ಕಾರ್ಯಕ್ರಮಗಳನ್ನು ಸರಕಾರದ ತನ್ನ ಪ್ರತಿಭಾವಂತ ಮಿತ್ರರ ಪಾಲಿಗೆಬಿಟ್ಟು ತೆರಳಿದನು ; ಅಲ್ಲದೆ ತನ್ನ ಮಿತ್ರನಾದ Rev. J. Marshman ಇವನೂ ಆ ಹಲವಾರು ಯೋಜನೆಗಳನ್ನು, ಅದರಲ್ಲೂ ತನಗೆ ಪ್ರಿಯವಾದ ಕ್ರೈಸ್ತಮತ ಬೋಧೆ, ಭಾರತೀಯ ಗ್ರಂಥಗಳ ಪ್ರಕಟಣೆ, ತನ್ನ ಮುದ್ರಣಾಲಯ, ತನ್ನ ವ್ಯವಸಾಯ ಕ್ಷೇತ್ರ ಇತ್ಯಾದಿಗಳಲ್ಲಿ ಆಸಕ್ತಿ

ವಹಿಸಿ ದುಡಿಯುವನೆಂಬ ತನ್ನ ಇಚ್ಛೆಯನ್ನು ಪ್ರಕಟಪಡಿಸಿದ್ದನು :—

"After I am gone, Brother Marshman will let the cows into my garden".

೧೦. ಪ್ರೊ. ಹೊರೇಸ್ ವಿಲ್ಸನ್*—ಇವನು ಹಿಂದೂಸ್ಥಾನದಲ್ಲಿ :—

Prof. Horace Hayman Wilson ಇವನು ಮತ್ತೊರ್ವ ಧೀಮಂತ ಸಾಹಿತಿ, ಕವಿ, ವಿಮರ್ಶಕ, ಸಂಶೋಧಕ, ಇತಿಹಾಸಕಾರ, ಭಾಷಾಂತರಕಾರ, ತತ್ವಶಾಸ್ತ್ರಜ್ಞ, ನ್ಯಾಯಶಾಸ್ತ್ರಜ್ಞ, ವೈದ್ಯಕೀಯತಜ್ಞ, ವೇದಾಂತಿ ಇತ್ಯಾದಿ ! ಇವನ ಭಾಷಾ ಪಾಂಡಿತ್ಯವೂ ಕೇವಲ ಒಂದೆರಡರಲ್ಲಿ ಮುಗಿದಿರಲಿಲ್ಲ. Jones Colebrooke ಮತ್ತು Carey ಇವರಂತೆಯೇ ಇಂಗ್ಲಿಷ್, ಜರ್ಮನಿ, ಲ್ಯಾಟಿನ್, ಪರ್ಷಿಯನ್, ಸಂಸ್ಕೃತ, ಹಿಂದೂಸ್ಥಾನೀ, ಬಂಗಾಳೀ ಮೊದಲಾದುವುಗಳಲ್ಲಿ ಸಮರಸವಾದ ವಿದ್ವತ್ತನ್ನು ಸಂಪಾದಿಸಿ ಅವುಗಳಲ್ಲೆಲ್ಲಾ ಹಲವು ವಿಮರ್ಶಾ ಗ್ರಂಥಗಳು, ಸಂಶೋಧನಾ ವಿವರಗಳು, ಭಾಷಾಂತರಗಳು ಮತ್ತು ವಿಮರ್ಶೆಗಳನ್ನು ಮೇಲಿಂದ ಮೇಲೆ ಬರೆದಿದ್ದಾನೆ. ದಕ್ಷಿಣ ಹಿಂದೂಸ್ಥಾನದ ಭಾಷೆಗಳಲ್ಲಿ ತಮಿಳು ಮತ್ತು ಕನ್ನಡವನ್ನೂ ಸಾಕಷ್ಟು ಕಲಿತಿದ್ದನು.

Prof. H. H. Wilson ಇವನು ಕಳೆದ ಶತಮಾನದ ಪ್ರಾರಂಭದಲ್ಲಿ ಕುಂಪೆನೀ ಸರಕಾರದ ಒರ್ವ ವೈದ್ಯಕೀಯ ತಜ್ಞನಾಗಿ ಈ ದೇಶಕ್ಕೆ ಬಂದನು. ಓಕ್ಸ್‌ಫರ್ಡ್‌ನಲ್ಲಿ ವಿದ್ಯಾಭ್ಯಾಸವನ್ನು ಪಡೆದಿದ್ದ ಇವನು ಸಂಸ್ಕೃತ, ಪರ್ಶಿಯನ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ನಿಸ್ಸೀಮ ಪಂಡಿತನೆಂದೆನ್ನಿಸಿದ್ದನು. ಕೇವಲ ಯುವಕನಾಗಿದ್ದ ಇವನು Jonathan Scot, Henry Colebrooke ಮತ್ತು William Carey ಇವರ ಮತ್ತು ಕೆಲವು ದೇಶೀಯ ಪಂಡಿತರ ಸಹವಾಸದಿಂದ ಭಾರತೀಯ ಪೌರಾಣಿಕ ಗ್ರಂಥಗಳ ಅಧ್ಯಯನಕ್ಕೆ ತೊಡಗಿ ಶೀಘ್ರದಲ್ಲಿಯೇ ಶ್ರೇಷ್ಠ ವಿದ್ವಾಂಸನೆಂದು ಪರಿಗಣಿಸಲ್ಪಟ್ಟನು.

Prof. Wilson ಇವನು ಸುಮಾರು ಮೂವತ್ತು ವರ್ಷಗಳ ಕಾಲ ಈ ದೇಶದಲ್ಲಿ ಇದ್ದನು. Royal Asiatic Society ಇದರ ಕಾರ್ಯದರ್ಶಿಯಾಗಿ ಬಹುಕಾಲವಿದ್ದು ಅದರ ಅಭಿವೃದ್ಧಿಗೆ ನಿಷ್ಠೆಯಿಂದ ದುಡಿದನು. ಭಾರತೀಯ ವಿದ್ಯೆ ಮತ್ತು ಸಾಹಿತ್ಯದ ವಿಚಾರವಾಗಿ ಇವನು ಬರೆದ ಲೇಖನಗಳೂ ಕೊಟ್ಟ ಉಪನ್ಯಾಸಗಳೂ ಸಹಸ್ರಾರು Folio ಪುಟಗಳ ಗ್ರಂಥಗಳಾಗಿವೆ. ಇವನು 1833 ರಲ್ಲಿ ಓಕ್ಸ್‌ಫರ್ಡ್ ವಿಶ್ವವಿದ್ಯಾಲಯದ Boden Professor of Sanskrit ಎಂಬ ಹುದ್ದೆಗೆ ನೇಮಕವಾಗಲು ಅವನು ಹಿಂದೂಸ್ಥಾನದಿಂದ ಸ್ವದೇಶಕ್ಕೆ ಹಿಂದಿರುಗಿ ಅಲ್ಲಿಂದಲೂ ತನ್ನ ಸಾಹಿತ್ಯ ವ್ಯಾಸಂಗ, ಸಂಶೋಧನೆ ಮತ್ತು ಬರೆವಣಿಗೆ ಕೆಲಸಗಳನ್ನು ಮುಂದುವರಿಸಿದನು. 1833 ರಿಂದ 1855 ರ ವರೆಗೂ ಇಂಗ್ಲೆಂಡಿನ Royal Asiatic Society ಇದರ Director ಆಗಿಯೂ ಅನಂತರ ನಾಲ್ಕು ವರ್ಷಗಳ

* ಇವನ ಭಾವಚಿತ್ರವನ್ನು ಬೇರೊಂದೆಡೆಯಲ್ಲಿ ಕೊಡಲಾಗಿದೆ.

ಕಾಲ ಅದರ ಅಧ್ಯಕ್ಷನಾಗಿಯೂ ಇದ್ದನು. Prof. Wilson ಇವನು ಅದೆಷ್ಟು ದೊಡ್ಡ ಸಾಹಿತಿಯೋ ಅಷ್ಟೇ ಪರಿಣತಿಯನ್ನು ಹೊಂದಿದ ವಿದ್ಯಾ ತಜ್ಞನೂ ಆಗಿದ್ದು ಈ ದೇಶದ ವಿದ್ಯಾಭಿವೃದ್ಧಿಯ ನಿಮಿತ್ತವಾಗಿಯೂ ಕುಂಪೆನೀ ಸರಕಾರಕ್ಕೆ ತನ್ನ ಅಧಿಕೃತ ಸಲಹೆಗಳನ್ನೂ ಆಗಿಂದಾಗ್ಗೆ ನೀಡಿದ್ದನು.

**೧೧. ಪ್ರೊ. ವಿಲ್ಸನ್ – ಇವನು ಭಾರತೀಯ ನಾಟಕಕಲೆಯನ್ನು ಕುರಿತು :–**

Prof. Wilson ಇವನೂ ಕೇವಲ ಒಂದೇ ಅಭಿರುಚಿಗೆ ಒಳಗಾಗದೆ ಸಾಹಿತ್ಯದ ವಿವಿಧ ದಿಶೆಯಲ್ಲಿ ಅಪಾರವಾಗಿ ದುಡಿದ ಒರ್ವ ಅಪೂರ್ವ ವಿದ್ವಾಂಸನಾಗಿದ್ದನು. ಇವನು ಭಾರತೀಯ ನಾಟಕಕಲೆಯನ್ನು ಕುರಿತು ಗ್ರಂಥಗಳನ್ನು ಬರೆದುದಲ್ಲದೆ ಹಲವು ಸಂಸ್ಕೃತ ನಾಟಕಗಳನ್ನು ಭಾಷಾಂತರಿಸಿದನು. ಭಾರತೀಯ ನಾಟ್ಯಾಶಾಸ್ತ್ರದ ಮೇಲೆ "Select specimens of the theatre of Hindus" ಎಂದು ಮೂರು ಕಾಂಡಗಳ ಉದ್ಗ್ರಂಥವನ್ನು ಬರೆದದ್ದು 1827 ರಲ್ಲಿ ಪ್ರಕಟವಾಯಿತು. ಇದರಲ್ಲಿ ಅವನು ಆಗ ಬೆಳಕಿಗೆ ಬಿದ್ದಿದ್ದ ಎಲ್ಲಾ ಸಂಸ್ಕೃತ ನಾಟಕಗಳಿಂದ ಉತ್ತಮವಾದ ಭಾಗಗಳನ್ನು ಎತ್ತಿ ಈ ದೇಶದ ಪ್ರಾಚೀನ ನಾಟ್ಯಕಲೆಯು ಎಂತಿದ್ದಿತ್ತೆಂಬುದನ್ನು ಸುದೀರ್ಘವಾಗಿ ಪ್ರಸ್ತಾಪಿಸಿದ್ದಾನೆ.

Prof. Wilson ಇವನು ಮೃಚ್ಛಕಟಿಕ, ಮಾಲತೀ ಮಾಧವ, ರತ್ನಾವಳೀ, ವಿಕ್ರಮೋರ್ವಶೀಯ ಹೀಗೆ ಹಲವು ನಾಟಕಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದನು. ಇವುಗಳು Hindu Dramatic Works ಎಂಬುದಾಗಿ ಒಟ್ಟಿಗೆ ಒಂದೇ ಗ್ರಂಥವಾಗಿ ಒಂದೆರಡು ಕಾಂಡಗಳಾಗಿ ಪ್ರಕಟವಾದುವು. ಇವನ ಭಾಷಾಂತರವು ಸರಳ ಸುಂದರ ಶೈಲಿಯಲ್ಲಿ ಇದೆ; ಇದು ಅವನ ಅಗಾಧ ವಿದ್ವತ್ತನ್ನು ಪ್ರದರ್ಶಿಸುತ್ತದೆ. ಹಲವೆಡೆ ಅವನ ಭಾಷಾಂತರವು ಅಂತೆಯೇ ತೋರದೆ ತಾನೇ ಸ್ವಯಂ ನಿರ್ಮಿತ ಕೃತಿಗಳಾಗಿ ತೋರುವಂತೆ ಭಾಷೆಯನ್ನು ಹರಿಯಿಸಿದ್ದಾನೆ. ಉದಾಹರಣೆಗೆ ರತ್ನಾವಳೀ ನಾಟಕದಲ್ಲಿ ಮದನಿಕೆಯು ನರ್ತಿಸುತ್ತಾ ಹೇಳುವ ಮಾತುಗಳು ಇಂಗ್ಲಿಷ್‌ನಲ್ಲಿ ಹೀಗೆ ಹೇಳಲ್ಪಟ್ಟವೆ :—

'Cool from the southern mountains blowing,
Freshly swells the grateful breeze,
Round with lavish bounty throwing
Fragrance from the waving trees ;
To men below, and gods above
The friendly messenger of love.'

"ಮಾಲತೀ ಮಾಧವ" ನಾಟಕದಲ್ಲಿ ಕಾಮಾಂಧಕೀ ಹೇಳುವ ಮಾತುಗಳ ಕೆಲವು ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ :—

'But mark me, son ;
The bond of human actions is good faith,

And promises control the acts of men ;
In speech, the seeds of good and ill reside,
And all events are upon words dependent."

'ಮೃಚ್ಛಕಟಿಕ' ನಾಟಕವನ್ನು ವಿಮರ್ಶಿಸುತ್ತಾ ಅದನ್ನು ಶೂದ್ರಕನೆಂಬ ರಾಜನು ರಚಿಸಿದನೆಂಬುದರ ಬಗ್ಗೆ Col. Wilford ಇವನಂತೆ Prof. Wilson ಇವನೂ ಸಂದೇಹಕ್ಕೊಳಗಾಗಿದ್ದಾನೆ ; ಆ ವಿಚಾರವಾಗಿ ಹೀಗೆ ಹೇಳುತ್ತಾನೆ :—

" The attribution of the play to a regal author is not a singular occurrence. The 'Ratnavali' also is ascribed to a bard of like dignity, whether truly or not, whether the monarch was not rather the patron than the poet, is immaterial to the chronology of the drama."

ಈ ನಾಟಕದಲ್ಲಿ ಚಾರುದತ್ತನು ಹೇಳುವ ಕೆಲವು ಮಾತುಗಳು ಹೀಗೆ ಭಾಷಾಂತರವಾಗಿವೆ :—

" It is true—I think not of my wasted fortune,
As fate decrees, so riches come and vanish,
But I lament to find the lvoe of friends
Hangs all unstrung because a man is poor
And then with poverty comes disrespect,
From disrespect does self-dependence fail,
Then scorn and sorrow, following, over-whelm
The intellect ; and when the judgment fails
The being perishes ; and thus from poverty
Each ill that pains humanity proceeds."

೧೨. ಪ್ರೊ. ವಿಲ್ಸನ್ ಇವನಿಂದ ಕಾಳಿದಾಸನ ಕಾವ್ಯಗಳ ಭಾಷಾಂತರ :—

Sir William Jones ಇವನು "ಅಭಿಜ್ಞಾನ ಶಾಕುಂತಲಾ" ನಾಟಕವನ್ನು 'The Fatal Ring' ಎಂದು ಭಾಷಾಂತರಿಸಿದನಂತರ ಹಲವು ಪಾಶ್ಚಾತ್ಯ ವಿದ್ವಾಂಸರು ಆ ನಾಟಕವನ್ನು ಇಂಗ್ಲಿಷ್, ಲ್ಯಾಟಿನ್, ಜರ್ಮನ್, ಇಟಾಲಿಯನ್ ಇತ್ಯಾದಿ ಭಾಷೆಗಳಿಗಿಳಿಸಿದರು. Prof. Wilson ಇವನ ಇಂಗ್ಲಿಷ್ ಶಾಕುಂತಲಾ ನಾಟಕವು 1820 ರಲ್ಲಿ ಸಿದ್ಧವಾಯಿತು. ಅದಕ್ಕೂ ಮೊದಲಾಗಿ ಅವನು ಕಾಳಿದಾಸನ 'ಮೇಘ ಸಂದೇಶ' ಇದನ್ನು 1813 ರಲ್ಲೂ 'ಕುಮಾರ ಸಂಭವ' ಇದನ್ನು 1819 ರಲ್ಲೂ ಭಾಷಾಂತರಿಸಿದ್ದು ಅವೆಲ್ಲಾ ಕಳೆದ ಶತಮಾನದ ಅಂತ್ಯದೊಳಗಾಗಿ ನಾಲ್ಕಾರು ಬಾರಿ ಪುನರ್ಮುದ್ರಣವಾದುವು.

'ಕುಮಾರ ಸಂಭವ'ದ "ಅಸ್ತ್ಯುತ್ತರಸ್ಯಾಂ ದಿಶಿದೇವತಾತ್ಮಾ... ...." ಎಂಬ ಶ್ಲೋಕವು Prof. Wilson ಇವನಿಂದ ಹೀಗೆ ಭಾಷಾಂತರವಾಗಿದೆ :—

"There is in the Northern Quarter, the great
King of Mountains, the Himalaya, animated by deity,
Standing as the measuring rod of the earth
And having entered the easteren and western seas."

"ಮೇಘದೂತ" ಕಾವ್ಯದ ಭಾಷಾಂತರವು ಇನ್ನಷ್ಟು ಚೆಲೋದಾಗಿದೆ. ಅದರಿಂದ ಕೆಲವು ಶ್ಲೋಕಗಳ ಭಾಷಾಂತರವನ್ನು ಆರಿಸಿ ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

"Where Ramagiri's shadowy woods extend
And those pure streams where Sita bathed descend,
Spoiled of his glories, severed from his wife,
A vanished Yaksha passed his lonely life :"

*     *     *     *     *

"The Yaksha thus the cloud majestic prayed,
Hail, friend of Indra, counsellor divine,
Illustrions offering of a glorious line,
Wearer of shapes at will, thy worth I know
And bold entrust thee with my fated woe."

*     *     *     *     *

"Where dwell the Yaksha in their sparkling fields
And Siva's cresent groves surrounding gilds,
Direct thy licensed journey, and relate
To her who mourns in Aloka my fate !"

ಈ 'ಮೇಘದೂತ'ದ ಇಂಗ್ಲಿಷ್ ಅನುವಾದವನ್ನು Prof. Wilson ಇವನು ಆಗ ದೇಶೀಯ ಸಾಹಿತ್ಯದ ಬೆಳವಣಿಗೆಗೆ ಪ್ರೋತ್ಸಾಹವಿತ್ತಿದ್ದ Governer-General Earl of Minto ಇವನಿಗೆ 'ಅರ್ಪಣೆ' ಮಾಡಿದ್ದಾನೆ. ಅಲ್ಲದೆ ಅದರ ಮುನ್ನುಡಿಯಲ್ಲಿ ಪಾಶ್ಚಾತ್ಯ ವಿದ್ವಾಂಸರು ಈ ದಿಶೆಯಲ್ಲಿ ಕೈಗೊಂಡ ಸೇವೆಯೆಂತೆಂದು ಈ ರೀತಿಯಾಗಿ ಹೇಳಿದ್ದಾನೆ ;—

"It has fallen to the lot of the English nation especially, to prosecute these enquries, and the result has been comfortable to the patriotic wish of the late Sir William Jones, that as the continental nations of Europe had been the most diligent cultivators of the other Oriental tongues, the merit of Sanskrit research might chiefly belong to his own countrymen......"

### ೧೩. ಪ್ರೊ. ವಿಲ್ಸನ್ ಇವನಿಂದ ಸಂಸ್ಕೃತ ನಿಘಂಟು ಮತ್ತು ವ್ಯಾಕರಣಗಳು :—

ಬಹು ಭಾಷಾಪರಿಣಿತನಾದ Prof. H. H. Wilson ಇವನು Jones

ಮತ್ತು Colebrooke ಇವರಂತೆ ಸಂಸ್ಕೃತ ಸಾಹಿತ್ಯದ ಕಲ್ಲು ಮುಳ್ಳುಗಳ ದಾರಿಯನ್ನು ತುಳಿದು ನಡೆದಿದ್ದಾನೆ. ಹಲವು ಸಂಸ್ಕೃತ ಕಾವ್ಯ ಮತ್ತು ನಾಟಕಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಪಾಂಡಿತ್ಯವನ್ನು ಹೊಂದಿದ್ದ ಇವನು ಸಂಸ್ಕೃತ–ಇಂಗ್ಲಿಷ್ ನಿಘಂಟನ್ನು ಬರೆದು ಕ್ರಿ.ಶ. 1819 ರಲ್ಲಿ ಪ್ರಕಟಿಸಿದನು. ಸುಮಾರು ೨೦೦೦ folio ಪುಟಗಳ ಈ ಅಮೋಘ ಗ್ರಂಥವು ಸಂಸ್ಕೃತ ಸಾಹಿತ್ಯಕ್ಕೆ ಒಂದು ಹೊಸ ಜೀವವನ್ನು ಇತ್ತಂತೆ ಆಯಿತು; ಅಲ್ಲದೆ ಇತರ ಪಾಶ್ಚಾತ್ಯ ವಿದ್ವಾಂಸರು ಇಂಥಾ ನಿಘಂಟನ್ನು ರಚಿಸಲು ಕೈಗೊಂಡಿದ್ದ ಪ್ರಯತ್ನವೆಲ್ಲವನ್ನು ನಿವಾರಿಸಿತು. ಸಂಸ್ಕೃತ ಸಾಹಿತಿಗಳಿಗೆ ಕೈಗನ್ನಡಿಯಂತಿರುವ ಈ ನಿಘಂಟಿನ ಪರಿಷ್ಕೃತ ಪ್ರಕಟಣೆಯು ಸುಮಾರು 3500 folio ಪುಟಗಳಷ್ಟು ದೊಡ್ಡದಾಗಿ 1870 ರಲ್ಲಿ ಹೊರಬಂತು. ಇಂದಿಗೂ Prof. Wilson ಇವನ ಸಂಸ್ಕೃತ–ಇಂಗ್ಲಿಷ್ ಅರ್ಥಕೋಶವೇ ಪರಿಪೂರ್ಣವಾದ ಒಂದು ಮಹಾಕೃತಿಯಾಗಿ ಇದೆಯಲ್ಲದೆ ಈ ಶತಮಾನದವಧಿಯಲ್ಲಿ ಅದು ಹಲವು ಬಾರಿ ಪುನರ್ಮುದ್ರಣವಾಗಿದೆ.

ಇದರಿಂದಷ್ಟೇ ತೃಪ್ತನಾಗದೆ Prof. Wilson ಇವನು ತನ್ನ ಸ್ವದೇಶಕ್ಕೆ ಹಿಂದಿರುಗಿದನಂತರ ಇನ್ನೂ ಎರಡು ಬಗೆಯ ನಿಘಂಟುಗಳನ್ನು ರಚಿಸಿದನು. ಹಿಂದೂಸ್ಥಾನದ Judicial Revenue Terms ಇದು 1855 ರಲ್ಲೂ, A Glossary of Indian Terms ಎಂಬ ಅರ್ಥಕೋಶವು 1860 ರಲ್ಲೂ ಪ್ರಕಟವಾದುವು. ಇವುಗಳಲ್ಲಿ ಅವನ ಭಾಷಾಜ್ಞಾನ ಮತ್ತು ವಿಚಾರಜ್ಞಾನಗಳೆರಡೂ ಪ್ರತಿಬಿಂಬಿತವಾಗಿವೆ.

Prof. Wilson ಇವನ ಸಂಸ್ಕೃತ ವ್ಯಾಕರಣವು ಕ್ರಿ. ಶ. 1841 ರಲ್ಲಿ ಮೊದಲನೇ ಬಾರಿಗೆ ಪ್ರಕಟವಾಯಿತು. ಪಾಣಿನಿಯ ವ್ಯಾಕರಣವನ್ನು ಅನುಸರಿಸಿ ಇಂಗ್ಲಿಷ್ ವಿವರಣೆಯಿಂದೊಡಗೂಡಿದ ಈ ವ್ಯಾಕರಣ ಗ್ರಂಥವು Colebrooke ಮತ್ತು Carey ಇವರ ಸಂಸ್ಕೃತ ವ್ಯಾಕರಣಗಳಿಗಿಂತಲೂ ಸಮರ್ಪಕವಾಗಿ ಇದೆ. ಅದರೊಡನೆಯೇ ಅವನು A Comparative Sanskrit Grammar ಇದನ್ನು ಬರೆದುದು 1845 ರಲ್ಲಿ ಪ್ರಕಟವಾಯಿತು. ಇದು Prof. Wilson ಇವರ ಪರ್ಷಿಯನ್, ಲ್ಯಾಟಿನ್, ಹಿಂದೂಸ್ಥಾನೀ, ಸಂಸ್ಕೃತ, ಜರ್ಮನ್ ಮೊದಲಾದ ಭಾಷಾ ಪಾಂಡಿತ್ಯಕ್ಕೆ ಸಾಕ್ಷ್ಯವಾದ ಉತ್ತಮ ಭಾಷಾಶಾಸ್ತ್ರ ಗ್ರಂಥವಾಗಿದೆ.

### ೧೪. ಪ್ರೊ. ವಿಲ್ಸನ್—ಇವನಿಂದ ಋಗ್ವೇದದ ಭಾಷಾಂತರ:—

Prof. Wilson ಇವನಿಂದ ಭಾಷಾಂತರಿಸಲ್ಪಟ್ಟ ಋಗ್ವೇದ ಸಂಹಿತೆಗಳು ಅದರ ಮೂಲ ಮತ್ತು ವಿವರಣೆಯೊಡಗೂಡಿ ಸುಮಾರು 1500 demy ಪುಟಗಳಷ್ಟು ದೊಡ್ಡ ಗ್ರಂಥವಾಗಿ ಮುದ್ರಣವಾಗಿದೆ. ವೇದಗಳ ಹಲಕೆಲವು ಭಾಗಗಳನ್ನು ಇನ್ನೂ ಹಲವು ಇಂಗ್ಲಿಷ್, ಜರ್ಮನ್, ಫ್ರೆಂಚ್, ಲ್ಯಾಟಿನ್ ಇತ್ಯಾದಿ ಭಾಷಾ ಪಂಡಿತರು ಆಯಾ ಭಾಷೆಗಳಿಗೆ ಪರಿವರ್ತಿಸಿದ್ದಾರೆ. ಅದರೆ ಅವರೆಲ್ಲರೂ ಅವುಗಳ ಮೇಲೆ ಬರೆದ ಟೀಕೆಗಳು ವಿದ್ವತ್ಪೂರ್ಣವಾಗಿವೆ. ಈ ಪುರಾತನ ಧರ್ಮಗ್ರಂಥಗಳಲ್ಲಿ ಹಲವು

ಉತ್ತಮ ವಿಷಯಗಳು ಪ್ರತಿಪಾದಿಸಲ್ಪಟ್ಟವೆಯಾದರೂ ಅಲ್ಲಲ್ಲಿ ಇಂದ್ರ, ಅಗ್ನಿ, ವರುಣ ಮೊದಲಾದ ದೇವತೆಗಳನ್ನು ಸ್ತುತಿಸುವಾಗ "ಶತ್ರುಗಳನ್ನು ನಿರ್ಮೂಲಿಸಿರಿ; ನಮಗೆ ದ್ರವ್ಯವನ್ನು ಕೊಡಿರಿ; ಸೋಮರಸವನ್ನು ಕುಡಿಯಿರಿ; ನಮಗೆ ಹಲವು ಬಗೆಯ ವಸ್ತುಗಳನ್ನು ಬಹುಮಾನವಾಗಿತ್ತು ಪೋಷಿಸಿರಿ" ಎಂಬೀ ಬಗೆಯ ಬೇಡಿಕೆಗಳನ್ನೊಡಗೊಂಡ ಮಂತ್ರಗಳಿಂದಲೇ ಅವು ತುಂಬಿವೆಯೆಂದೂ ಈ ವೇದಗಳಂಥಾ ದಿವ್ಯ ಗ್ರಂಥಗಳಲ್ಲಿ ಸ್ವಾರ್ಥಲಾಭದ ಉದ್ದೇಶದಿಂದ ಈ ರೀತಿ ಬೇಡುವವರು ಋಷಿಗಳೇ ಅಥವಾ ವ್ಯಾವಹಾರಿಕ ಬ್ರಾಹ್ಮಣರೇ ಎಂದು ಪಾಶ್ಚಾತ್ಯ ವಿಂದ್ವಾಂಸರು ನ್ಯಾಯವಾದ ಹವಾಲನ್ನು ಹಾಕಿದ್ದಾರೆ. ಇದೇ ಅಭಿಪ್ರಾಯವನ್ನು Dr. Max Mueller, Prof. Macdonall ಮೊದಲಾದವರು ತಕ್ಕ ಉದಾಹರಣೆಗಳನ್ನು ಕೊಟ್ಟು ಚರ್ಚಿಸಿದ್ದಾರೆ. ಇದೀಗ Prof. Wilson ಇವನ ವೇದ ಭಾಷಾಂತರದಿಂದ ಅಂಥಾ ಕೆಲವು ಸ್ವಾರ್ಥಲಾಭಕ್ಕಾಗಿ ಯಾಚಿಸುವ ಮಂತ್ರಗಳನ್ನು ಆಯ್ದು ದಿಗ್ದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ:—

"We offer to thee, Satakritu, the mighty in battle, (sacrificial) food for the acquirement, Indra, of riches......

"Satisfy us with wealth, Indra and Varuna, according to our desires.......

"We select Agni, the messenger of the gods, their invoker, the possessor of all riches, the perfector of this rite.......

"He gave horses, He gave also the sun, and Indra gave also the many nourishing cow; He gave also golden treasure, and having destroyed Dasyus, He protected the Arya tribe,

"Far-seeing Indra, we know thee to be victorious and winner of wealth in battles; therfore, we ask of thee riches.

"I offer to thee, Indra, the Soma juice for thy drinking... may it delight thy heart.

"Grant us riches... ...sen1 down upon us, Indra, wealth adequate, as a crook brings down the ripe fruit from a tree..."

## ೧೫. ಪ್ರೊ. ವಿಲ್ಸನ್ ಇವನ ಐತಿಹಾಸಿಕ ಸಂಶೋಧನಾ ಬರೆಹಗಳು:—

Prof. Wilson ಇವನು ಸಂಶೋಧನಾ ಕ್ಷೇತ್ರದಲ್ಲಿ ತುಂಬಾ ಶ್ರಮವಹಿಸಿದ್ದನೆಂಬುದಕ್ಕೆ ಅವನ ಹಲವು ಗ್ರಂಥಗಳು ಸಾಕ್ಷ್ಯವಾಗಿವೆ. Gracco Bacterian Coins, Ancient Indian Coins, Fa-Hien's Travels, Buddhist Literature in China ಎಂಬೀ ಮೊದಲಾದ ಲೇಖನಗಳೂ ಗ್ರಂಥಗಳೂ ಅವನು ಈ ದೇಶದ ಪ್ರಾಚೀನ ಚರಿತ್ರೆಯ ಬಗ್ಗೆ ಇಟ್ಟಿದ್ದ ಶ್ರದ್ಧೆಯೆಷ್ಟೆಂಬುದನ್ನು ಸೂಚಿಸುತ್ತದೆ. ಪ್ರಾಚೀನ ನಾಣ್ಯಗಳ ವಿಚಾರ ಹೇಳುವಾಗ ಅವುಗಳನ್ನೆಲ್ಲಾ ಸಂಗ್ರಹಿಸಿದ್ದು ಮಾತ್ರವಲ್ಲದೆ ಅವುಗಳನ್ನೆಲ್ಲಾ ಚಿತ್ರಸಮೇತವಾಗಿ ವಿವರಿಸಿ ಆಯಾ

ಕಾಲದ ಚರಿತ್ರೆಯನ್ನು ಸೂಕ್ಷ್ಮವಾಗಿ ನಿರೂಪಿಸಿದ್ದಾನೆ. ಅದೇ ರೀತಿ ಅವನ "ಬೌದ್ಧ ಗ್ರಂಥಗಳೂ ಪ್ರಾಚೀನ ಭಾರತದ ನಾಣ್ಯಗಳೂ" ಎಂಬ ಇನ್ನೊಂದು ಪುಸ್ತಕವು 1852 ರಲ್ಲಿ ಪ್ರಕಟವಾಯಿತು.

Prof. Wilson ಇವನು James Mill ಇವನು ಬರೆದ ಹಿಂದೂಸ್ಥಾನದ ಚರಿತ್ರೆಯನ್ನು ಮುಂದುವರಿಸಿ 1835 ರವರೆಗಿನ History of British India ಇದನ್ನು ಬರೆದು ಪೂರ್ತಿಗೊಳಿಸಿದನು. ಇದರಿಂದ ಅವನು ಓರ್ವ ನುರಿತ ಇತಿಹಾಸಕಾರನೆಂದು ಪ್ರಸಿದ್ಧನಾದನು. Asiatic Researches ಪತ್ರಿಕೆಯಲ್ಲಿ Historical Sketch of Pandias, Buddhist Litarature; ಎಂಬಿತ್ಯಾದಿ ವಿದ್ವತ್ಪೂರ್ಣ ಲೇಖನಗಳನ್ನು ಅದೆಷ್ಟೋ ಬಾರಿ ಬರೆದನು.

Col. Colin Mackenzie ಇವನು ಸಂಪಾದಿಸಿದ್ದ ಚಾರಿತ್ರಿಕ ಅವಶೇಷಗಳನ್ನು ಕುರಿತು ಒಂದು ವಿವರಣಾತ್ಮಕವಾದ ಪಟ್ಟಿಯನ್ನು ತಯಾರಿಸುವ ಕೆಲಸವನ್ನು 1820 ರಲ್ಲಿ ಕುಂಪೆನೀ ಸರಕಾರವು Prof. Wilson ಇವನಿಗೆ ಒಪ್ಪಿಸಿತು. ಆ ಕಾರಣದಿಂದ ಇವನು ಈ ದೇಶದ ಹಲವು ಭಾಗಗಳಲ್ಲಿ ಸಂಚರಿಸಿ ಪ್ರತಿಯೊಂದು ಪ್ರಾಚೀನ ಗ್ರಂಥ, ತಾಳೆವೋಲೆ, ಶಿಲಾಶಾಸನ, ನಾಣ್ಯಗಳು, ಕಲ್ಲು ಪ್ರತಿಮೆಗಳೆಲ್ಲಾ ಯಾವಾವ ಕಾಲಕ್ಕೆ ಸೇರಿದ್ದು ಎಂಬುದಾಗಿ ಸಾಮೂಲಾಗ್ರವಾಗಿ ಪರಿಶೋಧಿಸಿ ಬರೆದ ಆ ವಿವರಣಾತ್ಮಕ ವರದಿಯು Descriptive Catalogue of the Mackenzie Collections ಎಂಬ ಹೆಸರಿನಿಂದ 1828 ರಲ್ಲಿ ಪ್ರಕಟವಾಯಿತು. ದಾಕ್ಷಿಣಾತ್ಯ ಭಾಷೆಗಳ ಪರಿಚಯವು ಅವನಿಗೆ ಸಾಕಷ್ಟು ಇದ್ದಿಲ್ಲವಾದರೂ ಅವನು ಇಲ್ಲಿಯ ಭಾಷೆ, ಕಲೆ, ಸಾಹಿತ್ಯ ಮೊದಲಾದುವನ್ನು ಕುರಿತು ವ್ಯಾಸಂಗ ನಡೆಸಿದನು. ದಕ್ಷಿಣ ಹಿಂದೂಸ್ಥಾನದ ಹಲವು ಭಾಗಗಳಲ್ಲಿ ಸಂಚರಿಸಿದನು. Tribes and Languages of Bombay Presidency ಎಂಬುದಾಗಿ ಲೇಖನವನ್ನು ಬರೆದದ್ದು ಬಹು ಕಾಲಾನಂತರ ಪ್ರಕಟವಾಯಿತು. ಕರ್ಣಾಟಕದ ವಿಚಾರವಾಗಿಯೂ ಬಹು ಶ್ರದ್ಧೆಯಿಂದ ಅನ್ವೇಷಣೆಯನ್ನು ನಡೆಸಿದನು. ಕನ್ನಡ ಭಾಷೆಯನ್ನು ಕುರಿತು ಅವನು ಒಂದೆಡೆ ಈ ರೀತಿಯಾಗಿ ಹೇಳಿದ್ದಾನೆ:—

'The Canara language is one of the cognate forms of speech of the peninsula, agreeing in its radicals with the Tamil and Telugu, and differing from them only in its infiexions,–a great number of words are also common to them......'

### ೧೬. ಪಂಚತಂತ್ರ; ನ್ಯಾಯಶಾಸ್ತ್ರ; ರಾಮಾಯಣ; ಕಾವ್ಯಾದರ್ಶ ಇತ್ಯಾದಿ:—

Prof. Wilson ಇವನು ಸಂಸ್ಕೃತ ಸಾಹಿತ್ಯಕ್ಷೇತ್ರವನ್ನು Sir Henry Colebrooke ಇವನಂತೆಯೇ ಬಹುವ್ಯಾಸಕವಾಗಿ ನಿರ್ಮಿಸಿ ಇನ್ನೂ ಹಲವು ಪ್ರಾಚೀನ ಗ್ರಂಥಗಳನ್ನು ಅನ್ವೇಷಿಸಿ ಸಂಪಾದಿಸಿದನು. ಇವನ "ಪಂಚತಂತ್ರ"ದ

ಭಾಷಾಂತರವು ಆ ಕಾಲದಲ್ಲಿ ಯೂರೋಪಿನಲ್ಲಿ ಬಹು ಜನಪ್ರಿಯವಾದ ಗ್ರಂಥವಾಯಿತು. Prof. Colebrooke ಇವನು ಬರೆದು ಅರ್ಧದಲ್ಲಿಯೇ ಬಿಟ್ಟುಹೋದ ಹಿಂದೂ ನ್ಯಾಯಶಾಸ್ತ್ರ ಗ್ರಂಥವೊಂದನ್ನು The Hindu and Mohammaden Law ಎಂದು ಬರೆದು ಪೂರ್ತಿಗೊಳಿಸಿದ್ದು 1860 ರಲ್ಲಿ ಪ್ರಕಟವಾಯಿತು. ಹಿಂದೆಯೇ ಅವನು ಭಾಷಾಂತರಿಸಿದ್ದ ಭವಭೂತಿಯ 'ಮಾಲತೀ ಮಾಧವ' ನಾಟಕವನ್ನು ಪರಿಷ್ಕರಿಸಿ ಪುನಃ ಮುದ್ರಿಸಿದನು. Prof. Monier Williams ಮತ್ತು ಕಾಶೀ ಹಿಂದೂ ವಿದ್ಯಾಲಯದ ಅಧಿಕಾರಿಯಾಗಿದ್ದ R. T. H. Griffith ಇವರೊಡನೆ ಸೇರಿ ವಾಲ್ಮೀಕಿ ರಾಮಾಯಣವನ್ನು ಟೀಕಾ ಸಮೇತವಾಗಿ ಬರೆದು ಪ್ರಕಟಿಸಿದನು. ಈ ಎಲ್ಲಾ ಗ್ರಂಥಗಳು ಲಂಡನ್‌ನಲ್ಲಿಯೇ 1850ರ ಕಾಲದಲ್ಲಿ ಮುದ್ರಣವಾದುವು.

Prof. Wilson ಇವನು ವೇದಸಂಹಿತೆಗಳನ್ನು ಭಾಷಾಂತರಿಸಿದನಂತರ ತನ್ನ ಓಕ್ಸ್‌ಫರ್ಡ್ ವಸತಿಯಲ್ಲಿ ಕುಳಿತು ದಂಡಿಯ 'ಕಾವ್ಯಾದರ್ಶ'ವನ್ನು ತಿರುವಿಹಾಕಿದನು. ಅದರ ಮೇಲೆ ಬೋಧಪ್ರದವಾದ ವ್ಯಾಖ್ಯಾನವನ್ನೂ ಬರೆದನು. J. Stevenson ಮತ್ತು W. Mc Naughton ಇವರ ಸಹಕಾರದಿಂದ 'ಕಾವ್ಯಾದರ್ಶ'ದ ಮೇಲೆ ಟೀಕೆ ಮತ್ತು ವೃತ್ತಿಗಳನ್ನು ಬರೆದದ್ದು ಪ್ರತ್ಯೇಕ ಗ್ರಂಥವಾಗಿ 1845ರ ಒಳಗಾಗಿ ಮುದ್ರಣವಾಯಿತು.

Prof. Wilson ಇವನು 'ಸಾಂಖ್ಯಕಾರಿಕಾ' ಇದರ ಮೇಲೆ ಬರೆದ ವ್ಯಾಖ್ಯಾನವು ಅವನ ಅಮೋಘವಾದ ಬರೆವಣಿಗೆಯಾಗಿದೆ. Sir H. Colebrooke ಇವನು ಆರಂಭಿಸಿದ 'ಸಾಂಖ್ಯಕಾರಿಕಾ' ಇದರ ವ್ಯಾಖ್ಯಾನ ಕಾರ್ಯವನ್ನು Prof. Wilson ಇವನು ಮುಂದುವರಿಸಿ ಬರೆದು ಪೂರ್ತಿಗೊಳಿಸಿದನು. ಈ ಗ್ರಂಥವು ಅವನು ಗತಿಸಿ 27 ವರ್ಷಗಳನಂತರ ಮುದ್ರಣವಾಗಿ ಪ್ರಕಟವಾಯಿತು. ಅದರ ಸಂಪಾದನಾ ಕಾರ್ಯಕ್ಕೆ ಅವನು ಎಷ್ಟು ಶ್ರಮಿಸಿದ್ದನೆಂಬುದನ್ನು ಆ ಹೊತ್ತಗೆಯ ಪ್ರಮಾಣವನ್ನು ನೋಡಿದಾಗಲೇ ವ್ಯಕ್ತವಾಗುತ್ತದೆ. ಈ ದೇಶದ ಪ್ರಾಚೀನ ಚರಿತ್ರೆ, ಸಾಹಿತ್ಯ ಮತ್ತು ಸಂಸ್ಕೃತಿಯನ್ನೆಲ್ಲಾ ತನ್ನ ಅವಿರತ ಪ್ರಯತ್ನದ ಫಲವಾಗಿ ಸಂಶೋಧಿಸಿ ಪಡೆದ ಅನುಭವದಿಂದ Prof. Wilson ಇವನು ಹಿಂದೂಸ್ಥಾನದಲ್ಲೂ ಯೂರೋಪಿನಲ್ಲೂ ಮಾಡಿದ ಹಲವಾರು ಬೋಧಪ್ರದವಾದ ಭಾಷಣಗಳ ಸಂಕಲನವು "Lectures on Hindu Sects" ಎಂಬ ಹೆಸರಿನಿಂದ ಗ್ರಂಥರೂಪದಲ್ಲಿ 1852 ರಲ್ಲಿ ಪ್ರಕಟವಾಯಿತು.

**೧೭. ಪ್ರೊ: ವಿಲ್ಸನ್–ಇವನ 'ವಿಷ್ಣು ಪುರಾಣ' ಮತ್ತು ಇತರ ಗ್ರಂಥಗಳು :–**

ಈ ವರೆಗೂ ಹೇಳುತ್ತಾ ಬಂದ ವಿವಿಧ ಬಗೆಯ ವಿದ್ವತ್ಪ್ರಭಾವಕ್ಕೆ ಕಳಶಪ್ರಾಯವಾಗಿ ಇರುವ ಮತ್ತೊಂದು ಮಹಾಗ್ರಂಥವೆಂದರೆ ಅವನ 'ವಿಷ್ಣುಪುರಾಣ' ಇದರ ಇಂಗ್ಲಿಷ್ ಭಾಷಾಂತರವಾಗಿದೆ. ಆದರಿಂದ Prof. H. H. Wilson ಇವನು ಅದ್ಭುತವಾದ ಒಂದು ಕಾರ್ಯವನ್ನು ಕೈಕೊಂಡು ಜಯಪ್ರದನಾದನೆನ್ನಬಹುದು.

ಆ 'ವಿಷ್ಣುಪುರಾಣ'ವು ಕೇವಲ ಪುರಾಣ ಮಾತ್ರವಲ್ಲ; ಅದೊಂದು ಭೂಗೋಳ ಹಾಗೂ ಖಗೋಳ ಶಾಸ್ತ್ರಗ್ರಂಥವೆಂದೇ ಹೇಳಬಹುದು. ಅದರ ಮೂಲಕವಾಗಿ ಪಾಶ್ಚಾತ್ಯ ಭೂಗೋಳ ಶಾಸ್ತ್ರಜ್ಞರಿಗೆ ಹಿಂದೂ ಭೂಗೋಳ ಶಾಸ್ತ್ರದ ಪರಿಚಯವುಂಟಾಯಿತೆಂದು ಹಿಂದೆಯೇ ಹೇಳಲಾಗಿದೆ. ಈ ವಿಷ್ಣುಪುರಾಣದೊಡನೆಯೇ ಅವನು ಬೈಭೀಷಾ ಪುರುಣಾವನ್ನೂ ಸಂಪಾದಿಸಿ ಭಾಷಾಂತರಿಸಿದನು. ಈ ಗ್ರಂಥಗಳು ಪ್ರಾಚೀನ ಹಿಂದೂ ತಾತ್ವಿಕರ ಅಪಾರ ಜ್ಞಾನ ಸಂಪತ್ತಿಗೆ ನಿದರ್ಶನವಾಗಿವೆಯೆಂಬುದನ್ನು ಪಾಶ್ಚಾತ್ಯರು ಅಂದೇ ಒಪ್ಪಿದರು. ಅವುಗಳ ಇಂಗ್ಲಿಷ್ ಭಾಷಾಂತರವು ಮುದ್ರಣವಾಗಲು ಬಹುಕಾಲ ಹಿಡಿದಿದ್ದರೂ ಅವೆಲ್ಲವನ್ನೂ Prof. Wilson ಇವನು ಈ ದೇಶದಲ್ಲಿ ಇದ್ದಾಗಲೇ ಸಂಪಾದಿಸಿ ಮತ್ತು ವ್ಯಾಖ್ಯಾನಿಸಿ ಮುದ್ರಣಕ್ಕೆ ಸಿದ್ಧಗೊಳಿಸಿದ್ದನು.

ಈ ರೀತಿ ಪಂಚತಂತ್ರದ ಭಾಷಾಂತರದಿಂದ ಪ್ರಾರಂಭಿಸಿ ವೇದಗಳು, ಪುರಾಣಗಳು, ನಾಟಕಗಳು, ಸಂಸ್ಕೃತ ನಿಘಂಟು ಮತ್ತು ವ್ಯಾಕರಣಗಳು, ಪ್ರಾಚೀನಕಾಲದ ಇತಿಹಾಸ, ಭಾಷಾಶಾಸ್ತ್ರ ಹೀಗೆ ಹಲವು ಕ್ಷೇತ್ರಗಳಲ್ಲಿ ಶ್ರಮಿಸಿದ ಈ ಪ್ರತಿಭಾವಂತ ಸಾಹಿತಿಯು ಹಿಂದೂಸ್ಥಾನದ ಸಾಮಾಜಿಕ ಮತ್ತು ವಿದ್ಯಾಪ್ರಗತಿಯ ಬಗೆಯಾಗಿಯೂ ತುಂಬಾ ಶ್ರದ್ಧೆಯಿಟ್ಟು ದುಡಿದನು. ಬ್ರಿಟಿಷ್ ಸರಕಾರದ ವಿದ್ಯಾಸಮಿತಿಯ ಸದಸ್ಯನಾಗಿದ್ದ ಈ ಮೇಧಾವಿಯು ಭಾರತೀಯ ವಿದ್ಯಾಪ್ರಚಾರಕ್ಕೆ ತಕ್ಕ ಸೌಲಭ್ಯವನ್ನೀಯಬೇಕೆಂಬ ತನ್ನ ಸಲಹೆಯನ್ನು ಜಾರಿಗೆತರುವಂತೆ ಹೋರಾಡಿದನು. ಈ ದೇಶದ ಸರ್ವತೋಮುಖ ಅಭಿವೃದ್ಧಿಗೆ ತಕ್ಕುದಾದ ಯೋಜನೆಗಳನ್ನು ಸರಕಾರದ ಮುಂದಿಡುತ್ತಿದ್ದನು. Prof. Wilson ಇವನ ವ್ಯಾವಹಾರಿಕ ಜ್ಞಾನಕ್ಕೆ ದ್ಯೋತಕವಾಗಿ ಅವನು ರಚಿಸಿದ Glossary of Judicial and Revenue Terms ಮತ್ತು Review of External Commerce of Bengal ಎಂಬೀ ಬರೆವಣಿಗೆಗಳೇ ಸಾಕ್ಷಿಯಾಗಿವೆ. ಇವನ ಗ್ರಂಥಗಳೆಲ್ಲವೂ ಬ್ರಿಟಿಷ್ ಸರಕಾರದ ಉದಾರ ಸಹಾಯದಿಂದಲೇ ಲಂಡನ್‌ನಲ್ಲಿ ಮುದ್ರಣವಾಗಿ ಪ್ರಚಾರವಾದುವು. ವೇದ ಮತ್ತು ಪುರಾಣಗಳ ಭಾಷಾಂತರಗಳೂ ಇತರ ಕೆಲವು ಸಾಹಿತ್ಯ ಗ್ರಂಥಗಳೂ ಅವನ ಪ್ರಭಾವದ ಪರಿಣಾಮವಾಗಿ ಜರ್ಮನ್ ಮತ್ತು ಲ್ಯಾಟಿನ್ ಭಾಷೆಗಳಿಗೂ ಇಳಿಸಲ್ಪಟ್ಟುವು. ಭಾರತೀಯ ನಾಟ್ಯಶಾಸ್ತ್ರದ ಮತ್ತು ನಾಟಕ ಕಲೆಯನ್ನು ಕುರಿತಾದ ಗ್ರಂಥಕಾಂಡಗಳು ಅವನು ಇದ್ದಾಗಲೇ ಜರ್ಮನ್ ಭಾಷೆಯಲ್ಲಿ ಎರಡು ಬಾರಿ ಪ್ರಕಟವಾದುವು.

### ೧೮. ಆಧುನಿಕ ಸಂಸ್ಕೃತದ ಸಾಹಿತ್ಯ ಸರಸ್ವತಿಯ ಸುಪುತ್ರ :—

Prof. H. H. Wilson ಇವನು ಕ್ರಿ. ಶ. 1833 ರಲ್ಲಿ ಹಿಂದೂಸ್ಥಾನದಿಂದ ತನ್ನ ಸ್ವದೇಶಕ್ಕೆ ಹಿಂದಿರುಗಿದನು. ಅನಂತರ ಅವನು ವಿಧಿವಶನಾಗುವವರೆಗೂ ಒಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ Boden Professor of Sanskrit ಎಂಬ ಉಚ್ಚ ಪದವಿಯನ್ನು ಹೊಂದಿದ್ದನು. ತನ್ನ ಬಾಳಿನ ಕಡೇ ದಿನಗಳವರೆಗೂ ಭಾರತೀಯ ಸಾಹಿತ್ಯ, ಇತಿಹಾಸ, ಕಲೆ, ತತ್ವಶಾಸ್ತ್ರ ಮತ್ತು ಭಾಷಾಶಾಸ್ತ್ರ ಇವುಗಳ

ಅಭಿವೃದ್ಧಿಗಾಗಿಯೂ ಪ್ರಚಾರಕ್ಕಾಗಿಯೂ ಶ್ರಮಿಸಿದನು. ಓಕ್ಸ್‌ಫರ್ಡ್ ಮತ್ತು ಲಂಡನ್ ನಗರಗಳ ಮಧ್ಯೆ ಓಡಾಡುತ್ತಾ ಅಲ್ಲಿ ಇದ್ದ Royal Asiatic Society of England and Ireland ಮತ್ತು ಇತರ ಭಾರತೀಯ ಸಾಂಸ್ಕೃತಿಕ ಸಂಸ್ಥೆಗಳ ಅಭಿವೃದ್ಧಿಗಾಗಿ ಎಡೆಬಿಡದೆ ದುಡಿದನು. 1837 ರಿಂದ 1858 ರವರೆಗೂ ಆ ಸಂಸ್ಥೆಗಳ ಆಧಾರ ಸ್ತಂಭದಂತೆ ಹಲವು ರೀತಿಯಲ್ಲಿ ಅವುಗಳ ಅಭಿವೃದ್ಧಿಯನ್ನು ಸಾಧಿಸಿದನು. ಓಕ್ಸ್‌ಫರ್ಡ್‌ನಲ್ಲಿ Indian Institute ಎಂಬೀ ಸಾಹಿತ್ಯ ಸಂಸ್ಥೆ ಮತ್ತು ಗ್ರಂಥ ಭಂಡಾರವನ್ನು ಸ್ಥಾಪಿಸಿದ ಮೂಲ ಪುರುಷರಲ್ಲಿ Prof. Wilson ಇವನೂ ಒಬ್ಬನಾಗಿದ್ದನು.

ಈ ಪ್ರಚಂಡ ವೇದಾಂತಿ, ಸಾಹಿತಿ ಮತ್ತು ವಿದ್ಯಾತಜ್ಞನನ್ನು Father of Modern Sanskrit Literature ಎಂಬುದಾಗಿ ಪಾಶ್ಚಾತ್ಯ ವಿದ್ವಾಂಸರು ಗೌರವಪೂರ್ವಕವಾಗಿ ಕರೆಯುತ್ತಿದ್ದರು. ಆಗ ಸ್ಥಾಪನೆಯಾಗಿದ್ದ The Society of Resucitation of Indian Literature ಎಂಬ ಸಂಸ್ಥೆಯ ಮುಖ್ಯ ಸಂಚಾಲಕನಾಗಿ ಹಲವು ಪ್ರಾಚೀನ ಸಂಸ್ಕೃತ ಮತ್ತು ಪಾಲೀ ಭಾಷಾ ಬರೆವಣಿಗೆಗಳನ್ನು ಸಂಶೋಧಿಸಿ ಸಂಪಾದಿಸಿ ಹೊರತಂದ ಖ್ಯಾತಿಯು Prof. Wiison ಇವನದಾಗಿದೆ.

Prof. Wilson ಇವನ ಅಪಾರವಾದ ಸೇವೆಯು ಮತ್ತೊಂದು ಪ್ರಧಾನವಾದ ಅಂಶವೇದರೆ ಅವನು Dr. F. Max Mueller ಇವನಂಥಾ ಪ್ರಸಿದ್ಧ ಜರ್ಮನ್ ವಿದ್ವಾಂಸನಿಗೆ ಇಂಗ್ಲೆಂಡಿನಲ್ಲಿ ಆಶ್ರಯವನ್ನಿತ್ತು ಪ್ರೋತ್ಸಾಹಿಸಿದುದೇ ಆಗಿದೆ. ಜರ್ಮನಿಯಿಂದ ತನ್ನ ಬಾಲ್ಯದಲ್ಲಿ ಇಂಗ್ಲೆಂಡಿಗೆ ಹೋದ ಆ ಯುವಕ Max Mueller ಇವನ ಪ್ರಚಂಡ ವಿದ್ವತ್ತು ಮತ್ತು ವೇದಾಭ್ಯಾಸವನ್ನು ಕಂಡು ಬೆರಗಾಗಿ Prof. Wilson ಇವನು ಅವನನ್ನು ಓಕ್ಸ್‌ಫರ್ಡ್‌ನಲ್ಲಿಯೇ ಇರುವಂತೆ ಮಾಡಿದ್ದಲ್ಲದೆ ಬ್ರಿಟಿಷ್ ಸರಕಾರದಿಂದ ಅವನಿಗೆ ಎಲ್ಲಾ ಸಹಾಯವನ್ನೂ ದೊರಕಿಸಿಕೊಟ್ಟನು. ಇದು Prof. Wilson ಇವನು Max Mueller ಇವನಿಗೆ ಮಾಡಿದ ಸಹಾಯವಲ್ಲ; ಅದು ಭಾರತೀಯ ವಿದ್ಯಾ ಮತ್ತು ಸಾಹಿತ್ಯದ ಪ್ರಗತಿಗೆ ಮಾಡಿದ ಅಪಾರವಾದ ಸೇವೆ ಯೆಂಬುದು ಆ Max Mueller ಇವನ ವೇದ ಭಾಷ್ಯಗಳು ಹೊರಟಾಗ ವ್ಯಕ್ತವಾಯಿತು. ಆ ಪ್ರಚಂಡ ಪಂಡಿತ Max Mueller ಇವನಾದರೋ Prof. Wilson ಇವನನ್ನು ಕಡೇವರೆಗೂ ತನ್ನ ಗುರುವೆಂದೇ ಗೌರವಾದರಗಳಿಂದ ಕಂಡಿದ್ದನು.

Prof. Wilson ಇವನು Sir William Jones ಇವನಂತೆ ಇದ್ದ ಒರ್ವ ಋಷಿಯೆಂದೇ ಅನ್ನಬಹುದು. ಇವರಿರ್ವರಲ್ಲೂ ಜನಾಂಗಭೇದ, ಭಾಷಾಭೇದ. ಮತಭೇದ ಎಂಬ ಸಂಕುಚಿತ ದೃಷ್ಟಿಯೇ ಇರಲಿಲ್ಲ. ಇವರಿರ್ವರೂ ಆಗಿಂದಾಗ್ಗೆ ಭಾರತೀಯ ಉಡುಪಿನಲ್ಲಿಯೇ ಕಾಣಿಸಿಕೊಂಡವರು. ವೇದಾಭ್ಯಾಸಿಗಳು, ತಾತ್ವಿಕರು, ವಿಚಾರಶೀಲರು, ಕ್ರಿಯಾಶೀಲರು, ಮತ್ತು ಭಾರತೀಯ ಸಂಸ್ಕೃತಿಯ ಬಗ್ಗೆ ವಿಶೇಷ ಭಕ್ತಿ ಗೌರವಗಳನ್ನು ಇಟ್ಟಿದ್ದವರು. Prof. Wilson ಇವನನ್ನು ಹಲವು ವಿದ್ವಾಂಸರು ಆಧುನಿಕ ಸಂಸ್ಕೃತ ಸಾಹಿತ್ಯದ ಪಿತಾಮಹನೆಂದು ಕರೆದಾಗ ಇನ್ನೂ ಹಲವರು

ಆ ಧನ್ಯ ವಿದ್ವಾಂಸ, ವೇದಾಭ್ಯಾಸಿ, ನಿಘಂಟುಕಾರ, ವೈಯ್ಯಾಕರಣಿ, ಸಂಶೋಧಕ ಮತ್ತು ಇತಿಹಾಸಕಾರನನ್ನು ಆಧುನಿಕ ಸಂಸ್ಕೃತ ಸಾಹಿತ್ಯ ಸರಸ್ವತಿಯ ಸುಪುತ್ರನೆಂದು ಶ್ಲಾಘಿಸದರು.

" ಶ್ರೀ ವನಿತೆಯರಸನೆ ವಿಮಲ ರಾ। ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಕರ ದಾತಾರ
ರಾವಣಾಸುರ ಮಥನ ಶ್ರವಣ ಸು। ಧಾವಿನೂತನ ಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ.

ಹಲಗೆ ಬಳಪವ ಹಿಡಿಯದೊಂದ। ಗ್ಗಳಿಕೆ ಪದವಿಟ್ಟಳಿಸದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ। ಉಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ.

[ಕುಮಾರವ್ಯಾಸ]

ಕಳೆದ ಶತಮಾನದಲ್ಲಿ ಸಂಸ್ಕೃತ ಮತ್ತು ಇತರ ದೇಶೀಯ ಭಾಷೆಗಳಲ್ಲೆಲ್ಲಾ ನಡೆಸಲ್ಪಟ್ಟ ಸಾಹಿತ್ಯಪ್ರಚಾರ, ಪ್ರಾಚೀನ ಗ್ರಂಥಗಳ ಭಾಷಾಂತರ, ಶಾಸನಗಳ ಮತ್ತು ಓಲೆ ಬರೆಹಗಳ ಪರಿಶೋಧನೆ, ಭೌಗೋಲಿಕ ಮತ್ತು ಐತಿಹಾಸಿಕ ವಿಚಾರಗಳ ಪರಿಶೀಲನೆಗಳನ್ನೆಲ್ಲಾ ಒಡಗೂಡಿ ನಡೆಸಿದ ಪಾಶ್ಚಾತ್ಯರ ಅಭೂತಪೂರ್ವ ಸಾಹಸಕ್ಕೆ ಇಂದಿನ ದೇಶೀಯ ವಿದ್ವಾಂಸರು ಕೃತಜ್ಞಾಪೂರ್ವಕವಾದ ಗೌರವವನ್ನು ಸಲ್ಲಿಸಿರುವರೋ ಅಥವಾ ಸಾಹಿತ್ಯವನ್ನೂ ರಾಜಕೀಯ ದೃಷ್ಟಿಕೋನದಿಂದ ಅಳೆದು ಅವರ ಸೇವೆಯನ್ನು ಅಲಕ್ಷಿಸಿದರೋ ತಿಳಿಯದು.

ಕಳೆದ ಶತಮಾನದಲ್ಲಿ ಇದ್ದ ಗಣ್ಯ ಪಾಶ್ಚಾತ್ಯ ವಿದ್ವಾಂಸರಲ್ಲಿ ಅಗ್ರಗಣ್ಯನೆಂದೆನಿಸಿದ Dr. Fredrich Max Mueller ಇವನನ್ನು ಕುರಿತು ಸುದೀರ್ಘವಾಗಿ ಈ ಪರಿಚ್ಛೇದದಲ್ಲಿ ಪ್ರಸ್ತಾಪಿಸಲಾಗಿದೆ. ಇವನ ಸ್ಥಾನವು ಭಾರತೀಯ ಸಾಂಸ್ಕೃತಿಕ ನಭದಲ್ಲಿ ಧ್ರುವತಾರೆಯಂತೆ ಸದಾ ಬೆಳಗುತ್ತಿರುವಂಥಾದ್ದಾಗಿದೆ. Sir Wllliam Jones ಇವನು ಪ್ರಾರಂಭಿಸಿದ ಈ ದೇಶದ ಶಾಸ್ತ್ರಗ್ರಂಥಗಳ ಅನ್ವೇಷಣಾ ಕಾರ್ಯಕ್ರಮವು ನೂರಾರು ಪ್ರಚಂಡ ವಿದ್ವಾಂಸರಿಂದ ಮುಂದುವರಿಸಲ್ಪಟ್ಟು ಕಡೆಗೆ Dr. Max Mueller ಇವನೊಂದಿಗೆ ಪರ್ಯವಸಾನಗೊಂಡಿತು. ಅವನು ವಿಧಿವಶನಾದಾಗ ಅವನೊಡನೆಯೇ ಈ ದೇಶದ ಪ್ರಾಚೀನ ಸಾಹಿತ್ಯ ಸಂಶೋಧನೆಯ ಪರ್ವಕಾಲವೆನಿಸಿದ್ದ ಆ ಹತ್ತೊಂಭತ್ತನೇ ಶತಮಾನವೂ ಕೊನೆಗೊಂಡಿತು.

**೨. ಡಾ. ಫ್ರೆಡ್ರಿಕ್ ಮ್ಯಾಕ್ಸ್ ಮುಲ್ಲರ್*–ಇವನ ಜೀವನ ಪರಿಚಯ :—**

Fredrich Max Mueller ಇವನು ಮಧ್ಯ ಜರ್ಮನಿಯ ಡಚ್ಚೀ ಪ್ರಾಂತದ ಅನ್ಹಾಲ್ಟ್ ದೆಸಾ ಎಂಬ ಸ್ಥಳದಲ್ಲಿ 1823 ನೇ ಜನವರಿ ತಿಂಗಳ 6 ನೇ ದಿನ ಜನಿಸಿದನು. ಇವನ ತಂದೆ Wilhen Max Mueller ಇವನು ಆ ಪ್ರಾಂತದ

* ಇವನ ಭಾವಚಿತ್ರವನ್ನು ಬೇರೆಡೆಯಲ್ಲಿ ಕೊಡಲಾಗಿದೆ.

ಬಹುದೊಡ್ಡ ಸಾರ್ವಜನಿಕ ಪುಸ್ತಕಭಂಡಾರದ ಅಧಿಕಾರಿಯೂ ಒರ್ವ ವಿಖ್ಯಾತ ಜರ್ಮನ್ ಕವಿಯೂ ಆಗಿದ್ದನು. ಹೀಗಾಗಿ Fredrich ಇವನು ಹುಟ್ಟುವಾಗಲೇ ಸಾಹಿತ್ಯವ್ಯಾಸಂಗದಲ್ಲಿ ಅಭಿರುಚಿಯನ್ನು ಹುಟ್ಟಿದವನಂತೆ ತೋರಿತು. ತನ್ನ ತಂದೆಯು ಒರ್ವ ಕವಿಯಾಗಿದ್ದರು ತಾನು ಮಾತ್ರ ಎಂತಿರುವೆನೆಂಬುದನ್ನು ಅವನು ಈ ರೀತಿ ಹೇಳಿದನು.

'I am the son of a poet, and I have been trying very hard all my life not to be a poet myself.'

ಬಾಲ್ಯದಲ್ಲಿ ಅವನು ಸಮೀಪದ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಹೊಂದಿ ಅನಂತರ ಲೈಪ್‌ಸ್ಜಿಗ್ ವಿದ್ಯಾಲಯವನ್ನು ಸೇರಿದನು. ಕೇವಲ ಹದಿನೇಳು ವರ್ಷದ ಹುಡುಗನಾಗಿದ್ದಾಗಲೇ ಸ್ವಿಟ್ಸರ್ಲೆಂಡ್ ಮತ್ತಿತರ ಸೀಮೆಗಳನ್ನು ಕಾಲ್ನಡಿಗೆಯಿಂದ ಸಂದರ್ಶಿಸಿ ಅದೊಂದು ಬಗೆಯ ದೇಶಾಟನೆಯನ್ನೇ ಕೈಗೊಂಡನು. ಲೈಪ್‌ಸ್ಜಿಗ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗ ಅವನ ಮುಖ್ಯೋಪಾಧ್ಯಾಯನು ತನ್ನ ಶಾಲಾವರದಿಯಲ್ಲಿ Max Mueller ಇವನ ವಿಷಯವಾಗಿ ಹೀಗೆ ಬರೆದನು :—

"Fredrich's intellectual capacity is excellent——He is a highly talented youth with far from common endowments——He is one of the greatest of our pupils."

ಲೈಪ್‌ಸ್ಜಿಗ್ ಮತ್ತು ಬರ್ಲಿನ್‌ನಲ್ಲಿ ಇದ್ದಾಗ Max Mueller ಇವನು ಅಂದಿನ ಪ್ರಸಿದ್ಧ ತತ್ವಶಾಸ್ತ್ರಜ್ಞರಾದ Dr. Weisse, Prof. Lotze ಮತ್ತು Dr. Drobisch ಇವರ ಶಿಷ್ಯನಾಗಿರುವ ಸುಯೋಗವೂ ಲಭಿಸಿತ್ತು. ಲೈಪ್‌ಸ್ಜಿಗ್ ನಗರವು ಕ್ರಿ.ಶ. 1440 ರಲ್ಲಿ ಮುದ್ರಣಯಂತ್ರವನ್ನು ಕಂಡುಹಿಡಿದ ಸ್ಮರಣಾರ್ಥವಾಗಿ ಅದರ 400 ನೇ ವರ್ಷದ ಹಬ್ಬವನ್ನು 1840 ರಲ್ಲಿ ವೈಭವದಿಂದ ಆಚರಿಸಿದಾಗ Max-Mueller ಇವನು ಅಲ್ಲಿ ಇದ್ದನು. ಲೈಪ್‌ಸ್ಜಿಗ್ ವಿಶ್ವವಿದ್ಯಾಲಯ ಪ್ರಾಧ್ಯಾಪಕ ಮತ್ತು ಮಹಾ ತತ್ವಜ್ಞಾನದ Dr. A. Krug ಇವನ ಪ್ರಭಾವಕ್ಕೂ Max Mueller ಇವನು ಒಳಗಾದನು. ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳನ್ನು Prof. Bopp, Fleiscoer, Brokhaus, Ruckert ಮೊದಲಾದ ಬಹು ಭಾಷಾಪಂಡಿತರ ಆಶ್ರಯದಲ್ಲಿ ಕಲಿತನು. Von Schlegel ಮತ್ತು Prof. Pott ಇವರೂ ಅವನ ಗುರುಗಳಾಗಿದ್ದರು.

ಸಂಗೀತವೆಂದರೆ Max Mueller ಇವನಿಗೆ ತುಂಬಾ ಮೆಚ್ಚಿನ ವಿಷಯವಾಗಿತ್ತು. ಬಾಲ್ಯದಿಂದಲೇ ಸಂಗೀತದಲ್ಲಿ ಅಭಿರುಚಿಯನ್ನು ತಳೆದು ಆ ಕಲೆಯಲ್ಲಿ ಅವನು ವಿಶೇಷ ಪಳಗಿದ್ದನು. ತನ್ನ ೨೦ ನೇ ವರ್ಷ ಪ್ರಾಯದಲ್ಲಿಯೇ ತತ್ವಶಾಸ್ತ್ರದಲ್ಲಿ Doctorate ಪದವಿಯನ್ನು ಪಡೆದ ಮೇಧಾವಿಯಾಗಿದ್ದನು. ಅಷ್ಟರಲ್ಲಿಯೇ ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದು ಅವನು 'ಹಿತೋಪದೇಶ' ವನ್ನು ಜರ್ಮನ್‌ಗೆ ಭಾಷಾಂತರಿಸಿದನು. 1844 ರಿಂದ ಮಾರ್ಚ್ 1845 ರ ವರೆಗೆ ಅವನು ಬರ್ಲಿನ್ ವಿಶ್ವವಿದ್ಯಾಲಯದಲ್ಲಿದ್ದು ಅನಂತರ ಸಂಸ್ಕೃತದಲ್ಲಿ ಹೆಚ್ಚಿನ ವ್ಯಾಸಂಗಕ್ಕೆಂದು ಪ್ಯಾರಿಸಿಗೆ ಹೋದನು.

## ೩. ಹಿಂದೂಸ್ಥಾನಕ್ಕೆ ಕಾಲಿಡದೆಯೇ ಹಿಂದೂ ಸಂಸ್ಕೃತಿಯನ್ನು ಶೋಧಿಸಿದನು :—

'I cannot give up Sanskrit though it holds no prospect for me.' ಎಂಬುದಾಗಿ ಹೇಳುತ್ತಾ Fredrich Max Mueller ಇವನು ಬರ್ಲಿನ್ ಮತ್ತು ಪ್ಯಾರಿಸ್‌ನಲ್ಲಿ ಸಂಸ್ಕೃತ, ಅರಬೀ, ಪರ್ಶಿಯನ್, ಗ್ರೀಕ್, ಬಂಗಾಳೀ ಮತ್ತು ಹಿಂದೂಸ್ಥಾನೀ ಭಾಷೆಗಳನ್ನು ಆಯಾ ಭಾಷಾ ಪಂಡಿತರ ಸಂಪರ್ಕದಲ್ಲಿ ಕಲಿತು ಅವುಗಳಲ್ಲೆಲ್ಲಾ ಪಾಂಡಿತ್ಯವನ್ನು ಸಂಪಾದಿಸಿದನು. ಪ್ಯಾರಿಸ್‌ನಲ್ಲಿ Prof. Eugene Burnouf ಎಂಬ ಪ್ರಸಿದ್ಧ ಸಂಸ್ಕೃತ, ಲ್ಯಾಟಿನ್ ಮತ್ತು ಫ್ರೆಂಚ್ ವಿದ್ವಾಂಸರ ಶಿಷ್ಯನಾಗಿದ್ದನು. Prof. E. Burnouf ಇವನ ಮಿತ್ರನಾದ Dr. Bunsen ಇವನು 1844 ರಲ್ಲಿ Max Mueller ಇವನನ್ನು ಕುರಿತು ಹೀಗೆ ಹೇಳಿದ್ದನು :—

" I have received feom a highly respected quarter a very strong recommendation of a young man of 22 years of age. He has made himself known by a new edition of the Hitopadesha from the Sanskrit, and is a general scholar, altogether distinguished...He is the son of a celebrated German poet....and of high moral character."

ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅಂಥಾ ಪ್ರಖ್ಯಾತ ವಿದ್ವಾಂಸರ ಪ್ರಶಂಸೆಗೆ ಪಾತ್ರನಾದ ಈ ಯುವಕನು ತನ್ನ ೨೪ ನೇ ವರ್ಷ ಪ್ರಾಯದಲ್ಲಿ ಬಂಗಾಳೀ ಭಾಷಾ ವ್ಯಾಕರಣವನ್ನು ಫ್ರೆಂಚ್ ಭಾಷೆಯಲ್ಲಿ ಬರೆದನು, ಎಂದರೆ ಅವನ ಪ್ರತಿಭೆಯು ಆವಾಗಲೇ ಹೇಗೆ ಹೊಳೆತ್ತಿತ್ತು ಎಂದು ವ್ಯಕ್ತವಾಗುತ್ತದೆ. ಅದರೊಡನೆಯೇ " Sanskrit for Beginners " ಎಂಬ ಪುಸ್ತಕವನ್ನು ದೇವನಾಗರಿ ಲಿಪಿಯಲ್ಲಿ ಬರೆದನು. ಅದರನಂತರ F. Kielhorn ಮತ್ತು G. Oppert ಎಂಬೀ ಜರ್ಮನ್ ವಿದ್ವಾಂಸರೊಡಗೂಡಿ ಪಾಣಿನಿಯ ವ್ಯಾಕರಣವನ್ನನುಸರಿಸಿ ಸಂಸ್ಕೃತ ವ್ಯಾಕರಣವನ್ನು ಫ್ರೆಂಚ್ ಮತ್ತು ಜರ್ಮನ್ ಭಾಷೆಗಳೆರಡರಲ್ಲೂ ವಿವರಿಸುತ್ತಾ ಬರೆದನು.

Prof. Bunsen, Prof. Bopp ಮತ್ತಿತರ ಪ್ರೋತ್ಸಾಹದಿಂದ 1846ರ ಜೂನ್ ತಿಂಗಳಲ್ಲಿ ಲಂಡನ್‌ಗೆ ಹೋಗಿ East India Library ಇದರಲ್ಲಿ ಹಲವು ಭಾರತೀಯ ಗ್ರಂಥಗಳನ್ನು ಪಠಿಸಿದನು. ಬರ್ಲಿನ್ ಮತ್ತು ಪ್ಯಾರಿಸ್‌ನಲ್ಲಿ ದೊರಕದೇ ಇದ್ದ ಶಾಸ್ತ್ರೀಯ ಗ್ರಂಥಗಳೆಲ್ಲವೂ ಅವನಿಗೆ ಅಲ್ಲಿ ದೊರೆತುವು. Baron Bunsen, Von Humboldt ಇವರ ಸಂಸ್ಕೃತ ಗ್ರಂಥಗಳನ್ನಲ್ಲದೆ Prof. Wilson ಇವನ ಸಂಸ್ಕೃತ ವ್ಯಾಕರಣವನ್ನೂ Max Mueller ಇವನು ಅಲ್ಲಿ ಪಠಿಸಿದನು. ಲಂಡನ್‌ನಲ್ಲಿ 'ಮೇಘದೂತ' ಮತ್ತು ಬೌದ್ಧಧರ್ಮ ಗ್ರಂಥವಾದ 'ಧಮ್ಮಪದ' ವನ್ನು ಜರ್ಮನ್‌ಗೆ ಅನುವಾದಿಸಿದಲ್ಲದೆ ಬೌದ್ಧ ಮತ್ತು ಹಿಂದೂ ಧರ್ಮಗಳ ಮೇಲೆ ಪ್ರತ್ಯೇಕ ಗ್ರಂಥಗಳನ್ನು ಬರೆದನು.

ಳ. ಇಂಗ್ಲೆಂಡಿನಲ್ಲಿ ಫ್ರೆಡ್ರಿಕ್ ಮ್ಯಾಕ್ಸ್‌ಮುಲ್ಲರ್ ಇವನು :—

1846 ರಲ್ಲಿ ಇಂಗ್ಲೆಂಡಿಗೆ ಹೋದ Prof. Max Mueller ಇವನು ತನ್ನ ಆಯುಷ್ಯದ ಉಳಿದ ಅವಧಿಯನ್ನೆಲ್ಲಾ ಅಲ್ಲಿಯೇ ಕಳೆದನು. ಓಕ್ಸ್‌ಫರ್ಡ್‌ನಲ್ಲಿ Boden Professor of Sanskrit ಆಗಿದ್ದ Prof. Wilson ಇವನು Max Mueller ಇವನ ಪಾಂಡಿತ್ಯವನ್ನು ಕಂಡು ಮೆಚ್ಚಿದನಲ್ಲದೆ ಅವನ ಗ್ರಂಥಗಳ ಪ್ರಕಟಣೆಗೆ ಸಹಕರಿಸಿದನು. 1847 ರಲ್ಲಿ ಕುಂಪನೀ ಸರಕಾರದ ಅಧಿಕಾರಿಗಳಲ್ಲಿ ತನ್ನ ಪ್ರಭಾವವನ್ನು ಬೀರಿ Max Muller ಇವನು ಬರೆದ ಗ್ರಂಥಗಳ ಮುದ್ರಣಕ್ಕೆ ಏರ್ಪಡಿಸಿದನು. ಇಷ್ಟರಲ್ಲಿ ಅವನು ದಮ್ಮಪದ, ಸೂತ್ರಪೀಠಕಾ, ಜರ್ಮನ್ ಸಾಹಿತ್ಯ ಚರಿತ್ರೆ, ಜರ್ಮನ್ ಭಾಷಾ ವ್ಯಾಕರಣ, ಇತ್ಯಾದಿಗಳನ್ನು ಬರೆದಿದ್ದನು. Prof. Bopp, ಮತ್ತು Prof. Oldenburg ಇವರೂ Max Mueller ಇವನ ಸಾಹಸವನ್ನು ತುಂಬಾ ಪ್ರಶಂಸಿಸಿದ್ದರು. " He Was a born literateur " ಎಂಬುದಾಗಿ Prof. W. Whitney ಇವನು ಅವನ ಪಾಂಡಿತ್ಯವನ್ನು ಕೊಂಡಾಡಿದನು.

Max Mueller ಇವನು ಈ ಅಲ್ಪ ಅವಧಿಯಲ್ಲಿ ಬರೆದಿಟ್ಟ ವಿಷಯಗಳನ್ನು ನೋಡಿದರೆ ಯಾರನ್ನೂ ಬೆರಗುಗೊಳಿಸುವಂಥದಾಗಿದೆ. ಹಿಂದೂ ಧರ್ಮಶಾಸ್ತ್ರಗಳನ್ನು ಕುರಿತು ' The Systems of Hindu Philosophy " ಎಂಬ 648 demy ಪುಟಗಳ ಗ್ರಂಥವನ್ನೂ ಬರೆದನು. ತನ್ನ ತಾಯ್ನುಡಿಯಾದ ಜರ್ಮನ್ ಭಾಷೆಯಲ್ಲಿ ಉದ್ದಾಮ ಗ್ರಂಥಗಳನ್ನು ರಚಿಸಿದನು. ೨೫೦೦ Folio ಪುಟಗಳ ಜರ್ಮನ್ ಭಾಷಾ ಅರ್ಥಕೋಶ ಮತ್ತು ಜರ್ಮನ್ ಸಾಹಿತ್ಯ ಚರಿತ್ರೆ ಇವು ಪ್ರಧಾನವಾದುದಾಗಿವೆ. ಅವನ ಸಂಸ್ಕೃತ-ಜರ್ಮನ್ ಅರ್ಥಕೋಶವು ಎಲ್ಲಾ ವಿದ್ವಾಂಸರ ಪ್ರಶಂಸೆಗೂ ಪಾತ್ರವಾಯಿತು. ಬರೇ ತನ್ನ ೨೭ ವರ್ಷ ಪ್ರಾಯದೊಳಗಾಗಿಯೇ ಇಷ್ಟು ಅಗಾಧವಾದ ಕೆಲಸವನ್ನು ಮಾಡಿದ ಮಹಾ ಮೇಧಾವಿಯೇ ಇವನು ಎಂಬುದನ್ನೂ ಈ ಸಂದರ್ಭದಲ್ಲಿ ಗಮನಿಸಬೇಕಾಗಿದೆ.

1846 ರಿಂದ 1850ರ ವರೆಗೂ ತನ್ನ ಅಪಾರವಾದ ಬರೆವಣಿಗೆಯೊಡನೆ Max Mueller ಇವನು ಇಂಗ್ಲೆಂಡಿನಿಂದ ಒಮ್ಮೆ ಜರ್ಮನಿಗೂ ಇನ್ನೊಮ್ಮೆ ಫ್ರಾನ್ಸಿಗೂ ಎಂದು ಹೋಗುತ್ತಲೂ ಇದ್ದನು. ಭಾರತೀಯ ತತ್ವಶಾಸ್ತ್ರದಲ್ಲಿ ಪಳಗಿದ ಹಲವು ವಿದ್ವಾಂಸರೊಡನೆ ವಿಚಾರ ವಿನಿಮಯವನ್ನು ಮಾಡುತ್ತಿದ್ದನು. Prof. Wilson ಇವನು ಅವನ ಗ್ರಂಥಗಳನ್ನೆಲ್ಲಾ ಸರಕಾರದ ಮೂಲಕವಾಗಿ ಪ್ರಕಟಿಸಲು ಸಹಕರಿಸಿದ್ದು ಮಾತ್ರವಲ್ಲದೆ, ಅವನನ್ನು ಇಂಗ್ಲೆಂಡಿನಲ್ಲಿಯೇ ಇದ್ದು ತನ್ನ ಸಾಹಿತ್ಯ ವ್ಯಾಸಂಗವನ್ನು ಕೈಗೊಳ್ಳುವಂತೆ ಬಲಾತ್ಕರಿಸಿದನು. ಹಣಕ್ಕೆ ಅಭಾವವಿದ್ದರೂ ಅದನ್ನು ಗಮನಿಸದೆ Max Mueller ಇವನು Prof Wilson ಇವನನ್ನು ತನ್ನ ' ಗುರು 'ವೆಂದೇ ಗೌರವದಿಂದ ಕಂಡು ಅವನೊಡನೆಯೇ ಓಕ್ಸ್‌ಫರ್ಡ್ ಮತ್ತು ಲಂಡನ್‌ನಲ್ಲಿ ನೆಲೆಸಿ ತನ್ನ ಜರ್ಮನ್, ಸಂಸ್ಕೃತ, ಮತ್ತು ಇಂಗ್ಲಿಷ್ ಬರವಣಿಗೆಗಳನ್ನು ಮುಂದುವರಿಸಲು ನಿರ್ಧರಿಸಿದನು.

೫. ಮಹಾಬ್ರಾಹ್ಮಣ ಮತ್ತು ವೇದಾಂತಿ ಮ್ಯಾಕ್ಸ್ ಮುಲ್ಲರ್ :—

Max Mueller ಇವನು ತನ್ನ ೨೫ ವರ್ಷ ಪ್ರಾಯದೊಳಗಾಗಿಯೇ ವೇದಗಳನ್ನೆಲ್ಲಾ ಓದಿದ್ದು ಮಾತ್ರವಲ್ಲ. ಅವುಗಳ ಮೇಲೆ ವ್ಯಾಖ್ಯಾನವನ್ನೂ ಬರೆಯಲಾರಂಭಿಸಿದ್ದನೆಂಬುದು ಇನ್ನಷ್ಟು ಆಶ್ಚರ್ಯವನ್ನುಂಟುಮಾಡುವ ವಿಷಯವಾಗಿದೆ. ಇವನು ಬರೆದ ನೂರಾರು ಗ್ರಂಥಗಳಿಗೆ ಕಳಶಪ್ರಾಯವಾಗಿ ಶೋಭಿಸುವಂಥದ್ದು ವೇದಗಳ ಭಾಷಾಂತರ ಮತ್ತು ಅವುಗಳ ಮೇಲೆ ಬರೆದ ವ್ಯಾಖ್ಯಾನವೇ ಆಗಿದೆ. ಕೇವಲ ತನ್ನ ೨೮ ವರ್ಷ ಪ್ರಾಯದೊಳಗಾಗಿಯೇ ಸುಮಾರು 6000 Foolscap ಪುಟಗಳಷ್ಟು ಬರೆದಿಟ್ಟಿದ್ದನೆಂದರೆ ಇವನೋರ್ವ ಅಸಾಮಾನ್ಯ ಪಂಡಿತನಾಗಿದ್ದನೆಂದೆನ್ನದೆ ಸಾಧ್ಯವಿಲ್ಲ.

ತನ್ನ ಋಗ್ವೇದ ಸಂಹಿತೆಗಳು ಮತ್ತು ಅದರ ಮೇಲೆ ಬರೆದ ಟೀಕೆಗಳನ್ನು ಮುದ್ರಿಸಲು ತಕ್ಕಂಥಾ ಪ್ರಕಟನಾ ಸಂಸ್ಥೆಗಳು ಯಾವುವೆಂದು ಬರ್ಲಿನ್, ಪ್ಯಾರಿಸ್ ಮತ್ತು ಲಂಡನ್ ಇಲ್ಲೆಲ್ಲಾ ವಿಚಾರಿಸುತ್ತಿರುವಲ್ಲಿ ಇವನ ಪ್ರತಿಭೆಗೆ ತಕ್ಕಷ್ಟು ನೀರೆರೆದು ಅದನ್ನು ಇನ್ನಷ್ಟು ಪೋಷಿಸಲು Prof. Wilson, Baron, Bunsen ಮೊದಲಾದವರು ನೆರವಾದರು. ಇಷ್ಟು ಚಿಕ್ಕ ವಯಸ್ಸಿನ ವೇದ ಭಾಷ್ಯಕಾರನನ್ನು ಜಗತ್ತು ಬೇರೆಲ್ಲಾದರೂ ಪಡೆದಿದೆಯೇ ಎಂದು ಅವರೆಲ್ಲಾ ಬೆರಗಾದರು.

ಹೇಗೂ 1847–48 ರಲ್ಲಿ Max Mueller ಇವನು ಇತರ ಹಿರಿಯ ವಿದ್ವಾಂಸರ ಸಹಾಯದಿಂದ ಬ್ರಿಟಿಷ್ ಸರಕಾರದ ಮುದ್ರಣಾಲಯದವರೊಡನೆ ವ್ಯವಹರಿಸಿ ತನ್ನ ಗ್ರಂಥಗಳ ಮುದ್ರಣಕ್ಕೆ ಒಪ್ಪಂದವನ್ನು ಮಾಡಿಕೊಂಡನು. ವೇದಗಳ ವ್ಯಾಖ್ಯಾನ ಗ್ರಂಥವು 1852 ರಿಂದ 1856 ರ ವರೆಗೆ ಒಂದೊಂದೇ ಕಾಂಡವಾಗಿ ಮೂರು ಗ್ರಂಥ ಕಾಂಡಗಳು ಪ್ರಕಟವಾದುವು. ತನ್ನ ಹಸ್ತಪ್ರತಿಗಳು ಮುದ್ರಣವಾಗುತ್ತಿದ್ದಂತೆಯೇ ಹೊಸ ಹಸ್ತಪ್ರತಿಗಳನ್ನು ಬರೆಯುತ್ತಾ ಇದ್ದನು. ಪ್ರತಿ ತಿಂಗಳೂ ಇಂತಿಷ್ಟು ಪುಟಗಳನ್ನು ಬರೆದು ಕೊಡುವುದೆಂದು ಮುದ್ರಕರೊಡನೆ ನಿರ್ಣಯಿಸಿಕೊಂಡನು.

Max Mueller ಇವನ ಋಗ್ವೇದ ಭಾಷ್ಯದ ಮೂರು ಕಾಂಡಗಳು ಮಹದ್ಗ್ರಂಥಗಳಾಗಿ ಪ್ರಕಟವಾದ ಕೂಡಲೇ 1856-57ರಲ್ಲಿ ಅದರ ಪ್ರತಿಗಳು ಯುರೋಪು ಖಂಡದ ವಿವಿಧ ದೇಶಗಳಿಗೂ ಹಿಂದೂಸ್ಥಾನಕ್ಕೂ ಕಳುಹಿಸಲ್ಪಟ್ಟವು. ಮರುವರ್ಷದಲ್ಲಿಯೇ ಆ ಗ್ರಂಥಗಳು ಎರಡನೇ ಬಾರಿಗೆ ಮುದ್ರಣವಾದುವು. ಈ ಯುವಕ ಲೇಖಕನ ಅಪಾರವಾದ ಜ್ಞಾನಸಂಪತ್ತನ್ನೂ ವೇದಾಧ್ಯಯನದಲ್ಲಿ ತಳೆದಿದ್ದ ಪ್ರೌಢತೆಯನ್ನೂ ನೋಡಿ ಅವನಿಗೆ "ಗುರು" ವಂತೆ ಇದ್ದು ಅವನನ್ನು ಹಲವು ಬಗೆಯಲ್ಲಿ ಪ್ರೋತ್ಸಾಹಿಸಿದ Prof. H. H. Wilson ಇವನು ಈ ರೀತಿಯಾಗಿ ಹೇಳಿದನು:-

"It is not possible in a brief survey like the present to render justice to a work every page of which teems with information that no other scholar ever has, or could have, placed before the public."

## ೬. ಮ್ಯಾಕ್ಸ್‌ಮುಲ್ಲರನ ವೇದಭಾಷ್ಯಗಳು ಮುದ್ರಣವಾಗುತ್ತಿದ್ದಾಗ :—

Max Mueller ಇವನ ವೇದಗಳ ಭಾಷಾಂತರ ಮತ್ತು ವೇದಭಾಷ್ಯವು 1847 ರಲ್ಲಿಯೇ ಮುದ್ರಣವಾಗಲು ಆರಂಭವಾಗಿತ್ತು. ಆಗ ಇವನಿಗೆ ಬರೇ ೨೪ ವರ್ಷ ಪ್ರಾಯವಾಗಿತ್ತು ಎಂಬುದನ್ನು ಗಮನಿಸಬೇಕಿದೆ. ಅದೇ ವರ್ಷ ಅವನು ತನ್ನ ತಾಯಿಗೆ ಬರೆದ ಒಂದು ಪತ್ರದಲ್ಲಿ ಹೀಗೆ ಹೇಳಿದ್ದನು :—

"I am to hand over to the (East India) Company, ready for press fifty sheets each year at £ 4 a sheet......As the work will be above 400 sheets I have certain position for the next eight years."

ಹೀಗೆ ಪ್ರಾರಂಭವಾದ ಕೆಲಸವು ಅವಿರತವಾಗಿ ಮುಂದುವರಿಯಿತು. ಪ್ರತಿಯೊಂದು sheet ನಲ್ಲಿ ಹದಿನಾರು folio ಪುಟಗಳಂತೆ ಆ ಎಂಟು ವರ್ಷಗಳಲ್ಲಿ ಅವನು ಬರೆದ ವೇದಭಾಷ್ಯ ಮತ್ತು ಭಾಷಾಂತರವೆಲ್ಲಾ ಸೇರಿ 6400 folio ಪುಟಗಳಷ್ಟು ಮುದ್ರಣವಾಯಿತು. ಈ ಅಪಾರ ಬರೆವಣಿಗೆಯು ಮುದ್ರಣವಾಗುತ್ತಾ ಇದ್ದಾಗ ಅವನು ಒಮ್ಮೆ ಈ ರೀತಿ ಇನ್ನೊಂದು ಪತ್ರದಲ್ಲಿ ಹೇಳಿದನು.

"......The old Indians 3,000 years ago might have written less ; 1,000 quarto pages ; but the work agrees with me ; and, I take long walks, and life is on the whole, very pleasant ......I do nothing but work at the Veda......"

Max Mueller ಇವನ ಋಗ್ವೇದದ ಮೂರನೇ ಕಾಂಡವು ಮುದ್ರಣವಾಗುತಿದ್ದಾಗ ವಿಷಯ ಸಂಗ್ರಹಣಕ್ಕೆ Dr. Kuhn, Prof. Roth, Andrew Long, Dr. Muir, Prof. E. Burnouf ಮೊದಲಾದ ಜರ್ಮನ್, ಇಂಗ್ಲಿಷ್ ಮತ್ತು ಫ್ರೆಂಚ್ ವಿದ್ವಾಂಸರೊಡಗೂಡಿ ಚರ್ಚಿಸುತ್ತಿದ್ದನು. ಹಿಂದೂಸ್ಥಾನದಿಂದ ಆಧಾರಗ್ರಂಥಗಳನ್ನು ಸರಕಾರದ ಮೂಲಕವಾಗಿಯೇ ತರಿಸುತ್ತಿದ್ದನು. ಇವನ ಗ್ರಂಥ ಕಾಂಡಗಳು ಪ್ರಕಟವಾಗುವಾಗ ಪ್ರತಿಬಾರಿಯೂ ಜನರು ಬಹು ಕಾತರತೆಯಿಂದ ಅವುಗಳನ್ನು ನಿರೀಕ್ಷಿಸುತ್ತಿದ್ದರು. ಒಮ್ಮೆ ಅವನು ತನ್ನ ತಾಯಿಗೆ ತನ್ನ ಗ್ರಂಥಗಳನ್ನು ಕುರಿತು ಐದು ಭಾಷೆಗಳಲ್ಲೂ ಅವುಗಳ ವಿವರಗಳು ಪ್ರಕಟಿತವಾಗುತ್ತಿವೆಯೆಂಬುದನ್ನು ತಿಳಿಸುತ್ತಾ, ಹೀಗೆ ಬರೆದನು :—

"My prospects in London are good and everything well-arranged......The prospectus of my book will be published in London in five languages—German, English, French, Sanskrit and Bengali.."

1856 ರಲ್ಲಿ Max Mueller ಇವನ ವೇದಭಾಷ್ಯಗಳ ಮೂರು ಕಾಂಡಗಳು ಐದು ಭಾಷೆಗಳಲ್ಲಿ ಮುದ್ರಣವಾಗಿ ಪ್ರಕಟವಾದಾಗ ಪಾಶ್ಚಾತ್ಯದೇಶಗಳಲ್ಲೂ ಹಿಂದೂಸ್ಥಾನದಲ್ಲೂ ಅವನ ಹೆಸರು ಪ್ರತಿಧ್ವನಿಸಿತು. ಆಗ ಇವನಿಗೆ 33 ವರ್ಷ ಪ್ರಾಯವಾಗಿತ್ತು.

## ೭. ಯೂರೋಪಿನ "ಶಂಕರಾಚಾರ್ಯ"—ಮ್ಯಾಕ್ಸ್‌ಮುಲ್ಲರ್ :—

ತನ್ನ ಎಳೆತನದಲ್ಲಿ ಕಾಲ್ನಡಿಗೆಯಿಂದ ಯೂರೋಪಿನ ಬಹುಭಾಗದಲ್ಲಿ ಸುತ್ತಾಡಿ ೨೦ ನೇ ವರ್ಷದಲ್ಲಿ Doctorate ಪದವಿಯನ್ನು ಪಡೆದು 23 ನೇ ವರ್ಷ ಪ್ರಾಯದ ಒಳಗಾಗಿಯೇ ಹಿತೋಪದೇಶ, ಬಂಗಾಳೀ ವ್ಯಾಕರಣ, ಸಂಸ್ಕೃತ ವ್ಯಾಕರಣ, ಜರ್ಮನ್ ಅರ್ಥಕೋಶ ಮತ್ತು ಜರ್ಮನ್ ಸಾಹಿತ್ಯ ಚರಿತ್ರೆ ಇವೆಲ್ಲವನ್ನೂ ಜರ್ಮನ್ ಮತ್ತು ಫ್ರೆಂಚ್ ಭಾಷೆಯಲ್ಲಿ ಬರೆದು ತನ್ನ ೨೪ ನೇ ವರ್ಷದಲ್ಲಿ ಋಗ್ವೇದ ವ್ಯಾಖ್ಯಾನವನ್ನು ಬರೆಯಲಾರಂಭಿಸಿ ತನ್ನ 28 ನೇ ವರ್ಷ ಪ್ರಾಯದೊಳಗಾಗಿ ಆ ವರೆಗೂ ಯೂರೋಪು ಖಂಡದಲ್ಲಿ ಜನಿಸದೇ ಇದ್ದ ಒರ್ವ ಮೇಧಾವಿಯೆಂದು ಜಗತ್ತಿನಲ್ಲೆ ಪ್ರಸಿದ್ಧನಾದ Max Mueller ಇವನನ್ನು ಯೂರೋಪು ಖಂಡದ "ಶಂಕರಾಚಾರ್ಯ" ನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇಷ್ಟು ಚಿಕ್ಕ ಪ್ರಾಯದಲ್ಲಿಯೇ ಇಷ್ಟರವುಟ್ಟಿಗೆ ಅಭೂತಪೂರ್ವ ಕಾರ್ಯವನ್ನೆ ಸಗಿದ ಹಿಂದಿನ ಆಚಾರ್ಯ ಪುರುಷರು ತಮ್ಮ ಆಯುಷ್ಯದ ಹರೆಯದಲ್ಲಿಯೇ ವಿಧಿವಶ ರಾಗಿ ಹೋಗಿದ್ದಾರೆ. ಶಂಕರ, ಸ್ವಾತಿತಿರುನಾಳ್, ಅಥವಾ ನಮ್ಮ ಕನ್ನಡ ಸಾಹಿತ್ಯದ ಮುದ್ದಣ ಇವರಲ್ಲದೆ ಇಂಗ್ಲಿಷ್ ಸಾಹಿತ್ಯದ J. Keats, P. Shelly, ಮೊದಲಾದವರಂಥವರೂ ತಮ್ಮ ಜೀವನದ ನಡುಹರೆಯಕ್ಕೆ ಕಾಲಿಡುವ ಮೊದಲೇ ಕಾಲವಾಗಿ ಹೋಗಿದ್ದಾರೆ, ಆದರೆ Max Mueller ಇವನು ದೈವಾನುಗ್ರಹದಿಂದ ಕಳೆದ ಶತಮಾನಾಂತ್ಯದವರೆಗೂ ಇದ್ದು ಇನ್ನೆಷ್ಟೋ ಅಪಾರ ಸಂಶೋಧನಾ ಗ್ರಂಥಗಳನ್ನು ಬರೆದು ಸಂಸ್ಕೃತ ಸಾಹಿತ್ಯ ಪ್ರಪಂಚಕ್ಕೆ ಯೂರೋಪಿನಲ್ಲಿ ಹುಟ್ಟಿದ ಒರ್ವ ಯುಗಪುರುಷನೆನಿಸಿ ಪ್ರಖ್ಯಾತನಾದನು.

Max Mueller ಇವನು ಬರೆದ Kanada's Theory of Elements ಎಂಬ ಗ್ರಂಥವು ಪಾಶ್ಚಾತ್ಯರಿಗೆ ಭಾರತದ ವೈಜ್ಞಾನಿಕ ಜ್ಞಾನವನ್ನು ತೋರಗೊಡಹುವ ಅಪೂರ್ವ ಗ್ರಂಥವಾಯಿತು. ವೇದ, ನಿರುಕ್ತ, ಬ್ರಾಹ್ಮಣ, ಸೂತ್ರ, ಶ್ರುತಿ, ವ್ಯಾಕರಣ, ಕಲ್ಪ, ಗೋತ್ರ, ಉಪನಿಷತ್ ಇತ್ಯಾದಿಗಳನ್ನು ವಿವರಿಸಿ ಬರೆದ ಅವನ 620 demy ಪುಟಗಳ ಸಂಸ್ಕೃತ ಸಾಹಿತ್ಯ ಚರಿತ್ರೆಯು 1859 ರಲ್ಲಿ ಪ್ರಕಟವಾಯಿತು. ಇದನ್ನು ಗುರುವಾದ Prof. H. H. Wilson ಇವನಿಗೆ 'ಅರ್ಪಣೆ' ಮಾಡಿದನು.

Max Mueller ಎಂಥಾ ಧೀಮಂತ ಲೇಖಕನೋ ಅಷ್ಟೇ ಪ್ರಬಲನಾದ ಉಪನ್ಯಾಸಕನೂ ಆಗಿದ್ದನು. ಇಂಗ್ಲಿಷ್, ಜರ್ಮನ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ನಿರರ್ಗಳವಾಗಿ ತನ್ನ ವಾಕ್ಪ್ರವಾಹವನ್ನು ಹರಿಯಿಸುತ್ತಿದ್ದನು. ಓಕ್ಸ್‌ಫರ್ಡ್, ಲಂಡನ್, ಪ್ಯಾರಿಸ್ ಮೊದಲಾದೆಡೆಗಳಲ್ಲಿ ಭಾರತೀಯ ವಿದ್ಯೆ, ಶಾಸ್ತ್ರ ಮತ್ತು ವೇದ ಧರ್ಮವನ್ನು ಕುರಿತು ನೂರಾರು ಉಪನ್ಯಾಸಗಳನ್ನು ಕೊಟ್ಟನು. 1858 ರಲ್ಲಿ ಓಕ್ಸ್‌ಫರ್ಡ್‌ನಲ್ಲಿ "Fellow of All Souls" ಎಂಬ ಪ್ರಾಧ್ಯಾಪಕ ಸ್ಥಾನಕ್ಕೆ ನೇಮಿತನಾಗಿ ಅದರಲ್ಲಿಯೇ ತನ್ನ ಕಡೇ ದಿನಗಳವರೆಗೂ ಇದ್ದನು. 1849 ರಿಂದ 1868ರ ವರೆಗೂ ಅದೇ ಹುದ್ದೆಯಲ್ಲಿದ್ದ ಅವನನ್ನು ಅನಂತರ Professor of

Comparative Philology ಸ್ಥಾನಕ್ಕೆ ಏರಿಸಿದರು. ಇವನು Seience of Languages ಎಂದು ಭಾಷಾಶಾಸ್ತ್ರದ ಮೇಲೆ ಕೊಟ್ಟ ಉಪನ್ಯಾಸಗಳು ಮತ್ತಿತರ ಸಂಶೋಧನಾ ಲೇಖನಗಳು ಭಾರೀ ಗ್ರಂಥರೂಪದಲ್ಲಿ ಪ್ರಕಟವಾಗಿ ಅವನ ಜೀವಾವಧಿಯಲ್ಲಿಯೇ ಎಂಟು ಬಾರಿ ಪುನರ್ಮುದ್ರಣವಾಯಿತೆಂದರೆ ಅದರ ಮಹತ್ವವೆಷ್ಟಿತ್ತೆಂಬುದಾಗಿ ತಿಳಿಯಬಹುದು.

೮. ಭಾರತೀಯ ಸಾಹಿತ್ಯದ ಬಗ್ಗೆ ಮ್ಯಾಕ್ಸ್‌ಮುಲ್ಲರನ ಪ್ರಶಂಸೆ:—

1859 ರಲ್ಲಿ ಪ್ರಕಟವಾದ Max Mueller ಇವನ ಸಂಸ್ಕೃತ ಸಾಹಿತ್ಯ ಚರಿತ್ರೆಯು ಮರುವರ್ಷವೇ ಪುನರ್ಮುದ್ರಣಕ್ಕೆ ಹೋಯಿತೆಂದರೆ ಆ ಗ್ರಂಥವು ಎಷ್ಟು ಜನಪ್ರಿಯವಾಗಿತ್ತೆಂಬುದರ ಅರಿವಾಗುವುದು, ಋಗ್ವೇದವನ್ನು ಮೂರು ಉದ್ಗ್ರಂಥಗಳಲ್ಲಿ ವ್ಯಾಖ್ಯಾನಿಸಿದ ಇವನು ಸಾಯಣಾಚಾರ್ಯನ ವೇದ ಭಾಷ್ಯದ ಮೇಲೆ ಇನ್ನೂ ಸಹಸ್ರಾರು Folio ಪುಟಗಳ ಮೂರು ಕಾಂಡಗಳ ವೇದಭಾಷ್ಯ ಗ್ರಂಥವನ್ನು ಬರೆದದ್ದು 1874ರ ಒಳಗಾಗಿ ಪ್ರಕಟವಾಯಿತು. ಈ ಎಲ್ಲಾ ಮಹತ್ಕಾರ್ಯಗಳನ್ನು ಅದೆಷ್ಟು ಶ್ರದ್ಧೆಯಿಂದ ಮತ್ತು ಭಕ್ತಿಯಿಂದ ಸಾಧಿಸಿದನೆಂಬುದು ಅವನ ಈ ಮಾತುಗಳಿಂದ ತಿಳಿಯಬಹುದು. :—

' I do not regret in the least the time which I have devoted to the somewhat tedious work of editing the commentary of Sayana and editing it according to the strictest rules of critical scholarship. The Veda, I feel convinced, will occupy scholars for centuries to come, and will take and maintain for ever its position as the most ancient of books in the library of mankind '

ವಿದೇಶೀಯ ವಿದ್ವಾಂಸನೊರ್ವನು ಇಷ್ಟರಮಟ್ಟಿಗೆ ಈ ದೇಶದ ಪುಣ್ಯ ಗ್ರಂಥದ ಬಗ್ಗೆ ಗೌರವಾದರಗಳನ್ನು ತೋರಿದ್ದು ಅವನ ವಿದ್ವತ್ತನ್ನೂ ವಿಶಾಲದೃಷ್ಟಿಯನ್ನೂ ಪ್ರದರ್ಶಿಸುತ್ತದೆ. ಜಗತ್ತಿನ ಪ್ರಧಾನವಾದ ಎಲ್ಲಾ ಭಾಷಾ ಸಾಹಿತ್ಯಗಳನ್ನು ಪರಿಪುಷ್ಟವಾಗಿ ಕಲಿತು ಅರಗಿಸಿಕೊಂಡ ಈ ಪ್ರಚಂಡ ವಿದ್ವಾಂಸನು 1859 ರಷ್ಟು ಹಿಂದೆಯೇ ಹಿಂದೂಸ್ಥಾನದ ಸಾಹಿತ್ಯ ಸಂಸ್ಕೃತಿಗಳಿಗೆ ಜಗತ್ತು ಹೆಚ್ಚು ಮನ್ನಣೆಯನ್ನು ಕೊಡಲಿಲ್ಲವೋ ಎಂಬುದಾಗಿ ಈ ರೀತಿ ಸಾರಿದ್ದಾನೆ :—

"......England, France, Germany, Italy, Denmark, Sweden, Russia and Greece have each contributed their share towards the advancement of Sanskrit philology, and names like those of Sir William Jones, Colebrooke, and Prof. Wilson in England, Prof. E. Burnouf in France, and two Schlegels, Von Humboldt Prof. Bopp and Lassen in Germany have secured to this branch of modern scholarship a firm standing and universal reputation.

" After pursuing some poems of Kalidasa, some fables of Hitopadesha, some verses of Ananda Lahari of the mystic

poetry of the Bhagavad Gita, they gave with the aid of Megasthenes and Appollonius of Tayna, a so-called historical account of the Indian nation without being aware that they were using as contemporary witnesses,, authors as distant from each other as Dante and Virgil. No nation has in this respect, been more unjustly treated than the Indian......*.

**೯. "ಮೋಕ್ಷಕ್ಕೆ ಮೂಲ-ಮ್ಯಾಕ್ಸ್‌ಮುಲ್ಲರ್"-ಭಾರತೀಯರೆಂದರು :—**

Max Mueller ಇವನ ಹಿಂದೂ ಖಗೋಳಶಾಸ್ತ್ರ, ಭಾಷಾಶಾಸ್ತ್ರ, ತತ್ವಶಾಸ್ತ್ರ ಮೊದಲಾದುವನ್ನು ಕುರಿತಾದ ಗ್ರಂಥಗಳು ಮೇಲಿಂದ ಮೇಲೆ ಪ್ರಕಟವಾದುವು. ಇವನ ಸಂಸ್ಕೃತ ಮತ್ತು ಬಂಗಾಳೀ ವ್ಯಾಕರಣಗಳೂ, ವೇದಭಾಷ್ಯಗಳೂ, ಸಾಹಿತ್ಯ ಚರಿತ್ರೆ ಮತ್ತಿತರ ಶಾಸ್ತ್ರೀಯ ಗ್ರಂಥಗಳೆಲ್ಲಾ ಹಿಂದೂಸ್ಥಾನಕ್ಕೆ ಬಂದು ತಲಪಿದುವು, ವೇದಗಳಂಥಾ ಪವಿತ್ರಗ್ರಂಥಗಳೂ ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಪ್ರಥಮಬಾರಿಗೆ ಮುದ್ರಣವಾದುದನ್ನು ನೋಡಿ ಈ ದೇಶದ ಆಚಾರ್ಯ ಹಾಗೂ ಪುರೋಹಿತವರ್ಗವು ಬೆಚ್ಚಿಬಿದ್ದರು. ತಮ್ಮ ಪಾತ್ಸರ್ಯವನ್ನು ಮೇರೆ ಮೀರಿ ಪ್ರದರ್ಶಿಸಿದರು. "ಎಲ್ಲಾ ಕೆಟ್ಟುಹೋಯಿತು ; ನಮ್ಮ ಧರ್ಮವೇ ನಾಶವಾಯಿತು" ಎಂದು ಉದ್ಗಾರವನ್ನೆತ್ತಿದರು, ಹಿಂದಿನ ಯಾವ ಘನವಿದ್ವಾಂಸನೂ ಸಾಧಿಸದಂಥಾ ಒಂದು ಮಹತ್ಕಾರ್ಯವನ್ನು ಕೇವಲ ಒರ್ವ ವಿದೇಶೀಯನು ಇಷ್ಟು ಬೃಹತ್ಪ್ರಮಾಣದಲ್ಲಿ ಸಾಧಿಸಿದನಲ್ಲಾ ಎಂದು ಹೇಳಿಕೊಂಡರು.

ಈ ದೇಶದ ಬ್ರಾಹ್ಮಣರು ಅಲ್ಲಲ್ಲಿ ಜತೆ ಸೇರಿ Max Mueller ಇವನು ಬರೆದುದರಲ್ಲಿ ತುಂಬಾ ತಪ್ಪುಗಳಿವೆ ಎಂದು ಹೇಳಿದರು ; ಇನ್ನು ಹಲವರು ಆ ವಿದೇಶೀಯನ ಉತ್ಸಾಹವನ್ನು ಕಂಡು ಬೇಸರಪಟ್ಟುಕೊಂಡರು ಪೂನಾದಲ್ಲಿ ನಾಲ್ಕಾರು ಬ್ರಾಹ್ಮಣರು ಜತೆಗೂಡಿ Max Mueller ಇವನ ವೇದಭಾಷ್ಯದಲ್ಲಿ ಎಷ್ಟು ತಪ್ಪುಗಳಿವೆ ಎಂದು ನೋಡಲು ಕುಳಿತರು. ಹಾಗೆ ನೋಡುವಾಗ ಆ ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸಲ್ಪಟ್ಟ ಶಾಹಿಯು ಗೋರಕ್ತದಿಂದ ಮಿಶ್ರಣವಾದುದು ಎಂದು ಎಣಿಸಿ ಅದನ್ನು ಮಟ್ಟಡಿ ದೂರದಲ್ಲಿ ಇಟ್ಟು ಕೋಲು ಕಡ್ಡಿಯಿಂದ ಆ ಮುದ್ರಿತ ಗ್ರಂಥಗಳ ಹಾಳೆಗಳನ್ನು ತಿರುವಿ ಅಂತೆಯೇ ದೂರದಿಂದ ಓದಿದರು. ಆದರೆ ಆ ಬ್ರಾಹಣರು ಆ ಬರೆಹದಲ್ಲಿ ತಪ್ಪುಗಳನ್ನು ಕಂಡುಹಿಡಿಯುವಷ್ಟು ಸಮರ್ಥರಾಗಿದ್ದರೋ ಇಲ್ಲವೋ ತಿಳಿಯದು ; ಹೇಗೂ ಅವರಿಗೆ ಬರೆದದ್ದೆಲ್ಲಾ ತಪ್ಪುಗಳಾಗಿಯೇ ತೋರಿತು. "ಎಲ್ಲವೂ ಕೆಟ್ಟುಹೋಯಿತು : ವೇದಗಳನ್ನು ಸಹ ಈ ಬಿಳಿಮಂಗಗಳು ಹೊಲೆಗೆಡಿಸಿದರು" ಎಂದನ್ನುತ್ತಾ ಎದ್ದು ಹೋದರು.

ಇಂಥಾ ತಮಾಷೆಯು ಒಂದೆಡೆಯಲ್ಲಿ ನಡೆಯುತಿದ್ದಾಗ ಇನ್ನೊಂದೆಡೆಯಲ್ಲಿ ಬಹು ಸುಸಂಸ್ಕೃತರಾದ ಬ್ರಾಹ್ಮಣ ವಿದ್ವಾಂಸರು Max Mueller ಇವನ ಪಾಂಡಿತ್ಯವನ್ನು ನೋಡಿ ಮೆಚ್ಚಿದರು ; ಅವನ ಸಾಹಸವನ್ನೂ ಜ್ಞಾನ ಪರಿಪಕ್ವತೆಯನ್ನೂ ಕಂಡು ಹಿಗ್ಗಿದರು ; ಅವನ ಶ್ರಮವನ್ನು ಕೊಂಡಾಡಿದರು. ಬ್ರಹ್ಮ ಸಮಾಜವೇ ಮೊದಲ

ಸಂಸ್ಥೆಗಳು ಅವನಿಗೆ ಅಭಿನಂದನೆಗಳನ್ನು ಸಲ್ಲಿಸಿದರು. ಇನ್ನೂ ಹಲವು ಉತ್ಸಾಹಿಗಳು "ಮ್ಯಾಕ್ಸ್‌ಮುಲ್ಲರ್" ಎಂಬ ಹೆಸರು "ಮ್ಯಾಕ್ಸ್–ಮೋಕ್ಷ, ಮುಲ್ಲರ್–ಮೂಲ"–ಮೋಕ್ಷಕ್ಕೆ ಮೂಲ ಎಂಬುದಾಗಿ ಹೇಳಿ ಅವನ ಭಾಷ್ಯಗಳು ಮೋಕ್ಷಕ್ಕೆ ಮೂಲವಾದುವು ಎಂದು ಹೇಳಿದರು. ಅವನೊರ್ವ ಅಸಾಧಾರಣ ವಿದ್ವಾಂಸನೆಂಬುದು ಕ್ರೈಸ್ತ ಭಾರತೀಯ ಪಂಡಿತರು ಒಪ್ಪಿದ್ದಲ್ಲದೆ ಈ ದೇಶದ ನೂರಾರು ಸನಾತನಿಗಳು ತಮ್ಮ ಧರ್ಮ ಶಾಸ್ತ್ರಗಳ ವಿಚಾರವಾಗಿ ಸಮಸ್ಯೆಗಳನ್ನು ಪತ್ರವ್ಯವಹಾರದ ಮೂಲಕ ಅವನಿಂದ ತಿಳಿಯುತ್ತಿದ್ದರು.

### ೧೦. ಸಂಸ್ಕೃತ ಭಾಷೆಯು ಬೇರು ಕಿತ್ತೊಗೆಯಲಾರದಷ್ಟು ಆಳದಲ್ಲಿದೆ:--

ಕ್ರಿ. ಶ. 1860 ರಲ್ಲಿ ಒಕ್ಸ್‌ಫರ್ಡ್‌ನಲ್ಲಿ Boden Professor of Sanskrit ಆಗಿದ್ದ Prof. H. H. Wilson ಇವನು ಮೃತನಾದಾಗ ಆ ಸ್ಥಾನಕ್ಕೆ Prof. Max Mueller ಇವನು ಪ್ರಯತ್ನಿಸಿದನು. ಜಗತ್ತಿನ ಎಲ್ಲಾ ಕ್ರೈಸ್ತ ಪಂಡಿತರು ಅವನನ್ನು ಪ್ರಶಂಸಿಸಿ ಬರೆದ ಪತ್ರಗಳನ್ನೆಲ್ಲಾ ಅಧಿಕಾರಿಗಳ ಮುಂದೆ ಇಟ್ಟನು. Prof. Wilson ಇವನೇ ತನ್ನ ಮಿತ್ರನಾಗಿದ್ದ Max Mueller ಇವನನ್ನು ಕುರಿತು "The first Sanskrit Scholar in Europe" ಎಂದು ಹೇಳಿದ್ದನು.

ಆದರೆ ಇಂಗ್ಲೆಂಡಿನಲ್ಲಿ ಇಂದು ಹೇಗೋ ಹಾಗೆಯೇ ಆ ಕಾಲದಲ್ಲೂ ಜನಾಂಗ ಭೇದದ ಸೈದ್ಧಾಂತಿಕ ನೀತಿಯು ಇದ್ದೇ ಇತ್ತು. Prof. Max Mueller ಇವನು ಜಗತ್ತಿನಲ್ಲೇ ವಿಖ್ಯಾತನಾದ ಪ್ರತಿಭಾವಂತ ಸಂಸ್ಕೃತ ಸಾಹಿತಿಯೆಂದು ಎಲ್ಲರೂ ಒಪ್ಪಿದರು. ಆದರೆ ಅವನು ಜರ್ಮನ್ ದೇಶದವನು. ಆ ಕಾರಣದಿಂದ ಆ ಸ್ಥಾನಕ್ಕೆ ಬೇರೊಬ್ಬ ಆಂಗ್ಲೀಯ ವಿದ್ವಾಂಸನನ್ನೇ ನೇಮಿಸಿದರು. Sir Monier Williams ಇವನನ್ನು ಆರಿಸಿದರು. ಇವನೂ ಬಹು ಘನಹೊಂದಿದ ಸಂಸ್ಕೃತ ವಿದ್ವಾಂಸನೂ ವೇದಾಭ್ಯಾಸಿಯೂ ಆಗಿದ್ದರೂ Prof. Max Mueller ಮತ್ತು Prof. Monier Williams ಇವರೊಳಗೆ ಅಜಗಜಾಂತರ ವ್ಯತ್ಯಾಸವಿತ್ತೇ ಇತ್ತು. Max Mueller ಇವನ ಪಾಂಡಿತ್ಯದ ಎದುರಿಗೆ Dr. Monier Williams ಇವನು ಕುಸಿದು ಬೀಳಬೇಕಾಗಿತ್ತು.

ಹೇಗೂ ಆ ಕಾರಣದಿಂದ ಕರ್ಮಯೋಗಿಯಂತಿದ್ದ Prof. Max Mueller ಇವನು ನಿರಾಶನಾಗಲಿಲ್ಲ. ಅದಕ್ಕೆ ಬದಲಾಗಿ ವೇದಗಳ, ಪುರಾಣಗಳ ಮತ್ತು ಹಿಂದೂ ತತ್ತ್ವಶಾಸ್ತ್ರಗಳ ಮೇಲೆ ತನ್ನಷ್ಟು ಪ್ರೌಢವಾದ ವ್ಯಾಖ್ಯಾನವನ್ನು ಬರೆದನು. 186 ರಲ್ಲಿ ಋಗ್ವೇದ ಸಂಹಿತೆಗಳನ್ನು ಕುರಿತು ಬರೆದ ಗ್ರಂಥವನ್ನು Colebrooke Rosen ಮತ್ತು Burnouf ಈ ಮೂರು ವಿದ್ವಾಂಸರಿಗೆ 'ಅರ್ಪಣೆ' ಮಾಡಿದನು. ಇವರಲ್ಲಿ ಇಂಗ್ಲಿಷ್‌ನಲ್ಲಿ Colebrooke, ಜರ್ಮನ್‌ನಲ್ಲಿ Rosen ಮತ್ತು ಫ್ರೆಂಚ ಭಾಷೆಯಲ್ಲಿ Burnouf ವಿಖ್ಯಾತ ವಿದ್ವಾಂಸರಾಗಿದ್ದು ಅವರನ್ನು The Thre founders of Vedic scholarship in Europe ಎಂದು ಕರೆದನು.

Prof. Max Mueller ಇವನು ಓಕ್ಸ್‌ಫರ್ಡ್‌ನಿಂದ ಆಗಿಂದಾಗ್ಗೆ ಜರ್ಮನಿ ಮತ್ತು ಫ್ರಾನ್ಸಿಗೆ ಹೋಗಿ Prof. Roth, Prof. Benfey ಇತ್ಯಾದಿ ಸಂಸ್ಕೃತ ವಿದ್ವಾಂಸರೊಡನೆ ಭಾರತೀಯ ತತ್ವಶಾಸ್ತ್ರವನ್ನು ಕುರಿತು ಚರ್ಚಿಸುತ್ತಿದ್ದನು. ಇವನ ಗ್ರಂಥಗಳು ಇಂಗ್ಲಿಷ್‌ನಿಂದ ಇತರ ಯುರೋಪ್ಯ ಭಾಷೆಗಳಲ್ಲಿಯೂ ಪ್ರಕಟವಾಗಿ ವೇದಗಳೆಂದರೆ ಆ ಕಾಲದಲ್ಲಿ ಯುರೋಪಿನ ವಿದ್ವಾಂಸರಿಗೆ ವಿಸ್ಮಯ ಪಡಿಸುವ ಒಂದು ಜನಪ್ರಿಯ ಗ್ರಂಥವಾಯಿತು. ವೇದಗಳು ಬರೆಯಲ್ಪಟ್ಟ ಕಾಲಮಾನವು, ಯಾವಾಗ ಬರೆದರೆಂಬುದು ಇಂದಿಗೂ ಇತ್ಯರ್ಥವಾಗದ ಒಂದು ಸಮಸ್ಯೆಯಾಗಿದೆ. ಇದನ್ನು ಕುರಿತು ಮತ್ತು ಸಂಸ್ಕೃತ ಭಾಷೆಯ ಪ್ರಾಚೀನತೆಯನ್ನು ಕುರಿತು Max Mueller ಇವನು ತನ್ನ ಆತ್ಮ ಚರಿತ್ರೆಯಲ್ಲಿ ಈ ರೀತಿ ಹೇಳಿದ್ದು ವಿದ್ವಾಂಸರಿಗೆ ಇಂದಿಗೂ ಪ್ರಯೋಜನವಾಗಬಹುದಾಗಿದೆ.

"As to the actual date of the Veda, I readily granted that choronologically it was not so old as the Pyramids, but supposing it had been, would that in any way have increased its value for our studies? If we were to place it at 5000 B. C. I doubt whether anybody could refute such a date, while if we go back beyond the Veda, and come to measure the time required for the formation of Sanskrit and of the pro–Aryan language, I doubt very much whether even 5000 years would suffice for that. There is an unfathomable depth in the language, layer following after layer, long before we arrive at roots......"

**೧೧. ವೇದದಲ್ಲಿ ಸ್ವಾರ್ಥೋದ್ದೇಶದಿಂದ ಬರೆದ ಕೆಲವು ಅಬದ್ಧ ವಿಚಾರಗಳು:-**

Prof. Max Mueller ಇವನು ತನ್ನ "ಸಂಸ್ಕೃತ ಸಾಹಿತ್ಯ ಚರಿತ್ರೆ"ಯಲ್ಲಿ ಒಂದೆಡೆ ಹಿಂದೂ ಸಮಾಜದ ಅವ್ಯವಸ್ಥೆಯನ್ನು ಕುರಿತು ಹೇಳುವಾಗ "The Primitive Religion of the Brahmins" ಎಂದು ಹೇಳಿದ್ದಾನೆ. ಅದೇಕೆ ಅವನು ಹಾಗೆ ಹೇಳಿದನೆಂಬುದಕ್ಕೆ ತಕ್ಕ ನಿದರ್ಶನಗಳನ್ನು ಕೊಡುತ್ತಾನೆ. ಅಷ್ಟೇ ಅಲ್ಲ, ವೇದಗಳಲ್ಲಿ ಕೆಲವು ಮಂತ್ರಗಳು ಮಂತ್ರಗಳಂತೆ ಇಲ್ಲವೆಂಬುದಕ್ಕೂ ಕೆಲವು ಉದಾಹರಣೆಗಳನ್ನು ಎತ್ತಿಕೊಂಡು ಪಾಶ್ಚಾತ್ಯರು ಚರ್ಚಿಸಿದ್ದಾರೆ, ಉತ್ತಮವಾದ ಮತ್ತು ಅರ್ಥಗರ್ಭಿತವಾದ ಮಂತ್ರಗಳು ಎಲ್ಲಿವೆಯೆಂದು ಕೆಲವು ಬಾರಿ ಹುಡುಕಬೇಕಾಗುತ್ತದೆಯೆಂದು Max Mueller ಇವನು ಬೇಸರದಿಂದ ಹೇಳುತ್ತಾನೆ. ಶಂಕರ, ಮಾಧ್ವ, ಸಾಯಣ ಮೊದಲಾದವರ ಭಾಷ್ಯಗಳನ್ನೆಲ್ಲಾ ಸಾಮಾನ್ಯವಾಗಿ ಓದಿದ ಈ ಮಹಾ ಪಂಡಿತನು ಹಿಂದೂ ಧರ್ಮ ತತ್ವಗಳನ್ನು ಎಲ್ಲೂ ತೆಗಳದೇ ಇಲ್ಲ; ಆದರೂ ಒಮ್ಮೊಮ್ಮೆ ಈ ರೀತಿ ಹೇಳುತ್ತಾನೆ :—

"......Scholars who have devoted their life either to the editing of the original texts or to the careful interpretation of some of the sacred books, are more inclined after they have

disinterred from a heap of rubbish some solitary fragments of pure gold......I do not blame them for this, perhaps I should feel that I was open to the same blame myself, for it is but natural that scholars in their joy at finding one or to fragrant fruits or flowers should gladly forget the brambles and thorns that had to be thrown aside in the course of their search."

ವೇದಗಳಂಥಾ ಗ್ರಂಥಗಳಲ್ಲೂ ಯಾರೂ ನಿರೀಕ್ಷಿಸಲಾರದಂಥಾ ಹಲವು ವಿಚಾರಗಳು ಅಲ್ಲಲ್ಲಿ ಇವೆ, ನ್ಯಾಯವಾಗಿ ಹೇಳುವುದಾದರೆ ಅಂಥಾ ಕೆಲವು ಮಂತ್ರಗಳು ಮೂಲ ಗ್ರಂಥದಲ್ಲಿ ಇದ್ದುವೋ ಅಥವಾ ಇತರ ಬ್ರಾಹ್ಮಣರು ಬಹುಕಾಲಾನಂತರ ತಮ್ಮ ಅನು ಕೂಲತೆಗಾಗಿ ತಮಗೆ ಬೇಕಾದಂತೆ ಶ್ಲೋಕಗಳನ್ನು ಬರೆದು ಅಲ್ಲಲ್ಲಿ ಸೇರಿಸಿಬಿಟ್ಟರೋ ಎಂಬುದಾಗಿ ಹಲವು ಜರ್ಮನ್ ಮತ್ತು ಇಂಗ್ಲಿಷ್ ವಿದ್ವಾಂಸರು ಸಂದೇಹಕ್ಕೊಳ ಗಾಗಿದ್ದಾರೆ, ದಾನ, ಧರ್ಮ, ಪುಣ್ಯ ಇತ್ಯಾದಿಗಳ ಹೆಸರಿನಲ್ಲಿ ಹಲವು ಅಬದ್ಧ ವಿಚಾರ ಗಳು ಹೇಳಲ್ಪಟ್ಟವೆಯೆಂದು ಸಾರಿದ್ದಾರೆ, ಇದಕ್ಕೆ ಕೆಲವು ಉದಾಹರಣೆಗಳನ್ನು Prof. Wilson ಇವನು ಭಾಷಾಂತರಿಸಿದ ವೇದದಿಂದ ಹಿಂದೆಯೇ ಹೇಳಲಾಗಿದೆ, Prof. Max Mueller ಇವನೂ ಅಂಥಾ ಹೇಳಿಕೆಗಳ ಬಗ್ಗೆ ತನ್ನ ಅಸಮಾಧಾನವನ್ನು ಸೂಚಿಸಿದ್ದಾನೆ :—

"Some of the Rishis, either received immense gifts or told great lies. Brahmatiti says: "As Kasu, Chedi's son, gave me 100-head of buffaloes and 10,000 cows......He who hath given me for mine own ten cows—like gold to look upon......No other prince, no folk, is held more liberal of gifts than they (Chedis)......"

"Rishi Vasa Asvya praises the liberality of Pritusravas, son of Kanita. As Vasa Asvya, when this light of morning dawned, received from Pritisravas......60,000 steeds and 10,000 cows..... and 20,000 camels I obtained......"

"......Ten hundred brown in hue, and other ten in three spots; in all 10,000 cows ...Ten browns that make my wealth increase fleet steeds whose tails are long and fair......He gave a chariot wrought of gold, the prince was passing beautiful..."

"......And now to Vasa Asvya here this stately woman (may be wife of a conquered king) is led forth......Adorned with ornaments of gold."

**೧೨. ಹೀಗಿದ್ದರೂ ಭರತಖಂಡವು ಲೋಕಕ್ಕೆ ಮಾರ್ಗದರ್ಶಕನಾಯಿತು :-**

ವೇದಗಳಲ್ಲಿ ಅಮೂಲ್ಯ ಹಾಗೂ ತತ್ವಗರ್ಭಿತವಾದ ವಿಚಾರಗಳು ಇವೆಯಾದರೂ ಮೇಲೆ ಹೇಳಿದಂತೆ ಅನೇಕ ವಿಷಯಗಳನ್ನು ಬ್ರಾಹ್ಮಣರು ಪೂರ್ವಕಾಲದ ಋಷಿಗಳ

ಹೆಸರಿನಲ್ಲಿ ಹಲವು ಕಾಲಾನಂತರ ಬರೆದು ಸೇರಿಸಿಬಿಟ್ಟಿರಬಹುದೆಂದೂ ಇಂಥಾ ಅಬದ್ಧ ವಿಚಾರಗಳು ನೂರಾರು ಇದ್ದ ಕಾರಣದಿಂದಲೇ ಅವರು ಅವನ್ನು ಅಡಗಿಸಿಟ್ಟು ಅದರ ಮಹತ್ವವನ್ನು ಹೆಚ್ಚಿಸಲು ಪ್ರಯತ್ನಿಸಿದ್ದಿರಬಹುದೆಂದೂ Max Mueller ಇವನು ಅಭಿಪ್ರಾಯಪಡುತ್ತಾನೆ. ಹೇಗೂ ವೇದಗಳಲ್ಲಿ ತನಗಿರುವ ನಿಶ್ಚಲವಾದ ಭಕ್ತಿ ಗೌರವಗಳನ್ನು ಕಾರ್ಯತಃ ಪ್ರದರ್ಶಿಸಿದ ಈ ಶ್ರೇಷ್ಠ ವಿದ್ವಾಂಸನು ಅವುಗಳನ್ನು ಕುರಿತು ಹೀಗಂದುದನ್ನು ಗಮನಿಸಬೇಕಿದೆ:—

"......The historical importance of the Veda can hardly be exaggerated, but its intrinsic merit, and particularly the beauty or elevation of its sentiments, have by many been rated far too high. Large numbers of the Vedic hymns are childish in the extreme; tedious, low.. ...The gods are constantly invoked to protect their worshippers, to grant them food, large flocks, large families and a long life, for all which benefits they are to be rewarded by the praises and sacrifices offered day after day, or at certain seasons of the year. But hidden in this rubbish there are precious stones.

" I remind you again that the Veda contains a great deal of what is childish and foolish, though very little of what is bad and objectionable. Some of its poets ascribe to the gods sentiments and passions unworthy of the deity, such as anger, revenge, delight in material sacrifices; they likewise misrepresent human nature on a low level of selfishness and worldliness. Many humans are utterly unmeaning and insipid, and we must search patiently before we meet, here and there, with sentiments that come from the depth of the song and with prayers in which we could join ourselves.

ವೇದಗಳನ್ನು ಕುರಿತು ನ್ಯಾಯವಾದ ಟೀಕೆಯನ್ನು ಬರೆದ ಈ ಆಧುನಿಕ ಋಷಿಯು ತನ್ನ ಅಸಂಖ್ಯ ಗ್ರಂಥಗಳಲ್ಲಿ ಭರತಖಂಡ, ಸಂಸ್ಕೃತ ಭಾಷೆ, ಭಾರತೀಯ ಸಂಸ್ಕೃತಿ ಎಂಬಿವುಗಳ ಬಗ್ಗೆ ತನಗೆ ಅದೆಷ್ಟು ಅಭಿಮಾನ ಗೌರವವಿದೆಯೆಂಬುದನ್ನು ಈ ರೀತಿ ಭಾವನಾಪರವಶನಾಗಿ ಸಾರಿ ಸಾರಿ ಹೇಳಿದ್ದಾನೆ. Max Mueller ಇವನ ಇಂಥಾ ಹೇಳಿಕೆಗಳು ಹಲವು ಇವೆ; ಯಾವ ಭಾರತೀಯನೂ ಇಂಥಾ ಒರ್ವ ರಸಋಷಿಯನ್ನು ವಿದೇಶವೊಂದರಲ್ಲಿ ಪಡೆದುದರ ಬಗ್ಗೆ ಹೆಮ್ಮೆ ಪಡುವಂತಹದಾಗಿದೆ:—

"......If I were asked under what sky the human mind has most fully developed some of its choicest gifts, has mostly deeply pondered on the greatest problems of life, and has found solution of some of them which well deserve the attention of those who have studied Plato and Kant, I should point to India. And

if I were to ask myself from what literature we, here in Europe, we who have been nurtured, almost exclusively on the thoughts of Greeks and Romans and on Semitic race, the Jewish, may draw the corrective which is most wanted to make our inner life more perfect, more comprehensive, more universal, in fact, more truly human, a life not for this life only, but a transfigured and eternal life again I should point to India."

Prof. Max Mueller ಇವನ ಈ ಅದ್ಭುತವಾದ ವಿಚಾರ ಸರಣಿ ಮತ್ತು ಹಿಂದೂ ಸಂಸ್ಕೃತಿಯಲ್ಲಿ ಅವನಿಗಿದ್ದ ಆದರ ಅಭಿಮಾನಗಳು ಜಗತ್ತಿನಲ್ಲೆಲ್ಲಾ ಅಂದೇ ಹಬ್ಬಿತ್ತೆಂಬುದಕ್ಕೆ ಸಾಕ್ಷ್ಯವಾಗಿ ನಮ್ಮ ಕಾಲದ ಶ್ರೇಷ್ಠ ಇತಿಹಾಸಕಾರನಾದ ಅಮೇರಿಕಾದ Will Durant ಇವನು ಮೇಲಿನ ಅಭಿಪ್ರಾಯವನ್ನೇ ಅದೇ ಶೈಲಿಯಲ್ಲಿ ಅದೇ ಭಾವವೇಗದಲ್ಲಿ ಅದೇ ಬಗೆಯ ನುಡಿಗಟ್ಟಿನಲ್ಲಿ ಹರಿಯಿಸಿದ್ದು ಇನ್ನಷ್ಟು ಆಶಾದಾಯಕವಾದ ವಿಷಯವಾಗಿದೆ. Will Durant ಇವನು ಭಾರತಮಾತೆಯ ಪ್ರಾಚೀನ ತಾತ್ವಿಕ, ಸಾಂಸ್ಕೃತಿಕ ಮತ್ತು ಜ್ಞಾನೋನ್ನತಿಯ ವೈಭವವನ್ನು ಕುರಿತು ಈ ರೀತಿ ಹೇಳಿದ್ದಾನೆ:—

"The new direction came from the East and spread westward along with the Christian faith which had been born in the Orient......India was the motherland of our race, and Sanskrit the mother of Europe's languages; she was the mother of our philosophy; mother, through the Arabs, of much of our mathematics; mother through the Buddha, of the ideals embodied in Christianity; mother, through the village community, of self-government and democracy. Mother India is in many ways the mother of us all."

**೧೩. ಭಾಷಾಶಾಸ್ತ್ರದ ಮೇಲೆ ಗ್ರಂಥಗಳು, ಉಪನ್ಯಾಸಗಳು :—**

Prof. Max Mueller ಇವನು ತನ್ನ ಬರೆವಣಿಗೆಗೆ ಬೇಕಾದಂಥಾ ಆಧಾರ ಗ್ರಂಥಗಳನ್ನು 1850 ರಿಂದ 1860 ರವರೆಗೆ ಹಿಂದೂಸ್ಥಾನದಿಂದ ತರಿಸುತ್ತಲೇ ಇದ್ದನು. ಹೀಗೆ ತರಿಸುವಾಗ ಈ ದೇಶದಿಂದ ಯೂರೋಪಿಗೆ ಹೋಗುತಿದ್ದ ಹಡಗುಗಳು ಎರಡು ಬಾರಿ ಅವಘಡಕ್ಕೀಡಾಗಿ ಹಲವು ಬೆಲೆ ಬಾಳುವ ಗ್ರಂಥಗಳು ನೀರು ಪಾಲಾದುವು. ಹಾಗಿದ್ದರೂ ಅವನಿಗೆ ಬೇಕಾದಷ್ಟು ಓಲೆ ಬರೆಹಗಳು ದೊರೆತುವು. ಅಲ್ಲದೆ ಓಕ್ಸ್‌ಫರ್ಡ್‌ನಲ್ಲಿ Prof. Wilson, ಲಂಡನ್‌ನಲ್ಲಿ Prof. Bopp ಬರ್ಲಿನ್‌ನಲ್ಲಿ Prof. Lasen ಮತ್ತು ಪ್ಯಾರಿಸ್‌ನಲ್ಲಿ Prof. Burnouf ಇವರೂ ಅವನಿಗೆ ಮಾರ್ಗದರ್ಶಕರಾಗಿ ಆಗ ಇದ್ದರು.

1860 ರಿಂದ 1870ರ ವರೆಗೆ Prof. Max Mueller ಇವನ ಹಲವು ಗ್ರಂಥಗಳು ಪ್ರಕಟವಾದುವು. ಓಕ್ಸ್‌ಫರ್ಡ್ ಮತ್ತು ಲಂಡನ್‌ನಲ್ಲಿ ಅವನು ಕೊಟ್ಟ

ಉಪನ್ಯಾಸಗಳ ಸಂಕಲನವು ಹಲವು ಕಾಂಡಗಳ ಉದ್ಗ್ರಂಥಗಳಾಗಿ ಹೊರಬಂದುವು. ಸಂಸ್ಕೃತ, ಲ್ಯಾಟಿನ್, ಗ್ರೀಕ್ ಇತ್ಯಾದಿ ಭಾಷೆಗಳಿಗನ್ವಯಿಸಿ ಅವನು ಭಾಷಾಶಾಸ್ತ್ರದ ಮೇಲೆ ಕೊಟ್ಟ ಉಪನ್ಯಾಸಗಳು "Science of Languages" ಎಂಬ ಸಂಕಲನವು ಜರ್ಮನ್ ಭಾಷೆಯಲ್ಲಿ ಎಂಟು ಬಾರಿ ಮತ್ತು ಇಂಗ್ಲಿಷ್‌ನಲ್ಲಿ ಐದು ಬಾರಿ ಅವನಿದ್ದಾಗಲೇ ಪುನರ್ಮುದ್ರಣವಾಗಿದೆ. W. D. Whitney ಇವನ ಆ ಭಾಷಾಶಾಸ್ತ್ರ ಗ್ರಂಥದ ಮೇಲೆಯೇ ಪ್ರತ್ಯೇಕವಾಗಿ ಮತ್ತು ಸವಿಸ್ತಾರವಾದ ಒಂದು ಗ್ರಂಥವನ್ನು ಬರೆದನು.

"Is Religion a Product of Human Mind?" ಎಂಬ ವಿಷಯವಾಗಿ Prof. Max Mueller ಇವನು ಕೊಟ್ಟ ಉಪನ್ಯಾಸಗಳನ್ನೆಲ್ಲಾ G. Greenlees ಇವನು ಸಂಪಾದಿಸಿ ಪ್ರಕಟಿಸಿದನು. ಬೌದ್ಧಮತ, ಹಿಂದೂಮತ, ಏಷ್ಯಾಖಂಡದ ಧಾರ್ಮಿಕ ಹಾಗೂ ಪೌರಾಣಿಕ ಸಂಸ್ಕೃತಿ, ಜನಜೀವನ ಇತ್ಯಾದಿಗಳನ್ನು ಕುರಿತು ಮತ್ತು ಒಟ್ಟಾಗಿ ಪೌರಸ್ತ್ಯ ಸಾಹಿತ್ಯದ ಮೇಲೆ Max Mueller ಇವನು ಬರೆದ ಗ್ರಂಥಗಳು ನೂರೈವತ್ತಕ್ಕೂ ಮಿಕ್ಕಿ ಇವೆ. ಯೂರೋಪು ಖಂಡವನ್ನು ಬಿಟ್ಟು ಹೊರಗೆ ಹೋಗದೇ ಇದ್ದ ಈ ಪ್ರಚಂಡ ತತ್ವಜ್ಞನು ತಾನು ಕುಳಿತಲ್ಲಿಂದಲೇ ಇಡೀ ಏಷ್ಯಾಖಂಡದ ಪ್ರಾಚೀನ ಧರ್ಮ, ಸಂಸ್ಕೃತಿ, ಸಾಹಿತ್ಯವನ್ನೆಲ್ಲಾ ಅನ್ವೇಷಿಸಿದನು.

Max Mueller ಇವನ ಋಗ್ವೇದಭಾಷ್ಯದ ಎರಡು ಕಾಂಡಗಳು ೨೦೦೦ Folio ಪುಟದಷ್ಟು ದೊಡ್ಡದಿದ್ದು ಅದರ ಎರಡನೇ ಮುದ್ರಣವು 1877 ರಲ್ಲಾಯಿತು. ಋಗ್ವೇದ ಸಂಹಿತೆಗಳು ಮತ್ತು ಸಾಯಣಾಚಾರ್ಯನ ಭಾಷ್ಯವನ್ನು ಪ್ರತಿಪಾದಿಸಿದ ಮತ್ತು ವಿವರಿಸಿದ ಇವನ ಗ್ರಂಥಗಳ ನಾಲ್ಕು ಕಾಂಡಗಳು 1890 ರಲ್ಲಿ ವಿಜಯನಗರದ ರಾಜನ ಉದಾರ ಆಶ್ರಯದಿಂದ ಪುನರ್ಮುದ್ರಣವಾದುವು. ಈ ಗ್ರಂಥಕಾಂಡಗಳು ಒಟ್ಟಾಗಿ 3000 folio ಪುಟಗಳಷ್ಟು ದೊಡ್ಡದಿದೆ.

**೧೪. ಏಷ್ಯಾಖಂಡದ ಎಲ್ಲಾ ಧರ್ಮಶಾಸ್ತ್ರಗಳ ಬಗ್ಗೆ ಗ್ರಂಥಗಳು :—**

ಏಷ್ಯಾಖಂಡದ ವಿವಿಧ ಮತ, ಧರ್ಮ ಮತ್ತು ಸಾಹಿತ್ಯದ ಮೇಲೆ ಬರೆದ ಮತ್ತು ಬರೆಯಿಸಿ ಸಂಪಾದಿಸಿದ Prof. Max Mueller ಇವನ ಗ್ರಂಥಗಳು ಸುಮಾರು ಐವತ್ತಕ್ಕೂ ಮಿಕ್ಕಿ ಇವೆ. ಈ ಗ್ರಂಥ ಸಂಕಲನಗಳ ಪ್ರತಿಯೊಂದು ಕಾಂಡವೂ ಸರಾಸರಿ 600 demy ಪುಟಗಳಷ್ಟು ಇದ್ದು ಬಹು ಉತ್ತಮವಾದ ಗ್ರಂಥರಾಶಿಯಾಗಿವೆ. "Sacred Books of the East" ಇವುಗಳಲ್ಲಿ ವೇದ, ಉಪನಿಷತ್ತು, ಪುರಾಣಗಳು, ಬೌದ್ಧಮತದ ವಿವಿಧ ಪ್ರತಿಪಾದನೆಗಳು, ಚೀನಾದ ಲಾವೊಟ್ಸ್, ಕುಂಗ್‌ಫ್ಯೂಟ್ಸ್ ಇವರು, ಮಹ್ಮದ ಮತ್ತು ಸ್ಜೊರಾಷ್ಟ್ರನ ತತ್ವಗಳು—ಹೀಗೆ ಎಲ್ಲಾ ವಿಚಾರಗಳನ್ನೊಳಗೊಂಡಿವೆ. ಈ ಸಂಪಾದಕತ್ವದಲ್ಲಿ Prof. Max Mueller ಇವನು 1870 ರಿಂದ 1895ರ ವರೆಗೂ ನಿರತನಾಗಿದ್ದನು.

"Sacred Books of the East" ಗ್ರಂಥಕಾಂಡಗಳನ್ನು ಬರೆದ ಕೆಲವು ಪ್ರಮುಖ ವಿದ್ವಾಂಸರ ಹೆಸರನ್ನು ಹಿಂದೆಯೇ ಹೇಳಲಾಗಿದೆ. ಅವರ ಪೈಕಿ

Hermann Oldenburg, E. B. Cowell, George Buhler, Julius Eggeling, Prof. Kuhn, Dr. L. Sehoroedar ಮೊದಲಾದ ಕೆಲವರು ಬಹು ಪ್ರಮುಖ ಪಾತ್ರವನ್ನು ವಹಿಸಿದ್ದಲ್ಲದೆ ಪ್ರತ್ಯೇಕ ಗ್ರಂಥಕಾಂಡಗಳನ್ನೂ ಬರೆದರು. ಹಿಂದೂಸ್ಥಾನ, ಚೀನಾ, ಬರ್ಮಾ, ಟಿಬೇಟ್, ಪರ್ಷಿಯಾ, ಅರೇಬಿಯ ಮೊದಲಾದ ದೇಶಗಳ ಧರ್ಮಗ್ರಂಥಗಳನೆಲ್ಲಾ ಸವಿಸ್ತಾರವಾಗಿ ವಿಮರ್ಶಿಸಿದಲ್ಲದೆ ಅವುಗಳೆಲ್ಲದರ ಮೇಲೆ ದೀರ್ಘ ವ್ಯಾಖ್ಯಾನವನ್ನೂ ನಡೆಸಿದರು. ಸುಮಾರು ಇಪ್ಪತ್ತೈದು ಭಾಷೆಗಳಲ್ಲೂ ಪ್ರಬಲ ಪಂಡಿತನೆನಿಸಿದ್ದ Prof. Max Mueller ಇವನ ಪರಿಶೀಲನೆಯಿಂದ ಈ ಗ್ರಂಥಗಳು ಲಂಡನ್‌ನಲ್ಲಿ ಬ್ರಿಟಿಷ್ ಸರಕಾರದ ಆಶ್ರಯದಿಂದ ಮುದ್ರಣವಾಗಿ ಪ್ರಕಟವಾದುವು. ಈ ಗ್ರಂಥಗಳ ಫ್ರೆಂಚ್, ಮತ್ತು ಜರ್ಮನ್ ಭಾಷಾಂತರಗಳೂ ಆಯಾ ಭಾಷಾ ಪಂಡಿತರಿಂದ ನಡೆಸಲ್ಪಟ್ಟವು. ಈ ಗ್ರಂಥ ಕಾಂಡಗಳ 32 ನೇ ಸಂಕಲನದಲ್ಲಿ Max Mueller ಇವನು ಪುನಃ ವೇದಗಳನ್ನೂ, ಅವುಗಳಲ್ಲಿ ಹೇಳಲ್ಪಟ್ಟ ಮರುತ್, ರುದ್ರ, ಅಗ್ನಿ, ಇಂದ್ರಾದಿ ಆರಾಧ್ಯ ದೇವತೆಗಳನ್ನೂ ಕುರಿತಾಗಿ ಇನ್ನಷ್ಟು ವ್ಯಾಖ್ಯಾನ ನಡೆಸಿದ್ದಾನೆ, ಈ ಗ್ರಂಥದ ಒಂದೆಡೆಯಲ್ಲಿ ಅವನು ಹೀಗೆ ಹೇಳುತ್ತಾನೆ :—

"......Considering my advanced years, I thought I should act in the true interest of Vedic scholarship ...... Our chief object is to help forward a criticai study of the Veda...... "

Prof. Max Mueller ಇವನು 1865ರ ಕಾಲದಲ್ಲಿ ತಾನೊಮ್ಮೆ ಹೇಗಾದರೂ ಹಿಂದೂಸ್ಥಾನಕ್ಕೆ ಹೋಗಲೇಬೇಕೆಂದು ಹವಣಿಸಿದ್ದನು. " ... Only I do not Know how to get there ", ಎಂಬೀ ಸಮಸ್ಯೆಯು ಅವನನ್ನು ಕಾಡುತ್ತಾ ಇತ್ತು. ಆಗ ಇಂಗ್ಲೆಂಡಿನಲ್ಲಿದ್ದ ಪಂಜಾಬಿನ ರಾಜಕುಮಾರ ದಿಲೀಪಸಿಂಹನೊಡನೆ ಈ ದೇಶವನ್ನು ಒಮ್ಮೆ ಸಂದರ್ಶಿಸಲು ನಿಶ್ಚಯಿಸಿದ್ದನು. ಆದರೆ ಅವನ ಆ ಅಭಿಲಾಷೆಯೂ ಈಡೇರಲಿಲ್ಲ.

**೧೫. ಮ್ಯಾಕ್ಸ್‌ಮುಲ್ಲರನ ಹಲವು ಸಂಸ್ಕೃತ ಲೇಖನ ಪತ್ರಗಳು :—**

ಯೂರೋಪು ಖಂಡದಿಂದ ಪ್ರತಿವರ್ಷವೂ ಹಿಂದೂಸ್ಥಾನಕ್ಕೆ ಬರುತ್ತಿದ್ದ ಆಂಗ್ಲೇಯ ನೌಕರರಿಗೆ ಅವರು ಅಲ್ಲಿಂದ ಹೊರಡುವುದಕ್ಕೆ ಮುಂಚೆ Civil Service Test ಇದನ್ನು ಕೊಟ್ಟು ಸರಕಾರವು ಅವರನ್ನು ಪರೀಕ್ಷಿಸುತ್ತಿದ್ದರು. ಈ ದೇಶದ ವಿವಿಧ ಇಲಾಖೆಗಳಲ್ಲಿ ಅಧಿಕಾರವನ್ನು ಹೊರತಕ್ಕ ಆ ಅಭ್ಯರ್ಥಿಗಳ ಭಾಷಾಜ್ಞಾನವನ್ನು ಹೆಚ್ಚಿಸುವುದು ಆ ಪರೀಕ್ಷೆಯ ಧ್ಯೇಯಗಳಲ್ಲಿ ಒಂದಾಗಿತ್ತು. Prof. Max Mueller ಇವನು ಸಂಸ್ಕೃತ, ಹಿಂದೂಸ್ಥಾನೀ ಮತ್ತು ಬಂಗಾಳೀ ಭಾಷೆಗಳಿಗೆ ಪ್ರಧಾನ ಪರೀಕ್ಷಕನಾಗಿ ಹಲವು ವರ್ಷಗಳ ವರೆಗೂ ಇದ್ದನು. ಸಂಸ್ಕೃತದಲ್ಲಿ ಶೇಕಡ ಎಪ್ಪತ್ತೈದರಷ್ಟು ಮಾರ್ಕುಗಳನ್ನು ತೆಗೆದವರನ್ನು ಮಾತ್ರ ಅವನು ಹಿಂದೂಸ್ಥಾನಕ್ಕೆ ಕಳುಹಿಸಲು ಒಪ್ಪುತಿದ್ದನು. ಅಷ್ಟೇ ಅಲ್ಲ, ಯೂರೋಪಿನಲ್ಲೂ ಹಿಂದೂಸ್ಥಾನದಲ್ಲೂ

ಸಂಸ್ಕೃತ ವ್ಯಾಸಂಗಕ್ಕೆ ಇನ್ನಷ್ಟು ಹೆಚ್ಚಿನ ಅವಕಾಶವನ್ನು ಕಲ್ಪಿಸಬೇಕೆಂದು ಆಯಾ ದೇಶಗಳ ಸರಕಾರಗಳೊಡನೆ ಅವನು ಹೋರಾಡುತ್ತಲೇ ಇದ್ದನು.

ಕ್ರಿ. ಶ. 1886 ರಲ್ಲಿ ಬ್ರಿಟಿಷ್ ರಾಷ್ಟ್ರಗೀತೆಯಾದ " God Save the Queen " ಇದನ್ನು ಹಿಂದೂಸ್ಥಾನದ ಎಲ್ಲಾ ಭಾಷೆಗಳಲ್ಲೂ ಅನುವಾದಿಸಿ ಹಾಡಬೇಕೆಂದು ಸರಕಾರವು ವಿಧಿಸಿತ್ತು. ಅದರಂತೆ ಎಲ್ಲಾ ದೇಶೀಯ ಭಾಷೆಗಳಿಗೂ ಆ ಹಾಡನ್ನು ಭಾಷಾಂತರಿಸಲಾಯಿತು. ಕೆಲವು ಪಂಡಿತರು ಸಂಸ್ಕೃತದಲ್ಲೂ ಅದನ್ನು ಬರೆದರು. ಆದರೆ ಅವರ ಆ ಭಾಷಾಂತರವು ಸರಿಯಿದೆಯೋ ಇಲ್ಲವೋ ಎಂದು ಪರಿಶೀಲಿಸಲು ಸರಕಾರದವರು ಅವನ್ನೆಲ್ಲಾ Max Mueller ಇವನಿಗೆ ಕಳುಹಿಸಿಕೊಟ್ಟರು. ಆ ನಿಷ್ಣಾವಂತನಾದ ಸಂಸ್ಕೃತ ವಿದ್ವಾಂಸನಿಗೆ ಅವಾವುವೂ ಚೆನ್ನಾಗಿ ಕಂಡುಬರಲಿಲ್ಲ. ಆದುದರಿಂದ ತಾನೇ ಅದನ್ನು ಸಂಸ್ಕೃತದಲ್ಲಿ ಬರೆದು ಅದೇ ವರ್ಷ ಲಂಡನ್‌ನಲ್ಲಿ ನೆರೆದ ಒಂದು ಸಭೆಯಲ್ಲಿ ಹಾಡಿದನು. ಅದರ ಎರಡನೇ ಮತ್ತು ಮೂರನೇ ಪದ್ಯಭಾಗಗಳು ಹೇಗಿದ್ದುವೆಂಬುದಕ್ಕೆ ಇಂಗ್ಲಿಷ್ ಲಿಪಿಯಲ್ಲಿ ಬರೆದುದನ್ನು ಅಂತೆಯೇ ಇಲ್ಲಿ ನಿದರ್ಶನಾರ್ಥವಾಗಿ ಕೊಡಲಾಗಿದೆ :—

" .................. ..........

Rajnim Prasadim
Lokapranadinim
  Pahisvara
Laksho niprabhasinim
Satruprahasinim
Tam dighasasinim
  Pahisvara

Ehy Asmadisvara
Satrun Pratiskira
  Uchchhinddhi tan
Tachchhadma Nasaya
Mayascha Pasaya
Pahy Asmadasraya
  Sarvam Janam.

Tvadratna bhushitam
Rajye chiroshitam
  Pahisvara
Rajye prapalinim

Saddharma Salinim
Tam Stotramalinim
Pahisvara
........... ........... .... "

ಕ್ರಿ. ಶ. 1889ರಲ್ಲಿ Max Mueller ಇವನು Aryan Section of the International Congress of Orientalists ಇದರ ಪ್ರಥಮ ಅಧ್ಯಕ್ಷನಾಗಿ ಸ್ಟಾಕ್‌ಹೊಮ್ ಸಮ್ಮೇಳನಕ್ಕೆ ಆರಿಸಲ್ಪಟ್ಟನು. ಇದೇ ಪರಿಷತ್ತು 1892ರಲ್ಲಿ ಲಂಡನ್‌ನಲ್ಲಿ ಸೇರಿದಾಗಲೂ ಅವನೇ ಅದರ ಅಧ್ಯಕ್ಷನಾಗಿದ್ದನು.

**೧೬. ಭಾರತದ ಸಾಮಾಜಿಕ ಸುಧಾರಣೆಗೆ ಮ್ಯಾಕ್ಸ್‌ಮುಲ್ಲರನ ಪ್ರಯತ್ನ :—**

ಈ ದೇಶದ ಸಮಾಜದ ಪರಿಷ್ಕಾರಕ್ಕಾಗಿ Max Mueller ಇವನು ಎಡೆಬಿಡದೆ ಶ್ರಮಿಸಿದನು. Jones, Colebrooke, Carey ಮೊದಲಾದವರಂತೆ ಇವನೂ ಬಾಲ್ಯವಿವಾಹ, ಸತೀಸಹಗಮನ, ವಿಧವಾವಿವಾಹ ಮೊದಲಾದುವುಗಳ ಬಗ್ಗೆ ಶ್ರುತಿ, ಸ್ಮೃತಿಗಳ ಆಧಾರಗಳನ್ನು ಕೊಟ್ಟು ಸರಕಾರದೊಡನೆ ತಕ್ಕ ಸುಧಾರಣೆಗಳನ್ನು ತರಲು ಹೋರಾಡಿದನು. ಹಿಂದೂ ಸಮಾಜವು ಜಾತೀಯವಾಗಿ ಒಡೆದುದನ್ನು ತಿಳಿದು ತುಂಬಾ ದುಃಖಿಸಿದನು. ತನ್ನ ಜೀವಮಾನವನ್ನೇ ವೇದಾಭ್ಯಾಸದಲ್ಲಿ ಕಳೆದ ಈ ವಿದ್ವಾಂಸನು ಇದನ್ನು ಕುರಿತು ಈ ರೀತಿ ಹೇಳಿದನು :—

" There is no authority whatever in the hymns of the Veda for the complicated system of castes. There is no law to prohibit the different classes of the people from living together, from eating and drinking together ; no law to prohibit the marriage of people belonging to different castes .....".

ಹೇಗೂ ಈ ದೇಶದಲ್ಲಿರುವ ಈ ಚಿಂತಾಜನಕವಾದ ಪರಿಸ್ಥಿತಿಗೆ ಬ್ರಾಹ್ಮಣರೇ ಕಾರಣರಾದರೋ ಎಂಬುದಾಗಿ ಶಂಕಿಸುತ್ತಾ, ಅವನು ಹೀಗನ್ನುತ್ತಾನೆ :—

" Great wars went on in India, but they were left to be fought by the warriors by profession (Kshatriyas). The peasants in their villages remained quiet, accepting the consequence, whatever they might be, and, the Brahmins lived on, thinking and dreaming in their forests, satisfied to rule after the battle was over. "

Pof. Max Mueller ಇವನು ಕೇವಲ ಸಾಹಿತಿ ಮತ್ತು ವೇದಾಂತಿ ಮಾತ್ರ ಅಲ್ಲ ; ರಾಜಕೀಯದಲ್ಲೂ ಅವನಿಗೆ ವಿಶೇಷ ಆಸಕ್ತಿಯಿದ್ದಿತು. ದೇಶದ ಹಿತಕ್ಕಾಗಿ ಅಲ್ಲದೆ ಮತ್ತು ತಮ್ಮ ಪ್ರತಿಷ್ಠೆಗಾಗಿ ಒಂದೊಂದು ವಿಧದ ಧೋರಣೆಯನ್ನು ರಾಜರಾಗಲೀ ಪ್ರಜಾಪ್ರಭುತ್ವದ ಹೆಸರಿನಲ್ಲಿ ಮಂತ್ರಿಗಳಾಗಲೀ ಜಾರಿಗೆ ತಂದರೆ ಅಂಥಾ ಧೋರಣೆಯು ಕಾಗದದ ಮೇಲೆ ಮಾತ್ರ ಉಳಿದೀತಲ್ಲದೆ ದೇಶಕ್ಕೆ ಯಾವ ರೀತಿಯಲ್ಲೂ

ಪ್ರಯೋಜನವಾಗದು ಎಂಬುದಾಗಿ ತನ್ನ ಆತ್ಮಚರಿತ್ರೆಯಲ್ಲಿ ಹಲವು ಬಗೆಯ ವಿಚಾರ ಪ್ರಚೋದನೆಯನ್ನು ನಡೆಸುತ್ತಾ ಈ ರೀತಿ ಹೇಳುತ್ತಾನೆ :—

"A premature measure may be carried through the House by a minister with a powerful majority, but it does not acquire vitality and maturity by being carried ; it often remains on the statute book—a dead letter, till in the end it has to be abolished with other rubbish."

Prof. Max Mueller 1890ರ ವೇಳೆಗೆ ವಿಶ್ವವಿಖ್ಯಾತನಾದ ಮತ್ತು ಜನಪ್ರಿಯನಾದ ವಿದ್ವಾಂಸನಾದನು. ಅವನ ಬರೆಹಗಳು ಹಲವು ದೇಶಗಳಲ್ಲಿ ಮತ್ತು ಹಲವು ಭಾಷೆಗಳಲ್ಲಿ ಪ್ರಚಾರವಾದುವು. ಬೌದ್ಧ ಸಾಹಿತ್ಯವೂ ಅವನ ಮೂಲಕವೇ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಾರವಾಯಿತೆಂದೆನ್ನಬಹುದು. ಥೈಲೇಂಡ್ ಮತ್ತು ಕೇಂಬೊಡಿಯಾದ ಅಂದಿನ ಅರಸರೂ ಅವನ ಸಾಹಸವನ್ನು ಸ್ಮರಿಸಿ ಅವನನ್ನು ಅಭಿನಂದಿಸಿದರಲ್ಲದೆ ಅವನ ಗ್ರಂಥಗಳನ್ನು ಏಷ್ಯಾಖಂಡದ ಬೌದ್ಧಮತ ಪ್ರಚಾರದಲ್ಲಿರುವ ಆಯಾ ಪ್ರಾದೇಶಿಕ ಭಾಷೆಗಳಲ್ಲೂ ಬರೆಯಲಾದುವು.

ಹಿಂದೂಸ್ಥಾನದ ನೂರಾರು ಪಂಡಿತರು ಅವನೊಡನೆ ಪತ್ರವ್ಯವಹಾರಗಳನ್ನು ಬೆಳೆಸುತ್ತಾ ಅವನ ವಿದ್ವತ್ತನ್ನೂ ಪ್ರತಿಭೆಯನ್ನೂ ಪ್ರಶಂಸಿಸಿದ್ದರು, ಹಿಂದೂ ಧರ್ಮಶಾಸ್ತ್ರಗಳಲ್ಲಿ ತಮಗೆ ಕಂಡುಬಂದ ಬಿಕ್ಕಟ್ಟಾದ ವಿಷಯಗಳನ್ನು ವಿವರಿಸುವಂತೆ ಅವನನ್ನು ಕೋರುತ್ತಿದ್ದರು. ಇಂಥಾ ಪತ್ರಗಳಿಗೆಲ್ಲಾ Max Mueller ಇವನು ಸಂಸ್ಕೃತದಲ್ಲಿಯೇ ಉತ್ತರವನ್ನು ಬರೆಯುತ್ತಿದ್ದನು. ಒಮ್ಮೆ ಜೋಧಪುರದ ಒರ್ವ ಪಂಡಿತನು ಬರೆದ ಪತ್ರಕ್ಕೆ ಅವನು ಹೀಗೆ ಉತ್ತರಿಸಿದನು :—

"......The learned Pandits in India have been very indulgent in their judgment of my work......How little I have deserved all the kind things that have been said and written about me by the scholars of your country."

## ೧೭. ಹಲವು ರಾಷ್ಟ್ರ ಸರಕಾರಗಳು ಮ್ಯಾಕ್ಸ್‌ಮುಲ್ಲರನನ್ನು ಗೌರವಿಸಿದುವು :

Prof. Max Mueller ಇವನು ತನ್ನ ಬರೆವಣಿಗೆಗೆ Prof. Wilson, Prof. E. Burnouf, Prof. Lasen, Dr. Benfey, Dr. Roth, Boehtlingk, Prof. Kuhn, Aufrecht, Dr. Whitney, Prof. Regnier ಈ ಮೊದಲಾದ ಪ್ರಸಿದ್ಧ ಐರೋಪ್ಯಾ ವಿದ್ವಾಂಸರನ್ನು ಪ್ರತ್ಯಕ್ಷವಾಗಿಯಾ ಪರೋಕ್ಷವಾಗಿ ಕಂಡು ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ತನ್ನ ಭಾಷ್ಯಗಳಿಗೆ ತಕ್ಕ ಪರಿಪುಷ್ಟತೆಯನ್ನಿತ್ತನು. ಅವನ ಗ್ರಂಥಗಳನ್ನು ಭಾಷಾಂತರಿಸಿದ ಅಮೇರಿಕಾ, ಜರ್ಮನಿ, ಹಾಲೆಂಡ್, ಫ್ರಾನ್ಸ್, ಇಟಲಿ, ಹಿಂದೂಸ್ಥಾನ, ಬರ್ಮಾ, ಚೀನಾ ಮೊದಲಾದ ದೇಶಗಳ ಪಂಡಿತರು ತಮ್ಮ ಬರವಣಿಗೆಯನ್ನು ಅವನಿಗೆ ತೋರಿಸಿ ಅವನ ಒಪ್ಪಿಗೆಯನ್ನು ಪಡೆಯಬೇಕಿತ್ತು ; ಏಕೆಂದರೆ ಅವನು ಭಾಷಾಂತರದ ಶೈಲಿ

ಮತ್ತು ಭಾಷೆ ಮತ್ತು ನಿರೂಪಣೆಯ ರೀತಿಯನ್ನು ಪರೀಕ್ಷಿಸಿ ಅವು ತನಗೆ ತೃಪ್ತಿಯಾಗಿದ್ದರೆ ಮಾತ್ರ ಆ ಗ್ರಂಥಗಳನ್ನು ಪ್ರಕಟಿಸಬಹುದೆಂದು ಹೇಳುತ್ತಿದ್ದನು.

ಕ್ರಿ. ಶ. 1875ರ ನಂತರ Prof. Max Mueller ಇವನು ಹಲವು ದೇಶಗಳ ಸಾಹಿತ್ಯ ಕೂಟಗಳ ಗೌರವ ಸದಸ್ಯನಾಗಿದ್ದು ಭಾರತೀಯ ಸಾಹಿತ್ಯ ಮತ್ತು ವಿದ್ಯಾಪ್ರಚಾರಕ್ಕಾಗಿ ತುಂಬಾ ಪ್ರಯತ್ನಿಸಿದನು. 1890ರ ನಂತರ ಯುರೋಪು ಮತ್ತು ಅಮೇರಿಕಾದ ವೈದಿಕ ಸಂಸ್ಥೆಗಳು ಪ್ರತಿವರ್ಷವೂ ಅವನ ಹುಟ್ಟು ದಿನಾಚರಣೆಯನ್ನು ಜರುಗಿಸುತ್ತಿದ್ದವು, ಹಲವು ಐರೋಪ್ಯಾದೇಶಗಳು ಅವನಿಗೆ ಬಿರುದುಗಳನ್ನಿತ್ತು ಗೌರವಿಸಿದವು. ಪ್ರಷ್ಯಾ ( Prussia ) ಸರಕಾರವು "Ordre pour le Merite" ಎಂಬ ಅತೀ ಉಚ್ಚವರ್ಗದ ಸನ್ಮಾನವನ್ನು Prof. Max Mueller ಇವನಿಗೆ ಇತ್ತು ಗೌರವಿಸಿತು. ಹಲವು ಅರಸರು ಅವನಿಗೆ ಬೆಲೆಬಾಳುವ ಉಡುಗೊರೆಗಳನ್ನು ಆಗಿಂದಾಗ್ಗೆ ಕಳುಹಿಸಿ ಸನ್ಮಾನಿಸುತ್ತಿದ್ದರು. 1893 ರಲ್ಲಿ ಅವನ ಒಂದು ಕಂಚಿನ ಪ್ರತಿಮೆಯನ್ನು ಮಾಡಿಸಿ ಜರ್ಮನ್ ಚಕ್ರವರ್ತಿಯು ಅವನಿಗೆ ಬಹುಮಾನವಾಗಿ ಕಳುಹಿಸಿಕೊಟ್ಟನು.

ಬ್ರಿಟಿಷ್ ಸರಕಾರವು 1896 ರಲ್ಲಿ ಅವನಿಗೆ Knighthood ಗೌರವವನ್ನಿತ್ತು ಸನ್ಮಾನಿಸಿದಲ್ಲದೆ ಅದೇ ವರ್ಷ ಅವನನ್ನು Privy Councillor ಆಗಿಯೂ ನೇಮಿಸಿತು. ಈ ಅಭೂತಪೂರ್ವ ಸನ್ಮಾನದ ವಾರ್ತೆಯು ಪ್ರಕಟವಾದಾಗ Prof. Max Mueller ಇವನು ತನ್ನ ಓಕ್ಸ್‌ಫರ್ಡ್ ಮನೆಯಲ್ಲಿಯೇ ಇದ್ದನು. ಆ ದಿನದ ಪತ್ರಿಕೆಯಲ್ಲಿ ತನ್ನ ವಿಷಯವನ್ನು ಕುರಿತಾದ ಆ ವರ್ತಮಾನವನ್ನು ನೋಡಿದನು. ಪತ್ರಿಕೆಯನ್ನು ಹಾಗೆಯೇ ಎತ್ತಿಕೊಂಡು ತನ್ನ ಪತ್ನಿಯ ಬಳಿಗೆ ಹೋದನು. "ಇದರಲ್ಲೊಂದು ಅಪೂರ್ವ ವಾರ್ತೆಯಿದೆ, ಆದರೆ ಅದನ್ನು ನೋಡಿ ಮೂರ್ಛೆ ಹೋಗಬೇಡ" ಎಂದು ಹೇಳುತ್ತಾ ಆ ಮುದುಕನು ಪತ್ರಿಕೆಯನ್ನು ಅವಳ ಕೈಗೆ ಕೊಟ್ಟನು. ತಾನು ಇಂತಿಷ್ಟು ಗೌರವಕ್ಕೆ ಒಳಗಾದ ವೇಳೆಯಲ್ಲಿ ತನ್ನೊಡನೆ ಆ ಸಂತೋಷವನ್ನು ಅನುಭವಿಸಲು ತನ್ನ ಇತರ ವಿದ್ವಾಂಸ ಮಿತ್ರರು ಯಾರೂ ಇಲ್ಲವಲ್ಲಾ ಎಂಬ ಬೇಸರಕ್ಕೊಳಗಾದನು. ಇವನ 'ಗುರು'ಗಳಂತಿದ್ದ ಮಿತ್ರರೆಲ್ಲರೂ ಅಷ್ಟರಲ್ಲಿ ಕಣ್ಮರೆಯಾಗಿದ್ದರು. ಒಂದೆರಡು ತಿಂಗಳಲ್ಲಿಯೇ ಅವನು ವಿಕ್ಟೋರಿಯಾ ರಾಣಿಯನ್ನು ಔಪಚಾರಿಕವಾಗಿ ಭೇಟಿಯಾಗುವಂತೆ ಅವನಿಗೆ ಕರೆಹೋಯಿತು. ಆ ಮಹಾರಾಣಿಯು ಈ ಪ್ರತಿಭಾವಂತ ವಿದ್ವಾಂಸನೊಡನೆ ಬಹುಸಮಯ ಮಾತಾಡಿ ಅವನಿಗೆ ತನ್ನ ಶುಭಾಶಯ ಮತ್ತು ಅಭಿನಂದನೆಗಳನ್ನು ಮುಖತಃ ಸಲ್ಲಿಸಿದಳು.

### ೧೮. ಯುರೋಪು ಮತ್ತು ಭಾರತದ ಜನರು ಒಂದೇ ಬುಡಕಟ್ಟಿಗೆ ಸೇರಿದವರು :—

ಕ್ರಿ. ಶ. 1898 ರಿಂದ Dr. Max Mueller ಇವನು ತನ್ನ ಆತ್ಮಚರಿತ್ರೆಯನ್ನು ಬರೆಯುವುದರಲ್ಲಿ ನಿರತನಾಗಿದ್ದನು. 1899 ರಲ್ಲಿ ತನ್ನ ಪತ್ನಿಯೊಡಗೂಡಿ ಯುರೋಪಿನಲ್ಲಿ ಸಂಚರಿಸಿ ಹಿಂದೆರಳಿದನು. ಇವನು ಹೋದೆಡೆಯಲ್ಲೆಲ್ಲಾ ವೇದ ಧರ್ಮ

ಭಾಷಾಶಾಸ್ತ್ರ, ಮತ್ತು ಸಮಾಜಶಾಸ್ತ್ರಗಳನ್ನು ಕುರಿತಾಗಿ ಭಾಷಣಗಳನ್ನು ಎಂದಿನಂತೆ ಕೊಡುತ್ತಲೇ ಇದ್ದನು. ತನ್ನ ವೃದ್ಧಾಪ್ಯದಲ್ಲೂ ಅತ್ಯುತ್ತಮ ವಾಗ್ಮಿಯೆಂದು ಪ್ರಸಿದ್ಧಿ ಹೊಂದಿದನು.

Dr. Max Mueller ಇವನು 1859 ರಲ್ಲಿ Miss. Georgina ಇವಳನ್ನು ವಿವಾಹವಾಗಿ ಈ ಆದರ್ಶ ದಂಪತಿಗಳಿಗೆ ಒರ್ವ ಮಗನೂ ಒರ್ವ ಮಗಳೂ ಇದ್ದರು. 1847 ರಿಂದ ತನ್ನ ಕಡೇ ದಿನಗಳವರೆಗೂ, ಎಂದರೆ ತನ್ನ ಜೀವಮಾನದ 54 ವರ್ಷಗಳ ಕಾಲ ಅವನು ಇಂಗ್ಲೆಂಡಿನಲ್ಲಿಯೇ ಇದ್ದರೂ ಒರ್ವ ಧೀರ ಜರ್ಮನ್ ಯೋಧನಂತೆ ತನ್ನ ಸ್ವಾಭಿಮಾನ ಮತ್ತು ಸ್ವಗೌರವಗಳನ್ನುಳಿಸಿಕೊಂಡೇ ಬಾಳಿದನು. ಅದೆಷ್ಟು ಪ್ರಚಂಡ ವಿದ್ವಾಂಸನಾಗಿದ್ದನೋ ಅಷ್ಟೇ ರಸಿಕನಾಗಿಯೂ ಇದ್ದನು. ಐರೋಪ್ಯಾದ ಜನಾಂಗಗಳು ಮತ್ತು ಭಾರತೀಯರು ಪ್ರಾಚೀನ ಆರ್ಯ ಜನಾಂಗದ ಬುಡಕಟ್ಟಿಗೆ ಸೇರಿದವರೆಂಬುದನ್ನು ಅವನು ಹಲವು ಬರೆಹಗಳಲ್ಲಿ ಹೆಮ್ಮೆಯಿಂದ ಪ್ರತಿಪಾದಿಸಿದ್ದನು. ಪ್ರಾಚೀನ ಸಂಸ್ಕೃತ ಶಾಸ್ತ್ರಗ್ರಂಥಗಳೂ ಸಾಹಿತ್ಯ ಗ್ರಂಥಗಳೂ ಜಪಾನ್ ದೇಶದಲ್ಲಿ ಸಂಗ್ರಹವಾಗಿವೆಯೆಂಬುದನ್ನು ನಂಬಿ ಅಲ್ಲಿಂದಲೂ ಹಲವು ಪೂರ್ವಕಾಲದ ಹೊತ್ತಿಗೆಗಳನ್ನು ತರಿಸಿದನು. Max Mueller ಇವನ ಸ್ವಂತ ಗ್ರಂಥಭಂಡಾರದಲ್ಲಿ ವೇದಗಳ 41 ವಿವಿಧ ಓಲೆಪ್ರತಿಗಳೂ 80 ಕ್ಕೂ ಮೇಲ್ಪಟ್ಟು ಹಿಂದೂಶಾಸ್ತ್ರೀಯ ಗ್ರಂಥಗಳ ವಿವಿಧ ಓಲೆ ಬರೆಹಗಳೂ ಇದ್ದುವಂತೆ ! Henry Colebrooke ಇವನು ಭಾರತೀಯ ಗ್ರಂಥಗಳನ್ನು ಸಹಸ್ರಾರರಂತೆ ಸಂಪಾದಿಸಿದ ರೀತಿಯಲ್ಲಿ Max Mueller ಇವನೂ ಬಹು ದೊಡ್ಡ ಗ್ರಂಥರಾಶಿಯನ್ನು ಕೂಡಿಸಿದ್ದನು. ಇದರ ಬಹುಪಾಲು ಓಕ್ಸ್‌ಫರ್ಡ್‌ನ Indian Institute ಇದರ ಗ್ರಂಥ ಭಂಡಾರಕ್ಕೂ ಅಲ್ಲಿ ಇರುವ Oriental Library ಇದಕ್ಕೂ ಒಪ್ಪಿಸಲಾಯಿತು.

ಯೂರೋಪಿನ ಪ್ರವಾಸದನಂತರ Dr. Max Mueller ಇವನು ಕ್ರಿ. ಶ. 1900 ಜನವರಿ ತಿಂಗಳಲ್ಲಿ ಅಸ್ವಸ್ಥತೆಯಿಂದ ಹಾಸಿಗೆ ಹಿಡಿದನು. ಅವನ ಒರ್ವನೇ ಮಗನು ಅಮೇರಿಕಾದ ರಾಯಭಾರ ಖಚೇರಿಯಲ್ಲಿ ಆಗ ದುಡಿಯುತಿದ್ದನು. ತನ್ನ ಮಗನಿಗೆ ಆಗ ಬರೆದ ಪತ್ರವೊಂದರಲ್ಲಿ ಅವನು ಈ ರೀತಿ ಹೇಳಿದನು :—

'......At 76, one must be prepared for everything, and, need I tell you– I am prepared to go ?......What is more natural in life than death ?......I have finished nearly all my work, and what is more, I see that it will be carried on by others, by stronger and younger men......'

ಹೇಗೂ ಅವನ ದೈಹಿಕ ಪರಿಸ್ಥಿತಿಯು ವಿಷಮಾವಸ್ಥೆಗೆ ತಲಪಿದಾಗ ಅವನ ಮಗನು ಅಮೇರಿಕಾದಿಂದ ಬಂದನು. ತಾನು ಪ್ರಾರಂಭಿಸಿದ್ದ ತನ್ನ ಆತ್ಮಚರಿತ್ರೆಯನ್ನು ತನ್ನ ಮಗನಿಂದ ಉಕ್ತಲೇಖನದ ಮೂಲಕ ಬರೆಯಿಸಿ ಮುಗಿಸಿದನು. ಆ ವರ್ಷದ ಅಕ್ಟೋಬರ್ ತಿಂಗಳಿಗೆ Dr. Max Mueller ಇವನ ಲೇಖನ ವ್ಯಾಸಂಗವು ಮುಗಿಯಿತು. ಆ ವರೆಗೂ ಪ್ರತಿದಿನವೂ ಗಾಳಿಸೇವನೆಗೆಂದು ತನ್ನ ನಿತ್ಯದ ಅಭ್ಯಾಸದಂತೆ ಸ್ವಲ್ಪದೂರ

ನಡೆಯುತಿದ್ದನು. ಯೂರೋಪಿನ ಮತ್ತು ಏಷ್ಯಾಖಂಡದ ಹಲವು ರಾಜರು ಮತ್ತು ವಿದ್ವಾಂಸರು ಅವನ ಆರೋಗ್ಯದ ವಿಷಯವಾಗಿ ಬಹುಕೌತುಕದಿಂದ ಆಗಿಂದಾಗ್ಗೆ ಬರೆದು ತಿಳಿಯುತ್ತಾ ಇದ್ದರು.

**೧೯. ಯೊರೋಪಿನಲ್ಲಿ ಹುಟ್ಟಿದ ಈ ವೈದಿಕ ಋಷಿಯು ಕಣ್ಮರೆಯೊದನು :**

ಕ್ರಿ. ಶ. 1900ರ ಅಕ್ಟೋಬರ್ ತಿಂಗಳ ಕಡೇ ವಾರದಲ್ಲಿ Dr. Max Mueller ಇವನು ಹಾಸಿಗೆಯಿಂದ ಏಳಲಾರದಾದನು. ಅವನ ಪತ್ನಿ Mrs. Georgina M. ಇವಳು ತಾರೀಕು 27 ರಂದು, "Thou wilt keep him in perfect peace, whose mind is stayed on thee", ಎಂದು ದೇವರನ್ನು ಪ್ರಾರ್ಥಿಸಿಕೊಂಡಳು. ಅದರ ಮರುದಿನವೇ ಆ ವೈದಿಕ ಋಷಿಯು ತನ್ನ 76 ನೇ ವರ್ಷ ಪ್ರಾಯದಲ್ಲಿ ಕಣ್ಮರೆಯಾದನು. ಈ ಶೋಕಪೂರ್ಣವಾದ ವಾರ್ತೆಯು ಜಗತ್ತಿನ ನಾನಾ ದೇಶಗಳಿಗೆ ತಂತಿಯ ಮೂಲಕ ಅರುಹಲಾಯಿತು. ಸಹಸ್ರಗಟ್ಲೆ ಜನರು ಇವನ ಶವಸಂಸ್ಕಾರದ ವೇಳೆಗೆ ನೆರೆದರು. ಓಕ್ಸ್‌ಫರ್ಡ್‌ನ ಹೊಲಿವೆಲ್* ಸ್ಮಶಾನದಲ್ಲಿ ಪ್ರಚಂಡ ಜನಸಂದಣಿಯ ಸಮ್ಮುಖದಲ್ಲಿ ಅವನ ದೇಹ ವನ್ನು ಸಮಾಧಿಯೊಳಗಿರಿಸಲಾಯಿತು. ಆ ಸ್ಮಶಾನದಲ್ಲಿ ಬ್ರಿಟಿಷರ ಜನಾಂಗ ಭೇದದ ಇನ್ನೊಂದು ಕುರುಹೋಯೆಂಬಂತೆ ಒಂದು ಮೂಲೆಯಲ್ಲಿ ಇರಿಸಲ್ಪಟ್ಟ ಈ ಜರ್ಮನ್ ವಿದ್ವಾಂಸನ ಸಮಾಧಿ ಕಲ್ಲಿನಲ್ಲಿ ಇಂತಿಷ್ಟು ಮಾತ್ರ ಬರೆಯಲ್ಪಟ್ಟಿದೆ :—

'The Rt. hon'ble Dr. Fredrich Max Mueller, Fellow of All Souls College for fifty years; Professor in this (Oxford) University. Born at Dessau- 6th Dec. 1823- Died at Oxford- 28th Oct 1900.'

Dr. Max Mueller ಇವನು ನಿಧನವಾದ ವಾರ್ತೆ ಮತ್ತು ಅವನ ಪೌರಸ್ತ್ಯ ಹಾಗೂ ಪಾಶ್ಚಾತ್ಯ ಸಾಹಿತ್ಯಕ್ಕೆ ಕೈಗೊಂಡ ಸೇವೆಯನ್ನು ಕುರಿತು ಜಗತ್ತಿನ ಎಲ್ಲಾ ಪತ್ರಿಕೆಗಳು ಒಂದೆರಡು ಪುಟಗಳಷ್ಟು ದೀರ್ಘವಾದ ಲೇಖನವನ್ನು ಬರೆದುವು. ಬರ್ಲಿನ್ನಿನ "National Zeitung" ಪತ್ರಿಕೆಯು "German learning must proudly claim Dr. Max Mueller as her own........ His name will be held as that of a great pioneer in the field of historical philology," ಎಂಬುದಾಗಿ ಹೇಳಿತು. ಇದೇ ರೀತಿಯಾಗಿ ನೂರಾರು ಪತ್ರಿಕೆಗಳು ನಾಲ್ಕಾರು Folio ಪುಟಗಳಷ್ಟು ದೀರ್ಘವಾದ ಲೇಖನಗಳನ್ನು ಬರೆದುವು.

ಈ ವೇಳೆಗೆ ಯೂರೋಪಿನಲ್ಲೂ ಹಿಂದೂಸ್ಥಾನದಲ್ಲೂ ನೂರಾರು ದುಃಖಸೂಚಕ ಸಭೆಗಳು ನೆರೆದುವು. ರಷ್ಯಾ, ಅಮೇರಿಕಾ, ಜಪಾನ್, ಚೀನಾ, ತಿಬೇಟ್, ಪರ್ಷಿಯಾ ಮೊದಲಾದ ದೇಶಗಳ ವಿದ್ವಾಂಸರೂ ಇನ್ನೂ ಹಲವು ದೇಶಗಳ ರಾಜರೂ ಆ ದುಃಖ

---

* ಹೊಲಿವೆಲ್ ಗುಡಿಯ ಆವರಣದ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ದಲ್ಲಿ ತಾವು ಭಾಗಿಗಳಾಗಿದ್ದೇವೆಯೆಂದು ಅವನ ಸಂಸಾರಕ್ಕೆ ತಂತಿ ಮೂಲಕ ತಿಳುಹಿಸಿದರು. ಜಗತ್ತಿನ ಒರ್ವ ಪ್ರಸಿದ್ಧ ರಾಜಕಾರಿಣಿಯು ನಿಧನವಾದಾಗ ದುಃಖಸೂಚಕ ಸಂದೇಶವನ್ನು ಕಳುಹಿಸುವ ರೀತಿಯಲ್ಲಿ ನಾನಾ ಕಡೆಗಳಿಂದ ಸಹಸ್ರಾರು ತಂತಿಗಳೂ ಪತ್ರಗಳೂ ಹೋದುವು. ಹಿಂದೂಸ್ಥಾನದಲ್ಲಂತೂ ವೈದಿಕ ಪಂಡಿತರು ತುಂಬಾ ಮರುಗಿದರು. ಆಗ ಬೊಂಬಾಯಿಯಲ್ಲಿದ್ದ ಮತ್ತು ಪ್ರಾಚೀನ ಭಾರತದ ಪಂಚಾಗ ಮತ್ತು ಕಾಲಗಣನೆಯನ್ನು ಕುರಿತಾಗಿ ೧೦೦೦ Folio ಪುಟಗಳ ಉದ್ಗ್ರಂಥವನ್ನೂ ಇತರ ಹಲವು ಗ್ರಂಥಗಳನ್ನೂ ಬರೆದ Dr. Hermann Jacobi ಇವನು Mrs. Georgina M. ಇವಳಿಗೆ ಕಳುಹಿಸಿದ ದುಃಖಸೂಚಕ ತಂತಿಯಲ್ಲಿ " All India mourns with you " ಎಂಬುದಾಗಿ ಹೇಳಿದ್ದನು. ಲಂಡನ್ನಿನ Times ಪತ್ರಿಕೆಯು ಆಗ 5000 ಶಬ್ದಗಳಿಗೂ ಮಿಾರಿ ದೀರ್ಘವಾಗಿ ಬರೆದ ಲೇಖನದಲ್ಲಿ Prof. Max Mueller ಇವನನ್ನು ಕುರಿತು ಈ ರೀತಿ ಬರೆಯಿತು :—

"..... We lose in him one of the most brilliant and prolific writers of our time ; one whose voice has charmed several generations of Englishmen ; who was a great scholar, a favourite in society, the friend and the intimate of the most distinguished men of the time......Oxford loses one of its chief ornaments ; and the whole world of letters is in poorer by the disappearance of a sympathetic intelligence, irradiating many branches of knowledge. "

---

## ೧೧

“ ನಡು ಮುರಿಯುತ ನಗ ನಾವೆಗೆ, ಕೂವೆಗೆ
ಉಡಿಸಿದ ಹಾಯಿಯು ಹರಿಯುತ ಬಿರಿಯುತ,
ಹಡಗನು ಕೀಲಿಸಿ ತುಮುರನು ತೇಲಿಸಿ,
ದಡದಲಿ ಝಾಡಿಸಿ ದೋಣಿಯನಾಡಿಸಿ,

......................................
ಬಂತೈ ಬೀಸುತ ! ಬೀಸುತ ಬಂತೈ !
ತೆಂಕಣ ಗಾಳಿಯು ಕೊಂಕಣ ಸೀಮೆಗೆ
ಬಂತೈ ! ಬಂತೈ ! ಬಂತೈ ! ಬಂತೈ !

[ಮಂಗೇಶರಾವ್]

“ ಕವಿಶಿಷ್ಯ ” ಇವರು “ ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತು ” ಎಂದು ಹಾಡಿದಾಗ ಆ ಕಾಲದಲ್ಲಿ ಅದಾವುದೋ ಒಂದು ಪ್ರಚಂಡ ವಾಙ್ಮಯವನ್ನು ಆ ಹೊಸ ಜನರು ಪಾಶ್ಚಾತ್ಯ ದಿಕ್ಕಿನಿಂದ ಹೊತ್ತುಕೊಂಡು ಬರುವುದನ್ನು ಕಂಡಿರಬೇಕು. ಆಗ ಈ ದೇಶಕ್ಕೆ ಬಂದ ಪಾಶ್ಚಾತ್ಯರು “ ನಡು ಮುರಿಯುತ ನಗನಾವೆಗೆ, ಕೂವೆಗೆ.... ದೋಣಿಯನಾಡಿಸಿ ” ಈ ಸೀಮೆಗೆ ಬಂದರು. ಅಂತೆಯೇ ಹಲವು ಬಗೆಯ ಸಾಹಸಗಳನ್ನು ಇಲ್ಲಿ ಸಾಧಿಸಿದರು ; ಅನಂತರ ತೆರಳಿದರು.

ಆದರೆ ಅವರು ಭಾರತೀಯ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕೈಗೊಂಡ ಅಪಾರ ಸೇವೆಯು ಅದೊಂದು ಕ್ರಾಂತಿಕಾರಕವಾದ ಯೋಜನೆಯಾಗಿ ಮಾರ್ಪಟ್ಟಿತ್ತು. ಆಗ ಯೂರೋಪು ಖಂಡದಲ್ಲಿದ್ದ Industrial revolution ಇದನ್ನು ವಿಾರಿ ಭಾರತದಲ್ಲಿ ಅವರು Literary Renaissance ಇದಕ್ಕೆ ನಾಂದಿಯನ್ನು ಹಾಕಿದರು. ಈ ದೇಶದ ಚರಿತ್ರೆ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಇತ್ಯಾದಿಗಳನ್ನು ಕುರಿತು ಬೃಹದ್ಗ್ರಂಥಗಳನ್ನು ಅಸಂಖ್ಯ ಜನ ವಿದೇಶೀಯ ಪಂಡಿತರು ತಮ್ಮ ತಮ್ಮ ಐರೋಪ್ಯಾ ಭಾಷೆಗಳಲ್ಲಿ ಬರೆದರು. ಭಾರತೀಯ ಜನಜೀವನವನ್ನು ಚಿತ್ರಿಸುವುದರೊಡನೆ ಹಲವು ದೇಶೀಯ ಭಾಷಾ ಗ್ರಂಥಗಳನ್ನು ಭಾಷಾಂತರಿಸಿದರು, ವ್ಯಾಖ್ಯಾನಿಸಿದರು ಮತ್ತು ಅವುಗಳ ಶಾಸ್ತ್ರೀಯ ಅನ್ವೇಷಣೆಗೂ ತೊಡಗಿದರು. ಹೀಗಾಗಿ ಭಾರತದ ಸಾಹಿತ್ಯ ಗಂಗೆಯು ಹರಿಹರಿದು ದೂರದ ಪಶ್ಚಿಮ ಕಡಲುಗಳನ್ನು ಸೇರಿತು. ಆ ಅಮೋಘ ಜಲಧಾರೆಯನ್ನು ಕಳೆದ ಹಲವು ಶತಮಾನಗಳಿಂದ ಕಟ್ಟಿ ಕಟ್ಟಿ ತಡೆದು ನಮ್ಮ ನಾಡಿನ ಭೂಗರ್ಭದಲ್ಲಿ ನಮ್ಮ ಹಿರಿಯರು ಹುದುಗಿಸಿದ್ದರು. ಯಾವಾವುದೋ ಕತ್ತಲು ಕೋಣೆಗಳಲ್ಲಿ ಮುರುಕುಲು ಗುಡಿಸಿಲುಗಳಲ್ಲಿ ಸಹಸ್ರಾರು ತಾಳೆವೋಲೆ ಗ್ರಂಥಗಳು ಬೆಳಕನ್ನು ಕಾಣದೆ ಮುದುಡಿ ಬಿದ್ದಿದ್ದುವು. ಹಾಗಿದ್ದಾಗ ಪಾಶ್ಚಾತ್ಯರು ಅದೇನೋ ಒಂದು ಬಿರುಗಾಳಿಯಂತೆ ಬಂದು ನಮ್ಮ ಆರ್ಶೇಯ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆಗಳ ಬಗ್ಗೆ ಇದ್ದ ಅಪಾರ ಸಂಪತ್ಪ್ರವಾಹಿನಿಗೆ ಕಟ್ಟಿದ್ದ ಕಟ್ಟೆಯನ್ನು ಒಡೆದು ಆ ಜಲಧಾರೆಯನ್ನು ಜರಯರನೆ ತಮ್ಮ ತಮ್ಮ ಭಾಷಾನಾಲೆಗಳ

ಮೂಲಕ ವಿದೇಶಗಳಿಗೆ ಹರಿಯಿಸಿದರು. ಬಹುಶಃ ಅಂದು ಅವರು ಅಂತಿಸೆಗದೇ ಹೋಗಿದ್ದರೆ ಪರಿಸ್ಥಿತಿಯು ಇಂದು ಹೇಗಿರುತ್ತಿತ್ತೆಂಬುದನ್ನು ಪುನಃ ನಾವು ಊಹಿಸಿ ಕೊಳ್ಳಬೇಕಿದೆ.

**೨. ಈ ದೇಶದ ಸಂಪದ್ವೈಭವಕ್ಕೆ ಅವರು ಆಕರ್ಷಿತರಾದರು :—**

ನಾನೂರು ವರ್ಷಗಳಿಗೆ ಹಿಂದೆ ಈ ದೇಶವು ವಿದೇಶಗಳಿಗೆ ಇತ್ತ ಆಕರ್ಷಣೆ ಯಾದರೂ ಏನು ? ಕ್ರಿ.ಶ. 1579ರಷ್ಟು ಹಿಂದೆಯೇ ಗೋವೆಯಲ್ಲಿಳಿದು ಮೊದಲ ಬಾರಿಗೆ ಭಾರತಕ್ಕೆ ಕಾಲಿಟ್ಟ ಪ್ರವಾಸಿಕ Thomas Stephens ಇವನು ನಲ್ವತ್ತು ವರ್ಷಗಳ ಕಾಲ ಇಲ್ಲಿ ಇದ್ದು ಈ ದೇಶದ ಪರಿಸ್ಥಿತಿಯನ್ನು ಕುರಿತು ಸಾಕಷ್ಟು ಬರೆದಿದ್ದಾನೆ. ಅವನ ಸಮಕಾಲೀನ Ralph Fitch ಇವನು 1583 ರಿಂದ ಎಂಟು ವರ್ಷಗಳ ಕಾಲ ಇಲ್ಲಿ ಇದ್ದು ಹಲವು ವಿಷಯಗಳನ್ನು ಕುರಿತು ತನ್ನ ದೇಶೀ ಯರಿಗೆ ತಿಳಿಸಿದನು. ಕ್ರಿ.ಶ. 1599ರಲ್ಲಿ ಬಂದ John Mildenhall ಇವನು ಏಳು ವರ್ಷಗಳ ಕಾಲ ಸಂಚರಿಸಿ ಹಲವು ಸ್ವಾರಸ್ಯ ವಿಚಾರಗಳನ್ನು ನಿರೂಪಿಸಿದ್ದಾನೆ.

ಈ ದೇಶಕ್ಕೆ ಮೊದಲನೇ ಅಧಿಕೃತ ರಾಯಭಾರಿಯಂತೆ ಬಂದ ಇಂಗ್ಲೆಂಡಿನ Thomas Roe ಇವನು 1615 ರಿಂದ ನಾಲ್ಕು ವರ್ಷಗಳ ಕಾಲ ಇದ್ದು ಮೊಗಲ್ ಚಕ್ರವರ್ತಿಯ ವಿಶ್ವಾಸವನ್ನು ಸಂಪಾದಿಸಿ ಪೂರ್ವ ಮತ್ತು ಪಶ್ಚಿಮ ದೇಶಗಳೊಳಗೆ ವ್ಯಾಪಾರ ವ್ಯವಹಾರಗಳ ಬಾಂಧವ್ಯವನ್ನು ಜಯಪ್ರದವಾಗಿ ಬೆಳೆಸಿದನು. ಇವನ ಹೇಳಿಕೆಯಂತೆ ಮೊಗಲ್ ಚಕ್ರವರ್ತಿಯ ಸಂಪತ್ತು, ವೈಭವ, ಆಡಂಬರಗಳು ಲೋಕದ ಬೇರಾವ ಭಾಗದಲ್ಲೂ ಅಂದು ಇರಲಿಲ್ಲ.

" High on the throne of royal state, which far out-shone the wealth of Ormuz or of Ind or where the gorgeous East with richest hand showers on her kings barbaric pearl and gold Satan exalted sat......"

ಎಂಬುದಾಗಿ ಕಾವ್ಯರೂಪದಲ್ಲಿ ಹೇಳಲ್ಪಟ್ಟಿದೆ. ಆಂಗ್ಲೇಯ ರಾಯಭಾರಿಯೊರ್ವನ ನೇಮಕದಿಂದ ಈ ದೇಶವು ಅಂದು ದೂರದ ಇಂಗ್ಲೆಂಡು ದೇಶದವೊಡನೆ ಅದಾವುದೋ ಒಂದು ರೀತಿಯಲ್ಲಿ ಖಾನೂನುಬದ್ಧವಾಗಿ ಸಂಬಂಧವನ್ನು ಬೆಳೆಸಿತು. ಆ ವೇಳೆಗೆ ಇದ್ದ ವಿಖ್ಯಾತ ಇಂಗ್ಲಿಷ್ ಸಾಹಿತಿ Thomas Carlyle ಇವನು ಹೀಗೆ ಹೇಳಿದ್ದನು :—

" The great Mughal had a ' Lieger ' or Agent of ours, for some time past and now in this same year (1614 A.D.), Sir Thomas Roe goes out as Resident Ambassador. The English East India Company seems inclined to make good its Charter."

ಇಲ್ಲಿಂದನಂತರ ಸರಾಗವಾಗಿ ಹಲವು ಪಾಶ್ಚಾತ್ಯರು ಒಬ್ಬರನಂತರ ಒಬ್ಬರಾಗಿ ಮತ್ತು ನೇರವಾಗಿ ಈ ದೇಶಕ್ಕೆ ಬಂದರು. ಪ್ರವಾಸಿಕ Thomas Coryat ಇವನು 1612ರಲ್ಲಿ, William Finch ಮತ್ತು Nicholas Wittington ಇವನು,

ಕ್ರಮವಾಗಿ ಕ್ರಿ.ಶ. 1608 ಮತ್ತು 1612 ರಲ್ಲೂ ಬಂದು ತಮ್ಮ ವ್ಯಾಪಾರಕ್ಕೆ ಈ ದೇಶದಲ್ಲಿ ತಳಹದಿಯನ್ನು ಹಾಕಿದರು. ಅವರೊಡನೆಯೇ ಕ್ರಿ.ಶ. 1616 ರಲ್ಲಿ Edward Terry, ಮತ್ತು 1630 ರಲ್ಲಿ Henry Lord ಇವರು ಬಂದು ಈ ದೇಶದಲ್ಲಿ ಕ್ರೈಸ್ತ ಮತೋಪದೇಶಕರಾಗಿ ನಿಂತರು.

ಹೀಗೆ ಈ ದೇಶದ ಸಂಪದ್ವೈಭವಕ್ಕೆ ಆಕರ್ಷಿತರಾದ ವಿದೇಶೀಯರಿಗೆ ಅನುಕೂಲವಾಗಿ ಪೋರ್ಚುಗೀಸ ನಾವಿಕರು ಇಲ್ಲಿಗೆ ಬರಲು ಸಮುದ್ರ ಮಾರ್ಗವನ್ನು ಅದಕ್ಕೆ ನೂರು ವರ್ಷಗಳಿಗೆ ಹಿಂದೆಯೇ ಕಂಡುಹಿಡಿದಿದ್ದರು. W. C. Atkinson ಇವನು ಹೇಳಿದಂತೆ "The discovery of Cape route was "the Climax of almost a century of patient economic effort."

## ೩. ಹದಿನೇಳನೇ ಶತಮಾನದ ಪೋರ್ಚುಗೀಸ್ ವಿದ್ವಾಂಸರು :—

ಯೂರೋಪು ಖಂಡದ ಜನರು ಪ್ರಪಂಚದ ವಿವಿಧ ಭಾಗಗಳಲ್ಲಿ ತೊಳಲಾಡಲು ಅಂದೇ ಆರಂಭಿಸಿದ್ದರು. ದೂರದ ಆಸ್ಟ್ರೇಲಿಯಾ ಮತ್ತು ಅಮೇರಿಕಾ ಖಂಡಗಳತ್ತಲೂ ಅವರ ನಾವೆಗಳು ಓಡಾಡುತಿದ್ದುವು. ಕ್ರಿ.ಶ. 17ನೇ ಶತಮಾನದ ಆರಂಭಕ್ಕೆ ಅವರು ಲೋಕದ ಬಹು ಭಾಗದಲ್ಲಿ ನೆಲೆಸಿದ್ದರು. ಅವರಿಗೆ ತಮ್ಮ ತಮ್ಮ ದೇಶಗಳೇ ಜನನಿಬಿಡವಾಗಿ ಬಿಕ್ಕಟ್ಟಿನ ಪರಿಸ್ಥಿತಿಗೆ ಆವಾಗಲೇ ಕಾರಣವಾಗಿಸಿತ್ತೆಂದು ಅವರು ಭಾವಿಸಿದ್ದರೆ ಅದು ಇಂದಿನ ಪರಿಸ್ಥಿತಿಯಲ್ಲಿ ಅತಿಶಯೋಕ್ತಿಯಾದ ವಿಚಾರವೆಂದು ಹೇಳಬಹುದು, ಪ್ರಸಿದ್ಧ ಆಂಗ್ಲ ಇತಿಹಾಸಕಾರ James Mill ಇವನು ಸುಮಾರು ಕ್ರಿ.ಶ. 1830 ರಲ್ಲಿ ಹೀಗೆ ಹೇಳಿದ್ದನು :—

"A populous nation, and increase so fast, that if we, by our providence, are not sent abroad in colonies......We must starve, or eat up one another."

ಇದು ಏನೇ ಇರಲಿ, ಸುಮಾರು ಕ್ರಿ.ಶ. 16ನೇ ಶತಮಾನಾಂತ್ಯದಲ್ಲಿಯೇ ವ್ಯಾಪಾರ ಮತ್ತು ವಸಾಹತ್ತು ನಿಮಿತ್ತವಾಗಿ ಸಂಚರಿಸಿದ್ದ ಪಾಶ್ಚಾತ್ಯರು ಈ ದೇಶದ ವೇದ, ಮತ, ಧರ್ಮ, ಸಾಹಿತ್ಯ ಇತ್ಯಾದಿಗಳ ಬಗ್ಗೆ ಆಗಲೇ ಸಾಕಷ್ಟು ಅಭ್ಯಸಿಸಿದ್ದರು. ಪ್ರವಾಸಿಕ ಫಾದರಿ Edward Terry, Francois Bernier, W. Thevenot ಮೊದಲಾದವರು ವೇದಗಳ ವಿಷಯ ಆಗಲೇ ಸಾಕಷ್ಟು ಪ್ರಸ್ತಾಪಿಸಿದ್ದಾರೆ. ಪ್ರಸಿದ್ಧ ವಿದ್ವಾಂಸ Prof. Caland ಇವನು ಅಂದಿನ ಒಂದು ಪತ್ರದ ಆಧಾರದಿಂದ ಬ್ರಾಹ್ಮಣನೊಬ್ಬನು ಕ್ರಿ. ಶ. 1559ರಲ್ಲಿ ಕ್ರೈಸ್ತಮತಕ್ಕೆ ಸೇರಿದ ವಿಷಯವಾಗಿ ಪ್ರಸ್ತಾಪಿಸಿದ್ದಾನೆ.

ಹಿಂದೂದೇಶದ ಮೇಲೆ ಬರೆದ ಮೊದಲ ಲೇಖಕರು ಪಾಶ್ಚಾತ್ಯರ ಪೈಕಿ ಪೋರ್ಚುಗೀಸರಾಗಿದ್ದರು. Epistolae Indicae ಎಂಬ ಗ್ರಂಥವು ಹಿಂದೂ ದೇಶದ ವಿಚಾರವಾಗಿ ಬರೆದ ಅತೀ ಹಳೇ ಪೋರ್ಚುಗೀಸ್ ಭಾಷಾಗ್ರಂಥವಾಗಿದೆ.

Francis Xavier ಕ್ರೈಸ್ತಮತಪಂಥದವರು ಈ ದೇಶದಲ್ಲಿ ನಡೆಸಿದ ಕೆಲಸದ ವಿಷಯವಾಗಿ Joao de Lucena ಇವನು ಪೋರ್ಚುಗಲ್ ಭಾಷೆಯಲ್ಲಿ "Vida Do P. Francisco de Xavier" ಎಂಬುದಾಗಿ ಕ್ರಿ.ಶ. 1600 ರಲ್ಲಿ ಬರೆದನು. Fr. Manuel Barradas ಇವನು ಕ್ರಿ.ಶ. 1618ರಲ್ಲಿ Indian Cosmography ಎಂಬ ಗ್ರಂಥವನ್ನು ಪೋರ್ಚುಗೀಸ್ ಭಾಷೆಯಲ್ಲಿ ಬರೆದದ್ದು ಬಹು ಕಾಲದವರೆಗೂ ಸುಪ್ತವಾಗಿತ್ತು. ಕ್ರಿ.ಶ. 1542–1616ರ ಕಾಲದಲ್ಲಿದ್ದ ಪೋರ್ಚುಗೀಸ್ ಇತಿಹಾಸಕಾರ Diego de Couto ಇವನು ಭಾರತದ ಚರಿತ್ರೆಯನ್ನು ತನ್ನ ಭಾಷೆಯಲ್ಲಿ "Decada quinta da historia do India" ಎಂದು ಬರೆದನು. Vincent Maric ಇವನು 'ವೇದ' ಎಂಬ ಪದವನ್ನು ತನ್ನ ಭಾಷೆಯಲ್ಲಿ "Parola Nacosta" ಎಂದು ಭಾಷಾಂತರಿಸಿದ್ದನು.

ನಾಲ್ಕು ವೇದಗಳನ್ನು ಕುರಿತಾಗಿ ಮೊದಲ ಬಾರಿಗೆ ಅವುಗಳ ಹೆಸರುಗಳ ಸಮೇತ ವ್ಯಾಖ್ಯಾನವನ್ನು ಬರೆದ ಪಾಶ್ಚಾತ್ಯನು Abraham Roger ಇವನು. ಈ ಬರೆವಣಿಗೆಯು ಕ್ರಿ.ಶ. 1651ರಲ್ಲಿ ಬೆಳಕಿಗೆ ಬಂತು. ಸುಮಾರು ಅದೇ ಕಾಲಕ್ಕೆ Fr. de Nobili ಇವನು ಬ್ರಾಹ್ಮಣ ಧರ್ಮವನ್ನು ಕುರಿತಾಗಿ ಬರೆದನು. ಬಾಣನ ಕಾದಂಬರಿಯನ್ನು ಕುರಿತಾಗಿಯೂ ಬರೆದನು. ಪೋರ್ಚುಗೀಸ್ ಕ್ರೈಸ್ತ ಮತ ಬೋಧಕನಾದ ಇವನು ಮದ್ರಾಸಿನ ಮೈಲಾಪುರದಲ್ಲಿ ಕ್ರಿ.ಶ. 1656 ರಲ್ಲಿ ಗತಿಸಿದನು.

೪. ಕೆಲವು ಪ್ರಖ್ಯಾತ ಡಚ್ ಮತ್ತು ಫ್ರೆಂಚ್ ಸಾಹಿತಿಗಳು :—

ಡಚ್ಚರ ಪೈಕಿ ಇದ್ದ ಹಲವು ಪ್ರಸಿದ್ಧ ಭಾರತೀಯ ಭಾಷಾ ವಿದ್ವಾಂಸರಲ್ಲಿ ಕೆಲವರ ಹೆಸರನ್ನಾದರೂ ಇಲ್ಲಿ ಕೊಡುವುದು ಉಚಿತವಿದೆ. Isaac Gommeline ಇವನು ಕ್ರಿ.ಶ. 1624 ರಲ್ಲಿ ಈ ದೇಶದ ವಿಚಾರವಾಗಿ ಹಲವು ವಿಷಯಗಳನ್ನು ಬರೆದಿದ್ದು ಅವೆಲ್ಲಾ Batavia Journal ಇದರಲ್ಲಿ ಹಲವು ವರ್ಷಗಳನಂತರ ಪ್ರಕಟ ವಾಯಿತು. ಕ್ರಿ.ಶ. 1590 ರಿಂದ 1650ರ ವರೆಗೆ ಡಚ್ಚರು ಈ ದೇಶದ ಕೆಲವು ಭಾಗಗಳಲ್ಲಿ ಪ್ರಬಲ ವ್ಯಾಪಾರಿಗಳಾಗಿದ್ದಾಗ ಅವರಲ್ಲಿ ವಿದ್ವಾಂಸರಾದವರು ಇಂಡಿಯಾ ಮತ್ತು ಇಂಡೋನೇಷ್ಯಾ ದೇಶಗಳ ಮಧ್ಯೆ ಸಂಚರಿಸಿ ವಿಶೇಷ ವರದಿಗಳನ್ನು ಬರೆದಿದ್ದಾರೆ. Dr. Terpstra ಇವನು ಈ ದೇಶದ ಕರಾವಳಿಯಿಂದ ಕರಾವಳಿಗೆ ಸಂಚರಿಸಿ ಎರಡು ಕಾಂಡಗಳ ಬೃಹದ್ಗ್ರಂಥವನ್ನು ಕ್ರಿ.ಶ. 1624ರಲ್ಲಿ ಬರೆದನು.

ಕ್ರಿ.ಶ. 18ನೇ ಶತಮಾನದ ಡಚ್ ಸಾಹಿತಿಗಳಲ್ಲಿ De Opkomst, De Vestigig, Zes Jaren ಮತ್ತು A. Schorer ಇವರು ಪ್ರಸಿದ್ಧರಾಗಿದ್ದಾರೆ. ಇವರನ್ನನುಸರಿಸಿ, Cort Verhael, Het Voorspel ಮೊದಲಾದ ಪ್ರವಾಸಿಕರೂ ಭಾರತೀಯ ಸಾಹಿತ್ಯವನ್ನು ಕುರಿತು ವಿಶೇಷ ಅನ್ವೇಷಣೆಯನ್ನು ನಡೆಸಿದ್ದಾರೆ.

ಉದ್ಧಾಮ ಫ್ರೆಂಚ್ ಸಾಹಿತಿಗಳಲ್ಲಿ ಕೆಲವರನ್ನು ಕ್ರಿ.ಶ. 18ನೇ ಶತಮಾನದ ಆರಂಭದಲ್ಲಿ ಕಂಡುಬರುತ್ತದೆ. Fr. Souciet ಇವನು ಭಾರತೀಯ ಭಾಷೆಗಳ ಮೇಲೆ "Linguistique" ಎಂಬುದಾಗಿ ಬರೆದನು. ಕ್ರಿ.ಶ. 1732ರ ಕಾಲದಲ್ಲಿ ಪಾಂಡಿಚೇರಿ ಮತ್ತು ಮದ್ರಾಸಿನಲ್ಲಿದ್ದ ಫ್ರೆಂಚ್ ತತ್ವಜ್ಞ Fr. Calmettee ಇವನು ವೇದಗಳ ಮೇಲೆ ವ್ಯಾಖ್ಯಾನ ನಡೆಸಿದುದಲ್ಲದೆ ವೇದಗಳ ಗ್ರಂಥವೋಲೆಗಳನ್ನು ಪ್ಯಾರಿಸಿಗೆ ಸಾಗಿಸಿದನು. ಇವನ ಬರೆವಣಿಗೆಯ ಮೇಲೆ "Revue Anthropologique" ಇದನ್ನು ಬರೆದ J Vinson ಇವನು ಅನಂತರ ಟೀಕೆಯನ್ನು ಬರೆದನು.

ಜರ್ಮನ್, ಡಚ್ಚ್ ಮತ್ತು ಇಂಗ್ಲಿಷರಿಗೆ ಹಿಂದೆಯೇ ಫ್ರೆಂಚರು ಸಂಸ್ಕೃತ ಸಾಹಿತ್ಯದಲ್ಲಿ ವಿಶೇಷ ಅಭಿರುಚಿಯನ್ನು ವಹಿಸಿದ್ದಲ್ಲದೆ ಕ್ರಿ ಶ. 1739 ರಲ್ಲಿಯೇ ಸಂಸ್ಕೃತ ಸಾಹಿತ್ಯದ Paris Catalogue ಇದನ್ನೂ ಸಂಪಾದಿಸಿದ್ದರು. ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾಗಿದ್ದ ಫ್ರೆಂಚರಲ್ಲಿ ಬಂಗಾಳದಲ್ಲಿದ್ದ Fr. Francisco Pons ಇವನೂ ಆಂಧ್ರದಲ್ಲಿದ್ದ Fr Calmettee ಇವನೂ ಪಾಂಡಿಚೇರಿಯಲ್ಲಿದ್ದ Fr. Antoine Mosac ಇವನೂ ಪ್ರಮುಖರೆನ್ನಿಸಿದ್ದರು. ಇವರಲ್ಲಿ Fr. Antoine ಇವನು ವೇದಗಳನ್ನು ಫ್ರೆಂಚ್ ಭಾಷೆಗಿಳಿಸಿದ್ದನು. Fr. Franciso ಇವನು ಕ್ರಿ.ಶ. 1781ರಲ್ಲಿ ಸಂಸ್ಕೃತ ಸಾಹಿತ್ಯ ಚರಿತ್ರೆಗೆ ಕಾಲಗಣನೆ ಸಮೇತವಾಗಿ ಒಂದು ರೂಪನ್ನು ಕೊಟ್ಟನು. Fr. L. Besse ಇವನು ಮಧುರೆ ಮತ್ತಿತರ ಭಾಗಗಳಲ್ಲಿ ಸಂಚರಿಸಿ "Passages de lettres sur le Madure" ಎಂಬುದಾಗಿ ಹಲವು ಲೇಖನಗಳನ್ನು ಬರೆದನು. ಇವನು ಅಲ್ಲಲ್ಲಿ Fr. Nobili ಇವನ ಪೋರ್ಚುಗೀಸ್ ಬರೆಹದಿಂದ ಹಲವು ವಿಷಯಗಳನ್ನು ಸಂಗ್ರಹಿಸಿದ್ದಾನೆ. ಕ್ರಿ ಶ. 17ನೇ ಶತಮಾನಾಂತ್ಯದಲ್ಲಿದ್ದ ಪ್ರಸಿದ್ಧ ಪಂಡಿತ De Jong ಇವನು ಹಿಂದೂ ಸಂಸ್ಕೃತಿಯ ಮೇಲೆ ಮಹತ್ವಾದ ಅನ್ವೇಷಣೆಯನ್ನು ನಡೆಸಿದ್ದಾನೆ.

Luiz Goncalves ಮತ್ತು Fr. Bouchet ಇವರು ಹಲವು ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ಪರಿಶೋಧಿಸಿದಲ್ಲದೆ ಕೆಲವನ್ನು ಫ್ರೆಂಚ್ ಭಾಷೆಗಿಳಿಸಿದರು. ದಕ್ಷಿಣದಲ್ಲಿದ್ದ Fr. Venance Buchet ಇವನು ಕ್ರಿ.ಶ. 1721 ರಲ್ಲಿ "Revue de l'historre de Inde Francais ಎಂಬುದಾಗಿ ಫ್ರೆಂಚ್ ಭಾಷೆಯಲ್ಲಿ ಈ ದೇಶವನ್ನು ಕುರಿತು ಬರೆದಿದ್ದಾನೆ. Fr. de Procenza ಇವನು De Nobili ಇವನು ಬರೆದ ಪ್ರಶ್ನೋತ್ತರ ಹಿಂದೂಶಾಸ್ತ್ರ ಗ್ರಂಥವನ್ನು ತನ್ನ ಫ್ರೆಂಚ್ ಭಾಷೆಗೆ ಅನುವಾದಿಸಿದನು.

೫. ೧೮ನೇ ಶತಮಾನಾರಂಭದಲ್ಲಿದ್ದ ಕೆಲವು ವಿದ್ವಾಂಸರು :—

ಔರಂಗಜೇಬನ ಕಾಲದಲ್ಲಿ ಇಂಗ್ಲೆಂಡಿನ ರಾಯಭಾರಿಯಾಗಿ ಇಲ್ಲಿ ಇದ್ದ Sir William Norris ಇವನು ಅಂದಿನ ಭಾರತದ ವಿಷಯವಾಗಿ ಸಾಕಷ್ಟು ವಿವರಣೆಗಳನ್ನು ಬರೆದಿಟ್ಟಿದ್ದಾನೆ. ಕ್ರಿ.ಶ. 1715 ರಿಂದ 1722ರ ವರೆಗೆ ಅಂದಿನ

ಬೊಂಬಾಯಿ ಪ್ರಾಂತದ ಗೌರ್ನರನಾಗಿದ್ದ Charles Boone ಇವನು ಪಾಶ್ಚಾತ್ಯ ಲೇಖಕರಿಗೆ ಈ ದೇಶದ ಚರಿತ್ರೆ ಮತ್ತು ಸಾಹಿತ್ಯದ ಬಗ್ಗೆ ಪರಿಶೋಧಿಸಲು ತಕ್ಕ ಅವಕಾಶವನ್ನು ಕಲ್ಪಿಸಿದ್ದಾನೆ. ಇವನು ಬೊಂಬಾಯಿಯ ಮೊದಲನೇ ಬ್ರಿಟಿಷ್ ಅಧಿಕಾರಿಯಾಗಿದ್ದನು. ಆಗ ನರ್ಮದೆ ವರೆಗಿನ ಪಶ್ಚಿಮ ಕರಾವಳೀ ಸೀಮೆಗಳ ವರೆಗೂ ಇದ್ದ ಜನರು ಕನ್ನಡ ಭಾಷೆಯನ್ನೇ ಆಡುತಿದ್ದರೆಂದೂ ಒಂದು ಸಂದರ್ಭದಲ್ಲಿ ಕನ್ನಡವೇ ಬೊಂಬಾಯಿಯಲ್ಲಿ ಅಧಿಕೃತವಾದ ದೇಶೀಯ ಭಾಷೆಯಾಗಿತ್ತೆಂದೂ ತಿಳಿದುಬಂದಿದೆ.

ಕ್ರಿ.ಶ. 18ನೇ ಶತಮಾನಾಂತ್ಯದಲ್ಲಿ ವೇದಾಭ್ಯಾಸಿಗಳಾದ ಆಂಗ್ಲ ವಿದ್ವಾಂಸರು ಹಲವರು ಅಲ್ಲಲ್ಲಿ ಇದ್ದರಾದರೂ ಅವರ ಪೈಕಿ ಮೊದಲ ಬಾರಿಗೆ ವೇದಗಳನ್ನು ಅನ್ವೇಷಿಸಿ ಅವುಗಳ ಮೇಲೆ ಟೀಕೆಯನ್ನು ಬರೆದವನು. ಕ್ರಿ.ಶ. 1741 ರಿಂದ 1795ರ ಕಾಲದಲ್ಲಿದ್ದ Col. W. Poller ಇವನು. ಕ್ರಿ.ಶ. 1788ರಲ್ಲಿ ಇವನು ಈ ದೇಶ ದಿಂದ ಇಂಗ್ಲೆಂಡಿಗೆ ಹಿಂದಿರುಗಿದಾಗ ತಾನು ವೇದಗಳ ಮೇಲೆ ಬರೆದುದರ ಜತೆಗೆ ಅವುಗಳ ಮೂಲ ಸಂಸ್ಕೃತ ಪ್ರತಿಗಳ ಸಮೇತವಾದ ಹನ್ನೊಂದು ಕಾಂಡ ವೇದಗ್ರಂಥ ಗಳನ್ನು ಲಂಡನ್ನಿನ ಗ್ರಂಥಭಂಡಾರಕ್ಕೆ ಒಪ್ಪಿಸಿದನು. ವೇದಗಳ ಮೇಲೆ ಹಿಂದಿನ ಯಾವ ಐರೋಪ್ಯಾ ವಿದ್ವಾಂಸನೂ ಸಾಧಿಸದ ಅಂಥಾ ಅಭೂತಪೂರ್ವ ಸಾಹಸವನ್ನು ಪ್ರದರ್ಶಿಸಿದ Col. Poliers ಇವನ ಬರೆವಣಿಗೆಯನ್ನು "ever made by an European" ಎಂದು ಘೋಷಿಸಲಾಯಿತು. ಹದಿನೆಂಟನೇ ಶತಮಾನಾಂತ್ಯದ ಈ ಕೃತಿಯನ್ನು Mythologie des Indous ಎಂಬುದಾಗಿ ಫ್ರೆಂಚ್ ಭಾಷೆಗೆ ಅನಮೇಲೆ ಇಳಿಸಲಾಯಿತು.

Prof. Gildmeister ಇವನು 1847 ರಲ್ಲಿ ಜರ್ಮನ್ ಭಾಷೆಯಲ್ಲಿ ತಯಾರಿಸಿದ "Bibliothecal Sanseritae Specime" ಎಂಬ ಗ್ರಂಥ ಕೋಶ ಪಟ್ಟಿಯಲ್ಲಿ 603 ಸಂಸ್ಕೃತ ಗ್ರಂಥಗಳು ಜರ್ಮನ್ ಭಾಷೆಗಿಳಿಸಲ್ಪಟ್ಟಂತೆ ಸೂಚಿತವಾಗಿವೆ. ಅಷ್ಟೊಂದು ಅಲ್ಪ ಅವಧಿಯಲ್ಲಿ ಈ ಒಂದು ಭಾಷೆಯಲ್ಲಿಯೇ ಇಷ್ಟು ಗ್ರಂಥಗಳು ಪ್ರಕಟವಾದಾಗ ಕ್ರಿ. ಶ. 1750 ರಿಂದ 1840ರ ಕಾಲದಲ್ಲಿ ಈ ದೇಶದ ಇನ್ನೆಷ್ಟೊ ಪುರಾಣ ಗ್ರಂಥಗಳೂ, ಅರ್ಥಕೋಶಗಳು, ಶಬ್ದಮಂಜರಿಗಳು, ವ್ಯಾಕರಣ ಗಳೆಂದಿತ್ಯಾದಿಯಾಗಿ ಇನ್ನೆಷ್ಟೋ ಸಂಖ್ಯೆಯಲ್ಲಿ ಇತರ ಐರೋಪ್ಯಾ ಭಾಷೆಗಳಲ್ಲಿ ಬರೆಯಲ್ಪಟ್ಟು ಪ್ರಚಾರವಾಗಿವೆ ಹೆಚ್ಚಾಗಿ ಇಂಗ್ಲಿಷ್, ಫ್ರೆಂಚ್, ಡಚ್ಚ್, ಪೋರ್ಚು ಗೀಸ್ ಮತ್ತು ಇಟಾಲಿಯನ್ ಭಾಷೆಗಳಲ್ಲಿ ಆ ಅವಧಿಯಲ್ಲಿ ಪ್ರಚಾರವಾದ ಗ್ರಂಥಗಳ ಸಂಖ್ಯೆಯು ಒಟ್ಟಾಗಿ 5000 ದಿಂದ 7000 ದಷ್ಟಾದರೂ ಆಗುತ್ತದೆ. ಇಷ್ಟು ಅದ್ಭುತ ವೇಗದಲ್ಲಿ ಈ ದೇಶದ ಸಾಹಿತ್ಯವು ವಿದೇಶಗಳಲ್ಲಿ ಪ್ರಚಾರವಾಯಿತೆಂದರೆ ಅದೊಂದು Literary Renaissance ಅಥವ ನಮ್ಮ ಸಾಹಿತ್ಯವು ಬೇರೊಂದು ಬಗೆಯಾಗಿ ಪುನರ್ಜನ್ಮವನ್ನು ಹೊಂದಿ ಲೋಕದಲ್ಲಿ ಹರಡಿತೆಂದೆನ್ನಬಹುದು.

**೬. ಸಾಹಿತ್ಯದ ಉತ್ಕ್ರಾಂತಿಯು ತ್ವರಿತವಾಗಿ ಮುಂದುವರಿಯಿತು :—**

ಹಿರಿಯ ಜರ್ಮನ್ ಸಾಹಿತಿಗಳಲ್ಲಿ ಕ್ರಿ. ಶ. 18 ನೇ ಶತಮಾನದ ಮಧ್ಯ ಕಾಲದಲ್ಲಿ ಇದ್ದ Fredrich Rosen ಇವನು ಪ್ರಬಲ ಸಂಸ್ಕೃತ ಪಂಡಿತನಾಗಿದ್ದನು. ಇವನು ಜರ್ಮನ್‌ನಲ್ಲಿ ಬರೆದ Rigvedae Specimen ಎಂಬ ಗ್ರಂಥವು ಬಹು ವರ್ಷಗಳನಂತರ ಎಂದರೆ ಕ್ರಿ. ಶ. 1830 ರಲ್ಲಿ ಪ್ರಕಟವಾಯಿತು.

ಕ್ರಿ. ಶ. 17ನೇ ಶತಮಾನಾಂತ್ಯದಲ್ಲಿ John Huyghen ಇವನು ಭಾರತ ಪ್ರವಾಸವನ್ನು ಕೈಗೊಂಡು ಬರೆದುದರ ವರದಿಯನ್ನು ಅಂದಿನ ಪ್ರಸಿದ್ಧ Hakluyet Society ಎಂಬ ಸಾಹಿತ್ಯ ಸಂಸ್ಥೆಗೆ A C. Burnell ಮತ್ತು P.A. Thiele ಇವರು ಜತೆ ಸೇರಿ " The Voyage of John Huyghen to East Indies " ಎಂಬುದಾಗಿ ಸುಮಾರು 1880ರ ಕಾಲದಲ್ಲಿ ಸಂಪಾದಿಸಿ ಪ್ರಕಟಿಸಿದರು.

ಅನಂತರದ ಐರೋಪ್ಯ ಸಾಹಿತಿಗಳಲ್ಲಿ Henry Yule ಇವನು ಪ್ರಸಿದ್ಧನಾಗಿರುವನು. ಇವನ Discovery of Sanskrit ಎಂಬುದಾಗಿ ಬರೆದ ದೀರ್ಘಪ್ರಬಂಧವು ಕ್ರಿ. ಶ. 1803 ರ Indian Antiquary ಪತ್ರಿಕೆಯಲ್ಲಿ ಪ್ರಕಟವಾಯಿತು. ಇವನ ಸಮಕಾಲೀನರಾದ ವಿದ್ವಾಂಸರ ಪೈಕಿ De Couto ಇವನು ಹಿಂದೂಮತದ ಮೇಲೆ ಹಲವು ಸುದೀರ್ಘ ಗ್ರಂಥಗಳನ್ನು ಬರೆದನು, ಇವನ್ನನುಸರಿಸಿ Paulinus, Rager, Couto, Vincenzo Maria ಮತ್ತು Baldaeus ಇವರು ಹಿಂದೂಧರ್ಮ ಮತ್ತು ವೇದಗಳ ಮೇಲೆ ಶಾಸ್ತ್ರೀಯ ಗ್ರಂಥಗಳನ್ನು ತಮ್ಮ ತಮ್ಮ ಭಾಷೆಗಳಲ್ಲಿ ಬರೆದರು.

ಹೀಗೆ ಕ್ರಿ. ಶ. 16 ನೇ ಶತಮಾನದ ಮಧ್ಯ ಭಾಗದಿಂದ ಹಿಡಿದು ಕಳೆದ ಶತಮಾನದ ಮಧ್ಯದ ವರೆಗಿನ ಮುನ್ನೂರು ವರ್ಷದ ಅವಧಿಯಲ್ಲಿ ಬಹು ತ್ವರಿತವಾದ ಒಂದು ಸಾಹಿತ್ಯ ಉತ್ಕ್ರಾಂತಿಯು ನಮ್ಮ ದೇಶದಲ್ಲಿ ನಡೆದಿದೆ. ಇದರ ಸಿಂಹಾವಲೋಕನವನ್ನು ಮಾಡುತ್ತಾ ಬಂದಂತೆ ಇನ್ನೂ ಹಲವು ಗಣ್ಯ ವಿದ್ವಾಂಸರ ಹೆಸರುಗಳು ಮೇಲಿಂದ ಮೇಲೆ ನೆನಪಿಗೆ ಬರುತ್ತವೆ. ಕ್ರಿ. ಶ. 1799 ರಲ್ಲಿ Mrs. Anna Maria ಇವಳು ತನ್ನ ಪತಿ Sir Willam Jones ಇವನ ವಿಷಯವಾಗಿ " Works of Jones " ಎಂದು ಬರೆದದ್ದು ಸುಮಾರು ಐವತ್ತು ವರ್ಷಗಳನಂತರ ಪ್ರಕಟವಾಯಿತು. Sir H. Colebrooke ಇವನು ಬರೆದಿಟ್ಟಿದ್ದ Essay on Philosophy of Hindus ಇದು 1868ರಲ್ಲಿ ಮುದ್ರಣವಾಯಿತು. ಕ್ರಿ. ಶ. 1790ರಷ್ಟು ಹಿಂದೆ Alexander Dow ಇವನು ಬರೆದ History of Hindustan ಗ್ರಂಥವು ಮೂರು ಕಾಂಡಗಳ Folio ಪುಟಗಳ ಗ್ರಂಥವಾಗಿ ಪುನಃ ಪ್ರಕಟವಾಯಿತು.

ಸಂಸ್ಕೃತ ಪದಗಳನ್ನು ಮತ್ತು ರಘುವಂಶ ಕಾವ್ಯವನ್ನು ಭಾಷಾಂತರಿಸಿದ್ದ Prof. Griffith ಇವನ ಕೃತಿಗಳೂ ಕಳೆದ ಶತಮಾನದ ಮಧ್ಯಕಾಲಕ್ಕೆ ಬೆಳಕು ಕಂಡವು. C. Schocbal ಇವನ ಜರ್ಮನ್ ರಾಮಾಯಣವು Le Ramayana ಎಂದು 1888ರಲ್ಲಿ ಹೊರಬಂತು. ಪ್ರಸಿದ್ಧ ಇತಿಹಾಸಕಾರ, ಭಾಷಾಶಾಸ್ತ್ರಜ್ಞ

ಮತ್ತು ರಾಜಕಾರಣಿಯಾಗಿದ್ದ Francis Buchanan ಇವನು 1810ರಲ್ಲಿ ಸಂಗ್ರಹಿಸಿ ಬರೆದ 'Survey of Bihar' ಮತ್ತು ಇತರ ಕೃತಿಗಳು ಹಲವು ಕಾಂಡಗಳಾಗಿ ಪ್ರಕಟವಾದುವು. 1897ರಲ್ಲಿ R. C. Temple ಇವನು ಅದನ್ನು ಪ್ರಶಂಸಾಪೂರ್ವಕವಾಗಿ ವಿಮರ್ಶಿಸಿದನು.

ಪ್ರವಾಸ ಗ್ರಂಥಗಳು ಅಸಂಖ್ಯವಾಗಿ ಪ್ರಕಟವಾಗಿವೆಯೆಂದು ಹಿಂದೆಯೇ ಹೇಳಲಾಗಿದೆ. Rev. Reginald Heber ಇವನ A Journey through India ಇದು 1500 Demy ಪುಟಗಳ ಮೂರು ಕಾಂಡಗಳ ಗ್ರಂಥವಾಗಿ ಕ್ರಿ. ಶ. 1824 ರಲ್ಲಿ ಪ್ರಕಟವಾದುದು ಬಹು ಪ್ರಸಿದ್ಧ ಗ್ರಂಥವಾಯಿತು. J. Mill ಇವನು ಬರೆದ History of India ಇದನ್ನು Prof. H. H. Wilson ಇವನು ಪರಿಷ್ಕರಿಸಿ ಪ್ರಕಟಿಸಿದ್ದ 6000 Demy ಪುಟಗಳ ಒಂಭತ್ತು ಕಾಂಡಗಳ ಗ್ರಂಥವಾಗಿ ಪುನರ್ಮುದ್ರಣವಾಯಿತು. ಅದರೊಡನೆಯೇ Hon. Montstuart Elphinstone ಇವನ 1300 Demy ಪುಟಗಳ ಹಿಂದೂಸ್ಥಾನದ ಚರಿತ್ರೆ ಗ್ರಂಥವೂ Henry Beveridge ಇವನ 2800 Demy ಪುಟಗಳ ಸಚಿತ್ರ ಸಹಿತವಾದ ಚರಿತ್ರೆಗ್ರಂಥವೂ ಮೂರು ಕಾಂಡಗಳಾಗಿ ಸುಮಾರು 1870ರ ಕಾಲದಲ್ಲಿ ಮುದ್ರಣವಾದುವು.

೭. ಡಾ. ಕಾಲೆಂಡ್, ಗೋಲ್ಡ್‌ಸ್ಟುಕರ್ ಮತ್ತು ವೆಬರ್ ಇವರು :—

Prof. Caland ಇವನನ್ನು ಕುರಿತು ಹಿಂದೆಯೇ ಪ್ರಸ್ತಾಪಿಸಲಾಗಿದೆ. ಕಳೆದ ಶತಮಾನದ ಐರೋಪ್ಯಾ ವಿದ್ವಾಂಸರಲ್ಲಿ ಇವನು ತನ್ನದೇ ಆದ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದ್ದಾನೆ. ವೇದಗಳ ಕಾಲ, ತತ್ವ, ಚರಿತ್ರೆ ಇತ್ಯಾದಿಗಳ ಬಗ್ಗೆ ಅನ್ವೇಷಣೆಯನ್ನು ಶ್ರಮವಹಿಸಿ ಸಾಧಿಸಿದ್ದಾನೆ. "Out dekkingsgeschiedenis Van den Veda" ಎಂಬುದಾಗಿ ವೇದಗಳನ್ನು ಕುರಿತು ಬರೆದ ಅವನ ಗ್ರಂಥವು ಸಮರ್ಪಕವಾದುದಾಗಿದೆ. ಭಾರತೀಯ ಭಾಷಾಶಾಸ್ತ್ರದ ಮೇಲೂ ಉದ್ದಾಮ ಪರಿಶೋಧನೆಯನ್ನು Prof. Caland ಇವನು ನಡೆಸಿದನು. ಇವನು Dr. A. Burnell ಇವನ ಮೂಲಕವಾಗಿ ಐರೋಪ್ಯಾ ವಿದ್ವಾಂಸರು ವೇದಗಳ ಬಗ್ಗೆ ಅದೆಷ್ಟು ದುಡಿದಿದ್ದಾರೆಂಬುದರ ಸಂಪೂರ್ಣ ವರದಿಯನ್ನು ತಯಾರಿಸಿದ್ದು ಕ್ರಿ. ಶ. 1885ರ ಕಾಲವಲ್ಲಿ Indian Antiquary ಪತ್ರಿಕೆಯಲ್ಲಿ ಪ್ರಕಟವಾಯಿತು. ಇವನಿಗೆ ಸಮುಗಟ್ಟೆ ನಿಲ್ಲಬಹುದಾದ ಇನ್ನೊರ್ವ ವೇದಾಭ್ಯಾಸಿಯು ಜರ್ಮನ್ ಜನಾಂಗಕ್ಕೆ ಸೇರಿದ F. Regnier ಇವನಾಗಿದ್ದು ವೇದಗಳ ಮೇಲೆ ವಿಶೇಷ ಸಂಶೋಧನೆಯನ್ನು ನಡೆಸಿದ್ದನು.

Theodre Goldstucker ಇವನನ್ನು ಕುರಿತಾಗಿಯೂ ಹಿಂದೆ ಹೇಳಲಾಗಿದೆ. ಇವನು ಮತ್ತೊರ್ವ ಅಭೂತಪೂರ್ವ ಸಾಹಿತಿಯಾಗಿದ್ದನು. ಕ್ರಿ. ಶ. 1821ರಲ್ಲಿ ಪಷ್ಯಾರ್ಡದಲ್ಲಿ ಜನಿಸಿದ ಯೇಹೂದೀಜನಾಂಗದವನಾದ Goldstucker ಇವನು ತನ್ನ ಹತ್ತೊಂಭತ್ತನೇ ವರ್ಷದಲ್ಲಿಯೇ ಡಾಕ್ಟರೆಟ್ ಪದವಿಯನ್ನು ಸಂಪಾ

ದಿಸಿ ಅನಂತರ ಪ್ಯಾರಿಸ್‌ನಲ್ಲಿ E. Burnouf ಇವನ ಅಧೀನದಲ್ಲಿ ಸಂಸ್ಕೃತ ವ್ಯಾಸಂಗವನ್ನು ಮಾಡಿ 1847ರಲ್ಲಿ ಬರ್ಲಿನ್‌ನಲ್ಲಿ ಇನ್ನಷ್ಟು ಅನ್ವೇಷಣೆಯನ್ನು ನಡೆಸಿದನು. ಕ್ರಿ.ಶ. 1850ರಲ್ಲಿ Prof. Wilson ಇವನೊಡನೆ ಸಂಸ್ಕೃತ ನಿಘಂಟಿನ ರಚನೆಗೆ ಸೇರಿದನು. ಅಲ್ಲಿಂದನಂತರ 1872ರಲ್ಲಿ ಅವನು ಮೃತನಾಗುವವರೆಗೂ ಲಂಡನ್ ವಿಶ್ವವಿದ್ಯಾಲಯುವಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿಯೇ ಇದ್ದನು. "ಮಾನವ ಕಲ್ಪಸೂತ್ರ" ಎಂಬ ಮಹಾಗ್ರಂಥವನ್ನು ಸಂಪಾದಿಸಿದಾಗ ಅದಕ್ಕೆ ಮುನ್ನುಡಿಯಾಗಿ "Panini—His Place in Sanskrit Literature" ಎಂಬುದಾಗಿ ಬರೆದ ಅವನ ಪ್ರಬಂಧವು ಸರ್ವರ ಪ್ರಶಂಸೆಗೂ ಪಾತ್ರವಾಯಿತು. T. Goldstucker ಇವನ ಇತರ ಕೃತಿಗಳಲ್ಲಿ, ಮಹಾಭಾರತ, ಪ್ರಬೋಧ ಚಂದ್ರೋದಯ, ಸಂಸ್ಕೃತ ಅರ್ಥಕೋಶ, ಮೀಮಾಂಸ, ಪತಂಜಲೀ ಯೋಗಸೂತ್ರದ ಮೇಲೆ ಆರು ಕಾಂಡಗಳು, ಸಂಸ್ಕೃತ ವ್ಯಾಕರಣ, ಇತ್ಯಾದಿಗಳು ಅವನ ಹೆಸರನ್ನು ಅಮರವಾಗಿಸಿವೆ. ಹಿಂದೂನ್ಯಾಯ ಶಾಸ್ತ್ರದ ಮೇಲೆ ಅವನು ವಿಶೇಷ ವ್ಯಾಖ್ಯಾನವನ್ನು ಬರೆದನು. Prof. Burouff, Prof. Weber ಮೊದಲಾದ ವಿದ್ವಾಂಸರೂ ಹಿಂದೂ ತತ್ವ ಶಾಸ್ತ್ರದ ಮೇಲೆ ಹಲವು ವಿವರಗಳನ್ನು T. Goldstucker ಇವನಿಂದ ಪಡೆಯುತ್ತಿದ್ದರು. Prof. F. Max Mueller ಇವನು ಆ ಮಹಾ ವಿದ್ವಾಂಸನನ್ನು ಕುರಿತು, "the greatest Sanskritist of the age" ಎಂಬುದಾಗಿ ಶ್ಲಾಘಿಸಿದನು.

ಇದೇ ವರ್ಗಕ್ಕೆ ಸೇರಿದ Prof A. Weber ಇವನ ಜರ್ಮನ್, ಲ್ಯಾಟಿನ್ ಮತ್ತು ಗ್ರೀಕ್ ಭಾಷಾ ಬರೆವಣಿಗೆಗಳು ಯಥಾವತ್ತಾಗಿ ಮುಂದುವರಿಯುತ್ತಲೇ ಇತ್ತು. ಇವನ ಜರ್ಮನ್ ರಾಮಾಯಣವು Rev. D. C. Boyd ಇವನಿಂದ ಇಂಗ್ಲಿಷ್‌ಗೆ ಭಾಷಾಂತರವಾಯಿತು. A Weber ಸಂಪಾದಿಸಿದ್ದ ಸಂಸ್ಕೃತ "ಕಾವ್ಯಮಾಲಾ" ಇದು 1893ರಲ್ಲಿ ಜರ್ಮನಿಯ Oriental Society ಪತ್ರಿಕೆಗಳಲ್ಲಿ ಪ್ರಕಟವಾಯಿತು. ಈ ಮೇಧಾವಿಯ ಇತರ ಕೃತಿಗಳನ್ನು ಕುರಿತಾಗಿ ಹಿಂದಿನ ಪುಟಗಳಲ್ಲಿ ಸಾಕಷ್ಟು ಪ್ರಸ್ತಾಪಿಸಲಾಗಿದೆ.

**೮. ಅಮೇರಿಕಾದ ಡಾ. ವಿಟ್ನೀ ಮತ್ತು ಡಾ. ಲಾನ್ಮನ್ ಇವರು :—**

ಅಮೇರಿಕಾದ ಪ್ರಸಿದ್ಧ ವಿದ್ವಾಂಸ Prof. W. Dwight Whitney ಇವನ ವಿಚಾರವಾಗಿ ಪುನಃ ಹೇಳುವ ಅವಶ್ಯಕತೆ ಇದೆ; ಏಕೆಂದರೆ ಇವನೂ ಒರ್ವ ಕ್ರಾಂತಿಕಾರಕ ಸಾಹಿತಿಯಾಗಿ ಕಳೆದ ಶತಮಾನದಲ್ಲಿ ಮೆರೆದನು. ಇವನು ಫೆಬ್ರವರಿ 1827ರಲ್ಲಿ ಮಸಾಚುಸೆಟ್ಸ್ ಪ್ರಾಂತದಲ್ಲಿ ಹುಟ್ಟಿದನು. 1845ರ ಕಾಲಕ್ಕೆ ಭೂಗರ್ಭ ಶಾಸ್ತ್ರದಲ್ಲಿ ಪಾರಂಗತನೆನಿಸಿ ಅನಂತರ 1848 ರಲ್ಲಿ ಏಲ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಭಾಷೆಯಲ್ಲಿ ಉಚ್ಚ ವ್ಯಾಸಂಗವನ್ನು ಪಡೆದನು. ಅಲ್ಲಿಂದ ಜರ್ಮನಿಗೆ ಹೋಗಿ Prof. Weber ಮತ್ತು Prof. Roth ಇವರೊಡನೆ ಸೇರಿ ಭಾರತೀಯ ವಿದ್ಯೆಯ ಬಗ್ಗೆ ಅಪಾರ ಪಾಂಡಿತ್ಯವನ್ನು ಸಂಪಾದಿಸಿ 1853 ರಲ್ಲಿ ಅಮೇರಿಕಾಕ್ಕೆ

ಹಿಂದೆರಳಿದನು. ಅನಂತರ Prof. Whitney ಇವನು 1894ರ ಜೂನ್ ತಿಂಗಳಲ್ಲಿ ನಿಧನನಾಗುವವರೆಗೂ ಮೇಲಿನ ತನ್ನ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿಯೇ ದುಡಿದನು. ಇವನು ಪ್ರಚಂಡ ಸಂಸ್ಕೃತ ವಿದ್ವಾಂಸನೂ ವೇದ, ಉಪನಿಷತ್ ಇತ್ಯಾದಿಗಳಲ್ಲಿ ಪಾರಂಗತನೂ ಆಗಿದ್ದು ಎಲ್ಲಾ ವಿದ್ವಾಂಸರ ಮನ್ನಣೆಗೂ ಪಾತ್ರನಾಗಿದ್ದನು. ಇವನ ಹಲವು ಕೃತಿಗಳಲ್ಲಿ 1879ರಲ್ಲಿ ಬರೆದ ಸಂಸ್ಕೃತ ವ್ಯಾಕರಣವು ಪ್ರಸಿದ್ಧವಾದುದಾಗಿತ್ತು. ಇಂಗ್ಲಿಷ್ ವ್ಯಾಕರಣವನ್ನೂ ಬರೆದಿದ್ದ ಈ ಭಾಷಾಶಾಸ್ತ್ರಜ್ಞನು "Century Dictionary of English Language" ಎಂಬ ಗ್ರಂಥಮಂಡಳಿಯ ಪ್ರಧಾನ ಸಂಪಾದಕನೂ ಆಗಿದ್ದನು. ಇವನು ಬರೆದ ಕಡೇ ಗ್ರಂಥವು The Veda in Panini ಇದಾಗಿತ್ತು. ಇವನು ತನ್ನ ವಿದ್ವತ್ತಿಗಾಗಿ ಬರ್ಲಿನ್, ರೋಮ್, ಪ್ಯಾರಿಸ್, ಸೆಂಟ್ ಪೀಟರ್ಸ್‌ಬರ್ಗ್ ಮೊದಲಾದ ವಿಶ್ವವಿದ್ಯಾಲಯಗಳಿಂದ ಗೌರವಿಸಲ್ಪಟ್ಟ ಮಹಾ ಪಂಡಿತನಾಗಿದ್ದನು.

ಕ್ರಿ.ಶ. 1850 ರಲ್ಲಿ ಜನ್ಮವೆತ್ತಿದ ಅಮೇರಿಕಾದ ಇನ್ನೊರ್ವ ಪ್ರಸಿದ್ಧ ವಿದ್ವಾಂಸನು Prof. C. R. Lanman ಇವನು. ಕೊನೆಕ್ಟಿಕಟ್ ಪ್ರಾಂತದ ಇವನು ಇಂಗ್ಲಿಷ್, ಗ್ರೀಕ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಉದ್ದಾಮ ಪಂಡಿತನೆನಿಸಿದ್ದನು. ಬರ್ಲಿನ್ ಮತ್ತು ಟ್ಯುಬಿನ್ಜನ್ ವಿದ್ಯಾಕ್ಷೇತ್ರಗಳಲ್ಲಿ ಬಾಲ್ಯದ ವಿದ್ಯೆಯನ್ನು ಪಡೆದು ಹಾರ್ವಾರ್ಡ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿ ಐವತ್ತಾರು ವರ್ಷಗಳ ಕಾಲ ಇದ್ದನು. ಕ್ರಿ.ಶ. 1889 ರಲ್ಲಿ ಇವನು ಹಿಂದೂಸ್ಥಾನದಲ್ಲಿ ಸಂಚರಿಸಿದಲ್ಲದೆ ಅನಂತರ ಅಮೇರಿಕಾ ಖಂಡದ ಉದ್ದಗಲಕ್ಕೂ ಭಾರತೀಯ ಸಂಸ್ಕೃತಿಯ ಬಗ್ಗೆ ಭಾಷಣಗಳನ್ನು ಕೊಡುತ್ತಾ ಅಲ್ಲಿನ ಜನರಿಗೆ ಈ ದೇಶದ ಪರಿಚಯವನ್ನು ಮಾಡಿಕೊಟ್ಟನು. Prof. Lanman ಇವನು ಸುಮಾರು ನಲ್ವತ್ತು ಗ್ರಂಥಗಳಿಗೂ ಮೇಲ್ಪಟ್ಟು ಬರೆದಿದ್ದಾನೆ. ಅವುಗಳಲ್ಲಿ "Bloomfield's Vedic Concordance" ಮತ್ತು Rigveda by Geldner" ಇವು ಪ್ರಸಿದ್ಧವಾಗಿವೆ. ಇವನೂ ಸಹ Dr. Whitney ಇವನಂತೆ ಹಲವು ವಿಶ್ವವಿದ್ಯಾಲಯಗಳಿಂದ ಡಾಕ್ಟರೆಟ್ ಪದವಿಯನ್ನು ಗಳಿಸಿದ ಗಣ್ಯ ಸಾಹಿತಿಯಾಗಿದ್ದನು.

ಅಮೇರಿಕಾದ ವಿದ್ವಾಂಸರಿಗೆ ಕಳೆದ ಶತಮಾನದಲ್ಲಿ ಜರ್ಮನಿಯು ಭಾರತೀಯ ವಿದ್ಯೆಯ ತವರುಮನೆಯಂತಿತ್ತು. Prof. Whitney, Bloomfield, Lanmer ಈ ಮೊದಲಾದವರಂತೆ ಇನ್ನೆಷ್ಟೋ ಪಾಶ್ಚಾತ್ಯ ವಿದ್ವಾಂಸರು ಜರ್ಮನಿಗೆ ಹೋಗಿ ಭಾರತೀಯ ವಿದ್ಯೆಯನ್ನು ಕಲಿತು ತಮ್ಮ ಸ್ವದೇಶಗಳಿಗೆ ಹಿಂದೆರಳಿದ್ದಾರೆ. ಅವರೆಲ್ಲರೂ ಹಿಂದೆಯೇ ಹೇಳಿದಂತೆ ಅಮೇರಿಕಾದ R. W. Emerson ಇವನ ತಾತ್ವಿಕ ಬರೆವಣಿಗೆಯಿಂದ ಸ್ಫೂರ್ತಿಹೊಂದಿ ಭಾರತೀಯ ಸಾಹಿತ್ಯದಲ್ಲಿ ಅಭಿರುಚಿಯನ್ನು ತೋರಿಸಿದರೆನ್ನಬಹುದು.

೯. ಶಾಸ್ತ್ರೀಯ ಗ್ರಂಥಗಳನ್ನು ಇತಿಮಿತಿಯಿಲ್ಲದೆ ಅನ್ವೇಷಿಸಿದರು :—

Harvard Oriental Series ಗ್ರಂಥಮಾಲೆಯನ್ನು ಪ್ರಕಟಪಡಿಸು

ವಾಗ ಅದರ ಪ್ರಧಾನ ಸಂಪಾದಕನಾಗಿ ಈ Charles Rockwell Lanman ಇವನು ಅನೇಕ ವರ್ಷಗಳ ಕಾಲ ಇದ್ದನು. ಈ ಗ್ರಂಥಮಾಲೆಯು Prof. Max Mueller ಇವನ Sacred Books of the East ಗ್ರಂಥಮಾಲೆಯಂತೆ ಹಲವು ಪ್ರಮುಖ ವಿದ್ವಾಂಸರಿಂದ ಬರೆಯಲ್ಪಟ್ಟ ಉದ್ಬೋಧಕ ಬರೆಹಗಳಾಗಿದ್ದುವು. ಈ ಹಾರ್ವಾರ್ಡ್ Oriental Series ಇದು ಸುಮಾರು 1884 ರಿಂದ Dr. R. C. Lanman ಇವನ ನೇತೃತ್ವದಲ್ಲಿ ಪ್ರಾರಂಭಸಿದ್ದು ಪ್ರಖ್ಯಾತ ವಿದ್ವಾಂಸ ರಾದ Macdonell, Garbe, Hertel, Cappeller, Keith, Edgerton, Geldner, Pischel ಮೊದಲಾದವರು ಹಿಂದೂ ಮತ, ಬೌದ್ಧ ಮತ, ಭಾರತೀಯ ಸಾಹಿತ್ಯ, ಕಲೆ, ನೀತಿಶಾಸ್ತ್ರ, ನ್ಯಾಯಶಾಸ್ತ್ರ ಇತ್ಯಾದಿಗಳ ಮೇಲೆ ಸುಮಾರು 500 demy ಪುಟಗಳ ಗ್ರಂಥಗಳನ್ನು ಒರ್ವೊರ್ವರು ಬರೆದು ಪ್ರಕಟಿಸಿ ದ್ದಾರೆ. Dr. Hendrik Kern ಇವನು 1890 ರಲ್ಲಿ ಬರೆದ "ಜಾತಕ ಮಾಲಾ" ಗ್ರಂಥವು ಅವುಗಳ ಪೈಕಿ ವಿಶಿಷ್ಟವಾದುದೆಂದೆನ್ನಲಾಗಿದೆ.

ಪಂಚತಂತ್ರ, ಹಿತೋಪದೇಶ, ಭಾಗವತ ಕತೆಗಳು ಮೊದಲಾದುವನ್ನು ಕುರಿತು ಕ್ರಿ.ಶ. 1750 ರಿಂದಲೇ ಹಲವು ಪಾಶ್ಚಾತ್ಯ ವಿದ್ವಾಂಸರು ಬರೆದಿದ್ದಾರೆ. ಬಂಗಾಳೀ ವ್ಯಾಕರಣ, ಹಿಂದೂ ನ್ಯಾಯಶಾಸ್ತ್ರ ಇತ್ಯಾದಿಗಳನ್ನು ಕುರಿತು ಬರೆದ N. Halhed ಇವನು 1775 ರಷ್ಟು ಹಿಂದೆಯೇ "ಇತಿಹಾಸ ಮಾಲಾ" ಎಂಬ ಕಥಾಸಂಗ್ರಹವನ್ನು ಬರೆದದ್ದು ಆ ಕಾಲದಲ್ಲಿ ತುಂಬಾ ಜನಪ್ರಿಯವಾಗಿತ್ತು. "ಹಿತೋಪದೇಶ" ಇದನ್ನು Sir Jones ಇವನಿಂದ ಹಿಡಿದು ಹಲವಾರು ವಿದ್ವಾಂಸರು ಆವಾಗಲೇ ಅನುವಾದಿಸಿದ್ದಾರೆ. ಆ ಪೀಳಿಗೆಯಲ್ಲಿ Prof. Johnson, Prof. Muir ಮತ್ತು Sir Edwin Arnold ಇವರೂ ಸೇರಿದ್ದಾರೆ. "ಹಿತೋಪದೇಶ" ವು ಆ ಕಾಲದಲ್ಲಿ "the Father of all Fables" ಎಂದು ಪ್ರಖ್ಯಾತವಾಗಿತ್ತು.

The Light of Asia ಮತ್ತು Song Celestial, ಇದನ್ನು ಬರೆದ ಪ್ರಖ್ಯಾತನಾದ Edwin Arnold ಇವನು "Light of the World" ಎಂದು ಯೇಸುಕ್ರಿಸ್ತನ ಮೇಲೂ ಬರೆದನು. ಇವನ ರಾಮಾಯಣ, ಶಾಕುಂತಲಾ, ನಳದಮಯಂತಿ ಇತ್ಯಾದಿ ಕೃತಿಗಳ ಭಾಷಾಂತರವೂ ಕಳೆದ ಶತಮಾನದ ಅಂತ್ಯದೊಳ ಗಾಗಿಯೇ ಬೆಳಕು ಕಂಡವು.

J. M. Campbell ಇವನು ಆ ಕಾಲದ ಇನ್ನೊರ್ವ ಸುಪ್ರಸಿದ್ಧ ಲೇಖಕ ನಾಗಿದ್ದನು. "The spirit Basis of belief and custom" ಎಂಬು ದಾಗಿ ಹಿಂದೂ ಜನರ ಭಕ್ತಿ, ನಂಬಿಕೆಗಳ ವಿಷಯವಾಗಿ ಗ್ರೀಕ್, ರೋಮನ್ ಇತ್ಯಾದಿ ಜನರ ಪದ್ಧತಿಗಳಿಗೆ ಅವನ್ನು ಹೋಲಿಸಿ ಸ್ವಾರಸ್ಯವಾದ ನೂರಾರು ಲೇಖನಗಳನ್ನು ಬರೆದನು. ನೂಲು ಕಟ್ಟುವುದು, ತಾಲಿಕಟ್ಟುವುದು, ಬಿಳಿ ಕೊಡೆ ಹಿಡಿಯುವುದು ಇಂಥಾ ಹಲವು ನಿತ್ಯದ ವಿಚಾರಗಳ ಮೇಲೆ ಅವನು ಶಾಸ್ತ್ರೀಯವಾಗಿ ಬರೆದ ವಿಷಯ ಗಳು ಜನಪ್ರಿಯವಾದುವು.

ಈ ವೇಳೆಗೆ Edward Thomas ಇವನು ಬಹು ಪರಿಣತನಾದ ಬ್ರಾಹ್ಮೀ

ಭಾಷಾ ಪಂಡಿತನಾಗಿದ್ದು ಹಲವು ಪ್ರಾಚೀನ ಶಾಸನಗಳ ಪರಿಶೋಧನೆ ಮತ್ತು ವಿವರಣೆಗಳಿಗೆ ಕಾರಣನಾದನು. ಬೊಂಬಾಯಿಯಲ್ಲಿ 'ಲೋಕಮಾನ್ಯ' ತಿಲಕನೊಡನೆ ಭಾರತೀಯ ಸಾಹಿತ್ಯ ವ್ಯಾಸಂಗವನ್ನು ನಡೆಸಿದ Prof. Hermann Jacobi ಇವನು ಋಗ್ವೇದದ ವಿಷಯವಾಗಿ ಜರ್ಮನ್‌ನಲ್ಲಿ ಬರೆದ ಉದ್ಗ್ರಂಥವು Dr. J. Marrison ಇವನಿಂದ ಇಂಗ್ಲಿಷ್‌ಗೆ ಇಳಿಸಲಾಯಿತು. Vincent Smith ಇವನ ಚಾರಿತ್ರಿಕ ಗ್ರಂಥಗಳೂ Sten Konow ಇವನು ಅಸ್ಸಾಮ್ ಮತ್ತು ಟಿಬೇಟ್ ಜನಾಂಗಗಳ ಮೇಲೆ ಬರೆದ ಗ್ರಂಥಗಳೂ Dr. G. Thibaut ಇವನು ವೇದಗಳ ಮೇಲೆ ಬರೆದ ಗ್ರಂಥಗಳೂ 1898 ರ ಒಳಗಾಗಿ ಮುದ್ರಣವಾಗಿ ಪ್ರಚಾರವಾದುವು.

## ೧೦. ತಮ್ಮ ಸಂಶೋಧನಾ ಕಾರ್ಯವನ್ನು ಕೆಚ್ಚೆದೆಯಿಂದ ಮುಂದುವರಿಸಿದರು :—

ಕಳೆದ ಶತಮಾನದ ಹಲವು ಸಿಸ್ವಿಲ ಪರಿಶೋಧಕರನ್ನು ಕುರಿತು ಹಿಂದೆಯೇ ಹೇಳಲಾಗಿದೆ. ಅವರೆಲ್ಲರೂ ಈ ದೇಶದಲ್ಲಿ ತಮ್ಮ ವೃತ್ತಿಯಿಂದ ನಿವೃತ್ತರಾಗಿ ತಮ್ಮ ಸ್ವದೇಶಗಳಿಗೆ ಮರುಳಿದ ಮೇಲೂ ಇನ್ನೆಷ್ಟೋ ವಿಚಾರಪೂರ್ಣವಾದ ವಿಷಯಗಳ ಮೇಲೆ ಬರೆಯುತ್ತಲೇ ಇದ್ದರು. ಅವರೆಲ್ಲರೂ ಭಾರತೀಯ ಧರ್ಮ, ಸಂಸ್ಕೃತಿ, ಸಾಹಿತ್ಯ, ಪ್ರಾಕ್ತನ ವಿಚಾರ ಇತ್ಯಾದಿಗಳ ಮೇಲೆ ಅದೊಂದು ತಪೋಶ್ಚರ್ಯೆಯೆಂಬಂತೆ ತಮ್ಮ ಕಡೇ ದಿನಗಳ ವರೆಗೂ ದುಡಿಯುತ್ತಿದ್ದರು Prof. F. Kielhorn ಇವನು ಜರ್ಮನಿಯ ಗೊಟಿಸ್ಜಾನ್‌ನಿಂದ ಉತ್ತರ ಹಿಂದೂಸ್ಥಾನದ ಶಿಲಾಶಾಸನಗಳು, ಜ್ಯೋತಿಷ್ಯ ಶಾಸ್ತ್ರ, ಶಕ ಕಾಲಗಣನೆ ಇತ್ಯಾದಿಗಳ ಮೇಲೆ ವಿದ್ವತ್ಪೂರ್ವಕವಾದ ಲೇಖನಗಳನ್ನು ಮೇಲಿಂದ ಮೇಲೆ ಬರೆಯುತಿದ್ದನು. Jos Burgess ಇವನು ತನ್ನ ಎಡಿನ್‌ಬರೋ ವಸತಿಯಿಂದ ಸಾಂಚಿಯ ಸ್ತೂಪ, ಹಿಂದೂ ಶಿಲ್ಪಶಾಸ್ತ್ರ, ದುಷ್ಟ ಸಹಗಮನ ಪದ್ಧತಿ ಇತ್ಯಾದಿಗಳ ಮೇಲೆ ಬರೆದನು. ಇವರಂತೆ ಇನ್ನೆಷ್ಟೋ ಜನ ಇಡೀ ಯೂರೋಪು ಖಂಡದಲ್ಲಿ ಹೀಗೆ ಲೇಖನಗಳನ್ನು ಬರೆಯುತ್ತಾ ತಮ್ಮ ಸ್ಥಳೀಯ ಪತ್ರಿಕೆಗಳ ಮೂಲಕ ಈ ದೇಶದ ವಿಚಾರವಾಗಿ ಸಕಲ ವಿಷಯಗಳನ್ನು ಅಲ್ಲೆಲ್ಲಾ ಬಿತ್ತರಿಸಿದರು.

ಹಿಂದೂ ಮತ್ತು ಬೌದ್ಧ ವಾಸ್ತುಶಿಲ್ಪದ ಬಗ್ಗೆ ಅಪೂರ್ವ ಪರಿಶೋಧನೆಯನ್ನು ನಡೆಸಿದ W. F. Sinclair ಇವನು ಪಶ್ಚಿಮ ಹಿಂದೂಸ್ಥಾನದ ವಾಸ್ತುಶಿಲ್ಪ ವೈಖರಿಯ ಬಗ್ಗೆ ಪ್ರತ್ಯೇಕ ಗ್ರಂಥವನ್ನು ಬರೆದನು. Col. G. A. Jacob ಇವನು 1894 ರಲ್ಲಿ "ವೇದಾಂತಸಾರ" ಎಂಬುದಾಗಿಯೂ Prof. Aufrecht ಇವನು ಹಲಾಯುಧನ 'ಅಭಿಧಾನ ರತ್ನಮಾಲಾ" ಇದರ ಮೇಲೂ, Edwin F. Atkinson ಇವನು 1874 ರಲ್ಲಿ ವಾಯುವ್ಯ ಪ್ರಾಂತಗಳು ಮತ್ತು ಉತ್ತರ ಹಿಂದೂಸ್ಥಾನದ ಕೆಲವು ಪ್ರದೇಶಗಳ ಚಾರಿತ್ರಿಕ ಮತ್ತು ಆರ್ಥಿಕ ವಿಷಯಗಳನ್ನು ಕುರಿತಾದ ಅಂಕೆ ಸಂಖ್ಯೆಗಳನ್ನೂ ವಿವಿಧ ಗ್ರಂಥಕಾಂಡಗಳಲ್ಲಿ ಬರೆದರು

ಮತ್ತೊರ್ವ ಪ್ರಸಿದ್ಧ ಸಂಶೋಧಕನಾಗಿದ್ದ Sir Richard Carnac

Temple ಇವನನ್ನು ಕುರಿತು ಹಿಂದೆಯೇ ಹೇಳಲಾಗಿದೆ. ಕ್ರಿ. ಶ. 1850 ರಲ್ಲಿ ಅಲಹಾಬಾದಿನಲ್ಲಿ ಜನಿಸಿದ ಇವನು ಹ್ಯಾರೋ ಮತ್ತು ಕೇಂಬ್ರಿಡ್ಜ್‌ಗಳಲ್ಲಿ ವಿದ್ಯಾಭ್ಯಾಸವನ್ನು ಪಡೆದು ಭಾರತೀಯ ಸೈನ್ಯದಲ್ಲಿ ಒಂದು ಅಧಿಕಾರ ಸ್ಥಾನವನ್ನು ಪಡೆದು ಕಡೆಗೆ ಬಹು ಪರಿಣತನಾದ ವಿದ್ವಾಂಸನೂ ಸಾಹಿತಿಯೂ ಸಂಶೋಧಕನೂ, ಕ್ರಿ. ಶ. 1893 ರಿಂದ Indian Antiquary ಪತ್ರಿಕೆಯ ಸಂಪಾದಕನೂ ಆಗಿ ಪ್ರಖ್ಯಾತನಾದನು. Col. R. C. Temple ಇವನ ಗ್ರಂಥಗಳೂ ಸಂಶೋಧನಾ ಲೇಖನಗಳೂ ಅದೆಷ್ಟೋ ಇವೆ. ಈ ದೇಶದಲ್ಲಿ ಮಾತ್ರವಲ್ಲ, ಲಂಡನ್ ಮತ್ತು ಆಕ್ಸ್‌ಫರ್ಡ್‌ಗಳಲ್ಲೂ ಗ್ರಂಥಭಂಡಾರ, ಪ್ರದರ್ಶನಾಲಯ ಇತ್ಯಾದಿಗಳನ್ನು ಸ್ಥಾಪಿಸಿ ಈ ದೇಶದ ಐತಿಹಾಸಿಕ ವಿವರಗಳನ್ನು ಅಲ್ಲೂ ತುಂಬಲು ಕಾರಣನಾದನು. ಭೂಗೋಳ, ಚರಿತ್ರೆ, ಧರ್ಮಶಾಸ್ತ್ರ, ಶಿಲ್ಪಿಶಾಸ್ತ್ರ ಇತ್ಯಾದಿಗಳಲ್ಲೆಲ್ಲಾ ಅಭಿರುಚಿಯನ್ನು ತೋರಿಸಿ ಸಹಸ್ರಾರು ಲೇಖನಗಳನ್ನೂ ಹಲವು ಗ್ರಂಥಗಳನ್ನೂ ಬರೆದ ಈ ಮೇಧಾವಿಯು 1931 ರಲ್ಲಿ ಕಾಲವಾದನು.

**೧೧. ಭಾಷಾ ಶಾಸ್ತ್ರಜ್ಞರು ಎಲ್ಲಾ ಭಾಷೆಗಳನ್ನೂ ತಿರುವಿಹಾಕಿದರು :—**

ಭಾಷಾ ಶಾಸ್ತ್ರಜ್ಞರ ಪೀಳಿಗೆಯೂ ಕಳೆದ ಶತಮಾನದಲ್ಲಿ ಈ ದೇಶದ ಎಲ್ಲಾ ಭಾಗಗಳಲ್ಲಿ ಹೆಚ್ಚಿತು. Halhed, Wilkins, Jones, Colebrooke, Carey, Wilson, Hodgson ಈ ಮೊದಲಾದವರಿಂದ ಸುಮಾರು 1790 ರಿಂದಿತ್ತ ಪ್ರಾರಂಭವಾದ ಈ ಐರೋಪ್ಯಾ ಭಾಷಾ ಶಾಸ್ತ್ರಜ್ಞರ ತಂಡವು ಭಾರತದ ಎಲ್ಲಾ ಭಾಷೆಗಳನ್ನೂ ಶಾಸ್ತ್ರೀಯವಾಗಿ ಪರಿಶೋಧಿಸಲು ತೊಡಗಿ ಜಯಪ್ರದವಾಯಿತು. ಪ್ರಮುಖ ಭಾಷೆಗಳಾದ ಸಂಸ್ಕೃತ, ಬಂಗಾಳೀ, ಮರಾಠೀ, ಹಿಂದೂಸ್ಥಾನೀ, ಕನ್ನಡ ತಮಿಳು ಹೀಗೆ ಇತರ ಸಾಹಿತ್ಯ ಪ್ರಧಾನ ಭಾಷೆಗಳನ್ನು ಮಾತ್ರವಲ್ಲ, ಕೇವಲ ಲಿಪಿರಹಿತವಾದ ಸಣ್ಣ ಪುಟ್ಟ ಭಾಷೆಗಳೂ ಇವರ ಅನ್ವೇಷಣೆಗೆ ಒಳಗಾದುವು. Dr. Carey ಇವನು 33 ಭಾಷೆಗಳಲ್ಲಿ ನೈಪುಣ್ಯತೆಯನ್ನು ಪಡೆದಿದ್ದರೆ H. Hodgson ಇವನು ಸುಮಾರು 60 ಭಾರತೀಯ ಭಾಷೆಗಳನ್ನು ತಿರುವಿ ಹಾಕಿದನು. Bishop Caldwell ಇವನಿಗೆ ದಕ್ಷಿಣ ಹಿಂದೂಸ್ಥಾನದ ಸುಮಾರು ೨೫ ಭಾಷೆಗಳೂ ಕರತಲಾಮಲಕವಾದುವು. Dr. John Beames ಇವನಿಗೆ ಉತ್ತರ ಹಿಂದೂಸ್ಥಾನದ ಸುಮಾರು 50 ಭಾಷೆಗಳೂ ಪರಿಚಿತವಿದ್ದುವು. Dr. Bhuler, Jos Burgeso ಮೊದಲಾದವರು ಪಶ್ಚಿಮ ಹಿಂದೂಸ್ಥಾನದ ಹಲವಾರು ಭಾಷೆಗಳ ಮೇಲೆ ತಮ್ಮ ಶಾಸ್ತ್ರೀಯ ಅನ್ವೇಷಣೆಯನ್ನು ಸಾಧಿಸಿದರು. ಇಂಥಾ ಧೀಮಂತ ಭಾಷಾ ಶಾಸ್ತ್ರಜ್ಞರ ಸಾಲಿನಲ್ಲಿ William Jones, Dr. Buchnan Richard Temple, ಈ ಮೊದಲಾದವರಲ್ಲದೆ ಕಟ್ಟಕಡೆಗೆ ಇವರೆಲ್ಲರ ಶ್ರಮವನ್ನೂ ಕ್ರೋಢೀಕರಿಸಿ ಅದ್ಭುತ ಗ್ರಂಥವನ್ನು ಸರಕಾರದ ನೆರವಿನಿಂದ ಸಂಪಾದಿಸಿ ಪ್ರಕಟಿಸಿದ ಸಾಹಸವು Dr. Grierson ಇವನದಾಗಿದೆ. ಈ ಎಲ್ಲಾ ಶ್ರೇಷ್ಠ ವಿದ್ವನ್ಮಣಿಗಳ ಹೆಸರೂಗಳೂ ಹಿಂದೆಯೇ ಅಲ್ಲಲ್ಲಿ ಸೂಚಿತವಾಗಿವೆ.

ಇವರೆಲ್ಲರೂ ಅಖಿಲ ಹಿಂದೂಸ್ಥಾನದ ವಿಶೇಷ ಭಾಷಾ ಶಾಸ್ತ್ರಜ್ಞರಾದರೆ ಪ್ರತಿಯೊಂದು ಪ್ರಾಂತಗಳಲ್ಲೂ ಜಿಲ್ಲೆಗಳಲ್ಲೂ ಇದ್ದ ಸಾಹಿತಿಗಳೂ ಸರಕಾರೀ ಉದ್ಯೋಗಸ್ಥರೂ ಕ್ರೈಸ್ತಮತ ಪ್ರಚಾರಕರೂ ಆಯಾ ಕ್ಷೇತ್ರಗಳಲ್ಲಿ ಪ್ರಚಾರವಿದ್ದ ಭಾಷೆಗಳ ಮೇಲೆ ವ್ಯಾಕರಣ, ಶಬ್ದಕೋಶ, ಶಬ್ದಮಂಜರಿ, ಇತ್ಯಾದಿಗಳನ್ನು ಬರೆದು ಸಲ್ಲಿಸಿದ ಸೇವೆಯು ಅವರ್ಣನೀಯವಾದುದಾಗಿದೆ. ಇವರೆಲ್ಲರೂ ಯೂರೋಪು ಖಂಡದಿಂದ ಬಂದು ಅದೇನೋ ಒಂದು ದೀಕ್ಷಾಬದ್ಧವಾಗಿ ಅಂಥಾ ಅಪೂರ್ವ ಕಾರ್ಯವನ್ನು ಅಂದು ನಡೆಸಿದರೆಂದು ಹೇಳಬೇಕಾಗಿದೆ.

ಆದರೆ ಈ ಎಲ್ಲಾ ಪ್ರಚಂಡ ವಿದ್ವಾಂಸರು ತಾವು ಕೈಗೊಂಡ ಕಾರ್ಯದಲ್ಲಿ ತಮ್ಮ ಇತಿ ಮಿತಿಯೆಷ್ಟೆಂಬುದನ್ನು ತಿಳಿಯದೆ ಇರಲಿಲ್ಲ. ಆ ಕಾಲದಲ್ಲಿ ಅವರು ನಡೆಸಿದ ಸಾಧನೆಯೂ ಸಾಮಾನ್ಯವಾದುದಾಗಿರಲಿಲ್ಲ. Hodgson, Caldwell, Beames ಮೊದಲಾದವರು ಭಾಷಾ ಶಾಸ್ತ್ರ ಗ್ರಂಥಗಳನ್ನು ಬರೆದಾಗ ಅವರಿಗೆ ಆಧಾರವು ಅವರ ಪರಿಶ್ರಮವೇ ಆಗಿತ್ತು. ಹಾಗಿದ್ದರೂ ಅವರು ಧೈರ್ಯದಿಂದ ಮತ್ತು ದೈನ್ಯದಿಂದ ತಮ್ಮ ವಿದ್ವತ್ತನ್ನು ಪ್ರದರ್ಶಿಸಿದರು. ಉತ್ತರ ಹಿಂದೂಸ್ಥಾನದ ಭಾಷೆಗಳ ಮೇಲೆ ಶಾಸ್ತ್ರಗ್ರಂಥವನ್ನು ಬರೆದ Dr. John Beames ಇವನು ತನ್ನ ಗ್ರಂಥಕ್ಕೆ 121 folio ಪುಟಗಳ ಮುನ್ನುಡಿಯನ್ನು ಬರೆದಿದ್ದಾನೆ. Dr. Caldwell 1856 ರಲ್ಲಿ ದ್ರಾವಿಡ ಭಾಷಾ ಶಾಸ್ತ್ರವನ್ನು ಬರೆದದ್ದು Dr. Beames ಇವನಿಗೆ ಸ್ಫೂರ್ತಿಯನ್ನೊದಗಿಸಿತೆಂದು ಅವನೇ ಹೇಳಿದ್ದಾನೆ. ಅವನ ಗ್ರಂಥವು 1865 ರಲ್ಲಿ ಪ್ರಕಟವಾಯಿತು. ಈ ಮಹಾಗ್ರಂಥದ ಮೇಲೆ J. Murray Mitchell ಇವನು ಐದು folio ಪುಟಗಳ ಉದ್ದಾಮ ವಿಮರ್ಶೆಯನ್ನು ಬರೆಯುತ್ತಾ ಒಂದೆಡೆ ಹೀಗೆ ಹೇಳಿದ್ದಾನೆ; ಅಲ್ಲದೆ ಅದನ್ನು ಹೇಳುವಾಗ ತನಗೆ ಭಾರತೀಯ ಭಾಷೆಗಳಲ್ಲಿದ್ದ ಅಗಾಧ ಜ್ಞಾನವನ್ನೂ ಪ್ರದರ್ಶಿಸಿದ್ದಾನೆ.

"Displaying his own knowledge of Indian languages, Mr. Murray Mitchell, while reviewing the book of Dr. John Beames says that Mr. Beames apologises for the "many imperfections" of which he is aware as marking his work and sorrowfully speaks of the exceedingly little leisure which a Bengal civilian can command from his official duties. We fear the little is becoming less ; and we gratefully accept the work before us as a proof of what indomitable perseverance can accomplish under difficulties."

### ೧೨. ಭಾರತೀಯ ಸಾಹಿತ್ಯ ಮತ್ತು ವಿದ್ಯಾಪ್ರಚಾರ ಸಂಸ್ಥೆಗಳು :—

ಸಾಹಿತ್ಯ ಸಂಸ್ಥೆಗಳು, ಸಾಹಿತ್ಯ ಪತ್ರಿಕೆಗಳು, ಸಾಹಿತ್ಯ ಕೂಟಗಳು, ಹೀಗೆ ಮೊದಲ್ಗೊಂಡು ಹಲವು ರೀತಿಯಲ್ಲಿ ಪಾಶ್ಚಾತ್ಯರು ಕ್ರಿ. ಶ. 18 ನೇ ಮತ್ತು 19ನೇ ಶತಮಾನಗಳಲ್ಲಿ ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಚಾರಕ್ಕೆ ಕಾರಣರಾಗಿ

ದ್ದಾರೆ. ಪ್ರಾರಂಭದಲ್ಲಿ ಪೋರ್ಚುಗೀಸರು ಮತ್ತು ಡಚ್ಚರು ಇವರಲ್ಲಿ ತುಂಬಾ ಆಸಕ್ತಿಯನ್ನು ವಹಿಸಿದ್ದರು, ಹಲವು ಭಾರತೀಯ ಗ್ರಂಥಗಳನ್ನು ಇವರು ಇತರರಿಗಿಂತ ಮೊದಲಾಗಿ ಇಲ್ಲಿಂದ ಸಾಗಿಸಿದರು. ಡಚ್ಚರು ಕ್ರಿ. ಶ. 1779 ರಲ್ಲಿ Batavian Society ಎಂಬುದಾಗಿ ಸ್ಥಾಪಿಸಿ ಬಹು ದೊಡ್ಡ ಗ್ರಂಥ ಭಂಡಾರವನ್ನು ತೆರೆದರು. ಅವರು ದಕ್ಷಿಣ ಏಷ್ಯಾದ ವಿವಿಧ ಭಾಗಗಳ ಸಾಂಸ್ಕೃತಿಕ ಕುರುಹುಗಳನ್ನು ಅಲ್ಲಿ ಸಂಗ್ರಹಿಸಿದರು; ಇದೇ ರೀತಿ ಪೋರ್ಚುಗೀಸರು ಲಿಸ್ಬನ್‌ನಲ್ಲಿ ಫ್ರೆಂಚರು ಪ್ಯಾರಿಸ್‌ನಲ್ಲಿ ಹೀಗೆ ಇನ್ನೆಷ್ಟೋ ಸ್ಥಳಗಳಲ್ಲಿ ಈ ದೇಶದ ಓಲೆಗಳನ್ನು ಬಚ್ಚಿಟ್ಟರು.

ಮಧ್ಯಪ್ರಾಚ್ಯ ಮತ್ತು ದಕ್ಷಿಣ ರಷ್ಯಾದ ಯಾತ್ರಿಕರೂ ಕ್ರಿ. ಶ. 18 ನೇ ಶತಮಾನಾಂತ್ಯದಲ್ಲಿ ಭಾರತಕ್ಕೆ ಬಂದು ಹಲವು ವಿಶೇಷ ಗ್ರಂಥಗಳನ್ನು ಇಲ್ಲಿಂದ ಸಂಗ್ರಹಿಸಿದ್ದಾರೆ. ಟಿರ‍್ವಿನ್, ಆರ್ಮೀನಿಯಾ, ತಾಸ್ಕೆಂಟ್, ಜಾರ್ಜಿಯಾ, ಸೇಂಟ್ ಪೀಟರ್ಸ್‌ಬರ್ಗ್ ಮೊದಲಾದೆಡೆಗಳಲ್ಲೂ ಅವರ ಚಟುವಟಿಕೆಯ ಪರಿಣಾಮವು ಕಂಡುಬರುತ್ತವೆ. ಜಾರ್ಜಿಯಾದ ಪ್ರವಾಸಿಕ Rapheyel Danibgov ಇವನು ಭಾರತದಲ್ಲಿ ಮಾತ್ರವಲ್ಲದೆ ಏಷ್ಯಾಖಂಡದ ಹಲವು ಭಾಗಗಳಲ್ಲಿ ಇನ್ನೊಬ್ಬ Marco Polo ಇವನಂತೆ ಸಂಚರಿಸಿ ಹಲವು ಐತಿಹ್ಯಗಳನ್ನು ಸಾಗಿಸಿದ್ದಾನೆ.

Royal Asiatic Society ಇದರ ಸ್ಥಾಪನೆಯನ್ನು ಕುರಿತಾಗಿ ಹಿಂದೆಯೇ ಹೇಳಲಾಗಿದೆ. ಅದರೊಡನೆಯೇ 1785 ರಲ್ಲಿ Asiatic Researches ಪತ್ರಿಕೆಯೂ ಹುಟ್ಟಿದ್ದು ಸಂಶೋಧಕರಿಗೆ ಇನ್ನಷ್ಟು ಪ್ರೋತ್ಸಾಹದಾಯಕವಾದ ವಾತಾವರಣವನ್ನು ಕಲ್ಪಿಸಿತು. ಈ ಸಂಸ್ಥೆಯ ಶಾಖೆಯು ಬೊಂಬಾಯಿಯಲ್ಲಿ 1839 ರಲ್ಲೂ ಸಿಲೋನ್‌ನಲ್ಲಿ 1845 ರಲ್ಲೂ ತೆರೆಯಲಾಯಿತು. ಚೀನೀ ಸಾಹಿತ್ಯದಲ್ಲಿ ಪ್ರತಿಭಾವಂತ ವಿದ್ವಾಂಸ Sir J. F. Davies ಇವನು 1847 ರಲ್ಲೂ ಹಾಂಗ್‌ಕಾಂಗ್‌ನಲ್ಲೂ ಅದರ ಶಾಖೆಯನ್ನು ತೆರೆದನು. ಈ ಸಂಸ್ಥೆಯ ಧ್ಯೇಯವೇನೆಂಬುದನ್ನು 1784 ರಲ್ಲಿ ಹೀಗೆ ಹೇಳಲಾಗಿತ್ತು, "Asiatic Society........for the purpose of conducting an enquiry into the history and antiquities, arts and sciences and literature of Asia."

ಈ ಸಂಸ್ಥೆಯು ಯೂರೋಪಿನ ಹಲವು ಪ್ರಮುಖ ಪಟ್ಟಣಗಳಲ್ಲೆಲ್ಲಾ ಪ್ರಭಾವವನ್ನು ಬೀರಿತ್ತು. ಲಂಡನ್, ಆಕ್ಸ್‌ಫರ್ಡ್, ಪ್ಯಾರಿಸ್, ಬರ್ಲಿನ್ ವಿಯೆನ್ನಾ, ಕೋಪನ್‌ಹೆಗನ್, ಲಿಸ್ಬನ್ ಇತ್ಯಾದಿ ಸ್ಥಳಗಳಲ್ಲಿ ಭಾರತೀಯ ಸಾಹಿತ್ಯದ ಪ್ರಚಾರಕ್ಕೆ ತಕ್ಕ ಏರ್ಪಾಡುಗಳನ್ನು ಕಲ್ಪಿಸಲಾಯಿತು. ಗೊಟಿಂಗ್ಜನ್, ಲೈಪ್‌ಜಿಗ್, ಪೀಟರ್ಸ್‌ಬರ್ಗ್ ಆಕ್ಸ್‌ಫರ್ಡ್ ಮೊದಲಾದ ಪಟ್ಟಣಗಳಲ್ಲಿ ಉತ್ತಮ ಗ್ರಂಥ ಭಂಡಾರಗಳು ತೆರೆಯಲ್ಪಟ್ಟವು. Sir Henry Colebrooke ಇವನು ಇಂಗ್ಲೆಂಡಿನಲ್ಲಿ ಬಹು ಉತ್ಸಾಹದಿಂದ ದುಡಿಯುತ್ತಿದ್ದನು. ಭಾಷಾಂತರ ಸಮಿತಿಯನ್ನೂ ಸ್ಥಾಪಿಸಿ ಏಷ್ಯಾಖಂಡದ ಸಾಹಿತ್ಯದ ಉತ್ತಮ ಗ್ರಂಥಗಳನ್ನು ಪ್ರಕಟಿಸಲು ಏರ್ಪಡಿಸಿದನು. ಆ ಸಂಸ್ಥೆಯ ಕಾರ್ಯಕಾರೀ ಮಂಡಳಿಯಲ್ಲಿ ಅಂದಿನ ಇಂಗ್ಲೆಂಡಿನ ಅರಸನೂ ಪೋಪ್

ದೊರೆಗಳೂ ಹಿರಿಯ ರಾಜಕಾರಿಣಿಗಳೂ ಇದ್ದರು. ಅವರೆಲ್ಲರೂ ಕೇವಲ ನಾಮಿಕಾವಸ್ಥೆಗೆ ಮಾತ್ರವೆಂಬಂತೆ ಇರಲಿಲ್ಲ; ಎಲ್ಲರೂ ಆ ಭಾರತೀಯ ವಿದ್ಯಾಪ್ರಚಾರ ಸಂಸ್ಥೆಗೆ ತಮ್ಮ ತನು ಮನ ಧನಗಳನ್ನು ಧಾರಾಳವಾಗಿ ಅರ್ಪಿಸಿದ್ದಾರೆ,' ಹಾಗೆ ಸ್ಥಾಪಿತವಾದ ಆ ಪ್ರಬಲವಾದ Royal Asiatic Society ಇಂದಿಗೂ ಹಲವಾರು ಶಾಖೆಗಳ ಸಹಿತವಾಗಿ ಇದೆ. ಇಂದೀಗ ಇಂಗ್ಲೆಂಡಿನಲ್ಲಿ ಅದರ ಪೋಷಕಳಾಗಿ ಬ್ರಿಟನ್ನಿನ ರಾಣಿಯೂ ಉಪಪೋಷಕರಾಗಿ ಹಿಂದೂಸ್ಥಾನ ಮತ್ತು ಪಾಕೀಸ್ಥಾನ ರಾಜ್ಯಗಳ ಅಧ್ಯಕ್ಷರೂ ಇರುವರು. ಈ ಪ್ರಬಲ ಸಾಹಿತ್ಯ ಸಂಸ್ಥೆಯು ಅದರ ಹಿಂದಿನ ಶೋಭೆ ಮತ್ತು ಪ್ರಭಾವವನ್ನು ಬಹು ಮಟ್ಟಿಗೆ ಕಳೆದುಕೊಂಡಿದೆಯೆಂದು ಹೇಳಬಹುದು.

೧೩. ಗ್ರಂಥಗಳ ಸಂಗ್ರಹ ಮತ್ತು ಗ್ರಂಥಭಂಡಾರಗಳ ಸ್ಥಾಪನೆ :—

"Careless and indifferent as our countrymen are, I think, nevertheless, that you and I may derive some complacent feelings from the reflection that, following the footsteps of Sir William Jones, we have with so little collaborators, and so little encouragement, opened nearly every avenue, and left it to foreigners, who are taking up the clue we have furnished, to complete the outline of what we have sketched."
ಎಂಬುದಾಗಿ Henry Colebrooke ಇವನು Horace Wilson ಇವನಿಗೆ 1827ರ ಡಿಸೆಂಬರ್ ತಿಂಗಳಲ್ಲಿ ಬರೆದನು Halhed, Wilkins, Jones ಮತ್ತು Carey ಇವರು ಹಾಕಿದ ತಳಹದಿಯಲ್ಲಿ Colebrooke, Wilson, Hodgson ಮೊದಲಾದವರು ದುಡಿದರು ಇವರನ್ನನುಸರಿಸಿ ಇನ್ನೂ ನೂರಾರು ವಿದ್ವಾಂಸರು ಅದೇ ಹಾದಿಯನ್ನು ತುಳಿದರು. ಹಾಗಿದ್ದರೂ ಅವರಿಗೆ ಆ ಕಾಲದಲ್ಲಿ ಅಂಥಾ ಕೆಲಸವನ್ನು ಸಾಧಿಸಲು ಎಷ್ಟು ಪ್ರಯಾಸವಿತ್ತೆಂಬುದನ್ನು ಊಹಿಸಿಕೊಳ್ಳಬಹುದಾಗಿದೆ; ಅಲ್ಲದೆ ಅವರ ಶ್ರದ್ಧೆ ನಿಷ್ಠೆಗಳೂ ಅಷ್ಟೇ ಬಲವತ್ತರವಾಗಿತ್ತೆಂದೂ ತಿಳಿಯುತ್ತದೆ.

ಯೂರೋಪಿನಲ್ಲೆಲ್ಲಾ ಗ್ರಂಥಭಂಡಾರಗಳಲ್ಲಿ ಭಾರತೀಯ ಗ್ರಂಥಗಳನ್ನು ತುಂಬಿದ ಇವರು ಈ ದೇಶದಲ್ಲಿ ಮೊದಲಬಾರಿಗೆ ಕಲ್ಕತ್ತಾದಲ್ಲಿ ಕ್ರಿ. ಶ. 1836 ರಲ್ಲಿ 6500 ಗ್ರಂಥಗಳಿಂದ ಕೂಡಿದ ಒಂದು ಗ್ರಂಥಭಂಡಾರವನ್ನು ತೆರೆದರು. The National Library ಎಂಬುದಾಗಿ ಸ್ಥಾಪಿತವಾದ ಇದು ಅನಂತರ The Imperial Library ಎಂದು ಕರೆಯಲ್ಪಟ್ಟು, ವರ್ಷದಿಂದ ವರ್ಷಕ್ಕೆ ಗ್ರಂಥಗಳ ಸಂಖ್ಯೆಯಲ್ಲಿ ಹೆಚ್ಚುತ್ತಾ ಬಂದು ಇಂದೀಗ ಅದರಲ್ಲಿ ಒಂದೂವರೆ ಮಿಲ್ಲಿಯದಷ್ಟು ಗ್ರಂಥಗಳು ಇರುವ ಬಹು ದೊಡ್ಡ ಗ್ರಂಥಭಂಡಾರವಾಗಿದೆ. ಇದರನಂತರ ಕಳೆದ ಶತಮಾನದಲ್ಲಿ ಇತರ ದೊಡ್ಡ ಪಟ್ಟಣಗಳಲ್ಲೂ ಗ್ರಂಥಭಂಡಾರಗಳು ಸ್ಥಾಪನೆಯಾದುವು.

ಆ ಕಾಲದಲ್ಲಿ ಬ್ರಿಟಿಷ್ ಸರಕಾರಕ್ಕೆ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ತಕ್ಕ ಸಲಹೆಗಳನ್ನೀಯಲು ಇನ್ನೂ ಹಲವು ವಿಖ್ಯಾತ ತಜ್ಞರು ಇದ್ದರು. Sir Charles

Wilkins ಇವನು ಇಂಗ್ಲೆಂಡಿನಲ್ಲಿ ಅಂಥಾ ಗ್ರಂಥ ಭಂಡಾರವನ್ನು India Library ಎಂದು ಸರಕಾರದ ಆದೇಶದಂತೆ ಸ್ಥಾಪಿಸಿದಾಗ ಅವನು ಭಾರತೀಯ ಸಾಹಿತ್ಯ ಬೆಳವಣಿಗೆ ಮತ್ತು ಪ್ರಚೋದನೆಯ ಬಗ್ಗೆ ಆಗಿಂದಾಗ್ಗೆ ಬರೆಯುತ್ತಲೇ ಇದ್ದನು. ಅಶೋಕನ ಶಾಸನಗಳನ್ನೆಲ್ಲಾ ಓದುವ ತಜ್ಞತೆಯನ್ನು ಪಡೆದ ಬ್ರಾಹ್ಮೀ, ಪಾಲೀ ಮತ್ತು ಸಂಸ್ಕೃತ ಭಾಷಾ ತಜ್ಞ James Prinsep ಇವನೂ ಈ ದಿಶೆಯಲ್ಲಿ ಅಪೂರ್ವ ಕಾರ್ಯಭಾರವನ್ನು ಸಾಧಿಸಿದನು. Prof. Wilson ಇವನ ಶಿಷ್ಯನೂ ಅನಂತರ ಅವನ ಸ್ಥಳದಲ್ಲಿ ಓಕ್ಸ್‌ಫರ್ಡ್‌ನಲ್ಲಿ Boden Professor of Sanskrit ಆದ Sir Monier Williams ಇವನೂ ಭಾರತ ವಾಸ್ತುಶಿಲ್ಪ ಕಲಾತಜ್ಞ Sir Cunningham ಇವನೂ. ಭಾಷಾಶಾಸ್ತ್ರಜ್ಞ Brian Hodgson ಇವನೂ ಐರೋಪ್ಯಾ ಸಾಹಿತಿಗಳಲ್ಲಿ ಭಾರತೀಯ ವಿಚಾರ ಜ್ಞಾನದ ಮಟ್ಟಿಗೆ ಹುರಿದುಂಬಿಸಲು ಸಹಾಯಕರಾದರು. ಇವರಂತೆ ಇನ್ನೂ ಹಲವು ಅಂದಿನ ಸರಕಾರೀ ಉದ್ಯೋಗಸ್ತರೂ ಆ ಕಾರ್ಯದಲ್ಲಿ ಮುಂದಾದರು ಬರ್ಮಾ ಮತ್ತು ಬಂಗಾಳದಲ್ಲಿ ಇದ್ದ Sir Aurel Stein ಮತ್ತು Prof Wilson ಇವನ ಸಮಕಾಲೀನ ಸಂಸ್ಕೃತ ವಿದ್ವಾಂಸನಾದ F. W. Thomas ಇವರೂ ಭಾರತೀಯ ಸಾಹಿತ್ಯದ ಅನ್ವೇಷಣೆಗೆ ಮತ್ತು ಪ್ರಚಾರಕ್ಕೆ ತುಂಬಾ ಸಹಾಯಕರಾದರು.

ಇವರೆಡೆಯಲ್ಲಿ ದಕ್ಷಿಣ ಹಿಂದೂಸ್ಥಾನದಿಂದಲೇ 300 ವಿವಿಧ ಮಹಾಭಾರತದ ಓಲೆಗಳನ್ನು ಸಂಗ್ರಹಿಸಿದ Dr. A. C. Burnell ಇವನಂತೆ ಹಲವರು ಸಹಸ್ರಾರು ಓಲೆ ಗ್ರಂಥಗಳನ್ನು ಸಂಗ್ರಹಿಸಿ ಸಂಪಾದಿಸಿ ಪ್ರಚಾರಪಡಿಸಿದರು. ಪರ್ಶಿಯನ್, ಚೀನೀ, ಗ್ರೀಕ್, ಲ್ಯಾಟಿನ್ ಇತ್ಯಾದಿ ಭಾಷೆಗಳಲ್ಲಿ ಪರಿಣತನಾದ Edward Rehatsek ಇವನು ಭಾರತೀಯ ಭಾಷೆ ಮತ್ತು ಚರಿತ್ರೆಯ ಬಗ್ಗೆ ಅಂಕ್ಯೊ ವಿಕ್ಕಿ ಲೇಖನಗಳನ್ನೂ ಹಲವು ಭೂಪಟಗಳನ್ನೂ ಬರೆದದ್ದೂ ಚಿತ್ರಿಸಿದ್ದೂ ಅಲ್ಲದೆ ಹಿಂದೂ ಮತ್ತು ಬೌದ್ಧ ಮತಗಳ ಮೇಲೆ ಶಾಸ್ತ್ರೀಯ ಅನ್ವೇಷಣೆಯನ್ನು ನಡೆಸಿದನು. ಇವರೂ ಇವರಂತೆ ಇನ್ನೂ ಹಲವರು Henry Yule ಮತ್ತು A. C. Burnell ಇವರು ಸೇರಿ ಬರೆದ Hobson - Jobson ಎಂಬೀ ಬಗೆಯ ಉದ್ಗ್ರಾಮ Glossary of Anglo-Indian Colloquial words and phrases and of kindred terms, ಗ್ರಂಥಗಳನ್ನು ಹಲವನ್ನು ಬರೆದು ಭಾರತೀಯ ಭಾಷೆ ಮತ್ತು ಸಾಹಿತ್ಯ ಪ್ರಚಾರಕ್ಕೆ ಉತ್ತಮ ಸನ್ನಿವೇಶವನ್ನು ಅಂದೆಯೇ ಕಲ್ಪಿಸಿದರು, ಅಷ್ಟೇ ಅಲ್ಲ, Prof. Max Mueller ಇವನಂಥಾ ಪ್ರತಿಭಾವಂತ ವಿದ್ವಾಂಸನ ಪ್ರಯತ್ನದ ಪರಿಣಾಮವಾಗಿ (" Unwearied exertions") ಜಪಾನ್ ದೇಶದಲ್ಲೂ ಭಾರತೀಯ ತತ್ವ ಮತ್ತು ಸಾಹಿತ್ಯದ ಪ್ರಚಾರವು ವಿಶೇಷವಾಗಿ ಆಯಿತೆಂದೂ ಸರ್ವ ವಿದಿತವಾದ ವಿಚಾರವಾಗಿದೆ.

**೧೪. ಆಂಗ್ಲಭಾಷೆ ಮತ್ತು ವಿದ್ಯಾಕ್ರಮವು ದೇಶದಾದ್ಯಂತವಾಗಿ ಹಬ್ಬಿತು :-**

"... ...Europe would never succeed in the Orient until it respected the people's religion and culture......Indians should know their own literature......"

ಎಂಬುದಾಗಿ ಅಂದಿನ ಐರೋಪ್ಯಾ 'ಋಷಿ' Sir William Jones ಇವನು ಭಾರತ ಸರಕಾರಕ್ಕೆ ಹೇಳುತ್ತಿದ್ದ ನಿತ್ಯದ ಮಂತ್ರವಾಗಿತ್ತು. Warren Hastings ಇವನು ಕಲ್ಕತ್ತೆಯಲ್ಲಿ ಅತ್ಯುಚ್ಚ ಮಟ್ಟದ ವಿದ್ಯಾಪೀಠವನ್ನು 1782 ರಲ್ಲಿ ಸ್ಥಾಪಿಸಿದಾಗ, Charles Cornwallis ಇವನು Jonathan Scott ಇವನ ಸಲಹೆಯಂತೆ 1791ರಲ್ಲಿ ಕಾಶಿಯಲ್ಲಿ ಸಂಸ್ಕೃತದ ವಿದ್ಯಾಶಾಲೆಯನ್ನು ತೆರೆದಾಗ ಮತ್ತು Lord Wellesley ಇವನು 1800 ರಲ್ಲಿ ಹಿಂದೂ, ಇಸ್ಲಾಂ, ನ್ಯಾಯ, ಆಡಳಿತೆ ಇತ್ಯಾದಿ ತತ್ವಶಾಸ್ತ್ರಗಳನ್ನು ಕಲಿಸಲು ಶಾಲೆಗಳನ್ನು ತೆರೆದಾಗ ಅವರೆಲ್ಲರ ಉದ್ದೇಶವೂ ಅದೇ ಆಗಿತ್ತು.

"........For the Cultivation and preservation of the Law, Literature and Religion of the nation, to accomplish the same purpose for the Hindus as the Madrasah for the Muhammadens and specially to supply qualified Hindu assistants to the European judges."

ಹೀಗೆ ಅವರು ಆಧುನಿಕ ವಿದ್ಯಾಕ್ರಮವನ್ನು ಈ ದೇಶದಲ್ಲಿ ಜಾರಿಗೆ ತರುತ್ತಿದ್ದಾಗ ಪಾಶ್ಚಾತ್ಯ ಸರಕಾರದ ನೌಕರರೂ, ವಿದ್ವಾಂಸರೂ, ಕ್ರೈಸ್ತಮತ ಬೋಧಕರೂ ಒಡಗೂಡಿ ಈ ದೇಶದ ಪ್ರಗತಿಗಾಗಿ ಒಡಗೂಡಿ ಶ್ರಮಿಸಿದರು. ಅವರ ಹಲವು ವಿಧಾಯಕ ಕಾರ್ಯಕ್ರಮಗಳೊಡನೆಯೇ ಜನರಿಗೆ ವಿಚಾರ ಜ್ಞಾನವನ್ನೀಯಲು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಆಂಗ್ಲ ಅಧ್ಯಾಪಕರನ್ನೂ ಕ್ರೈಸ್ತಮತ ಬೋಧಕರನ್ನೂ ಈ ದೇಶಕ್ಕೆ ಕಳುಹಿಸಬೇಕೆಂದು Rev. Wilberforce ಇವನು ಕ್ರಿ. ಶ. 1792 ರಲ್ಲಿ ಇಂಗ್ಲೆಂಡಿನ ಶಾಸನ ಸಭೆಯಲ್ಲಿ ಹೇಳಿದನು—

"Rev. Wilberforce......moved a resolution emphasising the adoption of such steps as would lead to the advancement in useful knowledge of the inhabitants of British India."

ಆದರೆ ಈ ಠರಾವಿಗೆ ವಿರೋಧವಾಗಿ ಈ ಬರವಣಿಗೆಯ ಹಿಂದಿನ ಪುಟಗಳಲ್ಲಿ ಹೇಳಿದಂತೆ ಹಲವು ಸಂಸ್ಕೃತ ವಿದ್ವಾಂಸರಾದ ಆಂಗ್ಲೇಯರು ಭಾರತೀಯ ವಿದ್ಯೆಯು ತುಂಬಾ ಸತ್ವಪ್ರಧಾಯಕವಾಗಿದೆಯೆಂಬುದನ್ನು ಒತ್ತಿ ಹೇಳಿದರು, ಆದರನಂತರ ಕೆಲವು ವರ್ಷಗಳಲ್ಲಿ ಕುಂಪೆನೀ ಸರಕಾರದ ಇನ್ನೊರ್ವ ಪ್ರತಿಭಾಶಾಲಿ ಸದಸ್ಯನಾಗಿದ್ದ Charles Grant ಇವನ ಅಪೇಕ್ಷೆಯಂತೆ ಮತ್ತು ಸರಕಾರದ ನಿರ್ಧಾರದಂತೆ ಈ ದೇಶದಲ್ಲಿ ಆಂಗ್ಲಭಾಷೆ ಮತ್ತು ಆಂಗ್ಲ ವಿದ್ಯಾಕ್ರಮವು ಕಾನೂನುಬದ್ಧವಾಗಿ ಜಾರಿಗೆ ಬಂತು :—

"Sir Charles Grant......lamented the low moral condition

of the people of India and exhorted the Company, to improve it by imparting to them a knowledge of the English language to serve as a key which will open to them a world of new ideas...... and also convey obvious truths on different subjects......"

ಅಂದು ಅವರು ಹೇಳಿದ ಈ ಮಾತುಗಳನ್ನು ನೆನಪಿಡುವುದು ಯೋಗ್ಯವಿದೆ. ಸಹಸ್ರಾರು ವರ್ಷಗಳಿಂದ ಐಗಳ ಮಠಗಳಲ್ಲಿ ಓದು ಬರೆಹಗಳನ್ನು ಕಲಿಯುತ್ತಿದ್ದ ಕೋಟ್ಯಾದಿ ಭಾರತೀಯರ ಪೈಕಿ ಕೆಲವರು ಮಾತ್ರ ಪಡೆದ ಜ್ಞಾನವೇನು? ನೀತಿಯೇನು? ಬುದ್ಧಿಯೇನು? ಒಟ್ಟಾಗಿ ಅವರು ಪಡೆದದ್ದು ಇಷ್ಟೆ–ಏನೆಂದರೆ "the low moral condition!" ಅದಕ್ಕೆ ಸಾಕ್ಷ್ಯವಾಗಿ ನಮ್ಮ ದೇಶದ ಮತ್ತು ಜನತೆಯ ಚರಿತ್ರೆಯೇ ನಮ್ಮ ಎದುರಿಗೆ ಸದಾ ಇದೆ. ಹೇಗೂ ಆಂಗ್ಲೇಯರು ಇದನ್ನೆಲ್ಲಾ ಕೂಲಂಕುಶವಾಗಿ ಮನಗಂಡು ಕ್ಷಿಪ್ರದಲ್ಲಿಯೇ ಆಂಗ್ಲ ಶಾಲೆಗಳನ್ನು ಸ್ಥಾಪಿಸಲು ಅಲ್ಲಲ್ಲಿ ಇದ್ದ ಐರೋಪ್ಯಾ ಕ್ರೈಸ್ತ ಮತಪ್ರಚಾರ ಸಂಸ್ಥೆಗಳಿಗೂ ನೆರವಾದರು. ಹೀಗೆ ಆರಂಭವಾದ ಪಾಶ್ಚಾತ್ಯರ ಕಳೆದ ಎರಡು ಶತಮಾನಗಳ ಕಾಲದ ರಾಜ್ಯಭಾರವು ಮತ್ತು ವಿದ್ಯಾಕ್ರಮವು ಆದೊಂದು ಪರ್ವಕಾಲವಾಗಿ ಈ ದೇಶದಲ್ಲಿ ತೋರ್ಪಡಿಸಿಕೊಂಡಿತು.

### ೧೫. ಆಂಗ್ಲ ವಿದ್ಯಾಭ್ಯಾಸವು ಜನಜಾಗೃತಿಗೆ ಅವಕಾಶವನ್ನೀಯಿತು :—

ಆಂಗ್ಲ ವಿದ್ಯಾಕ್ರಮವೂ ಭಾಷೆಯೂ ಕಳೆದ ಶತಮಾನದ ಆರಂಭದಲ್ಲಿ ನಮ್ಮ ದೇಶದಲ್ಲಿ ಪ್ರಚಾರವಾಗಲಾರಂಭವಾದಾಗ ಅದಕ್ಕೆ ವಿರೋಧವಾಗಿ ದೇಶೀಯರು ತಮ್ಮ ಧ್ವನಿಯೆತ್ತಿದರು, ಅವರಿಗೆ ಬೆಂಬಲವಾಗಿ ಈ ನೂತನ ವಿದ್ಯಾಕ್ರಮವನ್ನು ವಿರೋಧಿಸಿದವರಲ್ಲಿ ಬಹು ಜನರು ಪಾಶ್ಚಾತ್ಯರೇ ಆಗಿದ್ದರೆಂಬುದನ್ನು ಹಿಂದೆಯೇ ಹೇಳಲಾಗಿದೆ. ಉದಾಹರಣೆಗೆ ಕ್ರಿ.ಶ. 1821 ರಲ್ಲಿ Bombay Education Society ಇದರ ದೇಶೀಯ ಹಾಗೂ ಪಾಶ್ಚಾತ್ಯ ಸದಸ್ಯರು ಒಡಗೂಡಿ ಈ ರೀತಿ ಹೇಳಿದ್ದು ಅಂದಿನ ವಿದೇಶೀಯರ ವಿಶಾಲ ಮನೋಭಾವನೆಯನ್ನು ಪ್ರದರ್ಶಿಸುತ್ತದೆ :—

"......In imparting to the natives useful knowledge.......the language of the country must be the chief and proper vehicle."

ಆದರೆ ಈ ಎಲ್ಲಾ ವಾದಗಳನ್ನು ಅಂದಿನ ಕೆಲವು ಭಾರತೀಯ ಮುಂದಾಳುಗಳೇ ಪ್ರತಿಭಟಿಸಿದರು. ಹಿಂದಿನ ಪುಟಗಳಲ್ಲಿ ಹೇಳಿದಂತೆ ಈ ದೇಶದ ಜನರ ಸರ್ವಾಂಗೀಣ ಅಭಿವೃದ್ಧಿಗೆ ಆಂಗ್ಲ ಭಾಷೆ ಮತ್ತು ಆಂಗ್ಲ ವಿದ್ಯೆಯನ್ನು ಕಲಿಸಲೇಬೇಕೆಂದು ಹೋರಾಡಿ ತಾನಾಗಿಯೇ ಸುಮಾರು 1824 ರಲ್ಲಿ ಒಂದು ಆಂಗ್ಲ ಪಾಠಶಾಲೆಯನ್ನು ಸ್ಥಾಪಿಸಿದ ರಾಜಾರಾಮಮೋಹನ ರಾಯನ ಅಭಿಪ್ರಾಯದಂತೆ ನಮ್ಮ ದೇಶೀಯ ಭಾಷೆಗಳ ಮೂಲಕ ಕೊಡುವ ಶಿಕ್ಷಣ ಕ್ರಮದಿಂದ "they did not want them to acquire the vain and empty subteleties of speculative men," ಎಂಬುದಾಗಿ ಸಾರಿ ಸಾರಿ ಹೇಳಿದನು.

ಇಷ್ಟರಲ್ಲಿ ಕ್ರೈಸ್ತಮತ ಪ್ರಚಾರ ಸಂಸ್ಥೆಗಳು ದೇಶದ ಹಲವು ಭಾಗಗಳಲ್ಲಿ ಆಂಗ್ಲ

ಭಾಷಾ ಪಾಠಶಾಲೆಗಳನ್ನು ತೆರೆದಿದ್ದರು. 1823 ರಲ್ಲಿ ಇತಿಹಾಸಕಾರ ಮತ್ತು ರಾಜಕಾರಿಣಿ Montstuart Elphinstone ಇವನು ತಯಾರಿಸಿದ ವಿದ್ಯಾಯೋಜನೆಯ ಪ್ರಕಾರ ಈ ದೇಶದ ಮಕ್ಕಳಿಗೆ ಆಂಗ್ಲ ಭಾಷಾ ಶಿಕ್ಷಣವನ್ನು ಕೊಡುವ ಕಾರ್ಯಕ್ರಮವು ನಿಶ್ಚಯವಾಯಿತು 1830 ರ ಕಾಲದಲ್ಲಿ ಭಾರತ ಸರಕಾರದ ಖಾನೂನು ಕಾಯಿದೆ ಮಂತ್ರಿಯಾಗಿದ್ದ Lord Macaulay ಇವನು ಭಾರತೀಯ ಭಾಷೆ ಮತ್ತು ಸಾಹಿತ್ಯದ ವಿಷಯವಾಗಿ ಹೇಳಿದ ಕಹಿ ಮಾತುಗಳಲ್ಲದೆ ಈ ದೇಶದಲ್ಲಿ ಇಂಗ್ಲಿಷ್ ವಿದ್ಯೆಯ ಅವಶ್ಯಕತೆಯನ್ನು ಕುರಿತು ಹೀಗೆ ಹೇಳಿದ್ದನು : ....

"The Government was free to employ its funds in teaching what was better worth-knowing than Sanskrit or Arabic, what the Indians desired to learn themselves rather than these old languages and that it was possible to make natives of the country thoroughly good English scholars."

Lord Macaulay ಇವನ ವರದಿಯು 1835ರ ಮಾರ್ಚ್ ತಿಂಗಳಲ್ಲಿ Governor-General Lord W. Bentinck ಇವನ ಒಪ್ಪಿಗೆಯನ್ನು ಪಡೆಯಿತು. ಆದರಂತೆ ಆರಂಭಗೊಂಡ ಆಂಗ್ಲ ವಿದ್ಯಾಕ್ರಮವು ಈ ದೇಶದಲ್ಲಿ ಅವ್ಯಾಹತವಾಗಿ ಮುಂದುವರಿಯಿತು.

"The great object of the British Government ought to be the promotion of European literature amongst the natives and that all funds would be best employed on English education alone."

ಹೀಗೆ ಕಳೆದ ಶತಮಾನದ ಪೂರ್ವಾರ್ಧದಲ್ಲಿ ಇಡೀ ದೇಶವು ಆಂಗ್ಲ ವಿದ್ಯಾಭ್ಯಾಸ ಮತ್ತು ಆಂಗ್ಲ ಭಾಷಾ ಪ್ರಚಾರದಿಂದ ಸಂಚಿತವಾಯಿತು. ಆದರೂ ದೇಶೀಯ ಭಾಷೆಗಳಲ್ಲಿಯೇ ನಮ್ಮ ಶಿಕ್ಷಣ ಕ್ರಮವು ನಡೆಯಬೇಕೆಂಬುದಾಗಿ ಒಮ್ಮಿಂದೊಮ್ಮೆ ಕೆಲವರು ಹೇಳುತ್ತಿದ್ದರು.

### ೧೬. ಆಂಗ್ಲ ಭಾಷೆಯ ಉಚ್ಚಾಟನೆ ದೇಶಕ್ಕೆ ಕ್ಷಾಮವಲ್ಲದೆ ಕ್ಷೇಮವಲ್ಲ:—

ಈ ದೇಶದ ಶಾಲೆಗಳಲ್ಲಿ ಎಲ್ಲಾ ಪಾಠಗಳನ್ನು ಇಂಗ್ಲಿಷ್‌ನಲ್ಲಿ ಬೋಧಿಸುವುದಕ್ಕೆ ಕಡೆಗೊಮ್ಮೆಯಾದರೂ ಎಂಬಂತೆ ಕ್ರಿ.ಶ. 1867 ರಲ್ಲಿ ವಾಯುವ್ಯ ಪ್ರಾಂತದ British Indian Association ಇದರ ಸದಸ್ಯರು ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು :—

"They pleaded for Education through the vernacular so that the double consumption of time required in the acquisition of knowledge through a foreign tongue is avoided..."

ಆದರೆ ಇದು ಆ ಕಾಲಕ್ಕೆ ಬರೇ ಅರಣ್ಯರೋಧನವಾಯಿತು. ಇಷ್ಟರಲ್ಲಿ ಆದಕ್ಕಿಂತ ಮೂವತ್ತು ವರ್ಷಗಳಿಗೆ ಹಿಂದೆ Macaulay ಇವನು ಹೇಳಿದ ಮಾತುಗಳು ವೇದ

ವಾಕ್ಯವಾಗಿ ಪರಿಣಮಿಸಿ ಇಡೀ ದೇಶವು ಆಂಗ್ಲವಿದ್ಯೆಯಿಂದಲೇ ಮೋಕ್ಷವೆಂಬುದಾಗಿ ಭಾವಿಸಿತ್ತು :—

"...The time when the public mind in India having expanded under our System will out-grow it, the time when by good government we may educate our subjects into a capacity for a better Government, the time when having been instructed in European knowledge they may demand European institutions..."

ಹೇಗೂ ಆ ಕಾಲವು ಕಳೆಯಿತು. ಆ ಒಂದೂವರೆ ಶತಮಾನದವಧಿಯಲ್ಲಿ ಇಂಗ್ಲಿಷ್ ಭಾಷೆ ಮತ್ತು ವಿದ್ಯಾಪ್ರಭಾವವು ಈ ದೇಶದಲ್ಲಿ ಏರಿತು. ಇಂಗ್ಲಿಷ್ ವಿದ್ಯೆಯನ್ನು ಅಲ್ಪಸ್ವಲ್ಪ ಗಳಿಸಿದವರು ಒಂದು ಬಗೆಯ ಸರ್ವಜ್ಞರೆಂಬಂತೆ ಮೆರೆದರು. ಆದರೆ ಇಂಗ್ಲಿಷ್ ವಿದ್ಯೆಯನ್ನು ಪಡೆದ ಕೆಲವು ಮೇಧಾವಿಗಳು ವಿಶ್ವಪ್ರಸಿದ್ಧ ವ್ಯಕ್ತಿಗಳಾದರು ಆಂಗ್ಲ ಭಾಷೆಯ ಮೂಲಕವಾಗಿಯೇ ಹಲವು ಭಾರತೀಯರು ಜಗತ್ತಿನ ನಾನಾ ಭಾಗಗಳಲ್ಲಿ ಹಬ್ಬಿದರು; ಭಾರತೀಯ ಸಾಹಿತ್ಯವೂ ಆಂಗ್ಲ ಭಾಷೆಯ ಮೂಲಕವಾಗಿಯೇ ಇತರ ದೇಶಗಳಲ್ಲಿ ಪ್ರಚಾರವಾಯಿತು.

ಇಷ್ಟೇ ಅಲ್ಲ, ಹಲವು ಜನ ನಿಷ್ಠಾವಂತ ಭಾರತೀಯ ಮುಂದಾಳುಗಳೂ ಮೇಧಾವಿಗಳೂ ಈ ದೇಶವು ತನ್ನ ಕಗ್ಗತ್ತಲಿನಿಂದ ಬೆಳಕಿಗೆ ಬಂದಿದೆಯೆಂಬುದನ್ನು ರಾಜಾರಾಮ ಮೋಹನರಾಯನಂತೆ ಮನಗಂಡರು. ಎಲ್ಲವೂ ಮಹ್ಮದೀಯರ ಕರಾಳ ಪ್ರಭಾವಕ್ಕೆ ಸಿಲುಕಿ ದೇಶವು ಕ್ಷೋಭೆಯಲ್ಲಿ ಮುಳುಗಿದಾಗ ಈ ಪಾಶ್ಚಾತ್ಯರು ಬಂದು ಆ ದಾರುಣ ಪರಿಸ್ಥಿತಿಯಿಂದ ಪಾರಾಗಿಸಿದರು. ನವೀನ ವಿದ್ಯೆ, ನವೀನ ಮಾರ್ಪಾಟುಗಳು ಇತ್ಯಾದಿಗಳಿಗೆ ಕಾರಣರಾದರೆಂಬುದನ್ನು ಮುಕ್ತ ಕಂಠದಿಂದ ಹೊಗಳಿದರು. ಈ ಶತಮಾನದ ಆರಂಭದಲ್ಲಿ ಇದ್ದ ಫಿರೋಜ್‌ಷಾ ಮೆಹೆತಾನೆಂಬ ಪ್ರಚಂಡ ರಾಜಕಾರಣಿ ವಾಗ್ಮಿ ಮತ್ತು ದೇಶಾಭಿಮಾನಿಯು 1914 ರಲ್ಲಿ ಈ ರೀತಿ ಹೇಳಿದ್ದು ಅಂದಿನ ಎಚ್ಚೆತ್ತ ಭಾರತದ ದಿವ್ಯ ಉದ್ಗಾರವಾಗಿದೆ :—

"My steadfast loyalty is founded upon the rock of hope and patience. I accept the British rule, as Ranade did, as dispensation so wonderful...It would be a folly not to accept it as a declaration of God's will."

ಹೇಗೂ ಅಲ್ಲಿಂದನಂತರ ಏನೇನೋ ನಡೆಯಿತು; ಇಂದೀಗ ಆಂಗ್ಲೇಯರು ಇಲ್ಲ; ಅಂದು ಅವರೇ ಹುರಿದುಂಬಿಸಿ ದೇಶಾಭಿಮಾನವೆಂದರೇನೆಂದು ತಿಳಿಯದೇ ಇದ್ದ ಈ ದೇಶದ ಜನರಲ್ಲಿ ಆ ಅಭಿಮಾನವನ್ನು ಮೊಳಗಿಸಿ ಅನಂತರ ನಡೆದ ತಾಕಲಾಟದ ಪರಿಣಾಮವಾಗಿ ಅವರು ಹೊರಟು ಹೋದರು. ಇಂದೀಗ ಇಪ್ಪತ್ತು ವರ್ಷಗಳ ನಂತರ ಆಂಗ್ಲ ಭಾಷೆಯನ್ನು ಉಚ್ಚಾಟನೆಗೊಳಿಸಲು ಸನ್ನಾಹಗಳಾಗುತ್ತಿವೆ. ಹಿಂದೆ ಈ ಭಾಷೆಯನ್ನು ಇಲ್ಲಿ ನೆಲೆಗೊಳಿಸಿದ್ದ ಆ ಕಾಲದಲ್ಲಿ "it will lead to the triumph of reason over barbarism" ಎಂಬುದಾಗಿ ಆಶಿಸಿದ್ದರು. ಈಗ ಪುನಃ ಅಂದಿನ ಅನಾಗರೀಕತೆಗೆ ದೇಶವು ಮರಳಿ ಹೋಗಲಾರದೆಂದು ಆಶಿಸೋಣಾ

ಗಿದೆ, ಅದೇನೋ ಸುದೈವ ವಶಾತ್ ಮತ್ತು ಚಾರಿತ್ರಿಕ ಘಟನೆಗನುಗುಣವಾಗಿ ಇಂಗ್ಲಿಷ್ ಭಾಷೆ, ಇಂಗ್ಲಿಷ್ ವಿದ್ಯೆ, ಇಂಗ್ಲಿಷ್ ರಾಜ್ಯಭಾರ, ಇಂಗ್ಲಿಷ್ ರಾಜ್ಯಘಟನೆ ಇತ್ಯಾದಿಗಳ ಸುಯೋಗವು ಈ ದೇಶಕ್ಕೆ ದೊರಕಿದ್ದನ್ನು ನಾವು ನಮ್ಮ ಪ್ರಾಂತೀಯ ಭಾಷೆ, ಪ್ರಾಂತೀಯ ವಿದ್ಯೆ, ಪ್ರಾಂತೀಯ ಕಲೆಯೆಂಬಿವುಗಳ ಸಂಕುಚಿತ ಭಾವನೆಯಿಂದ ತಳ್ಳಿಹಾಕುವುದು ಈ ವಿವಿಧ ಜನ, ಭಾಷೆ ಮತ್ತು ಸಂಸ್ಕೃತಿಯಿಂದ ಕೂಡಿದ ದೇಶದ ಭವಿಷ್ಯದ, ಭದ್ರತೆಯ, ಐಕ್ಯತೆಯ ಮತ್ತು ಪ್ರಗತಿಯ ದೃಷ್ಟಿಯಿಂದ ಕ್ಷಾಮವಾದೀತಲ್ಲದೆ ಕ್ಷೇಮವಾಗದು ಎಂಬುದನ್ನು ಬಹುಬೇಗನೆ ನಾವು ಕಾಣಲಿದ್ದೇವೆ ಎಂದಷ್ಟೇ ಇಲ್ಲಿ ಈಗ ಉದ್ಧರಿಸಬಹುದಾಗಿದೆ.

### ೧೭. ಅಂದಿನ ಹಲವು ಆದರ್ಶ ಆಂಗ್ಲ ರಾಜಕಾರಿಣಿಗಳು :—

" We are introducing in India on idea unknown to the East, as it was unknown in Europe before commerce and Italian cities taught it—the idea of papular rights and equality before an impartial and written law. If in that mission we violate justice, and let our ambition get before our duty, we shall spoil our own work; which will else bring the circumference of civilization back to its starting point...in religion, art, philosophy, language—in almost everything but the science of government," ಈ ರೀತಿಯಾಗಿ ಹೇಳಿದ ಮಹಾನುಭಾವನು ಅಂದಿನ ಒರ್ವ ರಾಜಕಾರಿಣಿ, ತತ್ವಜ್ಞ, ವಿದ್ಯಾತಜ್ಞ ಮತ್ತು The Light of Asia, The Song Celestial, Pearls of Faith ಇತ್ಯಾದಿ ಗ್ರಂಥಗಳನ್ನು ಬರೆದು ಪ್ರಸಿದ್ಧನಾದ Sir Edwin Arnold ಇವನು ಕಳೆದ ಶತಮಾನದಲ್ಲಿ ಭಾರತದಲ್ಲಿ ಇದ್ದ ವಿವಿಧ ಗುಣಮನದ ವೈಸ್ರಾಯಿಗಳಲ್ಲದೆ ಉಳಿದ ಸ್ಥಳೀಯ ಅಧಿಕಾರಿಗಳಲ್ಲಿ ಶೇಕಡ ಸುಮಾರು ಮೂವತ್ತು ಯಾ ನಲ್ವತ್ತು ಜನರು ಬಹು ಉತ್ತಮ ಆಡಳಿತಗಾರರಾಗಿ ಈ ದೇಶದಲ್ಲಿ ಶೋಭಿಸಿದರು. ವಿದ್ಯೆ, ವ್ಯವಸಾಯ, ಕಾಮಗಾರಿ, ಆರೋಗ್ಯ ಮತ್ತು ಅರ್ಥಿಕ ನೀತಿಗಳಲ್ಲಿ ಅವರು ತಮ್ಮ ಪರಿಪುಷ್ಟವಾದ ಆಡಳಿತ ದಕ್ಷತೆಯನ್ನು ಪ್ರದರ್ಶಿಸಿದರು. ಈ ದೇಶದ ಜನರ ಐಕ್ಯತೆಯನ್ನು ಅವರು ಸಾಧಿಸಿದರಲ್ಲದೆ ದೇಶದ ಭದ್ರತೆಯನ್ನು ಹಿಂದಾವ ಕಾಲದಲ್ಲೂ ಕೈಕೊಳ್ಳದೇ ಇದ್ದ ಅಥವಾ ಊಹಿಸದೇ ಇದ್ದ ರೀತಿಯಲ್ಲಿ ಅವರು ಸಾಧಿಸಿದರು.

ಏಷ್ಯಾಖಂಡದ ಬಹುಭಾಗವನ್ನು ನುಂಗುತ್ತಾ ಬರುತಿದ್ದ ರಷ್ಯಾವನ್ನು ತಡೆದಿಡಲು ಪರ್ಷ್ಯ ಮತ್ತು ಅಫಘಾನಿಸ್ಥಾನ ರಾಜ್ಯಗಳನ್ನು ಸ್ವತಂತ್ರ ಸರಹದ್ದು ರಾಜ್ಯಗಳಾಗಿ ಮಾಡಿ ನಿಲ್ಲಿಸಿದರು. ಚೀನಾದೇಶದ ಪ್ರಭಾವವನ್ನು ತಡೆಗಟ್ಟಲಿಕೋಸ್ಕರ ತಿಬೇಟನ್ನು ಸ್ವತಂತ್ರ ಸರಹದ್ದು ದೇಶವಾಗಿ ಮಾಡಿ ಅದನ್ನು ಅವರ ಆಚೆ ನಿಲ್ಲಿಸಿತು. ಇದಿಷ್ಟೇ ಬೇಲಿ ಸಾಲದೆಂದು ಮತ್ತು ಹಿಮಾಲಯದ ಉನ್ನತ ಗೋಡೆಯೇ ಸಾಲದೆಂದು ನೇಪಾಳ, ಭೂತಾನ್, ಮತ್ತು ಸಿಕ್ಕಿಂ ರಾಜ್ಯಗಳನ್ನು ಸ್ವತಂತ್ರ ರಾಜ್ಯಗಳಾಗಿ ಮಾಡಿ ಅವರಿಗೆ ಗಡೀ ಕಾಯುವ ಕೆಲಸವನ್ನು ಕೊಟ್ಟರು; ಅದೇ ಸರಹದ್ದಿನ ಕಾಶ್ಮೀರ

ವನ್ನು ಹಿಂದೂ ಅರಸರಿಂದ ಆಳಲ್ಪಡುವ ದೇಶೀಯ ರಾಜ್ಯವಾಗಿ ಮಾಡಿದರು; ಹೀಗೆ ಅವರು ಸಾಧಿಸಿದ ಚಾಣಾಕ್ಷತೆಯು ಬೆರಗಾಗಿಸುವಂಥಾದಾಗಿದೆ. ಅದಕ್ಕೆ ಬದಲಾಗಿ ಇಂದಿನ ಪರಿಸ್ಥಿತಿಯು ಎಂತಿದೆಯೆಂಬುದನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಬ್ರಿಟಿಷ್ ಸಾರ್ವಭೌಮತ್ವವು ಅಂದು ನಮ್ಮ ದೇಶದಲ್ಲಿ ಹುಟ್ಟಿಕೊಂಡಿತ್ತಾದರೂ ಹಲವಾರು ಬ್ರಿಟಿಷ್ ಆಡಳಿತಗಾರರನ್ನು ವೈಯ್ಯಕ್ತಿಕವಾಗಿ ಗಣಿಸಿದರೆ ಅವರಲ್ಲಿ ಬಹು ಜನ ಈ ದೇಶದಲ್ಲಿ ನಿಸ್ವಾರ್ಥತೆಯಿಂದಲೇ ದುಡಿದರು ಎಂಬುದನ್ನೂ ಸ್ಮರಿಸಬೇಕಾಗಿದೆ. ಅವರು ಒಂದಲ್ಲ ಒಂದು ವಿಚಾರದಲ್ಲಿ ಈ ದೇಶದ ಪುರೋಭಿವೃದ್ಧಿಗೆ ಸಹಾಯಕರಾದರೆಂಬುದು ಐತಿಹಾಸಿಕವಾಗಿ ತಿಳಿದ ವಿಚಾರವಾಗಿದೆ. ಇಂಥಾವರು ಪ್ರತಿಯೊಂದು ಪ್ರಾಂತ ಮತ್ತು ಜಿಲ್ಲೆಗಳಲ್ಲೂ ಇದ್ದು ಹಲವು ಪ್ರಗತಿದಾಯಕವಾದ ಕೆಲಸಗಳನ್ನು ಮಾಡಿದ್ದಾರೆ. ಆಧುನಿಕ ರೀತಿಯ ಕಟ್ಟೋಣಗಳು, ರಸ್ತೆಗಳು, ಸೇತುವೆಗಳು ರೈಲುಮಾರ್ಗಗಳು, ಶಾಲೆಗಳು, ಚಿಕಿತ್ಸಾಲಯಗಳು. ನೀರಾವರೀ ಯೋಜನೆಗಳು ಇತ್ಯಾದಿಗಳಿಗೆ ಅವರು ಮೂಲಭೂತರಾದರಲ್ಲದೆ ಇವೆಲ್ಲ ನಮ್ಮ ದೇಶದ ಜನಕ್ಕೆ ಒಂದು ಬಗೆಯ ವಿದ್ಯೆಯಾಗಿಯೇ ತೋರಿದುವು.

ಇಂಥಾ ದಕ್ಷ ಆಡಳಿತಗಾರರು ಅಂದು ಸಹಸ್ರಸಂಖ್ಯೆಯಲ್ಲಿ ದೇಶದ ಉದ್ದಗಲಕ್ಕೂ ಇದ್ದರು. ಉದಾಹರಣೆಗೆ ಹೇಳುವುದಿದ್ದರೆ, ಹಳೇ ಮೈಸೂರು ರಾಜ್ಯದ Sir Mark Cubbon, ಬೊಂಬಾಯಿಯಲ್ಲಿದ್ದ Sir John Malcolm, ಆಂಧ್ರ ಜಿಲ್ಲೆಗಳಲ್ಲಿದ್ದ Sir Arthur Cotton, ಒರಿಸ್ಸಾ ಮತ್ತಿತರ ಕಡೆಗಳಲ್ಲಿದ್ದ ವಿದ್ಯಾತಜ್ಞ ಹಾಗೂ ರಾಜಕಾರಿಣಿ Hon. M. Elphinstone, ಹೈದರಾಬಾದಿನ Col. Meadows Taylor, ಬರೋಡ, ಡಿಲ್ಲಿ ಮೊದಲಾದೆಡೆಗಳಲ್ಲಿದ್ದ Sir James Outram, ಕಲ್ಕತ್ತಾದಲ್ಲಿದ್ದ Sir J. Thomason, ಹೀಗೆ ಹಲವರು "The Princes of Indian Civilians" ಎಂಬುದಾಗಿ ವಿರಾಜಿಸಿದರು. ಇಂಥಾ ಆಡಳಿತಗಾರರ ಜೀವನ ಪರಿಚಯವು ನಮ್ಮ ಇಂದಿನ ದೇಶೀಯ ಆಡಳಿತಗಾರರಿಗೆ ಕೈಗನ್ನಡಿಯಾಗಬೇಕಾಗಿದೆ. ಪಂಜಾಬಿನಲ್ಲಿದ್ದ Sir Henry Lawrence ಇವನು ಮತ್ತೊರ್ವ ಧೀಮಂತ ಜನಪ್ರೀಯ ರಾಜಕಾರಿಣಿಯಾಗಿದ್ದನು. ಇವನನ್ನು ಕುರಿತು H, Edwards ಇವನು ಬರೆದ ಗ್ರಂಥವನ್ನು "ಅರ್ಪಣೆ" ಮಾಡುವಾಗ ಅದನ್ನು —

"To the young whose lot is to be cast in it; to show how possible and good it is to unite the statesman with a soldier, the philonthropist with a patriot and the Christian with all, in the Government......"

ಎಂದು ಹೇಳುತ್ತಾ, ಅಂದಿನ ಒರ್ವ ಆದರ್ಶ ರಾಜಕಾರಿಣಿಯ ಗುಣಗಾನವನ್ನು ಮಾಡಿದ್ದಾನೆ. 1817 ರಿಂದ 1827 ನೇ ಜುಲೈ ವರೆಗೆ ಮದ್ರಾಸಿನಲ್ಲಿದ್ದ Sir Thomas Monroe ಇವನ ನಿಷ್ಕಳಂಕ ಸೇವಾಭಾವವು ಪ್ರತಿಯೊಬ್ಬರನ್ನೂ ಮುಗ್ಧಗೊಳಿಸಿದೆ. ಮದ್ರಾಸಿನ ಬ್ರಾಹ್ಮಣರು ಅವನನ್ನು ಮಾಂಡವ ಋಷಿಯೆಂದು ಕರೆದಿದ್ದರು. ಅವನ

ಗುಣಗಾನವನ್ನು ಮಾಡುತ್ತಾ, M. Elphinstone ಇವನು ತನ್ನ ಸಹೋದ್ಯೋಗಿಯೂ "had strong practical good sense, simplicity, and frankness, perfect good nature and good humour and real benevolence........" ಎಂದು ಮುಕ್ತಕಂಠದಿಂದ ಪ್ರಶಂಸಿಸಿದನು. ಅವನ ಸ್ಮಾರಕಾರ್ಥವಾಗಿ ಮದ್ರಾಸಿನ ಜನರು ಭವ್ಯಪ್ರತಿಮೆಯೊಂದನ್ನು ನಿಲ್ಲಿಸಿ ಆ "ಋಷಿ"ಯನ್ನು ಸನ್ಮಾನಿಸಿದರು. ಪ್ರಾಮಾಣಿಕತೆ, ಕಾರ್ಯತತ್ಪರತೆ, ದಕ್ಷತೆ ಮತ್ತು ಸಭ್ಯತೆಗಳು ಇಂದಿಗೂ ಈ ಬಗೆಯಲ್ಲಿ ನಮ್ಮ ದೇಶದಲ್ಲಿ ಬೇಕಾಗಿವೆ. ಅಂದಿನ ಆ ಮಹನೀಯರು ಮಾಡಿ ಉಳಿಸಿ ಹೋದ ಉತ್ತಮ ಕೆಲಸಗಳು ಅವರ ಪ್ರತಿಮೆಗಳನ್ನು ಉರುಳಿಸಿದ ಮಾತ್ರಕ್ಕೆ ಅವರ ಭಾಷೆಯನ್ನು ಒಗೆದೋಡಿಸಿದ ಮಾತ್ರಕ್ಕೆ ಮರೆತುಹೋಗಲಾರವು. ದೇಶದ ಇಂದಿನ ಅನಿತ್ಯವು ಅಂಥಾ ಮೇಧಾವಿಗಳ ಆದರ್ಶ ಜೀವನದಿಂದ ಉಳಿದಿದೆಯೆಂಬುದು ಐತಿಹಾಸಿಕವಾಗಿ ಎಂದೆಂದಿಗೂ ಸ್ಮರಿಸತಕ್ಕಂಥಾ ವಿಚಾರವಾಗಿದೆ.

### ೧೮. ಹಿಂದೂಸ್ಥಾನದಲ್ಲಿ ಮುದ್ರಣ ಕಲೆಯ ಆರಂಭ :—

ಚೀನಾ ದೇಶದಲ್ಲಿ ಕ್ರಿ. ಶ. 868 ರಷ್ಟು ಹಿಂದೆಯೇ ಆ ದೇಶದ ಭಾಷೆಯ ಅಕ್ಷರಗಳ ಮೊಳೆಗಳನ್ನು ಕಂಡುಹಿಡಿಯಲಾಗಿತ್ತಲ್ಲದೆ ಒಂದು ಚಿಕ್ಕ ಪುಸ್ತಕವೂ ಮೊದಲ ಬಾರಿಗೆ ಮುದ್ರಣವಾಯಿತು. ಆ ದಿಶೆಯಲ್ಲಿ ಅವರು ಇನ್ನಷ್ಟು ಪರಿಷ್ಕರಣೆಯನ್ನು ನಡಸುತಿದ್ದಂತೆಯೇ ಯೂರೋಪು ಖಂಡದಲ್ಲಿ ಮುದ್ರಣಯಂತ್ರವೊಂದನ್ನು ಕ್ರಿ.ಶ. 14ನೇ ಶತಮಾನದಲ್ಲಿ ಸಿದ್ಧವಾಗಿಸಿದರು. ಕೂಡಲೇ ಅವರು ಪುಸ್ತಕಗಳ ಮುದ್ರಣಕ್ಕೆ ತೊಡಗಿದರು. ಹೀಗಾಗಿ ಜ್ಞಾನವಿಕಾಸ ಯೋಜನೆಯಲ್ಲಿ ಇದೊಂದು ಕ್ರಾಂತಿಕಾರಕವಾದ ಬದಲಾವಣೆಯಾಯಿತು. ಅದರನಂತರ ಯೂರೋಪುಖಂಡದ ಎಲ್ಲಾ ಭಾಷೆಗಳಲ್ಲೂ ಗ್ರಂಥಗಳು ಮುದ್ರಣವಾಗಲಾರಂಭವಾದುವು.

ಹಿಂದೂಸ್ಥಾನದಲ್ಲಿ ಬ್ರಿಟಿಷರಿಗೆ ತಮ್ಮ ಸರಕಾರೀ ಪತ್ರಗಳ ಪ್ರಕಟಣೆಗೂ ವಾರ್ತಾಪತ್ರಿಕೆಗಳನ್ನು ಹೊರಡಿಸುವುದಕ್ಕೂ ಮುದ್ರಣಯಂತ್ರಗಳು ಅವಶ್ಯವಾಗಿ ಬೇಕಾಗಿದ್ದುವು. ಕೆಲವು ಪ್ರಧಾನ ಪತ್ರಗಳು ಮತ್ತು ಗ್ರಂಥಗಳನ್ನು ಅವರು ಇಂಗ್ಲೆಂಡಿಗೆ ಕಳುಹಿಸಿ ಅಲ್ಲಿಂದ ಮುದ್ರಿಸಿ ತರುತ್ತಿದ್ದರು. ಹೇಗೂ ಇಂಗ್ಲಿಷ್ ಭಾಷಾ ಅಕ್ಷರಗಳ ಮುದ್ರಣಕ್ಕೆ ಅವಕಾಶವಾದಾಗ ಕೆಲವು ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಭಾಷೆಗಳನ್ನೂ ಇಂಗ್ಲಿಷ್ ಅಕ್ಷರಗಳಲ್ಲಿಯೇ ಮುದ್ರಿಸುತ್ತಿದ್ದರು. ಕಳೆದ ಶತಮಾನದ ವರೆಗೂ ಅವರು ಈ ರೀತಿಯಾಗಿ ಇಂಗ್ಲಿಷ್ ಅಕ್ಷರಗಳಲ್ಲಿ ಈ ದೇಶದ ಭಾಷಾ ಗ್ರಂಥಗಳನ್ನು ಮುದ್ರಿಸಿದ್ದರು. Rev, John. Garrett ಇವನು ಸುಮಾರು ಕ್ರಿ. ಶ. 1842 ರಲ್ಲಿ ತನ್ನ ಭಗವದ್ಗೀತೆಯ ಭಾಷಾಂತರವನ್ನು ಮುದ್ರಣಕ್ಕೆ ಕೊಟ್ಟಾಗ ಹೀಗೆ ಹೇಳಿದನು :—

"To make the work more extensively available, the Sanskrit should have been printed also in the Devanagari character, but the difficulty and expense of obtaining type rendered this

impracticable.*

ಹೇಗೂ ಮುದ್ರಣ ಯಂತ್ರವನ್ನು ಯೂರೋಪಿನಲ್ಲಿ ಕಂಡು ಹಿಡಿದ ಆ ಕಾಲದಲ್ಲಿ ಅದೆಂಥಾ ಕ್ರಾಂತಿಕಾರಕವಾದ ಬದಲಾವಣೆಯು ಆ ದೇಶಗಳ ಸಾಹಿತ್ಯ ಮತ್ತು ವಿದ್ಯಾಕ್ಷೇತ್ರಗಳಲ್ಲಿ ನಡೆಯಿತೋ ಅದೇ ರೀತಿ ಭಾರತದಲ್ಲೂ ಅಂದಿನ ವರೆಗೆ ನಿಶ್ಚೇತನವಾಗಿದ್ದ ಸಾಹಿತ್ಯ, ಕಲೆ, ಇತ್ಯಾದಿಗಳ ಪುನರ್ಜನ್ಮವೇ ಉಂಟಾದಂತೆ ಆಯಿತು. ತಾಮ್ರದ ತಗಡು, ಓಲೆಗರಿಗಳಲ್ಲಿ ಮಾತ್ರ ಆ ವರೆಗೆ ಬರೆಯಲ್ಪಡುತ್ತಿದ್ದ ಕಾಲದಲ್ಲಿ ಹೊಸದಾಗಿ ಈ ರೀತಿ ಮುದ್ರಣ ಕೌಶಲ್ಯವು ಕಾಣಿಸಿಕೊಂಡಾಗ ಇಡೀ ದೇಶದಲ್ಲಿ ಅಭೂತಪೂರ್ವವಾದ ಉತ್ಸಾಹ ಮತ್ತು ಹುಮ್ಮಸು ಒಮ್ಮೆಲೇ ತೋರಿಬಂತು. ಅಲ್ಲದೆ ಅದರೊಡನೆಯೇ ಸಾಹಿತ್ಯಲೋಕದಲ್ಲಿ ವಿಶೇಷ ಬದಲಾವಣೆಗೆ ಅವಕಾಶವಾಯಿತು.

ಕ್ರಿ. ಶ. 16 ನೇ ಶತಮಾನಾಂತ್ಯದಲ್ಲಿ ಬ್ರಿಟಿಷರು ಇಂಗ್ಲಿಷ್ ಮುದ್ರಣ ಯಂತ್ರಗಳನ್ನು ತಂದು ಕಲ್ಕತ್ತಾದಲ್ಲಿ ಇಟ್ಟರು. ಅನಂತರ ಐವತ್ತು ವರ್ಷಗಳಲ್ಲಿ ಬೊಂಬಾಯಿ ಮತ್ತು ಮದ್ರಾಸುಗಳಲ್ಲೂ ಅವು ಇಡಲ್ಪಟ್ಟುವು. ಪ್ರಾರಂಭದಲ್ಲಿ ಸರಕಾರ ಪತ್ರಗಳು ಮತ್ತು ವರದಿಗಳ ಮುದ್ರಣದಿಂದ ಆರಂಭಗೊಂಡು ಕ್ರಮಶಃ ವಾರ್ತಾಪತ್ರಿಕೆಗಳ ಮುದ್ರಣದೊಂದಿಗೆ ಹಲವು ಇಂಗ್ಲಿಷ್ ಗ್ರಂಥಗಳೂ ಹದಿನೆಂಟನೇ ಶತಮಾನದಲ್ಲಿ ಈ ದೇಶದಲ್ಲಿಯೇ ಮುದ್ರಣವಾಗಲಾರಂಭವಾದುವು. ಭಾರತದಲ್ಲಿ ಮೊದಲ ಬಾರಿಗೆ ಹೊರಟ ಪತ್ರಿಕೆಯೆಂದರೆ ಕ್ರಿ.ಶ. 1780 ರ ಜನವರಿ 29ನೇ ತಾರೀಕಿನ Hickie's Gazette, ಇದಾಗಿದೆ. ಅದರೊಡನೆಯೇ Fort William Gazette, St. Fort David Gazette, ಮತ್ತು St. Fort George Gazette ಇವುಗಳು ಕಲ್ಕತ್ತಾ, ಬೊಂಬಾಯಿ ಮತ್ತು ಮದ್ರಾಸುಗಳಿಂದ ಪ್ರಚಾರವಾಗಲಾರಂಭವಾದುವು. ಅಷ್ಟೇ ಅಲ್ಲ, ಸಾರ್ವಜನಿಕ ವಾರ್ತಾಪತ್ರಿಕೆಗಳ ಪೈಕಿ Calcutta Courier, Madras Courier ಎಂಬಿತ್ಯಾದಿಗಳೂ ಕಳೆದ ಶತಮಾನಾರಂಭಕ್ಕಿಂತ ಎಷ್ಟೋ ಹಿಂದೆ ಸ್ಥಾಪಿತವಾಗಿ ಪ್ರಚಾರವಾದುವು. ಈ ಎಲ್ಲಾ ಇಂಗ್ಲಿಷ್ ಪತ್ರಿಕೆಗಳ ಮುದ್ರಣವೂ ಅಚ್ಚುಕಟ್ಟಾಗಿ ಮತ್ತು ಸುಂದರವಾಗಿ ಇರುತ್ತಿದ್ದುವು, ಕಾಗದವು ಮಾತ್ರ ಆ ಕಾಲಕ್ಕೆ ತಕ್ಕಂತೆ ದೊರಗಾಗಿದ್ದಿತಾದರೂ ಕಳೆದ ಶತಮಾನದ ಮಧ್ಯಭಾಗದಲ್ಲಿ ತೆಳುವಾದ ಮತ್ತು ನಯವಾದ ಕಾಗದವು ಎಲ್ಲೆಲ್ಲೂ ಉಪಯೋಗಿಸಲ್ಪಟ್ಟಿತ್ತು.

## ೧೯. ಭಾರತೀಯ ಭಾಷಾಗ್ರಂಥಗಳ ಮುದ್ರಣಕ್ಕೆ ಆರಂಭ :—

ಹಿಂದೂಸ್ಥಾನದ ಭಾಷೆಗಳ ಅಕ್ಷರಗಳನ್ನು ಮೊದಲ ಬಾರಿಗೆ ಅಚ್ಚಿನ ಮೊಳೆಗಳಲ್ಲಿ ಉರುಳಿಸಿದವನು ಕ್ರಿ.ಶ. 1556 ರಲ್ಲಿ ಗೋವಾದಲ್ಲಿ ಇದ್ದ Joa de Bustamante ಎಂಬ ಸ್ಪೇಯಿನ್ ದೇಶದವನೊಬ್ಬನು. ಅನಂತರ ಕ್ರಿ.ಶ. 1578ರಲ್ಲಿ ಇನ್ನೊರ್ವ ಸ್ಪೇಯಿನ್ ದೇಶದವನಾದ Joa Gonsalves ಇವನು ಕೊಚ್ಚಿನ್‌ನಲ್ಲಿ ನೆಲೆಸಿ ತಮಿಳು ಅಕ್ಷರದ ಅಚ್ಚುಮೊಳೆಗಳನ್ನು ಕಂಡುಹಿಡಿದನು. ಇದೇ ವೇಳೆಗೆ ಗೋವಾ ಮತ್ತು ಕಲ್ಕತ್ತೆಯಲ್ಲಿದ್ದ ಕೆಲವು ಐರೋಪ್ಯಾ ಮತ ಪ್ರಚಾರಕರೂ ಹಿಂದೂ

ಸ್ಥಾನೀ, ಬಂಗಾಳೀ ಇತ್ಯಾದಿ ಭಾಷಾ ಅಕ್ಷರ ಮೊಳೆಗಳನ್ನು ಸಿದ್ಧಪಡಿಸಲು ಪ್ರಯತ್ನಿಸುತ್ತಿದ್ದರು. ಹೇಗೂ ಸುಮಾರು 1585 ರಲ್ಲಿ Joa Gonsalves ಇವನ ತಮಿಳು ಅಕ್ಷರ ಮೊಳೆಗಳು ಜಯಪ್ರದವಾಗಿ ಮಾರ್ಪಟ್ಟುದಲ್ಲದೆ ತಮಿಳು ಭಾಷೆಯಲ್ಲಿ ಬರೆದ ನಾಲ್ಕಾರು ಪುಟಗಳ ಒಂದು ಹೊತ್ತಗೆಯೇ ಈ ದೇಶದಲ್ಲಿ ಅಚ್ಚಾದ ಮೊದಲನೇ ದೇಶೀಯ ಭಾಷಾ ಗ್ರಂಥವಾಯಿತು.

Joa Gonsalves ಇವನು ದೇವನಾಗರೀ ಲಿಪಿಯನ್ನೂ ಅಚ್ಚಿನ ಮೊಳೆಗಳಲ್ಲಿ ತರಲು ಪ್ರಯತ್ನಿಸಿದನಾದರೂ ಅದನ್ನು ತಕ್ಕ ರೂಪಿಗೆ ಇಳಿಸಲು ಹಲವು ವರ್ಷಗಳೇ ಕಳೆದುವು. ಕ್ರಿ. ಶ. 18 ನೇ ಶತಮಾನದಲ್ಲಿ ಬಂಗಾಳದಲ್ಲಿದ್ದ Nathaniel B. Halhed ಮತ್ತು Charles Wilkins ಇವರಿರ್ವರೂ ಭಾರತೀಯ ಭಾಷಾ ಪಂಡಿತರು ಬಂಗಾಳೀ ಮತ್ತು ದೇವನಾಗರೀ ಲಿಪಿಗಳ ಮುದ್ರಣಕ್ಕೆ ಕಾರಣಪುರುಷರಾದರು. ಇವರ ಶ್ರಮಕ್ಕೆ ಮತ್ತೊರ್ವ ಸಾಹಸಿ John Gilchrist ಇವನೂ ನೆರವಾದನು. ಹೀಗಾಗಿ ಸುಮಾರು ಕ್ರಿ. ಶ. 1765 ರಿಂದ ಬಂಗಾಳೀ, ತಮಿಳು, ಒರಿಯಾ, ಹೀಗೆ ಕೆಲವು ಭಾಷಾ ಅಕ್ಷರಗಳ ಮುದ್ರಣಕ್ಕೆ ಆರಂಭವಾಯಿತು. ಹೇಗೂ J. Bustamante, Joa Gonsalves, N. B. Halhed, C. Wilkins ಮತ್ತು John Gilchrist ಇವರು ಹಿಂದೂಸ್ಥಾನದ "Caxton" ಎಂಬುದಾಗಿ ಪ್ರಸಿದ್ಧರಾದರು.

ಕ್ರಿ. ಶ. 1775 ರಲ್ಲಿ ಬಂಗಾಳೀ ಭಾಷೆಯಲ್ಲಿ ಒಂದು ಚಿಕ್ಕ ಪುಸ್ತಕವು Nathaniel Halhed ಇವನಿಂದ ಮೊದಲಬಾರಿಗೆ ಮುದ್ರಿಸಲ್ಪಟ್ಟಿತು. ಅದರೊಡನೆಯೇ ದೇಶದ ಇತರ ಭಾಷೆಗಳ ಲಿಪಿಗಳ ಅಚ್ಚುಮೊಳೆಗಳನ್ನು ತಯಾರಿಸುವ ಶ್ರಮವು ಭರದಿಂದ ಮುಂದುವರಿಸಲ್ಪಟ್ಟಿತು. ಬಂಗಾಳದ ಶ್ರೀರಾಮ್‌ಪುರ ಕ್ರೈಸ್ತ ಶಿಬಿರದ ಮುದ್ರಣಾಲಯದಲ್ಲಿ ಭಾರತೀಯ ಭಾಷೆಗಳಲ್ಲಿ ಬೈಬಲ್ ಭಾಷಾಂತರಗಳನ್ನು ಮುದ್ರಿಸಲು ಸುಮಾರು ಕ್ರಿ. ಶ. 1790 ರಿಂದ ಆರಂಭಿಸಿದರು. ಇಷ್ಟರಲ್ಲಿ ಬಂಗಾಳೀ, ಒರಿಯಾ, ಮರಾಠಿ, ದೇವನಾಗರೀ, ತಮಿಳು, ಕನ್ನಡ, ಪಂಜಾಬೀ ಹೀಗೆ ಕೆಲವು ಭಾಷೆಗಳ ಲಿಪಿಗಳು ಅಚ್ಚಿನ ಮೊಳೆಗಳಲ್ಲಿ ಕಾಣಿಸಿಕೊಂಡುವು ಆದರೆ ಅವಾವುದೂ ಆ ಕಾಲದಲ್ಲಿ ಅಷ್ಟೇನೂ ತೃಪ್ತಿಕರವಾಗಿ ತೋರಲಿಲ್ಲ.

ಆದರೆ ಕ್ರಿ. ಶ. 1800 ರ ಒಳಗಾಗಿ ಈ ಹಲವು ಭಾಷೆಗಳಲ್ಲಿ ಕೆಲವು ಸರಕಾರೀ ಪ್ರಕಟಣೆಗಳೂ ಬೈಬಲ್ ಹೊತ್ತಗೆಗಳೂ ದೊರಗಾದ ಕಾಗದದ ಮೇಲೆ ಮುದ್ರಣವಾಗಿ ಹೊರಬಂದುವು. ಕ್ರಿ. ಶ. 1805 ರ ಒಳಗಾಗಿ ಈ ದೇಶದ ಎಲ್ಲಾ ಪ್ರಧಾನ ಭಾಷೆಗಳನ್ನು ಮುದ್ರಿಸುವ ಸೌಕರ್ಯವೊದಗಿತಲ್ಲದೆ ಮುದ್ರಣ ಯಂತ್ರಗಳ ಸಂಖ್ಯೆಯೂ ಏರಲಾರಂಭವಾಯಿತು. ಹಲವು ಪ್ರಾಂತೀಯ ಕೇಂದ್ರ ಪಟ್ಟಣಗಳಲ್ಲಿ ಮುದ್ರಣ ಯಂತ್ರಗಳು ಸ್ಥಾಪಿತವಾದುವು. ಅವುಗಳೆಲ್ಲಾ ಸರಕಾರದ ಮತ್ತು ಕ್ರೈಸ್ತಮತ ಪ್ರಚಾರ ಸಂಸ್ಥೆಗಳಿಗೆ ಸೇರಿದ್ದುವು. ಉತ್ಸಾಹೀ ಕ್ರೈಸ್ತವಿದ್ವಾಂಸರು ತಾವು ಬರೆಯುತ್ತಿದ್ದ ದೇಶೀಯ ಭಾಷಾ ಬೈಬಲ್‌ಗಳು, ವ್ಯಾಕರಣ ಗ್ರಂಥಗಳು, ಕತೆ ಪುಸ್ತಕಗಳು ಇತ್ಯಾದಿಗಳನ್ನು ಮುದ್ರಿಸಿ ಪ್ರಕಟಿಸಿ ಹಂಚಲಾರಂಭಿಸಿದರು. ಹಾಗಿದ್ದರೂ ಇಂಗ್ಲಿಷ್

ಭಾಷೆಯಲ್ಲಿ ಬರೆದ ಅತೀ ಉತ್ತಮ ಭಾರತೀಯ ಚರಿತ್ರೆ ಮತ್ತು ಶಾಸ್ತ್ರೀಯ ಗ್ರಂಥಗಳನ್ನು ಸುಮಾರು 1840 ರ ವರೆಗೂ ಇಂಗ್ಲೆಂಡಿಗೆ ಕಳುಹಿಸಿ ಅಲ್ಲಿ ಮುದ್ರಿಸಿ ಇಲ್ಲಿಗೆ ತರುತ್ತಿದ್ದರು.

**೨೦. ಜನತೆಯ ಜ್ಞಾನ ಮತ್ತು ವಿಚಾರಜಾಗೃತಿಯೇ ನಾಗರೀಕತೆ :—**

ಭಾರತೀಯ ಪ್ರಾಚೀನ ಸಾಹಿತ್ಯ ಮತ್ತು ಶಾಸ್ತ್ರೀಯ ಗ್ರಂಥಗಳು ಈ ರೀತಿ ಮುದ್ರಣವಾಗಿ ಹೊರಬರುತ್ತಾ ಇದ್ದಂತೆಯೇ ಇನ್ನೊಂದೆಡೆ ನೂರಾರು ಪ್ರಚಂಡ ಪಾಶ್ಚಾತ್ಯ ವಿದ್ವಾಂಸರು ಈ ದೇಶದ ವಿಷಯವಾಗಿ ವಿವಿಧ ತರಹದ ಬರೆವಣಿಗೆಗಳನ್ನು ಹೊರ ತರುತ್ತಲೇ ಇದ್ದರು. ಅವುಗಳಲ್ಲಿ ಆತ್ಮಕಥೆಗಳು, ಪ್ರವಾಸವರದಿಗಳು, ಆಡಳಿತ ವಿಚಾರಗಳು, ಅನ್ವೇಷಣಾ ವಿವರಗಳು ಮೊದಲಾಗಿ ಸಹಸ್ರಗಟ್ಟಲೆ ಗ್ರಂಥಗಳು ಪ್ರಕಟವಾಗುತ್ತಲೇ ಇದ್ದುವು. ಅವೆಲ್ಲಾ ಇಂಗ್ಲಿಷ್‌ನಲ್ಲಿಯೇ ಬರೆಯಲ್ಪಟ್ಟು ಐರೋಪ್ಯಾ ಗ್ರಂಥಭಂಡಾರಗಳು ಇವುಗಳಿಂದ ತುಂಬಿದುವು. ಈ ಬಗೆಯ ಹಲವು ಶ್ರೇಷ್ಠಗ್ರಂಥಗಳು ಸಹಸ್ರಾರು demy ಮತ್ತು folio ಪುಟಗಳಲ್ಲಿ ಮತ್ತು ಸಚಿತ್ರವಾಗಿ ಮುದ್ರಣವಾಗಿ ಪ್ರಕಟವಾದುವು.

ಈ ವರೆಗೂ ಹೇಳದೇ ಇದ್ದ ಅಂದಿನ ಇನ್ನೂ ಕೆಲವು ಪ್ರಖ್ಯಾತ ಗ್ರಂಥಗಳಲ್ಲಿ Dr. John Muir ಇವನ "Metrical Translation of Sanskrit Writers" ಮತ್ತು "Original Sanskrit Texts" ಇವು ಎರಡುಕಾಂಡಗಳಲ್ಲಿ ಪ್ರಕಟವಾದುವು. A F R. Hoernle ಇವನು 1880 ರಲ್ಲಿ ಪ್ರಕಾಶಪಡಿಸಿದ "A Comparative Grammar of the Gaudian Languages, Dr. Fallon ಇವನ Dictionary of Hindustani Proverbs, Sir William Hunter ಇವನ Rural Bengal, Dr. Kern ಇವನ 'ಜಾತಕ ಮಾಲಾ' ಇತ್ಯಾದಿ ಬಗೆಯ ಪುಸ್ತಕಗಳು ಭಾರತದ ಮುದ್ರಣ ಯಂತ್ರಗಳೊಳಗೆ ಉರುಳಿ ಹೊರಟುವು. Friedrich Burkhard ಇವನ Essays on Kashmir Grammar ಇದು Dr. G. A. Grierson ಇವನಿಂದ ಜರ್ಮನ್ ಭಾಷೆಯಿಂದ ಇಂಗ್ಲಿಷ್‌ಗೆ ತಿಳಿಸಲಾಯಿತು. "The Jungle Forts of Orissa" ಮತ್ತಿತರ ನೂರಾರು ಸಂಶೋಧನಾ ಲೇಖನಗಳನ್ನು ಬರೆದ John Beames, R. C. Temple, Prof. Jacobi ಮೊದಲಾದವರ ಹಲವು ಕೃತಿಗಳೂ ಇಲ್ಲಿಯೇ ಮುದ್ರಣವಾದುವು.

ಹೇಗೂ ಕ್ರಿ. ಶ. ಹದಿನೆಂಟನೇ ಶತಮಾನದಿಂದ ಆರಂಭಗೊಂಡ ಮತ್ತು ವಿಖ್ಯಾತ ಪೌರಸ್ತ್ಯ ಸಾಹಿತ್ಯ ಪಂಡಿತರಾದ Fredrich August Rosan, Major William Yule (1764–1839) Jonathan Scott, William Jones ಹೀಗೆ ಹಲವರಿಂದ ಮುಂದುವರಿಸಲ್ಪಟ್ಟ ಅಂದಿನ ಭಾರತೀಯ ಸಾಹಿತ್ಯದ ಪುನರೋದ್ಧಾರದ ಅಪಾರ ಯೋಜನೆಯು ಕಳೆದ ಶತಮಾನವಿಡೀ ಅವ್ಯಾಹತವಾಗಿ ಮುಂದುವರಿಯಿತು. ಅಲ್ಲದೆ ಇವರ ಮೂಲಕ ಭಾರತೀಯ ಸಾಹಿತ್ಯವು

ಪಾಶ್ಚಾತ್ಯ ದೇಶಗಳಲ್ಲೆಲ್ಲಾ ಅವರ ವಿವಿಧ ಭಾಷೆಗಳ ಮೂಲಕವಾಗಿ ಪ್ರಚಾರವಾಯಿತು. ಈ ದೇಶದ ಸುಮಾರು 4000 ವರ್ಷಗಳ ದೀರ್ಘ ಚರಿತ್ರೆಯ ಕಾಲದಲ್ಲಿ ಇಂಥಾ ಒಂದು ಅದ್ಭುತ ಮಾರ್ಪಾಟು ಹಿಂದೆಂದೂ ಆದುದ್ದಿಲ್ಲ. ಈ ದೇಶದ ಪರಿಚಯವೂ ಹೊರದೇಶಗಳಿಗೆ ಇಷ್ಟು ವಿಶದವಾಗಿಯೂ ಆದುದ್ದಿಲ್ಲ!

ಈ ವಿದೇಶೀಯ ಸಾಹಿತಿಗಳ ಜ್ಞಾನಲಾಲನೆ, ಕ್ರೈಸ್ತ ಧರ್ಮಗುರುಗಳ ವಿದ್ವತ್ಸೇವೆ, ಬ್ರಿಟಿಷ್ ಸರಕಾರದ ಉತ್ಸಾಹ ಪೂರ್ಣವಾದ ಸಹಕಾರ, ಮುದ್ರಣ ಯಂತ್ರಗಳ ಅನ್ವೇಷಣೆ ಇತ್ಯಾದಿಗಳೊಡಗೂಡಿ ಅದೊಂದು ವಿಶಿಷ್ಟ ತರಹದ ಮತ್ತು ಕ್ರಾಂತಿಕಾರಕವಾದ ಸನ್ನಿವೇಶವನ್ನು ನಮ್ಮ ಸಂಸ್ಕೃತಿಯ ಪುನರುದ್ಧಾರ ನಿಮಿತ್ತವಾಗಿ ಕಲ್ಪಿಸಿತು. ಇಂದಿನ ನವನೂತನ ವಾತಾವರಣಕ್ಕೆ ಅಂದಿನ ಉದ್ಧಾಮ ಹಾಗೂ ನಿಸ್ವಾರ್ಥ ವಿದೇಶೀಯ ತಪಸ್ವಿಗಳು ಆ ರೀತಿಯಲ್ಲಿ ಒಂದು ಭವ್ಯವಾದ ತಳಹದಿಯನ್ನು ಹಾಕಿದರು.

ನಮ್ಮ ದೇಶಕ್ಕೆ ಅದೆಷ್ಟೋ ಸಾವಿರ ವರ್ಷಗಳ ಚರಿತ್ರೆಯಿದೆ. ನಮ್ಮ ಪೌರಾಣಿಕ ಮತ್ತು ಸನಾತನ ವಿದ್ಯೆಯೂ ಅಷ್ಟೇ ಹಿರಿದಾಗಿದೆ. ಪ್ರಖ್ಯಾತ ವೇದಾಭ್ಯಾಸಿ E. B. Hawell ಇವನು ಹೇಳಿದಂತೆ, "While Europe lived on hides and skins, India had the finest culture;" ನಳಂದಾ, ತಕ್ಷಶಿಲಾ, ಇತ್ಯಾದಿ ವಿಶ್ವವಿದ್ಯಾನಿಲಯಗಳ ಕಾಲಕ್ಕಿಂತ ಎಷ್ಟೋ ಹಿಂದೆ ಭರತಖಂಡವು ಸಂಸ್ಕೃತಿ, ಸಾಹಿತ್ಯ ಮತ್ತು ಸಂಪತ್ತಿನಲ್ಲಿ ಲೋಕದ ಕಣ್ಣಾಗಿತ್ತು. ಅವುಗಳೆಲ್ಲದರ ಪ್ರಮಾಣವು ಎಷ್ಟೆಂದು ಆಧುನಿಕ ಜಗತ್ತಿಗೆ ಸ್ಪಷ್ಟವಾಗಿ ತಿಳಿಸಿದವರು ಪಾಶ್ಚಾತ್ಯರೇ ಆಗಿದ್ದಾರೆ. 18ನೇ ಶತಮಾನದ ಅಂತ್ಯದೊಳಗಾಗಿಯೇ ಭಾರತ ಸಂಸ್ಕೃತಿಯನ್ನು ಕುರಿತು ಐರೋಪ್ಯಾ ಭಾಷಾ ಬರೆವಣಿಗೆಗಳು ಲೋಕದ ಪ್ರಖ್ಯಾತ ರಾಷ್ಟ್ರಗಳ ಗ್ರಂಥಭಂಡಾರಗಳಲ್ಲಿ ತುಂಬಿದುವು. ಈ ದೇಶದ ಮೂರು ಸಾವಿರ ವರ್ಷಗಳ ಸಾಹಿತ್ಯ ಚರಿತ್ರೆಯಲ್ಲಿ ಈ ವಿದೇಶೀಯರು ಬರೇ ನೂರಿನ್ನೂರು ವರ್ಷಗಳ ಕಾಲದ ಅಲ್ಪ ಅವಧಿಯಲ್ಲಿ ಸಾಧಿಸಿದ್ದು ಹಿಂದಿನ ಶತಮಾನಗಳ ಪರಿಶ್ರಮವೆಲ್ಲವನ್ನೂ ಮೀರಿಸಿದೆ. ಅಷ್ಟೇ ಅಲ್ಲ, ಅವರ ಸಾಧನೆಯೂ ಅಪಾರವಾಗಿದೆ, ಪ್ರೌಢವಾಗಿದೆ, ವ್ಯಾಪಕವಾಗಿದೆ, ಹಾಗೂ ಬಹು ಉನ್ನತವಾಗಿದೆ. ಒಂದು ಸಾವಿರ ಭವ್ಯೋನ್ನತ ಗಗನ ಸೌಧಗಳನ್ನು ಏರಿಸಿದರೆ ಅದು ನಾಗರೀಕತೆಯಾಗದು; ಅದರ ಬದಲಾಗಿ ಉತ್ತಮ ಸಾಹಿತ್ಯಸೃಷ್ಟಿ, ಅನ್ವೇಷಣೆ, ಸಂಶೋಧನೆ, ಪ್ರಸಾರಣೆ ಇತ್ಯಾದಿಗಳಿಂದ ಒಂದು ಬಗೆಯ ಜಾಗೃತಿಯನ್ನು ಎಬ್ಬಿಸಿ ಸಿದ್ರಿಸಿದ ಜನತೆ ಎಚ್ಚೆತ್ತು ಒದರುವ ಚೈತನ್ಯವನ್ನೂ ಸ್ಫೂರ್ತಿಯನ್ನೂ ಒದಗಿಸಿದರೆ ಅದೇ ನಾಗರೀಕತೆಯೆಂದೆನ್ನಬಹುದಾಗಿದೆ. ಅದೇ ದೇಶದ ಭವ್ಯ ಭವಿಷ್ಯಕ್ಕೆ ನೈತಿಕ ಪ್ರಭಾವಕ್ಕೆ ಉತ್ಸಾಹಪೂರ್ಣವಾದ ಹುಮ್ಮಸಿಗೆ ಮತ್ತು ಜಾಗೃತ ಪರಿಸ್ಥಿತಿಗೆ ನಂದಾದೀಪವಾಗಿದೆ!

---



# ಭಾಗ-೨

## ೧೨

ಸುಲಿದ ಬಾಳೆಯ ಹಣ್ಣನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪಾ
ಲಲಿತವಹ ಕನ್ನಡದ ನುಡಿಯುಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ?

[ಮಹಲಿಂಗ]

ಐರೋಪ್ಯಾ ಕ್ರೈಸ್ತಮತ ಪ್ರಚಾರಕನು ಇಡೀ ಹಿಂದೂಸ್ಥಾನದಲ್ಲಿ ಹೇಗೋ ಹಾಗೆಯೇ ಕರ್ಣಾಟಕದ ಎಲ್ಲಾ ಕಡೆಯಲ್ಲೂ ಹಬ್ಬಿ ಕನ್ನಡ ಮತ್ತು ಇತರ ಸ್ಥಳೀಯ ಉಪಭಾಷೆಗಳನ್ನು ಕಲಿತು ತಮ್ಮ ಮತಪ್ರಚಾರ ಕಾರ್ಯವನ್ನು ಈ ನಾಡಿನ ಉದ್ದಗಲಕ್ಕೂ ಸಾಧಿಸಿದರು. "ಕನ್ನಡದ ನುಡಿಯುಲಿ....ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ ?" ಎಂಬ ಕವಿಯ ನುಡಿಗನುವಾಗಿ ಆ ಪಾಶ್ಚಾತ್ಯ ಧರ್ಮಾಭಿಮಾನಿಗಳು ತಮ್ಮ ಧರ್ಮ ಗ್ರಂಥವಾದ ಬೈಬಲನ್ನು ಕನ್ನಡಕ್ಕೆ ಇಳಿಸಿ ಮತ್ತು ಕನ್ನಡ ನಾಡಿನ ಅನ್ವೇಷಣೆಯನ್ನು ನಡೆಸಿ ಕೃತಾರ್ಥರಾದರು. ಕ್ರಿ.ಶ. 15ನೇ ಶತಮಾನದಿಂದ 19ನೇ ಶತಮಾನದ ವರೆಗಿನ ಅವಧಿಯಲ್ಲಿ ಅದೆಷ್ಟೋ ಐರೋಪ್ಯಾ ಪ್ರವಾಸಿಕರು ಮತ್ತು ಧರ್ಮಗುರುಗಳು ಈ ದೇಶದ ಮತ್ತು ಈ ಪ್ರಾಂತದ ವಿಷಯವಾಗಿ ತಮ್ಮ ಸ್ವಭಾಷೆಗಳಲ್ಲಿ ಬರೆದಿದ್ದಾರೆ; ಅಷ್ಟೇ ಪ್ರಮಾಣದಲ್ಲಿ ಕನ್ನಡದಲ್ಲೂ ಇತರ ಭಾರತೀಯ ಭಾಷೆಗಳಲ್ಲೂ ಬರೆದಿದ್ದಾರೆ.

ಈ ಹಲವು ಕ್ರೈಸ್ತ ಮತೋಪದೇಶಕರ ಧರ್ಮಾಭಿಮಾನ, ದೇಶಾಭಿಮಾನ, ಭಾಷಾಭಿಮಾನ ಇತ್ಯಾದಿಗಳನ್ನು ನೋಡಿದಾಗ ತಿಳಿದು ಬರುವುದೇನೆಂದರೆ ಕಳೆದ ಎರಡು ಯಾ ಮೂರು ಶತಮಾನಗಳ ಕಾಲದಲ್ಲಿ ಈ ದೇಶದಲ್ಲಿದ್ದ ಬಹು ದೊಡ್ಡ ವಿದ್ಯಾವಂತರೂ, ಭಾರತೀಯ ಭಾಷಾ ಪಂಡಿತರೂ ಶ್ರೇಷ್ಠ ವರ್ಗದ ಸಾಹಿತ್ಯ ತಪಸ್ವಿಗಳೂ ಆಗಿದ್ದರೆಂದು ನಿಸ್ಸಂದೇಹವಾಗಿ ಹೇಳಬಹುದು. ಉಳಿದವರು ಕೇವಲ ತಮ್ಮ ಕ್ರೈಸ್ತ ಧರ್ಮ ಪ್ರಚಾರಕರಾದರೂ ಅವರ ಪಾಂಡಿತ್ಯ, ಸೇವೆ. ಕರ್ತವ್ಯ ನಿಷ್ಠೆ ಇತ್ಯಾದಿಗಳನ್ನು ತೃಣೀಕರಿಸಲು ಸಾಧ್ಯವಿಲ್ಲ. ಪಾಶ್ಚಾತ್ಯರ ಪೈಕಿ ಅಂದು ಸರಕಾರೀ ಹುದ್ದೆಯನ್ನು ಪಡೆದು ಸಾಹಿತ್ಯವ್ಯಾಸಂಗವನ್ನು ನಡೆಸಿದವರನ್ನುಳಿದು ಇತರರು ಕೇವಲ ತಮ್ಮ ಮತಪ್ರಚಾರದ ನಿಮಿತ್ತವಾಗಿಯೇ ಈ ದೇಶದ ಭಾಷೆಗಳನ್ನು ಕಲಿತರು. ಅವರಲ್ಲಿ ಉದ್ದಾಮ ಪಂಡಿತರಾಗಿದ್ದವರು ತಮ್ಮ ಬೈಬಲ್ ಸಾಹಿತ್ಯದ ನಿರ್ಮಾಣದೊಡನೆ ತಮ್ಮ ಬರೆವಣಿಗೆಯನ್ನು ಪ್ರಾರಂಭಿಸಿ ಅನಂತರ ದೇಶೀಯ ಭಾಷೆಗಳ

ಪರಿಶೋಧನೆ ಮತ್ತು ಅನ್ವೇಷಣೆಗೆ ಇಳಿದರು. ಆ ರೀತಿಯಾಗಿ ತಮ್ಮ ಸೇವೆಯನ್ನು ಈ ದೇಶದಲ್ಲಿ ದ್ವಿಮುಖವಾಗಿ ಸಾಧಿಸಿ ಕೃತಾರ್ಥರಾದವರು ಹತ್ತಿಪ್ಪತ್ತು ಜನವಲ್ಲ, ನೂರಾರು, ಸಹಸ್ರಾರು ಜನ ಇದ್ದಾರೆ.

೨. ಕ್ರೈಸ್ತ ಮತಪ್ರಚಾರಕರು ಈ ದೇಶಕ್ಕೆ ಆವಾಗಲೇ ಬಂದರು :—

ಹಿಂದೂಸ್ಥಾನದಂಥಾ ವಿಶಾಲ ದೇಶವನ್ನು ವಿಧಾಯಕ ರೀತಿಯಲ್ಲಿ ಮುಂದೊಯ್ಯುವ ಮಹತ್ಕಾರ್ಯದಲ್ಲಿ ಅಂದಿನ ಆಂಗ್ಲೇಯ ಸರಕಾರದೊಡನೆ ಭುಜಕ್ಕೆ ಭುಜಕೊಟ್ಟು ಸಹಕರಿಸಿದವರಲ್ಲಿ ಪಾಶ್ಚಾತ್ಯ ಕ್ರೈಸ್ತ ಮತಪ್ರಚಾರಕರೇ ಮೊದಲಿಗರಾಗಿದ್ದಾರೆ. ಅವರೆಲ್ಲರೂ ಇಂಗ್ಲೆಂಡ್, ಸ್ಕಾಟ್ಲೆಂಡ್, ಜರ್ಮನಿ, ಫ್ರಾನ್ಸ್, ಪೋರ್ಚುಗಲ್, ಇಟಲಿ, ಸ್ವೀಡನ್, ಡೆನ್ಮಾರ್ಕ್ ಇತ್ಯಾದಿ ದೇಶಗಳ ಕ್ರೈಸ್ತ ಮತಪ್ರಚಾರ ಸಂಸ್ಥೆಗಳಿಗೆ ಸೇರಿದ್ದವರಾಗಿದ್ದರು.

ಬಾಬಿಲೋನಿಯಾದ ಕ್ರೈಸ್ತ ಗುರು Saint Thomas ಇವನು ಕ್ರಿ.ಶ. 486 ರಷ್ಟು ಹಿಂದೆಯೇ ತನ್ನ ಕೆಲವು ಅನುಯಾಯಿಗಳೊಡಗೂಡಿ ಮತ್ತು ತನ್ನ ಧರ್ಮಗುರುವಿನ ಆಜ್ಞಾನುಸಾರವಾಗಿ, "....have carried on their Master's command to go unto the uttermost parts of the world to preach." ಎಂಬ ವಿಧಿಯನ್ನು ಸ್ಮರಿಸಿ ಸಹಸ್ರಾರು ಮೈಲುಗಳಗಲದ ಸಾಗರವನ್ನು ದಾಟಿ ಬಂದನು. Nestorian ಕ್ರೈಸ್ತ ಪಂಥಕ್ಕೆ ಸೇರಿದ್ದ ಈ Apostle Thomas ಇವನು ಅಂದು ಕೇರಳದ ಕರಾವಳಿಯಲ್ಲಿ ಬಂದಿಳಿದು ಮದ್ರಾಸಿನ ವರೆಗೂ ಸುತ್ತಾಡಿ ತನ್ನ ಧರ್ಮಪ್ರಚಾರ ಕಾರ್ಯವನ್ನು ನಡೆಸಿದನು.

Dominican ವರ್ಗಕ್ಕೆ ಸೇರಿದ್ದ ಕ್ರೈಸ್ತ ಮತಬೋಧಕರು ಕ್ರಿ.ಶ. 1325 ರಷ್ಟು ಹಿಂದೆಯೇ ಈ ದೇಶದ ಕರಾವಳೀ ಸೀಮೆಗಳಲ್ಲೂ ಕನ್ನಡ ನಾಡಿನ ಒಳ ಸೀಮೆಗಳಲ್ಲೂ ನೆಲೆಸಿದ್ದರು. ಅದೇ ವೇಳೆಗೆ ಯೂರೋಪಿನಿಂದ ಬಂದ L. Jordanus ಇವನು ಹೊನ್ನಾವರದಲ್ಲಿ ಬಂದಿಳಿದನು. ಇಟಲಿಯ ಪ್ರಯಾಣಿಕ Nicolo de Conti ಇವನು ಕ್ರಿ.ಶ. 1421ರಲ್ಲಿ ವಿಜಯನಗರ ರಾಜ್ಯದಲ್ಲಿ ಸಂಚರಿಸಿದನು. Vasco da Gama ಇವನು ಕ್ರಿ.ಶ. 1498ರಲ್ಲಿ ಕಲ್ಲಿಕೋಟೆಯಲ್ಲಿ ಬಂದಿಳಿದನಲ್ಲದೆ ಅನಂತರ ಮುಂದುವರಿದು ಪಶ್ಚಿಮ ಕರಾವಳಿಯ ಮಲ್ಪೆ ಬಂದರದ ಸಮೀಪದ ಒಂದು ದ್ವೀಪದಲ್ಲಿ ತಂಗಿದ್ದನು. ಇಷ್ಟರಲ್ಲಿ ಪೋರ್ಚುಗಲ್‌ನಿಂದ ಬಂದ ಹಲವು ಕ್ರೈಸ್ತರು ಗೋವಾದಲ್ಲಿ ನೆಲೆಸಿದರು. ಕ್ರಿ ಶ. 1514 ರಲ್ಲಿ ಅಲ್ಲಿ ಇದ್ದ Fr. Duarte Nunez ಎಂಬ Dominican ಪಂಥದವನು ಭಾರತದ ಮೊದಲನೇ ಕ್ರೈಸ್ತ ಗುರುವೆಂದು ನೇಮಕವಾದನು. ಇವನೊಡನೆಯೇ Francisean ಪಂಥದ J. de Albuquerque ಇವನೂ ಗೋವಾದಲ್ಲಿ ನೆಲೆಸಿದನು.

ಮೊಗಲ್ ಚಕ್ರವರ್ತಿಗಳಾದ ಅಕ್ಬರ್ ಮತ್ತು ಜಹಂಗೀರ್ ಇವರ ಕಾಲದಲ್ಲಿ ಹಲವು ಕ್ರೈಸ್ತರು ಆಗ್ರಾ, ಡಿಲ್ಲಿ, ಕಲ್ಕತ್ತಾ, ಲಾಹೋರ್, ಡಾಕ್ಕಾ ಮೊದಲಾದ ಪಟ್ಟಣಗಳಲ್ಲಿ ನೆಲೆಸಿ ದೇಶೀಯರನ್ನು ಮತಾಂತರಗೊಳಿಸಲು ಪ್ರಾರಂಭಿಸಿದ್ದರು.

ಭಾರತದ ನೆಲಕ್ಕೆ ಮೊದಲಾಗಿ ಕಾಲಿಟ್ಟ ಆಂಗ್ಲ ಕ್ರೈಸ್ತ ಗುರುವು Fr. Thomas Stephens ಇವನು ಕ್ರಿ.ಶ. 1579 ರಲ್ಲಿ ಗೋವಾದಲ್ಲಿ ಇದ್ದನು. ಅವನ ನಂತರ ಇಂಗ್ಲೆಂಡಿನಿಂದ William Foster ಇವನು ಬಂದು ಅಂದಿನ ಮೊಗಲ್ ಮತ್ತು ಮರಾಠ ಪ್ರಮುಖರ ರಾಜಕೀಯವನ್ನು ಕುರಿತಾಗಿ ತನ್ನ ಬರೆವಣಿಗೆಯಲ್ಲಿ ವಿಶದವಾಗಿ ಪ್ರಸ್ತಾಪಿಸಿದ್ದಾನೆ. ಅಳಿದು ಉಳಿದಿದ್ದ ವಿಜಯನಗರ ರಾಜ್ಯದ ಅರಸರಾಗಿದ್ದ ವೆಂಕಟಾದ್ರಿ ಮತ್ತು ರಾಮದೇವ ಇವರು "Lord General of Karnatic" ಎಂದು ಕರೆದುಕೊಳ್ಳುತ್ತಿದ್ದರೆಂದು ಆಗ ಮದ್ರಾಸಿನಲ್ಲಿ (ಅಂದಿನ ಚೆನ್ನಪಟ್ಣ) ಕುಂಪಣಿ ವ್ಯಾಪಾರದ ಮುಖ್ಯ ಕಾರ್ಯಕರ್ತನಾಗಿದ್ದ Thomas Francis Dey ಇವನು ಹೇಳಿದ್ದಾನೆ. ಕ್ರಿ.ಶ. 17 ಮತ್ತು 18ನೇ ಶತಮಾನಗಳಲ್ಲಿ ಹಿಂದುಸ್ಥಾನಕ್ಕೆ ಬಂದ ಐರೋಪ್ಯ ಕ್ರೈಸ್ತಮತ ಪ್ರಚಾರಕರು ಅಸ್ಸಾಮ್‌ನಿಂದ ಪೇಶಾವರದ ವರೆಗೂ ಕನ್ಯಾಕುಮಾರಿಯಿಂದ ಹಿಡಿದು ಪೂರ್ವ ಮತ್ತು ಪಶ್ಚಿಮ ಕರಾವಳಿಯ ಎಲ್ಲಾ ಪಟ್ಟಣಗಳಲ್ಲೂ ನೆಲೆಸಿದರು.

**೩. ಜನರನ್ನು ಮತಾಂತರಗೊಳಿಸುವುದೇ ಅವರ ಧ್ಯೇಯವಾಗಿತ್ತು :—**

ಕ್ರೈಸ್ತ ಮತಬೋಧಕರು ಇಂಡಿಯಾ, ಚೀನಾ, ಜಪಾನ್ ಇತ್ಯಾದಿ ಏಷ್ಯಾ ಖಂಡದ ದೇಶಗಳಲ್ಲಿ ಸುತ್ತಾಡಿದಾಗ ಯೂರೋಪಿನಲ್ಲಿ ಹೊಸ ಹೊಸ ಕ್ರೈಸ್ತಮತ ಪ್ರಚಾರ ಸಂಸ್ಥೆಗಳು ಹುಟ್ಟಿಕೊಂಡುವು. Catholics, Jesuits, Dominicans, Franciseans, Lutherans ಮೊದಲಾದ ಪಂಥಗಳ ಕ್ರೈಸ್ತರು ಈ ದೇಶದಲ್ಲಿ ಬಹು ಸಂಖ್ಯೆಯಲ್ಲಿ ಇದ್ದರು. ಇವರೆಲ್ಲರ ಧ್ಯೇಯವು ದೇಶೀಯರನ್ನು ಮತಾಂತರಗೊಳಿಸುವುದೇ ಆಗಿತ್ತು. ಅದಕ್ಕಾಗಿಯೇ ಅವರು ಭಾರತೀಯ ಭಾಷೆಗಳನ್ನು ಕಲಿತರು; ಭಾರತೀಯ ಧರ್ಮಗ್ರಂಥಗಳನ್ನು ಪಠಿಸಿದರು ಮತ್ತು ಕ್ರೈಸ್ತ ಧರ್ಮ ಮತ್ತು ಹಿಂದೂಧರ್ಮಗಳನ್ನು ತುಲನಾತ್ಮಕವಾಗಿ ಅಭ್ಯಸಿಸಿದರು. ಇಂಥಾ ಹಲವು ಧರ್ಮಗುರುಗಳು ಭಾರತೀಯ ಸಾಹಿತ್ಯದಲ್ಲಿ ಉದ್ಧಾಮ ಪಂಡಿತರಾಗಿ ಶೋಭಿಸಿದರೆಂಬುದೇ ಸಂತೋಷದಾಯಿಕವಾದ ವಿಚಾರವಾಗಿದೆ.

ಕ್ರಿ.ಶ. 18ನೇ ಶತಮಾನದಲ್ಲಿ ಮೇಲೆ ಹೇಳಿದ ಕ್ರೈಸ್ತ ಪಂಥದವರಲ್ಲದೆ Baptists, Protestants, Anglicans ಇತ್ಯಾದಿ ವರ್ಗದ ಕ್ರೈಸ್ತರೂ ಯೂರೋಪಿನಿಂದ ಇನ್ನು ಹೆಚ್ಚಿನ ಸಂಖ್ಯೆಯಲ್ಲಿ ಬಂದರು. 1804 ರಲ್ಲಿ ಹುಟ್ಟಿದ Indian Mission Society, 1815 ರಲ್ಲಿ ಸ್ಥಾಪನೆಯಾದ ಸ್ವಿಟ್ಜರ್‌ಲೆಂಡಿನ Basel Evengelical Mission, 1834 ರಲ್ಲಿ ಹುಟ್ಟಿದ ಜರ್ಮನಿಯ Wesleyan Mission Society, 1842 ರ Leipzig Evengelical ಮತ್ತು Lutheran Mission, ಅದರನಂತರ Syrian Christian Mission, Free Church of Scotland Mission ಹೀಗೆ ಇನ್ನೆಷ್ಟೋ ಧರ್ಮಸಂಸ್ಥೆಗಳಿಗೆ ಸೇರಿದ 'ಪಾದರಿ'ಗಳು ಬಂದು ಈ ದೇಶದಲ್ಲಿ ತಮ್ಮ ಮತಪ್ರಚಾರ ಶಾಖೆಗಳನ್ನು ತೆರೆದುದಲ್ಲದೆ ಸ್ಥಳೀಯ ಜನರನ್ನು ಮತಾಂತರಗೊಳಿಸುವುದರಲ್ಲೂ

ಉದ್ಯುಕ್ತರಾದರು.

ಮಹ್ಮದೀಯರು ಈ ದೇಶದಲ್ಲಿ ಕ್ರಿ.ಶ. 9 ಮತ್ತು 10 ನೇ ಶತಮಾನಗಳಲ್ಲಿ ಪ್ರಾರಂಭಿಸಿದ ಕೆಲಸವನ್ನು ಕ್ರೈಸ್ತರು 17 ನೇ ಮತ್ತು 18 ನೇ ಶತಮಾನಗಳಲ್ಲಿ ಪ್ರಾರಂಭಿಸಿದರು. ಮಹ್ಮದೀಯರು ಖಡ್ಗ ಬಲದಿಂದ ಸಾಧಿಸಿದ್ದನ್ನು ಕ್ರೈಸ್ತರು ಬರೇ ತಮ್ಮ ನಯ ನಾಲಗೆಯ ಬಲದಿಂದ ಸಾಧಿಸಲೆತ್ನಿಸಿದರು. ಅವರು ಹಿಂದೂ ಧರ್ಮ ವನ್ನು ಖಂಡಿಸಿದಾಗ ಇವರು ಹಿಂದೂ ಮತ್ತು ಕ್ರೈಸ್ತ ಧರ್ಮಕ್ಕೆ ತಕ್ಕ ಸಾಮ್ಯವನ್ನು ಕಲ್ಪಿಸಿದರು, ಅವರು ಇತರರ ಸಹಾಯವಿಲ್ಲದೆ ಬಲಪ್ರಯೋಗದಿಂದ ಬಲಾತ್ಕಾರವಾಗಿ ಜನರನ್ನು ಮತಾಂತರಗೊಳಿಸಿದರು; ಇವರು ತಮ್ಮದೇ ಆದ ಕ್ರೈಸ್ತ ಹಾಗೂ ಬ್ರಿಟಿಷ್ ಸರಕಾರದ ಸಹಾಯದಿಂದ ಜನರ ಮತಪರಿವರ್ತನೆಯ ಕಾರ್ಯಕ್ಕೆ ಇಳಿದರು. ಮಹ್ಮದೀಯರು ಹಿಂದೂ ಧರ್ಮಶಾಸ್ತ್ರಗಳನ್ನು ಅಸಂಸ್ಕೃತರಂತೆ ನಿರ್ನಾಮಗೊಳಿಸ ಲೆತ್ನಿಸಿದರು. ಕ್ರೈಸ್ತರು ಸುಸಂಸ್ಕೃತದ ಜನಾಂಗದಂತೆ ಹಿಂದೂ ಧರ್ಮಗ್ರಂಥಗಳನ್ನೂ ಸಾಂಸ್ಕೃತಿಕ ವೈಶಿಷ್ಟ್ಯವನ್ನೂ ಬೆರಗಾಂತು ಕಂಡು ತಾವೂ ಅವುಗಳ ಪರಿಶೋಧನೆಗೆ ನೆರವಾದರು. ಮಹ್ಮದೀಯ ಸರಕಾರದ ಕಾಲದಲ್ಲಿ ಹಿಂದೂ ದೇವಾಲಯಗಳೂ ಸಂಸ್ಕೃ ತಿಯೂ ನಿರ್ನಾಮವಾಗುವುದರಲ್ಲಿದ್ದಿತು; ಆದರೆ ಕ್ರೈಸ್ತ ಸರಕಾರದಿಂದ ಅವೆಲ್ಲಕ್ಕೂ ಶ್ರದ್ಧಾಪೂರ್ವಕವಾದ ಪೋಷಣೆಯೂ ಆಶ್ರಯವೂ ದೊರೆಯಿತು. ಹೀಗಿದ್ದರೂ ದೇಶೀಯ ಜನರನ್ನು ಮತಾಂತರಗೊಳಿಸುವುದರಲ್ಲಿ ಈ ಎರಡು ಮತಗಳ ಉದ್ದೇಶವೂ ಒಂದೇ ಆಗಿತ್ತು. ಆದರೆ ಭಾರತದ ಜನರು ಮಾತ್ರ ವಿದೇಶೀಯರ ಕರಾಳ ನೀತಿಗೆ ಬಲಿಬೀಳಲು ಕಾರಣವಾದರೋ ತಾವೇ ಆಗಿದ್ದಾರೆ. ಹಿಂದೂ ಮತದ ಅಸಂಖ್ಯ ಜಾತಿ ಭೇದಗಳು ಆ ಮತದ ದೌರ್ಬಲ್ಯಕ್ಕೆ ಕಾರಣವಾಯಿತು, ಎಂಬುದನ್ನು ಮಾತ್ರ ಪ್ರತ್ಯೇಕವಾಗಿ ಇಲ್ಲಿ ಪ್ರಸ್ತಾಪಿಸಬೇಕಾಗಿಲ್ಲ.

**೪. ಸಾಹಿತ್ಯ ಮತ್ತು ಸಮಾಜಸೇವೆಯೆನ್ನು ದೀಕ್ಷೆಯೆಂತೆ ಕೈಗೊಂಡರು :—**

ಪಾಶ್ಚಾತ್ಯರು ನಮ್ಮ ದೇಶದ ಐತಿಹ್ಯವನ್ನೆಲ್ಲಾ ಸಂಶೋಧಿಸಿ ಹೊರಗೆಳೆದುದರ ಕಾರಣವಾದರೋ ಈ ನೆಲದ ಮತ್ತು ಜನರ ನಾಗರೀಕತೆ ಸಂಸ್ಕೃತಿಗಳು ಅದೆಷ್ಟು ಆಳಕ್ಕೆ ಬೇರುಬಿಟ್ಟಿದೆಯೆಂದು ನೋಡುವುದೇ ಆಗಿತ್ತು; ಅಷ್ಟೇ ಅಲ್ಲ, ಅವುಗಳಲ್ಲಿ ಉತ್ತಮವಾದುವುಗಳನ್ನು ಪಾಶ್ಚಾತ್ಯ ದೇಶಗಳಿಗೆ ಪರಿಚಯ ಮಾಡಿಸುವ ಸದುದ್ದೇ ಶವೂ ಇದ್ದಿತು.

ಹೇಗೂ ಅಂದು ಯೂರೋಪು ಖಂಡದ ವಿವಿಧ ಭಾಷಾ ಸಾಹಿತಿಗಳು ಸಾಧಿ ಸಿದ್ದು ಈ ದೇಶದ, ಈ ಜನದ, ಸಂಸ್ಕಾರದ ಮತ್ತು ಸಾಹಿತ್ಯದ ಸೇವೆ. ಅವರು ತಮ್ಮ ಭಾಷೆಗಳಿಗಿಳಿಸಿದ ಭಾರತದ ಅಮೋಘ ವಿಚಾರಧಾರೆಯನ್ನು ಮರಳಿ ನಮ್ಮ ಭಾಷೆಗೆ ತಂದುಕೊಳ್ಳುವುದು ನಮ್ಮ ಹೊಣೆಯಾಗಿದೆ. ಅಂದು ಅವರು ಸಾಧಿಸಿದ್ದು ಶುದ್ಧ ಹಾಗೂ ನಿಷ್ಕಲ್ಮಶವಾದ ಸಾಹಿತ್ಯ ಸೇವೆ; ಇತಿಹಾಸ, ಸಂಸ್ಕೃತಿ, ಪ್ರಾಕ್ತನ ವಿಚಾರ ಗಳ ಪರಿಶೋಧನೆ ಮತ್ತು ಸಂಸ್ಕರಣೆ! ಅವಕ್ಕಾಗಿಯೇ ಅವರಲ್ಲಿ ಅನೇಕ ಮಂದಿ ತಮ್ಮ ಬಾಳನ್ನು ಸವೆದರು; ಈ ಮಹಾಕಾರ್ಯವನ್ನು ಒಂದು ದೀಕ್ಷೆಯಾಗಿ ಕೈಗೊಂಡರು;

ಮತ್ತು ಜಯಪ್ರದರಾದರು. ಅದಕ್ಕೆ ತಕ್ಕಂತೆ ಸುಸಂಸ್ಕೃತ ಜನಾಂಗವಾದ ಬ್ರಿಟಿಷ್ ಸರಕಾರದ ಸಹಾಯ ಮತ್ತು ದೇಶೀಯ ವಿಂದ್ವಾಂಸರ ಸಹಾನುಭೂತಿಯೂ ಅವರಿಗೆ ಯಥೇಚ್ಛವಾಗಿ ಲಭಿಸಿತು.

ಪಾಶ್ಚಾತ್ಯ ಜನಾಂಗದ ಇನ್ನೊಂದು ಅಭೂತಪೂರ್ವ ಯೋಜನೆಯೆಂದರೆ ಸಮಾಜಸೇವೆ! ಪೂರ್ವಕಾಲದ ಹಿಂದೂಗಳು ಇಂದಿನ ಆಧುನಿಕ ದೃಷ್ಟಿಯಲ್ಲಿ ಸಮಾಜ ಸೇವೆಯನ್ನು ವ್ಯಾಪ್ತವಾಗಿ ಕೈಗೊಂಡಿದ್ದರೋ ಇಲ್ಲವೋ ತಿಳಿಯದು. ಗ್ರಾಮಾಂತರದ ಜನರು ಪರಸ್ಪರ ಹೊಂದುತ್ತಿದ್ದ ಸಹಾಯ, ಕುಟುಂಬ, ಊರು, ನಗರಗಳಲ್ಲಿ ಇದ್ದ ಸಹಕಾರ ನೀತಿಗಳೆಲ್ಲವೂ ಹಲವು ಬರವಣಿಗೆಗಳಲ್ಲಿ ಬಣ್ಣಿಸಲ್ಪಟ್ಟಿವೆ. ಆದರೆ ಕಳೆದ ಶತ ಮಾನದಲ್ಲಿ ಪಾಶ್ಚಾತ್ಯರು ತೋರಿಸಿದ ಸಮಾಜಸೇವೆಯ ರೀತಿಯೇ ಬೇರೆಯಾಗಿದೆ.

ಮಹ್ಮದೀಯರಲ್ಲಿ ಮತ್ತು ಮಹ್ಮದೀಯರ ಆಳ್ವಿಕೆಯ ಕಾಲದಲ್ಲಿ ಸಮಾಜಸೇವೆ ಯೆಂಬ ಹೆಸರಾದರೂ ರೂಢಿಯಲ್ಲಿತ್ತೋ ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಮಹ್ಮದೀಯ ರಾಜರು ಮತ್ತು ನವಾಬರು ತಮ್ಮ ಕ್ಷೇಮಕ್ಕೆ ಭವ್ಯವಾದ ಕೋಟೆ ಕೊತ್ತಲಗಳು, ಆಡಂಬರಭರಿತವಾದ ಅರಮನೆಗಳು, ಮನೋಹರವಾದ ಹೂದೋಟಗಳು ಮತ್ತು ಉದ್ಯಾನಗಳು, ಆಹ್ಲಾದಕರವಾದ ಈಜುಕೊಳಗಳು ಇತ್ಯಾದಿಗಳನ್ನೆಲ್ಲಾ ಕಟ್ಟಿಸಿ ಮೆರೆದ ರೆಂದಷ್ಟೇ ತಿಳಿಯುತ್ತದೆ. ಇದರಿಂದ ಜನ ಸಾಮಾನ್ಯರಿಗೆ ಯಾವ ಬಗೆಯಲ್ಲಿ ಅನು ಕೂಲವಾಯಿತೆಂಬುದು ಮಾತ್ರ ಇನ್ನೂ ವ್ಯಕ್ತವಾಗಿಲ್ಲ.

ಆದರೆ ಪಾಶ್ಚಾತ್ಯರು ಮತ್ತು ಪಾಶ್ಚಾತ್ಯ ಕ್ರೈಸ್ತಗುರುಗಳು ತಮ್ಮ ಒಂದು ಕೈಯಲ್ಲಿ ಬೈಬಲನ್ನು ಹಿಡಿದುಕೊಂಡು ಇನ್ನೊಂದು ಕೈಯ್ಯಲ್ಲಿ ನಿಸ್ವಾರ್ಥವಾದ ಸಮಾಜ ಸೇವೆಯನ್ನು ಈ ದೇಶದ ಉದ್ಧಗಲಕ್ಕೂ ಮಾಡಿದ್ದಾರೆ, ಸುಮಾರು ಕ್ರಿ.ಶ. 1750 ರಿಂದ ಮೊದಲ್ಗೊಂಡು ಇವರು ತಮ್ಮ ಮತಪ್ರಚಾರ ಸಂಸ್ಥೆಗಳಿಂದ ಬ್ರಿಟಿಷ್ ಸರಕಾರದ ಸಹಾಯದಿಂದ ಮತ್ತು ಅಲ್ಲಲ್ಲಿ ಇದ್ದ ದೇಶೀಯ ಪ್ರಮುಖರ ಬೆಂಬಲದಿಂದ ಸಾರ್ವ ಜನಿಕ ಸೇವೆಗೆ ಇಳಿದರು. ಈ ದೇಶದ ಎಲ್ಲಾ ಪ್ರಮುಖ ಕೇಂದ್ರಗಳಲ್ಲೂ ಗ್ರಾಮಾಂತರ ಗಳಲ್ಲೂ ಅವರು ತಮ್ಮ ಪ್ರಭಾವವನ್ನು ಬೀರಿ ಹಿಂದುಳಿದ ಈ ದೇಶದ ಜನವನ್ನು ಮುಂದಕ್ಕೆ ತರಲು ಹಲವು ಸುಧಾರಣೆಗಳನ್ನು ಕೈಗೊಂಡಿದ್ದರು, ಬಹುಶಃ ಇದು ಕೇವಲ ಏನೂ ತಿಳಿಯದ ಜನಕ್ಕೆ ಮಂಕುಬೂದಿ ಎರಚಿ ಅವರ ಮತಪರಿವರ್ತನೆಗೊಳಿಸಲಿರುವ ಒಂದು ವೇಷವೆಂದು ಕೆಲವರು ಹೇಳಿಕೊಂಡರೂ ಅವರ ನಿಸ್ವಾರ್ಥ ಸೇವೆಯು ಅಷ್ಟು ಸುಲಭದಲ್ಲಿ ಕಡೆಗಣಿಸುವಂಥಾದೇನೂ ಅಲ್ಲ. ತಮ್ಮ ಮತ ಮತ್ತು ಧರ್ಮಗಳು ಯಾವುದೇ ಇರಲಿ, ಜನಕ್ಕೆ ಉತ್ತಮ ಬಾಳು ಬದುಕು ದೊರೆಯಬೇಕೆಂಬ ಉದಾತ್ತ ಧ್ಯೇಯವು ಅವರಲ್ಲಿ ಧಾರಾಳವಾಗಿ ಇದ್ದಿತು.

"The work done in Christian missionary hospitals, schools and colleges has always been highly esteemed by the general Hindu public. Many prominent Indians have received part of their education in missionary institutions, and there has been no reluctance to acknowledge their great contribution to India."

ಈ ರೀತಿಯಾಗಿ ಭಾರತ ರಾಷ್ಟ್ರೀಯ ಸಂಸ್ಥೆಯಾದ ಕಾಂಗ್ರೆಸಿನ ಚರಿತ್ರೆಯನ್ನು ಬರೆಯುತ್ತಾ ಡಾ. ಪಟ್ಟಾಭಿಯವರು ಹೇಳಿದ್ದಾರೆ. ಇದೇ ರೀತಿಯಾಗಿ ಕ್ರೈಸ್ತಮತ ಪ್ರಚಾರಕರ ಸೇವೆಯನ್ನು ಕುರಿತು ಇನ್ನೂ ಹಲವು ಪ್ರಮುಖರು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ.

ಕ್ರಿ. ಶ. 18 ಮತ್ತು 19 ನೇ ಶತಮಾನಗಳಲ್ಲಿ ಸರಕಾರವು ಅಲ್ಲಲ್ಲಿ ಪಾಠಶಾಲೆಗಳನ್ನು ತೆರೆಯುವ ಮುಂಚೆಯೇ ಕ್ರೈಸ್ತಮತ ಬೋಧಕರು ದೇಶದ ಎಲ್ಲಾ ಕಡೆಗಳಲ್ಲೂ ನವೀನ ರೀತಿಯ ಉತ್ತಮ ಶಾಲೆಗಳನ್ನು ತೆರೆದರು; ವಯಸ್ಕರಿಗೆ ಜ್ಞಾನ ಪ್ರಚಾರವನ್ನು ಮಾಡಿದರು; ಚಿಕಿತ್ಸಾಲಯಗಳು, ನೇತ್ರಚಿಕಿತ್ಸಾ ಶಿಬಿರಗಳು, ಕ್ಷಯ ರೋಗಾಸ್ಪತ್ರೆಗಳನ್ನೂ ಹಲವೆಡೆ ತೆರೆದರು. ವ್ಯವಸಾಯ, ಕೈಗಾರಿಕೆ, ಪ್ರಾಣಿಗಳನ್ನು ಸಾಕುವಿಕೆ ಇತ್ಯಾದಿಗಳ ಬಗ್ಗೆಯೂ ಜನರಿಗೆ ತಕ್ಕ ಜ್ಞಾನವನ್ನು ಒದಗಿಸಿದರು. ಹೀಗೆ ಇನ್ನೆಷ್ಟೋ ಬಗೆಯಲ್ಲಿ ಅವರು ಸಮಾಜಸೇವೆಯೆಂಬುದರ ರೂಪುರೇಷೆಗಳೆಂತೆಂಬುದನ್ನು ಈ ದೇಶದ ಜನಕ್ಕೆ ತೋರಿಸಿ ಕಲಿಸಿದರು.

**೫. ಐರೋಪ್ಯಾ ಪ್ರವಾಸಿಕರು ಕರ್ಣಾಟಕದಲ್ಲೂ ಸಂಚರಿಸಿದರು :—**

Ignatius Loyola ಇವನ ಪರಮ ಶಿಷ್ಯನಾದ Francis Xavier ಇವನು ಕ್ರಿ. ಶ. 1542 ರ ಕಾಲದಲ್ಲಿ ದಕ್ಷಿಣ ಕರ್ಣಾಟಕ ಜಿಲ್ಲೆಗಳಲ್ಲಿ ಸಂಚರಿಸಿದನು. ಇವನ ಅನುಯಾಯಿಗಳು ಗೋವಾ ಮತ್ತು ಬಿಜಾಪುರದಲ್ಲಿ ನೆಲೆಸಿದರು. ಅವರು ಕ್ರಿ. ಶ. 1587 ರಲ್ಲಿ ಪೋರ್ಚುಗಲ್ಲಿನ Jesuit ಪಂಥದವರೊಡಗೂಡಿ Kannada Mission ಎಂಬುದಾಗಿ ಮತಪ್ರಚಾರ ಸಂಸ್ಥೆಯನ್ನು ಸ್ಥಾಪಿಸಿದರು.

Caesor Fredric ಮತ್ತು ಇಟಲಿಯ Pietro della Velle ಇವರು ಕೆಳದಿಯ ಒಂದನೇ ವೆಂಕಟಪ್ಪನ ಕಾಲದಲ್ಲಿ ಭಾರತಕ್ಕೆ ಬಂದರು. ಇವರಲ್ಲಿ Pietro ಇವನು ಕ್ರಿ.ಶ. 1623 ರಲ್ಲಿ ಕೆಳದಿಯ ವೆಂಕಟಪ್ಪನನ್ನು ಭೇಟಿಯಾದನು. ಆವನೊಡನೆ ಪೋರ್ಚುಗಲ್‌ನಿಂದ ಇಕ್ಕೇರಿಗೆ ಬಂದಿದ್ದ ರಾಯಭಾರಿ J. Fernandes Leito ಇವನೂ ಇದ್ದನು. ಇವರೆಲ್ಲರೂ ಇಕ್ಕೇರಿ ರಾಜ್ಯದ ಆಡಳಿತ, ಕಲೆ, ವಾಸ್ತುಶಿಲ್ಪ ಇತ್ಯಾದಿಗಳನ್ನೂ ಕುರಿತು ಇಟಾಲಿಯನ್ ಮತ್ತು ಪೋರ್ಚುಗೀಸ್ ಭಾಷೆಗಳಲ್ಲಿ ಗ್ರಂಥಗಳನ್ನು ಬರೆದಿದ್ದಾರೆ. ಇಟಲಿಯ Fr. Leonard Peas ಇವನು ಶಿವಪ್ಪನಾಯಕನ ಕಾಲದಲ್ಲಿ ಇಕ್ಕೇರಿಯ ಸಂಪದ್ವೈಭವಗಳನ್ನು ಕುರಿತು ಬರೆದಿದ್ದಾನೆ. ಅಲ್ಲದೆ ಇಕ್ಕೇರಿ ರಾಜ್ಯವು ತುದ್ರಿನದಿಯಿಂದ ಹಿಡಿದು ನೀಲೇಶ್ವರದ ವರೆಗೆ ಹಬ್ಬಿದೆಯೆಂದು ಆ ರಾಜ್ಯದ ಸೈನ್ಯವು 40,000 ಕ್ಕೂ ಮೇಲ್ಪಟ್ಟ ಸಿಪಾಯಿಗಳಿಂದ ಕೂಡಿತ್ತೆಂದೂ ಹೇಳಿದ್ದಾನೆ.

ಪ್ರಸಿದ್ಧ ಪ್ರವಾಸಗ್ರಂಥವೊಂದನ್ನು ಬರೆದು ಕ್ರಿ.ಶ. 1672 ರಲ್ಲಿ ಪ್ರಕಟಿಸಿದ Fr. Vincent ಇವನು 1658 ರಲ್ಲಿ ಕರಾವಳೀ ಕನ್ನಡ ಜಿಲ್ಲೆಗಳಲ್ಲಿ ಸಂಚರಿಸಿದ್ದನು. ಆಂಗ್ಲ ನೌಕಾದಳದಲ್ಲಿದ್ದ Dr. John Fryer ಇವನು ಇಕ್ಕೇರಿಯ ಸೋಮಶೇಖರನ ಕೊಲೆಯಾದಾಗ ಕ್ರಿ. ಶ. 1671 ರಲ್ಲಿ ಕಾರವಾರದಲ್ಲಿದ್ದನು. ಇವನ



ಕ. ಕಾಲಿನ್ ಮೆಕೆನ್‌ಜೀ

3. masc. ಅವರು ಮಾಡುತಾರೆ, *they will do.*
fem. as the masculine.
neut. ಅವು ಮಾಡುತವೆ, *they will do.*

18. ಹೋಗ, *to go,* is used as an auxiliary to form the future tense. ಅಲಕ್ಕೆ is inserted before ಹೋಗ.

*Example.*

Singular.

1. ನಾನು ಮಾಡಲಕ್ಕೆ ಹೋಗತೇನೆ, *I will do it.*
2. ನೀನು ಮಾಡಲಕ್ಕೆ ಹೋಗತೀ, *thou will do.*
3. masc. ಅವನು ಮಾಡಲಕ್ಕೆ ಹೋಗತಾನೆ, *he will do.*
fem. ಅವಳು ಮಾಡಲಕ್ಕೆ ಹೋಗತಾಳೆ, *she will do.*
neut. ಅದು ಮಾಡಲಕ್ಕೆ ಹೋಗತದೆ, *it will do.*

Plural.

1. ನಾವು ಮಾಡಲಕ್ಕೆ ಹೋಗತೇವೆ, *we will do it.*
2. ನೀವು ಮಾಡಲಕ್ಕೆ ಹೋಗತೀರಿ, *ye will do it.*
3. masc. ಅವರು ಮಾಡಲಕ್ಕೆ ಹೋಗತಾರೆ, *they will do it.*
fem. as the masculine.
neut. ಅವು ಮಾಡಲಕ್ಕೆ ಹೋಗತವೆ, *they will do.*

19. The second or crastine future is formed by affixing to the root, ಎನು and ಎವು for the first per-

ಡಾ. ವಿಲಿಯಂ ಕ್ಯಾರಿ ಇವನ 1817ರಷ್ಟು ಹಿಂದೆ ಅಚ್ಚಾದ ವ್ಯಾಕರಣದ ಒಂದು ಪುಟ.

or glue. ಬಂಕೆಮಣ್ಣು viscous earth, used by potters &c.

TB. ಬಂಗ s. n. Disgrace or degradation. E. ಭಂಗ.

c. ಬಂಗರ s. n. A top. ಘುರ್ರುಬಂಗರ a humming top.

c. ಬಂಗಲೆ, ಬಂಗಳಿ, ಬಂಗಲಾ, ಬಂಗ್ಲೆ s. n. A small house or *bungalow*; a halting place.

c. ಬಂಗಾರ s. n. Gold, adj. golden. ಬಂಗಾರದಗೊಂಬೆ a beautiful woman. ಅವನು ಬಂಗಾರದ ಸರಿಗೆಯಂತೆ ಇರುವ ಮನುಷ್ಯನು he is a man of very easy access. *lit.* like gold thread. ಬಂಗಾರದ ಸರಿಗೆ gold thread. ಬಂಗಾರದ ಮುಲಾಮು gilding. ಬಂಗಾರದ ಮಾಟು the quality of gold, rate of gold. ಬಂಗಾರದ ನೀರು gold leaf. *lit.* gold water. ಬಂಗಾರದ ಕಟ್ಟು, ಬಂಗಾರದ ಗಟ್ಟಿ an ingot of gold. ಬಂಗಾರದ ಕಡ್ಡಿ a gold tooth-pick, or ear-pick. ಬಂಗಾರದ ತಗಡು thin gold plate or foil. ಅಪರಂಜಿಬಂಗಾರ, ಚೊಕ್ಕಬಂಗಾರ fine or pure gold. ಅಗ್ಗಬಂಗಾರ inferior gold. ಬಂಗಾರದ [illegible], ಬಂಗಾರದ ಪುಡಿ gold dust. ಬಂಗಾರದ ವಸ್ತು, ಬಂಗಾರದ ಒಡವೆ a gold jewel.

c. ಬಂಗಾಳದೇಶ s. n. The country of Bengal.

c. ಬಂಗಾಳಿಕಾಯಿ s. n. The berry of the tree termed *hibiscus populneus.*

c. ಬಂಗಾಳಿವಿದ್ಯೆ s. n. Conjuring, slight of hand.

E. c. ಬಂಗಿ adv. Like, as. ಅಪ್ಸರ ಸ್ತ್ರೀಯ ಬಂಗಿ ಈ ಸತಿ ಬಂದಿರುವಳು this woman being like a heavenly courtezan.

c. ಬಂಗಿ s. n. The *bang* or *gungah* plant, a species of hemp. *Canabis sativa.* ಬಂಗಿಯಮಾಜುಂ *bang* made into cakes. ಬಂಗಿಯಮೋಳಿಗೆ a preparation of *bang* mixed with *jaggory* and opium, and used as a potation. ಬಂಗಿಯಹುಡಿ, ಬಂಗಿಯಪುಡಿ powdered *bang*. ಬಂಗಿಸೇದು, ಬಂಗಿಸೇದು to smoke *bang*.

c. ಬಂಗು s. n. The face assuming an unnatural blackness, produced as it is supposed by some evil planet. ಬಂಗುಹಿಡಿಯು to be thus affected.

TB. ಬಂಶ s. n. Lineage, race, family. E. ವಂಶ.

TB. ಬಂಚನೆ s. n. Deceit, hypocrisy. E. ವಂಚನೆ.

TB. ಬಂಚಮ adj. Former, ancient. E. ಪಂಚಮ.

TB. ಬಂಜರ s. n. A cage. E. ಪಂಜರ.

TB. ಬಂಜೆ, ಬಂಜರು adj. Barren, unfruitful, sterile. ಬಂಜೆ a barren woman. ಬಂಜೆಮರ a barren tree. ಬಂಜರುಭೂಮಿ sterile land, uncultivated land. ಬಂಜತ್ವದವರು spoliators. E. ವಂಧ್ಯ. ಕಾಕಬಂಜೆ one who bears only one child.

c. ಬಂಟ s. n. 1 A hero or warrior. 2. a foot soldier. 3. a servant. 4. a pawn, at chess.

TB. ಬಂಟಿಸು v. a. To divide, apportion, or share. E. ವಂಟಿಸು.

TB. ಬಂಟು adj. Courageous, valiant, heroic. ಬಂಟುತನ courage, valour, heroism. ಬಂಟುನೀಗು courage to fail. E. ಬಂಟ.

c. ಬಂಟು adj. Glutinous, viscous. ಬಂಟುಮಣ್ಣು viscous earth. ಬಂಟುಭೂಮಿ a glutinous, rich, strong, or good soil.

c. ಬಂಡ adj. 1. Obstinate, perverse, froward, disobedient. 2. unfeeling, selfish. s. n. wool. ಬಂಡನು an obstinate man. ಬಂಡತನ 1. untowardness. 2. [illegible]

No 5

ರೆ॥ ವಿಲಿಯಂ ರೀವ್ ಇವನ 1832ರಲ್ಲಿ ಪ್ರಕಟವಾದ ಮೊದಲನೇ ಕನ್ನಡ-ಇಂಗ್ಲಿಷ್ ಅರ್ಥಕೋಶದ ಒಂದು ಪುಟ.



ಡಾ. ಜೇಮ್ಸ್ ಬರ್ಜೆಸ್, ಸಿ.ಐ.ಇ., ಎಲ್ಎಲ್.ಡಿ.

೧೧ ಸಮೂಹಜನರು ಪೌಲನು ಮಾಡಿದ್ದನ್ನು ನೋಡಿದಾಗ ತಮ್ಮ ಶಬ್ದವ
ನ್ನೆತ್ತಿ ಲುಕೋನಿಯಾ ಭಾಷೆಯಲ್ಲಿ ದೇವತೆಗಳು ಮನುಷ್ಯರೂಪವಾ
೧೨ ಗಿ ನಮ್ಮ ಬಳಿಗಿಳಿದು ಬಂದಿದ್ದಾರೆಂದು ಹೇಳಿ ಬರ್ನಬಾನನ್ನು ಯೂಪ
ತೆರ್ ಯೆಂದೂ ಪೌಲನು ಮುಖ್ಯ ಪ್ರಸಂಗಿಯಾದದರಿಂದ ಅವನನ್ನು
೧೩ ಮರ್ಕುರಿಯೆಂದೂ ಕರೆದರು. ಆಗಲು ಅವರ ಪಟ್ಟಣಕ್ಕೆದುರಾಗಿದ್ದ
ಯೂಪಿತೆರನ ಪೂಜಾರಿಯೆತ್ತುಗಳನ್ನೂ ಪೂಮಾಲೆಗಳನ್ನೂ ಬಾಗಿಲ
ಬಳಿಗೆ ತೆಗದುಕೊಂಡು ಬಂದು ಸಮೂಹಜನರ ಸಂಗದ ಬಲಿಯನ್ನರ್ಪಿ
೧೪ ಸ ಮನಸ್ಸುಳ್ಳವನಾಗಿದ್ದನು. ಆದರೆ ಪ್ರೇರಿತರಾದ ಬರ್ನಬಾ
ನೂ ಪೌಲನೂ ಯಿದನ್ನ ಕೇಳಿದಾಗ ತಮ್ಮ ವಸ್ತ್ರಗಳನ್ನು ಹರಕೊಂ
ಡು ಸಮೂಹದೊಳಗೆ ಹಾರಿಹೋಗಿ ಆರ್ಭಟಿಸಿ ಹೇಳಿದ್ದೇನಂದರೆ.
೧೫ ಮನುಷ್ಯರೇ ಹೀಗೆ ಯಾಕೆ ಮಾಡುತ್ತೀರಿ ನಾವು ನಿಮ್ಮ ಹಾಗೆಯೇ
ದೌರ್ಬಲ್ಯವುಳ್ಳ ಮನುಷ್ಯರಾಗಿದ್ದೇವೆ ನೀವು ಯೀ ವ್ಯರ್ಥವಾದವುಗಳ
ನ್ನು ಬಿಟ್ಟು ಆಕಾಶವನ್ನೂ ಭೂಮಿಯನ್ನೂ ಸಮುದ್ರವನ್ನೂ ಅವುಗ
ಳಲ್ಲಿರುವ ಸಮಸ್ತವನ್ನೂ ನಿರ್ಮಿಸಿದ ಜೀವವುಳ್ಳ ದೇವರ ಕಡೆಗೆ ತಿರುಗ
೧೬ ಬೇಕೆಂದು ನಿಮಗೆ ಸುಭವರ್ತಮಾನವನ್ನು ಪ್ರಸಂಗಿಸುತ್ತೇವೆ. ಆತನು ಗ
ತಿಸಿದ ಕಾಲಗಳಲ್ಲಿ ಸಕಲ ಪ್ರಜೆಗಳನ್ನೂ ತಮ್ಮ ತಮ್ಮ ಮಾರ್ಗಗಳಲ್ಲಿ ಪ್ರ
೧೭ ವರ್ತಿಸಬಿಟ್ಟನು. ಆದರೂ ಆತನು ಆಕಾಶದಿಂದ ನಮಗೆ ಮಳೆಯನ್ನೂ
ವಿಸ್ತಾರವಾದ ಫಲವುಳ್ಳ ಋತುಗಳನ್ನೂ ದಯೆಪಾಲಿಸುತ್ತಾ ಆಹಾರ
ದಿಂದಲೂ ಸಂತೋಷದಿಂದಲೂ ನಮ್ಮ ಹೃದಯಗಳನ್ನು ತುಂಬಿಸುತ್ತಾ
ನಮಗೆ ಪ್ರತಿಮೋಪಕಾರಗಳನ್ನು ಮಾಡಿದದರಿಂದ ತನಗೆ ತಾನೇ
೧೮ ಸಾಕ್ಷಿಕೊಡದೇ ಯಿರಲಿಲ್ಲವೇ ಯೆಂದಂದರು. ಅವರು ಯಿವುಗಳ
ನ್ನು ಹೇಳಿಯೂ ಸಮೂಹಜನರನ್ನು ತಮಗೆ ಬಲಿಯನ್ನರ್ಪಿಸದ
ಹಾಗೆ ಪ್ರಯಾಸದಿಂದ ನಿಂದ್ರಿಸಿದರು.
೧೯ ಆದರೆ ಅಂತಿಯೋಖ್ ಪಟ್ಟಣದಿಂದಲೂ ಯಿಕೋನಿಯಾ ಪಟ್ಟಣ
ದಿಂದಲೂ ಯೆಹೂದಿಯರು ಬಂದು ಸಮೂಹಜನರಿಗೆ ಬೋಧಿಸಿ ಪೌ
ಲನನ್ನು ಕಲ್ಲೆಸೆದು ಅವನು ಸತ್ತನೆಂದು ನೆನಸಿ ಪಟ್ಟಣದ ಹೊರಗೆ ಅವನ
೨೦ ನ್ನು ಯೆಳದುಹಾಕಿದರು. ಶಿಷ್ಯರು ಅವನ ಸುತ್ತಲು ನಿಂತಿರುವಾಗ

**ಡಾ. ಜಾನ್ ಹೇಂಡ್ಸ್ ಇವನಿಂದ ಬರೆಯಲ್ಪಟ್ಟು ರೆ|| ಜಾನ್ ರೀಡ್ ಇವನಿಂದ ಪರಿಷ್ಕರಿಸಿ 1836 ರಲ್ಲಿ ಮುದ್ರಣವಾದ ಕನ್ನಡ ಬೈಬಲ್ ಬೃಹದ್ಗ್ರಂಥದ ಒಂದು ಪುಟ.**

THE

# BHAGAVAT-GEETA,

OR

**Dialogues of Krishna and Arjoon;**

IN

EIGHTEEN LECTURES.

---

**SANSCRIT, CANARESE, AND ENGLISH;**

IN

PARALLEL COLUMNS.

---

The Canarese newly Translated from the Sanscrit, and the English from the Translation by Sir Charles Wilkins, with his Preface and Notes &c. and the Introduction by the Hon. Warren Hastings, Esq. With an Appendix containing Schlegel's Latin Translation of the Geeta, Notes from the German of Baron Humboldt, &c., &c.

EDITED BY REV. J. GARRETT.

BANGALORE:

PRINTED AT THE WESLEYAN MISSION PRESS.

[illegible], PRINTER.

1846

ರೆ|| ಜಾನ್ ಗೇರೆಟ್ಟ್ ಇವನಿಂದ ಕನ್ನಡಕ್ಕೆ ಭಾಷಾಂತರವಾದ ಭಗವದ್ಗೀತೆಯ ಮುಖಪುಟ. 1846ರಲ್ಲಿ ಅಚ್ಚಾದ ಈ ಗ್ರಂಥ ಇಂಗ್ಲಿಷ್, ಲ್ಯಾಟಿನ್, ಜರ್ಮನ್ ಭಾಷಾ ಮುನ್ನುಡಿಗಳಿಂದ ಕೂಡಿ ಸಮರ್ಪಕವಾಗಿದೆ.



ಡಾ. ಜಾರ್ಜ್ ಬ್ಯೂಲ್ಲರ್ (1837-98)

ಶ್ರೀರಂಗಪಟ್ಣ ಕೃಷ್ಣಮಾಚಾರ್ಯ - ೧೮೩೮

ಐದನೆಯ ಕೃತ್ಪ್ರಕರಣವು. ೮೭

| ಪ್ರಶ್ನೆ: | ಉತ್ತರವು. |
| --- | --- |
| ೧. ಕೃತ್ಪ್ರಕರಣದಲ್ಲೇನು ಹೇಳಲ್ಪಡುತ್ತದೆ. | ಕೃತ್ಪ್ರತ್ಯಯಗಳ ಸ್ವರೂಪವೂ - ಅವುಗಳ ಅರ್ಥಗಳೂ - ಅವು ಬರುವಾಗ ಪ್ರಕೃತಿಪ್ರತ್ಯಯಗಳಿಗೆ ಬರುವ ಲೋಪಾಗಮಾದೇಶಗಳೂ ಹೇಳಲ್ಪಡುತ್ತವೆ. |
| ೨. ಕೃತ್ಪ್ರತ್ಯಯಗಳು ಯಾವವರ ಮೇಲೆ ಬರುತ್ತವೆ. | ಧಾತುಗಳ ಮೇಲೆ ಬರುತ್ತವೆ. |
| ೩. ಆ ಪ್ರತ್ಯಯಗಳು ಯಾವ ಅರ್ಥದಲ್ಲಿ ಬರುತ್ತವೆ. | ಕರ್ತೃ - ಕರ್ಮ - ಕರಣ - ಸಂಪ್ರದಾನ - ಅಪಾದಾನ - ಅಧಿಕರಣಗಳೆಂಬ ಆರು ಕಾರಕಾರ್ಥದಲ್ಲಿಯೂ - ಭಾವಾರ್ಥದಲ್ಲಿಯೂ ಬರುತ್ತವೆ. |
| ೪. ಕರ್ತ್ರಾದಿ ಪದಗಳ ಅರ್ಥವೇನು. | ಅವುಗಳರ್ಥವು ಪ್ರಯೋಗ ಪ್ರಕರಣದಲ್ಲಿ ವಿಸ್ತಾರವಾಗಿ ಹೇಳಲ್ಪಡುತ್ತದೆ - ಭಾವವೆಂದರೆ ಧಾತ್ವರ್ಥವು. |
| ೫. ಈ ಅರ್ಥಗಳಲ್ಲಿ ಯಾವ ಪ್ರತ್ಯಯ ಬರುತ್ತದೆ. | ಈ ಅರ್ಥಗಳಲ್ಲಿ ಪ್ರಾಚೀನ ವ್ಯಾಕರಣ ಪ್ರಕಾರ ಅಲ್ಪ್ರತ್ಯಯವೂ - ಈಗಿನವರ ಪ್ರಯೋಗ ಪ್ರಕಾರ ಅದು ಪ್ರತ್ಯಯವೂ ಬರುತ್ತದೆ - ಅಲ್ಪ್ರತ್ಯಯದ ಲಕಾರ ಸರ್ವತ್ರ ಲೋಪಿಸುತ್ತದೆ - ಆ ಅಲ್ಪ್ರತ್ಯಯಕ್ಕೆ ನಪುಂಸಕೈಕವಚನದಲ್ಲಿ - ಉದು ಆದೇಶವೂ - ಬಹುವಚನದಲ್ಲಿ ಉವು ಆದೇಶವೂ - ಬರುತ್ತದೆ. |
| ೬. ಈ ಪ್ರತ್ಯಯಗಳು ಪರವಾದಾಗ ಕಾಲಾದಿಭೇದ ಸೂಚಕವಾದ ಆಗಮಾದಿಗಳು ಬರುತ್ತವೆಯೋ. | ಕೆಲವರು ಕಾಲಭೇದ ಸೂಚಕವಾದ ಆಖ್ಯಾತ ಪ್ರಕರಣದಲ್ಲಿ ಹೇಳಿದ - ದ - ಉತ್ತ - ಉವ - ಆಗಮಗಳು ಬರುತ್ತವೆಯೆಂತಲೂ - ಉತ್ತಾಗಮ ಬಂದಾಗ ಅದರ ಮೇಲಿರುವ ಧಾತುವ ಸೇರಿಸಿ ಅದರ ಮೇಲೆ ಇವಾಗಮವ ಮಾಡಿ ಅದರ ಮೇಲೆ ಅಲ್ಪ್ರತ್ಯಯವ ಮಾಡಬೇಕೆಂತಲೂ - ಹೇಳಿದರು.<br>ನಮಗೆ ತೋರುವ ಪಕ್ಷವೆಂದರೆ - ಭೂತಕಾಲದಲ್ಲಿ ದಕಾರಾಗಮವೂ - ವರ್ತಮಾನ ಭವಿಷ್ಯತ್ಕಾಲಗಳೆರಡರಲ್ಲಿಯೂ ಉವಾಗಮವೂ ಬರುತ್ತದೆ - ಆದರೆ ಮಾಡುತ್ತಿರುವ ಎಂಬರೂಪವು ಮಾಡುತ್ತಿದ್ದನು - ಮಾಡುತ್ತಿದ್ದಾನೆ - ಎಂಬರೂಪದ ಹಾಗೆ ನಾಲ್ಕನೆಯ ಪ್ರಕರಣದ - ೫೮ನೇ ಸೂತ್ರ ಪ್ರಕಾರ ಹೇಳಲ್ಪಟ್ಟ ವಿಶೇಷದಲ್ಲಿ - ಅಲ್ ಎಂಬಾಗಮ ಬರುತ್ತದೆ. |

No. 12

ಶ್ರೀರಂಗಪಟ್ಣ ಕೃಷ್ಣಮಾಚಾರ್ಯನು ಆಧುನಿಕ ದೇಶೀಯ ಕನ್ನಡ ವ್ಯಾಕರಣಗಾರರಲ್ಲಿ ಮೊದಲಿಗನು. 1838ರಲ್ಲಿ ಅಚ್ಚಾದ ಅವನ ವ್ಯಾಕರಣದ ಒಂದು ಪುಟ.

kâvêr-i, *saffron, also the river Cavery* (from its muddy colour): assumed root 'kava,' *to colour.* Greek name of the same river, χάβηρος.

Possibly this word may be of true Sanscrit origin. I may suggest, however, the possibility of the origin of the name of the river Kâvêri, from the Drâvidian 'kâvi,' *red ochre,* and 'êr-u,' Tel., *a river,* or 'êr-i,' Tam., *a sheet of water.*

kûcha-h, *a female breast, especially that of a young unmarried woman:* derivation 'ku,' *to sound.* There is a much more natural derivation in the Tamil word 'kûcha-m,' *bashfulness,* a verbal noun from 'kûś-u,' *to be shy, to be ticklish.*

kûj-a, *to utter a cry, as a bird.* Probably this word is mimetic; we may compare it, however, with corresponding Drâvidian words, which also appear to be mimetic; viz., Tam. 'kû-vu;' Tel. 'kû-au;' Can. 'kû-gu;' each of which is derived from a Drâvidian root, 'kû,' *an inarticulate cry.* Compare also our English 'coo.'

kuṭi, *a house;* related words 'kuṭiram,' also 'kuṭerah,' *a cottage, a hut,* and 'kuṭumba,' *a family:* assumed derivation 'kuṭa,' *crooked.* There cannot be any doubt of the derivation of 'kuṭa-m,' *a water pot,* from 'kuṭa,' *crooked;* but the other words are probably of Drâvidian origin. In Tamil 'kuḍi' means *a house, a habitation,* also *an inhabitant, a farmer;* related Tamil words are 'kuḍil' and 'kuḍiśei,' *a hut:* a provincial form of the latter of which is 'kuchu.' In Telugu and Canarese 'guḍi' means *a temple,* and 'guḍishi' or 'guḍise,' *a hut.* In Hindustani 'guṭi' means *a house.* By all native grammarians, these words are considered to be of pure Drâvidian origin; and the existence of the same root in all the Finnish tongues favours the supposition that it was not borrowed by the Drâvidian languages from the Sanscrit, but by the Sanscrit from those languages. Compare the Finnish 'kota,' Tscheremiss 'kuda,' Mordwin 'kudo,' Ostiak 'chot,'—each signifying *a house.* Was the Saxon 'cot' also derived from this same Scythian or Finnish source?

kuṇi, kûṇi, } *having a crooked or withered arm.* Compare this with 'kûṇ,' Tam., *crook-back;* and especially with 'kuṇ-i,' Tam. *to stoop,* an undoubted Drâvidian root, from which it is probable that both the Tam. 'kûṇ,' and the Sanscrit 'kuṇi' or 'kûṇi' have been derived.

kûla, *a pond or pool:* assumed derivation 'kûl-a,' *to cover.* Com-

ಡಾ. ರಾಬರ್ಟ್ ಕಾಲ್ಡ್ವೆಲ್ ಇವನ ದ್ರಾವಿಡ ಭಾಷಾಶಾಸ್ತ್ರವು 1856 ರಲ್ಲಿ ಮೊದಲಬಾರಿಗೆ ಮುದ್ರಣವಾದುದರ ಒಂದು ಪುಟ.



ಭಾರತದ ಗೆಜೆಟಿಯೆರುಗಳನ್ನು ಬರೆದ
ಸರ್ ವಿಲಿಯಮ್ ವಿಲ್ಸನ್ ಹಂಟರ್



ಕನ್ನಡದ ಕಣ್ಮಣಿ—ವೀರ ಕನ್ನಡಿಗ
ರೆವರೆಂಡ್ ಎಫ್. ಕಿಟೆಲ್ ಮತ್ತು ಅವರ ಪತ್ನಿ

ಪ್ರವಾಸಗ್ರಂಥವು 1698 ರಲ್ಲಿ ಪ್ರಕಟವಾಯಿತು. ಇಟಲಿಯ Gemelli Cereri ಇವನು 1695 ರಲ್ಲಿ ಸೋಂಡಾದಲ್ಲಿ ಬಂದಿಳಿದು ವಿಜಯನಗರ ಮತ್ತು ಪಶ್ಚಿಮ ಕರಾವಳೀ ಸೀಮೆಗಳಲ್ಲಿ ಸಂಚರಿಸಿದನು. ಮಲೆಯಾಳದಲ್ಲಿದ್ದ C. V. Jacobus ಇವನು ಬಿದನೂರು ರಾಜ್ಯವನ್ನು ಕುರಿತು ಬಹು ಪ್ರಶಂಸಾಪೂರ್ವಕವಾಗಿ ಬರೆದಿದ್ದಾನೆ:—

"The Bedanore prince is much more magnificent and powerful than those of Malabar. The kingdom produces many peculiar commodities and sandalwood."

ಬಿದನೂರಿನ ರಾಣಿ ಚೆನ್ನಮ್ಮನ ಕಾಲದಿಂದ (ಕ್ರಿ. ಶ. 1671–1697) ಆ ರಾಜ್ಯದ ಚರಿತ್ರೆಯು ಪಾಶ್ಚಾತ್ಯರಿಂದ ಸರಿಯಾಗಿ ಬರೆಯಲ್ಪಟ್ಟಿದೆ. ಅಲ್ಲಿ ಹಲವು ಪೋರ್ಚುಗಲ್ ವ್ಯಾಪಾರಿಗಳೂ ಕ್ರೈಸ್ತಮತ ಪ್ರಚಾರಕರೂ ಇದ್ದರು. ಕ್ರಿ. ಶ. 1740 ರ ಕಾಲಕ್ಕೆ ಕರ್ಣಾಟಕದ ಎಲ್ಲಾ ಭಾಗಗಳಲ್ಲೂ ಐರೋಪ್ಯಾ 'ಫಾದರಿ'ಗಳು ನೆಲೆಸಿ ದೇಶೀಯರನ್ನು ತಮ್ಮ ಮತಕ್ಕೆ ಒಲಿಸಲು ಪ್ರಯತ್ನಿಸುತ್ತಿದ್ದರು. ದೇಶೀಯ ಜನರೊಡನೆ ಬೆರೆತು ಕನ್ನಡ ಮತ್ತಿತರ ಭಾಷೆಗಳನ್ನು ಕಲಿತರು. ಬೈಬಲ್ ಧರ್ಮಗ್ರಂಥವನ್ನು ವೇದಗಳಿಗೆ ಸಮಾನವಾದುದೆಂದು ಪ್ರತಿಪಾದಿಸಲಾರಂಭಿಸಿದರು. ಅಷ್ಟೇ ಅಲ್ಲ, ಕರಾವಳೀ ಸೀಮೆಗಳಲ್ಲಿ ಆರಂಭಗೊಂಡು ಹಲವೆಡೆ ಕ್ರೈಸ್ತಗುಡಿಗಳನ್ನೂ ಕಟ್ಟಲಾರಂಭಿಸಿದರು. ಕಾಲಕ್ರಮೇಣವಾಗಿ ಅವರು ನೆಲೆಸಿದ ಊರುಗಳಲ್ಲಿ ಅಲ್ಲಿದ್ದ ಎಲ್ಲಾ ಮನೆಗಳ ಎತ್ತರವನ್ನು ಮೀರಿ ತ್ರಿಕೋನಾಕಾರವಾದ ಮುಖಮಂಟಪದಿಂದ ಕೂಡಿದ ಮತ್ತು ಆಕರ್ಷಕವಾದ ಗುಡಿಗಳನ್ನು ನಿಲ್ಲಿಸಿದರು. ಆಯಾ ಭಾಗಗಳಿಗೆ ಬೇಕಾದಂತೆ ಕನ್ನಡ, ಕೊಂಕಣಿ, ತುಳು, ಮರಾಠಿ, ಪರ್ಷಿಯನ್ ಅಥವಾ ಇತರ ಸ್ಥಳೀಯ ಭಾಷೆಗಳನ್ನೂ ಕಲಿತರು.

## ೬. ದೇಶೀಯ ಪ್ರಮುಖರು ಕ್ರೈಸ್ತರಿಗೆ ಇಲ್ಲಿ ಆಶ್ರಯವನ್ನಿತ್ತರು:—

ಹಿಂದೂಸ್ಥಾನದ ಇತರ ಪ್ರಾಂತಗಳಲ್ಲಿ ಹೇಗೋ ಹಾಗೆಯೇ ಕರ್ಣಾಟಕದ ಮಲೆನಾಡು, ಒಳನಾಡು ಮತ್ತು ಬಯಲ್ನಾಡುಗಳಲ್ಲಿ ಯೂರೋಪಿನಿಂದ ಬಂದ ಕ್ರೈಸ್ತ ಮತೋಪದೇಶಕರು ತಮ್ಮ ಮತಪ್ರಚಾರ ಶಿಬಿರಗಳನ್ನು ತೆರೆದರು. ಸ್ಥಳೀಯ ಜನರೊಡನೆ ಸಂಪರ್ಕವನ್ನು ಬೆಳೆಸಿದರು. ಅವರಲ್ಲಿ ಪ್ರಮುಖರಾದ ಧರ್ಮಗುರುಗಳು ಸ್ಥಳೀಯ ರಾಜರ ಅಥವಾ ನಾಯಕರ ಮೇಲೆ ತಮ್ಮ ಪ್ರಭಾವವನ್ನು ಬೀರಿ ಅವರ ವಿಶ್ವಾಸವನ್ನು ಗಳಿಸಿ ಅವರಿಂದ ತಮಗೆ ಬೇಕಾದ ಜಮೀನು ಅಥವಾ ದ್ರವ್ಯಸಹಾಯವನ್ನು ಪಡೆಯುತಿದ್ದರು, ಹೀಗೆ ಎಲ್ಲಾ ಕಡೆಗಳಲ್ಲೂ ತಮ್ಮ ವರ್ಚಸ್ಸನ್ನು ಬೀರುತ್ತಾ ತಮ್ಮ ಮತಪ್ರಚಾರ ಕಾರ್ಯವನ್ನು ಬಹು ವಿನಯದಿಂದಲೇ ನಡೆಸಿದರು.

ಹೈದರಾಲಿಯು ಸುಮಾರು ಕ್ರಿ. ಶ. 1772 ರಲ್ಲಿ ಮಂಗಳೂರಿನಲ್ಲಿ 9,000 ಕೇಥೋಲಿಕ್ ಕ್ರೈಸ್ತರಿಗೆ ಆಶ್ರಯವಿತ್ತನು. ಸುಮಾರು 1775 ರ ಕಾಲಕ್ಕೆ ಶ್ರೀರಂಗಪಟ್ಟಣ, ಸತ್ಯಮಂಗಲ, ಪಾಲ್ಘಳ್ಳಿ, ನಾಗರ, ಶಿರಾ, ತುಮಕೂರು ಮೊದಲಾದೆಡೆ

ಗಳಲ್ಲಿ ಕ್ರೈಸ್ತಗುಡಿಗಳು ಏರಿದುವು, ಇಷ್ಟರಲ್ಲಿ ಆಂಧ್ರಪ್ರದೇಶದ ಕಡೆಯಿಂದ ಬಂದ ಕ್ರೈಸ್ತರು ಹೊಸಕೋಟೆ, ಆನೆಕಲ್ಲು, ಕೋಲಾರ, ಚಿಕ್ಕಬಳ್ಳಾಪುರ, ಧಾರವಾಡ ಮೊದಲಾದ ಕಡೆಗಳಲ್ಲಿ ನೆಲೆಸಿದರು. ಕ್ರಿ.ಶ. 1777 ರ ಕಾಲದಲ್ಲಿ The Karnataka Mission ಇದರ ಪ್ರಚಾರ ಕೇಂದ್ರವು ಪಾಂಡಿಚೇರಿಯಲ್ಲಿತ್ತು.

ಕ್ರಿ. ಶ. 1790 ರಿಂದೀಚೆಗೆ ಟಿಪ್ಪುಸುಲ್ತಾನನು ಮೈಸೂರಿನಲ್ಲಿ ಕ್ರೈಸ್ತರಿಗೆ ಆಶ್ರಯವಿತ್ತನು. ಕೊಡಗಿನ ದೊಡ್ಡ ವೀರರಾಜನು 1798 ರಲ್ಲಿ ವೀರರಾಜಪೇಟೆಯಲ್ಲಿ ಕ್ರೈಸ್ತಮತಕ್ಕೆ ಸೇರಿದವರಿಗೆ ಜಮೀನು ಮತ್ತು ಹಣವನ್ನು ಹಂಚಿ ಪ್ರೋತ್ಸಾಹಿಸಿದನು. ಟಿಪ್ಪುವಿನ ಪತನಾನಂತರ Col. Wellesley ಇವನು ಮೈಸೂರಿನಲ್ಲಿ ಕ್ರೈಸ್ತಗುಡಿಯೊಂದನ್ನು ಕ್ರಿ. ಶ. 1800 ರಲ್ಲಿ ಕಟ್ಟಿಸಿದನು. ಅಲ್ಲಿ ಕ್ರೈಸ್ತರ ಚಟುವಟಿಕೆಗಳನ್ನು ಹೆಚ್ಚಿಸಲು ಫ್ರೆಂಚ್ ಧರ್ಮಗುರು Abbe Dubois ಇವನನ್ನು ಪಾಂಡಿಚೇರಿಯಿಂದ ಕರೆಸಿ ಶ್ರೀರಂಗಪಟ್ಟಣದಲ್ಲಿರಿಸಿದನು. ಇದೇ ವೇಳೆಗೆ ಹೈದರಾಬಾದು ಕನ್ನಡ ಜಿಲ್ಲೆಗಳಲ್ಲೂ ಹಾವೇರಿ, ಗದಗ, ಲಕ್ಷ್ಮೇಶ್ವರ, ಬಿಜಾಪುರ, ಕಾರವಾರ, ನಿಪಾನಿ, ಬೆಳಗಾವಿ, ಉಡುಪಿ, ಕುಂದಾಪುರ ಇತ್ಯಾದಿ ಸೀಮೆಗಳಲ್ಲೂ ಕ್ರೈಸ್ತರ ಸಂಖ್ಯೆ ಏರಿತು. ಕ್ರಿ. ಶ. 1800 ರಿಂದ ಪಾಂಡಿಚೇರಿಯಲ್ಲಿದ್ದ Kannada Mission ಇದರ ಖಚೇರಿಯನ್ನು ಶ್ರೀರಂಗಪಟ್ಟಣಕ್ಕೆ ವರ್ಗಾಯಿಸಲಾಯಿತು.

ಕ್ರಿ. ಶ. 17 ಮತ್ತು 18 ನೇ ಶತಮಾನದಲ್ಲಿ ಯೂರೋಪಿನಿಂದ ಬಂದ ಕ್ರೈಸ್ತಮತ ಪ್ರಚಾರಕರು ಈ ದೇಶದ ಉದ್ದಗಲಕ್ಕೂ ಸಂಚರಿಸುತಿದ್ದಾಗ ಜನರು ಬಹುಮಟ್ಟಿಗೆ ಹಿಂದುಳಿದುದನ್ನು ಕಂಡರು. ಆದುದರಿಂದ ಅವರು ತಮ್ಮ ಧರ್ಮಬೋಧೆಯೊಂದಿಗೆ ಧರ್ಮಕಾರ್ಯವನ್ನೂ ನಡೆಸಲು ಅಲ್ಲಲ್ಲಿ ಸಮಾಜಸೇವಾ ಶಿಬಿರಗಳನ್ನು ತೆರೆದರು. ಕ್ರೈಸ್ತಧರ್ಮವನ್ನು ಇತರ ಧರ್ಮಗಳೊಡನೆ ಸಮನ್ವಯಗೊಳಿಸಿ ಅವಿದ್ಯಾವಂತರಾದ ಜನಕ್ಕೆ ವಿಚಾರಜ್ಞಾನವನ್ನೀಯುತ್ತಿದ್ದರು. ಮತಾಂತರಗೊಂಡ ಬಡ ಭಾರತೀಯರಿಗೆ ಎಲ್ಲಾ ಸೌಕರ್ಯಗಳನ್ನು ಅನ್ನ, ಬಟ್ಟೆ, ವಿದ್ಯೆ ಮೊದಲಾದುವುಗಳಾಗಿ ಇತ್ತು ಅವರನ್ನು ಮೇಲೆತ್ತಿದರು. ಇತರರಿಗೂ ಸಾಕಷ್ಟು ಸಹಾಯವನ್ನು ನೀಡಿ ಅವರನ್ನು ಆಧುನಿಕ ರೀತಿಯಲ್ಲಿ ಮುಂದೊಯ್ಯಲು ಪ್ರಯತ್ನಿಸಿದರು. ಈ ರೀತಿಯಾಗಿ ಹಿಂದೂಸ್ಥಾನದಲ್ಲಿ ಅದೊಂದು ಬಗೆಯ ಸಮಾಜ ವಿಕಾಸ ಕಾರ್ಯವು ನಡೆಯಿತು; ಕ್ರೈಸ್ತರ ಸಂಖ್ಯೆಯು ಹೆಚ್ಚು ಇದ್ದ ಈ ದೇಶದ ಪ್ರಮುಖ ಪ್ರಾಂತಗಳೂ ಸೀಮೆಗಳೂ ನವ ಜಾಗೃತಿಯನ್ನು ಹೊಂದಿ ಮುಂದುವರಿದುವು. ಆಧುನಿಕ ವಿದ್ಯೆಯನ್ನು ಪಡೆದ ನೂರಾರು ಭಾರತೀಯರು ಬಂಗಾಳ. ಮದ್ರಾಸು, ಆಸ್ಸಾಮ್, ಕೇರಳ, ಕೊಂಕಣ ಮೊದಲಾದೆಡೆಗಳಲ್ಲಿ ಕ್ರೈಸ್ತಮತಾವಲಂಬಿಗಳಾದರು. "For nearly a century the enlightened Hindus were dazzled by the glare of the Western civilization," ಎಂಬುದಾಗಿ ಅಂದಾಗುತ್ತಿದ್ದ ಸಮಾಜಪರಿವರ್ತನೆಯನ್ನು ಕುರಿತು ವರ್ಣಿಸಲಾಗಿದೆ.

## ೭. ಫಾ. ನೊರೊನ್ಹಾ, ಡುಬೊಯಿ, ಸ್ವಾರ್ಟ್ಸ್ ಮೊದಲಾದವರು :—

ಕ್ರಿ.ಶ. 18 ನೇ ಶತಮಾನದಲ್ಲಿ ಕರ್ಣಾಟಕದಲ್ಲಿ ಇದ್ದ ಹಲವು ಕ್ರೈಸ್ತಧರ್ಮ ಗುರುಗಳು ಈ ನಾಡಿನ ಚರಿತ್ರೆ, ವಿದ್ಯೆ, ಸಮಾಜಸೇವೆ ಇತ್ಯಾದಿಗಳಲ್ಲಿ ತಮ್ಮ ಪ್ರಭಾವ ವನ್ನು ಬೀರಿದ್ದಾರೆ. ಭಾರತದ ಇತರ ಕಡೆಗಳಲ್ಲಿ ಹೇಗೋ ಹಾಗೆಯೇ ಇಲ್ಲಿಯೂ ನಿಷ್ಕಾಮಂತರೂ ತತ್ವಜ್ಞಾನಿಗಳೂ ಆದ ಕ್ರೈಸ್ತಗುರುಗಳು ಇದ್ದರು. ಅವರೆಡೆಯಲ್ಲಿ ಕೆಲವು ಧರ್ಮದ್ರೋಹಿಗಳೂ ರಾಜಕೀಯ ಸಂದರ್ಭ ಸಾಧಕರೂ ಇದ್ದರು. ಹೇಗೂ ಇವರೆಲ್ಲರಿಂದಲೂ ಮಿಶ್ರಿತವಾದ ಅಂದಿನ ಪಾಶ್ಚಾತ್ಯ ವಾಙ್ಮಯವು ಈ ದೇಶದ ಚರಿತ್ರೆ ಯನ್ನು ಬೇರೊಂದು ರೀತಿಯಲ್ಲಿ ಹರಿಯಿಸಲು ಸಹಾಯಕವಾಗಿತ್ತು.

ಗೋವಾ ಮತ್ತು ಪೂರ್ವ ಕರಾವಳೀ ಸೀಮೆಯಲ್ಲಿ ಕ್ರಿ.ಶ. 1753 ರಿಂದ ಸುಮಾರು 1762ರವರೆಗೆ ಸಂಚರಿಸಿದ್ದ Fr. Antonio de Noronha ಇವನು ನಿಷ್ಕಾಮಂತನಾದ ಕ್ರೈಸ್ತಗುರು ಆಗಿರಲಿಲ್ಲ. ಇವನು ಬಹು ಸಮಯವನ್ನು ರಾಜ ಕೀಯದಲ್ಲಿಯೇ ವಿನಿಯೋಗಿಸಿದನು. ಗೋವಾದಲ್ಲಿ 1720 ರಲ್ಲಿ ಜನಿಸಿದ ಇವನು 1746 ರಲ್ಲಿ ಕ್ರೈಸ್ತ ದೀಕ್ಷೆಯನ್ನು ಹೊಂದಿದನು. ಫ್ರೆಂಚ್ ರಾಜಕಾರಣಿ ಡೂಪ್ಲೆಯ ಸಹಾಯವನ್ನು ಪಡೆದು ಇಂಗ್ಲಿಷರಿಗೂ ಫ್ರೆಂಚರಿಗೂ ಇದ್ದ ವೈಷಮ್ಯಕ್ಕೆ ಇನ್ನಷ್ಟು ನೀರೆರೆದು ಹೆಚ್ಚಿಸಲು ಸಹಾಯಕನಾದನು. 1752ರಲ್ಲಿ ಪಾಂಡಿಚೇರಿಗೆ ಬಂದು ಅಲ್ಲಿಂದ ಮರಾಠರು, ಹೈದರಾಲಿ ಮತ್ತು ನೈಜಾಮರೊಳಗೆ ಸಖ್ಯವನ್ನು ಬೆಳಸಲು ಪ್ರಯತ್ನಿಸಿ ದನು. ೨೦,೦೦೦ ಕುದುರೆಗಳ ಸೇನಾಬಲದ ಅಧಿಕಾರವನ್ನು ಹೊಂದಿದ್ದ ಇವನು ಹೈದ-ರಾಲಿಗೆ ವಿರೋಧವಾಗಿ ಮರಾಠ ಗೋಪಾಲ ಹರಿಯೊಡನೆ ಸೇರಿದಲ್ಲದೆ ಹೈದರಾಲಿ ಯನ್ನು ಎದುರಿಸಿದ್ದ ಮೈಸೂರು ಖಂಡೇರಾಯನಿಗೆ 6,000 ಕುದುರೆಗಳನ್ನೂ ಹಲವು ಸೈನಿಕರನ್ನೂ ಕಳುಹಿಸಿಕೊಟ್ಟನು. ಇಂಥಾ "ಧರ್ಮಗುರು" ಗಳೂ ಆ ಕಾಲದಲ್ಲಿ ಅಲ್ಲಲ್ಲಿ ಇದ್ದರು ಎಂಬುದಕ್ಕೆ ಇದೊಂದು ನಿದರ್ಶನವಾಗಿದೆ.

ಇದಕ್ಕೆ ವ್ಯತಿರಿಕ್ತವಾಗಿ Col. Wellesley ಇವನಿಂದ ಪ್ರೋತ್ಸಾಹಿಸಲ್ಪಟ್ಟ Abbe Dubois ಇವನು ಕ್ರಿ.ಶ. 1792 ರಿಂದ 1823 ರ ವರೆಗೆ ಪಾಂಡಿಚೇರಿ ಮತ್ತು ಮೈಸೂರಿನಲ್ಲಿ ಇದ್ದನು. ಇವನು ಫ್ರಾನ್ಸಿನ ವಿಪ್ಲವದ ಕಾಲದಲ್ಲಿ ಅಲ್ಲಿಂದ ತಲೆತಪ್ಪಿಸಿಕೊಂಡು ಓಡಿಬಂದನೆಂದು ಹೇಳಲಾಗಿತ್ತು. ಇತಿಹಾಸಕಾರ ಮತ್ತು ರಾಜ ಕಾರಿಣಿ Col. Mark Wilks ಇವನಿಗೆ Abbe Dubois ಇವನ ಪರಿಚಯ ವಿತ್ತು. ಈ ಧರ್ಮಗುರುವು ತಾನು ಕೈಗೊಂಡ ಸಮಾಜಸೇವೆಯಲ್ಲದೆ ಈ ದೇಶದ ಜನರ ರೀತಿ, ನೀತಿ, ಕಟ್ಟು, ಕಟ್ಟಳೆ, ಜೀವನಕ್ರಮ, ಬಡತನ, ಅವಿದ್ಯೆ ಇತ್ಯಾದಿಗಳನ್ನು ಕುರಿತು ಸಹಸ್ರಾರು ಪುಟಗಳ ಪ್ರವಾಸ ವರದಿಯನ್ನು ಫ್ರೆಂಚ್ ಭಾಷೆಯಲ್ಲಿ ಬರೆದನು. ಜನರ ಮೂಢನಂಬಿಕೆಗಳು, ಸಿಷಾಸೇವನೆ ಮೊದಲಾದುವುಗಳ ಬಗೆಯಾಗಿಯೂ ಬಹು ದೀರ್ಘವಾಗಿ ಪ್ರಸ್ತಾಪಿಸಿದ್ದಾನೆ. ಹೇಗೂ ಇದೊಂದು ಪ್ರಸಿದ್ಧ ಪ್ರವಾಸ ಗ್ರಂಥ ವಾಗಿ ಆ ಕಾಲದಲ್ಲಿ ಎಲ್ಲೆಲ್ಲೂ ಪ್ರಚಾರವಿತ್ತು. ಅವನು ಹೇಳಿದ ಹಲವು ಪ್ರಸಂಗಗಳಲ್ಲಿ ಇದೊಂದು ಸ್ವಾರಸ್ಯವಿದೆ.

ವಿಜಯನಗರದ ಕೃಷ್ಣದೇವರಾಯನನ್ನು ಒಮ್ಮೆ ತನ್ನ ಮಂತ್ರಿಯನ್ನು " ಜನ

ಮರುಳೋ ಜಾತ್ರೆ ಮರುಳೋ" ಎಂದು ಕೇಳಿದನಂತೆ. ಆ ಮಂತ್ರಿಯು ಅದಕ್ಕೆ ಉತ್ತರವನ್ನು ಆಮೇಲೆ ಹೇಳುವೆನೆಂದು ತನ್ನ ಮನೆಗೆ ಹಿಂದಿರುಗಿದನಂತೆ. ಅಲ್ಲಿ ತನ್ನ ಸೇವಕನೊಬ್ಬನನ್ನು ಒರ್ವ ಸನ್ಯಾಸಿಯ ವೇಷವನ್ನು ಹಾಕಿಸಿ ಒಂದು ಗವಿಯೊಳಗೆ ಕೂರಿಸಿದನಂತೆ. ಅನಂತರ ಆ ಮಂತ್ರಿಯು ರಾಜನ ಬಳಿಗೆ ಹೋಗಿ ಸಮಿಾಪದ ಕಾಡಿನಲ್ಲಿ ಬಹು ದೊಡ್ಡ ಒರ್ವ ಸನ್ಯಾಸಿ ಇದ್ದಾನೆಂದು ತಿಳಿಸಿದನಂತೆ. ಆಗ ಕೃಷ್ಣದೇವರಾಯನು ಅವನ ದರ್ಶನವನ್ನು ಪಡೆಯಲೆಂದು ತನ್ನ ಒಡ್ಡೋಲಗದ ಸಮೇತವಾಗಿ ಆ ಗವಿಯ ಬಳಿಗೆ ಹೋಗಿ ಆ "ಸನ್ಯಾಸಿ"ಯ ಎದುರಿಗೆ ಕೈಕಟ್ಟಿ ನಿಂತನಂತೆ. ರಾಜನನ್ನು ಅನುಸರಿಸಿ ನೂರಾರು ಜನರೂ ಆ ವಿಚಿತ್ರ ಸನ್ಯಾಸಿಯ ದರ್ಶನವನ್ನೂ ಆಶೀರ್ವಾದವನ್ನೂ ಪಡೆದುದಲ್ಲದೆ ಆ "ಸನ್ಯಾಸಿ"ಯ ತಲೆಕೂದಲೊಂದನ್ನು ತಂದು ರಾಜನು ತನ್ನ ಕಡೇ ದಿನಗಳವರೆಗೂ ಬಹು ಭಕ್ತಿಯಿಂದ ಇಟ್ಟುಕೊಂಡನಂತೆ! ಇಂಥಾ ಸ್ವಾರಸ್ಯವಾದ ವಿಚಾರಗಳನ್ನು ಕುರಿತು ಸಾಕಷ್ಟು ಬರೆದಿದ್ದಾನೆ.

London Mission Society ಇದಕ್ಕೆ ಸೇರಿದ್ದ Fr. Fredrich Schwartz ಇವನು ಕ್ರಿ.ಶ. 1750 ರಲ್ಲಿ ಈ ದೇಶಕ್ಕೆ ಬಂದು ಬಹುಕಾಲ ತಂಜಾವೂರಿನ ರಾಜಪುತ್ರನ ಸಾಕುತಂದೆಯಂತೆ ಇದ್ದು ಸರ್ವರ ಪ್ರೀತಿ ಮನ್ನಣೆಗಳಿಗೆ ಪಾತ್ರನಾದನು. ಇವನು ಜರ್ಮನಿಯ ಹಾಲ್ಲ್ ವಿದ್ಯಾಪೀಠದಲ್ಲಿ ಶಿಕ್ಷಣವನ್ನು ಪಡೆದ ಸುಸಂಸ್ಕೃತ ಧರ್ಮಗುರುವೆಂದೆನಿಸಿದ್ದನು. ಇವನು ತಂಜಾವೂರು ಮತ್ತು ಶ್ರೀರಂಗಪಟ್ಟದ ಮಧ್ಯೆ ರಾಜಕೀಯವಾಗಿಯೂ ವ್ಯವಹರಿಸುತ್ತಿದ್ದನು. ಇಂಥಾ ಕ್ರೈಸ್ತ ಗುರುಗಳ ಮೂಲಕವಾಗಿ ಅಂದಿನ ಬ್ರಿಟಿಷ್ ಮತ್ತು ಫ್ರೆಂಚ್ ರಾಜಕಾರಿಣಿಗಳು ಸ್ಥಳೀಯ ಪ್ರಮುಖರ ಗುಪ್ತವಿಚಾರಗಳನ್ನೂ ತಿಳಿದುಕೊಳ್ಳುತ್ತಿದ್ದರು; ಅಲ್ಲದೆ ಅದಕ್ಕಾಗಿಯೇ ಅವರನ್ನು ಹಲವು ಸಂದರ್ಭಗಳಲ್ಲಿ ಉಪಯೋಗಿಸಿದ್ದರು.

ಹೈದರಾಲಿಗೆ Fr. F. Schwartz ಇವನಲ್ಲಿ ವಿಶೇಷ ಅಭಿಮಾನ ಗೌರವಗಳಿದ್ದುವು. "Let the venerable Padree go everywhere without any hindrance since he is a holy man," ಎಂಬುದಾಗಿ ಅವನನ್ನು ತನ್ನ ರಾಜ್ಯದ ಎಲ್ಲೆಡೆಯೂ ಸಂಚರಿಸಲು ಬಿಡಬಹುದೆಂದು ತನ್ನ ಜನರಿಗೆ ಆಜ್ಞಾಪಿಸಿದ್ದನು. ಈ ಕ್ರೈಸ್ತಗುರುವಿನ ಸೇವಾಭಾವವನ್ನೂ ವಿನೀತಗುಣವನ್ನೂ ಕಂಡು ಜನರು ಮೆಚ್ಚಿದರು. ನಲ್ವತ್ತು ವರ್ಷಗಳ ಕಾಲ ಅವನು ಈ ದೇಶದಲ್ಲಿದ್ದು ಪಾಠಶಾಲೆಗಳನ್ನೂ ಅನಾಥಾಲಯಗಳನ್ನೂ ನಡೆಸಿದನು. ಕನ್ನಡ, ತಮಿಳು, ಪರ್ಷಿಯನ್ ಮೊದಲಾದ ಭಾಷೆಗಳಲ್ಲಿ ನಿಷ್ಣಾತನೆನಿಸಿದ್ದನು. ಜನರಿಗೆ ಧರ್ಮಬೋಧೆ ಮತ್ತು ಜ್ಞಾನಬೋಧೆಗಳನ್ನು ಮಾಡುತ್ತಾ ದಲಿತರನ್ನು ಉಪಚರಿಸುತ್ತಾ ತನ್ನ ಕಾಲವನ್ನು ಕಳೆದು ಕ್ರಿ.ಶ. 1799 ರಲ್ಲಿ ಮೃತನಾದನು. ಅವನ ಸಮಾಧಿಯಲ್ಲಿರಿಸಲ್ಪಟ್ಟ ಕಲ್ಲಿನಲ್ಲಿ ಅವನ ವಿಶಾಲ ಮನೋಭಾವವನ್ನು ಕುರಿತು ಹೀಗೆಂದು ಬರೆಯಲ್ಪಟ್ಟಿದೆ;—

"His unspotted probity and purity of life alike commanded the reverence of the Christian; Muhammaden and Hindu……"

೮. ಕರ್ಣಾಟಕದಲ್ಲಿ ವಿವಿಧ ಕ್ರೈಸ್ತ ಮತಪ್ರಚಾರ ಸಂಸ್ಥೆಗಳು :—

ಕಳೆದ ಶತಮಾನದಲ್ಲಿ ಕರ್ಣಾಟಕದ ಬೇರೆ ಬೇರೆ ಕೇಂದ್ರಗಳಲ್ಲಿ ವಿವಿಧ ಕ್ರೈಸ್ತ ಮತಪ್ರಚಾರ ಶಾಖೆಗಳು ಹುಟ್ಟಿಕೊಂಡುವು. ಕ್ರಿ.ಶ, 1817 ರಲ್ಲಿ ಆ ವರೆಗೂ ಇದ್ದ Karnataka Mission ಇದರ ಜತೆಗೆ Propagation Society ಎಂಬುದು ಸ್ಥಾಪನೆಯಾಯಿತು. London Mission Society ಇದರ ಶಾಖೆಯನ್ನು Rev. Laidler ಮತ್ತು Rev. Forbes ಇವರು ಬೆಂಗಳೂರಿನಲ್ಲಿ 1820 ರಲ್ಲಿ ಸ್ಥಾಪಿಸಿದರು; ಆದರೆ ಅದಕ್ಕಿಂತ ಹತ್ತು ವರ್ಷಗಳ ಹಿಂದೆ Rev-John Hands ಇವನು ಅದರ ಶಾಖೆಯನ್ನು ಬಳ್ಳಾರಿಯಲ್ಲಿ ತೆರೆದಿದ್ದನು. ಸ್ವಿಟ್ಸರ್ಲೆಂಡಿನ Basel Evengelical Mission ಇದರ ಶಾಖೆಯನ್ನು 1834 ರಲ್ಲಿ ಮಂಗಳೂರಿನಲ್ಲಿ ಬಂದಿಳಿದ Rev. Hebich ಇವನು ಸ್ಥಾಪಿಸಿದನು ; ಕೂಡಲೇ ಅದರ ಪ್ರಚಾರ ಕೇಂದ್ರಗಳನ್ನು ಹೊನ್ನಾವರ ಮತ್ತು ಧಾರವಾಡದಲ್ಲೂ ತೆರೆಯಲಾಯಿತು.

ಕ್ರಿ.ಶ. 1834 ರಲ್ಲಿ ಸ್ಥಾಪನೆಯಾದ ಜರ್ಮನಿಯ Wesleyan Mission Society ಇದರ ಶಾಖೆಯು Rev. Hoole ಮತ್ತು Rev. John Garrett ಇವರ ಪ್ರಯತ್ನದಿಂದ ಮೈಸೂರಿನಲ್ಲಿ ಸ್ಥಾಪನೆಯಾಯಿತು. ಅದರ ಇನ್ನೊಂದು ಶಾಖೆಯು ಬೆಂಗಳೂರಿನಲ್ಲಿಯೂ ತೆರೆಯಲ್ಪಟ್ಟಿತು. ಫ್ರೆಂಚ್ ಧರ್ಮಗುರುಗಳು ಕರ್ಣಾಟಕದಲ್ಲಿ Jesuit Mission ಇದನ್ನು ಸ್ಥಾಪಿಸಿದರು. ಜರ್ಮನಿಯ Leipzig Evengelical Mission ಮತ್ತು Lutheran Mission ಇದರ ಶಾಖೆಗಳೂ Rev. H. Mylins ಮತ್ತಿತರರ ಪ್ರಯತ್ನದಿಂದ ಕರ್ಣಾಟಕದ ಕೆಲವೆಡೆಗಳಲ್ಲಿ ಸ್ಥಾಪಿತವಾದುವು. 1844 ರಿಂದ Karnatic Mission ಇದರ ಶಾಖೆಗಳು ವೈನಾಡು, ಕೊಡಗು, ಹೊಸೂರು ಮತ್ತು ಕೊಳ್ಳೆಗಾಲಗಳಲ್ಲೂ ತೆರೆಯಲ್ಪಟ್ಟುವು.

ಮತಪ್ರಚಾರವೇ ಈ ಎಲ್ಲಾ ಕ್ರೈಸ್ತ ಸಂಸ್ಥೆಗಳ ಗುರಿಯಾಗಿದ್ದಿತ್ತಾದರೂ ಅವರು ನಮ್ಮ ಒರಟು ಸ್ವಭಾವದ ಜನಕ್ಕೆ ನಯ, ವಿನಯ, ದಯೆ, ಧರ್ಮ ಇತ್ಯಾದಿಗಳನ್ನು ಬಾಯಲ್ಲಿ ಮಾತ್ರವಲ್ಲ, ಕಾರ್ಯತಃ ಹೇಗೆ ತೋರಿಸಬೇಕೆಂಬುದನ್ನು ಕಲಿಸಿದರು. ಸಮಾಜಸೇವೆಯ ನಿಮಿತ್ತವಾಗಿ ಜನರೊಡನೆ ಆತ್ಮೀಯ ಸಂಪರ್ಕವನ್ನು ಬೆಳೆಸಿದರು. ಗೋವಾದಲ್ಲಿ ಪೋರ್ಚುಗಲ್ ಕ್ರೈಸ್ತರು ಬಲಾತ್ಕಾರವಾಗಿ ಮತ್ತು ಹಿಂಸಾತ್ಮಕವಾಗಿ ಜನರನ್ನು ಕ್ರೈಸ್ತಮತಕ್ಕೆ ಸೇರಿಸಿದಂತೆ, ಹಿಂದೂ ಸಂಸ್ಕೃತಿಯನ್ನು ಕದಡಿಸಿದಂತೆ ಬ್ರಿಟಿಷ್ ಸರಕಾರದ ಆಶ್ರಯದಲ್ಲಿ ದುಡಿಯುತ್ತಿದ್ದ ಕ್ರೈಸ್ತರು ಮಾಡಲಿಲ್ಲ. ವಿಶಾಲವಾದ ಮತ್ತು ಜನಸಂದಣಿಯಿಂದ ಕೂಡಿದ ಈ ದೇಶದಲ್ಲಿ ಅವರಿಗೆ ಹಾಗೆ ಹಿಂಸಾತ್ಮಕ ನೀತಿಯನ್ನು ಅನುಸರಿಸುವುದಕ್ಕೆ ಸಾಧ್ಯತೆಯೂ ಇರಲಿಲ್ಲ. ಅದರ ಬದಲಾಗಿ ನಿಸ್ಸಹಾಯಕರಾದ, ದಲಿತರಾದ ಮತ್ತು ಜಾತೀಯವಾದದ ಪೀಡೆಗೆ ಬಲಿಬಿದ್ದ ಬಡಜನವನ್ನು ತಾವಾಗಿಯೇ ಅವರ ಬಲೆಗೆ ಬೀಳುವಂತೆ ಅವರನ್ನು ಆಕರ್ಷಿಸಿದರು. ಹೇಗೂ ಇದು ಹಿಂದೂಸಮಾಜದಲ್ಲಿ ಇದ್ದ ನ್ಯೂನತೆಯ ದೆಸೆಯಿಂದಾದುದಲ್ಲದೆ ಅವ

ರಿಂದ ಆದುದೆಂದು ಹೇಳುವಂತಿಲ್ಲ. ಅಷ್ಟೇ ಅಲ್ಲ, ಕ್ರೈಸ್ತಮತ ಪ್ರಚಾರಕರ ಅಂದಿನ ಶ್ರಮಕ್ಕೆ ತಕ್ಕಷ್ಟು ದೊಡ್ಡ ಸಂಖ್ಯೆಯಲ್ಲಿ ಕರ್ಣಾಟಕದ ಜನರು ಮತಾಂತರಗೊಳ್ಳಲಿಲ್ಲ ವೆಂಬುದೂ ಸರ್ವ ವಿದಿತವಾಗಿದೆ.

**೯. ಕರ್ಣಾಟಕದಲ್ಲಿ ಕ್ರೈಸ್ತಮತಪ್ರಚಾರ ಪರಿಣಾಮಕಾರಿಯಾಗಿದೆಯೆ ? :-**

ಒಂದೆಡೆ ಆಂಗ್ಲೇಯರು ಈ ದೇಶಕ್ಕೆ ಅದೊಂದು ಬಗೆಯ ನಾವಿನ್ಯತೆಯನ್ನು ಒದಗಿಸುತಿದ್ದಾಗ ಮತ್ತೊಂಡೆಡೆ ಕ್ರೈಸ್ತಮತ ಪ್ರಚಾರಕರು ಈ ದೇಶದ ಜನರನ್ನು ಸಾಧ್ಯವಾದಷ್ಟು ಮಟ್ಟಿಗೆ ತಮ್ಮ ಮತಕ್ಕೆ ಸೇರಿಸಲು ಪ್ರಯತ್ನಿಸುತಿದ್ದರು. ಕ್ರೈಸ್ತ ಮತಕ್ಕೆ ಸೇರಿದರೆ ಮಾತ್ರ ಈ ದೇಶದ ಜನರ ಉದ್ಧಾರವಾಗುವುದೆಂದು ಅವರು ಭಾವಿಸಿ ಕೆಲವರನ್ನು ಬಲಾತ್ಕಾರದಿಂದ ಅಥವಾ ಸಿಹಿಮಾತುಗಳಿಂದ ಪುಸಲಾಯಿಸಿ ಮತಾಂತರ ಗೊಳಿಸಿ ಅವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಿದರು. ಹಿಂದೂ ಜನವನ್ನು ಆರ್ನೂರು ವರ್ಷಗಳ ಕಾಲ ತಮ್ಮ ಖಡ್ಗಬಲದಿಂದ ಇಸ್ಲಾಂ ಮತಕ್ಕೆ ಸೇರಿಸಲು ಹೆಣಗಿದ ಅಂದಿನ ಮತಾಂಧರೇ ಈ ದೇಶದ ಜನವನ್ನು ಸಂಪೂರ್ಣವಾಗಿ ಮತಾಂತರಗೊಳಿಸುವುದರಲ್ಲಿ ಯಶಸ್ವಿಗಳಾಗಲಿಲ್ಲ. ಪರಿಣಾಮವಾಗಿ ನಮ್ಮ ದೇಶದಲ್ಲಿ ಇಂದಿನ ಜನಸಂಖ್ಯೆಯ ಶೇಕಡ ಹತ್ತರಷ್ಟು ಜನ ಮಹ್ಮದೀಯರಾದರೆ ಶೇಕಡ ಒಂದೂವರೆಯಂತೆ ಮಾತ್ರ ಕ್ರೈಸ್ತರು ಇದ್ದಾರೆ. ಕರ್ಣಾಟಕದಲ್ಲಿ ಇವರ ಸಂಖ್ಯೆಯು ಇನ್ನಷ್ಟು ಕಡಿಮೆಯಿದೆ.

ಹೇಗೂ ಕರ್ಣಾಟಕದ ಜಿಲ್ಲೆಗಳಲ್ಲಿದ್ದ ಅಂದಿನ ಕ್ರೈಸ್ತಗುರುಗಳಿಗೆ ಕನ್ನಡಿಗ ರನ್ನು ಮತಾಂತರಗೊಳಿಸುವುದು ಪ್ರಯಾಸವಾಗಿ ಕಂಡುಬಂದಿತು. Calcutta Bible Society ಇದರ ಸಂಚಾಲಕನಾಗಿದ್ದ Rev. Henry Mastyn ಇವನು ಗೋವಾದಲ್ಲಿ ೨೦,೦೦೦ ಕನ್ನಡಿಗರಿದ್ದಾರೆಂದು ಒಂದು ವರದಿಯನ್ನು ಬರೆದ ನಲ್ಲದೆ ಕನ್ನಡಿಗರಿಗಾಗಿ ಬೈಬಲ್ ಭಾಷಾಂತರದ ಕೆಲಸವನ್ನು ಕ್ರಿ. ಶ. 1810 ರಿಂದ ತ್ವರೆಯಿಂದ ಸಾಗಿಸಿದನು. ಮಂಗಳೂರು, ಕಾರವಾರ, ಬೆಳಗಾವಿ, ಬಿಜಾಪುರ, ಕೋಲಾರ ಇತ್ಯಾದಿ ಸ್ಥಳಗಳಲ್ಲಿದ್ದ ಕ್ರೈಸ್ತಗುರುಗಳಿಗೆ ಕನ್ನಡಿಗ ಹಿಂದೂಗಳನ್ನು ಸುಲಭದಲ್ಲಿ ಮತಾಂತರಗೊಳಿಸಲು ಸಾಧ್ಯವಾಗಲಿಲ್ಲವೆಂದು Rev. J. Garrett ಇವನ ಹೇಳಿಕೆಯಿಂದ ತಿಳಿದುಬರುತ್ತದೆ. Abbe Dubois ಇವನಿಗೆ, "The conversion of the Hindus is considerably impracticable" ಎಂಬುದಾಗಿ ತನ್ನ ಇಪ್ಪತ್ತುವರ್ಷಗಳ ಅನುಭವದಿಂದ ತೋರಿತು.

ಪರಿಸ್ಥಿತಿಯು ಹೀಗಿದ್ದಾಗ ಬ್ರಿಟಿಷ್ ಸರಕಾರವು ಹಲಕೆಲವು ದೇಶೀಯ ರಾಜ ರನ್ನೂ ನಾಯಕರನ್ನೂ ಪದಚ್ಯುತರನ್ನಾಗಿ ಮಾಡುತ್ತಾ ಇದ್ದು ಆಯಾ ಪ್ರಾಂತಗಳ ಸೀಮೆಗಳ ಜನವನ್ನು ಕ್ರೈಸ್ತಮತಕ್ಕೆ ಮತಾಂತರಗೊಳಿಸಲು ಸಾಧ್ಯವಿದೆಯೋ ಎಂದು ಗುಟ್ಟಾಗಿ ಪ್ರಯತ್ನ ವ್ಯವಹಾರಗಳನ್ನು ಆಗಿಂದಾಗ್ಗೆ ನಡೆಸಿದ್ದರು. ಉದಾಹರಣೆಗಾಗಿ ಹೇಳು ವುದಿದ್ದರೆ ಕೊಡಗಿನ ರಾಜನನ್ನು ಕೊಡಗಿನ ಜನರ ಸಹಾಯದಿಂದಲೇ ಅಲ್ಲಿಂದ ಓಡಿಸಿ ಅಲ್ಲಿನ ಜನರನ್ನು ಬ್ರಿಟಿಷರು ಬಹು ವಿಶ್ವಾಸದಿಂದ ಕಂಡುದಲ್ಲದೆ ಕೊಡಗನ್ನು ಒಂದು ಪ್ರತ್ಯೇಕ ಆಡಳಿತ ಘಟಕವಾಗಿ ಇಟ್ಟರು. ಇದಕ್ಕೆ ಒಂದು ಕಾರಣವೆಂದರೆ ಹಿಂದೂ

ಸಂಸ್ಕೃತಿಯಿಂದ ಸ್ವಲ್ಪಮಟ್ಟಿಗೆ ಬೇರ್ಪಟ್ಟಿರುವ ಈ ಜನವನ್ನು ಕ್ರೈಸ್ತಮತಕ್ಕೆ ಸೇರಿಸುವ ಒಳ ಅಭಿಪ್ರಾಯವೂ ಅವರಲ್ಲಿತ್ತೆಂಬುದು Col. J. Fraser ಇವನ ಪತ್ರಗಳಿಂದ ತಿಳಿಯುತ್ತದೆ. ಅದಕ್ಕನುಸಾರವಾಗಿಯೇ Rev. E. Moegling ಇವನನ್ನು ಕ್ರಿ. ಶ. 1840 ರಿಂದ ಕೊಡಗಿನಲ್ಲಿ ಮತಪ್ರಚಾರ ಕಾರ್ಯಕ್ಕೆ ನೇಮಿಸಿದರು. ಆದರೆ ಅವರ ಪ್ರಯತ್ನವು ಜಯಪ್ರದವಾಗಲಿಲ್ಲ. ಕೊಡಗಿನ ಜನರು ಅಂತೆಯೇ ಉಳಿದರು. ಕರ್ಣಾಟಕದ ಇತರ ಭಾಗಗಳ ಕತೆಯೂ ಸಾಧಾರಣವಮಟ್ಟಿಗೆ ಇದೇ ರೀತಿಯಾಗಿದೆ. ಪಶ್ಚಿಮ ಕರಾವಳೀ ಸೀಮೆಗಳಲ್ಲದೆ ಇತರ ಜಿಲ್ಲೆಗಳಲ್ಲಿ ಕ್ರೈಸ್ತರ ಪ್ರಭಾವವು ಹೆಚ್ಚು ಹರಿಯಲಿಲ್ಲ.

## ೧೦. ನಾಡಿನ ಉದ್ಧಗಲಕ್ಕೂ ಅವರು ವಿದ್ಯಾಪೀಠಗಳನ್ನು ಸ್ಥಾಪಿಸಿದರು :—

"For the welfare of the country many social and religious reforms were absolutely necessary, for example, the total abolition of caste, the prohibition of SATI, the child marriage, the prohibition of human sacrifice, animal sacrifice etc."

ಈ ರೀತಿಯಾಗಿ ವಿಖ್ಯಾತ ವಿದ್ವಾಂಸನೂ ಬಹು ಭಾಷಾ ಪರಿಣತನೂ ಆದ Rev. William Carey ಇವನು ಕುಂಪೆನೀ ಸರಕಾರಕ್ಕೆ ಬರೆದ ವರದಿಯಲ್ಲಿ ಹೇಳಿದ್ದನು. ಇಂಥಾ ಆಢ್ಯ ವಿದ್ವಾಂಸರ ಸಲಹೆಯನ್ನು ಗಮನಿಸಿ Marques of Wellesley Marques of Hastings, Lord William Bentinck ಮೊದಲಾದ ಅಂದಿನ ಅಧಿಕಾರಿಗಳು ಈ ದೇಶದ ಸಮಾಜ ಸಂಸ್ಕರಣಾ ಕಾರ್ಯಕ್ಕೆ ತೊಡಗಿದರು. ಇದರಲ್ಲಿ ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರು ವಿಶೇಷ ಆಸಕ್ತಿ ವಹಿಸಿ ಜನಸೇವೆಯನ್ನು ಬಹು ಶ್ರದ್ಧೆಯಿಂದ ಕೈಗೊಂಡರು. ಕ್ರಿ. ಶ 1800 ರಿಂದ ಕರ್ಣಾಟಕದ ಹಲವು ಊರುಗಳಲ್ಲೂ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿದರು. ಕುರುಡರಿಗೆ ಮೂಕರಿಗೆ ಮತ್ತು ಅನಾಥರಿಗೆ ತಕ್ಕುದಾದ ಶಿಬಿರಗಳನ್ನು ತೆರೆದರು, ಕ್ರೈಸ್ತಮತ ಬೋಧೆ ಮತ್ತು ಪ್ರಾಪಂಚಿಕ ಜ್ಞಾನಬೋಧೆಗೆ ತಕ್ಕುದಾದ ಶಿಬಿರಗಳನ್ನೂ ಗ್ರಾಮಾಂತರಗಳಲ್ಲಿ ಸ್ಥಾಪಿಸಿದರು.

ಪಶ್ಚಿಮ ಕರಾವಳೀ ಪಟ್ಟಣಗಳಲ್ಲಿ ನೂರಾರು ಕ್ರೈಸ್ತಗುಡಿಗಳು ಮೇಲೆದ್ದುವು. ಅವುಗಳ ಕಟ್ಟೋಣ, ವಾಸ್ತುಶಿಲ್ಪ ಇತ್ಯಾದಿಗಳನ್ನು ಕುರಿತಾಗಿ ಪೋರ್ಚುಗಲ್, ಇಟಲಿ, ಫ್ರಾನ್ಸ್ ಇತ್ಯಾದಿ ದೇಶಗಳ ಅಂದಿನ ಪ್ರವಾಸಿಕರು ತಮ್ಮ ಭಾಷೆಗಳಲ್ಲಿ ಉತ್ತಮ ಗ್ರಂಥಗಳನ್ನು ರಚಿಸಿದ್ದಾರೆ. ಕ್ರೈಸ್ತಗುರುಗಳು ಸ್ಥಾಪಿಸಿದ ಶಾಲೆಗಳನ್ನು ನವೀನಕ್ರಮಕ್ಕನುಗುಣವಾಗಿ ಉತ್ತಮ ಶಿಸ್ತು ಮತ್ತು ಯೋಜನೆಗಳ ಸಹಿತ ನಡೆಸಿದರು. ಮಂಗಳೂರಿನಲ್ಲಿ ಅವರು ತೆರೆದ Jesuit College ಇದು ಇಡೀ ಭಾರತದಲ್ಲಿಯೇ ಪ್ರಾಮುಖ್ಯವಾದ ವಿದ್ಯಾಪೀಠವಾಗಿತ್ತು. ಬೆಂಗಳೂರಿನಲ್ಲಿ St. Joseph's College ಮತ್ತು ಹುಡುಗಿಯರಿಗೆ Sacred Hearts' College ಇವೂ ಅನಂತರ ಸ್ಥಾಪಿತವಾದುವು. ಅದೇ ರೀತಿ ಮೈಸೂರು, ಬಳ್ಳಾರಿ, ಕಾರವಾರ,

ಬಿಜಾಪುರ, ಉಡುಪಿ, ಧಾರವಾಡ ಇತ್ಯಾದಿ ಸ್ಥಳಗಳಲ್ಲೂ ಉನ್ನತ ಮಟ್ಟದ ಶಾಲೆಗಳು ತೆರೆಯಲಾದುವು. ಕ್ರಿ.ಶ. 1840 ರ ಒಳಗಾಗಿ ಬಿದರೆ, ಗುಲ್ಬರ್ಗಾ, ತುಮಕೂರು, ಮಂಡ್ಯ, ಹಾಸನ, ಮಡಿಕೇರಿ, ಚಿತ್ರದುರ್ಗ, ಶಿವಮೊಗ್ಗ—ಹೀಗೆ ಅನೇಕ ಸ್ಥಳಗಳಲ್ಲಿ ಆಧುನಿಕ ಪಾಠಶಾಲೆಗಳೂ, Anglo-Vernacular ಶಾಲೆಗಳೂ ಸ್ಥಾಪಿತ ವಾದುವು. ಮಾಧ್ಯಮಿಕ ಶಾಲೆಗಳಾಗಿ ಪರಿವರ್ತನೆಗೊಂಡ ಕರ್ಣಾಟಕದ ಶಾಲೆಗಳಲ್ಲಿ ಕ್ರಿ.ಶ. 1832 ರಲ್ಲಿ ಸ್ಥಾಪಿತವಾದ ಬೆಳಗಾವಿಯ Beynon Smith High School ಇದು ಮೊದಲನೇದಾಗಿದೆ. 'ವನಿತಾ ವಿದ್ಯಾಲಯ'ವೆಂಬುದಾಗಿ ಹುಡುಗಿ ಯರಿಗಾಗಿ ಒಂದು ಶಾಲೆಯೂ ಮೊದಲ ಬಾರಿಗೆ ಅಲ್ಲಿ ತೆರೆಯಲಾಗಿತ್ತು.

Lord Macaulay ಇವನ ವಿದ್ಯಾಯೋಜನೆ 1835 ರಲ್ಲಿ ಜಾರಿಗೆ ಬರು ವುದಕ್ಕಿಂತ ಎಷ್ಟೋ ಹಿಂದೆ ಎಂದರೆ 1823 ರಲ್ಲಿ Hon. M. Elphinstone ಇವನ ವಿದ್ಯಾಯೋಜನೆಯೊಂದು ಪ್ರಕಟವಾಗಿತ್ತು. ಆದರೆ ಅದಕ್ಕೂ ಹಿಂದೆ ಈ ಕ್ರೈಸ್ತ ಮತಪ್ರಚಾರ ಸಂಸ್ಥೆಯವರು ನಾಡಿನ ಕೆಲವು ಕೇಂದ್ರಗಳಲ್ಲಿ ಇಂಗ್ಲಿಷ್ ಶಾಲೆ ಗಳನ್ನು ಸ್ಥಾಪಿಸಿದ್ದರು. ಕೇರಳದ Syrian Ghristian Mission ಇವರು ಸುಮಾರು 1800 ರ ಕಾಲದಲ್ಲಿ ಹೊನ್ನಾವರದಲ್ಲಿ ಇಂಗ್ಲಿಷ್ ಶಾಲೆಯನ್ನು ತೆರೆದಿದ್ದರು. ಅನಂತರ Basel Mission, Wesleyan Mission, Jesuit Mission, Free Church of Scotland Mission ಈ ಮೊದಲಾದ ಸಂಸ್ಥೆಗಳು 1840 ರಿಂದೀಚೆಗೆ ಇನ್ನೂ ಎಷ್ಟೋ ಪಾಠಶಾಲೆಗಳನ್ನು ತೆರೆದರು. Basel Mission ಇವರ ಮೊದಲಿನ ಮಾಧ್ಯಮಿಕ ಶಾಲೆಯು ಕ್ರಿ. ಶ. 1863ರಲ್ಲಿ ಧಾರವಾಡದಲ್ಲಿ ತೆರೆಯಲ್ಪಟ್ಟಿತು. 1857 ರಲ್ಲಿ ಕಲ್ಕತ್ತಾ, ಬೊಂಬಾಯಿ ಮತ್ತು ಮದ್ರಾಸು ವಿಶ್ವವಿದ್ಯಾಲಯಗಳು ಸ್ಥಾಪನೆಯಾದ ಮೇಲೆ ಹಲವು ಕ್ರೈಸ್ತ ಪಾಠಶಾಲೆಗಳು ಮಾಧ್ಯಮಿಕ ಶಾಲೆಗಳಾದುವಲ್ಲದೆ ಕೆಲವು ಕೊಲೇಜು ಕಟ್ಟಡಗಳ ಅಸ್ತಿಭಾರವೂ ಹಾಕಲ್ಪಟ್ಟುವು. ಎಲ್ಲಾ ಪಾಠಗಳನ್ನೂ ಆಧುನಿಕ ವಿಜ್ಞಾನ, ಭೂಗೋಳ ಇತ್ಯಾದಿಗಳನ್ನೂ ಶಾಸ್ತ್ರೀಯವಾಗಿ ಬೋಧಿಸಲು ತಕ್ಕ ತಳ ಹದಿಯನ್ನು ಹಾಕಿವಲ್ಲದೆ ಶಾಲೆಗಳಲ್ಲಿ ಉತ್ತಮ ಶಿಸ್ತು ಮತ್ತು ಸವ್ಯವಸ್ಥಿತ ಶಿಕ್ಷಣ ಕ್ರಮಗಳನ್ನೂ ಜಾರಿಗೆ ತಂದರು. ಹೀಗೆ ಪ್ರಾರಂಭವಾದ ಅಂದಿನ ವಿದ್ಯಾ ಪ್ರಚಾರ ಕಾರ್ಯವು ಈ ದೇಶಕ್ಕೆ ಮತ್ತು ಈ ನಾಡಿಗೆ ಪ್ರಗತಿದಾಯಕವಾದ ಪರಿಸ್ಥಿತಿಯನ್ನು ಒದಗಿಸಿತು.

೧೧. ಚಿಕಿತ್ಸಾಲಯಗಳನ್ನೂ ಕೈಗಾರಿಕಾ ಕೇಂದ್ರಗಳನ್ನೂ ತೆರೆದರು :—

ಕ್ರೈಸ್ತಮತಪ್ರಚಾರ ಸಂಸ್ಥೆಗಳ ಸಮಾಜಸೇವೆಯು ಇಷ್ಟರಿಂದಲೇ ಮುಗಿಯ ಲಿಲ್ಲ. ಕರ್ಣಾಟಕದ ಹಲವು ಕೇಂದ್ರಗಳಲ್ಲಿ ಔಷಧಾಲಯಗಳನ್ನು ಸ್ಥಾಪಿಸಿ ರೋಗಿ ಗಳ ಚಿಕಿತ್ಸೆಗಾಗಿ ಶ್ರಮಿಸಿದರು. ಫ್ರೆಂಚ್ ಕ್ರೈಸ್ತಮತ ಬೋಧಕ Abbe Dubois ಇವನು ಮೈಸೂರಿನಲ್ಲಿ ಸುಮಾರು ೨೫,೦೦೦ ಜನಕ್ಕೆ ತನ್ನ ೨೨ ವರ್ಷಗಳ ಅವಧಿಯಲ್ಲಿ 1823 ರವರೆಗೆ, ಸಿಡುಬು ಡಾಕು (Vaccination) ಹಾಕಿದನು. ಬೆಂಗಳೂರು,

ಹಾಸನ, ಮಂಗಳೂರು, ಹುಬ್ಬಳ್ಳಿ, ರಾಯಚೂರು, ಬಿದರೆ, ನಿಪಾನಿ, ಹುಲುಕೋಟೆ, ಗದಗ ಮೊದಲಾದೆಡೆಗಳಲ್ಲಿ ಚಿಕಿತ್ಸಾಲಯಗಳನ್ನು ತೆರೆದು ಬಡವರನ್ನೂ ಅನಾಥರನ್ನೂ ಪೋಷಿಸಿದರು. ಸರಕಾರದ ಪ್ರೋತ್ಸಾಹದಿಂದ ದೀನದಲಿತರಿಗೆ ಉಚಿತವಾಗಿ ಔಷಧವನ್ನು ಹಂಚಿದರು. ವಿರಾಜಪೇಟೆ ಮತ್ತು ಮಂಗಳೂರಿನಲ್ಲಿ ಕ್ರಿ.ಶ. 1810ರ ಕಾಲದಲ್ಲಿಯೇ ಅವರು ಸ್ಥಾಪಿಸಿದ ಕ್ಷಯರೋಗಾಸ್ಪತ್ರೆಗಳು ಪ್ರಸಿದ್ಧವಾಗಿದ್ದುವು. 1850 ರಿಂದೀಚೆಗೆ ಕರ್ಣಾಟಕದ ಎಲ್ಲಾ ಪ್ರಮುಖ ಪಟ್ಟಣಗಳಲ್ಲೂ ಕ್ರೈಸ್ತಮತಪ್ರಚಾರ ಸಂಸ್ಥೆಗಳ ಚಿಕಿತ್ಸಾ ಶಿಬಿರಗಳು ಇದ್ದೇ ಇದ್ದುವು.

ವ್ಯವಸಾಯದಲ್ಲಿ ಅವರು ವಹಿಸಿದ್ದ ಆಸಕ್ತಿಯು ಇನ್ನಷ್ಟು ಆಶಾದಾಯಕವಾಗಿತ್ತು. ನೆಲಮಂಗಲ, ಕಂಕನ್ಹಾಳಿ, ಸಿಲ್ವ್ಯಾಪುರ, ಇತ್ಯಾದಿ ಸ್ಥಳಗಳಲ್ಲಿ ವ್ಯವಸಾಯ ಕೇಂದ್ರಗಳನ್ನು ಸ್ಥಾಪಿಸಿ ಜನರಿಗೆ ಆಧುನಿಕ ವ್ಯವಸಾಯ ಕ್ರಮವನ್ನು ಕಲಿಸಲು ಹೆಣಗಿದರು. ನಿರಾಶ್ರಿತರಿಗೆ ಸರಕಾರದ ಸಹಾಯದಿಂದ ಹೊಲವನ್ನು ಪಡೆದು ಅಲ್ಲಲ್ಲಿ ಹಂಚಿದರು. ಚನ್ನಪಟ್ಟಣ ಮತ್ತು ಕೊಳ್ಳೇಗಾಲದಲ್ಲಿ ರೇಶ್ಮೆ ವ್ಯವಸಾಯಕ್ಕೆ ಅನುವಿತ್ತರು. ಕೊಡಗು, ವೈನಾಡು, ಚಿಕ್ಕಮಗಳೂರು ಮತ್ತು ಕಡೂರುಗಳಲ್ಲಿ ಕಾಫೀ ಮತ್ತು ಸಿಂಕೋನಾ ವ್ಯವಸಾಯವನ್ನು ಪ್ರೋತ್ಸಾಹಿಸಿದರು;

ಇಷ್ಟೇ ಅಲ್ಲ, ಕೈಗಾರಿಕೆ, ವ್ಯಾಪಾರ, ಮತ್ತು ಕಲೆಗಳಲ್ಲೂ ಅವರು ಜನರಿಗೆ ಮಾರ್ಗದರ್ಶಕರಾದರು. ಬಿಜಾಪುರವಲ್ಲಿ ಒಂದು ನೆಯ್ಗೆ ಶಾಲೆಯನ್ನು ಅವರು ಪ್ರಥಮ ಬಾರಿಗೆ ತೆರೆದರು. ಮಂಗಳೂರು ಮಲ್ಪೆಗಳಂಥಾ ಬಂದರುಗಳಲ್ಲಿ ಹಂಚಿನ ಕಾರ್ಖಾನೆಗಳನ್ನು ಸ್ಥಾಪಿಸಿ ಸಿರುದ್ಯೋಗಿಗಳ ತೊಂದರೆಯನ್ನು ನಿವಾರಿಸಿದರು, ಹೀಗೆ ಅವರು ಹಲವು ವಿಷಯಗಳಲ್ಲಿ ಜನತೆಗೆ ನವೀನ ಜೀವನ ವಿಧಾನಕ್ಕೆ ಹಾದಿಯನ್ನು ತೋರಿಸಿದರು.

ಅಂದು ಅವರು ಸ್ಥಾಪಿಸಿದ ಚಿಕ್ಕ ಶಾಲೆಗಳು ಇಂದು ದೊಡ್ಡ ಕಲಾ ಶಾಲೆಗಳಾಗಿವೆ; ಸುಮಾರು ೨೦೦ ವರ್ಷಗಳ ಹಿಂದೆ ಅವರು ತೆರೆದ ಪುಟ್ಟ ವೈದ್ಯಕೀಯ ಶಿಬಿರಗಳು ಇಂದು ದೊಡ್ಡ ಚಿಕಿತ್ಸಾಲಯಗಳಾಗಿ ಮಾರ್ಪಟ್ಟಿವೆ. ಅಂದು ಅವರು ತಳಹದಿಯನ್ನು ಹಾಕಿದ ಆಧುನಿಕ ಶಿಕ್ಷಣ ಕ್ರಮದ ಮೇಲೆಯೇ ಇಂದು ದೊಡ್ಡ ವಿಶ್ವವಿದ್ಯಾಲಯಗಳು ಎದ್ದಿವೆ, ಹೆಚ್ಚೇಕೆ, ಕ್ರೈಸ್ತಮತ ಪ್ರಚಾರಕರೂ ಸರಕಾರದ ಅಧಿಕಾರಿಗಳೂ ಅಂದು ಪಾಶ್ಚಾತ್ಯ ಸೋದರರಾಗಿ ಒಡಗೂಡಿ ಈ ದೇಶದ ವಿದ್ಯಾ ಪ್ರಗತಿಗೆ ಮತ್ತು ಸಮಾಜದ ಪರಿಷ್ಕಾರಕ್ಕೆ ದುಡಿದರು. ಇದೇ ದೃಷ್ಟಿಯಿಂದ ಅವರು ಈ ದೇಶದಲ್ಲಿ ಪ್ರಚಲಿತವಿದ್ದ ಹಲವು ದುಷ್ಟಪದ್ಧತಿಗಳನ್ನು ನಿಲ್ಲಿಸಿದರು. ಸಾಹಿತ್ಯ ಸಂಶೋಧನೆಯಂತೂ ಅವರಿಂದ ಎಡೆಬಿಡದೆ ನಡೆಸಲ್ಪಟ್ಟಿತು. ಅಂದು ಅವರು ನಡೆಸಿದ ಅನ್ವೇಷಣೆ ಮತ್ತು ಸಂಶೋಧನೆಗಳ ವರದಿಗಳೇ ಇಂದಿನ ಭಾಷಾ ವಿದ್ಯಾರ್ಥಿಗಳಿಗೆ 'ಶಬ್ದಮಣಿದರ್ಪಣ'ಗಳಾಗಿವೆ. ಈ ಹೇಳಿಕೆಯಲ್ಲಿ ಇರಬಹುದಾದ ಸತ್ಯತೆಯನ್ನು ಮನಗಂಡು ಅವರು ಕರ್ಣಾಟಕದಲ್ಲಿ ಸಾಧಿಸಿದ ಮಹತ್ಕಾರ್ಯಗಳನ್ನು ನೆನೆಯುವುದರಲ್ಲಿ ತಕ್ಕ ಔಚಿತ್ಯವಿದೆ.

**೧೨. ಕನ್ನಡ ಮುದ್ರಣಾಲಯಗಳು ಮೇಲಿಂದ ಮೇಲೆ ಸ್ಥಾಪಿತವಾದುವು :-**

ಭಾರತೀಯ ಭಾಷೆಗಳ ಅಚ್ಚುಮೊಳೆಗಳನ್ನು ನಿರ್ಮಿಸಲು ಕ್ರಿ.ಶ. 16 ನೇ ಶತಮಾನದ ಅಂತ್ಯದಲ್ಲಿಯೇ ಪ್ರಯತ್ನಿಸಲಾಗಿತ್ತೆಂದು ಹಿಂದೆ ಹೇಳಿದೆ. ಅಂದು ತಮಿಳು ಅಕ್ಷರಗಳ ಮೊಳೆಗಳನ್ನು ಸಿದ್ಧಪಡಿಸಿದ್ದ J. Gonsalves ಇವನು ಕನ್ನಡ ಲಿಪಿಗಳ ಅಚ್ಚುಮೊಳೆಗಳನ್ನು ತಯಾರಿಸಲು ತೊಡಗಿದ್ದನು. ಆದರೆ ಅವನಿಗೆ ಕನ್ನಡ ಅಕ್ಷರಗಳು ಸ್ವಲ್ಪ ಬಿಗುಡಾಗಿ ತೋರಿದ್ದರಿಂದ ಆ ಕೆಲಸವನ್ನು ಅಷ್ಟರಲ್ಲಿಯೇ ಬಿಟ್ಟಿದ್ದನು. ಆದರೆ ಸುಮಾರು ಒಂದು ನೂರು ವರ್ಷಗಳ ನಂತರ ಕ್ರೈಸ್ತಮತ ಬೋಧಕ John Gilchrist ಇವನು ಮತ್ತು ಇತರರು ಕನ್ನಡ ಅಚ್ಚುಮೊಳೆಗಳ ನಿರ್ಮಾಣದಲ್ಲಿ ಜಯಪ್ರದರಾದರು. ಪರಿಣಾಮವಾಗಿ ಸುಮಾರು ಕ್ರಿ. ಶ. 1790 ರ ಕಾಲಕ್ಕೆ ಬಂಗಾಳದ ಶ್ರೀರಾಮಪುರ ಮುದ್ರಣಾಲಯದಲ್ಲಿ ಕನ್ನಡ ಮುದ್ರಣಕ್ಕೆ ಪ್ರಾರಂಭಿಸಿದರು. ಅನಂತರ ಕೆಲವು ವರ್ಷಗಳಲ್ಲಿ ಕನ್ನಡ ಭಾಷಾ ಮುದ್ರಣಕ್ಕೆ ಪ್ರಚೋದನೆಯನ್ನಿತ್ತವರಲ್ಲಿ ಕಲ್ಕತ್ತಾದ Rev. William Carey ಮತ್ತು ಮದ್ರಾಸಿಗೆ ಆಗ ತಾನೆ ಬಂದಿದ್ದ Dr. John Hands ಇವರು ಪ್ರಮುಖರಾಗಿದ್ದಾರೆ.

ಅಲ್ಲಿಂದನಂತರ ಕಳೆದ ಶತಮಾನದ ಆರಂಭದಲ್ಲಿ ಮದ್ರಾಸಿನ Fort St. George Printing Press ಮತ್ತು Bombay Castle Press ಇವು ಕನ್ನಡ ಅಚ್ಚು ಮೊಳೆಗಳನ್ನು ಸಂಗ್ರಹಿಸಿ ಸರಕಾರೀ ಪತ್ರಗಳನ್ನು ಕನ್ನಡದಲ್ಲೂ ಮುದ್ರಿಸಲು ಪ್ರಾರಂಭಿಸಿದರು. ಸುಮಾರು 1815 ರಲ್ಲಿ ಹಳೆ ಮೈಸೂರು ಸರಕಾರವು ಬೆಂಗಳೂರಿನಲ್ಲಿ ಸರಕಾರೀ ಮುದ್ರಣಾಲಯವೊಂದನ್ನು ಸ್ಥಾಪಿಸಿ ಕನ್ನಡ ಮತ್ತು ಇಂಗ್ಲಿಷ್ ಮುದ್ರಣ ಕೆಲಸಗಳನ್ನು ನಡೆಸತೊಡಗಿತು.

ಖಾಸಗೀ ಮುದ್ರಣಾಲಯಗಳ ಪೈಕಿ London Mission Society ಈ ಸಂಸ್ಥೆಯವರು ಬಳ್ಳಾರಿಯಲ್ಲಿ ಒಂದು ಛಾಪಖಾನೆಯನ್ನು ಸುಮಾರು 1820 ರಲ್ಲಿ ಸ್ಥಾಪಿಸಿದ್ದೇ ಕನ್ನಡನಾಡಿನಲ್ಲಿ ಮೊದಲನೇದಾಗಿದೆ. ಸುಮಾರು 1824 ರಲ್ಲಿ ಮೈಸೂರು ಮತ್ತು ಬೆಂಗಳೂರುಗಳಲ್ಲಿ Mysore Government Press ಇದರ ಶಾಖೆಗಳು ವಿಸ್ತರಿಸಲಾದುವು. ಮದ್ರಾಸಿನ Fort St. George College Press ಇದು ಕನ್ನಡ ಮುದ್ರಣಕ್ಕಾರಂಭಿಸಿತು. ಕಾರವಾರ, ಬೆಳಗಾವಿ, ಹುಬ್ಬಳ್ಳಿ ಮೊದಲಾದೆಡೆಗಳಲ್ಲಿ ಕ್ರೈಸ್ತರು ತಮ್ಮ ಕನ್ನಡ ಬೈಬಲ್ ಬರೆಹಗಳ ಮುದ್ರಣಕ್ಕೆ ಚಿಕ್ಕ ಛಾಪಖಾನೆಗಳನ್ನು ತೆರೆದರು. 1834ರಲ್ಲಿ Rev. C. Grenier, John J. Ammann ಮತ್ತು A. Buhrer ಇವರು ಸೇರಿ ಮಂಗಳೂರಿನಲ್ಲಿ Basel Mission Press ಇದನ್ನು ಸ್ಥಾಪಿಸಿದಲ್ಲದೆ ಅದರ ಒಂದು ಶಾಖೆಯನ್ನು ಧಾರವಾಡದಲ್ಲಿ ಅನಂತರ ತೆರೆದರು. 1848ರಲ್ಲಿ Rev. John Garrett ಇವನು ಮೈಸೂರಿನಲ್ಲಿ Wesleyan Mission Press ಇದನ್ನು ಸ್ಥಾಪಿಸಿದನು. ಇಷ್ಟರಲ್ಲಿ ಬೆಂಗಳೂರಿನ Catholic Mission Press ಮತ್ತು Wesleyan Press ಇದರ ಶಾಖೆಯೂ ಅಂತೆಯೇ ಉಳಿದ ಹಲವು ಸ್ಥಳಗಳಲ್ಲೂ 1865 ರ ಒಳಗಾಗಿ ಮುದ್ರಣಾಲಯಗಳು ಕಾಣಿಸಿಕೊಂಡುವು. ಇವುಗಳೊಡನೆ ಕನ್ನಡ ಬೈಬಲ್ ಹೊತ್ತಗೆಗಳೂ ಸಾಹಿತ್ಯಗ್ರಂಥ

ಗಳೂ ಬಹು ಸಂಖ್ಯೆಯಲ್ಲಿ ಮುದ್ರಣವಾಗಲಾರಂಭವಾದುವು.

**೧೩. ಕನ್ನಡದಲ್ಲಿ "ಬೈಬಲ್ ಸಾಹಿತ್ಯ"ವು ತುಂಬಿ ಹರಿಯಿತು:—**

ತಮ್ಮ ಧರ್ಮಪ್ರಚಾರ ಕಾರ್ಯವನ್ನೇ ಮೂಲೋದ್ದೇಶವಾಗಿ ಇಟ್ಟುಕೊಂಡ ಕಳೆದ ಶತಮಾನದ ಕ್ರೈಸ್ತಗುರುಗಳು ಈ ದೇಶದಲ್ಲಿ ತಾವು ಗಳಿಸಿದ ಭಾಷಾ ಪಾಂಡಿತ್ಯದ ಬಲದಿಂದ ಸ್ಥಳೀಯ ಜನರೊಡನೆ ಬೆರೆತು ತಮ್ಮ ಕಾರ್ಯಸಾಧನೆಗೆ ಸಿಷ್ಠೆಯಿಂದ ಇಳಿದರು. ಪ್ರಾರಂಭದಲ್ಲಿ ದೇಶೀಯ ಭಾಷೆಗಳನ್ನು ಕಲಿತು ಚಿಕ್ಕ ಚಿಕ್ಕ ಸಭೆಗಳನ್ನು ಅಲ್ಲಲ್ಲಿ ನೆರೆಯಿಸಿ ಭಾಷಣಗಳನ್ನು ಕೊಡುತಿದ್ದರು. ಈ ದೇಶದ ಭಾಷೆಗಳಲ್ಲಿಯೇ ಜನಸಾಮಾನ್ಯರಿಗೆ ಅರ್ಥವಾಗುವಂತೆ ಬೈಬಲ್ ತತ್ವಗಳನ್ನು ಬರೆದು ಪ್ರಚಾರಪಡಿಸಿದರು. ಅದರೊಡನೆಯೇ ಬೈಬಲ್‌ನ ವಿಷಯವಾಗಿ ಇರುವ ಉದ್ಗ್ರಂಥಗಳನ್ನೂ ಸ್ಥಳೀಯ ಭಾಷೆಗಳಿಗೆ ಅನುವಾದಿಸಿ "ಬೈಬಲ್ ಸಾಹಿತ್ಯ"ದ ನಿರ್ಮಾಣಕ್ಕೂ ಕಾರಣರಾದರು.

ಕ್ರಿ. ಶ. 1795 ರಿಂದ ಇತ್ತಲಾಗಿ ಕನ್ನಡ ನಾಡಿನಲ್ಲಿದ್ದ ಕ್ರೈಸ್ತಗುರುಗಳು ಒಬ್ಬೊಬ್ಬರಾಗಿ ಇಂಥ ಕಾರ್ಯಕ್ಕೆ ಇಳಿದರು. ಕನ್ನಡದಲ್ಲಿ ಮತ್ತು ಸಂಸ್ಕೃತದಲ್ಲಿ ಸಾಕಷ್ಟು ವಿದ್ವತ್ತನ್ನೂ ಪಡೆದು ಬೈಬಲ್ ಭಾಷಾಂತರವನ್ನೇ ಅಲ್ಲ, ಅದರ ಜತೆಗೆ ನೂರಾರು ಬಗೆಯ ಬೈಬಲ್ ಗೀತೆಗಳು, ಬೈಬಲ್ ಕತೆಗಳು, ಬೈಬಲ್ ಸೂಕ್ತಿಗಳು, ಬೈಬಲ್ ಪ್ರಸಂಗಗಳು ಎಂದಿತ್ಯಾದಿಯಾಗಿ ಉತ್ಕೃಷ್ಟ ಬೈಬಲ್ ಸಾಹಿತ್ಯವನ್ನು ಕನ್ನಡ ಭಾಷೆಯಲ್ಲೂ ನಿರ್ಮಿಸಿದರು. ಬೈಬಲನ್ನು ವೇದಗಳೆಂದು ಸಾರಿದರು; ಬೈಬಲ್ ತತ್ವಗಳನ್ನು "ಹಿತೋಪದೇಶ" ವೆಂದು ಹೇಳಿದರು. ಬೈಬಲ್ ಕತೆಗಳನ್ನು "ನೀತಿ ಚಿಂತಾಮಣಿ" ಎಂದು ಘೋಷಿಸಿದರು. ಕ್ರಿಸ್ತನೂ ಕೃಷ್ಣನೂ ಒಬ್ಬನೇ ಎಂದು ಸಾರಿದರು. ಕ್ರಿಸ್ತನ ಜನನಕ್ಕೂ ಕೃಷ್ಣನ ಜನನಕ್ಕೂ ಸಾಮ್ಯತೆಯನ್ನು ನ್ಯಾಯವಾಗಿ ಪ್ರತಿಪಾದಿಸಿದರು. ಬ್ರಾಹ್ಮಣರು ನಿರ್ಮಿಸಿದ ಚಾತುರ್ವರ್ಣ್ಯ, ಜಾತಿಭೇದ ಜನಭೇದಗಳನ್ನು ಆಗಿಂದಾಗ್ಗೆ ಖಂಡಿಸಿದರು. ಹಿಂದೂ ಧರ್ಮವಲ್ಲಿ ಅದೆಷ್ಟು ಮೂಢನಂಬಿಕೆಗಳೂ ಅಮಾನುಷ ನೀತಿಗಳೂ ಇವೆಯೆಂಬುದನ್ನು ಹಿಂದೂಶಾಸ್ತ್ರಗಳ ಆಧಾರಗಳಿಂದಲೇ ಜನರಿಗೆ ತಿಳುಹಿಸಿ ಬ್ರಾಹ್ಮಣರನ್ನು ಪೆಚ್ಚಾಗಿಸಿದರು.

ಈ ರೀತಿಯಾಗಿ ಭಾರತದಲ್ಲಿ ಹೇಗೋ ಹಾಗೆಯೇ ಕನ್ನಡ ನಾಡಿನ ಹಳ್ಳಿ ಕೇರಿಗಳ ಜನರು ಈ ವಿದೇಶೀಯ ವಿದ್ವಾಂಸರು ಮತ್ತು ಮತಪ್ರಚಾರಕರು ಹಿಂದೂಮತ ಮತ್ತು ಕ್ರೈಸ್ತ ಧರ್ಮದ ಮೇಲೆ ನಡೆಸುತಿದ್ದ ವ್ಯಾಖ್ಯಾನ ಭಾಷಣಗಳನ್ನು ಕೇಳಿ ಮುಗ್ಧರಾದರು. ಕ್ರೈಸ್ತಗುಡಿಗಳಲ್ಲಿ ಅವರು ಜನರನ್ನು ಸೇರಿಸಿ ತಮ್ಮ ನಯವಾದ ಮಾತುಗಳಿಂದ ಅವರಿಗ ಗಹನವಾದ ವಿಚಾರಗಳನ್ನು ತಿಳಿಸಿ ಅಂದಿನ ಅವಿದ್ಯಾವಂತರಾದ ಜನರು ಆ ವರೆಗೂ ತಿಳಿಯದೇ ಇದ್ದುದನ್ನು ತಿಳಿಸಿ ಅದೊಂದು ಬಗೆಯ ಜನಜಾಗೃತಿ ಮತ್ತು ವಿಚಾರ ಜಾಗೃತಿಯನ್ನು ಎಬ್ಬಿಸಲು ಕಾರಣರಾದರು. ಹಿಂದೂ ಜನರು ತಮ್ಮ ಮತಧರ್ಮಗಳನ್ನು ಅವರಿಗೆ ಸುಲಭವಲ್ಲಿ ಬಲಿಕೊಡದಿದ್ದರು ಅವರಿಂದ ಪ್ರಾಪಂಚಿಕ ಜ್ಞಾನವನ್ನು ತುಂಬಾ ಪಡೆದರು. ಇದರಿಂದ ಉತ್ಸಾಹಿತರಾದ ಆ

ಪಾಶ್ಚಾತ್ಯ ಮತಪ್ರಚಾರಕರು ತಮ್ಮ ಬೈಬಲ್ಲಿನ ಮೇಲೆ ಮತ್ತು ಇನ್ನೂ ಹಲವು ವಿಷಯಗಳ ಮೇಲೆ ಗ್ರಂಥಗಳನ್ನು ಈ ದೇಶದ ಜನರಿಗಾಗಿ ಬರೆಯಲಾರಂಭಿಸಿದರು. ಕನ್ನಡ ಭಾಷೆಯಲ್ಲಂತೂ ಕಳೆದ ಶತಮಾನದಲ್ಲಿ ಆ ರೀತಿಯಾಗಿ ಒಂದು ಅಪಾರ ಸಾಹಿತ್ಯ ಧಾರೆಯು ಉಕ್ಕಿ ಹರಿಯಿತು.

೧೪. ಕನ್ನಡ "ಬೈಬಲ್ ಸಾಹಿತ್ಯ"ದ ಪಿತಾಮಹ-ಡಾ. ಜಾನ್ ಹೆಂಡ್ಸ್:—

Dr. Jonn Hands ಇವನು London Mission Society ಇದಕ್ಕೆ ಸೇರಿದ್ದವನಾಗಿದ್ದು ಕ್ರಿ. ಶ. 1809 ರಲ್ಲಿ ಮದ್ರಾಸಿನಲ್ಲಿ ಬಂದಿಳಿದನು. ಇವನು ದಕ್ಷ ಮತಪ್ರಚಾರಕನು ಹೇಗೋ ಹಾಗೆಯೇ ವೈದ್ಯಕೀಯ ವಿದ್ಯೆಯಲ್ಲೂ ಪ್ರವೀಣನೆನಿಸಿದ್ದನು. ಇವನು ಈ ದೇಶಕ್ಕೆ ಬಂದಕೂಡಲೇ ತಮಿಳು, ತೆಲುಗು, ಸಂಸ್ಕೃತ, ಪರ್ಶಿಯನ್ ಇತ್ಯಾದಿ ಭಾಷೆಗಳಲ್ಲಿ ಕುಶಲತೆಯನ್ನು ಪಡೆದನು. Dr. J. Hands ಇವನನ್ನು ಬಳ್ಳಾರಿಯ ಮತಪ್ರಚಾರ ಕ್ಷೇತ್ರದ ಮುಖ್ಯಸ್ಥನಾಗಿ ನೇಮಕವಾದ ಮೇಲೆ ಅವನು ಕನ್ನಡ ಭಾಷೆಯಲ್ಲಿ ಅಸಾಮಾನ್ಯ ಪ್ರೌಢಿಮೆಯನ್ನು ಗಳಿಸಿದನು. ಕನ್ನಡ ಭಾಷೆಯಲ್ಲಿ ಬೈಬಲ್ಲನ್ನು ಬರೆಯಲು ಆರಂಭಿಸಿದ ಸಾಹಸಿಗಳಲ್ಲಿ ಇವನು ಮೊದಲಿಗನೆಂದರೂ ಸಲ್ಲುವುದು.

Dr. John Hands ಇವನು ಮೊದಲಾಗಿ ತನ್ನ ಬಳ್ಳಾರೀ ವಸತಿಯಿಂದ Luke's Bible ಇದರ ಕನ್ನಡ ಭಾಷಾಂತರದ ಕೆಲಸಕ್ಕೆ ತೊಡಗಿದನು. ಸುಮಾರು 510 demy ಪುಟಗಳಷ್ಟು ಕನ್ನಡ ಭಾಷೆಯನ್ನು ಬರೆದ ಅವನ ಅಂದಿನ ಸಾಹಸವು ಸರ್ವರ ಪ್ರಶಂಸೆಗೂ ಪಾತ್ರವಾಯಿತು. ಅದನ್ನು ಮುದ್ರಿಸಲಿಕ್ಕೆಂದು ಅವನು ಬಂಗಾಳದ ಶ್ರೀ ರಾಮ್‌ಪುರ ಮುದ್ರಣಾಲಯಕ್ಕೆ ಕಳುಹಿಸಿದನು. ಅದಕ್ಕಾಗಿ ಅವನಿಗೆ ಕಲ್ಕತ್ತಾದ Auxialiary's New Testament ಎಂಬ ಕ್ರೈಸ್ತ ಸಂಸ್ಥೆಯೂ ಧನಸಹಾಯವನ್ನು ಮಾಡಿ ಅವನ ಕೆಲಸವನ್ನು ಪ್ರೋತ್ಸಾಹಿಸಿತು.

ಆ ಕಾಲಕ್ಕೆ ಭಾರತೀಯ ಪ್ರಮುಖ ಭಾಷೆಗಳ ಲಿಪಿಗಳ ಅಚ್ಚು ಮೊಳೆಗಳು ಇದ್ದ ಛಾಪಖಾನೆಯು ಶ್ರೀರಾಮ್‌ಪುರದ ಕ್ರೈಸ್ತ ಮುದ್ರಣಾಲಯವೊಂದೇ ಆಗಿತ್ತು. ಸರಕಾರೀ ಮುದ್ರಣಾಲಯಗಳಲ್ಲಿ ಇಂಗ್ಲಿಷ್ ಮತ್ತು ಸ್ಥಳೀಯ ಎರಡೋ ಮೂರೋ ಭಾಷೆಗಳ ಮುದ್ರಣಕ್ಕೆ ಮಾತ್ರ ಸೌಕರ್ಯವನ್ನೊದಗಿಸಿದ್ದುವು. ಹೇಗೋ 1812 ರಲ್ಲಿ ಆ ಶ್ರೀರಾಮ್‌ಪುರದ ಮುದ್ರಣಾಲಯಕ್ಕೆ ಬೆಂಕಿ ಹಿಡಿದು ಅಲ್ಲಿದ್ದ ಓಲೆ ರಾಶಿಗಳೆಲ್ಲಾ ಸುಟ್ಟುಹೋದ ವಿಷಯವನ್ನು ಕುರಿತು ಹಿಂದೆ ಪ್ರಸ್ತಾಪಿಸಲಾಗಿದೆ, ಹಾಗೆ ಬೆಂದುಹೋದ ಹೊತ್ತಗೆಗಳ ಪೈಕಿ Dr. John Hands ಇವನ ಕನ್ನಡ ಬೈಬಲ್ ಇದರ ಓಲೆಪ್ರತಿಯೂ ಸೇರಿದ್ದಿತು. ಹೇಗೋ ಅವನು ಅದನ್ನೇ ಪುನಃ ಬರೆಯುವ ತೊಂದರೆಯನ್ನು ವಹಿಸಿದ್ದಲ್ಲದೆ ಅದನ್ನು ಅಂತೆಯೇ ಪರಿಷ್ಕೃತ ರೂಪದಲ್ಲಿ ಬರೆದು ಮುಗಿಸಿ ಕ್ರಿ. ಶ. 1820 ರಲ್ಲಿ ಸ್ಥಾಪಿಸಲಿಕ್ಕೆ ಕಳುಹಿಸಿದನು. ಹೀಗೆ ಪ್ರಕಟವಾದ ಆ 511 demy ಪುಟಗಳ ಗ್ರಂಥವು "Gospels and Acts" ಎಂಬ ಹೆಸರಿನಿಂದ ಪ್ರಚಾರವಾದುದಲ್ಲದೆ ಅದು ಕನ್ನಡದಲ್ಲಿ ಮುದ್ರಣವಾದ ಮೊದಲನೇ ಬೈಬಲ್ ಧರ್ಮ

ಗ್ರಂಥವಾಯಿತು.

Rev. John Hands ಇವನ ಕೆಲಸವು ಇಷ್ಟರಲ್ಲಿಯೇ ಮುಗಿಯಲಿಲ್ಲ. ಆದರನಂತರವೂ ಅವನ ಬೈಬಲ್ ಅನುವಾದ ಕಾರ್ಯವು ಪ್ರಖರವಾಗಿ ಮುಂದುವರಿಯಿತು. ಮೇಲೆ ಹೇಳಿದ "Luke's Bible" ಇದರ ಪ್ರಕಟಣೆಯ ನಂತರ "ಮೋಸೆಯ ಮೊದಲನೇ ಕಾಂಡವು" ಎಂಬ ಇನ್ನೊಂದು ಬೈಬಲ್ ಬರೆವಣಿಗೆಯನ್ನು ಪೂರ್ತಿಗೊಳಿಸಿ ಮುದ್ರಣಕ್ಕೆ ಕಳುಹಿಸಿದನು. ಅದರನಂತರ "ಹಳೇ ಒಡಂಬಡಿಕೆ" ಅಥವಾ Old Testament ಇದರ ಕನ್ನಡ ಅನುವಾದವೂ ಸಿದ್ಧವಾಯಿತು. ಈ ಎರಡೂ ಗ್ರಂಥಗಳು ಮುದ್ರಣವಾದಾಗ ಅದು ಒಟ್ಟಾಗಿ 1600 demy ಪುಟಗಳಷ್ಟು ದೊಡ್ಡದಾಯಿತೆಂದರೆ ಕನ್ನಡ ಸಾಹಿತ್ಯ ಇದ್ದ ಅಪೂರ್ವ ಗದ್ಯಗ್ರಂಥವಾಯಿತು.

**೧೫. ಜಾನ್ ಹೆಂಡ್ಸ್ ಇವನಿಂದ ರಚಿತವಾದ ಬೈಬಲ್ ಬೃಹದ್ಗ್ರಂಥಗಳು :**

John Hands ಇವನು ಸುಮಾರು 1830 ರನಂತರ Rev. John Reid ಇವನ ಸಹಾಯವನ್ನು ಪಡೆದು ತಾನು ಆ ವರೆಗೆ ಬರೆದಿದ್ದ ಬೈಬಲ್ ಸೂಕ್ತಿಗಳು, ಪ್ರಸಂಗಗಳು ಇತ್ಯಾದಿಗಳನ್ನು ಮುದ್ರಿಸಲಿಕ್ಕೆ ಸಿದ್ಧಪಡಿಸಿದನು. ಅವೆಲ್ಲವೂ "Ephesian and Philipians" ಎಂಬ ಹೆಸರಿನಿಂದ ಕರೆಯಲ್ಪಟ್ಟು ಅದರ ಬೇರೆ ಬೇರೆ ಭಾಗಗಳನ್ನು ಶ್ರೀರಾಮ್‌ಪುರ, ಬಳ್ಳಾರಿ ಮತ್ತು ಮದ್ರಾಸು ಕನ್ನಡ ಛಾಪಖಾನೆಗಳಲ್ಲಿ ಕ್ರೈಸ್ತಮತ ಪ್ರಚಾರಸಂಸ್ಥೆಗಳೇ ಮುದ್ರಿಸಿ ಹೊರತಂದರು. ವಿದೇಶೀಯ ಪಂಡಿತನೊಬ್ಬನು ಆ ಕಾಲವಲ್ಲಿ ಅನುಸರಿಸಿದ ಕನ್ನಡ ಭಾಷಾ ಶೈಲಿಯು ಎಂತಿದ್ದಿತೆಂಬುದಕ್ಕೆ ಈ ಗ್ರಂಥದಿಂದ ಕೆಳಗಿನ ಪಂಕ್ತಿಗಳನ್ನು ಉದಾಹರಿಸಲಾಗಿದೆ. *

> "......ತರುವಾಯ ಅವರು ಅಲ್ಲಿ ಶಿಷ್ಯರೊಡನೆ ಬಹುಕಾಲವು ವಾಸವಾಗಿದ್ದರು. ಆದರೆ ಕೆಲಬರು ಯೆಹೂದ್ಯರಾ ದೇಶದಿಂದ ಬಂದು ನೀವು ಮೋಶೇನ ನಿಯಮ ಪ್ರಕಾರ ಸುನ್ನತಿಯನ್ನು ಹೊಂದದಿದ್ದರೆ ರಕ್ಷಿಸಲ್ಪಡಲಾರಿರೆಂದು ಸಹೋದರರನ್ನು ಬೋಧಿಸಿದರು. ಆದದರಿಂದ ಪಾಲನಿಗೂ ಬರ್ನಬಾನಿಗೂ ಅವರ ಸಂಗಡ ಬಹಳ ವಿವಾದವೂ ತರ್ಕವೂ ವುಂಟಾದಾಗ ಆ ತರ್ಕದ ವಿಷಯವನ್ನು ಕುರಿತು ಪಾಲನೂ ಬರ್ನಬಾನನೂ ಅವರಲ್ಲಿ ಬೇರೆ ಕೆಲಬರೂ ಯೆರೂಸಲೇಮಿನಲ್ಲಿರುವ ಪ್ರೇಷಿತರ ಬಳಿಗೂ ಹಿರಿಯರ ಬಳಿಗೂ ಹೋಗ ನಿರ್ಣಯಿಸಿಕೊಂಡರು........"

Dr. John Hands ಇವನ ಹಲವು ಕನ್ನಡ ಬರೆವಣಿಗೆಗಳಿಗೆ ಸಹಾಯಕರಾಗಿ ಅಂದಿನ ಕನ್ನಡ ಭಾಷಾ ತಜ್ಞರಾದ A. D. Campbell ಮತ್ತು R. C. Gosling ಇವರೂ ಇದ್ದರು. ಕ್ರಿ. ಶ. 1838 ರಲ್ಲಿ ಅವನ ಎಲ್ಲಾ ಬೈಬಲ್ ಬರೆವಣಿಗೆಗಳೂ ಸುಮಾರು ೨೫೦೦ demy ಪುಟಗಳ ನಾಲ್ಕು ಕಾಂಡಗಳಾಗಿ ಪ್ರಕಟವಾದುವು. ಕ್ರಿ. ಶ. 1809 ರಿಂದ ಈ ನಿಷ್ಠಾವಂತ ಕ್ರೈಸ್ತಗುರುವು ಶ್ರೇಷ್ಠ ಸಾಹಿತಿ

---

* ಈ ಗ್ರಂಥದ ಒಂದೆರಡು ಪುಟಗಳ ಚಿತ್ರವನ್ನು ಜೋಡಿಸಿದೆ ಕೊಡಲಾಗಿದೆ.

ಯಾಗಿ ಸಮಾಜ ಸುಧಾರಕನಾಗಿ ಮತ್ತು ಕನ್ನಡದಲ್ಲಿ ಬೃಹದ್ಗ್ರಂಥಗಳನ್ನು ಬರೆದವನಾಗಿದ್ದು ಸುಮಾರು ೩೫ ವರ್ಷಗಳ ಕಾಲ ಈ ದೇಶದಲ್ಲಿ ಒರ್ವ ಧರ್ಮಾಭಿಮಾನಿಯಾಗಿ ಬಾಳಿದನು. ಬಳ್ಳಾರಿಯ ಕ್ರೈಸ್ತಮತ ಪ್ರಚಾರಕ್ಷೇತ್ರವು ಅಂದು ಸಾಹಿತ್ಯ ಮತ್ತು ವಿದ್ಯಾಮಂದಿರವಾಗಿಯೂ ಮೆರೆಯಿತು. ಇವನು ತನ್ನ ಧರ್ಮನಿಷ್ಠೆ ಮತ್ತು ಪಾಂಡಿತ್ಯಕ್ಕೆ ಇಡೀ ಭಾರತದಲ್ಲಿ ಅಂದು ಪ್ರಖ್ಯಾತನಾಗಿದ್ದನು. ಇವನು ತನ್ನ ಅಪಾರ ಕನ್ನಡ ಬೈಬಲ್ ಬರೆವಣಿಗೆಯಿಂದ ಅವನನಂತರ ಬಂದ ಹಲವು ಪಾಶ್ಚಾತ್ಯ ಧರ್ಮ ಗುರುಗಳಿಗೆ ಮಾರ್ಗದರ್ಶಕನಾದನು.

Rev. John Hands ಇವನು ಬರೆದ ಸುಮಾರು 3000 demy ಪುಟಗಳಿಗೂ ಮಿಕ್ಕಿದ ಕನ್ನಡ ಬೈಬಲ್ ಕೃತಿಗಳನ್ನು ಕ್ರಿ.ಶ. 1885 ರಲ್ಲಿ ಅಂದಿನ ಕ್ರೈಸ್ತ ಮತಪ್ರಚಾರ ಸಂಸ್ಥೆಗಳ ಕಾರ್ಯಕರ್ತರು ಬಳ್ಳಾರಿಯಲ್ಲಿಯೇ ಪುನರ್ಮುದ್ರಿಸಿ ಪ್ರಕಟಿಸಿದರು.

## ೧೬. ವಿಲಿಯಂ ಕ್ಯಾರಿ ಇವನಿಂದ ಕನ್ನಡ ಭಾಷಾ ಬೈಬಲ್ಲುಗಳು :—

ಕಳೆದ ಶತಮಾನದ ಪ್ರಾರಂಭದಲ್ಲಿ ಹಿಂದೂಸ್ಥಾನದಲ್ಲಿ ಇದ್ದ ಪ್ರಚಂಡ ವಿದ್ವಾಂಸನಾದ Dr. William Carey ಇವನ ವಿಷಯವಾಗಿ ಹಿಂದಿನ ಪುಟಗಳಲ್ಲಿ ವಿಶದವಾಗಿ ಪ್ರಸ್ತಾಪಿಸಲಾಗಿದೆ. London Mission Society ಇದಕ್ಕೆ ಸೇರಿದ್ದ ಈ ಧರ್ಮಗುರುವು ಒರ್ವ ಅಸಾಮಾನ್ಯ ಪಂಡಿತನಾಗಿ ಬಹುಭಾಷಾ ಪರಿಣತನಾಗಿ ಮತ್ತು ಶ್ರೇಷ್ಠ ಪ್ರಾಧ್ಯಾಪಕನಾಗಿ ಅಂದು ಶೋಭಿಸಿದನು. ಕಲ್ಕತ್ತಾದಲ್ಲಿಯೇ ಇವನು ನೆಲೆಸಿದ್ದನಾದರೂ ಅವನಿಗೆ ಇಡೀ ಭಾರತವೇ ಒಂದು ಸೇವಾಕ್ಷೇತ್ರವಾಗಿತ್ತು. Rev. Henry Tartyn ಇವನು ಕ್ರಿ. ಶ. 1811 ರಲ್ಲಿ ಗೋವಾದಲ್ಲಿ ಅಂದು ಇದ್ದ ೨೦,೦೦೦ ಕನ್ನಡಿಗ ಕ್ರೈಸ್ತರಿಗೆ ಹಂಚಲು ಕನ್ನಡ ಭಾಷಾ ಬೈಬಲ್ಲಿನ ಅವಶ್ಯಕತೆಯಿದೆ ಯೆಂದು ತಿಳಿಸಿದಾಗ ಈ ಭಾಷಾಶಾಸ್ತ್ರಜ್ಞ Rev. Carey ಇವನು ಕನ್ನಡದಲ್ಲೂ ಬೈಬಲ್ಲಿನ ಭಾಷಾಂತರವನ್ನು ತರುವ ಕೆಲಸಕ್ಕೆ ಇಳಿದನು. John Hands ಇವನ ಕನ್ನಡ ಬೈಬಲ್ಲು ಮೇಲೆ ಹೇಳಿದಂತೆ 1820 ರಲ್ಲಿ ಮುದ್ರಣವಾದನಂತರ ಎರಡನೇದಾಗಿ ಇವನ ಬೈಬಲ್ಲು 1823 ರಲ್ಲಿ ಅಚ್ಚಾಗಿ ಪ್ರಕಟವಾಯಿತು. *

Rev. William Carey ಇವನ ಕನ್ನಡ ಬೈಬಲ್ಲು Dr. J. Hands ಇವನ ಮೊದಲನೇ 511 demy ಪುಟಗಳ ಕನ್ನಡ ಬೈಬಲ್ಲಿಗಿಂತ ಇಮ್ಮಡಿಯಷ್ಟು ದೊಡ್ಡದಾಗಿದ್ದು ಅದು ಮತ್ತೊಂದು ಉದ್ಗ್ರಾಮ ಗ್ರಂಥವಾಯಿತು. 1008 demy ಪುಟಗಳ ಈ ಹೊತ್ತಗೆಯನ್ನು “ ಧರ್ಮ ಪುಸ್ತಕವು ” ಎಂದು ಕರೆದನು. ಅದರ ಮುಖ ಪುಟದಲ್ಲಿ—

“ ಈಶ್ವರನ ಯೆಲ್ಲ ವಾಕು ವಿಶೆಷವು ಮನುಷ್ಯರ ಉಧಾರ ಮಾಡುವಣ ಆಚಾರದ ಯಾವುದು ಪ್ರಕಾಶವು ಮಾಡಿದ್ದಾನೆ ಅದೆ ಧರ್ಮಪುಸ್ತಕವು.”

* ಈ ಗ್ರಂಥದ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಟ್ಟಿದೆ.

ಎಂಬುದಾಗಿ ಬರೆದಿದೆ, ಅಲ್ಲದೆ ರಟ್ಟಿನಲ್ಲಿ ಇಂಗ್ಲಿಷ್‌ನಲ್ಲೂ ಹೀಗೆ ಬರೆದಿದೆ :—

'The New Testament of our Lord and Saviour Jesus Christ —Original Greek in Kurnata language-Seerampur Missonaries.'

ಗ್ರೀಕ್ ಭಾಷೆಯಿಂದ ಕನ್ನಡಕ್ಕಿಳಿಸಲ್ಪಟ್ಟ ಈ ಬೈಬಲ್ಲಿನಿಂದ ಈ ಕೆಲವು ಪಂಕ್ತಿಗಳನ್ನು ನಿದರ್ಶನಾರ್ಥವಾಗಿ ಕೊಡಲಾಗಿದೆ :—

> "ಯೆಹೂದಿಯ್ಯರು ಅವನ್ನ ಗುಡಿಯಲ್ಲಿ ನೋಡಿ ಯೆಲ್ಲರ ನಡುವೆ ಬಹಳ ಅಡಾಹಿಡಿ ಹುಟ್ಟಿಸಿದರು. ಅವರವನನ್ನು ಹಿಡಿದು ಕೂಗಿ ಹೇಳಿದರು! ಯಲೊ ಯಿಶರ ಎಲ ಜನಗಳಿರಾ ಉಪಕಾರವನ್ನು ಮಾಡಿರಿ, ಯಾವ ಮನುಷ್ಯರು ಪ್ರತಿ ಸ್ಥಳದಲ್ಲಿ ಜನಗಳನ ವ್ಯವಸ್ಥಿಯ ಈ ಸ್ಥಳಕ್ಕೆ ವಿರೋಧವಾಗಿ ಜನಗಳನೆಲ್ಲರನುನ್ನು ಶಿಕ್ಷಿಸುತ್ತಾನೊ ಆತನೆ ಇವನು ಗುಡಿಯಲ್ಲಿ ಗ್ರೀಕರನ ತಂದಿದ್ದಾನೆ. ಈ ಪವಿತ್ರ ಸ್ಥಾನವನ್ನು ಅಶುದ್ಧವನ್ನು ಮಾಡಿದ್ದಾನೆ. ಅವರು ಮೊದಲು ಎಫೆಸಸಿಯ್ಯುನಾದ ತ್ರೊಫೀಮುಸನ ಪಟ್ಟಣದಲ್ಲಿ ಅವನ ಸಂಗಡ ನೋಡಿದ್ದರು........"

Rev. William Carey ಇವನ ಈ ಬೈಬಲ್ಲು ಗ್ರಂಥವು 1824 ರಿಂದ ಹಲವು ವರ್ಷಗಳ ವರೆಗೆ ಕರ್ಣಾಟಕದ ಹಲವು ಕ್ರೈಸ್ತಗುಡಿಗಳಲ್ಲಿ ಉಪಯೋಗಿಸಲ್ಪಟ್ಟಿತ್ತು. ಹೊಸತಾಗಿ ಮತಾಂತರಗೊಂಡ ಅಂದಿನ ಕನ್ನಡಿಗ ಕ್ರೈಸ್ತರಿಗೆ ಈ ದೊಡ್ಡ ಬೈಬಲ್ ಹೊತ್ತಗೆಗಳು "ವೇದ" ಗಳೇ ಆದುವು. ಈ ವಿದೇಶೀಯರು ಬರೆದ ಕನ್ನಡವನ್ನು ಪ್ರತಿ ಆದಿತ್ಯವಾರ ದಿನ ಜನರಿಗೆ ವಿವರಿಸಿ ಹೇಳಲು ದೇಶೀಯ ಕ್ರೈಸ್ತರಲ್ಲಿ ಕೆಲವರನ್ನು 'ಫಾದರಿ' ವರ್ಗಕ್ಕೆ ಏರಿಸಿ ಅವರಿಗೆ ನಿಲುವಂಗಿಯನ್ನು ಉಡಿಸಿ ಅಡ್ಡಗೋಲಿನ ಕೊರಡನ್ನು (Cross) ಹಿಡಿಸಿ ಆ ವರೆಗೆ ಬಿಳಿಯರೇ ಆಗಿದ್ದ ಕ್ರೈಸ್ತಗುರುಗಳೆಡೆಯಲ್ಲಿ ಕಂದು ವರ್ಣದ ಗುರುಗಳನ್ನೂ ಜನರಿಗೆ ಪ್ರದರ್ಶಿಸಿದರು.

### ೧೭. ವಿಲಿಯೆಂ ರೀವ್ ಇವನಿಂದ ಬೈಬಲ್ಲಿನ ಕನ್ನಡ ಭಾಷಾಂತರ :—

ಕನ್ನಡದಲ್ಲಿ ಸಾಹಿತ್ಯ ಮತ್ತು ಉದ್ಧಾಮ ನಿಘಂಟು ಗ್ರಂಥಗಳನ್ನು ರಚಿಸಿದ William Reeve ಇವನು ಈ ದೇಶಕ್ಕೆ ಬಂದ ಉದ್ದೇಶವಾದರೋ ಬೈಬಲನ್ನು ಕನ್ನಡದಲ್ಲಿ ಬರೆಯಬೇಕೆಂಬುದೇ ಆಗಿತ್ತು. ಕ್ರಿ ಶ. 1827 ರ ಕಾಲದಲ್ಲಿ ಮದ್ರಾಸಿನ Fort St. George ಖಚೇರಿ ಮತ್ತು ಭಾರತೀಯ ಭಾಷಾಶಾಲೆಯಲ್ಲಿ ಒರ್ವ ಪ್ರಮುಖ ಭಾಷಾ ವಿಶಾರದನಾಗಿ ಇವನು ದುಡಿಯುತ್ತಿದ್ದನು. ಕನ್ನಡ ತಮಿಳು, ಒರಿಯಾ, ಬಂಗಾಳೀ, ಸಂಸ್ಕೃತ ಇತ್ಯಾದಿ ಭಾಷೆಗಳಲ್ಲಿ ಪಾರಂಗತತೆಸಿಸಿದ್ದನು. ಅಲ್ಲದೆ ಅವುಗಳಲ್ಲೆಲ್ಲಾ ಪ್ರಖ್ಯಾತ ಶಿಕ್ಷಣ ತಜ್ಞನೆಂದು ಸರ್ವ ಪರಿಚಿತನಾಗಿದ್ದನು. ಮದ್ರಾಸಿನಲ್ಲಿ ಇವನು Old Testament ಅಥವಾ 'ಹಳೆಯ ಒಡಂಬಡಿಕೆ' ಇವನ್ನು ಕನ್ನಡಕ್ಕಿಳಿಸಿದನು. ಅದನ್ನು London Mission Society ಇದರ ಮದ್ರಾಸು ಕೇಂದ್ರವು "ಮೋಸೆಯ ಮೊದಲನೇ ಕಾಂಡ" ಎಂಬ ಹೆಸರಿನಿಂದ

ಮುದ್ರಿಸಿ ಪ್ರಕಟಿಸಿತು. ಅದು ಬರೇ 184 demy ಪುಟಗಳ ಚಿಕ್ಕ ಹೊತ್ತಗೆಯಾದರೂ ಅದರ ಭಾಷೆ ಮತ್ತು ಶೈಲಿಯು ಉತ್ತಮವಾಗಿತ್ತು.

Rev. William Reeve ಇವನು 1830 ರಿಂದ ಆರೆಂಟು ವರ್ಷಗಳ ಕಾಲ ಬೈಬಲ್ ಭಾಷಾಂತರ ಕಾರ್ಯದಲ್ಲಿಯೇ ನಿರತನಾಗಿದ್ದು ಕಡೆಗೆ 1839 ರಲ್ಲಿ 1200 demy ಪುಟಗಳಿಗೂ ವಿಾರಿದ ಅವನ ಕನ್ನಡ ಬೈಬಲ್ ಗ್ರಂಥವು ಪ್ರಕಟವಾಯಿತು. ಈ ಸಂಪೂರ್ಣ ಕನ್ನಡ ಬೈಬಲ್ ಹೊರಬಂದ ಕೂಡಲೇ ಅದರ ಪ್ರತಿಗಳನ್ನು ಕರ್ಣಾಟಕದ ಎಲ್ಲ ಕ್ರೈಸ್ತಗುಡಿಗಳಿಗೂ ಹಂಚಲಾಯಿತು. ಉತ್ತಮ ಶೈಲಿಯಲ್ಲಿ ಬರೆಯಲ್ಪಟ್ಟ ಈ ಧರ್ಮಗ್ರಂಥವು ಅಂದಿನ ದೇಶೀಯ ಕ್ರೈಸ್ತರ ಕೈಗನ್ನಡಿಯಾಗಿತ್ತು. ಇದರೊಡನೆಯೇ William Reeve ಹಿಂದೆಯೇ ಬರೆದಿದ್ದ Old Testament ಇದರ ಕನ್ನಡಾನುವಾದವೂ ಪುನರ್ಮುದ್ರಣವಾಯಿತು. ಅಷ್ಟೇ ಅಲ್ಲ, ಈ ಪುಸ್ತಕವು ಕ್ರಿ.ಶ. 1860 ರ ಒಳಗಾಗಿ ಪುನಃ ಒಂದೆರಡು ಬಾರಿ ಮುದ್ರಣವಾಯಿತೆಂದರೆ ಅದು ಅವನ ಕನ್ನಡ ಭಾಷಾ ಜ್ಞಾನಕ್ಕೂ ವಿಷಯ ಪ್ರತಿಪಾದನೆಗೂ ತಕ್ಕ ಪ್ರಶಸ್ತಿಯಾಗಿದೆಯೆಂದೆನ್ನಬಹುದು.

ಹೇಗೂ Rev. William Reeve ಇವನು ತನಗಿಂತ ಹಿಂದೆ ಇದ್ದ Dr. John Hands ಮತ್ತು Rev. Carey ಇವರು ಪ್ರಾರಂಭಿಸಿ ಪೂರ್ತಿಗೊಳಿಸಿದ್ದ ಕನ್ನಡ ಬೈಬಲ್ ರಚನೆಗೆ ಕಳಶವನ್ನಿಟ್ಟಂತೆ ತನ್ನ ಬೈಬಲನ್ನೂ ಅಷ್ಟೇ ದೊಡ್ಡಪ್ರಮಾಣದಲ್ಲಿ ಬರೆದು ಜಯಪ್ರದನಾದನು. ಈ ಮೂವರ ಅಸಮಾನ ಸಾಹಸದ ಪರಿಣಾಮವಾಗಿ ಕನ್ನಡ ಗದ್ಯ ರಚನೆ, ಗ್ರಂಥರಚನೆ, ಅವುಗಳ ಮುದ್ರಣ, ಇತ್ಯಾದಿಗಳೆಲ್ಲವೂ ಇನ್ನೂ ಭರದಿಂದ ಸಾಗಿದುವು. ಅಲ್ಲದೆ ಇವರ ಈ ಬೃಹತ್ಪ್ರಮಾಣದ ಕೃತಿಗಳು ಕ್ರಿ.ಶ. 1810 ರಿಂದ 1840 ರ ವರೆಗಿನ ಮೂವತ್ತು ವರ್ಷಗಳ ಅವಧಿಯಲ್ಲಿ ಹೊರಬಿದ್ದು ಅವು ಅವರ ನಂತರದ ವಿದ್ವಾಂಸರಿಗೆ ತಕ್ಕ ಸ್ಫೂರ್ತಿಯನ್ನೂ ಆಧಾರವನ್ನೂ ಕೊಡತಕ್ಕಂಥಾ ಅಮೂಲ್ಯ ಕೃತಿಗಳೆಂದು ಪ್ರಸಿದ್ಧವಾದುವು.

---

## ೧೩

ಕೆಲವಂ ಬಲ್ಲವರಿಂದ ಕಲ್ತು
  ಕೆಲವಂ ಶಾಸ್ತ್ರಂಗಳಿಂ ಕೇಳಿ ತಾಂ
ಕೆಲವಂ ಮಾಳ್ಪವರಿಂದ ಕಂಡು
  ಕೆಲವಂ ಸುಜ್ಞಾನದಿಂ ನೋಡುತಾ
ಕೆಲವಂ ಸಜ್ಜನ ಸಂಘದಿಂದಲರಿಯಲ್
  ಸರ್ವಜ್ಞನಪ್ಪಂತೆ ನರಂ
ಪಲವುಂ ಪಳ್ಳ ಸಮುದ್ರವೈ
  ಹರ ಹರಾ ಶ್ರೀ ಚೆನ್ನಸೋಮೇಶ್ವರಾ !

[ಸೋಮೇಶ್ವರ]

ಕ್ರೈಸ್ತ ಜನಾಂಗಗಳು ಅಥವಾ ಪಾಶ್ಚಾತ್ಯರು ಯಾವುದೇ ಕೆಲಸವನ್ನು ಕೈಗೊಂಡರೂ ಅದನ್ನು ವಿಧಾಯಕ ರೀತಿಯಲ್ಲಿ ನಡೆಸಿ ಪೂರ್ತಿಗೊಳಿಸುವುದೇ ಅವರ ವೈಶಿಷ್ಟ್ಯವಾಗಿದೆ. ಅವರಲ್ಲಿ ಎಂದೂ ಧೂರ್ತತನವಾಗಲೀ ಬಲಾತ್ಕಾರವಾಗಲೀ ಹಿಂಸಾಕೃತ್ಯವಾಗಲೀ ಕಂಡುಬಂದುದಿಲ್ಲ. ಚಾರಿತ್ರಿಕವಾಗಿ ಅವರು ವಿರೋಧಿಗಳನ್ನು ಪ್ರತಿಭಟಿಸಲು ದಂಗೆಕೋರರನ್ನು ಅಡಗಿಸಲು, ರಾಜಕೀಯ ವೈರಿಗಳನ್ನು ನಿರ್ಮೂಲಿಸಲು ಕಾಲಕ್ಕೆ ತಕ್ಕಂತೆ ಯುದ್ಧ ನೀತಿಯನ್ನು ಅನುಸರಿಸಿದ್ದರೂ ಅದು ಅನಿವಾರ್ಯದ ವಿಚಾರವಾಗಿದೆ. ಆದರೆ ಅವರು ತಮ್ಮ ಮತಪ್ರಚಾರ, ಸಮಾಜಸೇವೆ, ರಾಜನೀತಿ ಇತ್ಯಾದಿಗಳನ್ನು ಲೋಕದ ಇತರ ಭಾಗಗಳಲ್ಲಿ ಬಿತ್ತರಿಸಿದಾಗ ಎಂದೂ ಅವರು ತಮ್ಮ ಧರ್ಮ ಮತ್ತು ನೀತಿಯನ್ನು ಮೀರಿ ಹೋದುದಿಲ್ಲ. ಹಲವು ಸಂದರ್ಭಗಳಲ್ಲಿ ಅವರು ಹಿಂಸಾಕೃತ್ಯವನ್ನು ಹದ್ದುಮೀರಿ ಪ್ರದರ್ಶಿಸಿದಾಗ ಹಾಗಾಗಲು ಕಾರಣವೇನೆಂದು ನೋಡಿದರೆ ಅವರ ವಿರೋಧಿಗಳು ರಾಜತಂತ್ರದಲ್ಲಿ ಅವರಂತೆ ಪಳಗದೇ ಇದ್ದುದೇ ಕಾರಣವಾಗಿದೆ ಎಂದು ತಿಳಿಯಬಹುದಾಗಿದೆ.

ಹೇಗೂ ಮತೀಯ ವಿಚಾರದಲ್ಲಿ ಪಾಶ್ಚಾತ್ಯರು ಈ ದೇಶದಲ್ಲಿ ಬಲಪ್ರಯೋಗ ನಡೆಸಿದ್ದರೆ ಬಹುಶಃ ಅವರು ಹಿಂದೂ ಜನವನ್ನು ಇನ್ನೂ ಬಹು ಸಂಖ್ಯೆಯಲ್ಲಿ ಮತಾಂತರಗೊಳಿಸುವ ಸಾಧ್ಯತೆ ಇತ್ತು ; ಅಥವಾ ಹಾಗಲ್ಲದಿದ್ದರೆ ಅವರ ಈ ಶತಮಾನದಲ್ಲಿ ಈ ದೇಶದಿಂದ ಅಗಲುವ ಬದಲು ಕಳೆದ ಶತಮಾನದಲ್ಲಿಯೇ ಆದ ಆ ದಂಗೆಯ ಕಾಲದಲ್ಲಿ ಹೋಗಬೇಕಾಗಿತ್ತು. ಹೇಗೂ ಆಂಗ್ಲ ಸರಕಾರವೂ ಕ್ರೈಸ್ತಮತ ಪ್ರಚಾರಕರೂ ಬಹು ಸಾವಧಾನದಿಂದ ರಾಜತಂತ್ರವನ್ನು ಹಲವು ವಿಧದಲ್ಲಿ ಉಪಯೋಗಿಸಿ ಈ ದೇಶದಲ್ಲಿ ತಮ್ಮ ಕಾರ್ಯವನ್ನು ನಡೆಸಿದರು. ಹಾಗಾಗಬೇಕಾದರೆ, ಅವರು ಈ ದೇಶದ ಜನಕ್ಕೆ ವಿದ್ಯೆ ಅಥವಾ ವಿಚಾರ ಜ್ಞಾನವನ್ನೀಯುವುದು ಅವಶ್ಯವೆಂದು ತಿಳಿದಿದ್ದರು. ಅದೇ ದೃಷ್ಟಿಯಿಂದ ಮತಪ್ರಚಾರಕರು ಈ ದೇಶದ ಭಾಷೆಗಳನ್ನು ಕಲಿತು ಜನತೆಯ ಭಾಷೆಯನ್ನೇ ತಮ್ಮ ಕಾರ್ಯಸಾಧನೆಗೆ ಬಳಸಿದರು. ಪರಿಣಾಮವಾಗಿ ಸಹಸ್ರಾರು ಅಥವಾ ಅಸಂಖ್ಯ ಬೈಬಲ್ ಗ್ರಂಥಗಳು ಭಾರತೀಯ ಸಾಹಿತ್ಯದಲ್ಲಿ ತೋರಿಬಂದುವು. ಕನ್ನಡ

ದಲ್ಲೂ ಅದೇ ರೀತಿಯಾಗಿ ಒಂದು ಹೊಸ ಸಾಹಿತ್ಯ ವಾಙ್ಮಯವು ಕಳೆದ ಶತಮಾನದ ಆರಂಭದಿಂದಲೇ ಕಾಣಿಸತೊಡಗಿತು.

**೨. ಜಾನ್ ರೀಡ್ ಇವನಿಂದ ಕನ್ನಡ ಬೈಬಲ್ ಪುಸ್ತಕಗಳು :—**

Rev. John Reid ಇವನು ಮತ್ತೊರ್ವ ಕ್ರೈಸ್ತಗುರು ಮತ್ತು ಕನ್ನಡ ಸಾಹಿತ್ಯದಲ್ಲಿ ಸೇವಾಪುರುಷ! ಇವನಿಂದ ರಚಿತವಾದ ಕನ್ನಡ ಬೈಬಲ್ ಹೊತ್ತಗೆಗಳು ಹಲವು ಇವೆ. London Mission Society ಇದಕ್ಕೆ ಸೇರಿದ John Reid ಇವನು ಬಳ್ಳಾರಿಯ ಕ್ರೈಸ್ತ ಶಿಬಿರದಲ್ಲಿಯೇ ಬಹುಕಾಲ ಇದ್ದನು. Dr. John Hands ಇವನು ಇಂಗ್ಲಿಷ್‌ನಲ್ಲಿ ಬರೆದಿದ್ದ ಕೆಲವು ಬೈಬಲ್ ಬರೆವಣಿಗೆಗಳನ್ನು ಕನ್ನಡಕ್ಕೆ ಭಾಷಾಂತರಿಸಿದನಲ್ಲದೆ ಅವನಿಗೆ "Ephesian and Philippians" ಎಂದು ಬರೆದ ಎರಡು ಕಾಂಡಗಳ ಕನ್ನಡ ಬೈಬಲ್ ಪುಸ್ತಕಗಳನ್ನು ಭಾಷಾಂತರಿಸಲಿಕ್ಕೂ ಸಹಾಯಕನಾಗಿದ್ದನು. ಅದರನಂತರ John Reid ಒರ್ವನೇ ಕ್ರಿ. ಶ. 1830 ರಿಂದ Old and New Testament ಇವೆರಡನ್ನೂ ಕನ್ನಡಕ್ಕಿಳಿಸಿದ್ದು ಅವೆಲ್ಲಾ 1839 ರ ಒಳಗಾಗಿ ಪ್ರಕಟವಾದುವು.

John Reid ಇವನು ಇಂಗ್ಲಿಷ್‌ನಲ್ಲಿ ಬರೆದಿದ್ದ Old Testament ಇವನ್ನೇ William Reeve ಇವನು 1830 ರ ನಂತರ "ಮೋಸೆಯ ಮೊದಲನೇ ಕಾಂಡವು" ಎಂದು ಕನ್ನಡದಲ್ಲಿ ಬರೆದನೆಂಬುದನ್ನೂ ಇಲ್ಲಿ ಗಮನಿಸಬೇಕಾಗಿದೆ. C. Rennius ಇವನು ಕ್ರಿ.ಶ. 1837 ರಲ್ಲಿ ತಮಿಳಿನಲ್ಲಿ ಬರೆದಿದ್ದ ಬೈಬಲನ್ನು John Reid ಇವನು ಕನ್ನಡಕ್ಕೆ ಭಾಷಾಂತರಿಸಿದನು. ಅವನ ಈ ಎರಡೂ ಬರೆವಣಿಗೆಗಳು ಮೂರು ಕಾಂಡಗಳಾಗಿ 1839 ರಲ್ಲಿ ಬಳ್ಳಾರಿಯ ಕನ್ನಡ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾದುವು.

John Reid ಇವನು ಸಹ ಅವನ ಸಮಕಾಲೀನ ಕ್ರೈಸ್ತ ವಿದ್ವಾಂಸರಂತೆ ಸುಮಾರು 1200 demy ಪುಟಗಳಷ್ಟು ಬೈಬಲ್ ಹೊತ್ತಗೆಗಳನ್ನು ಪ್ರಕಟಿಸಿದನು. "Song of Solomon", "Minor Prophets" ಎಂದು ಮೊದಲಾಗಿ ಹಲವು ಕ್ರೈಸ್ತ ಗೀತೆಗಳನ್ನೂ ಕನ್ನಡದಲ್ಲಿ ಬರೆದನು. ಇವನು ಬರೆದ ಬೈಬಲ್ ಸೂಕ್ತಿಗಳನ್ನೂ ಗೀತೆಗಳನ್ನೂ ಆ ಕಾಲದಲ್ಲಿ ಎಲ್ಲಾ ಕ್ರೈಸ್ತಗುಡಿಗಳಲ್ಲಿ ಪ್ರತಿ ಆದಿತ್ಯವಾರ ದಿನ ಪಠಿಸುತ್ತಿದ್ದರು. ದೇಶೀಯ ಕ್ರೈಸ್ತಗುರುಗಳಾರೂ ಆ ಕಾಲಕ್ಕೆ ಇಷ್ಟು ವಿಸ್ತಾರವಾಗಿ, ವಿವರವಾಗಿ ಮತ್ತು ಉತ್ಕೃಷ್ಟವಾಗಿ ಕನ್ನಡವನ್ನು ಬರೆಯುವ ನೈಪುಣ್ಯವನ್ನು ತೋರಿಸಿದ್ದೇ ಇಲ್ಲ. Rev. John Reid ಇವನ ಕನ್ನಡ ಬರೆವಣಿಗೆ ಶೈಲಿಯು William Reeve ಇವನ ಬರೆಹದಂತೆ ಉತ್ತಮವಾಗಿದ್ದು ಭಾಷೆಯು ನಿರರ್ಗಳವಾಗಿ ಹರಿಯುತ್ತಿದ್ದಿತೆಂಬುದು ಅವನ ಬೈಬಲ್ ಗದ್ಯಗ್ರಂಥಗಳಿಂದ ತಿಳಿಯುತ್ತದೆ, ಇವನ ಈ ಪರಿಶ್ರಮವು ಅವನು ಕನ್ನಡನಾಡಿನಲ್ಲಿ ಸುಮಾರು ಇಪ್ಪತ್ತು ವರ್ಷಗಳ ಕಾಲವಿದ್ದು ಬಹು ಶ್ರದ್ಧೆಯಿಂದ ಭಾಷಾ ವ್ಯಾಸಂಗವನ್ನು ಮಾಡಿದ ಫಲವೆಂದು ಅವನ ಬರೆವಣಿಗೆಯಿಂದ ವ್ಯಕ್ತವಾಗುತ್ತದೆ.

**೩. ಹೆನ್ರಿ ಕೊನೋಲಿ ಇವನಿಂದ ಬೈಬಲ್ ಸ್ತೋತ್ರಗ್ರಂಥಗಳು :—**

ಐರ್ಲೆಂಡ್ ರಾಜ್ಯಕ್ಕೆ ಸೇರಿದ್ದ Rev. Henry V. Connolly ಇವನು ಹಳೇ ಮೈಸೂರು ರಾಜ್ಯದಲ್ಲೂ ಮದ್ರಾಸಿನ ಕೆಲವು ಜಿಲ್ಲೆಗಳಲ್ಲೂ ಕ್ರೈಸ್ತಮತ ಬೋಧಕನಾಗಿ ಸಂಚರಿಸಿದನು, ಕ್ರಿ. ಶ. 1835 ರಿಂದ ಇವನು ಬಳ್ಳಾರಿಯ ಕ್ರೈಸ್ತ ಕೇಂದ್ರದಲ್ಲಿ ನೆಲೆಸಿದನು. ದಕ್ಷಿಣ ಭಾರತದ ಎಲ್ಲಾ ಭಾಷೆಗಳಲ್ಲೂ ಪ್ರೌಢ ವ್ಯಾಸಂಗ ವನ್ನು ನಡೆಸಿದ್ದರ ಜೊತೆಗೆ ಸಂಸ್ಕೃತ ಮತ್ತು ಪರ್ಷಿಯನ್ ಭಾಷೆಗಳಲ್ಲೂ ಸಾಕಷ್ಟು ಕುಶಲತೆಯನ್ನು ಸಂಪಾದಿಸಿದ್ದನು. Rev. Connolly ಇವನು ಕ್ರಿ.ಶ. 1838 ರಲ್ಲಿ "ಸಾಧಾರಣವಾದ ಪ್ರಾರ್ಥನೆಗಳೂ ಬಾಪ್ತಿಸ್ಮವನ್ನೂ ಕರ್ತನ ರಾತ್ರಿ ಭೋಜನ ವನ್ನೂ ಆಚರಿಸುವ ಕ್ರಮವೂ ಅಡಗಿರುವ ಪುಸ್ತಕವು," ಎಂಬುದಾಗಿ 131 ಪುಟಗಳ ಒಂದು ಚಿಕ್ಕ ಹೊತ್ತಗೆಯನ್ನೂ ಬಳ್ಳಾರಿಯಲ್ಲಿ ಮುದ್ರಿಸಿ ಹೊರತಂದನು. ಅದರ ರಟ್ಟಿನಲ್ಲಿ ಇಂಗ್ಲಿಷ್‌ನಲ್ಲಿ "A book of Common Prayer and Administration of Sacraments" ಎಂಬುದಾಗಿ ಹೇಳಿದೆ. ಇದರಲ್ಲಿ ಹೆಚ್ಚಾಗಿ ಇಂಗ್ಲೆಂಡ್ ಮತ್ತು ಐರ್ಲೆಂಡ್ ದೇಶಗಳ ಕ್ರೈಸ್ತಗುಡಿಗಳಲ್ಲಿ ಆಚರಿಸುವ ಕಟ್ಟುಕಟ್ಟಳೆಗಳನ್ನು ಕುರಿತಾಗಿ ವಿವರಣೆಯು ಕೊಡಲ್ಪಟ್ಟಿದೆ.

ಈ ವಿದ್ವಾಂಸರು ಜನಸಾಮಾನ್ಯರಿಗೆ ಅದೆಷ್ಟು ಸರಳವಾಗಿ, ಸುಂದರವಾಗಿ ಮತ್ತು ನೇರವಾಗಿ ತಮ್ಮ ಮತ ವಿಚಾರವನ್ನು ದೇಶೀಯ ಭಾಷೆಗಳ ಮೂಲಕ ಮಾಡಿದರೆಂಬುದನ್ನು Rev. Connolly ಇವನ ಪುಸ್ತಕದಿಂದ ತಿಳಿಯಬಹುದು. ಅದರಿಂದ ಈ ಕೆಳಗಿನ ಕೆಲವು ವಾಕ್ಯಗಳನ್ನು ಉದಾಹರಿಸಲಾಗಿದೆ—

> "ಅತ್ಯಂತ ಪ್ರೀಯರಾದ ಸಹೋದರರೇ, ಪರಲೋಕದಲ್ಲಿರುವ ನಮ್ಮ ತಂದೆಯಾದ ಸರ್ವಶಕ್ತಿಯುಳ್ಳ ದೇವರ ಸನ್ನಿಧಾನದಲ್ಲಿ ನಮ್ಮ ನಾನಾ ಪಾಪಗಳ ಬಚ್ಚಿಡದೆ ಆತನ ಅಪರಿಮಿತವಾದ ಕರುಣೆಯಿಂದ ಅವುಗಳಿಗೆ ಪರಿಹಾರದ ಹೊಂದುವಂತೆ ವಿನಯುನುತಾಪ ವಿಧೇಯವಾದ ಮನಸ್ಸಿನಿಂದ ಅರಿಕೇಮಾಡಿ ಕೊಳ್ಳುವ ಹಾಗೆ ದಿವ್ಯಲೇಖನವು ನಮ್ಮನ್ನ ಅನೇಕ ಸ್ಥಳಗಳಲ್ಲಿ ಪ್ರೇರೇಪಿಸು ತ್ತದೆ.........
>
> "ದೇವರೇ, ನಾವು ನಿನ್ನನ್ನು ಸ್ತುತಿಸುತ್ತೇವೆ. ನೀನು ಕರ್ತನೆಂಬುದಾಗಿ ವೊಪ್ಪಿಕೊಳ್ಳುತ್ತೇವೆ.
>
> "ನಿತ್ಯನಾಗಿರುವ ತಂದೆಯಾದ ನಿನ್ನನ್ನು ಜಗತ್ತೆಲ್ಲಾ ಪೂಜಿಸುತ್ತದೆ.
>
> "ದೇವದೂತರೆಲ್ಲರೂ ಪರಲೋಕವೂ ಅದರಲ್ಲಿರುವ ಸಮಸ್ತ ಅಧಿಕಾರಿ ಗಳೂ ನಿನ್ನನ್ನು ಗಟ್ಟಿಯಾಗಿ ಹೊಗಳುತ್ತಾರೆ.
>
> "ಪರಿಶುದ್ಧನಾಗಿಯೂ ಪರಿಶುದ್ಧವಾಗಿಯೂ ಯಿರುವ ಸೇವೆಗಳ ಕರ್ತ ನಾದ ದೇವರೇ........"

ಹಿಂದೂಧರ್ಮವು "ದೇವರು" ಎಂಬುದನ್ನು ಹಲವು ಧರ್ಮಗ್ರಂಥಗಳ ಮೂಲಕ ಪ್ರತಿಪಾದಿಸಿತ್ತಾದರೂ ಅವಾವುದೂ ಸಾಮಾನ್ಯ ಜನರಿಗೆ ಸಿಕ್ಕದೆ ಏನೋ ಎಲ್ಲೋ ಎಂಬಂತೆ ಇದ್ದಿತು. ಭಾರತದ ಕೋಟ್ಯಾದಿ ಅವಿದ್ಯಾವಂತರಿಗೆ ಆ ಕಾರಣದಿಂದ

ಕಲ್ಲು ಮರಗಳೂ ಭೂತಪಿಶಾಚಿಗಳೂ "ದೇವರು" ಎಂಬಂತೆ ತೋರ್ಪಡಿಸಿಕೊಂಡುವು. ಆದರೆ ಕ್ರೈಸ್ತಧರ್ಮವು ಅಂಥಾ ಅಜ್ಞಾನಿಗಳನ್ನೆಲ್ಲಾ ತಮ್ಮ ಗುಡಿಯೊಳಕ್ಕೆ ಸೇರಿಸಿ ಆ ಭವ್ಯ ವಾತಾವರಣದೊಳಕ್ಕೆ ಸೂಕ್ಷ್ಮರೂಪಿಯಾದ ದೇವರ ಮಹಿಮೆಯನ್ನು ವರ್ಣಿಸುವಾಗ ಅಂಥಾ ಜನಕ್ಕೆ ಅದೊಂದು ಬಗೆಯ ಉನ್ನತ ಜ್ಞಾನಾವೇಶವು ಉಂಟಾಗುತಿದ್ದಿತೆಂದು ಇಂಥಾ ಬೈಬಲ್ ಕೃತಿಗಳಿಂದ ತಿಳಿಯಬಹುದಾಗಿದೆ.

**೪. ಬೂಹ್ರಾರ್ ಇವನಿಂದ "ದೇವವಾಕ್ಯ ದ್ವಿಪಂಚಾಶತಾ" ಭಾಷಾಂತರ :-**

ಮಂಗಳೂರಿನ ಬಾಸೆಲ್ ಮಿಷನ್ ಮುದ್ರಣಾಲಯದ ಸಂಸ್ಥಾಪಕರಲ್ಲೊಬ್ಬನಾದ Rev. J. A. Buhrer ಇವನು 1843ರಲ್ಲಿ William Hoch ಇವನಿಂದ ಐರೋಪ್ಯಾ ಭಾಷೆಯಲ್ಲಿ ಬರೆಯಲ್ಪಟ್ಟ ಬೈಬಲ್ ಕಥಾಸೂಕ್ತಿಗಳನ್ನು ಕನ್ನಡಕ್ಕಿಳಿಸಿದನು. ಇದನ್ನು "ದೇವವಾಕ್ಯ ದ್ವಿಪಂಚಾಶತಾ ಪೂರ್ವನಿರ್ಧಾರ ದ್ವಿಪಂಚಾಶತಿ, ನವನಿರ್ಧಾರ ದ್ವಿಪಂಚಾಶತಿ" ಎಂದು ದೀರ್ಘವಾದ ಹೆಸರಿನಿಂದ ಕರೆದಿದ್ದಾನೆ. ಈ ಗ್ರಂಥವು 138 ಮತ್ತು 107 demy ಪುಟಗಳ ಎರಡು ಕಾಂಡಗಳಾಗಿ Rev. Buhrer ಇವನ ಮುದ್ರಣಾಲಯದಲ್ಲಿಯೇ ಅಚ್ಚಾಗಿ ಹೊರಬಂತು. ಇದರಲ್ಲಿ ಹೇಳಿದ ನೀತಿಕತೆಗಳು ಪ್ರತಿ ಆದಿತ್ಯವಾರದ ಪ್ರಾರ್ಥನಾ ಸಭೆಗಳಲ್ಲಿ ಓದಲ್ಪಡಲು ತಕ್ಕುದಾಗಿದ್ದು ಎಲ್ಲೆಲ್ಲೂ ಪ್ರಚಾರವಾದುವು. ಇದರ ಎರಡನೇ ಆವೃತ್ತಿಯು 1847 ರಲ್ಲೂ ಮೂರನೇ ಆವೃತ್ತಿಯು 1848 ರಲ್ಲೂ ಆಯಿತು.*

J. A. Buhrer ಇವನ ಕನ್ನಡ ಭಾಷಾ ಶೈಲಿಯು ಇತರರ ಬರೆವಣಿಗೆಯಿಂದ ಭಿನ್ನವಾಗಿದೆ. ಗ್ರಂಥದ ಮುದ್ರಣಕ್ಕೆ ಉಪಯೋಗಿಸಿದ ಅಚ್ಚುಮೊಳೆಗಳ ಮಾದರಿಯು ಕೈಬರೆಹದ ರೀತಿಯಲ್ಲಿ ಇವೆ. ಇದರಿಂದ ಕೆಲವು ಗೆರೆಗಳನ್ನು ದಿಗ್ದರ್ಶನಾರ್ಥವಾಗಿ ಕೊಡಲಾಗಿದೆ :—

> "........ಯಕೋಬನು ಬಹಳ ದಿವಸ ಪ್ರಯಾಣದಲಿದ್ದ ಮೇಲೆ ಷಹನಿನಲ್ಲಿರುವ ಲಬಾನನ ಬಳಿಗೆ ಬಂದನು. ಲೊಲಿಯೇಜರನು ಮುಂಚೆ ರೆಬೆಕ್ಕಳಂನು ಭಾವಿಯ ಹತ್ತರ ನೊದಿದ ಹಣಗೆ ಯಕೋಬನು ಸೌಂದರ್ಯವಾದರ ಹೆಂಣಳಂನು ವೊಂದು ಭಾವಿಯ ಹತ್ತರ ತಂದು ಆವಳ ಮೇಲೆ ಪ್ರೀತಿಯಿಟ್ಟು ಅವಳಿಗೋಸ್ಕರ ಲಬಾನನಿಗೆ ಯೇಳು ವರ್ಷ ಪರ್ಯಂತರ ಸೇವೆ ಮಾಡಿದನು."

ಇದೇ ಗ್ರಂಥವು Rev. Buhrer ಇವನು ಬರೆದ ಹಳೇ ಮತ್ತು ಹೊಸ ಒಡಂಬಡಿಕೆಗಳ, (Old and New Testaments) ಪ್ರಸಂಗಗಳ ಸಮೇತವಾಗಿ ಎರಡು ಕಾಂಡಗಳಲ್ಲಿ ಪುನಃ ಎರಡು ಬಾರಿ ಮುದ್ರಣವಾಯಿತು. ಈ ಗ್ರಂಥದ ಐದನೇ ಮುದ್ರಣವು ಸುಮಾರು 435 ಪುಟಗಳ ಎರಡು ಕಾಂಡಗಳಾಗಿ 1865 ರಲ್ಲಾಯಿತು. ಅಲ್ಲದೆ C. B. Barth ಇವನು ಜರ್ಮನ್ ಭಾಷೆಯಲ್ಲಿ ಬರೆದಿದ್ದ ಬೈಬಲ್ ಕತೆಗಳನ್ನು ಕ್ರಿ. ಶ. 1868 ರಲ್ಲಿ Rev. Buhrer ಇವನು ಕನ್ನಡ

* ಈ ಗ್ರಂಥದ ಒಂದು ಪುಟದ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಕ್ಕಿಳಿಸಿದನು.

ಬೈಬಲ್ಲಿನ ಹೊಸ ಒಡಂಬಡಿಕೆ, New Testament, ಇದನ್ನು ಕನ್ನಡದಲ್ಲಿ ಬರೆದು 1843ರಷ್ಟು ಹಿಂದೆಯೇ ಬಾಸೆಲ್ ಮಿಷನ್‌ವನರು ನಡೆಸುತ್ತಿದ್ದ "ಮಂಗಳೂರು ಸಮಾಚಾರ" ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದ್ದನು. Rev. Buhrer ಮತ್ತು Rev. Grenier ಇವರಿರ್ವರು ಒಟ್ಟು ಸೇರಿ ಜನಸಾಮಾನ್ಯರಿಗೆ ಕ್ರೈಸ್ತ ಮತದ ಪರಿಚಯ ಮಾಡಿಸಲು ಕನ್ನಡದಲ್ಲಿ ಕರಪತ್ರಗಳನ್ನೂ ನಾಲ್ಕಾರು ಪುಟಗಳ ಚಿಕ್ಕ ಪುಸ್ತಕಗಳನ್ನೂ ಬರೆದು ಅವುಗಳನ್ನು ಪ್ರತಿಯೊಂದಕ್ಕೆ ಎರಡು ಯಾ ಮೂರು ಪೈಗಳಂತೆ ಮಾರಾಟ ಮಾಡುತ್ತಿದ್ದರು.

**೫. ಜಾರ್ಜ್ ವೀಗಲ್ ಇವನ ಅಪಾರ ಕನ್ನಡ ಬರೆವಣಿಗೆ :—**

George H. Weigle ಇವನು ಕಳೆದ ಶತಮಾನದ ಮಧ್ಯ ಕಾಲದಲ್ಲಿ ಇದ್ದ ಒರ್ವ ಪ್ರಬಲ ಕನ್ನಡ ವಿದ್ವಾಂಸನು. ಆದರೆ ಅವನ ವಿದ್ವತ್ತಿನ ಬಹು ಭಾಗವನ್ನು ಬೈಬಲ್ ಸಾಹಿತ್ಯದ ನಿರ್ಮಾಣಕ್ಕಾಗಿಯೇ ವಿನಿಯೋಗಿಸಿದನು. ಅವನು ಕ್ರಿ. ಶ. 1840 ರಿಂದ ಬೈಬಲ್ ಪ್ರಸಂಗಗಳನ್ನು ಕುರಿತು ಕನ್ನಡ ಲೇಖನಗಳನ್ನು ಬರೆಯುತ್ತಾ ಇದ್ದು ಕಡೆಗೆ 1845 ರಲ್ಲಿ H. Moegling ಇವನೊಡನೆ ಸೇರಿ "ಕ್ರೈಸ್ತ ಗೀತೆಗಳು" ಎಂಬುದಾಗಿ ಒಂದುನೂರು ಹಾಡುಗಳಿಂದ ಕೂಡಿದ ಪುಸ್ತಕವೊಂದನ್ನು ರಚಿಸಿದನು. ಇಂಥಾ ಹಾಡುಗಳನ್ನು ಹಲವರು ಅನಂತರ ರಚಿಸಿದರಾದರೂ ಕನ್ನಡದಲ್ಲಿ ಅದಕ್ಕೆ ನಾಂದಿಯನ್ನು ಹಾಕಿದವನು G. H. Weigle ಇವನೆಂದೇ ಹೇಳಬಹುದು. ಇಂಗ್ಲಿಷ್ ಹಾಡುಗಳನ್ನು ಕ್ರೈಸ್ತ ಗುಡಿಗಳಲ್ಲಿ ಹಾಡುವ ಕ್ರಮದಲ್ಲಿಯೇ ಈ "ಗೀತೆ"ಗಳನ್ನೂ ಹಾಡುತಿದ್ದರಲ್ಲದೆ ಅವುಗಳ ರಚನಾ ವಿಧಾನ, ಹಾಡುವ ಕ್ರಮ ಇತ್ಯಾದಿಗಳನ್ನು ವಿಷದವಾಗಿ ಪ್ರಸ್ತಾಪವಾಗಿವೆ. ಈ ಗೀತೆಗಳ ರಚನೆ Beschi Constanza ಇವನೂ ಅವನಿಗೆ ಸಹಕರಿಸಿದ್ದನೆಂದು ಹೇಳಲಾಗಿದೆ.

Rev. G. H. Weigle ಇವನು "Pilgrim's Progress" ಎಂಬ ಪ್ರಸಿದ್ಧ ಇಂಗ್ಲಿಷ್ ಗ್ರಂಥವನ್ನು H. Moegling ಇವನೊಡನೆ ಇರಿತು ಕನ್ನಡಕ್ಕೆ ಭಾಷಾಂತರಿಸಿದನು. ಸುಮಾರು ೨೦೦ ಪುಟಗಳ ಈ ಕನ್ನಡ ಗದ್ಯ ಗ್ರಂಥವನ್ನು ಕೆಲವು ವರ್ಷಗಳನಂತರ Benjamin Rice ಇವನು ಪರಿಷ್ಕರಿಸಿ ಪುನರ್ಮುದ್ರಿಸಿ ಪ್ರಕಟಿಸಿದನು. ಕ್ರಿ. ಶ. 1847ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ "Pilgrim's Progress" ಕನ್ನಡ ಗ್ರಂಥದಿಂದ ಈ ಕೆಲವು ಪಂಕ್ತಿಗಳನ್ನು ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

"........ನಾನು ಮುಂಚೆ ಹೋರಾಟದಲ್ಲಿದ್ದೆನು. ಪರಮೋತ್ತಮ ದೇವರ ದಯದಿಂದ ನಾನು ಜೀವದಿಂದಿದ್ದೇನೆ. ಆದಾಗ್ಯೂ ನನ್ನ ಪೌರುಷಕ್ಕೋಸ್ಕರ ಹೆಚ್ಚಳ ಪಡಲಾರೆನು. ಇನ್ನು ಮೇಲೆ ಅಂಥಾ ಜಗಳವು ಬಾರದಿದ್ದರೆ ಸಂತೋಷವೇ ಸರಿ. ಆದರೆ ಎಲ್ಲಾ ಗಂಡಾಂತರ ಇನ್ನು ಮೇಲೆ ದಾಟಿಹೋಗಲಿಲ್ಲವೆಂದು ಕಾಣುತ್ತದೆ. ಆದಾಗ್ಯೂ ಸಿಂಹ ಕರಡಿಗಳು ಈ ದಿನ ಪರ್ಯಂತರ ನನ್ನನ್ನು

ತಿಂದು ಬಿಡದರಿಂದ ಇನ್ನು ಮೇಲೆಯೂ ದೇವರೇ ಸಂರಕ್ಷಿಸುವನೆಂದು ನಂಬು ತ್ತೇನೆ. ತರುವಾಯ ಕ್ರಿಸ್ತಿಯಸು ಹಾಡಿದ್ದೇನೆಂದರೆ—

ಕಳ್ಳರ ಕೈಯಲಿ ಬಿದ್ದಿಯೊ ಹಣವನು
ಕೊಳ್ಳೆಯ ಕೊಟ್ಟೆಯೊ ಪರದೇಶಿ,
ಒಳ್ಳೆಯ ನಂಬಿಗೆ ಇದ್ದರೆ, ಸಾವಿರ
ಕಳ್ಳರನಾದರು ಗೆಲಬಹುದು."

ಈ ರೀತಿಯಾಗಿ ಅಲ್ಲಲ್ಲಿ ಕೆಲವು ಪದ್ಯಭಾಗಗಳಿಂದ ಕೂಡಿದ ಈ ಬರೆವಣಿಗೆಯು George Weigle ಮತ್ತು ಅವನ ಸಹಸಂಪಾದಕನ ಭಾಷಾ ಪಾಂಡಿತ್ಯ ಮತ್ತು ಬರೆವಣಿಗೆ ಕೌಶಲ್ಯವನ್ನು ಪ್ರದರ್ಶಿಸುತ್ತದೆ.

### ೬. ವೀಗಲ್ಲನ ಕೃತಿಯೇ ಕನ್ನಡದಲ್ಲಿ ಸಂಪೂರ್ಣ ಬೈಬಲ್ ಗ್ರಂಥವಾಯಿತು :—

George Weigle ಇವನು ಶ್ರೇಷ್ಠ ಪಂಡಿತನು ಮಾತ್ರವಲ್ಲ, ಬಹುದೊಡ್ಡ ತತ್ವ ಶಾಸ್ತ್ರಜ್ಞನೂ ಆಗಿದ್ದನು. ಬೈಬಲನ್ನು ಕುರಿತು ಹಲವು ಹೊತ್ತಗೆಗಳನ್ನು ತನ್ನ ಸ್ವಭಾಷೆಯಾದ ಜರ್ಮನ್‌ನಲ್ಲಿ ಬರೆಯುತ್ತಾ ಇದ್ದನು. ಇವನ ಸಂಸ್ಕೃತ ಜ್ಞಾನವೂ ಅಪಾರವಾಗಿತ್ತು. ಹಿಂದೂ ಶಾಸ್ತ್ರಗ್ರಂಥಗಳನ್ನು ಮೂಲತಃ ಪಠಿಸಿ ಅವುಗಳನ್ನು ತನ್ನ ಕ್ರೈಸ್ತಧರ್ಮದೊಡನೆ ಹೋಲಿಸಿ ಲೇಖನಗಳನ್ನೂ ಬರೆದಿದ್ದನು.

Rev. Weigle ಇವನ ಉತ್ಕೃಷ್ಟ ಕೃತಿಗಳಲ್ಲಿ ಅವನು ಕನ್ನಡದಲ್ಲಿ ಬರೆದ ಸಂಪೂರ್ಣ ಬೈಬಲ್ ಇದಾಗಿದೆ. ಅವನಿಗಿಂತ ಹಿಂದಿದ್ದ ವಿದ್ವಾಂಸರು ಕನ್ನಡದಲ್ಲಿ ಬರೆದ ಬೈಬಲ್ ಕೃತಿಗಳ ಪ್ರಮಾಣವನ್ನು ಮೀರಿ ಅತೀ ಪರಿಪುಷ್ಟವಾದ ಕನ್ನಡ ಬೈಬಲ್ ಒಂದನ್ನು ರಚಿಸಿದನು. ಅವನ ಈ ಮಹಾಗ್ರಂಥವು 1850 ರಲ್ಲಿ ಮುದ್ರಣ ವಾಗಿ ಪ್ರಕಟವಾಯಿತು, ಅದನ್ನೇ 1860 ರಲ್ಲಿ ಕೆಲವು ಕ್ರೈಸ್ತವಿದ್ವಾಂಸರು ಪರಿಷ್ಕರಿಸಿ ಪುನರ್ಮುದ್ರಿಸಿದರು, ಕನ್ನಡ ಬೈಬಲ್ ಸಾಹಿತ್ಯವು ಅವನಿಂದ ಪರಿಪುಷ್ಟತೆಯನ್ನು ಪಡೆಯಿತೆಂದು ಎಲ್ಲರೂ ಅವನನ್ನು ಪ್ರಶಂಸಿಸಿದರು. ಅಲ್ಲದೆ ಆ ಗ್ರಂಥವು ಕರ್ಣಾಟಕದ ಎಲ್ಲಾ ಕ್ರೈಸ್ತಗುಡಿಗಳಲ್ಲೂ ನಿತ್ಯವೂ ಉಪಯೋಗಿಸಲ್ಪಡುತ್ತಿದ್ದ ಉತ್ತಮ ಕೃತಿ ಯೆಂದು ಪ್ರಖ್ಯಾತವಾಯಿತು. ಇಂದಿಗೂ ಅದು ಧರ್ಮಪ್ರಚಾರ ಸಂಬಂಧವಾಗಿ ಉಪ ದೇಶವನ್ನೀಯುವಾಗ ಉಪಯೋಗಿಸಲ್ಪಡುವ ಆಧಾರಪೂರ್ಣ ಪುಸ್ತಕವಾಗಿದೆ.

George Weigle ಇವನು ತನ್ನ ಕನ್ನಡ ಬೈಬಲ್ ಪ್ರಕಟಣೆಯ ನಂತರ ಒರ್ವ ಶ್ರೇಷ್ಠ ವ್ಯಕ್ತಿಯೆಂದು ಗೌರವಿಸಲ್ಪಟ್ಟನು. ಕ್ರಿ.ಶ. 1854 ರಲ್ಲಿ ಕರ್ಣಾಟಕದ ಎಲ್ಲಾ ಕನ್ನಡ ಬೈಬಲ್ ಕೃತಿಗಳನ್ನು ಪರಿಷ್ಕರಿಸಲು ಒಂದು ಸಮಿತಿಯನ್ನು ಕೇಂದ್ರ ಕ್ರೈಸ್ತಮತ ಪ್ರಚಾರಸಂಸ್ಥೆಯವರು ನೇಮಿಸಿದಾಗ Rev. Weigle ಇವನ ಹೆಸರೇ ಮೊದಲಾಗಿ ಸೂಚಿಸಲಾಗಿತ್ತು. ಆ ಸಮಿತಿಯಲ್ಲಿದ್ದ ವಿಖ್ಯಾತ ಕ್ರೈಸ್ತ ವಿದ್ವಾಂಸರು Weigle ಇವನ ಬೈಬಲ್ ಗ್ರಂಥವೇ ಕನ್ನಡದಲ್ಲಿ ಆ ವರೆಗೆ ಬರೆದಿದ್ದುವುಗಳ ಪೈಕಿ

ಸಮರ್ಪಕವಾದುದೆಂದು ಒಪ್ಪಿದರು. ಅದರಿಂದ Hands, Carey, Reeve, Reid ಮೊದಲಾದವರು ಬರೆದಿದ್ದ ಕನ್ನಡ ಬೈಬಲ್ ಪುಸ್ತಕಗಳು ತಾತ್ಕಾಲಿಕವಾಗಿ ಹಿಂದಿರಿಸಲ್ಪಟ್ಟುದಲ್ಲದೆ Weigle ಇವನ ಬೈಬಲನ್ನೇ ಕ್ರಿ.ಶ. 1865 ರಲ್ಲಿ ಸರ್ವಾಂಗ ಸುಂದರವಾಗಿ ಮುದ್ರಿಸಿ ಪುನಃ ಎಲ್ಲೆಲ್ಲೂ ಹಂಚಿದರು.

ತತ್ವಜ್ಞನಾದ ಈ ಕ್ರೈಸ್ತಗುರುವು ಬಹು ಉಚ್ಚಪರಂಪರೆಗೆ ಸೇರಿದ್ದ ಒರ್ವ ದಾರ್ಶನಿಕನಾಗಿದ್ದನು. ಅವನು ಈ ದೇಶದಲ್ಲಿ ಇದ್ದ ವರೆಗೂ ಕನ್ನಡದಲ್ಲಿಯೇ ಬೈಬಲನ್ನು ವಿವಿಧ ರೀತಿಯಲ್ಲಿ ಬರೆಯುತ್ತಾ ಕನ್ನಡ ಗದ್ಯ ಶೈಲಿಗೆ ತನ್ನದೇ ಆದ ಒಂದು ಹೊಸ ಮೆರುಗನ್ನು ಕೊಟ್ಟನು. ಭಗವದ್ಗೀತೆಯನ್ನು ಜರ್ಮನ್ ಭಾಷೆಯಲ್ಲಿ ಬರೆದ ಈ ಮೇಧಾವಿಯು ತನ್ನ ಸ್ವಭಾಷೆಯಲ್ಲಿ ಇನ್ನೂ ಹಲವು ಉತ್ತಮ ಕೃತಿಗಳನ್ನು ರಚಿಸಿರುವನು. ಅವೆಲ್ಲಕ್ಕೂ ಮಿಗಿಲಾಗಿ ಅವನ ಕನ್ನಡ ಬೈಬಲ್ ಕೃತಿಯು ಇಂದಿಗೂ ಜನಪ್ರಿಯವಾದ ಧರ್ಮಗ್ರಂಥವಾಗಿ ಸರ್ವ ಕ್ರೈಸ್ತಗುರುಗಳ ಮನ್ನಣೆಗೆ ಪಾತ್ರವಾಗಿದೆ; ಮಾತ್ರವಲ್ಲ, ಎಲ್ಲೆಲ್ಲೂ ಇಂದಿಗೂ ಉಪಯೋಗಿಸಲ್ಪಡುತ್ತಿದೆ.

**೭. ಜಾನ್ ಗೇರೆಟ್ಟ್ ಇವನ ಆದರ್ಶ ಸಮಾಜ ಸೇವೆ :—**

Rev. John Garrett ಇವನೂ George Weigle ಇವನಂತೆ ಜರ್ಮನ್ ಜನಾಂಗಕ್ಕೆ ಸೇರಿದ್ದವನು. ಇವನು ಈ ದೇಶದಲ್ಲಿ ಕ್ರೈಸ್ತಮತದ ಸಂಬಂಧವಾಗಿ ಸಲ್ಲಿಸಿದ ಸೇವೆಗಿಂತ ನಾಲ್ಮಡಿ ಅಥವಾ ನೂರ್ಮಡಿ ಶ್ರದ್ಧೆಯಿಂದ ನಾಡಿನ ವಿದ್ಯಾ ಪ್ರಚಾರಕ್ಕಾಗಿ ಅವಿರತ ದುಡಿದನೆಂಬುದನ್ನು ಸವಿಸ್ತಾರವಾಗಿ ಈ ಗ್ರಂಥದ ಮುಂದಿನ ಭಾಗದಲ್ಲಿ ಪ್ರಸ್ತಾಪಿಸಲಾಗುವುದು.

ಸುಮಾರು ಕ್ರಿ. ಶ. 1840 ರ ಕಾಲದಲ್ಲಿ ತನ್ನ ತಾರುಣ್ಯದಲ್ಲಿ John Garrett ಇವನು ಈ ದೇಶಕ್ಕೆ Wesleyan Mission ಸಂಸ್ಥೆಯ ಪರವಾಗಿ ಬಂದು ಇತರರಂತೆ ತನ್ನ ಮತಪ್ರಚಾರ ಕಾರ್ಯದಲ್ಲಿಯೇ ನಿರತನಾಗಿದ್ದನು. ತನ್ನ ಸಹೋದರನೋ ಮಿತ್ರನೋ ಆದ Rev. A. Garrett ಇವನೊಡನೆ ಸೇರಿ ಕ್ರಿ. ಶ. 1842 ರಿಂದ ಚಿಕ್ಕ ಬೈಬಲ್ ಪ್ರಬಂಧಗಳನ್ನೂ ಪ್ರಸಂಗಗಳನ್ನೂ ಕನ್ನಡದಲ್ಲಿ ಬರೆಯಲಾರಂಭಿಸಿದನು. ಅದರೊಡನೆಯೇ ಅವನು ಜರ್ಮನ್, ಇಂಗ್ಲಿಷ್, ಸಂಸ್ಕೃತ, ಪರ್ಷಿಯನ್, ಕನ್ನಡ, ತಮಿಳು ಇತ್ಯಾದಿ ಭಾಷೆಗಳಲ್ಲಿ ವಿಶೇಷ ಪ್ರೌಢಿಮೆಯನ್ನು ಗಳಿಸಿ ಎಲ್ಲರನ್ನೂ ಬೆರಗಾಗಿಸಿದನು.

John Garrett ಇವನು ಕ್ರಿ. ಶ. 1848 ರಲ್ಲಿ ಮೈಸೂರಿನಲ್ಲಿ ವೆಸ್ಲೀ ಮುದ್ರಣಾಲಯ ಮತ್ತು ಅದರ ಸ್ಥಾಪನೆಗೆ ಕಾರಣನಾದನು. ತನ್ನ ಸಾಹಿತ್ಯ ವ್ಯಾಸಂಗ, ಕ್ರೈಸ್ತಮತ ಪ್ರಚಾರ ಇತ್ಯಾದಿ ಕಾರ್ಯಗಳೊಡನೆ ಅವನು ಇತರ ಕ್ರೈಸ್ತ ಗುರುಗಳಿಂದ ಬೈಬಲ್ ಪ್ರಸಂಗಗಳನ್ನು ಕನ್ನಡದಲ್ಲಿ ಬರೆಯಿಸಿ ಅವನ್ನೆಲ್ಲಾ ತನ್ನ ಮುದ್ರಣಾಲಯದಲ್ಲಿಯೇ ಮುದ್ರಿಸಿ ಎಲ್ಲೆಲ್ಲೂ ಹಂಚುತಿದ್ದನು. ಅವನ ಕರ್ತವ್ಯ ನಿಷ್ಠೆ, ಭಾಷಾ ಪಾಂಡಿತ್ಯ, ಸ್ಥಳೀಯ ಜನರಲ್ಲಿ ಅವನು ಬೀರಿದ್ದ ವರ್ಚಸ್ಸು ಇತ್ಯಾದಿಗಳನ್ನು ಅಂದಿನ ಹಳೇ ಮೈಸೂರು ರಾಜ್ಯಸರಕಾರವು ಮೆಚ್ಚಿ ಅವನಿಗೆ ಪ್ರಾಥಮಿಕ

ಶಾಲೆಗಳ ಅಧಿಕಾರ ಸ್ಥಾನವನ್ನು ಕೊಟ್ಟರು. ಹೀಗಾಗಿ Rev. Garrett ಇವನು ನೂರಾರು ಪಾಠಶಾಲೆಗಳ ಸ್ಥಾಪನೆಗೆ ಕಾರಣನಾಗಲು ಮತ್ತು ಆಧುನಿಕ ವಿದ್ಯಾಕ್ರಮವನ್ನು ಜಾರಿಗೆ ತಂದ ಒರ್ವ ವಿದ್ಯಾತಜ್ಞನಾಗಲು ಸರಕಾರವು ಅವನನ್ನು ಇಡೀ ಮೈಸೂರು ರಾಜ್ಯದ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಯಾಗಿಯೂ ನೇಮಿಸಿ ಗೌರವಿಸಿತು; ಅಂತೆಯೇ ಅವನ ಬಹುಮುಖವಾದ ಸೇವೆಯನ್ನು ನಾಡಿನ ಜನತೆಯು ಹೊಂದುವಂತಾಯಿತು.

Rev. Garrett ಇವನು ಕ್ರಿ. ಶ. 1854 ರಲ್ಲಿ ಕನ್ನಡ ಬೈಬಲ್ ಕೃತಿಗಳ ಪರಿಷ್ಕರಣೆಗೆಂದು ನೇಮಿಸಲ್ಪಟ್ಟ ವಿಖ್ಯಾತ ಆರೆಂಟು ಜನ ಸಾಹಿತಿಗಳಲ್ಲಿ ಮತ್ತು ಕ್ರೈಸ್ತಗುರುಗಳಲ್ಲಿ ಒಬ್ಬನಾಗಿದ್ದನು. ಪ್ರತಿಭಾವಂತ ಪಂಡಿತನಾಗಿದ್ದ ಇವನ ಸಲಹೆಗಳಿಗೆ ಎಲ್ಲರೂ ವಿಶೇಷ ಮನ್ನಣೆಯನ್ನಿತ್ತಿದ್ದರು. ಹಲವು ಸಂದರ್ಭಗಳಲ್ಲಿ ಕನ್ನಡ ಬೈಬಲ್ ಹೊತ್ತಗೆಗಳನ್ನು ಇತರರಿಂದ ಪಡೆದು ತನ್ನ ಮುದ್ರಣಾಲಯದಲ್ಲಿಯೇ ಉಚಿತವಾಗಿ ಮುದ್ರಿಸಿ ಜನರಿಗೆ ಹಂಚುತಿದ್ದನು. Rev. Garrett ಇವನು ಬರೆದ, ಸಂಪಾದಿಸಿದ ಮತ್ತು ಪ್ರಕಟಿಸಿದ ಸಾಹಿತ್ಯ ಗ್ರಂಥಗಳನ್ನು ಕುರಿತಾಗಿ ಮುಂದಿನ ಭಾಗದಲ್ಲಿ ಹೇಳಲಾಗುವುದು.

### ೮. ಡಾ. ಮ್ಯಾಗ್ಲಿಂಗ್ ಇವನಿಂದ ರಚಿತವಾದ "ಹೃದಯ ದರ್ಪಣ":—

ಜರ್ಮನಿ ದೇಶದವನೂ ವೃತ್ತಿಯಲ್ಲಿ ಒರ್ವ ವೈದ್ಯನೂ ಆಗಿದ್ದ Dr. Hermann Moegling ಇವನು ಸುಮಾರು ಕ್ರಿ. ಶ. 1838 ರಲ್ಲಿ ಈ ದೇಶಕ್ಕೆ ಬಂದನು. ಬಹುಕಾಲ ಮಂಗಳೂರಿನಲ್ಲಿಯೇ ಇದ್ದು ಅನಂತರ ಕೊಡಗು ಮತ್ತು ಬಳ್ಳಾರೀ ಜಿಲ್ಲೆಗಳಲ್ಲಿ ತನ್ನ ಮತ ಪ್ರಚಾರಾರ್ಥವಾಗಿ ಮತ್ತು ದೇಶೀಯರನ್ನು ಮತಾಂತರಗೊಳಿಸುವ ಸಲುವಾಗಿ ಸಂಚರಿಸಿದನು. ಇವನು ತನ್ನ ಮತ ಧರ್ಮಗಳೆಂದರೆ ಒರ್ವ ತೀವ್ರಗಾಮಿಯಂತಿದ್ದನು. ಇತರ ಮತ ಧರ್ಮಗಳ ಮೇಲೆ ಅವನಿಗೆ ಹೆಚ್ಚು ಅಭಿಮಾನವಿರಲಿಲ್ಲವೆಂಬುದು ಅವನು ಬರೆದ ಕನ್ನಡ, ಇಂಗ್ಲಿಷ್ ಮತ್ತು ಜರ್ಮನ್ ಪುಸ್ತಕಗಳಿಂದ ತಿಳಿಯುತ್ತದೆ. ಬೈಬಲನ್ನೇ ಆಗಲಿ, ಪಠ್ಯಪುಸ್ತಕವೇ ಆಗಲಿ, ಅಥವಾ ತಾನು ನಡೆಸುತಿದ್ದ ವರ್ತಮಾನ ಪತ್ರಿಕೆಯೇ ಆಗಲಿ, ಅವುಗಳಲೆಲ್ಲಾ Dr. Moegling ಇವನು ತನ್ನ ಮತದ ಶ್ರೇಷ್ಠತೆಯನ್ನೂ ಹೆಗ್ಗಳಿಕೆಯನ್ನೂ ಮೇಲಿಂದ ಮೇಲೆ ಪ್ರದರ್ಶಿಸಿದ್ದಾನೆ.

ಬೈಬಲ್ ಸೂಕ್ತಿಗಳು ಮತ್ತು ಪ್ರಸಂಗಗಳನ್ನು ಕುರಿತು ಲೇಖನಗಳನ್ನೂ ಚಿಕ್ಕ ಹೊತ್ತಗೆಗಳನ್ನೂ ಬರೆಯುತ್ತಿದ್ದ Hermann Moegling ಇವನು ಕ್ರಿ. ಶ. 1842 ರಲ್ಲಿ "ಹೃದಯ ದರ್ಪಣ" ಅಥವಾ Heart Book ಎಂಬುದನ್ನು ಬರೆದನು. ಇದು ಆ ಕಾಲದಲ್ಲಿ ಬಹು ಜನಾದರಣೀಯವಾದ ಗ್ರಂಥವಾಯಿತು; ಅಲ್ಲದೆ ಕೆಲವು ಶಾಲೆಗಳಲ್ಲೂ ಉಪಯೋಗಿಸಲ್ಪಟ್ಟಿತ್ತು. ಅದರ ಎರಡನೇ ಪರಿಷ್ಕೃತ ಆವೃತ್ತಿಯು 1848 ರಲ್ಲಾಯಿತು. ಆ "ಹೃದಯ ದರ್ಪಣ" ದಿಂದ ಕೆಳಗಿನ ಭಾಗವನ್ನು ದಿಗ್ದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ:—

"........ಮನುಷ್ಯನ ಮುಖವನ್ನು ಬುದ್ಧಿಯಿಂದ ದೃಷ್ಟಿಸಿ ನೋಡುವವನು ಅವನ ಸುಗುಣ ದುರ್ಗುಣಗಳನ್ನು ಸ್ವಲ್ಪವಾದರೂ ಊಹಿಸುವನು. ಆದರೆ ಮನುಷ್ಯನ ಹೃದಯವನ್ನು ಮನುಷ್ಯನು ನೋಡಲಾರನು. ಹೃದಯವನ್ನು ಹಲಸಿನ ಹಂಣಿನ ಹಾಗೆ ಬಿಚ್ಚಿ ನೋಡಕೂಡದು.

"ದೇವವಾಕ್ಯದಲ್ಲಿ ಹೃದಯದ ಎರಡು ವಿಧವಾದ ಗುಣಗಳು ಚೆನ್ನಾಗಿ ವರ್ಣಿಸಿ ಅವೆ. ದೇವರ ವಾಕ್ಯವನ್ನು ಓದಿ ಅಭ್ಯಾಸಮಾಡಿ ಮನುಷ್ಯನ ಹೃದಯದ ಭಾವವನ್ನು ಸತ್ಯದ ಪ್ರಕಾರ ತಿಳಿದುಕೊಳ್ಳುವದು ಬಹಳ ಉಪಯೋಗವಾಗಿಸೆ. ಅನ್ಯರ ಹೃದಯವನ್ನು ತಿಳಿದುಕೊಳ್ಳುವದು ಅರವತ್ತು ಗುಣ: ಸ್ವಂತ ಹೃದಯವನ್ನು ತಿಳಿದುಕೊಳ್ಳುವದು ಕೋಟಿ ಗುಣ........"

"ಹೃದಯವು ಮನೆಯ ಹಾಗಿದೆ. ಅದರಲ್ಲಿ ವಾಸಿಸುವರ್ಯ್ಯಾರೆಂದು ತಿಳಿಯದೆ ಇರಬಾರದು. ಅದು ಖಾಲಿ ಬೀಳುವ ಬಿಡದಿಯಾಗಿರುವದಿಲ್ಲ. ದೇವರ ಆತ್ಮವು ಅದರಲ್ಲಿ ವಾಸವಾಗದೆ ಇದ್ದರೆ ಸೈತಾನನು ಅದರಲ್ಲಿ ಉಳಕೊಳ್ಳುತ್ತಾನೆ."

ಈ "ಹೃದಯ ದರ್ಪಣ"ದಲ್ಲಿ ಹೇಳಿದ ಅಂಶಗಳು ಮೂಲತಃ Dr. Moegling ಇವನದೇ ಅಲ್ಲವಾದರೂ ವಿಷಯಗಳನ್ನು ಚೆನ್ನಾಗಿ ಪ್ರಸ್ತಾಪಿಸಿದ್ದಾನೆ. ಇದು ಆ ಕಾಲದಲ್ಲಿ ಕ್ರೈಸ್ತ ಗುಡಿಗಳಲ್ಲಿ ಹೆಚ್ಚಾಗಿ ಬಳಸಲ್ಪಡುತಿದ್ದಂಥಾ ಒಂದು ಉತ್ತಮ ಪುಸ್ತಕವಾಗಿತ್ತು.

Fr. Moegling ಇವನು Rev. Weigle ಇವನೊಡನೆ ಸೇರಿ ಕನ್ನಡದಲ್ಲಿ "ಕ್ರೈಸ್ತ ಗೀತೆಗಳು" ಇವನ್ನು ರಚಿಸಲು ಅವನಿಗೆ ಸಹಾಯಕನಾದನೆಂದು ಹಿಂದೆಯೇ ಹೇಳಲಾಗಿದೆ. ಅಲ್ಲದೆ ಅವನು G. A. Weigle ಇವನೊಡನೆ ಸೇರಿ ಮತ್ತು ಪ್ರತ್ಯೇಕವಾಗಿ "Pilgrim's Progress" ಇದನ್ನೂ 1848 ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದನು.

೯. ಮ್ಯಾಗ್ಲಿಂಗ್ ಇವನಿಂದ ರಚಿತವಾದ ಬೈಬಲ್ ಕೃತಿಗಳು :—

ನಿಷ್ಠಾವಂತ ಕ್ರೈಸ್ತ ಮತ ಬೋಧಕನಾದ Dr. H. Moegling ಇವನು ಅದೆಷ್ಟೋ ವಿಚಾರಗಳ ಮೇಲೆ ಮತ್ತು ಅವೆಲ್ಲವನ್ನೂ ತನ್ನ ಮತಕ್ಕೆ ಅನ್ವಯಿಸಿ ಚಿಕ್ಕ ಕೈಹೊತ್ತಗೆಗಳನ್ನು ಬರೆದಿದ್ದಾನೆ. ಹಲವು ಸಂದರ್ಭಗಳಲ್ಲಿ ಹಿಂದೂ ಧರ್ಮವನ್ನು ಟೀಕಿಸುವುದೇ ಇವನ ಪರಿಪಾಠವಾಗಿತ್ತು; ಹಾಗಿದ್ದರೂ ಅವನ ಬರೆವಣಿಗೆಯೆ ಪರಿಪುಷ್ಟವಾಗಿದ್ದು ವಿಚಾರ ಜಾಗೃತಿಯನ್ನು ಹುಟ್ಟಿಸುವಂಥಾದಾಗಿದೆ. ಕ್ರಿ. ಶ. 1852 ರಲ್ಲಿ "ದೇವ ವಿಚಾರಣೆ"ಯೆಂಬ 185 ಪುಟಗಳ ಪುಸ್ತಕವನ್ನೂ 1854 ರಲ್ಲಿ "ಜಾತಿ ವಿಚಾರಣೆ" ಎಂಬ 39 ಪುಟಗಳ ಚಿಕ್ಕ ಹೊತ್ತಗೆಯನ್ನೂ 1864 ರಲ್ಲಿ "ಮತ ವಿಚಾರಣೆ"ಯೆಂಬ 51 ಪುಟಗಳ ಪ್ರಬಂಧವನ್ನೂ "ಏಸುಕ್ರಿಸ್ತನ ಶ್ರಮೇ ಚರಿತ, ವಿಗ್ರಹಾರಾಧನೆ, ಎಂಬಿತ್ಯಾದಿ ವಿಚಾರಗಳ ಮೇಲೂ ಬರೆದನು. ಅವುಗಳಲ್ಲಿ ಹಲವು ಚಿಕ್ಕ ಕೈಹೊತ್ತಗೆಗಳಾಗಿ ಪ್ರತಿಯೊಂದನ್ನು ಮೂರು ಯಾ ನಾಲ್ಕು ಪೈಗಳಂತೆ

ಕ್ರೈಸ್ತ ಮತಪ್ರಚಾರ ಸಂಸ್ಥೆಯವರು ಮಾರಾಟ ಮಾಡುತ್ತಿದ್ದರು. ಅವೆಲ್ಲವೂ ಅಂದಿನ ಕಾಲಕ್ಕೆ ವಿದ್ವತ್ಪೂರ್ಣವಾದ ಬರೆವಣಿಗೆಗಳಾಗಿದ್ದುವು. Rev. Moegling ಇವನ " ಜಾತಿ ವಿಚಾರಣೆ " ಎಂಬ ಕೃತಿಯು ಐದು ಬಾರಿ ಪುನರ್ಮುದ್ರಣವಾಯಿತು. 1869 ರಲ್ಲಾದ ಅದರ ಕಡೇ ಆವೃತ್ತಿಯಿಂದ ಈ ಕೆಲವು ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ :—

> " ಸುವಾರ್ತಿಕನೂ ಅವನ ಸಂಗದಲ್ಲಿರುವ ದೇವದತ್ತನೆಂಬ ಹುಡುಗನೂ ಬಣಜಿಗನಾದ ಲಿಂಗಪ್ಪಶೆಟ್ಟಿಯೂ ತೌಳವನಾದ ಕೃಷ್ಣಾಚಾರಿಯನೂ ಮಾಡಿದ ಸಂಭಾಷಣೆಯ ಪುಸ್ತಕವು."
>
> " ಸುವಾರ್ತಿಕನು :— ದೇವದತ್ತನೇ, ನೀನು ಬಹಳ ದಣಿದು ಬಂದೋ ?
>
> " ದೇವದತ್ತನು :— ನೀವು ಬೇಗ ನಡೆದುಹೋದಿರಿ. ನಾನು ಅಲ್ಲಿ ಕೆಳಗೆ ಹಿಂದೆಯಿದ್ದವೊಬ್ಬನ ಸಂಗಡವೋಡುತ್ತಾ ಬಂದೆ, ದಂವು ಮೇಲೆ ಬರುತ್ತದೆ. ಈ ಘಟ್ಟವು ಬಹಳ ಎತ್ತರವಾದದ್ದು...."

Rev. Moegling ಇವನು " ಜಾತಿ ಭೇದ "ಯೆಂಬ ವಿಷಯದ ಮೇಲೆ ಬರೆಯುತ್ತಾ ಅದನ್ನು ಹೀಗೆ ಹೇಳುತ್ತಾನೆ.—

> " ವರ್ಣವುಯೇನು ? ಬಿಳಿಯೆತ್ತಿಗೆ ಕಪ್ಪುಯೆತ್ತಿಗೆ ಬೇರೆ ಬೇರೆ ಜಾತಿ ಉಂಟೋ ? ಬೇರೆ ಬೇರೆ ದೇಶಸ್ಥರಿಗೆ ವರ್ಣವು ಬೇರೆ ಬೇರೆ ಹೌದು. ಅದು ಗಾಳಿಯಿಂದಲೂ ಬಿಸಿಲಿನಿಂದಲೂ ಬೇರೆಯಾಗುತ್ತದೆ. ಬಹಳ ದಿನ ಮನೆಯು ಲ್ಲಿದ್ದ ರೋಗ ಉಂಟಾದ ಮನುಷ್ಯನು ಮುಂಚೆಗಿಂತ ಬಿಳುಪಾಗುವನಲ್ಲವೋ ? ದಿನಾ ಬಿಸಿಲಿನಲ್ಲೆ ಕೆಲಸ ಮಾಡುವವರು ಕಪ್ಪಾಗುತ್ತಾರಲ್ಲವೋ ?........"

ಕ್ರಿ.ಶ. 1854 ರಲ್ಲಿ ಕನ್ನಡ ಬೈಬಲ್ ಕೃತಿಗಳ ಪರಿಷ್ಕರಣಾ ಸಮಿತಿಯಲ್ಲಿ ಈ Rev. Moegling ಇವನೂ ಒರ್ವ ಸದಸ್ಯನಾಗಿದ್ದನು. ಕ್ರಿ. ಶ. 1861 ರಲ್ಲಿ G. Weigle ಮತ್ತು G. A. Warth ಇವರೊಡನೆ ಸೇರಿ " ಶಾಲಾಗೃಹ ಪಠನೋದ್ದೇಶ್ಯ ದೇವವಾಕ್ಯ ವ್ಯಾಖ್ಯಾನವು " ಎಂಬುದಾಗಿ ಹಳೇ ಮತ್ತು ಹೊಸ ಒಡಂಬಡಿಕೆ (Testaments)ಗಳ ವಿವರಣೆಯನ್ನು ಕಿರಿಯ ಮತ್ತು ನಿರಕ್ಷರಸ್ಥರಾದ ಹಿರಿಯರಿಗೆ ತಕ್ಕಂತೆ ಬರೆದನು. Rev. W. Barth ಇವನು ಜರ್ಮನ್ ಭಾಷೆಯಲ್ಲಿ ಬರೆದಿದ್ದ ಸಂಪೂರ್ಣ ಬೈಬಲನ್ನು ಅಂತೆಯೇ ಕನ್ನಡಕ್ಕಿಳಿಸಿದನು; ಅಲ್ಲದೆ Dr. Moegling ಇವನೂ ತನ್ನ ಸಮಕಾಲೀನ ಕ್ರೈಸ್ತ ವಿದ್ವಾಂಸರ ಆದರ್ಶಕ್ಕನುವಾಗಿ ಕನ್ನಡದಲ್ಲಿ ಸಂಪೂರ್ಣ ಬೈಬಲನ್ನು ಬರೆದು ಕನ್ನಡ ಬೈಬಲ್ ಸಾಹಿತ್ಯ ವೃಕ್ಷಕ್ಕೆ ಮತ್ತೊಂದು ಕೊಂಬೆಯನ್ನು ಸೇರಿಸಿದನು. ಇವನು ಬರೆದ ಸಾಹಿತ್ಯ ಗ್ರಂಥಗಳ ವಿಷಯವಾಗಿ ಮುಂದಿನ ಭಾಗದಲ್ಲಿ ನಿರೂಪಿಸಲಾಗುವುದು."

## ೧೦. ಬರ್ಥ್, ಜೋಸೆಫ್ ಟೈಲರ್ ಮತ್ತು ಬ್ರೊಕ್ಮನ್ ಇವರು :—

ಕಳೆದ ಶತಮಾನದ ಪ್ರಾರಂಭದಲ್ಲಿ ಬೆಳೆದು ಬಂದ ಕನ್ನಡ ಬೈಬಲ್ ಸಾಹಿತ್ಯವು ಜನರಲ್ಲಿ ಲೌಕಿಕ ಜ್ಞಾನವನ್ನು ಮೊಳಗಿಸಲು ಕಾರಣವಾಯಿತು. ಹಿಂದೂಮತ, ಬೌದ್ಧಮತ, ಜೈನಮತ, ಈ ಮೊದಲಾದ ಮತಗಳಲ್ಲದೆ ಕ್ರೈಸ್ತಮತವೊಂದು ಬೇರೆಯಿದೆ; ಕ್ರೈಸ್ತರಲ್ಲೂ ಧರ್ಮಾಭಿಮಾನವಿದೆ. ಅವರೂ ನಮ್ಮಂತೆ ದೇವರನ್ನು ನಂಬುತ್ತಾರೆ, ಪೂಜಿಸುತ್ತಾರೆ ಎಂದಿತ್ಯಾದಿಯಾಗಿ ಈ ದೇಶದ ಜನರು ತಿಳಿದರು. ಆ ಕಾಲದಲ್ಲಿ ಮುದ್ರಣಕ್ಕೆ ಹೆಚ್ಚಿನ ಸೌಕರ್ಯವಿಲ್ಲದೇ ಇದ್ದಿದ್ದರೂ, ಕನ್ನಡ ಅಚ್ಚುಮೊಳೆಗಳು ಸ್ಪಷ್ಟವಾಗಿಲ್ಲದಿದ್ದರೂ ಈ ಮತಪ್ರಚಾರಕರು ಆ ತೊಡಕುಗಳನ್ನೆಲ್ಲಾ ಎದುರಿಸಿದರು; ಹಲವು ಬೈಬಲ್ ಕೃತಿಗಳನ್ನು ಕನ್ನಡದಲ್ಲಿ ರಚಿಸಿದರು, ಮುದ್ರಿಸಿದರು, ಸಾಕಷ್ಟು ಮಾರಾಟಮಾಡಿದರು, ಅಂತೆಯೇ ಪುನರ್ಮುದ್ರಿಸಿದರು. ಆ ಹಲವು ಪಾಶ್ಚಾತ್ಯ ಜನಾಂಗಗಳ ಪೈಕಿ ಜರ್ಮನ್ನರೇ ಅದರಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಿದ್ದು ಕಂಡು ಬರುತ್ತದೆ.

ಜರ್ಮನ್ ಭಾಷೆಯಲ್ಲೂ ಈ ದೇಶದ ಎರಡೋ ಮೂರೋ ಭಾಷೆಗಳಲ್ಲಿ ನುರಿತವನಾಗಿದ್ದ C. B. Berth ಇವನು ಜರ್ಮನ್ ಭಾಷೆಯಿಂದ Old and New Testaments ಇವುಗಳನ್ನು 1861 ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದನು. ಇವನ ಈ ಕನ್ನಡ ಕೃತಿಗಳು ತುಂಬಾ ಜನಪ್ರಿಯವಾದುವಲ್ಲದೆ ಅವುಗಳ ಎರಡನೇ ಮುದ್ರಣವು 1875 ರಲ್ಲಾಯಿತು.

ಅದೇ ರೀತಿ Fr. A Maurice ಇವನ Bible Selections ಎಂಬ ಅಮೋಘ ಗ್ರಂಥದ ಹಲವು ಭಾಗಗಳನ್ನು Joseph Taylor ಇವನು 1847 ರಷ್ಟು ಹಿಂದೆಯೇ ಭಾಷಾಂತರಿಸಿದ್ದು ಅದು ಬಹುಕಾಲದವರೆಗೂ ಪ್ರಚಾರವಿತ್ತು. ಅದೇ ಧಾಟಿಯಲ್ಲಿ 1849 ರಲ್ಲಿ "Scripture Truths" ಎಂಬ 56 ಪುಟಗಳ ಚಿಕ್ಕ ಪುಸ್ತಕವೂ ಜನರಿಗೆ ನೀತಿಬೋಧಕವಾದ ಕೈಪಿಡಿಯಾಗುತ್ತಿತ್ತು. ಉದಾಹರಣೆಗೆ ಇದರಿಂದ ಕೆಲವು ವಚನಗಳನ್ನು ಇಲ್ಲಿ ಕೊಡಲಾಗಿದೆ :—

> "ದೇವರ ವಚನವನ್ನು ತಿಳಕೊಳ್ಳುವುದಕ್ಕೆ ಪರಿಶುದ್ಧಾತ್ಮನ ಬೋಧನೆಯು ನಮಗೆ ಅವಶ್ಯವಾಗಿ ಅದೆ.
>
> "ನಿನ್ನ ಸ್ವಬುದ್ಧಿಯ ಮೇಲೆ ನಂಬಿಕೆಯನ್ನಿಡದೆ ಕರ್ತನ ಮೇಲೆ ನಿನ್ನ ಪೂರ್ಣ ಮನಸ್ಸಿನಿಂದ ಭರವಸೆಯನ್ನಿಡು.
>
> "ನಿಮ್ಮಲ್ಲಿ ದಾವನಾದರೂ ಜ್ಞಾನದಲ್ಲಿ ತೊಂದರೆಯಾಗಿದ್ದರೆ ಯಾರನ್ನೂ ಗದರಿಸದೆ ಪರಿಪೂರ್ಣವಾಗಿ ಕೊಡುವ ದೇವರನ್ನ ಬೇಡಿಕೊಳ್ಳಲಿ.
>
> "ಕೀರ್ತನೆ, ನಿನ್ನ ಕಟ್ಟಳೆಗಳನ್ನು ನನಗೆ ಬೋಧಿಸು."

ಕ್ರಿ.ಶ. 1851 ರಲ್ಲಿ Capt. H. J. Brockman ಇವನು Natural Theology ಅಥವಾ "ದೇವ ಕ್ರಿಯಾಸೂಚಕ" ಎಂಬ 333 ಪುಟಗಳ ಪುಸ್ತಕವನ್ನು ಬರೆದಿದ್ದು ಬೆಂಗಳೂರು ವೆಸ್ಲೀ ಛಾಪಖಾನೆಯವರಿಂದ ಪ್ರಕಟವಾಯಿತು. ಇದರಲ್ಲಿ ಧರ್ಮಬೋಧೆ, ಆರೋಗ್ಯಶಾಸ್ತ್ರ, ಸಸ್ಯಶಾಸ್ತ್ರ, ಪಾಣಿಶಾಸ್ತ್ರ ಇತ್ಯಾದಿಗಳನ್ನು

ಪ್ರಶ್ನೋತ್ತರ ರೂಪದಲ್ಲಿ ಕೊಟ್ಟದ್ದು ಒಂದು ಉತ್ತಮವಾದ ಕೃತಿಯಾಗಿದೆ. ಇದು ಬೈಬಲ್ ಪ್ರಸಂಗಕ್ಕೆ ಸಂಬಂಧಿಸಿದ ವಿವರಣೆಗಳಿಂದ ಕೂಡಿ J. Taylor ಇವನ "ವೇದವಾಕ್ಯಗಳಲ್ಲಿ ತೋರುವ ವೇದಸತ್ಯಗಳು" ಎಂಬ ಮೇಲಿನ ಗ್ರಂಥದಂತೆ ನೀತಿ ಪ್ರಚೋದಕವಾಗಿದೆ. ಈ "ದೇವಕ್ರೀಯ ಸೂಚಕ" ಪುಸ್ತಕದಲ್ಲಿರುವ ಪ್ರಶ್ನೋತ್ತರ ಶೈಲಿಯೆಂತೆಂಬುದಕ್ಕೆ ಅದರ ಮೊದಲ ಪುಟದಿಂದ ಈ ಆರಂಭದ ಪಂಕ್ತಿಗಳನ್ನು ಎತ್ತಿ ಕೊಡಲಾಗಿದೆ:—

"ತಾಯಿ:—ಮಗನೇ, ನೀನು ಯಾವಾಗಲಾದರೂ ಯೇನಾದರು ವಸ್ತುವನ್ನು ಮಾಡಿ ಇದ್ದಿಯಾ?

"ಮಗ:—ಅಮ್ಮಾ, ನಾನು ವೊಂದು ತಡವೆ ಗಾಳಿ ಪಠವನ್ನು ಮಾಡಿ ಇದ್ದೆ. ಅದು ಬಹು ಚೆನ್ನಾಗಿ ಯೇರುತ್ತಿತ್ತು. ಅದನ್ನು ಹ್ಯಾಗೆ ಮಾಡ ಬೇಕೋ ಅದು ನನ್ನ ಚಿಕ್ಕಪ್ಪನು ನನಗೆ ತೋರಿಸಿದನು.

"ತಾಯಿ:—ಅದನ್ನ ನೀನು ಯಾವದರಿಂದ ಮಾಡಿದಿ?

"ಮಗ:—ಕಾಗದ ದಾರ ದಬ್ಬೆಯು ಇವುಗಳಿಂದ ಮಾಡಿದೆ.

"ತಾಯಿ:—ಅವುಗಳನ್ನು ನೀನು ಹ್ಯಾಗೆ ಜೋಡಿಸಿದಿ?

"ಮಗ:—ಗೋಂದಿನಿಂದ ಹಚ್ಚಿ ಆ ಪಠವನ್ನು ಬಿಸಿಲಿನಲ್ಲಿ ಇಟ್ಟೆ....."

ಹೀಗೆ ಆರಂಭಗೊಂಡ ಸಂಭಾಷಣೆಯು ಹಲವು ಉತ್ಕೃಷ್ಟ ವಿಷಯಗಳನ್ನು ವ್ಯಾಪಿಸಿ ಕೃತಿಯು ಪರಿಪುಷ್ಟವಾಗಿ ಮತ್ತು ವಿಚಾರಪೂರ್ಣವಾಗ ಇದೆ.

### ೧೧. ಹಡ್ಸನ್, ಖುರ್ಟ್ಸ್, ಹೂಚ್ಯನ್ ಮೊದಲಾದವರ ಬರೆಹಗಳು:—

ಕ್ರಿ.ಶ. 1855 ರಿಂದ 1870 ರವರೆಗೆ ನೂರಾರು ಪಾಶ್ಚಾತ್ಯ ಮತಬೋಧಕರು ತಮ್ಮ ಮತಕ್ಕೆ ಸಂಬಂಧಪಟ್ಟ ವಿಷಯಗಳ ಮೇಲೆ ಹಲವಾರು ಚಿಕ್ಕ ಕೈಹೊತ್ತಿಗೆಗಳನ್ನು ಪ್ರಕಟಿಸಿದರು. ವಿವಿಧ ವಿಷಯಗಳನ್ನೊಳಗೊಂಡ ಈ ಚಿಕ್ಕ ಪುಸ್ತಕಗಳು ಜನರಲ್ಲಿ ವಿಚಾರ ಜ್ಞಾನವನ್ನು ಹೆಚ್ಚಿಸಲು ಸಹಾಯಕವಾಗಿದ್ದುವು. ಉದಾಹರಣೆಗೆ Thomas Hudson ಇವನು "A Memoir of Converted Hindu" ಎಂಬುದಾಗಿ ೨೦೦ ಪುಟಗಳ ಇಂಗ್ಲಿಷ್ ಪುಸ್ತಕವನ್ನು ಬರೆದು ಅದರಲ್ಲಿ ಮೈಸೂರಿನ ಒಂದು ಗ್ರಾಮದಲ್ಲಿ ಮತಾಂತರಗೊಂಡ ಒರ್ವ ದೇಶೀಯ ಕ್ರೈಸ್ತನ ಅನುಭವವೆಂತೆಂದು ಚಿತ್ರಿಸುತ್ತಾನೆ. ಈ ಪುಸ್ತಕವು 1855 ರಲ್ಲಿ ಪ್ರಕಟವಾಯಿತು.

1859 ರಲ್ಲಿ John H. Kurtz ಇವನು "ಕ್ರೈಸ್ತ ಧರ್ಮ ಬೋಧನೆ" ಎಂಬ 355 ಪುಟಗಳ ಕನ್ನಡ ಪುಸ್ತಕವನ್ನು Martin Luther ಇವನ ಕ್ರೈಸ್ತ ಮತ ಪಂಥದವರು ಪ್ರತಿಪಾದಿಸುವುದೇನೆಂಬುದನ್ನು ವಿವರಿಸಿ ಬರೆದನು. ಅದಕ್ಕಿಂತ ಸೊಗಸಾಗಿ 1868 ರಲ್ಲಿ John Hutcheon ಇವನು "Light of the World," ಅಥವಾ "ಲೋಕದ ಬೆಳಕು," ಎಂಬುದಾಗಿ ಯೇಸುಕ್ರಿಸ್ತನ ಚರಿತ್ರೆಯನ್ನು ನಿರೂಪಿಸುವ ಗ್ರಂಥವೊಂದನ್ನು ಕನ್ನಡದಲ್ಲಿ ಬರೆದದ್ದು ಆ ಕಾಲದಲ್ಲಿ ಬಹು ಉತ್ತಮ ಕನ್ನಡ ಗದ್ಯ ಗ್ರಂಥವೆಂದು ಪರಿಗಣಿಸಲ್ಪಟ್ಟಿತು.

ಅವುಗಳೆಡೆಯಲ್ಲಿ ನಾಲ್ಕಾರು ಅಥವಾ ಹತ್ತಾರು ಪುಟಗಳ ಚಿಕ್ಕ ಹೊತ್ತಗೆಗಳೂ ಸಹಸ್ರಾರು ಪ್ರತಿಗಳಂತೆ ಮುದ್ರಣವಾಗುತ್ತಲೇ ಇದ್ದುವು. ಅವುಗಳಲ್ಲಿ J. Layer ಇವನ "ಸನ್ಮಾರ್ಗ ವಿಚಾರ" ಎಂಬುದು ಒಂದಾಗಿದೆ. 1860 ರಲ್ಲಿ ಹೊರಬಂದ ಈ ಚಿಕ್ಕ ಪ್ರಬಂಧವು ಬೈಬಲ್ ಸೂಕ್ತಿಗಳ ಸಂಗ್ರಹವಾಗಿದೆ. 1861 ರಲ್ಲಿ W. Clarkson ಇವನು ಬರೆದ Pantheism ಅಥವಾ "ಬ್ರಹ್ಮಜ್ಞಾನ ಪರೀಕ್ಷೆ"ಯೆಂಬುದು ಅದೇ ಮಟ್ಟದ ಕೈಪಿಡಿಯಾಗಿದೆ. 1864 ರಲ್ಲಿ Mrs. W. Line ಇವಳು Saint Paul ಇವನ ತತ್ವ ಬೋಧನೆಗಳನ್ನೆಲ್ಲಾ ಸಂಗ್ರಹಿಸಿ ಕನ್ನಡದಲ್ಲಿ ಬರೆದಳು.

1856 ರಲ್ಲಿ ಮುದ್ರಣವಾದ "ಜಗನ್ನಾಥ ಪರೀಕ್ಷೆ" ಎಂಬುದಾಗಿ 39 ಪುಟಗಳ ಸಂಬಂಧವು 5000 ಪ್ರತಿಗಳಷ್ಟು ಹೊರಬಂದು ಪ್ರತಿಯೊಂದನ್ನು ಮೂರು ಪೈಗಳಂತೆ ಮಾರಾಟ ಮಾಡಲಾಯಿತು. 1858 ರ "ಉಭಯಮಾರ್ಗ ಸಂಬಂಧ" ಎಂಬ 114 ಪುಟಗಳ ಪುಸ್ತಕವೂ "ನಂಬಿ ಜೀವಿಸಿರಿ" ಮತ್ತು "ಏಸುಕ್ರಿಸ್ತನ ಅವತಾರವು" ಎಂಬೀ ಮೊದಲಾದ ಚಿಕ್ಕ ಹೊತ್ತಗೆಗಳನ್ನೂ ಕನ್ನಡದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ ಪಾಶ್ಚಾತ್ಯ ಕ್ರೈಸ್ತರೆ ಬರೆದರೆಂಬುದು ನಿಶ್ಚಯವಾಗಿದೆ. ಈ ಚಿಕ್ಕ ಪುಸ್ತಕಗಳ ರಟ್ಟಿನಲ್ಲಿ ಲೇಖಕರ ಹೆಸರುಗಳೇನೂ ತೋರುವುದಿಲ್ಲವಾದುದರಿಂದ ಅವೆಲ್ಲವನ್ನೂ ವಿವಿಧ ಕ್ರೈಸ್ತಮತ ಪ್ರಚಾರ ಸಂಸ್ಥೆಗಳು ಇತರರಿಂದ ಬರೆಯಿಸಿ ಪ್ರಕಟಿಸುತ್ತಿದ್ದರೆಂದು ವ್ಯಕ್ತವಾಗುತ್ತದೆ.

G. Greenwood ಇವನು 1870 ರಲ್ಲಿ "ಜನ್ಮಾಂತರ ಸ್ಮರಣೆ" ಎಂಬುದಾಗಿ ಹಿಂದೂಗಳು ನಂಬುವ ಪುನರ್ಜನ್ಮದ ವಿಷಯವಾಗಿ ಒಂದು ಉತ್ತಮ ಶೈಲಿಯ ಕನ್ನಡ ಪುಸ್ತಕವನ್ನು ಬರೆದನು. ಈ ಚಿಕ್ಕ ಪುಸ್ತಕದಲ್ಲಿ ಹಿಂದೂಮತದ ಆ ನಂಬಿಕೆಯನ್ನು ಅವನೂ ಒಪ್ಪಿದ್ದಾನೆ. ಆದರೂ ಅದನ್ನು ಕುರಿತು ಅಲ್ಲಲ್ಲಿ ಟೀಕಿಸದೆಯೂ ಬಿಡಲಿಲ್ಲ, 1874 ರಲ್ಲಿ ಅನಾಮಧೇಯನೊಬ್ಬನಿಂದ ಬರೆಯಲ್ಪಟ್ಟ "ಜನ್ಮಾಂತರೋಪದೇಶವು" ಎಂಬ ಚಿಕ್ಕ ಪುಸ್ತಕವೂ ಜೀವಾತ್ಮನ ಪುನರಾಗಮನ ಸಮಸ್ಯೆಯನ್ನೇ ಕುರಿತು ಚರ್ಚಿಸಿ ಟೀಕಿಸುತ್ತದೆ. ಅದರಂತೆಯೇ "ಜೀವಾಂತ್ಯ ಸ್ಮರಣೆ", ಎಂಬ 36 ಪುಟಗಳ ಪ್ರಬಂಧದಲ್ಲೂ ಅಂದಿನ ಪಾಶ್ಚಾತ್ಯ ಲೇಖಕನು ಪುನರ್ಜನ್ಮದ ಬಗ್ಗೆ ಹಲವು ವಿಷಯಗಳನ್ನು ಪ್ರಸ್ತಾಪಿಸಿದ್ದಾನಲ್ಲದೆ ಒಂದೊಂದೆಡೆ ತನ್ನ ಸಂದೇಹವನ್ನು ಆ ಸಂಬಂಧವಾಗಿ ಬಿಚ್ಚಿ ಹೇಳಿದ್ದಾನೆ.

**೧೨. ವಿವಿಧ ವಿಷಯಗಳ ಮೇಲೆ ಇನ್ನೂ ಹಲವು ಚಿಕ್ಕ ಪುಸ್ತಕಗಳು :—**

ಆ ಕಾಲದಲ್ಲಿ ಪಾಶ್ಚಾತ್ಯರು ಏಷ್ಯಾ ಖಂಡ, ಆಫ್ರಿಕಾ ಖಂಡ ಮತ್ತು ಇತರೆಡೆಗಳಿಗೂ ಹೋಗಿ ತಮ್ಮ ಮತ ಪ್ರಚಾರವನ್ನು ಬಹು ಉತ್ಸಾಹದಿಂದ ಸಾಧಿಸುತಿದ್ದರು. ಸಾಗರಾಂತ ದ್ವೀಪಗಳಲ್ಲೂ ಅವರು ನೆಲೆಸಿದ್ದರು, ಅಂಥವರಲ್ಲಿ ಕೆಲವರು ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಾ ತಮ್ಮ ಅನುಭವಗಳನ್ನು ಬರೆಯುತ್ತಿದ್ದರು. ಹಾಗೆ ಬರೆದ ಒಂದು ಚಿಕ್ಕ ಕನ್ನಡ ಪುಸ್ತಕವು "ಮದಗಸ್ಕರ—ಅದರ ಮಿಶನೂ ರಕ್ತ ಸಾಕ್ಷಿಗಳೂ" ಅಥವಾ "Madagascar–Its Mission and its Martyrs"

ಎಂಬುದಾಗಿದೆ. ಈ ಚಿಕ್ಕ 49 ಪುಟಗಳ ಪುಸ್ತಕವು 1865 ರಲ್ಲಿ ಹೊರಬಂತು. ಇದೇ ರೀತಿ ಅನಾಮಧೇಯ ಕ್ರೈಸ್ತಗುರುವಿನಿಂದ 1869 ರಲ್ಲಿ ಬರೆಯಲ್ಪಟ್ಟ "History of Muhammad" ಎಂಬ 42 ಪುಟಗಳ ಕೈಪಿಡಿಯು ಸಹಸ್ರಾರು ಪ್ರತಿಗಳಂತೆ ಪ್ರಚಾರವಾದುವು. ನಿದರ್ಶನಾರ್ಥವಾಗಿ ಇದರಿಂದ ಕೆಲವು ಪಂಕ್ತಿಗಳನ್ನು ಎತ್ತಿ ಹೇಳಲಾಗಿದೆ.

> "ಕ್ರೈಸ್ತ ಮತಕ್ಕೆ ದೇವರ ಪ್ರೀತಿ ಎಂಬುದು ಧ್ವಜವಾಗಿರುವುದರಿಂದ, ಅನೇಕ ವೈರಿಗಳು ಇದಕ್ಕೆ ವಿರೋಧವಾಗಿ ಎದುರು ನಿಂತರೂ ಈ ದಿನದ ವರೆಗೂ ಅದು ಹಬ್ಬಿಕೊಂಡು ಬೆಳೆಯುತ್ತಾ ಬಂದಿರುತ್ತದೆ. ಸಮುದ್ರದಲ್ಲಿಯೂ ಕ್ರೈಸ್ತರಿಗೆ ಮಾತ್ರ ಹೆಚ್ಚುವಿಕೆಯೂ ಇಸ್ಲಾಮಿಗೆ ಬಾಡುವಿಕೆಯೂ ಹಿಡಿದಿರುತ್ತದೆ. ಅವರು ಈ ಹಿಂದೂ ರಾಜ್ಯದಲ್ಲಿ ಬಂದಾಗ ಇವರ ಅಧಿಕಾರವು ನಿಂತು ಹೋಯಿತು..... ಬೇರೆ ಸ್ಥಳಗಳಲ್ಲಿಯೂ ಮುಸಲ್ಮಾನರ ಒಂದು ರಾಜ್ಯಕ್ಕೂ ಸುಖವಿರುವದಿಲ್ಲ, ಯಾಕಂದರೆ ಇಸ್ಲಾಮಿಗೆ ಕ್ಷಮೆ ಎಂಬುದು ಇಲ್ಲದೆ ಇರುವದರಿಂದ ಹೊರಗಿನವರನ್ನು ನಾಯಿಗಳೆಂದು ಧಿಕ್ಕರಿಸುವದಲ್ಲದೆ ತಮ್ಮೊಳಗೆ ಮಮತೆಯೂ ಬಂಧು ದೃಢತೆಯೂ ಇರುವದಿಲ್ಲ......."

ಇಂಥಾ ಬರೆವಣಿಗೆಯ ಮೂಲಕ ಕ್ರೈಸ್ತರು ತಮ್ಮ ಜನಾಂಗದ ಮತ್ತು ಮತದ ಹೆಗ್ಗಳಿಕೆಯನ್ನು ನ್ಯಾಯವಾಗಿಯೇ ಸಾರಿದರು. ಅದರ ಪರಿಣಾಮವಾಗಿ ಅವರು ಲೋಕವ್ಯಾಪಿಗಳೂ ಆದರು, ಹಲವು ಸಂದರ್ಭಗಳಲ್ಲಿ ಆ ವಿದೇಶೀಯರು ವಿಚಾರಗಳನು ಜನಸಾಮಾನ್ಯರಿಗೆ ತಕ್ಕಂತೆ ಸರಳವಾದ ರೀತಿಯಲ್ಲಿ ಹೇಳಿದ್ದಾರೆ. ಎಲ್ಲಾ ಸಂದರ್ಭಗಳಲ್ಲೂ ಅವರು ಸಾಕಷ್ಟು ಜನರನ್ನು ತಮ್ಮ ಮತಕ್ಕೆ ಒಲಿಸುವ ಪ್ರಯತ್ನವನ್ನು ಮಾಡಿದ್ದಾರೆ, ಸಂದರ್ಭಾನುಸಾರ ಅವರು ಪದಗಳನ್ನು ಕಟ್ಟಿ ಜನರಿಗೆ ಹಾಡಿ ತೋರಿಸಿದ್ದಾರೆ. ಉದಾಹರಣೆಗೆ 1869 ರಲ್ಲಿ ಬರೆದ ಮತ್ತು ಮೇಲೆ ಹೇಳಿದ "ಜೀವಾಂತ್ಯ ಸ್ಮರಣೆ" ಎಂಬ ಚಿಕ್ಕ ಹೊತ್ತಗೆಯಲ್ಲಿ ಹೀಗೆ ಒಂದು ಪದವನ್ನು ಅದರ ಲೇಖಕನು ಸಾಕಷ್ಟು ಅರ್ಥಪೂರ್ಣವಾಗಿ ಬರೆದಿದ್ದಾನೆ :—

"ಜಯಶಾಲಿ ಕ್ರಿಸ, ನನ್ನ
ಶೇರಿಸಿಕ್ಕು ದಂಡಿಗೆ,
ತಾಲು ಖಡುಗಂಗಳನ್ನು
ಇಡು ನನ್ನ ಹಸ್ತಕೆ!

"ಧೀರಯುದ್ಧ ದನಿಯೆತ್ತಿ
ಹತ್ತಿ ನಿನ್ನ ಹೆಜ್ಜೆಗೆ
ಶತ್ರು ಜನ ನಡುನೆತ್ತಿ
ಭಂಗ ಮಾಡಿ ಜೈಸುವೆ,

"ಸುಖ ಕ್ಷೇಮವಾಗಿ ಸಾಯ್ವೆ
ತಂದೆಗಾತ್ಮವೊಪ್ಪಿಸಿ
ಮೃತ್ಯುದ್ವಾರವನ್ನು ಹಾಯ್ವೆ
ಕ್ರಿಸ್ತನಾಮ ಜಯದಿ,
ಈ ಶರೀರವನ್ನು ಕೀಟ
ತಿಂದರೇನು ಚಿಂತೆಯೇ !"

ಈ ರೀತಿ ಹಾಡತಕ್ಕ ಈ ಪಾಶ್ಚಾತ್ಯನು ಪುನರ್ಜನ್ಮವನ್ನು ಕುರಿತು ಬರೆಯುತ್ತಾ ಆ ತತ್ವವನ್ನು ಒಪ್ಪುತ್ತಾನೆ. ಅಲ್ಲದೆ ಇವನು ಭಗವದ್ಗೀತೆಯನ್ನೂ ಓದಿರಬೇಕೆಂದು ಅನಿಸುತ್ತದೆ.

**೧೩. ಹಿಂದೂಮತ ಧರ್ಮಗಳನ್ನು ಒಮ್ಮೊಮ್ಮೆ ಟೀಕಿಸಿದರು :—**

ತಮ್ಮ ಮತದ ಮೇಲ್ಮೆಯನ್ನೇ ಕುರಿತು ಹೇಳುವಾಗ ಈ ಕ್ರೈಸ್ತ ಧರ್ಮಗುರುಗಳಾದ ಅಂದಿನ ಬಿಳಿ ಜನರು ಇತರ ಮತಗಳನ್ನು ಸಕಾರಣವಾಗಿ ಅಥವಾ ಅಕಾರಣವಾಗಿ ಟೀಕಿಸದೇ ಬಿಡಲಿಲ್ಲ, ಅದಕ್ಕಾಗಿಯೋ ಎಂಬಂತೆ ಕಳೆದ ಶತಮಾನದಲ್ಲಿ ಜನರಲ್ಲಿ ತಮ್ಮ ಪ್ರಭಾವವನ್ನು ಬೀರಲೆಂದು ಬರೆದ ಈ ಹತ್ತಾರು ಪುಟಗಳ ಕಿರು ಹೊತ್ತಗೆಯಲ್ಲಿ ಅವರು ತಮ್ಮ ಹೆಸರುಗಳನ್ನು ಸೂಚಿಸಲಿಲ್ಲ. ಆದರೆ ಅವೆಲ್ಲವನ್ನೂ ಅಂದಿನ ಕ್ರೈಸ್ತ ಮತ ಪ್ರಚಾರ ಮಂಡಳಿಗಳು ಅಚ್ಚುಹಾಕಿಸಿ ಬಿತ್ತರಿಸಿದ್ದಾರೆ, ಅವರು ಹೊಗಳಿ ಬರೆದರೂ ತೆಗಳಿ ಬರೆದರೂ ಆ ಎಲ್ಲಾ ವಿಷಯಗಳು ಜನರ ಜ್ಞಾನಾಭಿವೃದ್ಧಿಗೆ ಸಹಾಯಕವಾಗಿದೆಯೆಂಬುದನ್ನು ಒಪ್ಪಲೇಬೇಕಾಗಿದೆ.

ಬೈಬಲ್ ಸೂಕ್ತಿಗಳನ್ನು ಆಧಾರವಾಗಿಟ್ಟುಕೊಂಡು ಅವರು ಹಲವು ವಿಚಾರಗಳ ಮೇಲೆ ತರ್ಕಿಸಿದ್ದಾರೆ. "ಲಿಂಗಾಯತ ಮತವಿಚಾರ" ಎಂಬುದಾಗಿ 1874 ರಲ್ಲಿ ಪ್ರಕಟವಾದ ಚಿಕ್ಕ ಪುಸ್ತಕದಲ್ಲಿ ಆಗ ತಾನೇ ಮತಾಂತರಗೊಂಡ ಒರ್ವ ದೇಶೀಯನ ಮನೋದ್ವೇಗಯೆಂತೆಂಬುದನ್ನು ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ, 1864 ರ ಮೊದಲನೇ ಮುದ್ರಣವಲ್ಲಿ ೫,೦೦೦ ಪ್ರತಿಗಳಷ್ಟು ಹೊರಬಂದ "ಕುಲಾಚಾರ ಪರೀಕ್ಷೆ" ಎಂಬ ಹೊತ್ತಗೆಯಲ್ಲಿ ಇನ್ನೊರ್ವ ಅನಾಮಧೇಯನು ಈ ರೀತಿಯಾಗಿ ತನ್ನ ಮತ ಪ್ರಚಾರದ ಕಹಳೆಯನ್ನು ನ್ಯಾಯವಾಗಿಯೇ ಊದುತಿದ್ದಾನೆ:—

"ಹಿಂದೂ ಜನರೆ, ಸತ್ಯವೇದ (ಬೈಬಲ್) ವನ್ನು ಕೈಕೊಳ್ಳುವವರು ನಿಮ್ಮ ಜಾತಿಗೆ ಕೆಟ್ಟುಹೋದರೆಂದು ನೀವು ನಿಂದಿಸುತ್ತೀರಲ್ಲ, ಒಳ್ಳೇದು. ಹೀಗಾದರೆ ಆ ವೇದ ಹೊಂದಿರುವ ನಾನು ನಿಮ್ಮ ಘನವಾದ ಜಾತಿ ಮರ್ಯಾದೆಗಳ ವಿವರವನ್ನು ಈ ಚಿಕ್ಕ ಪುಸ್ತಕದಲ್ಲಿ ಬರೆದು ನಿಮಗೆ ತೋರಿಸುತ್ತೇನೆ. ಚೆನ್ನಾಗಿ ಓದಿ ಗ್ರಹಿಸಿರಿ........"

"ಆದಿಯಲ್ಲಿ ಸೃಷ್ಟಿಕರ್ತನು ಮನುಷ್ಯರನ್ನು ನಾಲ್ಕು ಜಾತಿಗಳಾಗಿ ಉಂಟುಮಾಡಿದನೆಂದು ಬ್ರಾಹ್ಮಣರು ಹೇಳುತ್ತಾರೆ........ಬ್ರಹ್ಮನ ಮುಖದಲ್ಲಿ ಹುಟ್ಟಿದ

ರಿಂದ ಬ್ರಾಹ್ಮಣರೆಂದೂ ಪಾದದಲ್ಲಿ ಹುಟ್ಟಿದರಿಂದ ಶೂದ್ರತ್ವವಾಗುವದೆಂದೂ ಹೇಳುವ ಪಕ್ಷ ಬ್ರಹ್ಮನ ಪಾದಾಂಗುಷ್ಠದಲ್ಲಿ ಹುಟ್ಟಿದ ದಕ್ಷಿಣಿಗೂ ವಿಷ್ಣುವಿನ ಪಾದದಲ್ಲಿ ಹುಟ್ಟಿದ ಗಂಗೆಗೂ ಕೇವಲ ಶೂದ್ರತ್ವ ಉಂಟಲ್ಲವೇ? ಉಂಟೆಂದು ಹೇಳುವ ಪಕ್ಷಕ್ಕೆ ದಕ್ಷನ ಸಂಪತಿಯನ್ನೂ ಗಂಗೆಯನ್ನೂ ಬ್ರಾಹ್ಮಣರು ಮುಟ್ಟ ಕೊಡದು, ವೇಶ್ಯೆಯಾದ ಊರ್ವಶಿಯ ಗರ್ಭದಲ್ಲಿ ಹುಟ್ಟಿದ ವಶಿಷ್ಟನೂ ಕಪ್ಪೆಯಾದ ಮಂಡೂಕಳ ಗರ್ಭದಲ್ಲಿ ಹುಟ್ಟಿದ ಮಾಂಡವ್ಯನೂ ಕತ್ತೆಯಾದ ಗಾರ್ದಭನಿಗೆ ಹುಟ್ಟಿದ ಗಾರ್ಗೇಯನೂ ಗಿಳಿಯಲ್ಲಿ ಹುಟ್ಟಿದ ಶುಕನೂ ಯಾವ ಕುಲದವರು........?

"ಜ್ಞಾನವಿಲ್ಲದ ವೇದಪಾಠವು ವ್ಯರ್ಥವೆಂದು ನಿಮ್ಮಲ್ಲಿಯೇ ಒಬ್ಬನು ಬರೆದಿದ್ದಾನೆ,

ಚತುರ್ವೇದವಿದೊ ವಿಪ್ರಃ ಸೂಕ್ಷ್ಮ ಬ್ರಹ್ಮನ್ನವಿಂದತಿ
ವೇದಭಾರ ಭಾರಾಕಾಂಡಃ ಸುವೈ ಬ್ರಾಹ್ಮಣ ಗಾರ್ದಭಃ।

(ಅನೇಕ ಚಂದನದ ಚಕ್ಕೆಗಳ ಭಾರವನ್ನು ಹೊತ್ತ, ಅಥವಾ ಅದರಲ್ಲಿರುವ ಸುವಾಸನೆಯನ್ನು ತಿಳಿಯುಕೊಡದ ಕತ್ತೆ ಹೇಗೋ ಚತುರ್ವೇದಗಳನ್ನು ಓದಿದರೂ ಸೂಕ್ಷ್ಮವಾದ ಪರಬ್ರಹ್ಮನನ್ನು ತಿಳಿಯದ ಬ್ರಾಹ್ಮಣನು ಹಾಗೆಯೇ ಇದ್ದಾನೆ.)

"ಓ ಜನರೇ, ನಿಮ್ಮ ಗುರುಗಳಾದ ಬ್ರಾಹ್ಮಣರು ನಿಮಗೆ ಉಪದೇಶಿಸುವ ತಂತ್ರವಾದ ಬೋಧನೆಗಳನ್ನೂ ಅವನು ನಡಿಸುವ ಅನಾಚಾರಗಳನ್ನೂ ಈ ಪುಸ್ತಕವಲ್ಲಿ ತಿಳಿಯಮಾಡುತ್ತೀನಾದ ಕಾರಣದಿಂದ ನನ್ನಲ್ಲಿ ದಯವಿಟ್ಟು ನಿಮ್ಮ ಮತ ವಿರೋಧ ಬುದ್ಧಿಯಿಂದ ತಳ್ಳಿಬಿಡನೆ ನಿಧಾನವಾದ ಬುದ್ಧಿಯಿಂದ ಕಿವಿಗೊಡಿರಿ........"

ಈ ರೀತಿಯಾಗಿ ಬರೆದ ಈ ಕ್ರೈಸ್ತಗುರುವು ಬರೇ ಕನ್ನಡ ಭಾಷೆಯನ್ನು ಮಾತ್ರ ಕಲಿತ ಸಾಮಾನ್ಯ ವ್ಯಕ್ತಿಯೇನೂ ಅಲ್ಲ. ಅವನು ಆ ಬರೆವಣಿಗೆಯಲ್ಲಿ ತನ್ನ ಹೆಸರನ್ನು ಸೂಚಿಸದೇ ಇದ್ದರೂ ಅವನು ಬಹು ದೊಡ್ಡ ವೇದಾಭ್ಯಾಸಿಯೂ ಸಂಸ್ಕೃತ ಭಾಷಾ ಪಂಡಿತನೂ ಪ್ರಾಚೀನ ಗ್ರಂಥಗಳನ್ನು ಸಂಶೋಧಿಸಿ ಅತ್ಯುನ್ನತ ಮಟ್ಟದ ಪಾಶ್ಚಾತ್ಯ ವಿದ್ವಾಂಸನೂ ಆಗಿರುವನೆಂದು ನಿಸ್ಸಂದೇಹವಾಗಿ ಹೇಳಬಹುದು.

## ೧೮. ಡೇನಿಯೆಲ್ ಸೇಂಡರ್ಸನ್ ಇವನ ಬೈಬಲ್ ಹೊತ್ತಿಗೆಗಳು :—

ಸುಮಾರು ಕ್ರಿ. ಶ. 1840 ರಿಂದಲೇ ಈ ದೇಶದಲ್ಲಿದ್ದ Rev. Daniel Sanderson ಇವನು ಬೈಬಲ್ ಕೃತಿಗಳನ್ನು ಕನ್ನಡಕ್ಕಿಳಿಸುವುದರಲ್ಲಿ ಅಷ್ಟೇನೂ ಆಸಕ್ತಿ ವಹಿಸಿದಂತೆ ತೋರುವುದಿಲ್ಲ. ಇವನ ಪರಿಶ್ರಮವೆಲ್ಲವೂ ಕನ್ನಡ ಸಾಹಿತ್ಯ ಸೃಷ್ಟಿಯ ಕಡೆಗೆ ಹರಿಯಿತೆಂಬುದು ಮುಂದಿನ ಪುಟಗಳಲ್ಲಿ ವ್ಯಕ್ತಿಪಡಿಸಲಾಗುವುದು, ಇವನು ಸಂಸ್ಕೃತ ಮತ್ತು ಕನ್ನಡದಲ್ಲಿ ಬಹು ಪ್ರತಿಭಾವಂತನಾದ ವಿದ್ವಾಂಸನಾಗಿದ್ದನು.

ಇವನು ಸುಮಾರು 1841 ರ ಕಾಲದಲ್ಲಿ ಬರೆದ "God's Choice" ಅಥವಾ "ಏಸುವಿನ ಬಳಿಗೆ ಬಾ" ಎಂಬ ಚಿಕ್ಕ ಪುಸ್ತಕವು ಹಲವು ಬಾರಿ ಪುನರ್ಮುದ್ರಣ ವಾಯಿತು. ಕ್ರಿ. ಶ. 1864 ರಲ್ಲಿ ಅದು 107 ಪುಟಗಳ ಹೊತ್ತಗೆಯಾಗಿ 5000 ಪ್ರತಿಗಳಂತೆ ಮುದ್ರಿಸಿ ಹಂಚಿದರು. Newman Hall ಇವನು "Come to Jesus" ಎಂಬುದಾಗಿ ಬರೆದಿದ್ದರ ಈ ಕನ್ನಡಾನುವಾದವು ತುಂಬಾ ಜನಪ್ರಿಯ ವಾಗಿತ್ತು.

Daniel Sanderson ಇವನು ಕನ್ನಡ ಸಾಹಿತ್ಯದಲ್ಲಿ ಶಾಸ್ತ್ರೀಯ ಅನ್ವೇಷಣೆಯನ್ನು ಕೈಗೊಂಡ ಒರ್ವ ಧೀಮಂತ ವಿದ್ವಾಂಸನಾದರೂ ಅವನು ಸಂದರ್ಭಾನುಸಾರವಾಗಿ ಬೈಬಲ್ ಸೂಕ್ತಿಗಳನ್ನೂ ಗೀತೆಗಳನ್ನೂ ಒಮ್ಮೊಮ್ಮೆ ಬರೆದು ಆಂದಿನ "ವಾಗ್ವಿಧಾಯಿನಿ" ಇತ್ಯಾದಿ ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಕಟಿಸಿದನು. 1856 ರಲ್ಲಿ ಲಂಡನ್, ಜರ್ಮನ್ ಮತ್ತು ವೆಸ್ಲೀ ಕ್ರೈಸ್ತಮತ ಪ್ರಚಾರ ಸಂಸ್ಥೆಗಳು ಒಟ್ಟು ಸೇರಿ "The Psalms of David" ಇದನ್ನು ಕನ್ನಡದಲ್ಲಿ ಬರೆಯಲು ಒಂದು ಸಮಿತಿಯನ್ನು ನೇಮಿಸಿದಾಗ Rev. Sanderson ಇವನು ಅದರಲ್ಲಿ ಒರ್ವ ಸದಸ್ಯನಾಗಿದ್ದು ಪ್ರಧಾನ ಪಾತ್ರವನ್ನು ವಹಿಸಿದನು.

Daniel Sanderson ಇವನು ಅವನ ಸಮಕಾಲೀನರಾದ George Weigle, Herman Moegling ಮತ್ತು John Garrett ಇವರಷ್ಟೇ ನುರಿತ ವಿದ್ವಾಂಸನಾಗಿದ್ದನು. 1854 ರಲ್ಲಿ ಕನ್ನಡ ಬೈಬಲ್ ಪರಿಷ್ಕರಣೆ ಸಮಿತಿಯಲ್ಲಿ ಅವನೂ ಒರ್ವ ಸದಸ್ಯನಾಗಿದ್ದು ತನ್ನ ಪಾಲಿನ ಸೇವೆಯನ್ನು ನಿಷ್ಠೆಯಿಂದ ಸಲ್ಲಿಸಿದ್ದಾನೆ. ಇವನಲ್ಲಿ ಜಾತೀಯವಾದದ ಭೇದ ಭಾವವೆಂಬುದು ಸ್ವಲ್ಪವೂ ಇರಲಿಲ್ಲ. ತನ್ನ ಹೆಸರನ್ನು ಪ್ರಕಟಿಸದೆಯೇ ಜನರ ಜ್ಞಾನಪ್ರಚಾರಾರ್ಥವಾಗಿ ಕಿರುಹೊತ್ತಗೆಗಳನ್ನು ಬರೆದು ಹಂಚುತಿದ್ದ ಆಂದಿನ ಕ್ರೈಸ್ತಗುರುಗಳಲ್ಲಿ ಇವನೂ ಒಬ್ಬನು, ಇವನ ಗ್ರಂಥಗಳು ಹೆಚ್ಚಾಗಿ ಮೈಸೂರು ಮತ್ತು ಬೆಂಗಳೂರಿನ ವೆಸ್ಲೀ ಮುದ್ರಣಾಲಯಗಳ ಮೂಲಕ ಪ್ರಕಟವಾಗುತಿದ್ದುವು.

೧೫. ಗಸ್ತಾವ್ ಕೈಸ್ ಇವನ "ಸಭೆ ಪ್ರಾರ್ಥನೆಗಳು" ಇತ್ಯಾದಿ :—

Rev. Gustav Kies ಇವನು ಕನ್ನಡ, ತಮಿಳು, ತೆಲುಗು ಮತ್ತಿತರ ಕೆಲವು ಭಾರತೀಯ ಭಾಷೆಗಳಲ್ಲೂ ನಿಷ್ಣಾತ ವಿದ್ವಾಂಸನಾಗಿದ್ದನು. ಇವನು ಕ್ರೈಸ್ತ ಧರ್ಮ ಬೋಧಕನಾಗಿಯೂ ಅನಂತರ ಬ್ರಿಟಿಷ್ ಸರಕಾರದಧೀನದಲ್ಲಿ ಒರ್ವ ನೌಕರನಾಗಿಯೂ ಇದ್ದು ಮದ್ರಾಸಿನಲ್ಲಿಯೇ ತನ್ನ ಕನ್ನಡ ಸಾಹಿತ್ಯ ವ್ಯಾಸಂಗವನ್ನು ನಡೆಸಿದನು. ಒರ್ವ ವಿದ್ಯಾತಜ್ಞನಾಗಿದ್ದ ಇವನು ತನ್ನ ಕೆಲವು ಬೈಬಲ್ ಕೃತಿಗಳನ್ನು ಹಿರಿಯರಿಗೆ ಹೇಗೋ ಹಾಗೆಯೇ ಕಿರಿಯರಿಗೂ ತಕ್ಕುದಾದಂತೆ ಸರಳ ಶೈಲಿಯಲ್ಲಿ ಮನಮುಟ್ಟುವಂತೆ ಬರೆದಿದ್ದಾನೆ.

Gustav Kies ಬರೆದ ಬೈಬಲ್ ಕೃತಿಗಳಲ್ಲಿ ಅವನು 1858 ರಲ್ಲಿ ಪ್ರಕಟಿಸಿದ "ಸಭೆ ಪ್ರಾರ್ಥನೆಗಳು" ಎಂಬ 193 ಪುಟದ ಪುಸ್ತಕವು ಕಳೆದ ಶತಮಾನದಲ್ಲಿ ಎಲ್ಲಾ

ಕ್ರೈಸ್ತ ಗುಡಿಗಳಲ್ಲಿ ಉಪಯೋಗಿಸಲ್ಪಟ್ಟಿತ್ತು. ಮಂಗಳೂರು ಬಾಸೆಲ್ ಮಿಷನ್ ನವರಿಂದ ಮುದ್ರಿಸಲ್ಪಟ್ಟ ಈ ಗ್ರಂಥದಲ್ಲಿ ಹಲವು ಬೈಬಲ್ ಸೂಕ್ತಿಗಳನ್ನು ಪದ್ಯರೂಪಕ್ಕಿಳಿಸಲಾಗಿಡೆಯಲ್ಲದೆ ಕೆಲವು ಆ ಲೇಖಕನಿಂದ ಬರೆಯಲ್ಪಟ್ಟ ಸ್ವಂತ ಹಾಡುಗಳಾಗಿಯೂ ಮನನೀಯವಾಗಿಯೂ ಇವೆ. ದೇಶೀಯ ಸಂಗೀತದ ರಾಗ ತಾಳಗಳ ಜ್ಞಾನವನ್ನೂ ಅವನು ಚೆನ್ನಾಗಿ ಅರಿತಿದ್ದನೆಂಬುದನ್ನು ಈ "ಸಭೆ ಪ್ರಾರ್ಥನೆಗಳು" ಇದರಿಂದ ತಿಳಿಯಬಹುದಾಗಿದೆ.

Gustav Kies ಇವನು 1863 ರಲ್ಲಿ "ಆರಿಸಿದ ದೇವವಾಕ್ಯದ ವಚನಗಳ ರತ್ನಮಾಲೆ" ಎಂಬುದಾಗಿ ಬೈಬಲ್ ನುಡಿಮುತ್ತುಗಳ ಸಂಗ್ರಹವನ್ನೂ 1865 ರಲ್ಲಿ "ದೇವವಾಕ್ಯದ ವಚನಮಂಜರಿ" ಎಂಬುದಾಗಿ ಅದೇ ತರಹದ ಬರೇ 36 ಪುಟಗಳ ಚಿಕ್ಕ ಪುಸ್ತಕವನ್ನೂ ಬರೆದಿದ್ದು ಹೊಸತಾಗಿ ಮತಾಂತರಗೊಂಡ ಅಂದಿನ ದೇಶೀಯ ಕ್ರೈಸ್ತರಿಗೆ ಕೈದೀವಿಗೆಯಂತಿದ್ದುವು, ಈ ಕೃತಿಗಳು ಒಂದೊಂದು ಆವೃತಿಗೆ 5000 ಪ್ರತಿಗಳಿಗೂ ಮೇಲ್ಪಟ್ಟು ಮುದ್ರಣವಾಗಿ ಕನ್ನಡನಾಡಿನ ಎಲ್ಲಾ ಭಾಗಗಳಲ್ಲೂ ಹಂಚಲಾಗಿತ್ತು.

ಕ್ರಿ. ಶ. 1867 ರಲ್ಲಿ Gustav Kies ಇವನು "ಕಲ್ವಮೇರಿಕೆ ದೊರೆಗಳ ಸಮಾಧಿ ಮುಂದೆ," ಎಂಬುದಾಗಿ ಇನ್ನೊಂದು ಚಿಕ್ಕ ಹೊತ್ತಗೆಯನ್ನು ಪ್ರಕಟಿಸಿದನು. ಇದು ಜರ್ಮನ್ ಭಾಷೆಯಿಂದ ಕನ್ನಡಕ್ಕೆ ಇಳಿಸಲ್ಪಟ್ಟ ಒಂದು ವಿಡಂಬನಾ ಬರೆಹವಾಗಿತ್ತು. ಇವಿಷ್ಟೇ ಅಲ್ಲದೆ ಕ್ರೈಸ್ತ ಮತಕ್ಕೆ ಸಂಬಂಧವಾದ ಹಲವು ಲೇಖನಗಳನ್ನು ಇವನು ಆಗ ಪ್ರಚಾರವಿದ್ದ ಒಂದೆರಡು ಪತ್ರಿಕೆಗಳಲ್ಲೂ ಬರೆಯುತಿದ್ದನು. ತಮಿಳಿನಲ್ಲೂ ಕನ್ನಡದಲ್ಲೂ ಉತ್ತಮ ಭಾಷಣಕಾರನಾಗಿಯೂ ಲೇಖಕನನಾಗಿಯೂ ಇದ್ದ Gustav Kies ಇವನು ಒರ್ವ ಪ್ರತಿಭಾವಂತ ಜರ್ಮನ್ ಸಾಹಿತಿಯಾಗಿ ಅಂದು ಶೋಭಿಸಿದನು. ಇವನ ಇತರ ಸಾಹಿತ್ಯ ಗ್ರಂಥಗಳನ್ನು ಕುರಿತು ಮುಂದಿನ ಭಾಗದಲ್ಲಿ ಹೇಳಲಾಗುವುದು.

೧೩. ರೆ॥ ಕ್ಯಾಂಪ್ಬೆಲ್ ಮತ್ತು ಜೋಹನ್ ಹ್ಯೂಬರ್ ಇವರು :—

Rev: C. Campbell ಇವನು ಸುಮಾರು ಕ್ರಿ. ಶ. 1846ರಿಂದ ಕನ್ನಡ ನಾಡಿನಲ್ಲಿ ಮತಪ್ರಚಾರಕನಾಗಿ ಸಂಚರಿಸುತಿದ್ದನು. ಕನ್ನಡ ಭಾಷೆಯಲ್ಲಿ ಉತ್ತಮ ಮಾತುಗಾರನೂ ಬರೆಹಗಾರನೂ ಆಗಿ ಆ ಕಾಲದಲ್ಲಿ ಮತ್ತೊರ್ವ ಪ್ರತಿಭಾವಂತ ವಿದ್ವಾಂಸನಾಗಿ ವಿರಾಜಿಸಿದನು. 1854 ರಲ್ಲಿ ಕನ್ನಡ ಬೈಬಲ್ ಕೃತಿಗಳ ಪರಿಷ್ಕರಣಾ ಸಮಿತಿಯಲ್ಲಿ ಇವನೂ Weigle, Garret, Moegling ಮತ್ತು D. Sanderson ಇವರೊಡಗೂಡಿ ಒರ್ವ ಸದಸ್ಯನಾಗಿದ್ದು ದುಡಿದನು. 1857 ರಲ್ಲಿ "Daily Bread" ಎಂಬುದಾಗಿ ಇಂಗ್ಲಿಷಿನಲ್ಲಿದ್ದ ಒಂದು ಚಿಕ್ಕ ಬೈಬಲ್ ಸೂಕ್ತಿಯನ್ನೊಳಗೊಂಡ ಗ್ರಂಥವನ್ನು ಕನ್ನಡದಲ್ಲಿ ಬರೆದನು. ಅಷ್ಟೇ ಅಲ್ಲ, 1860 ರಲ್ಲಿ ಬೈಬಲಿನಿಂದ ನೂರಾರು ಉತ್ತಮ ಸೂಕ್ತಿಗಳನ್ನೂ ಪ್ರಸಂಗಗಳನ್ನೂ ಹೆಕ್ಕಿ ಕನ್ನಡಿಸಿದ ಅವನ ಪುಸ್ತಕವು ಎಲ್ಲಾ ಕ್ರೈಸ್ತಗುರುಗಳ ಪ್ರಶಂಸೆಗೆ ಪಾತ್ರವಾದ ಮತ್ತು ಕ್ರೈಸ್ತ

ಗುಡಿಗಳಲ್ಲಿ ಉಪಯೋಗಿಸಲ್ಪಡುತ್ತಿದ್ದ ಉತ್ತಮ ಗ್ರಂಥವಾಗಿತ್ತು.

Rev. Campbell ಇವನಂತೆ ಮತ್ತೊರ್ವ ಉತ್ಸಾಹೀ ವಿದ್ವಾಂಸನು Johann Hueber ಇವನು. ಜರ್ಮನ್ ದೇಶದವನಾದ ಇವನು ಸಮಾಜ ಸೇವೆಯನ್ನೂ ಸಾಹಿತ್ಯಸೇವೆಯನ್ನೂ ಈ ದೇಶದಲ್ಲಿ ಬಹುಮುಖವಾಗಿ ಕೈಗೊಂಡು ಸಾರ್ಥಕ್ಯವನ್ನು ಹೊಂದಿದ ಅಂದಿನ ಪಾಶ್ಚಾತ್ಯ ವಿದ್ವಾಂಸರಲ್ಲಿ ಒಬ್ಬನಾಗಿದ್ದನು. ಬೈಬಲ್‌ಗೆ ಸಂಬಂಧಪಟ್ಟ ರಚಿತವಾದ Johann Hueber ಇವನ "ಲೋಕ ಚರಿತೆ" ಎಂಬ ೨೨೮ ಪುಟಗಳ ಪುಸ್ತಕವು 1854 ರಲ್ಲಿ ಬಾಸೆಲ್ ಮಿಷನ್ ಮುದ್ರಣಾಲಯದವರಿಂದ ಪ್ರಕಟವಾಯಿತು. ಜರ್ಮನ್ ಭಾಷೆಯಲ್ಲಿ Geschi de Welt ಇವನು ಬರೆದ ಕ್ರೈಸ್ತ ಪುರಾಣವನ್ನು ಅನುಸರಿಸಿ ಅದಕ್ಕೆ ಇನ್ನಷ್ಟು ವಿಷಯಗಳನ್ನು ಸೇರಿಸಿ ಎರಡು ಕಾಂಡಗಳಾಗಿ ಕನ್ನಡದಲ್ಲಿ ಬರೆದ ಈ "ಲೋಕ ಚರಿತ್ರವು" ಕ್ರೈಸ್ತ ಗುಡಿಗಳಲ್ಲಿ ಮತ್ತು ಅಂದಿನ ಹಲವು ಕ್ರೈಸ್ತಶಾಲೆಗಳಲ್ಲೂ ಪಠಿಸಲ್ಪಡುತಿದ್ದ ಅಮೋಘ ಗ್ರಂಥವಾಗಿತ್ತು. ಇದರಲ್ಲಿ ಅವನು ಅನುಸರಿಸಿದ್ದ ಭಾಷಾಶೈಲಿಯು ಅಂದಿನ ಇತರ ಕ್ರೈಸ್ತ ವಿದ್ವಾಂಸರ ಶೈಲಿಯಿಂದ ಎಷ್ಟೋ ಭಿನ್ನವಾಗಿದ್ದುದು ಮಾತ್ರವಲ್ಲದೆ ಅವನ ಬರೆವಣಿಗೆಯು ನಿರರ್ಗಳವಾಗಿ ಹರಿಯುತಿದ್ದಂತೆ ಪುಟದಿಂದ ಪುಟಕ್ಕೂ ತೋರುತ್ತದೆ. ಹಿಂದೂ ಪುರಾಣ ಮತ್ತು ಇತಿಹಾಸಗಳು ಮಾತ್ರವಲ್ಲ, ಕ್ರೈಸ್ತ ಪುರಾಣವೂ ಅಷ್ಟೇ ಮಹತ್ತರವಾದುದು ಎಂಬುದನ್ನು ಇಂಥಾ "ಲೋಕಚರಿತ" ಪುಸ್ತಕಗಳನ್ನು ಬರೆದ ಅಂದಿನ ಇತರ ಕ್ರೈಸ್ತ ವಿದ್ವಾಂಸರು ಸಾರಿದ್ದಾರೆ.

## ೧೭. ರಾ॥ ಮೇಲ್ "ಪಾದ್ರಿ ದೊರೆಯವರ" ಪುಸ್ತಕಗಳು :—

Rev. M. T. Male ಇವನು ಅಂದಿನ ಕ್ರೈಸ್ತಮತ ಪ್ರಚಾರಕರಲ್ಲಿ ಒರ್ವ ತೀವ್ರಗಾಮಿ; ಇವನು Dr. Moegling ಇವನಂತೆ ಹಿಂದೂ ಮತದ ಮೇಲೆ ಸದಭಿಮಾನವನ್ನು ತಳೆಯದೇ ಇದ್ದವನೆಂದು ಒಮ್ಮೊಮ್ಮೆ ಅವನ ಬರೆವಣಿಗೆಯಿಂದ ವ್ಯಕ್ತವಾಗುತ್ತದೆ. ಇವನು ಕನ್ನಡ ಭಾಷೆಯನ್ನು ಚೆನ್ನಾಗಿ ಕಲಿತು ಅರಗಿಸಿಕೊಂಡಿದ್ದನು. ಉತ್ತಮ ಮಾತುಗಾರನು ಹೇಗೋ ಅದೇ ರೀತಿಯಲ್ಲಿ ಕನ್ನಡ ಬರೆಹದಲ್ಲೂ ಪಳಗಿದ್ದನೆಂಬುದಾಗಿ ಹೇಳಬಹುದು.

Fr. M. T. Male ಇವನು David Simpson ಇವನು ಬರೆದ "God's Choice" ಎಂಬ ಗ್ರಂಥದಿಂದ ಹಲವು ಉತ್ತಮ ಭಾಗಗಳನ್ನು ಆರಿಸಿ ಕ್ರಿ. ಶ. 1862ರಲ್ಲಿ ಕನ್ನಡಿಸಿದನು. ಬರೇ 42 ಪುಟಗಳ ಈ ಚಿಕ್ಕ ಪುಸ್ತಕವನ್ನು ಅಂದಿನ ಕ್ರೈಸ್ತಮತ ಪ್ರಚಾರ ಸಂಸ್ಥೆಯವರು ಸಹಸ್ರಾರು ಪ್ರತಿಗಳಂತೆ ಮುದ್ರಿಸಿ ಹಂಚಿದರು. ಅದರ ರಟ್ಟಿನಲ್ಲಿ "M. T. Male ಪಾದ್ರಿ ದೊರೆಯವರಿಂದ ದೇವರು ಆರಿಸಿ ತೆಗೆದದು; ಭಕ್ತರಿಗೆ ಉತ್ತಮವಾಗಿದೆ" ಎಂದು ಅದರ ಪ್ರಕಾಶಕರು ತಿಳಿಸಿದ್ದಾರೆ. ಅದರ ನಂತರ 1863 ರಲ್ಲಿ ಈ "ಪಾದ್ರಿ ದೊರೆಯು", "The Jewel Mine of Salvation" ಎಂಬುದಾಗಿ ಇನ್ನೊಂದು ಕಿರುಹೊತ್ತಗೆಯನ್ನು "ನಿಸ್ತಾರ ರತ್ನಾಕರವು" ಎಂಬುದಾಗಿ ಕನ್ನಡದಲ್ಲಿ ಹೆಸರಿಟ್ಟು ಪ್ರಕಟಿಸಿದನು.

ಅದರಿಂದ ಒಂದೆರಡು ವಾಕ್ಯಗಳನ್ನು ನಿದರ್ಶನಾರ್ಥವಾಗಿ ಎತ್ತಿ ಇಲ್ಲಿ ಕೊಡಲಾಗಿದೆ.

"೧. ಜನರೇ ಕೇಳಿರಿ, ಸಮಾನವಿಲ್ಲದ ಭಯಂಕರವಾದ ಪಾಪವೆಂಬ ಸಮುದ್ರವನ್ನು ಹ್ಯಾಗೆ ದಾಟಬಹುದೆಂದು ನೀವು ವಿಚಾರಿಸಿ ನೋಡಿರಿ.

"೨. ಪರಲೋಕವನ್ನು ಕುರಿತು ವಿಚಾರಿಸುವವರೂ ಅದನ್ನು ಹುಡುಕುವವರೂ ಅನೇಕರಿಲ್ಲ. ಯಾವಾಗೂ ಈ ಶೋಕ ಸಮ್ಮಂಧವಾದ ಕಾರ್ಯಗಳಿಗೋಸ್ಕರ ಪ್ರಯಾಸ ಪಡುವವರು ಅನೇಕರುಂಟು.

"೩. ಲೋಕದ ಬದುಕು ವ್ಯರ್ಥ ; ಮರಣ ನಿಶ್ಚಯ........"

Rev. M. T. Male ಇವನ ಇಂಥಾ ನಿರೂಪಣೆಯು ಸ್ಫೂರ್ತಿದಾಯಕವಾಗಿ ಹರಿದಿದೆ. ಕ್ರಿ.ಶ. 1865 ರಲ್ಲಿ ಅವನು Scripture Selections ಅಥವಾ "ವೇದ ಸಂಗ್ರಹ" ಎಂಬ 144 ಪುಟಗಳ ಗ್ರಂಥವನ್ನು ಬರೆದಿದ್ದು ಬೈಬಲ್ ಸೂಕ್ತಿಗಳ ಸಂಕಲನಕ್ಕೆ ಒಂದು ಉತ್ತಮ ನಿದರ್ಶನವಾಗಿತ್ತು. ಇದನ್ನು ಮೈಸೂರು ವೆಸ್ಲಿ ಮುದ್ರಣಾಲಯದವರು ಅಚ್ಚು ಹಾಕಿ ಪ್ರಕಟಿಸಿದರು, ಒಟ್ಟಾಗಿ ಈ ಕ್ರೈಸ್ತಗುರುಗಳು ಆ ಕಾಲದಲ್ಲಿ ಬರೆದ ಪುಸ್ತಕಗಳಲ್ಲೆಲ್ಲಾ ದೇವರು ಮತ್ತು ಧರ್ಮವೆಂಬಿವುಗಳ ವಿಚಾರವಾಗಿ ಈ ದೇಶದ ಜನರ ಮತ ಧರ್ಮ ಮತ್ತು ನಂಬಿಕೆಗಳಿಗೆ ಅನುಗುಣವಾಗಿ ಬಹು ಬೋಧಪ್ರದವಾಗಿ ವಿವರಿಸಿದ್ದಾರೆ. ಹಿಂದೂಮತದ ವಿವಿಧ ತತ್ವಜ್ಞಾನಗಳ ಸಮಸ್ಯೆಯನ್ನು ಅವರು ಕ್ರೋಢೀಕರಿಸಿ ಅಂದಿನ ಅವಿದ್ಯಾವಂತರಾದ ಜನಕ್ಕೆ ಅರ್ಥವಾಗುವಂತೆ ಸ್ಪಷ್ಟವಾಗಿ ಹೇಳಿದ್ದಾರೆ, ಮಾತ್ರವಲ್ಲ ತಮ್ಮ ಮತ ಧರ್ಮದ ಮೇಲೆ ಇರುವ ಹೆಗ್ಗಳಿಕೆಯನ್ನು ನ್ಯಾಯವಾಗಿ ಇನ್ನಷ್ಟು ಮೇಲೇರಿಸಿದ್ದಾರೆ.

೧೮. ಬೆಸ್ಚಿ ಕಾಸ್ಟಾನ್ಜಾ ಇವನಿಂದ ಕೆಲವು ಕ್ರೈಸ್ತ ಗ್ರಂಥಗಳು :—

Beschi Castanza ಇವನು ರೋಮನ್ ಕಾಥೊಲಿಕ್ ಪಂಗಡಕ್ಕೆ ಸೇರಿದ್ದ ಕ್ರೈಸ್ತಗುರುವಾಗಿದ್ದು ಒರ್ವ ವಿಖ್ಯಾತ ಸಮಾಜ ಸೇವಕನಾಗಿ ಗಣ್ಯನಾಗಿದ್ದನು. ಇವನು ಕನ್ನಡದಲ್ಲಿ ತನ್ನ ಧರ್ಮವನ್ನು ಮತ್ತು ಮತವನ್ನು ಕುರಿತು ಬರೆದ ಪುಸ್ತಕಗಳು ಬರೇ ಒಂದೆರಡು ಮಾತ್ರವಾಗಿದ್ದರೂ ಅವು ಬಹುಕಾಲ ಹಲವು ಕ್ರೈಸ್ತಗುಡಿಗಳಲ್ಲಿ ಪಠಿಸಲ್ಪಡುತಿದ್ದಂಥವುಗಳಾಗಿದ್ದುವು. ಇವನು ಈ ದೇಶದಲ್ಲಿ ಮೂವತ್ತು ವರ್ಷಗಳಿಗೂ ಮೇಲ್ಪಟ್ಟು ಇದ್ದು ಜನರನ್ನು ತನ್ನ ಮತಕ್ಕೆ ಪರಿವರ್ತಿಸುವ ಸಾಹಸದಲ್ಲಿ ಸಾಕಷ್ಟು ಮಟ್ಟಿಗೆ ಯಶಸ್ವಿಯಾಗಿದ್ದನು.

Beschi Castanza ಇವನು 1847 ರ ಕಾಲದಲ್ಲಿ Goerge Weigle, ಮತ್ತು H. Moegling ಇವರು ರಚಿಸಿದ "ಕ್ರೈಸ್ತ ಗೀತೆಗಳು" ಎಂಬ ಪುಸ್ತಕಕ್ಕೆ ತನ್ನ ಮುದ್ರೆಯನ್ನೂ ಒತ್ತಿದ್ದನು, ಅದರನಂತರ ಎಲ್ಲೆಲ್ಲೂ ಉಪನ್ಯಾಸಗಳು ಮತ್ತು ಭಾಷಣಗಳಲ್ಲಿಯೇ ತನ್ನ ಕಾಲವನ್ನು ಕಳೆದನು, ಕ್ರೈಸ್ತ ಮತದ ವಿಚಾರವಾಗಿ ಹಲವು ಚಿಕ್ಕ ಪ್ರಬಂಧಗಳನ್ನು ಅನಾಮಧೇಯನಾಗಿ ಬರೆಯುತ್ತಾ ಇದ್ದನು, ಕ್ರಿ. ಶ. 1864 ರಲ್ಲಿ "ಜ್ಞಾನಬೋಧಕ" ಎಂಬುದಾಗಿ ಕನ್ನಡದಲ್ಲೂ "Incarnation of Ghrist" ಎಂಬುದಾಗಿ ಇಂಗ್ಲಿಷ್‌ನಲ್ಲೂ ಒಂದೇ

[illegible]: A tale originally written in Tamil by the celebrated Father Beschi now translated into Canarese, and accompanied by an Eng. version, by Ed. by Rev. J. Bareille ( [illegible] )



ಪುಸ್ತಕದಲ್ಲಿ ಸುಮಾರು 99 ಪುಟಗಳಷ್ಟು ಬರೆದನು. ಇದರಲ್ಲಿ ರೋಮನ್ ಕ್ಯಾಥೊಲಿಕ್ ಕ್ರೈಸ್ತ ಪಂಥದ ಆಚಾರ ವಿಚಾರಗಳನ್ನು ಸಾಕಷ್ಟು ಮಟ್ಟಿಗೆ ವರ್ಣಿಸಲಾಗಿದೆ.

Benjamin L. Rice ಇವನಿಂದ ಬರೆಯಲ್ಪಟ್ಟುದೆಂದೆನ್ನಲಾದ "ಪರಮಾರ್ಥಗುರುವಿನ ಕತೆ" ಯೆಂಬ 119 ಪುಟಗಳ ಪುಸ್ತಕದಲ್ಲೂ Beschi Castanza ಇವನ ಕೈವಾಡವಿತ್ತೆಂದೂ ಅದರ ಹೆಚ್ಚಿನ ಭಾಗವನ್ನು ಇವನೇ ಬರೆದನೆಂದೂ ಹೇಳಲಾಗಿದೆ. ಕ್ರಿ. ಶ. 1877 ರಲ್ಲಿ ಪ್ರಕಟವಾದ ಈ ಪುಸ್ತಕವು Rev. J. Bereille ಇವನು ತಮಿಳು ಭಾಷೆಯಲ್ಲಿ ಬರೆದುದರ ಕನ್ನಡಾನುವಾದವಾಗಿದೆ. ಇದು ಸಹ ಒಂದು ವಿಡಂಬನೆಯ ರೀತಿಯಲ್ಲಿ ಬರೆಯಲಾಗಿದೆ, ಇದರ ಕೆಲವು ಪಂಕ್ತಿಗಳನ್ನು ಇಲ್ಲಿ ಉದಾಹರಿಸಲಾಗಿದೆ—

> "........ಇದಕ್ಕೆ ಗುರುವಾದವರು ವಿಚಾರಪಟ್ಟು ಹೇಳಿದ ಬ್ರಾಹ್ಮಣನು ಮಹಾಶಾಸ್ತ್ರಿ ಅಲ್ಲವೆಂದು ಹೇಳಕೂಡದು, ನಿನಗೆ ಅವನು ಹೇಳಿದ ಮೇರೆಗೆ ಎಲ್ಲಾ ಸರಿಯಾಗಿ ತಕ್ಷಣವೇ ಆಯಿತು. ನನಗೆ ಹೇಳಿ ಕಳುಹಿಸಿದ ಶಕುನ ತಪ್ಪಲಾರದು. "ಅನನಶೀತಂ ಜೀವನಾಶನಂ" ಎಂಬುವದು ಮಹಾಯುಕ್ತಿ ವಚನ. ಇನ್ನುಮೇಲೆ ನನಗೆಚ್ಚರಿಕೆಯೇ ಬೇಕಾಗಿರುವದು. ಶೌಚಕ್ಕೆ ಹೋದಲ್ಲಿ ಕಾಲು ಶುದ್ಧಿಮಾಡಕೂಡದು. ಇವನ ಮೇಲೆ ದೇವರ ಚಿತ್ತವೆಂದರು...."

ತಮ್ಮ ಮತಪ್ರಚಾರ ಕಾರ್ಯವನ್ನು ಹೇಗೆ ಮಾಡಬೇಕು, ಇತರ ಮತಕ್ಕೆ ಸೇರಿದ ಅವಿದ್ಯಾವಂತ ಜನವನ್ನು ಹೇಗೆ ಆಕರ್ಷಿಸಬೇಕು; ಯಾವ ಬಗೆಯ ಹಿಂಸಾಕೃತ್ಯವನ್ನು ಮನಸ್ಸಿನಲ್ಲಿ ಅಲ್ಲದಿದ್ದರೂ ವಾಕ್ಯಾಂಶಗಳಲ್ಲಿ ತೋರಿಸದೆ, ಜನರನ್ನು ತಮ್ಮ ಕಡೆಗೆ ಹೇಗೆ ಸೆಳೆಯಬೇಕೆಂಬುದನ್ನೆಲ್ಲವನ್ನೂ ನಮ್ಮ ಜನರು ಈ ವಿದೇಶೀಯರಿಂದ ಇನ್ನೂ ಕಲಿಯಬೇಕಾಗಿದೆಯೆಂಬುದಕ್ಕೆ ಇಂಥಾ ನೂರಾರು ಅಂದಿನ ಚಿಕ್ಕ ಪುಟ್ಟ ಪ್ರಮಾಣಗಳ ಬರೆವಣಿಗೆಗಳೇ ಸಾಕ್ಷ್ಯವಾಗಿವೆ.

### ೧೯. ರಾಜಕೀಯ ದಂಗೆಧಾಳಿಗಳು ಅವರ ಪರಿಶ್ರಮವನ್ನು ಕುಗ್ಗಿಸಲಿಲ್ಲ:—

ಕರ್ಣಾಟಕದಲ್ಲಿದ್ದ ಅಂದಿನ ಕ್ರೈಸ್ತ ಮತಪ್ರಚಾರ ಸಮಿತಿಯವರು ಕನ್ನಡದಲ್ಲಿ ನುರಿತ ಐರೋಪ್ಯಾ ವಿದ್ವಾಂಸರಿಂದ ಇನ್ನೂ ಹಲವು ಬಗೆಯ ಬೈಬಲ್ ಸಾಹಿತ್ಯವನ್ನು ಹೊರತರುತಿದರು. ಅವುಗಳನ್ನು ಮತಾಂತರಗೊಂಡ ದೇಶೀಯ ಕ್ರೈಸ್ತರು ಮಾತ್ರವಲ್ಲದೆ ಹಿಂದೂಗಳು ಬಹು ಸಂಖ್ಯೆಯಲ್ಲಿ ಓದುತಿದ್ದರು. ಹೀಗೆ ಅವರು ಪ್ರಕಟಸಿದ್ದ ನೂರಾರು ಪುಸ್ತಕಗಳ ಪೈಕಿ Duties of Apostles ಅಥವಾ "ಅಪೋಸ್ಥಲರ ಕ್ರಿಯೆಗಳು" ಎಂಬುದು 1853ರಲ್ಲಿ ಹೊರಬಂದ ಒಂದು ಉತ್ತಮ ಗ್ರಂಥವಾಗಿತ್ತು. ಇದರಲ್ಲಿ ಕ್ರೈಸ್ತ ಸನ್ಯಾಸತ್ವವನ್ನು ಹೊಂದುವವರು ಆಚರಿಸಬೇಕಾದ ನಿಯಮಗಳು ವರ್ಣಿತವಾಗಿವೆ. ಅದರನಂತರ 1856ರಲ್ಲಿ "ಯೂಸೇಫನ ಚರಿತ್ರೆ ಅಥವಾ History of Joseph, 1863 ರಲ್ಲಿ "ಯೆಹೋವನು ಮತ್ತು ವಿಗ್ರಹಗಳು, 1865 ರಲ್ಲಿ "ಮೂಡಣದ ಜ್ಞಾನಿಗಳು" ಅಥವಾ Wise men of the East ಹೀಗೆ

ಮೊದಲಾದ ಮೂರು ಯಾ ನಾಲ್ಕು ಪೈಗಳಿಗೆ ಮಾರಾಟವಾಗುತ್ತಿದ್ದ ಹಲವು ಕಿರು ಹೊತ್ತಗೆಗಳನ್ನೂ ಬರೆಯಿಸಿ ಪ್ರಕಟಿಸಿದರು.

1860ರಲ್ಲಿ ಕನ್ನಡ ಬೈಬಲ್ ಪರಿಷ್ಕರಣೆ ಸಮಿತಿಯವರ "ಹಳೆ ಮತ್ತು ಹೊಸ ಒಡಂಬಡಿಕೆಗಳು ಅಡಗಿರುವ ಸತ್ಯವೇದ" ಅಥವಾ Holy Bible containing the Old and New Testaments ಎಂಬ 1212 demy ಪುಟಗಳ ಬೈಬಲ್ ಗ್ರಂಥವು ಸುಂದರವಾಗಿ ಮುದ್ರಣವಾಗಿ ಪ್ರಕಟವಾಯಿತು. ಒಂದೆಡೆ ದೇಶದಲ್ಲಿ 1857ರ ಕಾಲದ ದಂಗೆ ಅಥವಾ ಸ್ವಾತಂತ್ರ ಚಳವಳವು ಭಯಂಕರವಾಗಿ ನಡೆಯುತ್ತಿದ್ದರೂ ಇನ್ನೊಂದೆಡೆಯಲ್ಲಿ ಈ ಕ್ರೈಸ್ತ ಮತಪ್ರಚಾರಕರು ತಮ್ಮ ಕೆಲಸದಲ್ಲಿ ನಿರಂತರ ನಿರತರಾಗಿದ್ದರೆಂಬುದು ಸೋಜಿಗದ ವಿಷಯುವಾಗಿದೆ. 1860ರಲ್ಲಿ ಆಗ ಆದ ದಂಗೆಯನ್ನು ಕುರಿತು ಒಂದು ಪ್ರಬಂಧವು "ಢಿಲ್ಲಿ ಪಟ್ಟಣದ ರಕ್ತಸಾಕ್ಷಿ" ಅಥವಾ "A Martyr of Delhi" ಎಂಬುದಾಗಿ ಬರೆಯಲ್ಪಟ್ಟಿತ್ತು. ಇದರ ಲೇಖಕನು ಯಾರೆಂದು ತಿಳಿಯದು. ಆದರೆ 1857ರ ಮೇ ತಿಂಗಳ 11ನೇ ದಿನ ಢಿಲ್ಲಿಯಲ್ಲಿ ದೇಶೀಯ ಚಳವಳಿಗಾರರು ಅಲ್ಲಿಯ ಕ್ರೈಸ್ತ ಮತಪ್ರಚಾರ ಕೇಂದ್ರದ ಕಟ್ಟಡದ ಒಳಹೊಕ್ಕು ಹಲವು ಬಿಳಿಜನ ಕ್ರೈಸ್ತ ಗುರುಗಳನ್ನು ಕೊಂದುಹಾಕಿದ ವಿಷಯವನ್ನು ಆ ಲೇಖನದಲ್ಲಿ ವರ್ಣಿಸಲಾಗಿದೆ. ಮೂಲದಲ್ಲಿ ಇಂಗ್ಲಿಷ್‌ನಲ್ಲಿ ಇದ್ದುದನ್ನು ಅನಂತರ ಕನ್ನಡದಲ್ಲೂ ಭಾಷಾಂತರಿಸಲಾಯಿತೆಂದು ಹೇಳಲಾಗಿದೆ.

ಕ್ರಿ. ಶ. 1864ರಲ್ಲಿ London Mission Society ಇದಕ್ಕೆ ಸೇರಿದ ಧರ್ಮಬೋಧಕರು "Job–Paul" ಅಥವಾ Saint Paul ಇವನ ಬೈಬಲ್ ಸೂಕ್ತಿಗಳನ್ನು ಭಾಷಾಂತರಿಸಿ 358 ಪುಟಗಳ ಗ್ರಂಥವನ್ನು ಪ್ರಕಟಿಸಿದರು. ಇದನ್ನು "ವೇದ ಪಾಠಗಳು" ಎಂಬುದಾಗಿ ಕರೆದರು. ಅದೇ ರೀತಿ 1852ರಲ್ಲಿ ಹಲವರು ಜತೆ ಸೇರಿ ಸಂಪಾದಿಸಿದ St. Mathew ಇವನ ಬೈಬಲ್ ಸೂಕ್ತಿಗಳನ್ನು ಗ್ರೀಕ್ ಭಾಷೆಯಿಂದ ಇಂಗ್ಲಿಷ್‌ಗೂ ಕನ್ನಡಕ್ಕೂ ಭಾಷಾಂತರಿಸಿ ಒಂದೇ ಪುಸ್ತಕದಲ್ಲಿ ಒಟ್ಟಿಗೆ ಮುದ್ರಿಸಿ ಪ್ರಕಟಿಸಿದರು. ಈ ಗ್ರಂಥದ ಪರಿಷ್ಕೃತ ಆವೃತ್ತಿಯು ಮೂರು ಬಾರಿ 1865ರ ಒಳಗಾಗಿ ಆಯಿತು. ಇದರ ಕಡೇ ಆವೃತಿಯು 600 demy ಪುಟಗಳಿಗೂ ಮೇಲ್ಪಟ್ಟು ಇದೆ. ಇದರ ಎರಡನೇ ಮುದ್ರಣದ ಒಂದು ಪ್ರತಿಯಿಂದ ಈ ಭಾಗವನ್ನು ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

"ಆಗಲಾದದ್ದೇನೆಂದರೆ ಯೇಸು ಈ ಸಾಮ್ಯಗಳನ್ನು ಮುಗಿಸಿದ ಮೇಲೆ ಅಲ್ಲಿಂದ ಹೊರಟುಹೋದನು. ತರುವಾಯ ತನ್ನ ದೇಶಕ್ಕೆ ಬಂದು,, ಅವರ ಸಭೆಮನೆಯಲ್ಲಿ ಅವರಿಗೆ ಬೋಧಿಸಿದದರಿಂದ, ಅವರು ಆಶ್ಚರ್ಯಪಟ್ಟು, ಇವನಿಗೆ ಈ ಜ್ಞಾನವೂ ಈ ಬಲವಾದ ಕ್ರಿಯೆಗಳೂ ಎಲ್ಲಿಂದ ಆದವು ? ಇವನು ಬಡಿಗೆಯವನ ಮಗನಲ್ಲವೊ ? ಇವನ ತಾಯಿ ಮರಿಯಳೆಂಬವಳಲ್ಲವೊ ? ಇವನ ಸಹೋದರರು ಯಾಕೋಬನೂ ಯೋಸೆಯೂ ಸಿಮೋನನೂ ಯೂದನೂ ಎಂಬುವರಲ್ಲವೊ ? ಅವನ ಸಹೋದರಿಗಳೆಲ್ಲರೂ ನಮ್ಮಲ್ಲಿ ಇದ್ದಾರಲ್ಲವೊ ? ಹೀಗಿರಲಾಗಿ, ಇದೆಲ್ಲಾ ಇವನಿಗೆ ಎಲ್ಲಿಂದ ಆದವು...."

ಇದರ ಇಂಗ್ಲಿಷ್ ಬರೆವಣಿಗೆಯು ಆ ಗ್ರಂಥದ ಎಡ ಪುಟದಲ್ಲೂ ಕನ್ನಡವು ಬಲ ಪುಟದಲ್ಲೂ ಇದ್ದು ಅದೊಂದು ಉತ್ತಮ ಭಾಷಾಂತರ ಕೃತಿಯೂ ಧರ್ಮಗ್ರಂಥವೂ ಆಗಿದ್ದು 1865ರ ನಂತರವೂ ಹಲವು ಬಾರಿ ಪುನರ್ಮುದ್ರಣವಾಯಿತು.

---

# ೧೪

“ಶುಭ ಸತ್ಯವೇದವ ಶೋಧಿಸಿ ನೋಡಿರಿ, ಅಣ್ಣಗಳಿರಾ; ದೊಡ್ಡ
ಸಭೆಯ ಸಮೂಹದಲ್ಲಿ ಓದಿಸಿ ಕೇಳಿರಿ, ಅಣ್ಣಗಳಿರಾ.

ದೇವರ ಚಿತ್ತವು ತಿಳಿಸುವ ವೇದವು, ಅಣ್ಣಗಳಿರಾ; ನಿತ್ಯ
ಜೀವದ ಬುಗ್ಗೆಗೆ ನುಡಿಸುವ ವೇದವು, ಅಣ್ಣಗಳಿರಾ.

ಜಾತಿಯ ಬಂಧನ ಬಿಚ್ಚುವ ವೇದವು, ಅಣ್ಣಗಳಿರಾ; ಎಲ್ಲಾ
ನೀತಿಯ ಸಾಧನೆ ಮೆಚ್ಚುವ ವೇದವು, ಅಣ್ಣಗಳಿರಾ.

ಪಾಪದ ಭಾರವ ತಿಳಿಸುವ ವೇದವು, ಅಣ್ಣಗಳಿರಾ; ದೈವ
ಕೋರಿದ ಶಿಕ್ಷೆಯಿಂದಳಿಸುವ ವೇದವು, ಅಣ್ಣಗಳಿರಾ.”

[ಶ್ರೀಮತಿ ಎಲ್'. ಎೖನ್ಸ್ಲೈ.]

ಕಳೆದ ಶತಮಾನದಲ್ಲಿ ಈ ವಿದೇಶೀಯ ಬಿಳಿ ಜನರು ಪಟ್ಟಣಗಳಲ್ಲಿ ಗ್ರಾಮಗಳಲ್ಲಿ ಸಭೆಗಳನ್ನು ಕೂಡಿಸಿ ಉಪನ್ಯಾಸಗಳನ್ನು ಕೊಡುವುದು, ಕ್ರೈಸ್ತಗುಡಿಗಳಲ್ಲಿ ಸ್ಥಳೀಯ ಭಾಷೆಗಳಲ್ಲಿ ಧರ್ಮಬೋಧನೆಯನ್ನು ಮಾಡುವುದು, ಮತ್ತು ಪುಸ್ತಕಗಳನ್ನು ಬರೆಯುವುದು ಮೊದಲಾದುವುಗಳನ್ನೆಲ್ಲಾ ಸಾಮಾನ್ಯ ವಿಚಾರಗಳಿಗಾಗಿರಲಿಲ್ಲ, ಯಾವ ವಿದ್ಯೆ ಮತ್ತು ಧರ್ಮಬೋಧನೆಯನ್ನೂ ಮಾಡಿದರೂ ಅವೆಲ್ಲವನ್ನೂ ಆಯಾ ದೇಶದ ಜನರ ಸ್ಥಳೀಯ ಭಾಷೆಗಳ ಮೂಲಕವೇ ಸಾಧಿಸಬೇಕೆಂಬ ಸೂತ್ರವನ್ನು ಅವರು ಅನುಸರಿಸಿ ಈ ರೀತಿಯಾಗಿ ಜನರಲ್ಲಿ ವಿಚಾರ ಜಾಗೃತಿಯನ್ನೆಬ್ಬಿಸಿದರು. ಎಷ್ಟೋ ಸಾವಿರ ಮೈಲುಗಳ ದೂರದಿಂದ ನಾಲ್ಕಾರು ತಿಂಗಳುಗಳ ಕಾಲ ಪ್ರಯಾಣ ಬೆಳೆಸುತ್ತಾ ಈ ದೇಶಕ್ಕೆ ಬಂದು ಸ್ಥಳೀಯ ಭಾಷೆಗಳಲ್ಲಿಯೇ ಮಾತು, ಕತೆ, ಬರೆಹ, ಉಪನ್ಯಾಸ, ಹಾಡು ಈ ಬಗೆಯಾಗಿ ಜನರೊಂದಿಗೆ ಮಿಳಿತವಾಗಿ ತೋರ್ಪಡಿಸಿಕೊಂಡುದು ಆ ಕಾಲದಲ್ಲಿ ಎಲ್ಲರನ್ನೂ ಸೋಜಿಗಪಡಿಸಿದುವು. ಅಷ್ಟೇ ಅಲ್ಲ ಹಲವಾರು ಕುಲ, ಜಾತಿಗಳಿಂದ ತುಂಬಿಹೋದ ಈ ದೇಶಕ್ಕೆ ಅಲ್ಲಿ ಇದ್ದುದೇ ಸಾಲದೆಂದು ಎಣಿಸಿ ಹೊಸತೊಂದು ಕ್ರೈಸ್ತ ಜಾತಿ ಅಥವಾ ‘ಫಾದ್ರಿ’ ಜಾತಿಯನ್ನು ಅವರು ತಂದು ಬಿತ್ತರಿಸಿದರು. ಹೀಗಾಗಿ ಕಪ್ಪು ಬಣ್ಣದ ಯಾ ಕಂದು ಬಣ್ಣದ ಒಂದು ಹೊಸ ಜಾತಿ ಹಾಗೂ ಒಂದು ಹೊಸ ದೇವರು ಈ ದೇಶದಲ್ಲಿ ಕಳೆದ ಸುಮಾರು ಮುನ್ನೂರು ವರ್ಷಗಳಿಂದಿತ್ತಲಾಗಿ ಹುಟ್ಟಿಕೊಂಡಿತು.

ಜನ ಸಾಮಾನ್ಯರಿಗೆ ಹೀಗೆ ಹೊಸತೊಂದು ರೀತಿಯಲ್ಲಿ ಪಾರಮಾರ್ಥಿಕ ವಿಷಯಗಳನ್ನು ಪ್ರತಿಪಾದಿಸುವಾಗ ಆ ವಿದೇಶೀಯರು ಇಲ್ಲಿಯ ವಾತಾವರಣಕ್ಕೆ ತಕ್ಕಂತೆ ತಕ್ಕುದಾದ ಕ್ರಮವನ್ನೇ ಅನುಸರಿಸಿದರು. ಹಿಂದೂಮತದ ಹರಿದಾಸರೂ ಕೀರ್ತನಕಾರರೂ ಹೇಗೆ ಧರ್ಮ ವಿಚಾರಗಳನ್ನು ಬೋಧಿಸುತಿದ್ದರೋ ಅದೇ ರೀತಿ

ಜನರಿಗೆ ಅರ್ಥವಾಗುವಂತೆ ಹಾಡುಗಳನ್ನು ಕಟ್ಟಿ ತಾವಾಗಿಯೇ ಹಾಡುತಿದ್ದರು, ಅಥವಾ ಇತರ ದೇಶೀಯ ಕ್ರೈಸ್ತರಿಂದ ಹಾಡಿಸುತಿದ್ದರು. ಈ ಕ್ರಮವು 1840 ರ ಕಾಲದಲ್ಲಿ ಪಾಶ್ಚಾತ್ಯರು ಈ ದೇಶದ ಭಾಷೆಗಳಲ್ಲಿ "ಕ್ರೈಸ್ತ ಗೀತೆಗಳು" ಇವುಗಳನ್ನು ಬರೆದು ಹಾಡಲು ತೊಡಗಿದಲ್ಲಿಂದ ಇಂದಿನ ವರೆಗೂ ಅದೊಂದು ಕಲೆಯಾಗಿ ಮುಂದು ವರಿದು ಬೆಳೆದು ಬಂದಿದೆ.

೨. ರೆ॥ ಬೌಟ್ಲೊ ಇವನಿಂದ "ಸತ್ಯವೇದ ಚರಿತ್ರೆ" ಇತ್ಯಾದಿ :—

ಕಳೆದ ಶತಮಾನದ ಮಧ್ಯಭಾಗದಲ್ಲಿದ್ದ Rev. A. Bouteloup ಇವನು ಕನ್ನಡದಲ್ಲಿ ಹೇಗೊ ಹಾಗೆಯೇ ಜರ್ಮನ್ ಗ್ರೀಕ್, ಲ್ಯಾಟಿನ್ ಇತ್ಯಾದಿ ಭಾಷೆಗಳಲ್ಲೂ ಪಾರಂಗತನಾಗಿದ್ದನು. ಇವನು ಸಾಹಿತಿಯೂ ವಿದ್ಯಾತಜ್ಞನೂ ಆಗಿದ್ದು ಇವನ ಬರೆವಣಿಗೆ ಕೌಶಲ್ಯವು ಬಹುಮುಖವಾಗಿ ಹರಿದಿತ್ತು. ಇವನು ಕ್ರೈಸ್ತಧರ್ಮದ ವಿಷಯವಾಗಿ ಕೆಲವು ಲೇಖನಗಳನ್ನೂ ಕಿರು ಹೊತ್ತಗೆಗಳನ್ನೂ ಕನ್ನಡದಲ್ಲಿ ಬರೆದನಲ್ಲದೆ ಕ್ರಿ. ಶ. 1863 ರಲ್ಲಿ ಅವನು ತಮಿಳು ಭಾಷೆಯಿಂದ ಕನ್ನಡಕ್ಕೆ ಭಾಷಾಂತರಿಸಿದ್ದ "ಸತ್ಯೋಪದೇಶವು-ಜ್ಞಾನೋಪದೇಶವು ; ಸತ್ಯವೇದ ಚರಿತೆ" ಯೆಂಬ ಪುಸ್ತಕವು ಜನಾದರಣೀಯವನ್ನು ಪಡೆಯಿತು. 159 ಪುಟಗಳ ಈ ಪುಸ್ತಕವು ಪ್ರಶ್ನೋತ್ತರ ಶೈಲಿಯಲ್ಲಿದ್ದು ಕ್ರೈಸಮತಕ್ಕೆ ಹೊಸದಾಗಿ ಸೇರಿದ ಈ ದೇಶದ ಜನಕ್ಕೆ ಉಪಯುಕ್ತ ವಾದುದಾಗಿತ್ತು. ಕ್ರೈಸ್ತರಲ್ಲಿ ಪ್ರಚಲಿತವಿರುವ "ಹಬ್ಬ ಸಾರಿಗ್ಯಗಳ ವಾಖ್ಯಾನವು" ಎಂಬುದಾಗಿ ಆ ಗ್ರಂಥದ ಮೇಲ್ಪುಟದಲ್ಲಿ ಹೇಳಿದ್ದಾನೆ.

Rev. Bouteloup ಇವನು History of Church" ಅಥವಾ "ತಿರುಸಭೆಯ ಸಂಕ್ಷೇಪವಾದ ಚರಿತ್ರೆಯು" ಎಂಬುದಾಗಿ ಇನ್ನೊಂದು ಕನ್ನಡ ಪುಸ್ತಕವನ್ನು ಬರೆದನು. ಇದು Joseph Reeve ಇವನು ಇಂಗ್ಲಿಷ್‌ನಲ್ಲಿ ಬರೆದ ಗ್ರಂಥದ ಭಾಷಾಂತರವಾಗಿದೆ. ಈ ಎರಡು ಗ್ರಂಥಗಳಲ್ಲೂ ಆ ವರೆಗೆ ಇತರರ್ಯಾರೂ ಕನ್ನಡದಲ್ಲಿ ಬರೆಯದೇ ಇದ್ದ ಹಲವು ಹೊಸ ವಿಚಾರಗಳನ್ನೂ ಹೇಳಿದ್ದಾನೆ. ಇವನು ಉಪಯೋಗಿಸಿದ ಭಾಷೆಯೂ ಉತ್ತಮವಾಗಿ ಮತ್ತು ಸರಳವಾಗಿ ಇದೆ. ಇವನು ಬೆಂಗಳೂರಿನಲ್ಲಿ ಬಹುಕಾಲವಿದ್ದು ಇತರ ಸಾಹಿತ್ಯ ಗ್ರಂಥಗಳನ್ನೂ ಬರೆದು ವಿಚಾರವನ್ನು ಮುಂದೆ ಕ್ರಮಶಃ ಪ್ರಸ್ತಾಪಿಸಲಾಗುವುದು.

Rev. Bouteloup ಇವನ ಸಮಕಾಲೀನನಾಗಿದ್ದ Rev. J. Kamsika ಇವನೂ ಒಂದೆರಡು ಬೈಬಲ್ ಕಿರುಹೊತ್ತಗೆಗಳನ್ನು ಬರೆದನು. ಅವುಗಳಲ್ಲಿ 1867 ರಲ್ಲಿ ಪ್ರಕಟವಾದ "ತನ್ನ ನೆರೆಯವನನ್ನು ಕೊಂದ ಮನುಷ್ಯನ ಕತೆ" ಎಂಬ ಬೈಬಲ್ ಪ್ರಸಂಗವು ಸಹಸ್ರಾರು ಪ್ರತಿಗಳಂತೆ ಮುದ್ರಣವಾಗಿ ಹಂಚಲಾಯಿತು.

### ೩. ಶ್ರೀಮತಿ ಮೇರಿ ಮಾರ್ಥಾ. ಮತ್ತು ರೆ॥ ಮ್ಯಾಥ್ಯೂವಿನ "ಪರ್ವತ ಪ್ರಸಂಗ" :—

ಕನ್ನಡನಾಡಿನಲ್ಲಿ ಕ್ರೈಸ್ತಮತ ಬೋಧಿಕೆಯರಲ್ಲಿ Mrs. Sherwood ಅಥವಾ Mrs. Mary Martha ಇವಳು ಮೊದಲನೆಯವಳೆಂದೆನ್ನಬಹುದು. ಸುಮಾರು 1858 ರಿಂದಲೇ "ಚಿಕ್ಕವನಾದ ಹೆನ್ರಿ" ಎಂಬೀ ತರಹದ ಚಿಕ್ಕ ಕಿರು ಹೊತ್ತಗೆಗಳನ್ನು ಬರೆಯಲು ಪ್ರಾರಂಭಿಸಿ ಅನಂತರ ಕನ್ನಡದಲ್ಲಿ ಕೆಲವು ಹಾಡುಗಳನ್ನು ಸಹ ಬರೆಯುವ ಪ್ರಾವಿಣ್ಯವನ್ನು ಗಳಿಸಿದಳು. 1860 ರಲ್ಲಿ ಪ್ರಕಟವಾದ "ದೊರೆಸಾನಿಯೂ ದಾದಿಯೂ" ಎಂಬುದಾಗಿ ಬರೆದ ಒಂದು ಚಿಕ್ಕ ಬೈಬಲ್ ಪ್ರಸಂಗವು ಸ್ವಾರಿಸ್ಯವಾದುದಾಗಿದೆ. ಇವಳು ಕ್ರೈಸ್ತ ಮತದ ಮೇಲೆ ಕೆಲವು ಲೇಖನಗಳನ್ನೂ ಕನ್ನಡದಲ್ಲಿ ಬರೆದಿದ್ದಾಳೆ.

Mrs. Mary Martha ಇವಳ ಉತ್ತಮವಾದ ಕೃತಿಗಳಲ್ಲಿ Rev. T. Smith ಇವನು ಇಂಗ್ಲಿಷ್‌ನಲ್ಲಿ ಬರೆದಿದ್ದ ಒಂದು ಚಿಕ್ಕ ಪುಸ್ತಕದ ಕನ್ನಡ ಭಾಷಾಂತರವಾಗಿದೆ. 102 ಪುಟಗಳ ಆ ಹೊತ್ತಗೆಯು "ಬೂಸಿಯ ಕಡೇ ದಿನಗಳು" ಎಂದು ಕರೆಯಲ್ಪಟ್ಟದ್ದು 1869 ರಲ್ಲಿ ಪ್ರಕಟವಾಯಿತು. ಇದರಲ್ಲಿ ಕ್ರಿಸ್ತನು ಎರಡನೇ ಬಾರಿ ಹುಟ್ಟಿ ಬರುವುದನ್ನು ಕುರಿತು ಪ್ರಸ್ತಾಪಿಸಲಾಗಿದೆಯಲ್ಲದೆ ಅದರ ಕಡೇ ಪುಟದಲ್ಲಿ ಹೀಗೊಂದು ಪದದೊಡನೆ ಅವಳ ಬರೆವಣಿಗೆಯು ಕೊನೆಗೊಳ್ಳುತ್ತದೆ. ಈ ಪದವನ್ನು Miss Anstey ಇವಳ ಪದಗುಚ್ಛದಿಂದ ಎತ್ತಿ ತೆಗೆದದ್ದೆಂಬುದಾಗಿ ತೋರುತ್ತದೆ.

"ಮೇಘಾರೂಢನಾಗಿ ಹೋದ ಯೇಸುಕ್ರಿಸ್ತನು, ತಿರಿಗಿ
ಮೇಘಾರೂಢನಾಗಿ ಲೋಕಕಿಳಿದು ಬರುವನು.

ದೂತ ಸೈನ್ಯ ಸಹಿತವಾಗಿ ಪ್ರಭು ಬರುವನು, ಮಹಾ
ನೀತಿ ನ್ಯಾಯದಿಂದಲವನು ತೀರ್ಪು ಕೊಡುವನು.

ಕೊಳವಿ ಶಬ್ದದಿಂದ ದೂತರಾಗಿ ಬರುವರು, ಶಬ್ದ
ಕೇಳಿ, ಸತ್ತ ಜನರೆಲ್ಲರೆದ್ದು ನಿಲ್ವರು..............................

ಯೇಸು ಪಾದ ಬಿದ್ದು ಪಾಪ ಪರೀಕ್ಷೆ ಮಾಡಿರಿ, ದೇವ
ದಾಸರಾಗಿ ನೀತಿ ಮಾರ್ಗ ನಡೆದುಕೊಳ್ಳಿರಿ!"

Rev. N. T. Mathew ಇವನು ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ಕೆಲವು ಬೈಬಲ್ ಕೃತಿಗಳನ್ನು ರಚಿಸಿದ ಮತ್ತೊರ್ವ ಮತಬೋಧಕನು. ಇವನ ಬರೆವಣಿಗೆಗಳ ಪೈಕಿ ತಿಳಿದು ಬಂದುದು ಅವನು 1875 ರಲ್ಲಿ ಪ್ರಕಟಿಸಿದ "ಪರ್ವತ ಪ್ರಸಂಗ" ಅಥವಾ Sermon on the Mount ಇದು ಪ್ರಖ್ಯಾತವಾದುದಾಗಿದೆ. 132 ಪುಟಗಳ ಈ ಪುಸ್ತಕವು ಆ ಕಾಲಕ್ಕೆ ತೀರಾ ಹೊಸತಾಗಿ ತೋರಿತು. ಇದರಿಂದ ಕೆಲವು

ಪಂಕ್ತಿಗಳನ್ನು ಉದಾಹರಿಸಲಾಗಿದೆ:—

"ಯೇಸು ಸಮೂಹಗಳನ್ನು ನೋಡಿ ಬೆಟ್ಟಕ್ಕೆ ಏರಿಹೋದನು. ಇವನು ಕೂತುಕೊಂಡಾಗ ಆವನ ಶಿಷ್ಯರು ಅವನ ಬಳಿಗೆ ಬಂದರು. ಆಗ ತನ್ನ ಬಾಯಿ ತೆರೆದು ಅವರಿಗೆ ಬೋಧಿಸಿ ಹೇಳಿದ್ದೇನೆಂದರೆ ಆತ್ಮದಲ್ಲಿ ದೀನರು ಭಾಗ್ಯವಂತರು, ಯಾಕಂದರೆ ಪರಲೋಕ ರಾಜ್ಯವು ಅವರದಾಗಿದೆ; ದುಃಖಪಡುವವರು ಭಾಗ್ಯವಂತರು ಯಾಕಂದರೆ ಅವರು ಆದರಣೆ ಹೊಂದುವರು, ಶಾಂತರು ಭಾಗ್ಯವಂತರು, ಯಾಕಂದರೆ ಅವರು ಭೂಮಿಯನ್ನು ಬಾಧ್ಯವಾಗಿ ಹೊಂದುವರು; ನೀತಿಗೋಸ್ಕರ ಹಸಿದು ದಾಹಪಡುವವರು ಭಾಗ್ಯವಂತರು, ಯಾಕಂದರೆ ತೃಪ್ತಿ ಹೊಂದುವರು; ಕರುಣೆಯುಳ್ಳವರು ಭಾಗ್ಯವಂತರು, ಏಕೆಂದರೆ ಕರುಣಿಸಲ್ಪಡುವರು........"

Rev. Mathew ಇವನು ಬರೆದ ಇನ್ನೊಂದು ಪುಸ್ತಕವು "ಜಗತ್ತಿನ ಇತಿಹಾಸ ಸಾರ" ಎಂಬುದಾಗಿದೆ. ಇದು 1875 ರಲ್ಲಿ ಪ್ರಕಟವಾಯಿತು, ಇದರಲ್ಲಿ ಹೆಚ್ಚಾಗಿ ಕ್ರೈಸ್ತಮತ, ಧರ್ಮ, ಜನಾಂಗ ಇತ್ಯಾದಿಗಳನ್ನೇ ಕುರಿತು ಐತಿಹಾಸಿಕವಾಗಿ ಮತ್ತು ಸುದೀರ್ಘವಾಗಿ ಪ್ರಸ್ತಾಪಿಸಲಾಗಿದೆ. ಇವನ ಕನ್ನಡ ಭಾಷಾಶೈಲಿಯೂ ಉತ್ತಮವಾಗಿದೆ.

**೪. ಜಾರ್ಜ್ ವೂರ್ತ್ ಮತ್ತು ಥಿಯೊವಾಸ್ ಇವರ ಬರೆಹಗಳು:—**

George W. Wurth ಇವನು ಬಹು ದೊಡ್ಡ ಕನ್ನಡ ಸಾಹಿತಿಯಾಗಿದ್ದನು; ಆದರೆ ಬೈಬಲನ್ನು ಕುರಿತು ಇವನ ಬರೆಹಗಳು ಕೇವಲ ಒಂದೆರಡು ಮಾತ್ರ ಇವೆ. ತನ್ನ ಮತವನ್ನು ಕುರಿತು ಪುಟ್ಟ ಲೇಖನಗಳನ್ನು ಬರೆಯುತ್ತಿದ್ದ ಇವನು 1860 ರಲ್ಲಿ Bible and Hinduism ಎಂಬುದಾಗಿ ಉತ್ತಮವಾಗಿ ಒಂದು ಪುಸ್ತಕವನ್ನು ಕನ್ನಡದಲ್ಲಿ ಬರೆದನು. ಇದರಲ್ಲಿ ಹಲವು ಧಾರ್ಮಿಕ ವಿಚಾರಗಳ ಮೇಲೆ ಮತ್ತು ಕ್ರೈಸ್ತಮತ ಮತ್ತು ಹಿಂದೂಮತದ ಮೇಲೆ ಪರಾಮರ್ಶೆಯನ್ನು ನಡೆಸಿದ್ದಾನೆ. Rev. Wurth ಇವನು Weigle ಮತ್ತು Moegling ಇವರೊಡನೆ ಸೇರಿ "ಶಾಲಾಗೃಹ ಪಠಣೋದ್ದೇಶ್ಯ ದೇವವಾಕ್ಯ ವ್ಯಾಖ್ಯಾನವು," ಇದನ್ನು ಬರೆದಿದ್ದಾನೆ, ಇದು ಹೆಚ್ಚಾಗಿ ಹಳೆ ಮತ್ತು ಹೊಸ ಒಡಂಬಡಿಕೆಗಳ ಮೇಲೆ ಬೆಳಕು ಹರಿಸುವ ಒಂದು ಕೃತಿಯಾಗಿದೆ, ಇದಿಷ್ಟೇ ಅಲ್ಲದೆ ಬೈಬಲ್ ಸಂಬಂಧವಾಗಿ ಇವನು ಕನ್ನಡದಲ್ಲಿ ಹೆಚ್ಚು ಬರೆದಂತೆ ತೋರುವುದಿಲ್ಲ.

Rev. Theod Micha Walz ಇವನು ಕೆಲವು ಲೇಖನಗಳನ್ನೂ ಕ್ರೈಸ್ತಗುಡಿಗಳಲ್ಲಿ ಹಾಡಲು ತಕ್ಕುದಾದ ಕೆಲವು ಪದ್ಯಗಳನ್ನೂ ಬರೆದಿದ್ದಾನೆ. ಇವನು ಬರೆದ ಕಿರುಹೊತ್ತಗೆಗಳ ಪೈಕಿ 1874 ರಲ್ಲಿ ಪ್ರಕಟವಾದ "Fatalism" ಅಥವಾ "ಅದೃಷ್ಟವಾದಿಗಳು" ಎಂಬುದು ಸಹಸ್ರಾರು ಸಂಖ್ಯೆಯಲ್ಲಿ ಮುದ್ರಣವಾಗಿ ಪ್ರಚಾರವಾದುವು. ಇವನ ಕವನಗಳ ಬರೆವಣಿಗೆಗೆ ಉದಾಹರಣೆಯಾಗಿ ಈ ಕಿರುಹೊತ್ತಗೆಯಿಂದ ಈ ಕೆಳಗಿನ ಭಾಗವನ್ನು ಎತ್ತಿ ಇಲ್ಲಿ ಕೊಡಲಾಗಿದೆ:—

" ಬೇರೊಂದು ನಾಮದಿಂದ
ಸಂರಕ್ಷೆಯಿಲ್ಲವು
ಬೇರೊಂದು ಬೀಜದಿಂದ
ಸಂಜೀವವಾಗದು.

ಈ ಬೀಜ ಮಾತ್ರದಲ್ಲೇ
ಅನಂತ ಶಕ್ತಿಯು,
ಈ ಹೆಸರು ಒಂದರಲ್ಲೆ
ಅನಂತ ಸೌಖ್ಯವು.

ಇದು ಕೇವಲ 40 ಪುಟಗಳ ಚಿಕ್ಕ ಪ್ರಬಂಧವಾದರೂ ವಿಚಾರಗರ್ಭಿತವಾಗಿದೆ. Rev. G. Wurth ಮತ್ತು T. M. Walz ಇವರಿರ್ವರೂ ಉತ್ತಮ ಕನ್ನಡ ಬರೆಹಗಾರರಾಗಿ ತೋರ್ಪಡಿಸಿಕೊಂಡಿದ್ದರೂ ಅವರಿರ್ವರು ಬೈಬಲ್ ಸಾಹಿತ್ಯದ ಮಟ್ಟಿಗೆ ಕನ್ನಡದಲ್ಲಿ ಹೆಚ್ಚು ಬರೆದಂತೆ ತೋರುವುದಿಲ್ಲವೆಂಬ ವಿಷಯವು ಶೋಚನೀಯ ವಾಗಿದೆ.

೫. ಶ್ರೀಮತಿ ಎ್ಯನ್‌ಸ್ಟೇ ಇವಳ ಕನ್ನಡ ಪದಗಳು:—

Miss Anstey ಇವಳು ಮತ್ತೊರ್ವ ಉತ್ಸಾಹೀ ಕ್ರೈಸ್ತಮತ ಬೋಧಿಕೆಯೂ ಸಾಹಿತಿಯೂ ಆಗಿ ಸುಮಾರು 1865 ರಿಂದಿತ್ತಲಾಗಿ ಹಲವು ಲೇಖನ ಗಳನ್ನೂ ಕಿರುಹೊತ್ತಗೆಗಳನ್ನೂ ಕನ್ನಡದಲ್ಲಿ ಬರೆದಳು. ಇವಳ ಮತಪ್ರಚಾರ ಕಾರ್ಯವು ಉಪನ್ಯಾಸ ಭಾಷಣಗಳಿಂದ ಮೊದಲಾಗಿ ಸಂಗೀತಕ್ಕೆ ಹಾಡು ಕ್ರೈಸ್ತಗುಡಿ ಗಳಲ್ಲಿ ಹಾಡಲ್ಪಡಬಹುದಾದಂಥ ಹಲವು ಬೋಧಪ್ರದವಾದ ಕನ್ನಡ ಪದಗಳನ್ನು ತಾನಾಗಿ ಬರೆದು, ಹಾಡಿ, ವಿವರಿಸಿ ದೇಶೀಯ ಕ್ರೈಸ್ತರನ್ನು ಮುಗ್ಧಗೊಳಿಸಿದ್ದಾಳೆ. ಇವಳು ಬರೆದ ಕೀರ್ತನೆಗಳ ಸಂಕಲನವು ಆಗ ಆರು ಪೈಗಳಿಗೆ ಹತ್ತು ಪೈಗಳಿಗೆ ಒಂದು ಪ್ರತಿಯಂತೆ ಮಾರಾಟವಾಗುತಿದ್ದುವು. 1869 ರಲ್ಲಿ ಪ್ರಕಟವಾದ ಇವಳ ಪದಗಳ ಸಂಕಲನದಿಂದ ಕೆಲವನ್ನು ಇಲ್ಲಿ ಉದಾಹರಿಸಲಾಗಿದೆ. ಭಾವದಲ್ಲೂ ಅರ್ಥದಲ್ಲೂ ರಚನಾ ಕೌಶಲ್ಯದಲ್ಲೂ Miss Anstey ಇವಳು ಜಯಪ್ರದಳಾಗಿದ್ದಾಳೆ ಎಂಬು ದನ್ನು ಅವು ತೋರಿಸುತ್ತವೆ:

(ರಾಗ ಪಂತುವರಾಳಿ—ಅಟ್ಟತಾಳ)

ಪಾಡಿರಿ ಕರ್ತನ ಪಾಡಿರಿ ಕ್ರಿಸ್ತನ
ಪಾಡಿರಿ ಪರಿಶುದ್ಧಾತ್ಮನ:
ಪಾಡಿರಿ ಮೃತ್ಯುಲೋಕಕೆ ಬಂದ ಮ—
ಹಾತ್ಮನ ನರಜನ್ಮ ರಕ್ಷಕನ!

ಕನ್ಯಸ್ತ್ರೀಯುದರದಿ ಚೆನ್ನಿಗ ಪುಟ್ಟಿದ
ಚೆನ್ನಾಗಿ ಕಂದನ ಪಾಡಿರಿ
ಮನ್ನಣೆಯಿಂದ ಮಾನಿನಿಯರು ಎಲ್ಲಾ
ಚೆನ್ನನ ನಾಮವ ಪಾಡಿರಿ.

(ರಾಗ ಭೈರವಿ—ರೂಪಕ ತಾಳ)

ಬಾರೈ ಬಾರೈ ದಿವ್ಯ ಆತ್ಮ ಪಾಪಿಯೆನ್ನ ಮನಸಿನಲ್ಲಿ
ತಾರೈ ತಾರೈ ಜೀವಕಾಂತಿಯ. ಓ ಸತ್ಯದಾತ್ಮಾ
ನಿನ್ನ ಸ್ತೋತ್ರ ನಿನ್ನ ನಾಮಕೆ!
ಸೇರೈ ಸೇರೈ ಯೆನ್ನೊಳಗೆ ಕತ್ತಲೆಲ್ಲಾ ಅಗಲಿಸಿ
ಸಾರೈ ಸಾರೈ ಜೀವವಾಕ್ಯವ ಓ ಸತ್ಯದಾತ್ಮಾ
ನಿನ್ನ ಸ್ತೋತ್ರ ನಿನ್ನ ನಾಮಕ್ಕೆ.

ಈ ಪದವು "Come, Come, holy spirit" ಎಂಬುದಾಗಿ ಇರುವ ಇಂಗ್ಲಿಷ್ ಗೀತೆಯ ಭಾವಾಂತರವೆಂದು ಹೇಳಲ್ಪಟ್ಟಿದೆ. Miss Anstey ಇವಳ ಈ ಕೆಳಗಿನ ಹಾಡು ಕ್ರೈಸ್ತಗುಡಿಗಳಲ್ಲೂ ಕ್ರೈಸ್ತ ಶಾಲೆಗಳಲ್ಲೂ ನಿತ್ಯವೂ ಹಾಡಲ್ಪಡುತ್ತಿದ್ದುವು. ಧರ್ಮಗ್ರಂಥವಾದ ಬೈಬಲನ್ನು ಕುರಿತಾದ ಆ ಹಾಡು ಹೀಗಿದೆ:—

"ಶುಭ ಸತ್ಯವೇದವ ಶೋಧಿಸಿ ನೋಡಿರಿ ಅಣ್ಣಗಳಿರಾ; ದೊಡ್ಡ
ಸಭೆಯ ಸಮೂಹದಲಿ ಓದಿಸಿ ಕೇಳಿರಿ, ಅಣ್ಣಗಳಿರಾ.
ದೇವರ ಚಿತ್ತವು ತಿಳಿಸುವ ವೇದವು ಅಣ್ಣಗಳಿರಾ; ನಿತ್ಯಾ
ಜೀವದ ಬುಗ್ಗೆಗೆ ನುಡಿಸುವ ವೇದವು, ಅಣ್ಣಗಳಿರಾ.
ಜಾತಿಯ ಬಂಧನ ಬಿಚ್ಚುವ ವೇದವು, ಅಣ್ಣಗಳಿರಾ, ಎಲ್ಲಾ
ನೀತಿಯ ಸಾಧನೆ ಸಾರುವ ವೇದವು, ಅಣ್ಣಗಳಿರಾ.
ಅಜ್ಞಾನ ಕತ್ತಲು ಹರಿಸುವ ವೇದವು, ಅಣ್ಣಗಳಿರಾ; ಅದು
ಸುಜ್ಞಾನ ಬೆಳಕನು ಕೊಡುತಿಹ ವೇದವು, ಅಣ್ಣಗಳಿರಾ.
ಪಾಪದ ಭಾರವ ಇಳಿಸುವ ವೇದವು, ಅಣ್ಣಗಳಿರಾ; ದೈವ
ಕೋಪದ ಶಿಕ್ಷೆಯಿಂದಿಳಿಸುವ ವೇದವು. ಅಣ್ಣಗಳಿರಾ.

Miss Anstey ಇವಳ "ಕೀರ್ತನೆಗಳು" ಸಂಕಲನದ ಇನ್ನೊಂದು ಪದದ ಮೊದಲ ಚರಣಗಳನ್ನು ಇಲ್ಲಿ ಉದಾಹರಿಸಲಾಗಿದೆ—

(ರಾಗ—ಪಂತುವರಾಳಿ)

ದಾಸರ ಪ್ರಾರ್ಥನೆ ತಪ್ಪದೆ ನಡೆಸುವ
ಏಸು ನಾಯಕನೆ ನಮ್ಮರಸು,
ದೋಷಕಾರಿ ಬಲು ದುರ್ಜನನಾದರೂ
ಕ್ಲೇಶವ ಹರಿಯಿಸಿ ಮಾಡು ನೀ ಲೇಸು.

೬. "ಮಿಸ್ ಯ್ಯನ್‌ಸ್ಟೆ ದೊರೆಸಾನಿಯವರ" ಬರೆಹಗಳು :—

Miss Anstey ಇವಳನ್ನು ದೇಶೀಯ ಕ್ರೈಸ್ತರು "ಯೈನ್‌ಸ್ಟೀ ದೊರೆ ಸಾನಿಯವರು" ಎಂಬುದಾಗಿ ಆದರದಿಂದ ಕರೆಯುತ್ತಿದ್ದರು. ಪದಗಳನ್ನು ಹಾಡುವುದರಲ್ಲಿ ಉಪನ್ಯಾಸಗಳನ್ನು ಕೊಡುವುದರಲ್ಲಿ ಶಾಲೆಗಳನ್ನು ನಡೆಸುವುದರಲ್ಲೆಲ್ಲಾ ಅವಳು ತನ್ನ ಚಾತುರ್ಯವನ್ನೂ ಉತ್ಸಾಹವನ್ನೂ ಪ್ರದರ್ಶಿಸಿದ್ದಳು. ಇಂಥಾ ಪಾಶ್ಚಾತ್ಯ ಹೆಂಗಸರು ಕಳೆದ ಶತಮಾನದಲ್ಲಿ ಈ ದೇಶದಲ್ಲಿ ಕೆಲವರು ಮಾತ್ರ ಇದ್ದರು. ಕನ್ನಡ ನಾಡಿನಲ್ಲಿ ಕೇವಲ ಒಬ್ಬಿಬ್ಬರಂತೆ ಮಾತ್ರ ಕಾಣಿಸಿಕೊಂಡಿದ್ದರು. ಈ ದೇಶದಲ್ಲಿ ಕ್ರೈಸ್ತರು ಸ್ಥಾಪಿಸಿದ ಸಮಾಜ ಸೇವಾ ಶಿಬಿರಗಳಲ್ಲಿ ಈ ಪಾಶ್ಚಾತ್ಯ ಮಹಿಳೆಯರು ತಮ್ಮ ಮಾತೃ ಸಮಾನವಾದ ವರ್ಚಸ್ಸನ್ನು ಬೀರಿ ಅವರ ಕಾರ್ಯಕ್ರಮಗಳನ್ನು ಜಯಪ್ರದವಾಗಿಸಿದ್ದಾರೆ ಎಂಬುದಕ್ಕೆ ಈ Miss Anstey ಇವರಂಥಾ ಕನ್ಯೆಯರೇ ಸಾಕ್ಷಿಯೆಂಬುದಾಗಿ ಹೇಳಬಹುದು.

Miss Anstey ಇವಳು ಹಲವು ಕನ್ನಡ ಲೇಖನಗಳನ್ನೂ ಕಿರು ಹೊತ್ತಗೆಗಳನ್ನೂ ಬರೆದಿದ್ದಾಳೆ. "ಯೂಸೇಫನೆಂಬ ಯುವಗೋಪಾಲಕೃಷ್ಣ" ಎಂಬುದು ಸಚಿತ್ರ ಸಹಿತವಾದ ಒಂದು ಚಿಕ್ಕ ಪುಸ್ತಕವಾಗಿದೆ. ಇದರಿಂದ ಈ ಕೆಳಗಿನ ಪಂಕ್ತಿಗಳನ್ನು ಉದಾಹರಿಸಲಾಗಿದೆ:—

"ಬಹು ಪೂರ್ವಕಾಲದಲ್ಲಿ ಯಾಕೋಬನೆಂಬ ದೇವಭಕ್ತನೊಬ್ಬನಿದ್ದನು. ಅವನೂ ಅವನ ಹಿರಿಯರೂ ಗೋವಳರಾಗಿ ದನಕುರಿಗಳನ್ನು ಮೇಯಿಸುತ್ತಿದ್ದರು. ಆ ಯಾಕೋಬನಿಗೆ ಹನ್ನೆರಡು ಮಂದಿ ಕುಮಾರರು ಹುಟ್ಟಿದರು. ಇವರಲ್ಲಿ ಒಳ್ಳೆ ರೂಪದವನೂ ಸುಂದರ ಆಕಾರದವನೂ ಆದ ಯೂಸೆಫನೆಂಬುವನು ಮುದಿ ಪ್ರಾಯದಲ್ಲಿ ಹುಟ್ಟಿದವನಾಗಿದ್ದುದರಿಂದ ಅಪ್ಪನಿಗೆ ಮುದ್ದುಮಗನಾಗಿದ್ದನು. ಹುಡುಗನು ಬೆಳೆಯುತ್ತಾ ತಂದೆಯ ಸದ್ಬೋಧನೆಗೆ ಚೆನ್ನಾಗಿ ಮನಸಿಟ್ಟು ಸಚ್ಚರ್ಯೆಯುವನೂ ದೇವಭಕ್ತನೂ ದುರ್ಮಾರ್ಗಕ್ಕೆ ಹೋಗದವನೂ ಆದನು........"

"ಇಕ್ಕಟ್ಟಿನ ಬಾಗಿಲು" ಎಂಬುದಾಗಿ ಅವಳ ಇನ್ನೊಂದು ಚಿಕ್ಕ ಪುಸ್ತಕದಿಂದ ಕೆಳಗಿನ ಭಾಗವನ್ನು ಎತ್ತಿ ಕೊಡಲಾಗಿದೆ. ಅದರಿಂದ ಅವಳ ಬರೆವಣಿಗೆಯು ಹೇಗೆ ಹರಿಯುತ್ತಿತ್ತೆಂಬುದನ್ನು ತಿಳಿಯಬಹುದಾಗಿದೆ:—

"ಒಂದು ರಾತ್ರಿಯಲ್ಲಿ ನಿದ್ರೆಮಾಡುತ್ತಿರುವಾಗ ನಾನು ಒಂದು ಕನಸು ಕಂಡೆನು. ನನ್ನ ಕನಸ್ಸಿನಲ್ಲಿ ಬಾಗಿಲುಗಳನ್ನು ನೋಡಿದೆನು. ಮತ್ತು ಅನೇಕ ಜನರು ಅವುಗಳಲ್ಲಿ ಪ್ರವೇಶಿಸಿದರು. ಆ ಬಾಗಿಲುಗಳಲ್ಲಿ ಒಂದು ಬಹಳ ಅಗಲವಾಗಿತ್ತು. ಮತ್ತೊಂದು ಬಹಳ ಇಕ್ಕಟ್ಟಾಗಿತ್ತು, ಮತ್ತು ಅಗಲವಾದ ಬಾಗಿಲಲ್ಲಿ ಪ್ರವೇಶಿಸಿದವರು ವಿಸ್ತಾರವಾದ ಮಾರ್ಗದಲ್ಲಿ ನಡೆಯುತಿದ್ದರು. ಆದರೆ ಇಕ್ಕಟ್ಟಾದ ಬಾಗಿಲಲ್ಲಿ ಪ್ರವೇಶಿಸಿದವರು ಸಣ್ಣ ಮಾರ್ಗದಲ್ಲಿ ನಡೆಯಬೇಕಾಗಿತ್ತು.... ಅಗಲವಾದ ಬಾಗಿಲಿನ ಮೇಲೆ "ನಾಶಕ್ಕೆ ಹೋಗುವ ಬಾಗಿಲು ಅಗಲವು; ಮಾರ್ಗ ವಿಸ್ತಾರವು," ಎಂದೂ ಇಕ್ಕಟ್ಟಾದ ಬಾಗಿಲಲ್ಲಿ "ಜೀವಕ್ಕೆ ಹೋಗುವ ಬಾಗಿಲು ಇಕ್ಕಟ್ಟು; ಮಾರ್ಗ ಸಣ್ಣದು." ಈ ಮಾತುಗಳನ್ನು ಬರೆದಿದ್ದು

ನೋಡುವಾಗ ಆಶ್ಚರ್ಯಪಡಲಿಲ್ಲ......."

1871 ರಲ್ಲಿ ಪ್ರಕಟವಾದ Miss Anstey ಇವಳ "ಪ್ರತಿದಿನ ವಚನ ಪುಸ್ತಕ" ಎಂಬ ಬೈಬಲ್ ಸೂಕ್ತಿಗಳ ಮತ್ತು ಪ್ರಾರ್ಥನಾ ನುಡಿಗಳ ಸಂಕಲನವು ಬಹು ಉತ್ತಮವಾದುದಾಗಿತ್ತು ;—

"ಯೆಹೋವನ ವಾಕ್ಯದಿಂದ ಆಕಾಶವೂ ಅವನ ಬಾಯಿಯ ಉಸುರಿನಿಂದ ಆದರ ಸೈನ್ಯವೆಲ್ಲವೂ ಉಂಟಾದುವು.

"ದೇವರ ಮನೆಗೆ ಹೋಗುವಾಗ ನಿನ್ನ ಪಾದಗಳನ್ನು ಕಾಪಾಡು, ಯಾಕೆಂದರೆ ದೇವರು ಆಕಾಶದಲ್ಲಿ ಇದ್ದಾನೆ, ನೀನು ಭೂಮಿಯ ಮೇಲಿದ್ದಿ ಆದ್ದರಿಂದ ನಿನ್ನ ಮಾತು ಸ್ವಲ್ಪವಾಗಿರಲಿ."

ಹೀಗೆ ಹಲವು ಉತ್ತಮ ಸಾಮ್ಯ ನಿರೂಪಣೆಗಳನ್ನು ಕೊಟ್ಟ ಈ ಪುಸ್ತಕವು ಕನ್ನಡ ಬೈಬಲ್ ಪುಸ್ತಕಗಳಲ್ಲಿ ಅತ್ಯುತ್ತಮವಾದುದಾಗಿತ್ತು ಎಂದು ಎಲ್ಲೆಲ್ಲೂ ಪ್ರಸಿದ್ಧ ವಾಯಿತು.

**೭. ಅಬಿಜಾ ಸೇಮ್ಯ್ಯುಯಲ್ ಇವನಿಂದ "ಜ್ಞಾನ ಕೀರ್ತನೆಗಳು" :—**

Rev. Abijah Samuel ಇವನು ಕನ್ನಡದಲ್ಲಿ ಬೈಬಲ್ ಲೇಖನಗಳನ್ನೂ ಹಲವಾರು ಬರೆದಿರುವನು. 1867 ರಲ್ಲಿ ಅವನು ಪ್ರಕಟಿಸಿದ "ಜ್ಞಾನ ಸಂಜೀವಿ" ಅಥವಾ External Wisdom ಎಂಬ 44 ಪುಟಗಳ ಪ್ರಬಂಧವು ಅವನು ನಿಷ್ಠಾವಂತ ಕ್ರೈಸ್ತಮತ ಬೋಧಕನಾಗಿದ್ದನೆಂಬುದನ್ನು ಸಾರುತ್ತದೆ, ಅನಂತರ ಅವನು ಬರೆದ "ಜ್ಞಾನ ಕೀರ್ತನೆಗಳು" ಎಂಬ ಪದಗಳ ಸಂಕಲನವು 117 ಪುಟಗಳು ಉತ್ತಮ ಕೃತಿಯಾಗಿದ್ದು ಅದನ್ನು ಬೆಂಗಳೂರು ವೆಸ್ಲೀ ಮುದ್ರಣಾಲಯದವರು 1871 ರಲ್ಲಿ ಮುದ್ರಿಸಿ ಹೊರತಂದರು. ಇವನ ಕೆಲವು ಪದಗಳನ್ನು ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

(ರಾಗ—ಮೋಡಿ ; ಆದಿತಾಳ)

ಹಾಡೆಲೋ ಮನವೇ, ಯೇಸು ನಾಮು ಕೊಂ
ಡಾಡೆಲೊ ಮನವೇ

ಹಾಡಿ, ಪಾಪಗಳ ಬಿಸಾಡಿ, ಸಜ್ಜನರೊಡ
ಗೂಡಿ, ವಿನಯದಿಂದ ಬೇಡಿ ಕರ್ತನ ಕೃಪೇ ॥ ಹಾಡೆ ॥

ಪಾರ ಲೋಕ ತೊರೆದು ಧಾರಿಣಿಯೊಳು ಅವ
ತಾರವೆತ್ತಿಳಿದ ಸುಕಾರುಣ್ಯವ ನೆನೆದು ॥ ಹಾಡೆ ॥

(ರಾಗ—ನಾದನಾಮಕ್ರಿಯ—ಅಟ್ಟತಾಳ)

ನನಗೆ ಜಗದಲ್ಲೇನೂ ಇಲ್ಲವು—ಯೆನ್ನ
ಮನವೇಸು ಕ್ರಿಸ್ತನೊಳೆ ನಿಲ್ಲುವುದು !

ಅನ್ಯನಾಗಿರ ಬಂದೆ, ಅನ್ಯನಾಗಿ ಪೋಗುವೆ,
ಧನ್ಯನಾದೆನೀಗ ಪುಣ್ಯಕರ್ತನ ನಂಬಿ, ॥ ನನಗೆ ॥

(ರಾಗ—ಕಲ್ಯಾಣಿ—ಅದಿತಾಳ)
ವಂದನೆ ವಂದನೆ ಮಹಧೀಶಾ, ದಿವ್ಯಾ
ನಂದ ಕರುಣೆಯ ಜಗಧೀಶಾ ॥ ಪಲ್ಲ ॥

ಸುಂದರ ಪರಧರ
ಅಂದ ಚರಾಚರ
ಅಂದದ ಜ್ಞಾನಗಳಿಂದಲೆ ನಿರ್ಮಿಸಿ
ಕುಂದಿದ ವರಗಳ ತಂದೆ ಯೇಹೋವನೆ ॥ ೧ ॥

ಗಗನ ಶೃಂಗಾರಗಳ ಕಾರಣನೇ, ನರ
ಜಗ ಪರಿಪಾಲನೇ ಪೂರಣನೇ ॥
ನಿಗಮ ವಚನಗಳ
ಮುಗಿಸಿ ನರರೊಡೆ ಬಂದು
ಬಗೆ ಬಗೆಯಾದ ವರಗಳನುವೀದೆನ್ನ
ಅಘವ ಪರಿಹರಿಸಿ ಸೊಗಯಿಸಿದರುಣನೇ ॥ ೨ ॥

(ರಾಗ—ಮುಖಾರಿ ; ಝಂಪೆತಾಳ)
ಸತ್ಯವೆಂಬುದೇನು ; ಮಿಥ್ಯವೆಂಬುದೇನು ?
ಸತ್ಯಮಿಥ್ಯಗಳೆರಡ ತಿಳಿದು ನುಡಿ ಮನವೇ ॥
ಪೃಥ್ವಿಯೊಳು ಜೀವ ಸ್ಥಾವರ ರಾಶಿಯೊಳು ನೀನು
ಕರ್ತತ್ವ ಪಡೆದು ಘನಧರಿಸಿ ಇರಲು,
ಚಿತ್ತದೊಳ್ ತಿಳಿದು ಕಡೆದೇರದೆ ಹೋದರೆ
ಮುಕ್ತಿ ಸಿಕ್ಕುವದೆಲ್ಲಿ ? ತಿಳಿದು ನುಡಿ ಮನವೇ ॥

**೮. ರೆ॥ ಸೇಮ್ಯುಯೆಲ್ ಇವನ ಹಾಡುಗಳು ದಾಸರ ಹಾಡುಗಳಂತಿದ್ದುವು :—**

Rev- Abijah Samuel ಇವನು ತನ್ನ ಪದಗಳ ಸಂಕಲನದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾನೆ :—

" ಈ ಕರ್ಣಾಟಕ ದೇಶದಲ್ಲಿ ಸಾವಿರಾರು ಕ್ರಿಸ್ತರಿದ್ದಾಗ್ಯೂ ಅವರ ಸುಖ ದುಃಖಗಳ ಕಾಲಗಳಲ್ಲಿ ದೇವರ ಮಹಿಮೆಗಾಗಿಯೂ ತಮ್ಮ ಆದರಣೆಗಾಗಿಯೂ ಹಾಡಿ ಕೀರ್ತಿಸತಕ್ಕ ಕ್ರಿಸ್ತ್ಯ ಕೀರ್ತನೆಗಳು ಇಲ್ಲವಾದದರಿಂದ ಕೀರ್ತನೆಗಳ ಆಶೆಯುಳ್ಳ ಅನೇಕರು ಹಿಂದೂ ಜನರ ದಾಸರು ಅದ್ವೈತಿಗಳು ಮುಂತಾದವರು ಮಾಡಿರುವ ಕೀರ್ತನೆಗಳನ್ನೂ ಪದಗಳನ್ನೂ ಬರೆದಿಟ್ಟುಕೊಂಡು ಹಾಡುತ

ದ್ದಾರೆ. ಆದರೆ ಅವು ಹೆಚ್ಚು ಕಡಿಮೆ ಛಂದಸ್ಸಿನ ಯತಿ, ಗಣ, ಪ್ರಾಸ, ಮಾತ್ರಾದಿಗಳ ಅಲಂಕಾರವನ್ನು ಹೊಂದಿದವುಗಳಾಗಿದ್ದರೂ ಅವುಗಳ ಬೋಧನೆ ಸಿದ್ಧಾಂತಗಳು ಸತ್ಯಕ್ಕೆ ವಿರೋಧವಾಗಿರುವುದರಿಂದ ಅವುಗಳನ್ನು ಬಳಸುವುದು ಉಚಿತವಲ್ಲ, ಈ ಕಾರಣದಿಂದಲೇ ಈ ಜ್ಞಾನ ಕೀರ್ತನೆಗಳನ್ನು ರಚಿಸುವ ಅವಶ್ಯವಾಯಿತು."

ಒಟ್ಟಾಗಿ ಹೇಳುವುದಿದ್ದರೆ ಅಂದಿನ ಪರಮ ಭಕ್ತರಾದ ಕೆಲವು ಪಾಶ್ಚಾತ್ಯ ಕ್ರೈಸ್ತ ಗುರುಗಳು ತಮ್ಮ ಬೋಧನೆ, ಸಮಾಜಸೇವೆ ಮತ್ತು ಸಾಹಿತ್ಯ ಸೇವೆಗಳಲ್ಲಿ ಬಹು ಉನ್ನತ ಮಟ್ಟದ ದಾಸವರ್ಗಕ್ಕೆ ಸೇರಿದ್ದವರೇ ಎಂದೆನ್ನಬಹುದು. Abijah Samuel ಇವನು ಅಂಥವರಲ್ಲಿ ಒಬ್ಬನೆಂದು ಹೇಳಬಹುದು. ಅವನ ಈ 63 ಪದ ಗಳ ಸಂಕಲನದಲ್ಲಿ ಹಲವು ಉತ್ತಮ ಹಾಡುಗಳಿವೆ. ಯೇಸುವನ್ನು ಕುರಿತೇ ಆಗಲಿ, ಈಶ್ವರನನ್ನೂ ಅಲ್ಲಾನನೂ ಕುರಿತೇ ಆಗಲಿ, ಅವೆಲ್ಲವೂ ಭಕ್ತಿ ಮತ್ತು ಭಾವಗಳಲ್ಲಿ ನೇರವಾಗಿ ತಾವು ಆರಾಧಿಸುವ ದೇವರನ್ನು ಉತ್ತಮ ಪದಗಟ್ಟುಗಳ ಮೂಲಕ ಪ್ರಾರ್ಥಿಸಿವೆ :—

(ರಾಗ—ನೋಡಿ ; ಆದಿತಾಳ)

ವರದ ಸುದೇವನೆ ನಮೋ ನಮೋ । ಮಹಾ
ಪರಮ ಯೆಹೋವನೇ ನಮೋ ನಮೋ ॥
ನರರ ಸುಜೀವನೆ ನಯುಗುಣ ಶೀಲನೆ
ಕರುಣ ಪ್ರಭಾವನೆ ನಮೋ ನಮೋ ॥ ಪಲ್ಲ ॥

ಸರ್ವ ಸಂಪೂರ್ಣನೆ ನಮೋ ನಮೋ । ಕೋಟಿ
ರವ್ಯಾಲಂಕಾರನೆ ನಮೋ ನಮೋ
ಪರ್ವಿದ ಲೋಲನೆ ಭಾಗ್ಯದ ಮೂಲನೆ
ದಿವ್ಯ ದಯಾಳುವೆ ನಮೋ ನಮೋ ॥ ೧ ॥

(ರಾಗ—ಜುಂಜೂಟಿ ; ಆದಿತಾಳ)

ಮನವೇ ಮನವೇ, ಎಚ್ಚರ ಓಹೋ ॥ ಪಲ್ಲ ॥

ತನುವಿನ ಬಾಳು ನೆಲೆಯಾದುದಲ್ಲ
ಅನುಭವದಿಂದರಿಯಲಿಲ್ಲವೋ ? ಭೂ
ಕನಕ ವಸ್ತು ವಾಹನಗಳು ಕೂಡ
ಕನಸಿನಂದದಿ ಇಹುದಲ್ಲವೊ ?—ನೀನು
ಗುಣಪಡಲಿದು ದಿನಪರಿ ಮನವೇ, ದಿವ್ಯ
ಘನದ ಸುಖವನೊಲಿಯನುದಿನವೇ ॥

(ರಾಗ—ಕಾಂಬೋದಿ; ಆದಿತಾಳ)

ದೇವಲೋಕ ನಿಲಯದ ನುತಿಯ ನಾನು
ಆವ ತೆರದಿ ಮಾಡುವೇ || ಪಲ್ಲ ||

ತ್ರಿವಿದ ಗುಣ ಪರಜೀವಿಗೆ ನುತಿಯನು
ಭಾವಿಸಿ ಅನುಸರಿಸೊಲಿಸಲು ಅರಿಯೆನು || ಅ.ಪ.||

ಹಿರಿದೂತ ಮಿಕಯೇಲನೂ ಅವನೊಂದಿಗೆ
ಪರಿಶುದ್ಧ ಗಬ್ರಿಯೇಲನೂ

ಮೆರೆವ ಕೆರೂಬಿಯರು ಉರಿವ ಸೆರಫಿಯರು
ಹಿರಿಯರೂ ಕಿರಿಯರೂ ಹರುಷದಿ ಪೊಗಳುತ್ತ
ಸುರನ ಸಿಂಹಾಸನವ ಸುತ್ತಲು ನುತಿಪರು.

**೯. ಕ್ರೈಸ್ತಮತ ಪ್ರಚಾರ ಸಂಸ್ಥೆಯವರು ಹೊರತಂದ "ಕೀರ್ತನೆಗಳು":–**

ಕಳೆದ ಶತಮಾನದ ಮಧ್ಯಕಾಲದಲ್ಲಿ ನಾಡಿನ ಕ್ರೈಸ್ತ ಗುಡಿಗಳಲ್ಲಿ, ಕ್ರೈಸ್ತ ಶಾಲೆಗಳಲ್ಲಿ ಮತ್ತು ದೇಶೀಯ ಕ್ರೈಸ್ತರ ಮನೆಗಳಲ್ಲಿ ಹಾಡಲ್ಪಡುತಿದ್ದ ಹಲವು ಹಾಡುಗಳನ್ನು ಅಂದಿನ ಹಲವು ಕ್ರೈಸ್ತ ಗುರುಗಳು ಸಂಗ್ರಹಿಸಿ ಕ್ರಿ. ಶ. 1867 ರಲ್ಲಿ ಮಂಗಳೂರು ಬಾಸೆಲ್ ಮಿಷನ್ ಇವರ ಮೂಲಕವಾಗಿ ಪ್ರಕಟಿಸಿದರು. 138 ಪುಟಗಳ ಆ ಕೀರ್ತನೆಗಳ ಸಂಗ್ರಹದಲ್ಲಿ ಹಲವು ಬಹು ಉತ್ಕೃಷ್ಟವಾದ ಪದಗಳಿವೆ, ಅವನ್ನು ರಚಿಸಿದವರು ಐರೋಪ್ಯಾ ಕ್ರೈಸ್ತ ಗುರುಗಳೇ ಆದರೂ ಅವರಲ್ಲಿ ಯಾರಾರು ಯಾವಾವ ಹಾಡನ್ನು ಬರೆದರೆಂಬುದು ಆ ಸಂಕಲನದಲ್ಲಿ ಸೂಚಿತವಾಗಿಲ್ಲ. "ದೇವರ ಸ್ತೋತ್ರಕ್ಕಾಗಿ ದೇವಾಲಯಗಳಲ್ಲಿಯೂ ಮನೆಗಳಲ್ಲಿಯೂ ಭಕ್ತರು ಹಾಡತಕ್ಕ ಗೀತೆಗಳು" ಎಂದು "A Collection of Christian hymns suitable for Churches" ಎಂದೂ ಅದರ ಮೇಲ್ಪುಟದಲ್ಲಿ ಹೇಳಿದೆ. ಉದಾಹರಣೆಗಾಗಿ ಅದರ ಎರಡನೇ ಪುಟದಿಂದ ಈ ಕೆಳಗಿನ ಕೆಲವು ಪಂಕ್ತಿಗಳನ್ನು ಇಲ್ಲಿ ಎತ್ತಿ ಹೇಳಲಾಗಿದೆ:–

೧

"ನನ್ನ ದೇವ ಪ್ರಿಯ ತಂದೆ
ಬಡ ಬಾಲ ನಾನು ಬಂದೆ,
ಕರ್ತ ಆದಿ ವಸ್ತುವೆ,
ನಿನ್ನ ಮುಂದೆ ವಂದಿಪೆ!

೨

ದೂತಗಣ ಘನದಿಂದ
ಸ್ತೋತ್ರ ಮಾಡೊ ಕಡೆಯಿಂದ
ನೀನು ಕೃಪಾ ನೇತ್ರದಿ
ಧೂಳಿಯೆನ್ನ ನೋಡುತಿ.

೩

ದೇವಗೃಹ ದಿವದ್ವಾರ
ಅವಿಶ್ವಾಸಿ ಕಾಣಲಾರ,
ನಿನಗೆ ದೂರವಾದೆನ್ನೈ
ಎಷ್ಟೊ ಭ್ರಾಂತಿಯಾಯಿತೈ.

೪

ಈ ಪ್ರಪಂಚದಾಶೆಯಿಂದ
ಕೆಟ್ಟು ನಿನ್ನ ಐಕ್ಯದಿಂದ
ಅಗಲಿ ಇರಲು ಆರೆನು
ನನ್ನ ಪ್ರಾಣ ರಕ್ಷಿಸು,"

ಇದೇ ಪದಗಳ ಸಂಕಲನದ 38 ನೇ ಪುಟದಿಂದ ಈ ಪಂಕ್ತಿಗಳನ್ನು ಕೊಡಲಾಗಿದೆ; ಅದರಲ್ಲಿ ಹೇಳಿರುವ ವಿಚಾರಗಳೂ ಗಮನಾರ್ಹವಾಗಿವೆ :—

೧

" ಮೂರ್ತಿ ವಿಗ್ರಹಂಗಳು
ನಮಗೆ ಏನನೀಯವು,
ಜೀವವುಳ್ಳ ದೇವರೇ
ನಿನ್ನ ಸೇವೆ ಸುಖವೇ !

೨

ದೇವಪುತ್ರ ಯೇಸುವು
ನಮ್ಮ ಒಂದೆ ಗತಿಯು
ನಿನ್ನ ಸತ್ಯ ಸೇವೆಗೆ
ತ್ರಾಣ ಪಾಲಿಸೆಮಗೇ "

**೧೦. ಪತ್ರಿಕೆಗಳ ಮೂಲಕವಾಗಿ ಮತಬೋಧನೆಯನ್ನೆಸಗಿದರು :—**

ಹಿಂದೂಸ್ಥಾನದಲ್ಲಿ ವಾರ್ತಾಪತ್ರಿಕೆಗಳು ಕ್ರಿ.ಶ. 1780 ರಿಂದಲೇ ಪ್ರಚಾರ ವಾಗತೊಡಗಿದುವು ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಸರಕಾರದ ಮೂಲಕವಾಗಿ ಪ್ರಕಟವಾಗುತ್ತಿದ್ದ Gazetteers, ಪಾಶ್ಚಾತ್ಯ ಪತ್ರಿಕೋದ್ಯಮಿಗಳು ಸ್ವಂತವಾಗಿ ಹೊರಡಿಸುತಿದ್ದ Galcutta Courier, Madras Courier, Bangalore Times ಇತ್ಯಾದಿ ಅಂದಿನ ಪ್ರಬಲ ವಾರ್ತಾಪತ್ರಿಕೆಗಳೂ, Asiatic Researches, Quarterly Review, Literary Review ಇತ್ಯಾದಿ ಸಾಹಿತ್ಯ ಪತ್ರಿಕೆಗಳೂ ಆಯಾ ಪತ್ರಿಕೆಗಳ ಉದ್ದೇಶಕ್ಕನುವಾಗಿಯೇ ನಡೆಯುತ್ತಾ ಇದ್ದಾಗ ಕ್ರೈಸ್ತಮತ ಪ್ರಚಾರಕರು ತಮ್ಮ Evengelical Society, Christian Vernacular Society, Catholic Society ಮೊದಲಾದ ಕ್ರೈಸ್ತ ಸಂಸ್ಥೆಗಳ ಮೂಲಕ ದೇಶೀಯ ಭಾಷೆಗಳಲ್ಲಿ ಪತ್ರಿಕೆಗಳನ್ನು ಹೊರಡಿಸಿ ತಮ್ಮ ಮತಪ್ರಚಾರಕ್ಕೆ ಸಂಬಂಧಿಸಿದ ಲೇಖನಗಳು, ಕವನಗಳು ಮುಂತಾದುವನ್ನು ಪ್ರಕಟಿಸುತ್ತಲೇ ಇದ್ದರು. ಈ ದೇಶದ ಎಲ್ಲಾ ಕಡೆಗಳಲ್ಲೂ ಅಂಥಾ ಕ್ರೈಸ್ತ ಪತ್ರಿಕೆಗಳು 1850 ರ ಕಾಲದೊಳಗಾಗಿ ಹಲವು ಸ್ಥಾಪಿತವಾದುವು.

Dr. Hermann Moegling ಇವನು ಕನ್ನಡ ಪತ್ರಿಕಾ ಪ್ರಪಂಚದ ನಿರ್ಮಾಣಕ್ಕೆ ಕಾರಣನಾದವರಲ್ಲೊಬ್ಬನು. ತನ್ನ ಮತಪ್ರಚಾರ ಕಾರ್ಯದಲ್ಲಿ ಅವನು ಒರ್ವ ತೀವ್ರಗಾಮಿಯಾಗಿದ್ದನೆಂಬುದನ್ನು ಹಿಂದೆಯೇ ಹೇಳಲಾಗಿದೆ. ಕ್ರಿ.ಶ. 1842ರ ಕಾಲದಲ್ಲಿ ಕರ್ಣಾಟಕದಲ್ಲಿ ಮೊದಲ ಬಾರಿಗೆ ಅವನು "ಮಂಗಳೂರು ಸಮಾಚಾರ" ಅನಂತರ 1844 ರಲ್ಲಿ ಬಳ್ಳಾರಿಯಲ್ಲಿ "ಕನ್ನಡ ಸಮಾಚಾರ" ಎಂಬುದಾಗಿ ಬರೇ ನಾಲ್ಕಾರು folio ಪುಟಗಳ ಪತ್ರಿಕೆಗಳನ್ನು ಹೊರಡಿಸಿದಾಗ ಅವನ ಧ್ಯೇಯವೇನಿತ್ತೆಂದರೆ ತನ್ನ ಮತಪ್ರಚಾರ ಕಾರ್ಯಕ್ಕೆ ಅನುಕೂಲತೆಯನ್ನು ಒದಗಿಸುವುದೇ ಆಗಿತ್ತು. ಪ್ರಾರಂಭದಲ್ಲಿ ಆ ಪತ್ರಿಕೆಗಳು ಕೈಬರೆಹದ ಮೂಲಕ ಹದಿನೈದು ದಿವಸಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆಯೆಂಬಂತೆ ಬರೆದು ಹಂಚುತ್ತಿದ್ದರು. ಅನಂತರ ಅಂದಿನ ಮೊಟುಕಾದ ಅಚ್ಚು ಮೊಳೆಗಳಲ್ಲಿ ಮುದ್ರಣವಾಗಿ ಹೊರಡುತ್ತಿದ್ದುವು. ಒಮ್ಮೊಮ್ಮೆ ಅವು ಸಚಿತ್ರವಾಗಿಯೂ ಇರುತ್ತಿದ್ದುವು.

ಇಂಥಾ ಪತ್ರಿಕೆಗಳ ಮುದ್ರಣಕ್ಕೆ ಮತ್ತು ಪ್ರಕಟಣೆಗೆ ದೇಶದ ಎಲ್ಲಾ ಕ್ರೈಸ್ತ ಮತ ಪ್ರಚಾರ ಸಂಸ್ಥೆಗಳೂ ಹಣಸಹಾಯವನ್ನೊದಗಿಸಿದರಲ್ಲದೆ ಕ್ರೈಸ್ತ ಮುದ್ರಣಾಲಯಗಳು ಹಲವು ಸಂದರ್ಭಗಳಲ್ಲಿ ಉಚಿತವಾಗಿಯೇ ಅವನ್ನು ಅಚ್ಚುಹಾಕಿಸಿ ಹೊರತರುತ್ತಿದ್ದರು. ಅಂದಿನ ಧರ್ಮಗುರುಗಳ ಪೈಕಿ ಪ್ರಬಲ ಸಾಹಿತಿಗಳಾದವರು ಅಂಥಾ ನೂರಾರು ಪತ್ರಿಕೆಗಳಿಗೆ ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ಲೇಖನಗಳನ್ನು ಬರೆಯುತ್ತಿದ್ದರು. ಆದರೆ ಅವರ ಬರೆವಣಿಗೆಗಳೆಲ್ಲವೂ ತಮ್ಮ ಮತದ ಮೇಲ್ಮೆಯನ್ನೂ ಪ್ರಭಾವವನ್ನೂ ಮೇಲೆತ್ತಿ ಜನಕ್ಕೆ ತಿಳಿಸುವುದರಲ್ಲೇ ಕೇಂದ್ರೀಕೃತವಾಗಿತ್ತೆಂಬುದನ್ನೂ ನೆನಪಿಡಬೇಕಾಗಿದೆ.

೧೧. "ಕನ್ನಡ ಸಮಾಚಾರ" ಪತ್ರಿಕೆಯೂ ಆಕರ್ಷಕವಾಗಿತ್ತು :—

ಬಳ್ಳಾರಿಯಿಂದ ಹೊರಡುತ್ತಿದ್ದ folio ಪುಟಗಳಾಕಾರದ ಬರೆ 16 ಅಥವಾ ೨೪ ಪುಟಗಳ "ಕನ್ನಡ ಸಮಾಚಾರ" ಪತ್ರಿಕೆಯು 1844 ರಿಂದ ಪ್ರಾರಂಭವಾಗಲು "ಮಂಗಳೂರು ಸಮಾಚಾರ," ಪತ್ರಿಕೆಯು ತಾತ್ಕಾಲಿಕವಾಗಿ ನಿಂತುಹೋಗಿದ್ದು ಅದು ಹಲವು ವರ್ಷಗಳನಂತರ ಪುನಃ ಪ್ರಚಾರವಾಗಲಾರಂಭವಾಯಿತು. 1844 ರ ಜೂನ್ ತಿಂಗಳ "ಕನ್ನಡ ಸಮಾಚಾರ" ಪತ್ರಿಕೆಯಲ್ಲಿ ತಮ್ಮ ಮತಧರ್ಮದ ಮೇಲ್ಮೆಯನ್ನು ಹೇಳುವ ಸಂದರ್ಭದಲ್ಲಿ ಹೀಗೊಂದು ವಿಷಯವನ್ನೂ ಬರೆದದ್ದು ಇಲ್ಲಿ ನಿದರ್ಶನಾರ್ಥವಾಗಿ ಕೊಡಲಾಗಿದೆ :—

> "ಹಿಂದೂದೇಶದ ಸ್ವಭಾವವನ್ನು ಕುರಿತು ಪಶ್ಚಿಮ ದೇಶಸ್ತರಿಗೆ ಪೂರ್ವದಲ್ಲಿ ನಿಶ್ಚಯ ವರ್ತಮಾನ ಇರಲಿಲ್ಲ. ಆದರೆ ವ್ಯಾಪಾರ ಯುದ್ಧಗಳಿಂದ ಈ ದೇಶವನ್ನು ಕುರಿತಂಥಾ ಅನೇಕ ಮಾತುಗಳು ಬಹು ಪೂರ್ವಕಾಲದಲ್ಲಿ ಪಶ್ಚಿಮ ದೇಶಗಳಿಗೆ ಬಂದುವು....ಬ್ರಾಹ್ಮಣರು ಸಹ ಕೆಲ ಮಂದಿ ಪೂರ್ವಕಾಲದಲ್ಲಿ ಪಶ್ಚಿಮ ದೇಶಗಳಿಗೆ ಪ್ರಯಾಣವಾಗಿ ಹೋಗಿದ್ದಾರೆ. ಕಲ್ಯಾಣನೆಂಬೊಬ್ಬನು ೨೧೦೦ ವರ್ಷಗಳ ಮುಂಚೆ ಅಲೆಗ್ಸಾಂಡರನ ಸಂಗಡ ಪಶ್ಚಿಮಕ್ಕೆ ಹೋಗಿ ವನಗಾರ್ನ್ ಪಟ್ಟಣದಲ್ಲಿ ರೋಗಕ್ಕೊಳಗಾಗಿ ಸತ್ತನು. ಮತ್ತೊಬ್ಬನು 1800 ವರ್ಷಕ್ಕೆ ಹಿಂದೆ ಅಥೆನ್ಸ್ ಪಟ್ಟಣ ಪರಿಯಂತ ಬಂದು ಅನಂತರ ಬೆಂಕಿಯಿಂದ ಸತ್ತುಹೋದನು ಇವು ಮೊದಲಾದ ಪ್ರಯಾಣಸ್ಥರಾದ ಬ್ರಾಹ್ಮಣರ ಉದಾಹರಣೆಗಳು ಉಂಟು. ಆದರೆ ವ್ಯಾಪಾರೋತ್ಪ ಪ್ರಯಾಣವಾಗಿ ಹೋದ ಜನರು ಪೂರ್ವಕಾಲದಲ್ಲಿ ಬಹಳ ಮಂದಿ ಇದ್ದರು........"

ಇಲ್ಲಿ ಕಾಣುವ ಕನ್ನಡ ಬರೆವಣಿಗೆ ಶೈಲಿಯು ಸುಮಾರು 130 ವರ್ಷಗಳಿಗೆ ಹಿಂದಿನ ಒರ್ವ ಪಾಶ್ಚಾತ್ಯ ವಿದ್ವಾಂಸನದೆಂದು ಗಮನಿಸಬೇಕಿದೆ. ಹೇಳಿದ ವಿಚಾರವಾದರೋ ಪ್ರೌಢವಾಗಿದೆ, ತಾವು ಮಾತ್ರ ಅಷ್ಟು ದೂರದಿಂದ ಈ ದೇಶಕ್ಕೆ ಬಂದುದಲ್ಲ, ಇಲ್ಲಿಂದಲೂ ಜನರು ಆ ಕಡೆಗೆ ಪೂರ್ವಕಾಲವಲ್ಲಿ ಹೋಗಿದ್ದಾರೆ; ವೇದಾಭ್ಯಾಸಿಗಳಾದ ಬ್ರಾಹ್ಮಣರೇ ಹೋಗಿದ್ದಾರೆ ಎಂಬುದನ್ನು ಆ ಲೇಖಕನು ಆಧಾರಸಹಿತವಾಗಿ ಹೇಳುತ್ತಾನೆ. ಅಲ್ಲದೆ ಅದೇ ರೀತಿ ತಾವೂ ಕ್ರೈಸ್ತಧರ್ಮದ ಧ್ವಜವನ್ನೆತ್ತಿಕೊಂಡು ಇಲ್ಲಿಗೆ ಬಂದಿರುವುದು ನ್ಯಾಯವಾಗಿದೆಯೆಂಬುದರ ಗೂಢವನ್ನು ಅವನು ಸಾಧಿಸುತ್ತಾನೆ. ಈ ಲೇಖನವು Dr. Hermann Moegling ಇವನದೆಂದೇ ಹೇಳಬಹುದು.

"ಕನ್ನಡ ಸಮಾಚಾರ" ಪತ್ರಿಕೆಯಲ್ಲಿ ಲೌಕಿಕ ವ್ಯವಹಾರಗಳನ್ನು ಕುರಿತಾದ ಹಲವು ಲೇಖನಗಳೂ ಇರುತಿದ್ದುವು. ಹಲವು ಚಿತ್ರಗಳೂ ಒಮ್ಮೊಮ್ಮೆ ಬಣ್ಣ ಚಿತ್ರಗಳೂ ಅವುಗಳಲ್ಲಿ ಆಗಿಂದಾಗ್ಗೆ ತೋರ್ಪಡಿಸಿಕೊಂಡು ಅದೊಂದು ಆಕರ್ಷಕವಾದ ಪತ್ರಿಕೆಯಾಗಿತ್ತು. ಆದರೆ ಅಂದಿನ ಇತರ ಒಂದೆರಡು ಪತ್ರಿಕೆಗಳಂತೆ ಅದೂ ಬಹು ಕಾಲವೇನೂ ನಡೆಯಲಿಲ್ಲ.

## ೧೨. "ಅರುಣೋದಯ" ಎಂಬ ಮತಪ್ರಚಾರ ಪತ್ರಿಕೆಯು ಹೊರಟಿತು :

"The magazine is used by the Christian Vernacular Society for India, whose special object is to enlighten and regenerate the masses of this country through the medium of education, and the press; and the present publication is intended to aid in this good work."

ಎಂಬುದಾಗಿ "ಅರುಣೋದಯ" ಪತ್ರಿಕೆಯ ಸಂಪಾದಕನಾಗಿದ್ದ Benjamin Rice ಇವನು ತನ್ನ 1862ರ ಸಂಚಿಕೆಯಲ್ಲಿ ಹೇಳಿದ್ದನು. ಆ ಕಾಲಕ್ಕೆ "ಕರ್ನಾಟಕ ವಾಗ್ವಿಧಾಯಿನೀ" ಪತ್ರಿಕೆಯು ಪ್ರಬಲವಾದ ಒಂದು ಸಾಹಿತ್ಯ ಪತ್ರಿಕೆಯಾಗಿತ್ತು. ಇದೀಗ "ಅರುಣೋದಯ" ಪತ್ರಿಕೆಯು 32 demy ಪುಟಗಳ ಉತ್ತಮ ಪತ್ರಿಕೆಯಾಗಿ ಹಲವು ವ್ಯಾವಹಾರಿಕ ವಿಚಾರಗಳ ಮೇಲೆ ಲೇಖನಗಳಿದ್ದು ಅದರ ಸಂಪಾದಕನು ಹೇಳಿದಂತೆ "to enlighten and regenerate the masses" ಎಂಬ ಧ್ಯೇಯಕ್ಕೆ ತಕ್ಕುದಾಗಿಯೇ ಇತ್ತು. ಹಾಗಿದ್ದರೂ ಕ್ರೈಸ್ತ ಸಂಸ್ಥೆಗಳ ಆಶ್ರಯದಿಂದ ಹೊರಟ ಈ ಪತ್ರಿಕೆಯಲ್ಲಿ ತಮ್ಮ ಮತವನ್ನು ಕುರಿತಾದ ಹಲವು ಲೇಖನಗಳೂ ಇರುತಿದ್ದುವು. ಅಂಥಾ ಲೇಖನಗಳು ಇಂಗ್ಲೀಷ್‌ನಲ್ಲೂ ಇರುತಿದ್ದುದರ ಜತೆಗೆ ಅವುಗಳ ಕನ್ನಡ ಭಾಷಾಂತರವೂ ಅದರಲ್ಲಿಯೇ ಕೊಡಲ್ಪಟ್ಟಿತ್ತು. "The effects of Hinduism" ಅಥವಾ "ಹಿಂದೂಮತವು ಜನರ ಬುದ್ಧಿಯನ್ನು ಕತ್ತಲಾಗಿ ಮಾಡಿದೆ" ಎಂಬುದಾಗಿ ಇದು ಲೇಖನವು ಸ್ವಾರಸ್ಯವಾಗಿದೆ. ಆ ಬರೆವಣಿಗೆಯು ಬಹು ಕಟುವಾದ ಟೀಕೆಯೆಂದು ತೋರಿದ್ದರೂ ಅದರ ಸತ್ಯಾಸತ್ಯತೆಯು ಇಂದಿಗೂ ವಿವೇಚಿಸಲ್ಪಡಬೇಕಾದ ವಿಷಯವಾಗಿದೆ :—

"........It (Hinduism) has darkened the understanding; Errors of the most monstrous kind are taught in the Hindu Sastras........Hindus constantly reason on utterly false principles. Their minds are so filled with the jungle of falsehood, that the seed of truth is choked and destroyed ......Deceit and sensuality are awfully prevalent in India. Truth has fallen in the streets........".

ಒಂದು ನೂರು ವರ್ಷಗಳಿಗೆ ಹಿಂದೆ ಇಲ್ಲಿ ಬಲವತ್ತರವಾದ ಸಾಮ್ರಾಜ್ಯಶಾಹೀ ಸರಕಾರವಿದ್ದಾಗ ನಮ್ಮ ದೇಶದ ಜನರು "........jungle of falsehood.... deceit and sensuality........Truth has fallen in the streets........" ಎಂಬಂತೆ ಇದ್ದಿರುವಾಗ ಹಾಗಿದ್ದ ನಮ್ಮ ಜನಕ್ಕೆ ಈಗ ಮಹಾ ಸ್ವಾತಂತ್ರ್ಯವೇ ದೊರಕಿರುವಾಗ ಅವರು ತಮ್ಮ ಗುಣದಲ್ಲಿ, ನಡತೆಯಲ್ಲಿ, ಸತ್ಯದಲ್ಲಿ, ದಯೆಯಲ್ಲಿ, ಪ್ರೀತಿಯಲ್ಲಿ ಮತ್ತು ವ್ಯವಹಾರದಲ್ಲಿ ಈಗ ಇನ್ನೆಷ್ಟು ಮೇಲೇರಿದ್ದಾರೆಂಬುದನ್ನು ವರ್ಣಿಸಲು ಮೇಲಿನ ಆ ಲೇಖಕನೇ ಪುನಃ ಜನ್ಮವೆತ್ತಿ ಈ ದೇಶವನ್ನು ಬಂದು ನೋಡಬೇಕೆಂದು ಎನಿಸುತ್ತದೆ. ಏಕೆಂದರೆ ಇಂದಿನ ಭಾರತದ ಜನರ

ಮಾನಸಿಕ ಪರಿಸ್ಥಿತಿಯೆಂತಿದೆಯೆಂಬುದನ್ನು ಅಂಥಾ ಮಿಷ್ಯನರಿಗಳೇ ಬಂದು ಅವರಿಗೆ ಹೇಳಿಕೊಡಬೇಕಾಗಿದೆ.

"ಅರುಣೋದಯ" ಮತ್ತು ಇತರ ಅಂಥಾ ಮತಪ್ರಚಾರ ಪತ್ರಿಕೆಗಳೆಲ್ಲಾ ಅಂದಿನ ಕ್ರೈಸ್ತಮತ ಪ್ರಚಾರ ಸಂಸ್ಥೆಗಳ ಧನಸಹಾಯದಿಂದಲೇ ಪ್ರಚಾರವಾಗುತಿದ್ದುವು. ಯೂರೋಪಿನ ಹಲವು ದೇಶಗಳಲ್ಲಿದ್ದ ಮತಪ್ರಚಾರ ಸಂಸ್ಥೆಗಳ ಕೇಂದ್ರದಿಂದಲೂ ಅವರಿಗೆ ಹಣವು ಸಾಕಷ್ಟು ದೊರಕುತ್ತಲೇ ಇದ್ದಿತು. ಹೀಗೆ ಅವರಿಗೆ ದೊರೆತ ಹಣದಲ್ಲಿ ಈ ನಾಡಿನ ಮತಪ್ರಚಾರ ಮಂಡಳಿಯು ಹೇಗೆ ಮತ್ತು ಎಷ್ಟು ವಿನಿಯೋಗಿಸಿದೆಯೆಂಬುದರ ಲೆಕ್ಕವನ್ನು 1861ರ ಜುಲೈ ತಿಂಗಳ "ಅರುಣೋದಯ" ದಲ್ಲಿ ಪ್ರಕಟಿಸಲಾಗಿತ್ತು :—

| | | | |
|---|---|---|---|
| "ವೇದಸಂಘಕ್ಕೆ (Bible Society) ಖರ್ಚಾದುದು | | ರೂ. | 9,16,820 |
| ಪತ್ರಿಕೆ ಸಂಘಕ್ಕೆ | ,, | ,, | 1,27,700 |
| ಕ್ರಿಸ್ತ ವಿದ್ಯಾಭಿವೃದ್ಧಿಗೆ | ,, | ,, | 40,660 |
| ಸ್ವದೇಶದಲ್ಲಿ (ಯೂರೋಪಿನಲ್ಲಿ) ಸುವಾರ್ತೆ ಪ್ರಸಿದ್ಧಿ ಮಾಡುವ ಸಂಘಗಳಿಗೆ | ,, | ,, | 17,67,200 |
| ಧರ್ಮದ ಮಠಗಳಿಗೆ (Churches) | ,, | ,, | 7,11,710 |

ಹೀಗೆ ಕೊಟ್ಟ ಅಂದಿನ ಆ ಲಕ್ಷಗಟ್ಲೆಯಾಗಿರುವ ಅಂಕೆಗಳನ್ನು ಇಂದಿನ ರೂಪಾಯಿಯ ಬೆಲೆಯಲ್ಲಿ ಮಿಲ್ಯಾಂತರವೆಂಬುದಾಗಿ ಊಹಿಸಿಕೊಳ್ಳಬೇಕಾಗಿದೆ. ಹೇಗೂ ಇದರಲ್ಲೆಲ್ಲಾ ಈ ಜನಾಂಗವು ತಮ್ಮ ಕರ್ತವ್ಯನಿಷ್ಠೆ, ಪ್ರಾಮಾಣಿಕತೆ, ಧರ್ಮಬೋಧೆಯಲ್ಲಿಟ್ಟ ಶ್ರದ್ಧೆ ಇತ್ಯಾದಿ ಗುಣಗಳನ್ನು ಧಾರಾಳವಾಗಿ ಪ್ರದರ್ಶಿಸಿದ್ದಾರೆ.

೧೩. "ಅರುಣೋದಯ" ದಲ್ಲಿ ಪ್ರಕಟವಾದ ಕೆಲವು ಕ್ರೈಸ್ತ ಗೀತೆಗಳು :-

"ಅರುಣೋದಯ" ಪತ್ರಿಕೆಯಲ್ಲಿ ಮತ ವಿಚಾರ ಸಂಬಂಧವಾದ ಲೇಖನಗಳ ಜತೆಗೆ ಉತ್ತಮ ಸಾಹಿತ್ಯ ಲೇಖನಗಳೂ ಹಲವು ಇರುತಿದ್ದುವು. ಅಂದಿನ ಉದ್ಧಾಮ ಪಾಶ್ಚಾತ್ಯ ಪಂಡಿತರೇ ಅದರಲ್ಲಿ ಮತ್ತು "ವಾಗ್ವಿಧಾಯಿನಿ"ಯಂಥಾ ಸಾಹಿತ್ಯ ಪತ್ರಿಕೆಗಳಲ್ಲಿ ಆಗಿಂದಾಗ್ಯೆ ಲೇಖನಗಳನ್ನು ಬರೆಯುತಿದ್ದರು. ಹೇಗೂ ಅದರಿಂದ ಒಂದೆರಡು ಹಾಡುಗಳನ್ನು ಹೆಕ್ಕಿ ದಿಗ್ದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ:—

(ರಾಗ—ಪಂತುವರಾಳಿ ; ಆದಿತಾಳ)

ಅನಂತ ಭಾಗ್ಯ ಹೊಂದಬಹುದಣ್ಣಾ ; ಕ್ರಿಸ್ತ ಯೇಸುವಿನಿಂದ
ಅನಂತ ಭಾಗ್ಯ ಹೊಂದಬಹುದಣ್ಣಾ—
ದಾನದಿಂದ ಧರ್ಮದಿಂದ ಸ್ನಾನದಿಂದ ಪಾನದಿಂದ
ಜ್ಞಾನದಿಂದ ಸಿಕ್ಕದಂಥ ಭಾಗ್ಯ ಯೇಸು ಕೊಡುವನಣ್ಣಾ ॥ ೧ ॥

ಮೂರ್ತಿ ಪೂಜೆಯಿಂದ ತೊಲಗಿ, ಯಥಾರ್ಥವಾಗಿ
ಕರ್ತ ಯೇಸು ಮುಂದೆ ಎರಗಿ ಸಾಷ್ಟಾಂಗವಾಗಿ
ಪೂರ್ತಿಯಾದ ಚಿತ್ತದಿಂದ ಸಾರ್ಥಕವೇನು ಇಲ್ಲದಂಥ
ಪಿತ್ರಾಚಾರವೆಲ್ಲಾ ಬಿಟ್ಟು ನಡೆವನೊ ಆ ಮಾನವ ॥ ೨ ॥

ಮೂರ್ತಿಪೂಜೆಯನ್ನು ಟೀಕಿಸಿ ಬರೆದ ಹಾಡುಗಳೂ ಪ್ರಸಂಗಗಳೂ ಕನ್ನಡ ಬೈಬಲ್ ಸಾಹಿತ್ಯದಲ್ಲಿ ತುಂಬಾ ಇವೆಯೆಂದು ಯೋಚಿಸಿಕೊಳ್ಳಬೇಕಾಗಿದೆ. "None but Jesus" ಎಂಬುದಾಗಿ ಇರುವ ಇಂಗ್ಲಿಷ್ ಪದವೊಂದರ ಭಾವಾಂತರವು ಹೀಗಿದೆ:—

(ರಾಗ—ಸಾರಾಷ್ಟಕ ; ಆದಿತಾಳ)

ಇಲ್ಲವಿಲ್ಲವಣ್ಣಾ, ನಿಮ್ಮಲ್ಲಿ ಮೋಕ್ಷ ॥ ಪಲ್ಲ ॥

ಕಲ್ಲನಿಟ್ಟಾರಾಧಿಸಿದಾಗ್ಯೂ
ಇಲ್ಲದ ಪೂಜೆಯ ಸಲ್ಲಿಸಿದಾಗೂ ॥ ಇಲ್ಲ ॥

ಕಾಂಚಿ ತಿರುಪತಿ ಕಾಶಿಯಾತ್ರೆ
ಮಿಂಚಿ ಶ್ರಮೆಗಳೊಂದಿದಾಗೂ ॥ ಇಲ್ಲ ॥

ಭುಜವನು ಸುಟ್ಟು ತಲೆಯನು ಬೋಳಿಸಿ
ಭಜಗೋವಿಂದನ ಹಾಡಿದಾಗೂ ॥ ಇಲ್ಲ ॥

ಅಂಗದ ಮೇಲೆ ಲಿಂಗವ ಕಟ್ಟಿ
ಗಂಗಾಧರನನು ಸೇವಿಸಿದಾಗೂ ॥ ಇಲ್ಲ ॥

ಸುಳ್ಳು ಕಥೆಗಳ ಕಲ್ಪಿಸಿಕೊಂಡು
ಕಳ್ಳ ಬೋಧನೆ ಬೋಧಿಸಿದಾಗೂ ॥ ಇಲ್ಲ ॥

ಮೋಸದ ಮಾರ್ಗ ಎಲ್ಲಾ ಬಿಟ್ಟು
ಯೇಸುನ ಮಾರ್ಗ ಕಂಡರೆ ಹೊರತು ॥ ಇಲ್ಲ ॥

ಮೇಲೆ ಹೇಳಿದಂತೆ ಹಿಂದೂ ಧರ್ಮದಲ್ಲಿ ಇರುವ ಹಲವು ಮೂಢನಂಬಿಕೆಗಳೂ ಆಚಾರಗಳೂ ಕ್ರೈಸ್ತರಿಗೆ ತೀರ ತಲೆಭಾರವಾಗಿ ಕಂಡುಬಂದುವು ಎಂದು ಅವರು ಸಾರಿ ಸಾರಿ ಹೇಳಿದ್ದಾರೆ. ಅವರು ಹೇಳಿದ್ದರಲ್ಲಿ ಸತ್ಯವಿಲ್ಲದೇ ಇಲ್ಲ. "Errors of the most monstrous kind are taught in the Hindu Shastras.... Hindus constantly reason on utterly false principles" ಎಂದು ಅವರು ಹೇಳಿದ್ದರಲ್ಲಿ ಯಥಾರ್ಥ್ಯವಿದೆಯೆಂಬುದನ್ನು ಒಪ್ಪಬೇಕಾಗುತ್ತದೆ.

ಹೇಗೂ ಅವರ ಹಾಡುಗಳೂ ಲೇಖನಗಳೂ ಅಂಥಾ ಮೂಢನಂಬಿಕೆಗಳನ್ನು ಕಿತ್ತೊಗೆಯುವ ಭಾವನೆಗಳಿಂದ ಕೂಡಿದ್ದುವು.

**೧೪. ಮತಪ್ರಚಾರಾರ್ಥವಾಗಿಯೇ ಪ್ರಕಟವಾಗುತಿದ್ದ "ಸಭಾಪತ್ರ":—**

ಕ್ರಿ.ಶ. 1863 ರಲ್ಲಿ Rev. John Mack ಇವನು "ಸಚಿತ್ರ ಕನ್ನಡ ಸಮಾಚಾರ" ಎಂಬ ಸಾಹಿತ್ಯ ಪತ್ರಿಕೆಯನ್ನು ಸ್ಥಾಪಿಸಿದನು. ಅದು ಸಾಹಿತ್ಯ ಪತ್ರಿಕೆಯೇ ಆಗಿದ್ದರೂ ಅದರಲ್ಲಿ ಕ್ರೈಸ್ತಮತದ ವಿಷಯವಾಗಿ ಮತ್ತು ಬೈಬಲ್ ಸಾಹಿತ್ಯಕ್ಕೆ ಸಂಬಂಧವಾಗಿ ಹಲವು ಲೇಖನಗಳು ಇರುತ್ತಿದ್ದುವು. ಇದು ಸಚಿತ್ರವಾಗಿಯೂ ಆಕರ್ಷಕವಾಗಿಯೂ ಮುದ್ರಣವಾಗುತ್ತಿದ್ದು ಒಂದೆರಡು ವರ್ಷಗಳಕಾಲ ಪ್ರಚಾರವಿತ್ತು.

ಆದರೆ ಶುದ್ಧ ಬೈಬಲ್ ಸಾಹಿತ್ಯವನ್ನೊಳಗೊಂಡು ಅದಕ್ಕಾಗಿಯೇ ಮೀಸಲಾಗಿದ್ದ ಒಂದು ಪತ್ರಿಕೆಯು "ಸಭಾಪತ್ರ" ಎಂಬುದಾಗಿತ್ತು. ಕ್ರಿ.ಶ. 1868 ರಿಂದ 1871 ರವರೆಗೆ ಉಡುಪಿಯಿಂದ ಹೊರಡುತ್ತಿದ್ದ ಈ "ಸಭಾಪತ್ರವು" 16 octavo ಪುಟಗಳಲ್ಲಿ ಮುದ್ರಣವಾಗಿ ಪಶ್ಚಿಮ ಕರಾವಳೀ ಸೀಮೆಗಳಲ್ಲೆಲ್ಲಾ ವಿಶೇಷವಾಗಿ ಪ್ರಚಾರವಾಗಿತ್ತು. Rev. Jacob J. Brigel ಇವನು ಇದರ ಸಂಪಾದಕನಾಗಿದ್ದನಲ್ಲದೆ Dr. H. Moegling ಇವನೂ ಅದರ ಸಂಪಾದಕ ಮಂಡಳಿಯಲ್ಲಿ ಇದ್ದನು. ಬೈಬಲ್‌ಗೆ ಸಂಬಂಧವಾದ ಉತ್ತಮ ಲೇಖನಗಳೂ ಕವನಗಳೂ ಹಿತೋಕ್ತಿಗಳೂ ಅದರಲ್ಲಿ ಇರುತಿದ್ದುವು. ಡಿಸೆಂಬರ್ 1868 ರ ಸಂಚಿಕೆಯಲ್ಲಿ Apostle Paul ಇವನ ಪಂಕ್ತಿಗಳನ್ನು ಹೀಗೆ ಭಾಷಾಂತರಿಸಿ ಹೇಳಿದ್ದು ನಿಜಕ್ಕೂ ಮನಮುಟ್ಟುವಂಥಾದಾಗಿದೆ:—

> "ಹೆಂಗಸರೇ, ಕರ್ತನಲ್ಲಿ ಯೋಗ್ಯವಾದ ಪ್ರಕಾರ ಸ್ವಂತ ಗಂಡಂದಿರಿಗೆ ಒಳಗಾಗಿ ಇರಿ. ಗಂಡಸರೇ, ಹೆಂಡಿರನ್ನು ಪ್ರೀತಿ ಮಾಡಿ, ಅವರಿಗೆ ಕಹಿಯಾಗಿರಬೇಡಿರಿ.
>
> "ಮಕ್ಕಳೇ, ಎಲ್ಲಾದರಲ್ಲಿ ಹೆತ್ತವರಿಗೆ ವಿಧೇಯರಾಗಿ ಇರಿ. ಇದೇ ಕರ್ತನಿಗೆ ಆನಂದಕರವಾದದ್ದು. ತಂದೆಗಳೆ, ನಿಮ್ಮ ಮಕ್ಕಳು ಮನಗುಂದದ ಹಾಗೆ ಅವರಿಗೆ ಕೋಪವನ್ನೆಬ್ಬಿಸಬೇಡಿರಿ.
>
> "ದಾಸರೇ, ಮನುಷ್ಯರನ್ನು ಮೆಚ್ಚಿಸುವವರಾಗಿ ಕಣ್ಣು ಸೇವೆಯನ್ನು ಮಾಡದೆ ದೇವರಿಗೆ ಭಯಪಟ್ಟು, ಮಾಂಸದ ಪ್ರಕಾರ ಯಜಮಾನರಾದವರಿಗೆ ಎಲ್ಲಾದರಲ್ಲೂ ಯಥಾರ್ಥದಲ್ಲಿ ವಿಧೇಯರಾಗಿರಿ.
>
> "ಯಜಮಾನರೇ, ನಿಮಗೂ ಪರಲೋಕದಲ್ಲಿ ಯಜಮಾನನು ಇದ್ದಾನೆಂದು ತಿಳಿದು ನ್ಯಾಯವಾದುದನ್ನು ದಾಸರಿಗೆ ಕೊಡಿರಿ."

ಕ್ರೈಸ್ತ ಶಾಲೆಗಳಲ್ಲಿ ಹೆಚ್ಚಾಗಿ ಬಳಸಲ್ಪಡುತ್ತಿದ್ದಂಥಾ ಈ ಪತ್ರಿಕೆಯಲ್ಲಿ ಇಂಥಾ ಹಲವು ಪರಿಪುಷ್ಟ ವಿಷಯಗಳು ಇರುತ್ತಿದ್ದುವು. ಹಿಂದೂ ಮತದ ವಿಷಯವಾಗಿ ಹೇಳುವಾಗಲೆಲ್ಲಾ ಈ ಕ್ರೈಸ್ತ ವಿದ್ವಾಂಸರ ದೃಷ್ಟಿಯು ಪೂರ್ವಕಾಲದ ಬ್ರಾಹ್ಮಣರು

ತಮಗೆ ತೋರಿದಂತೆ ಬರೆದ ಗ್ರಂಥಗಳ ಕಡೆಗೆ ಹರಿದು ಅವರ ಹೇಳಿಕೆಗಳನ್ನೆಲ್ಲಾ ಆಗಿಂದಾಗ್ಗೆ ಟೀಕಿಸಿದ್ದರು. ಉದಾಹರಣೆಗಾಗಿ 1869 ರ "ಸಭಾಪತ್ರ"ದಲ್ಲಿ ಇದ್ದ ಒಂದು ಲೇಖನದಿಂದ ಈ ಭಾಗವನ್ನು ಎತ್ತಿ ಇಲ್ಲಿ ಕೊಡಲಾಗಿದೆ :—

> "....ಉಗುರುಗಳೇ ಆಯುಧಗಳಾಗುಳ್ಳಂಥಾ ಮಕ್ಕಳು ಭೂಪ್ರದೇಶವನ್ನು ಸಮ ಮಾಡಿ,....ತಮ್ಮ ಸ್ತ್ರೀಯರುಗಳೊಡನೆ ಕೂಡಿದವರಾಗಿ.... ಆ ದೇಶವನ್ನು....ಸಮಸ್ತ ಕಡೆಗಳಲ್ಲಿಯೂ ವ್ಯಾಪಿಸಿದರು.
>
> "ಹಾಗಾದರೆ ಕೊಡಗಿನ ಜನವನ್ನು....ಹಾಸ್ಯ ಮಾಡುವುದಕ್ಕಾಗಿ ಈ ಕತೆಯನ್ನು ಕಲ್ಪಿಸಿದರೆಂದು ತೋರುತ್ತದೆ. ಆದಾಗ್ಯೂ ಕೊಡವರು ಈ ಮೋಸವನ್ನು ತಿಳಿಯದೆ, ಕಾವೇರಿ ಪುರಾಣವನ್ನು ನಂಬುತ್ತಾರೆ.....ಕ್ರೋಢದೇಶ ಯೆಂದು ಕೊಡಗಿಗೆ ಹೇಳಿದ್ದು....ತಪ್ಪು.
>
> "ಕೊಡಗು ಭಾಷೆಯಲ್ಲಿ "ಕೊಡಿ" ಅಂದರೆ "ತುದಿ", ಆದರಿಂದ 'ಕೊಡೆವು' ಇಲ್ಲವೇ 'ಕೊ ಡ ಮ ಲೆ'....ಬೆಟ್ಟಗಳುಳ್ಳ ದೇಶ....ಅದು ಕೊಡಗು ...",

ಈ ಲೇಖನವನ್ನು ಬರೆದವನು ಕೊಡಗಿನಲ್ಲಿ ಬಹುಕಾಲ ತನ್ನ ಮತಪ್ರಚಾರ ಕಾರ್ಯಾರ್ಥವಾಗಿ ಇದ್ದು ಕೊಡಗಿನ ವಿಷಯವಾಗಿ ಹಲವು ಕೃತಿಗಳನ್ನು ರಚಿಸಿದ Dr. H. Moegling ಇವನೇ ಎಂಬುದು ಹೇಳಬಹುದಾಗಿದೆ. ಈ ವೇಳೆಗೆ ಅವನು "ಸಭಾಪತ್ರದ" ಒರ್ವ ಸಂಪಾದಕನೂ ಆಗಿದ್ದನು.

## ೧೫. "ಬಾಲಪತ್ರ" ಇದರಿಂದ ಕೆಲವು ಕನ್ನಡ "ಕವನಗಳು" :—

ಈ "ಸಭಾಪತ್ರ" ಪತ್ರಿಕೆಯಲ್ಲಿ ಕ್ರೈಸ್ತಗುಡಿಗಳಲ್ಲಿ ಹಾಡಲು ತಕ್ಕುದಾದ ಪದಗಳಲ್ಲದೆ ಶಾಲಾ ಮಕ್ಕಳಿಗೆ ಯೋಗ್ಯವಾದ ಕವನಗಳಲ್ಲಿ ಆಗಿಂದಾಗ್ಗೆ ಪ್ರಕಟವಾಗುತ್ತಿದ್ದುವು. ಇವುಗಳಲ್ಲಿ ಹಲವು Rev. Jacob J. Brigel ಇವನಿಂದಲೇ ಬರೆಯಲ್ಪಟ್ಟಿತೆಂದು ಹೇಳಬಹುದಾಗಿದೆ. ಈ ಹಲವು ಪದಗಳಲ್ಲಿ ಕ್ರಿಸ್ತನ ಹೆಸರು ಅವನ ಪವಾಡಗಳ ವಿಷಯವನ್ನು ಹೇಳಿಯೇ ಆ ಪಾಶ್ಚಾತ್ಯ ಕವಿಗಳು ತೃಪ್ತರಾಗಿದ್ದಾರೆ.

ಕ್ರಿ.ಶ. 1870 ರಿಂದ "ಸಭಾಪತ್ರ" ಪತ್ರಿಕೆಯು ಅದರ ಒಂದು ಭಾಗವನ್ನು "ಬಾಲಪತ್ರ"ವಾಗಿ ಮಾರ್ಪಡಿಸಿತು. ಆದರಲ್ಲಿ ಚಿಕ್ಕ ಮಕ್ಕಳಿಗೆ ತಕ್ಕುದಾದ ಹಲವು ಕವನಗಳು ಪ್ರಕಟವಾಗುತ್ತಿದ್ದುವು. ಆದರಿಂದ ಈ ಕೆಲವನ್ನು ಇಲ್ಲಿ ಉದಾಹರಿಸಲಾಗಿದೆ :—

"ನಾಳೆ ನಾಳೆ ಎಂದಿನ—
ಬೆನಕನ ಮದುವೆ ?
ನಾಳೆ ಪಾಠ ಕಲಿತು
ಕಷ್ಟಾಭ್ಯಾಸ ಮಾಳ್ಪೆದು ;
ನಾಳೆ ತಪ್ಪು ಬಿಡೋದು
ಎಂಬುದೇ ಮೈಗಳ್ಳರು—

"ನಾಳೆ ಪಾಪಕೋಸ್ಕರ
ಪಶ್ಚಾತ್ತಾಪ ಪಡುವ,
ನಾಳೆ ಯೇಸುಕ್ರಿಸ್ತನ
ನಂಬಿಕೆ ಕ್ಷೇಮ ಹೊಂದುವ"
ಅಷ್ಟರಲಿ ಜೀವವು
ಹೋಗಿ, ಸಾವು ಬಪ್ಪುದು !

ಕ್ರಿ. ಶ. 1870ರ "ಬಾಲಪತ್ರ" ವಿಭಾಗದಿಂದ ಈ ಕೆಳಗಿನ ಕೆಲವು ಕವನ ಭಾಗ ಗಳನ್ನು ಎತ್ತಿ ಇಲ್ಲಿ ಕೊಡಲಾಗಿದೆ :—

"ಶಾಲೆಗೆ ಹೋಗುವ ಬಾಲನಿಗೆ
ಆತನು ಹೋಗುವ ಮಠದೊಳಗೆ
ಪೇಳ್ವೆನು ಜೇಮ್ಸನ ಕತೆಯನ್ನು
ಕಲಿತನು ಅಲ್ಲಿಯ ವಿದ್ಯೆಯನು !

.................................

ಜೇಮ್ಸನೆ ನಿನ್ನ ಈ ದುಷ್ಟತ್ವ
ಬಿಡದಿರೆ ನಿನ್ನನು ಮಠದಿಂದ
ಕಳುಹೆವು ಎನ್ನುತ ಗದರಿಸಿಯು
ಜೇಮ್ಸನು ಬಿಡನು ತಂಟೆಯನು.

.................................

ಚಿಕ್ಕ ಮಕ್ಕಳಿಗಾಗಿ ಬರೆದ ಇಂಥಾ ಪದ್ಯಗಳು ಹಲವು ಈ ಪಾಶ್ಚಾತ್ಯ ಕ್ರೈಸ್ತ ಸಾಹಿತಿ ಗಳಿಂದ ಬರೆಯಲ್ಪಟ್ಟು ಅವು ನಾಡಿನ ಶಾಲೆಗಳಲೆಲ್ಲಾ ಮಕ್ಕಳಿಂದ ಹಾಡಲ್ಪಡು ತಿದ್ದುವು. "ಬಾಲಪತ್ರ"ದಲ್ಲಿ "ಜೋಗುಳಾಷ್ಟಕ" ಎಂಬುದಾಗಿ ಕೊಡಲ್ಪಟ್ಟ ಕವನವೂ ಚಿಲೋದಾಗಿದೆ :—

"ಜೋ ಜೋ ಎನ್ನ ನಿತ್ಯ ಪ್ರಕಾಶ
ಜೋ ಜೋ ಎನ್ನ ಸತ್ಯ ಪ್ರವೇಶ,
ಜೋ ಜೋ ಎನ್ನ ಮೃತ್ಯುವಿನಾಶ | ಹೀಗೆ.|
ಜೋ ಜೋ ಎಂದು ಭಕ್ತರು ಪಾಡಿ !

ಒಟ್ಟಾಗಿ ಹೇಳುವುದಿದ್ದರೆ ಈಗ "ನವಗವನಗಳು, ಬಾಲಸಾಹಿತ್ಯ" ಎಂದು ಮೊದ ಲಾಗಿ ಯಾವುದಕ್ಕೆ ಹೇಳುತ್ತಾರೋ ಅವುಗಳಿಗೂ ಸುಮಾರು ಒಂದುನೂರು ವರುಷ ಗಳಿಗೆ ಹಿಂದೆ ಆ ಪಾಶ್ಚಾತ್ಯ ವಿದ್ವಾಂಸರೇ ಮೂಲಪುರುಷರಾದರೆಂದು ಈ ಮೇಲಿನ ಉದಾಹರಣೆಗಳಿಂದ ತಿಳಿಯಬಹುದಾಗಿದೆ. ಸಣ್ಣಮಕ್ಕಳಿಗಾಗಿ ಕತೆಗಳು, ಕವನಗಳು,

ಹಾಡುಗಳು ಮುಂತಾದುವನ್ನು ಅವರು ಸಾಕಷ್ಟು ರಚಿಸಿ ಅವರೇ ಸ್ಥಾಪಿಸಿದ ಅಂದಿನ ಶಾಲೆಗಳಲ್ಲೆಲ್ಲಾ ಸುಮಾರು 1845 ರಿಂದ ಮೊದಲ್ಗೊಂಡು ಉಪಯೋಗಿಸಿದ್ದರು.

**೧೬. ಜೇಕಬ್ ಬ್ರೈಗೆಲ್ ಇವನಿಂದ "ಕನ್ನಡ ಪ್ರಸಂಗಗಳು":—**

ಕನ್ನಡನಾಡಿನ ಕರಾವಳೀ ಸೀಮೆಗಳಲ್ಲಿಯೇ ತನ್ನ ಮತಪ್ರಚಾರ ಕಾರ್ಯವನ್ನೂ ವಿದ್ಯಾಪ್ರಚಾರ ಸೇವೆಯನ್ನೂ ಬಹುಕಾಲ ಕೈಗೊಂಡಿದ್ದ Jacob J. Brigel ಇವನು ಒರ್ವ ಸೇವಾ ಧುರೀಣನೆಂದೆನ್ನಬಹುದು. ಕನ್ನಡ, ತುಳು, ಕೊಂಕಣಿ, ಮರಾಠಿ ಮತ್ತು ಸಂಸ್ಕೃತ ಭಾಷೆಗಳನ್ನು ಬಲ್ಲವನಾಗಿದ್ದ ಈ ಕ್ರೈಸ್ತ ಗುರುವು ಈ ಎಲ್ಲಾ ಭಾಷೆಗಳ ಮೂಲಕವಾಗಿ ಗ್ರಾಮಾಂತರದ ಜನರ ಸಂಪರ್ಕ ಬೆಳಸಿ, ಸಾಕಷ್ಟು ಜನರನ್ನು ಮತಾಂತರಗೊಳಿಸಿದಲ್ಲದೆ ಅವರ ಯೋಗ ಸೌಕರ್ಯಗಳ ಕಡೆಗೂ ಲಕ್ಷ್ಯವಿಟ್ಟು ಅವಿರತವಾಗಿ ದುಡಿದನು.

ಅವನು ಕನ್ನಡ ಬೈಬಲ್ ಸಾಹಿತ್ಯಕ್ಕೆ ಹೆಚ್ಚಿನ ಕೃತಿಗಳನ್ನೀಯಲಿಲ್ಲವಾದರೂ ಪತ್ರಿಕೋದ್ಯಮದಿಂದ ತೊಡಗಿ ಸಾಹಿತ್ಯದ ಎಲ್ಲಾ ದಿಶೆಗಳಲ್ಲೂ ತನ್ನ ಪ್ರಭಾವವನ್ನು ಬೀರಿದ್ದಾನೆ. Rev. J. Brigel ಇವನ ಕೃತಿಗಳ ಪೈಕಿ "ಕನ್ನಡ ಪ್ರಸಂಗಗಳು" ಇದು ಮುಖ್ಯವಾದುದಾಗಿದೆ. ಬರೇ 82 ಪುಟಗಳ ಈ ಹೊತ್ತಗೆಯಲ್ಲಿ ಬೈಬಲ್ ಸೂಕ್ತಿಗಳಿಂದೊಡಗೂಡಿದ ಹಲವು ಹಾಡುಗಳು ಇವೆ. ಇದು 1872 ರಲ್ಲಿ ಪ್ರಕಟವಾಯಿತು. ಇವನ ಬರೆವಣಿಗೆಯ ಬಹುಪಾಲು ಅವನ "ಸಭಾಪತ್ರ" ಪತ್ರಿಕೆಯ ಮೂಲಕ ಹರಿದು ಹೋಗಿದೆ. ಅವನು ರಚಿಸಿದ ಹಲವು ಬೈಬಲ್ ಕೀರ್ತನೆಗಳ ಪೈಕಿ ಒಂದನ್ನು 1869ರ ಅವನ ಪತ್ರಿಕೆಯಿಂದ ಎತ್ತಿ ಕೊಡಲಾಗಿದೆ. ಅದು ಸಹ ಶಾಲಾ ಮಕ್ಕಳಿಗೆ ಯೋಗ್ಯವಾಗುವಂತೆ ಬರೆದುದಾಗಿದೆ.

"ಕನ್ಯೆ ಮರಿಯಳು ತಾ ನಜರೇತಿನಲ್ಲಿ
ಕನ್ಯೆ ಶಿರೋಮಣಿ ಎನಿಸಿರುತಲ್ಲಿ
ಚಿನ್ನಿಗ ದೂತನು ತಾ ಸ್ವಪ್ನದಲ್ಲಿ । ತನ್ನ
ಸನ್ನುತ ದರುಶನ ಕೊಟ್ಟ ತೀವ್ರದಲಿ
.........................................
ಕೊಟ್ಟಿಗೆ ಹಟ್ಟಿಯೊಳ್ ಪುಟ್ಟಲು ಕೂಸು
ಬಟ್ಟೆಲಿ ಸುತ್ತಿಟ್ಟು. ನಿಟ್ಟಸಲೇಸು
ಕೊಟ್ಟಿತು ಮನಕೆ ಸಂತಸ ಕೂಸು । ನೋಡ
ಹುಟ್ಟದ ನೆಟ್ಟರ್ದ ತಳ ಎಷ್ಟು ಮಾಸು
........................................."

ಹೀಗೆ ಕವನಗಳನ್ನೂ ಹಾಡುಗಳನ್ನೂ ರಚಿಸಿದ ಅಂದಿನ ವಿದೇಶೀಯರು ಸಾಧ್ಯವಾದಷ್ಟು ಮಟ್ಟಿಗೆ ಪದಸರಣಿಯನ್ನುಪಯೋಗಿಸಿ ಪ್ರಾಸಬದ್ಧವಾಗಿ ಬರೆಯಲು ಪ್ರಯತ್ನಿ

ಸಿದ್ದಾರೆ. ಈ ಕವಿತೆಗಳು ಈ ಶತಮಾನದಲ್ಲಿ ಹುಟ್ಟಿದೆಂದು ಎನಲಾದ ಆಧುನಿಕ ಕವನಗಳ ರೀತಿಯಲ್ಲಿವೆ. ಆಧುನಿಕ ಕವನಗಳ ಶೈಲಿಗೆ ಆ ವಿದೇಶೀಯರೇ ಮೂಲ ಪುರುಷರಾದರೆಂಬ ಶಂಕೆಯನ್ನು ಪುನಃ ಇಲ್ಲಿ ವ್ಯಕ್ತಪಡಿಸುವುದು ಯೋಗ್ಯವಿದೆ, ಏಕೆಂದರೆ ಸುಮಾರು 1860 ರಿಂದೀಚೆಗೆ ಅವರು ಬರೆದ ಹಲವು ಕವನಗಳು ಈ ಶತಮಾನದ ಪ್ರಾರಂಭದಲ್ಲಿ ಕನ್ನಡಿಗ ವಿದ್ವಾಂಸರು ಬರೆಯಲು ತೊಡಗಿದ ರೀತಿಯಲ್ಲಿಯೇ ಇವೆ. ಕೀರ್ತನೆಗಳನ್ನು ಬರೆಯಲು ಅಂದಿನ ಕ್ರೈಸ್ತ ವಿದ್ವಾಂಸರು ನಮ್ಮ ದಾಸ ಸಾಹಿತ್ಯದ ಹಾಡುಗಳ ಸರಣಿಯನ್ನು ಅನುಸರಿಸಿದ್ದಾರೆ.

## ೧೭ ಗೆಶ್ಶಿ ವೆಲ್ಟ್ ಇವನಿಂದ ಬರೆಯಲ್ಪಟ್ಟ "ಲೋಕ ಚರಿತ್ರವು":—

Rev. Geschi de Welt ಇವನಿಂದ ಬರೆಯಲ್ಪಟ್ಟ 280 demy ಪುಟಗಳ "ಲೋಕ ಚರಿತ್ರವು" ಮತ್ತೊಂದು ಉಚ್ಚಮಟ್ಟದ ಬೈಬಲ್ ಇತಿಹಾಸವಾಗಿದೆ. ಇದರ ಮೊದಲ ಮುದ್ರಣವು ಮಂಗಳೂರು ಬಾಸೆಲ್ ಮಿಷನ್ ಛಾಪಖಾನೆಯಲ್ಲಿ ಕನ್ನಡ ಲಿಪಿಗಳ ಹಳೆ ಅಚ್ಚುಮೊಳೆಗಳಲ್ಲಿ, ಮುದ್ರಣವಾಗಿ ಕ್ರಿ. ಶ. 1853 ರಲ್ಲಿ ಪ್ರಕಟವಾಯಿತು. ಅಲ್ಲಿಂದ ನಂತರ ಅದೇ ಗ್ರಂಥದ ಎರಡನೇ ಆವೃತಿಯು ಪರಿಷ್ಕೃತ ರೂಪದಲ್ಲಿ ಹೊರಬಂತು.

Geshi de Welt ಇವನ "ಲೋಕ ಚರಿತ್ರವು" ಬೈಬಲ್‌ನಲ್ಲಿ ಹೇಳಿರುವ ಪೌರಾಣಿಕ ವಿವರಣೆಗಳನ್ನು ಇನ್ನಷ್ಟು ವಿಷದವಾಗಿ ಪ್ರಸ್ತಾಪಿಸಿದೆ. ಅದರ ಮೇಲ್ಪುಟದಲ್ಲಿ "ಕ್ರಿಸ್ತನು ಬರುವ ಮುಂಚೆ ಆದದು; ಪೂರ್ವ ಕಾಲವೂ ಆ ಕಾಲದ ಜನಾಂಗಗಳೂ; ಮೊದಲು ಇದ್ದ ಮನುಷ್ಯರ ವಂಶವು," ಎಂಬುದಾಗಿ ಹೇಳಿದೆ. ಗ್ರಂಥವನ್ನು "ಮೊದಲನೇ ಮನುಷ್ಯರು" ಎಂಬ ವಿಷಯವಾಗಿ ಪ್ರಾರಂಭಿಸುತ್ತಾ ಒಂದೆಡೆ ಲೇಖಕನು ಈ ರೀತಿಯಾಗಿ ಹೇಳುತ್ತಾನೆ:—

"ದೇವರು ಮೊದಲು ಭೂ-ಪರಲೋಕಗಳನ್ನು ಉಂಟುಮಾಡಿದನು; ಮೋಶೆ ೧; ಭೂಲೋಕದಲ್ಲಿ ಮೊದಲನೇ ಮನುಷ್ಯನಾದ ಅದಾಮನನ್ನು ಹೆಚ್ಚಿನವನಾಗಿ ಮಾಡಿದನು. ಹಾಗೆಂದರೆ ಅವನನ್ನು ತನ್ನ ಸ್ವರೂಪದಿಂದ ನಿರ್ಮಿಸಿ ನೀಡಿ ನಿರ್ಮಲವಾದ ಮನಸ್ಸು ಕೊಟ್ಟು ಲೋಕದಲ್ಲಿ ಆಳಬೇಕೆಂದು ದೇವರು ಅವನನ್ನು ಅದರಲ್ಲಿ ಇಟ್ಟನು. ದೇವರು ಮನುಷ್ಯನಿಗೆ ಶರೀರವನ್ನೂ ಮನಸ್ಸನ್ನೂ ಆತ್ಮವನ್ನೂ ಕೊಟ್ಟನು. ಮೊದಲನೇ ಮನುಷ್ಯನಿಂದ ದೇವರು ಒಂದು ಹೆಂಗಸನ್ನು ಮಾಡಿಕೊಟ್ಟನು. ಆಮೇಲೆ ಸೈತಾನನ ಮೋಸದಿಂದ ಪಾಪದಲ್ಲಿ ಬಿದ್ದು ದೇವರನ್ನು ಮರೆತುಬಿಟ್ಟರು. ಆದ್ದರಿಂದ ಉಪದ್ರ ನಷ್ಟ, ಸಾವಿಗೂ, ಸತ್ತ ಮೇಲೆ ನರಕಕ್ಕೂ ಗುರಿಯಾದರು."

ಹೀಗೆ 'ಲೋಕಚರಿತ್ರ' ವೆಂಬುದಾಗಿ ಕಳೆದ ಶತಮಾನದಲ್ಲಿ ಬರೆಯಲ್ಪಟ್ಟ ಹಲವು ಗ್ರಂಥಗಳಲ್ಲಿ ಬೈಬಲ್ ಪುರಾಣವನ್ನು ಕ್ರೈಸ್ತರು ನಂಬತಕ್ಕ ರೀತಿಯಲ್ಲಿ ಸಕಾರಣವಾಗಿ ಪ್ರಸ್ತಾಪಿಸಲಾಗಿದೆ. ಹಿಂದೂ ಪುರಾಣಗಳಂತೆ ಕಟ್ಟುಕತೆಗಳಾಗಲೀ ಕಾವ್ಯ ಕಲ್ಪನೆಯಾಗಲೀ ಅವುಗಳಲ್ಲಿಲ್ಲ. ಲೋಕದ ಸೃಷ್ಟಿ, ಪ್ರಳಯ, ಮಾನವಜನ್ಮ,

ಮೂಲ ಇತ್ಯಾದಿಗಳು ಹೇಗಾದುವೆಂಬುದನ್ನು Adam and Eve ಕತೆಗಳ ರೀತಿಯಲ್ಲಿಯೂ ವೈಜ್ಞಾನಿಕವಾಗಿಯೂ ನಿರೂಪಿಸಿದ್ದಾನೆ. ಕ್ರಿಸ್ತನಿಗಿಂತ ಮುಂಚೆಯೇ ಲೋಕವಿತ್ತು, ಮನುಷ್ಯನೂ ಇದ್ದನು; ಅವನು ಹೇಗೆ ಇದ್ದನು, ಲೋಕ ಹೇಗೆ ಇದ್ದಿತು ಎಂಬುದಾಗಿ ಚರ್ಚಿಸುವುದೇ ಎಲ್ಲಾ ಬೈಬಲ್ ಪುರಾಣಗಳ ಮತ್ತು 'ಲೋಕ ಚರಿತೆ' ಗಳ ಉದ್ದೇಶವಾಗಿತ್ತೆಂಬುದನ್ನು ಕಳೆದ ಶತಮಾನದ ಕನ್ನಡ ಬೈಬಲ್ ಗ್ರಂಥಗಳಿಂದ ಮೇಲಿಂದ ಮೇಲೆ ವ್ಯಕ್ತವಾಗುತ್ತದೆ.

## ೧೮. ಕನ್ನಡದಲ್ಲಿ ಪರಿಷ್ಕೃತ ಬೈಬಲ್ ಗ್ರಂಥಗಳು ಪುನಃ ಪ್ರಕಟವಾದುವು :—

Geshi de Welt ಇವನು ಬರೆದ ಗ್ರಂಥದ ಮಾದರಿಯಲ್ಲಿಯೇ 84 ಪುಟಗಳ ಚಿಕ್ಕ ಪುಸ್ತಕವೊಂದು 1860 ರಲ್ಲಿ ಪ್ರಕಟವಾಯಿತು. ಅದು ಮದ್ರಾಸಿನಲ್ಲಿದ್ದ George & Pope ಇವನು ತಮಿಳು ಭಾಷೆಯಲ್ಲಿ ಬರೆದ "Blessed Lords Sermon on the Mount" ಎಂಬುದರ ಭಾಷಾಂತರವಾಗಿದ್ದು ಅದನ್ನೇ ಕ್ರೈಸ್ತ ಮತಪ್ರಚಾರ ಸಂಸ್ಥೆಯವರು ಕನ್ನಡಕ್ಕಿಳಿಸಿ ಪ್ರಕಟಿಸಿದರು. ಈ ಚಿಕ್ಕ ಪುಸ್ತಕದಲ್ಲೂ ಬೈಬಲ್ ಸೂಕ್ತಿಗಳ ಆಧಾರದಿಂದ ಕ್ರಿಸ್ತಪುರಾಣವನ್ನು ಸೂಕ್ಷ್ಮವಾಗಿ ನಿರೂಪಿಸಲಾಗಿದೆ.

ಜರ್ಮನ್ ಭಾಷೆಯಿಂದ ಕನ್ನಡಕ್ಕಿಳಿಸಲ್ಪಟ್ಟ "ಮೋಶೆಯ ಐದು ಗ್ರಂಥಗಳ ವ್ಯಾಖ್ಯಾನ—ಹಳೆ ಒಡಂಬಡಿಕೆ (Old Testament) ಇದು 402 demy ಪುಟಗಳ ಮೊದಲನೇ ಕಾಂಡವಾಗಿ ಬೈಬಲ್ ಪರಿಷ್ಕರಣಾ ಸಮಿತಿಯವರಿಂದ ಪ್ರಕಟಿಸಲ್ಪಟ್ಟಿತು. ಅದರೊಡನೆಯೇ ಆದರ ಇತರ ನಾಲ್ಕು ಕಾಂಡಗಳೂ ಇನ್ನೂ ದೊಡ್ಡ ಪ್ರಮಾಣದಲ್ಲಿ ಮತ್ತು ಸಹಸ್ರಾರು ಪುಟಗಳಿಂದೊಡಗೂಡಿ ಕ್ರಿ.ಶ. 1873 ರ ಒಳಗಾಗಿ ಪ್ರಕಟವಾಯಿತು. ಇವೆಲ್ಲವೂ ಅದಕ್ಕಿಂತ ನಲ್ವತ್ತು ವರ್ಷಗಳಿಗೆ ಹಿಂದೆ Dr. Hands, Rev. Carey, William Reeve, John Reid ಇವರೇ ಮೊದಲಾದವರು ಬರೆದ ಕನ್ನಡ ಬೈಬಲ್‌ಗಳ ಮತ್ತೊಂದು ಪರಿಷ್ಕೃತವಾದ ಮತ್ತು ಸಂಗ್ರಹವಾದ ಪ್ರಕಟಣೆಯಾಗಿ ಪ್ರಚಾರವಾಯಿತು. ಈ ಐದು ಕಾಂಡಗಳ ಬೃಹತ್ ಗ್ರಂಥದ ಮೊದಲ ಪುಟದಲ್ಲಿ ಹೀಗೆ ಹೇಳಿದೆ.

> "ಯೆಹೋದರವರು ಹಳೆ ಒಡಂಬಡಿಕೆಯ ಗ್ರಂಥಗಳನ್ನು ನಾಲ್ಕು ಭಾಗ ಮಾಡಿ ಒಂದನೇದರಲ್ಲಿ ಮೋಶೆಯ ಐದು ಪುಸ್ತಕಗಳನ್ನು ೨ ನೇ ದರಲ್ಲಿ ಅಪ್ಪಣ ಪ್ರವಾದಿಗಳೆಂಬವರ ಪುಸ್ತಕಗಳನ್ನು ೩ ನೇದರಲ್ಲಿ ಇತ್ತಣ ಪ್ರವಾದಿಗಳೆಂಬವರ ಪುಸ್ತಕಗಳನ್ನು ೪ ನೇದರಲ್ಲಿ ಪವಿತ್ರ ಲೇಖನಗಳೆಂಬ ಪುಸ್ತಕಗಳನ್ನೂ ಇಟ್ಟರು........"

ಈ ಬೇರೆ ಬೇರೆ ಕಾಂಡಗಳನ್ನು ಕನ್ನಡಿಸಿದ ಅಂದಿನ ಕ್ರೈಸ್ತ ವಿದ್ವಾಂಸರು ಯಾರಾರೆಂದು ಆ ಗ್ರಂಥಗಳಲ್ಲಿ ಸೂಚಿತವಾಗಲಿಲ್ಲ. ಆದರೆ ಅದನ್ನು 1854ರ ಅಥವಾ 1862ರ ಕನ್ನಡ ಬೈಬಲ್ ಪರಿಷ್ಕರಣಾ ಮಂಡಳಿಯವರೇ ಭಾಷಾಂತರಿಸಿ ಹೀಗೆ ಹಳೇ ಕನ್ನಡ

ಅಚ್ಚು ಮೊಳೆಗಳಲ್ಲಿ ಮುದ್ರಿಸಿ ಪ್ರಕಟಿಸಿದ್ದರೆಂದು ಹೇಳಬಹುದಾಗಿದೆ. ಅದರಲ್ಲಿ ತೋರುವ ಕನ್ನಡ ಗದ್ಯದ ಶೈಲಿಯೂ 1860 ಕ್ಕಿಂತ ಹಿಂದಿನದಂತೆ ಇದೆ.

ಕ್ರಿ.ಶ. 1873 ರ ಈ ಪ್ರಕಟಣೆಗಳೊಂದಿಗೆ "ಚರಿತ್ರ ಗ್ರಂಥಗಳ ವ್ಯಾಖ್ಯಾನವು" ಎಂಬ 862 demy ಪುಟಗಳ ಒಂದು ಪುಸ್ತಕವು ನೂರಾರು ಬೈಬಲ್ ಕತೆಗಳಿಂದಲೂ ಬೈಬಲ್ ಪ್ರಸಂಗಗಳಿಂದಲೂ ಸೂಕ್ತಿಗಳಿಂದಲೂ ಕೂಡಿ ಹೊರಬಂತು. ಇದರಲ್ಲೂ ಹೆಚ್ಚಾಗಿ "ಹಳೇ ಒಡಂಬಡಿಕೆ"ಯಲ್ಲಿ ಕೊಟ್ಟ ಧಾರ್ಮಿಕ ವಿಚಾರಗಳನ್ನೇ ಇನ್ನಷ್ಟು ವಿಷದವಾಗಿ ವಿವರಿಸಿದೆ. ಇದರ ಕರ್ತೃಗಳೂ ಭಾಷಾಂತರಕಾರರೂ ಅಂದಿನ ಕನ್ನಡ ಬೈಬಲ್ ಪರಿಷ್ಕರಣಾ ಸಮಿತಿಯ ಸದಸ್ಯರೇ ಆಗಿರಬಹುದೆಂದು ಊಹಿಸಲಾಗಿದೆ. ಒಂದೆಡೆ ಇಂಥಾ ಬೈಬಲ್ ಪುರಾಣ ಗ್ರಂಥಗಳು ಆಗಿಂದಾಗ್ಗೆ ಪರಿಪುಷ್ಟವಾಗಿ ಬರೆಯಲ್ಪಟ್ಟು ಪ್ರಕಟವಾಗುತ್ತಿದ್ದಾಗ ಇನ್ನೊಂದೆಡೆಯಲ್ಲಿ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಿಂದ ಮತ್ತು ಕ್ರೈಸ್ತ ಮತಪ್ರಚಾರ ಕೇಂದ್ರಗಳಿಂದ ಹಿಂದೆ ಹೇಳಲ್ಪಟ್ಟ ತರಹದ ನೂರಾರು ಕನ್ನಡ ಬೈಬಲ್ ಪ್ರಸಂಗಗಳ ಕಿರುಹೊತ್ತಗೆಗಳೂ ಸಹಸ್ರಾರು ಪ್ರತಿಗಳಂತೆ ಮುದ್ರಣವಾಗಿ ಕೇವಲ ಅತ್ಯಲ್ಪ ಬೆಲೆಗೆ ಮಾರಾಟವಾಗುತ್ತಾ ಪ್ರಚಾರವಾಗುತ್ತಾ ಇದ್ದುವು.

---

೧೫

"ಮೋಡಗಳೆಲ್ಲವು ಸರಿದುವು ಹಿಂದೆ
ಆಗಸವೆಲ್ಲಾ ಬಿಳುಪಾಯ್ತು
ಚಳಿಗಾಲೆಂಬೋ ಸಗ್ಗದ ಅಗಸ
ಗಗನವ ತೊಳೆದನು ನೆನಪಾಯ್ತು.
ಬೆಳಕೇ ಇಲ್ಲದ ಮಳೆಗಾಲ,
ಹಿಂದಕೆ ಸರಿಯಿತು ಆ ಕಾಲ,
ಮೂಡಿದೆ ಬೆಳಕಿನ ಚಳಿಗಾಲ,
ಜ್ಞಾನವ ಬೀರುವ ನವಕಾಲ!

[ದಿನಕರ ದೇಸಾಯಿ]

ಕಳೆದ ಶತಮಾನದಲ್ಲಿ ಕನ್ನಡನಾಡಿನಲ್ಲಿ ಮತ್ತು ಹಿಂದೂಸ್ಥಾನದಲ್ಲಿದ್ದ ಸಹಸ್ರಾರು ಕ್ರೈಸ್ತ ವಿದ್ವಾಂಸರು ಹಲವರು ಧರ್ಮಪ್ರಚಾರದ ಹೆಸರಿನಲ್ಲಿ ಸಮಾಜ ಸೇವೆಯನ್ನು ಮಾಡಿದರು; ಅಥವಾ ಸಮಾಜ ಸೇವೆಯ ನೆವದಲ್ಲಿ ಮತಪ್ರಚಾರ ಕಾರ್ಯವನ್ನು ಮಾಡಿದರು. ಇದನ್ನು ಹೇಗೆ ಹೇಳಿದರೂ ಒಟ್ಟಾಗಿ ಈ ದೇಶದಲ್ಲಿ ನಡೆದದ್ದು ಏನೆಂದರೆ ಅದೊಂದು ಬಗೆಯ ದೇಶಾಭಿವೃದ್ಧಿ ಮತ್ತು ಜ್ಞಾನಾಭಿವೃದ್ಧಿ! ಈ ಜ್ಞಾನಾಭಿವೃದ್ಧಿಯು ಈ ದೇಶದ ಎಲ್ಲಾ ಜನಕ್ಕೆ ಹಿಂದಾವ ಕಾಲದಲ್ಲೂ ಆದುದ್ದಿಲ್ಲ. ಸಂಸ್ಕೃತವು ರಾಜಭಾಷೆಯಾಗಿದ್ದಾಗ ಅದರ ಮೂಲಕ ಒದಗಿದ ಜ್ಞಾನಾಭಿವೃದ್ಧಿ ಸಮಾಜದಲ್ಲಿ ಬರೀ ಕೆಲವು ಜನಕ್ಕೆ! ಪರ್ಷಿಯನ್ ರಾಜಭಾಷೆಯಾಗಿದ್ದಾಗಲೂ ಪರಿಸ್ಥಿತಿಯು ಹಾಗೆಯೇ ಇತ್ತಲ್ಲದೆ ಏನೊಂದು ವಿಷಯದಲ್ಲೂ ಜನತೆಯು ಚೇತನಗೊಳ್ಳುವ ಪರಿಸ್ಥಿತಿಯು ಒದಗಿದ್ದೇ ಇಲ್ಲ. ಆದರೆ ಕಳೆದ ಒಂದೆರಡು ಶತಮಾನಗಳಲ್ಲಿ "ಮೋಡಗಳೆಲ್ಲವು ಸರಿದುವು ಹಿಂದೆ ಆಗಸವೆಲ್ಲಾ ಬಿಳುಪಾಯ್ತು" ಎಂಬಂತೆ ಭಾರತದ ಗಗನಾಂಗಣದಲ್ಲಿ ತೋರಿತು. ಸಹಸ್ರಾರು ವರ್ಷಗಳ ಚಾರಿತ್ರಿಕ ವೈಶಿಷ್ಟ್ಯವನ್ನು ಪಡೆದ ಈ ದೇಶದಲ್ಲಿ ಅದೊಂದು ಬಗೆಯ "ಜ್ಞಾನವ ಬೀರುವ ನವಕಾಲವು" ಉದಿಸಿ ಬಂತು.

ಮಹಮ್ಮದೀಯರು ತಮ್ಮ ಬಲಾತ್ಕಾರಿಕ ಮತಪರಿವರ್ತನೆಯ ಪರಿಣಾಮವಾಗಿ ತಮ್ಮ ಮತಕ್ಕೆ ಸೇರಿದ ಜನವನ್ನು ದೇಶದಲ್ಲಿ ಬರೀ ದಂಗೆ ಧಾಳಿಯೆಬ್ಬಿಸಲು ಅವರಿಗೆ ಬೇಕಾದಂಥ ಸಿಪಾಯಿಗಳಾಗಿ ಪರಿವರ್ತಿಸಿದರು. ಆದರೆ ಕ್ರೈಸ್ತರು ಮತಾಂತರಗೊಳಿಸಿದ ಈ ದೇಶದ ಜನವನ್ನು ಸಭ್ಯ ನಾಗರಿಕರಾಗಿ ಮೇಲೆತ್ತಲು ಪ್ರಯತ್ನಿಸಿದರು. ಈ ವ್ಯತ್ಯಾಸವನ್ನೂ ಓದುಗರು ಕಂಡುಕೊಳ್ಳಬೇಕಾಗಿದೆ. ಅಂಥಾ ಅವರ ಸಾಹಸದಲ್ಲಿ ಬ್ರಿಟಿಷ್ ಸರಕಾರಕ್ಕೆ ಬಲಗೈಯಂತಿದ್ದವರು ಅಂದಿನ ಪಾಶ್ಚಾತ್ಯ ಕ್ರೈಸ್ತ ಮತಪ್ರಚಾರಕರಲ್ಲದೆ ಅವರ ಅಧಿಕಾರವರ್ಗವಲ್ಲ. ಹಾಗೆ ಅವರು ಈ ದೇಶದಲ್ಲಿ ಸಮಾಜಸೇವೆಗೆಂದು ಇಳಿದಾಗ ಅವರ ಪ್ರಧಾನ ಉದ್ದೇಶವಾದ ಮತಪ್ರಚಾರ ಕಾರ್ಯವನ್ನು ಸಹ ಹಿಂದಿರಿಸಿ ಹಲವರು ಈ ದೇಶವನ್ನು ತಮ್ಮ ದೇಶವೆಂದೇ ಭಾವಿಸಿ ದೀಕ್ಷಾಬದ್ಧವಾಗಿ ಮತ್ತು ನಿಷ್ಕಾಮಕರ್ಮದಿಂದ ಉದ್ಧಾರ ಕಾರ್ಯವನ್ನು ಎಸಗಿದರು.

ಪಾಶ್ಚಾತ್ಯ ಸಂಶೋಧಕರ ಕನ್ನಡ ಸೇವೆ, ಪುಟ ೩೭೯ — handwritten



ಕನ್ನಡನಾಡಿನಲ್ಲಿ ಹಾಗಿದ್ದ ಸೇವಾಧುರೀಣರು ವಿವಿಧ ಜಿಲ್ಲೆಗಳ ಗ್ರಾಮಾಂತರಗಳಲ್ಲೂ ಆ ಕಾಲದಲ್ಲಿ ಓಡಾಡಿದರು. ಅಂಥಾ ಕರ್ಮಜೀವಿಗಳಾದ ಮತಪ್ರಚಾರಕರ ಪೈಕಿ ಒರ್ವನು Benjamin Lewis Rice ಇವನೊಬ್ಬನು.

**೨. ಬೆಂಜಾಮಿನ್ ರೈಸ್—ಇವನ ಐವತ್ತು ವರ್ಷಗಳ ನಿರಂತರ ಸೇವೆ :—**

Rev. Benjamin Lewis Rice ಇವನು ಇತರ ಸಾಮಾನ್ಯ ಮತ ಪ್ರಚಾರಕರಂತೆ ಜರ್ಮನಿಯಿಂದ ಈ ದೇಶಕ್ಕೆ ಬಂದು ಸುಮಾರು 1843 ರ ಕಾಲದಲ್ಲಿ ಮದ್ರಾಸಿನಲ್ಲಿ ಬಂದಿಳಿದನು. ಆಗ ಅವನು ಬರೇ ಸುಮಾರು ೨೩ ವರ್ಷ ಪ್ರಾಯದ ಹುಡುಗನಾಗಿದ್ದು ಮದ್ರಾಸಿನ ಕ್ರೈಸ್ತ ಮತಪ್ರಚಾರ ಸಂಸ್ಥೆಯವರು ಅವನನ್ನು ಅದೇ ಕಾರ್ಯಾರ್ಥ ಬೆಂಗಳೂರಿಗೆ ಕಳುಹಿಸಿದರು. ಬಂದು ಒಂದೆರಡು ವರ್ಷಗಳಲ್ಲಿಯೇ ತಮಿಳು, ಕನ್ನಡ, ತೆಲುಗು ಭಾಷೆಗಳನ್ನೂ ಅನಂತರ ಸಂಸ್ಕೃತ, ಪರ್ಷಿಯನ್, ಲ್ಯಾಟಿನ್ ಮತ್ತು ತನ್ನ ಸ್ವಭಾಷೆಯಾದ ಜರ್ಮನ್ ಭಾಷೆಯನ್ನೂ ಚೆನ್ನಾಗಿ ಕಲಿತು ಸಾಕಷ್ಟು ಪಾಂಡಿತ್ಯವನ್ನು ಸಂಪಾದಿಸಿದನು. ಇವನ ಪಾಂಡಿತ್ಯದ ಸದ್ವಿನಿಯೋಗ ಕನ್ನಡನಾಡಿಗೆ ಯಾವ ರೀತಿಯಲ್ಲಾಯಿತೆಂಬುದನ್ನು ಮುಂದಿನ ಭಾಗದಲ್ಲಿ ಇನ್ನಷ್ಟು ವಿವರವಾಗಿ ಹೇಳಲಾಗುವುದು.

ಸುಮಾರು ಕ್ರಿ.ಶ. 1843 ರಿಂದ 1895 ರವರೆಗೆ ಈ ದೇಶದಲ್ಲಿ ಇದ್ದ ಈ ಅಸಾಮಾನ್ಯ ಕರ್ಮಯೋಗಿ Benjamin Rice ಇವನು ಕಳೆದ ಅರ್ಧ ಶತಮಾನ ಕಾಲ ಹಲವಾರು ರೀತಿಯಲ್ಲಿ ನಿರಂತರ ದುಡಿದ ಒರ್ವ ತೇಜಸ್ವೀ ವ್ಯಕ್ತಿಯಾಗಿದ್ದನು. ಹಳೇ ಮೈಸೂರು ರಾಜ್ಯದಲ್ಲಿ Jhon Garrett ಇವನ ನಂತರ ಪ್ರತಿಭಾಶಾಲಿ ಪಂಡಿತನೂ ಕರ್ಮಕುಶಲನೂ ಆಗಿ ತನ್ನ ಪ್ರಭಾವವನ್ನು ಹಲವು ರೀತಿಯಲ್ಲಿ ಸ್ಥಳೀಯ ಸರಕಾರಕ್ಕೆ ಬೀರಿ ಅಂದಿನ ಆ ರಾಜ್ಯದ ಮುನ್ನಡೆಗೆ ಒರ್ವ ಪ್ರಧಾನ ಕಾರಣಪುರುಷನಾಗಿದ್ದನು. ಕ್ರೈಸ್ತಧರ್ಮಪ್ರಚಾರ, ಆಧುನಿಕ ವಿದ್ಯಾಪ್ರಚಾರ ಉಪನ್ಯಾಸ, ಸಮಾಜಸೇವೆ, ಪಠ್ಯಪುಸ್ತಕಗಳ ಬರೆವಣಿಗೆ, ಸಂಶೋಧನೆ, ಪ್ರಾಚೀನ ಗ್ರಂಥಗಳ ಸಂಸ್ಕರಣೆ. ಶಿಲಾಶಾಸನಗಳ ಅನ್ವೇಷಣೆ ಇತ್ಯಾದಿಗಳಲ್ಲಿ ಇವನು ತೋರಿಸಿದ ಉತ್ಸಾಹವು ಯಾರನ್ನೂ ಬೆರಗುಪಡಿಸುವಂಥಾದಾಗಿದೆ.

ಪ್ರಾರಂಭದ ಸುಮಾರು ೨೦ ವರ್ಷಗಳ ಕಾಲ Benjamin Rice ಇವನು ಕನ್ನಡ ಬೈಬಲ್ ಸಾಹಿತ್ಯ ಕೃತಿಗಳ ರಚನೆಯಲ್ಲಿಯೇ ಕಾಲ ಕಳೆದನು. ಆದರೆ ಅದರೆಡೆಯಲ್ಲೂ ಶಾಲೆಗಳ ಸ್ಥಾಪನೆ, ಪಠ್ಯಪುಸ್ತಕಗಳ ರಚನೆ, ಪತ್ರಿಕೋದ್ಯಮ, ಉಪನ್ಯಾಸ, ಸಂಚಾರ ಎಂದು ಮೊದಲಾಗಿ ಅವಿರತವಾಗಿ ದುಡಿದನು. ಅವನ ಆ ಸಾಮರ್ಥ್ಯವನ್ನು ನೋಡಿದ್ದ ಅಂದಿನ ಮೈಸೂರು ರಾಜ್ಯ ಸರಕಾರವು Rev. John Garrett ಇವನನ್ನು ವಿದ್ಯಾ ಇಲಾಖೆಯ ಉನ್ನತ ಅಧಿಕಾರ ಸ್ಥಾನಕ್ಕೇರಿಸಿದಂತೆ Lewis Rice ಇವನನ್ನೂ ಒಂದು ಸ್ಥಾನದಿಂದ ಇನ್ನೊಂದು ಮೇಲಿನ ಸ್ಥಾನಕ್ಕೇರಿಸಿದ್ದಲ್ಲದೆ ಕಟ್ಟಕಡೆಗೆ ಅವನು ಇಡೀ ಭಾರತದಲ್ಲಿಯೇ ಒರ್ವ ಪ್ರಧಾನ ಸಂಶೋಧಕನೂ, ವಾಸ್ತುಶಿಲ್ಪಕಲಾ ಪ್ರವೀಣನೂ, ಪ್ರಾಕ್ತನ ವಿಚಾರ ವಿಶಾರದನೂ, ಎಂದು ಮೊದಲಾಗಿ ಹೆಸ

ರಾಂತ ಗಣ್ಯ ಅಧಿಕಾರಿಯಾಗಿ ಮೆರೆದನು. ಸರಕಾರದಿಂದ ಅವನಿಗೆ ಆಗಿಂದಾಗ್ಗೆ ಗೌರವ ಮನ್ನಣೆಗಳೂ ಸಂದುವು. ಭಾರತ ಸರಕಾರದ ವಿದ್ಯೆ ಮತ್ತು ಪರಿಶೋಧನಾ ತಜ್ಞ Sir. W. W. Hunter ಇವನಂಥಾ ಹಲವು ಮೇಧಾವಿಗಳ ಪ್ರಶಂಸೆಗೂ ಪಾತ್ರನಾದನು.

Benjamin Rice ಇವನು ಕನ್ನಡ ಬೈಬಲ್ ಸಾಹಿತ್ಯದ ಮಟ್ಟಿಗೆ ಎಷ್ಟು ತನ್ನ ಪಾಲಿನ ಕೆಲಸವನ್ನು ಮಾಡಿದ್ದಾನೆಂಬುದನ್ನು ಕುರಿತು ಮಾತ್ರ ಈ ಭಾಗದಲ್ಲಿ ಹೇಳಲಾಗಿದೆ. ಅವನ ಬೈಬಲ್ ಬರೆವಣಿಗೆಗಳು ಕಿರುಹೊತ್ತಗೆಗಳು ಮತ್ತು ಪಠ್ಯ ಪುಸ್ತಕಗಳ ರೂಪದಲ್ಲಿ ನಾಡೆಲ್ಲಾ ಹಬ್ಬಿವೆ. ಹಲವು ಬರೆವಣಿಗೆಗಳು ಲೇಖನಗಳ ರೂಪದಲ್ಲಿ "ಕನ್ನಡ ಸಮಾಚಾರ, ಅರುಣೋದಯ, ವಾಗ್ವಿಧಾಯಿನಿ" ಇತ್ಯಾದಿ ಪತ್ರಿಕೆಗಳಲ್ಲೂ ತುಂಬಿವೆ.

**೩. ಬೆಂಜಾಮಿನ್ ರೈಸ್ ಇವನ್ನ ಮೊದಲನೇ ಗ್ರಂಥ "ಲೋಕಚರಿತೆ" :—**

Benjamin Lewis Rice ಇವನು ಕ್ರಿ.ಶ. 1846 ಕ್ಕಿಂತ ಹಿಂದೆ ಒಂದೆರಡು ಲಘು ಬರೆಹವನ್ನು ಕಿರುಹೊತ್ತಗೆಯ ರೂಪದಲ್ಲಿ ಬರೆದಿದ್ದು ಅನಂತರ ಅವನ ಪ್ರಸಿದ್ಧವಾದ "ಲೋಕಚರಿತವು" ಬೆಳಕಿಗೆ ಬಂತು. 143 ಪುಟಗಳ ಈ ಪುಸ್ತಕವು ಆ ಕಾಲದಲ್ಲಿ ಕ್ರೈಸ್ತ ಗುಡಿಗಳಲ್ಲೂ ಶಾಲೆಗಳಲ್ಲೂ ಉಪಯೋಗಿಸಲ್ಪಟ್ಟಿತ್ತು. "ಲೋಕ ಸೃಷ್ಟಿ ಮೊದಲ್ಗೊಂದು ಜಲಪ್ರಳಯದ ಮಟ್ಟಿಗೂ ವುಂಟಾದುದು—ಕ್ರಿ.ಪೂ. 4004 ರಿಂದ 2948 ರ ವರೆಗೆ" ಎಂದು ಮೇಲ್ಪುಟದಲ್ಲಿ ಹೇಳಿದೆ. ಈ ಗ್ರಂಥದ ಮೊದಲ ಕೆಲವು ಪಂಕ್ತಿಗಳು ಹೀಗಿವೆ :—

"ಮೊದಲು ಭೂಮಿಯು ಹಾಳಾಗಿಯೂ ಬೀಳಾಗಿಯೂ ಇತ್ತು. ಅದರ ಮೇಲ್ಭಾಗವು ಇನ್ನು ನೆಟ್ಟಗೆ ಮಾಡಲ್ಪಡದೆ ಇದ್ದುದರಿಂದಲೂ ಮರ ಪಲ್ಯ ಮೊದಲಾದುವುಗಳು ನಿರ್ಮಾಣ ಮಾಡಲ್ಪಡದೆ ಇದ್ದುದರಿಂದಲೂ ಈಗಿರುವ ಅಂದವು ಆಗ ಇರಲಿಲ್ಲವು. ಭೂಮಿಯು ಅಪರೂಪಕವಾಗಿಯೂ ಬರೇದಾಗಿಯೂ ಇತ್ತು.

"ಆಗಲು ದೇವರಾತ್ಮನು ಜಲಗಳ ಮೇಲೆ ಚಲಿಸುತ್ತಾ ಇದ್ದನು.

"ಹಿಂದೂ ಪುರಾಣಗಳಲ್ಲಿ ಲೋಕದ ಸೃಷ್ಟಿಯನ್ನು ಕುರಿತು ಅನೇಕ ಕಲ್ಪನಾ ಕಥೆಗಳು ಇದ್ದರೂ ಸೃಷ್ಟಿಸುವ ಕಾಲದಲ್ಲಿ ದೇವರಾತ್ಮನು ನೀರಿನ ಮೇಲೆ ಚಲಿಸಿದನೆಂಬುವ ಕಾರ್ಯವನ್ನು ಅವುಗಳಲ್ಲಿ ಬರೆದಿದ್ದಾರೆ. ಮನುಸ್ಮೃತಿ, ಅಧ್ಯಾಯ 10ನೇ ಶ್ಲೋಕದಲ್ಲಿ ಹೇಳಿರುವದೇನೆಂದರೆ, ಶ್ಲೋಕ :

"ಆಪೋನಾರಾ ಇತಿ ಪ್ರೋಕ್ತಾ ಆಪೋ ವೈನರಸೂನವಃ
ತಾಯದಸ್ಯಾಯನಂ ಪೂರ್ವಂ ತೇನ ನಾರಾಯಣ ಸ್ಮೃತಃ

[ಟೀಕು—ಜಲಗಳು ನರಯೆಂಬ ದೇವರಾತ್ಮನಿಂದ ಹುಟ್ಟಿದ ಕಾರಣ ಅವುಗಳಿಂದ ನಾರಯೆಂಬ ಹೆಸರುಂಟು. ಆ ಜಲಗಳು ಆತನಿಗೆ ಪೂರ್ವದಲ್ಲಿ ಪ್ರವರ್ತಿಸುವ ಸ್ಥಳವಾಗಿದ್ದುದರಿಂದ ಆತನಿಗೆ ನಾರಾಯಣ—ಅದೇನೆಂದರೆ

ನೀರಿನಲ್ಲಿ ಪ್ರವರ್ತಿಸುವನೆಂಬ ಅರ್ಥವುಂಟು.]

"ದೇವರು ಆರು ದಿವಸಗಳಲ್ಲಿ ಸಮಸ್ತವನ್ನೂ ನಿರ್ಮಿಸಿದನು."

ಹೀಗೆ ಪುರಾಣೋಕ್ತ ವಿಚಾರಗಳನ್ನೊಡಗೊಂಡು ಜನ ಸಾಮಾನ್ಯರಿಗೆ ಸುಲಭದಲ್ಲಿ ಅರ್ಥವಾಗುವಂತೆ ಬರೆದಿದ್ದಾನೆ. ಅಲ್ಲಲ್ಲಿ ಪ್ರತಿಯೊಂದು ವಿಷಯದ ಮೇಲೆ Chaotic state of Earth, Agency of spirit, Hindu tradition ಎಂದು ಮೊದಲಾಗಿ ಇಂಗ್ಲಿಷ್‌ನಲ್ಲಿ ಶಿರೋನಾಮೆಗಳನ್ನೂ ಕೊಟ್ಟಿದ್ದಾನೆ.

"ಹಿಂದೂಜನರ ಪುರಾಣಗಳಲ್ಲಿ ಜಲಪ್ರಳಯವನ್ನು ಕುರಿತು ಸಮಾಚಾರವುಂಟು," ಎಂದು ಅದಕ್ಕೆ ಆಧಾರವಾಗಿ ಭಾಗವತದಿಂದ ಶ್ಲೋಕಗಳನ್ನು ಕೊಡುತ್ತಾನೆ. ಮುಂದುವರಿಯುತ್ತಾ—

> "ರಾಜ್ಯವು ಯೋಹೋವನದು. ಆತನು ಜನೋಗಳಿಗೆ ಅಧಿಪತಿಯಾಗಿದ್ದಾನೆ. ಆತನು ಪರಲೋಕದ ಸೈನ್ಯದಲ್ಲಿಯೂ ಭೂಮಿಯ ನಿವಾಸಿಗಳಲ್ಲಿಯೂ ತನ್ನ ಚಿತ್ತದ ಪ್ರಕಾರ ನಡಿಸುತ್ತಾನೆ. ಆತನ ಕೈಯನ್ನು ಅಭ್ಯಂತರಿಸಿವುದಕ್ಕೂ ನೀನು ಯೇನು ಮಾಡುತ್ತಿಯೆಂದು ಆತನನ್ನು ಕೇಳುವುದಕ್ಕೂ ಯಾರೂ ಇಲ್ಲ........"

ಇಲ್ಲಿ ತೋರುವ ಕನ್ನಡದ ಶೈಲಿಯು ಅಂದಿನದು; ಕನ್ನಡವನ್ನು ಹೊಸತಾಗಿ ಕಲಿತ ಒರ್ವ ಐರೋಪ್ಯಾ ವಿದ್ವಾಂಸನದು. ಇದರಲ್ಲಿ Psalm ೨೨ನೇ ನುಡಿಯನ್ನು ಪದ್ಯರೂಪದಲ್ಲಿಯೇ ಕನ್ನಡಕ್ಕೆ ಭಾಷಾಂತರಿಸಿದ್ದಾನೆ. ಈ ಪುಸ್ತಕದ ಉದ್ದಕ್ಕೂ ಹಿಂದೂಮತಕ್ಕೆ ಸಂಬಂಧಿಸಿದ ವಿಷಯಗಳನ್ನು ಸಂಸ್ಕೃತ ಶ್ಲೋಕಗಳ ಸಮೇತವಾಗಿ ಚಾರಿತ್ರಿಕ ಆಧಾರವೋ ಎಂಬಂತೆ ಅಲ್ಲಲ್ಲಿ ಕೊಡುತ್ತಾ ಹೋಗಿದ್ದಾನೆ.

**೪. ಬೈಬಲ್ ಸಾಹಿತ್ಯಕ್ಕೆ ಬಿ. ಎಲ್. ರೈಸ್ ಇವನ ಕಾಣಿಕೆಗಳು :—**

Rev. Benjamin L. Rice ಇವನು ತನ್ನ ಸಾಹಿತ್ಯ ವ್ಯಾಸಂಗದ ಮಧ್ಯೆ ಬೈಬಲ್ ಸಂಬಂಧವಾಗಿ ಕೆಲವು ಕಿರು ಹೊತ್ತಗೆಗಳನ್ನು ಬರೆಯುತ್ತಲೇ ಇದ್ದನು. ಅಂಥವುಗಳಲ್ಲಿ ಅವನು 1850 ರಲ್ಲಿ ಬರೆದ "ಚಿಕ್ಕವರು ಮೊದಲಾಗಿ ಮಾಡತಕ್ಕ ವೇದಬೋಧನೆ" ಎಂಬ 38 ಪುಟಗಳ ಹೊತ್ತಗೆಯು ಅನಂತರ ಎರಡೋ ಮೂರೋ ಬಾರಿ ಪುನರ್ಮುದ್ರಣವಾಯಿತು. John Reid,George Weigle ಮೊದಲಾದವರು ಆಗ ಕನ್ನಡದಲ್ಲಿ "ಕ್ರೈಸ್ತಗೀತೆ"ಗಳನ್ನು ಬರೆಯಲಾರಂಭಿಸಿದ್ದರು. ಅದೇ ರೀತಿ Rev. Rice ಇವನೂ ಕೆಲವು ಗೀತೆಗಳನ್ನು ರಚಿಸಿದ್ದನು, 1847 ರ ಕಾಲದಲ್ಲಿ Weigle ಮತ್ತು Moegling ಇವರು ಬರೆದ 150ಪುಟಗಳ "ಕ್ರೈಸ್ತ ಗೀತೆಗಳು" ಎಂಬುದಾಗಿದ್ದ ಕವನಗಳ ರೀತಿಯಲ್ಲಿ B. L. Rice ಇವನೂ ಕೆಲವನ್ನೂ ಬರೆದಿದ್ದನು. John Reid ಮತ್ತು George Weigle ಇವರ ಕವನಗಳ ರಚನಾ ಕ್ರಮವು 130 ವರ್ಷಗಳಿಗೆ ಹಿಂದಿನ ಆ ಕಾಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಆದ ಒಂದು ದೊಡ್ಡ ಬದಲಾವಣೆಯೆಂದೇ ಹೇಳಬಹುದು. ಕ್ರೈಸ್ತಗುಡಿಗಳಲ್ಲಿ ಹಾಡಲು ತಕ್ಕುದಾದಂತೆ ಮತ್ತು ಇಂಗ್ಲಿಷ್ ಹಾಡುಗಳ ಬರೆಹಗಳ ಮಟ್ಟದಲ್ಲೇ ಬರೆದ ಆ ಕವನ

ಗಳಲ್ಲಿ ಒಂದರ ಕೆಲವು ಪಂಕ್ತಿಗಳನ್ನು ಆ ಸಂಕಲನದ 63 ನೇ ಪುಟದಿಂದ ಎತ್ತಿ ಕೆಳಗೆ ಕೊಡಲಾಗಿದೆ.*

" ಪಾಪದ ಉಂನತ
ಸ್ಥಾನದಿಂದಿಳಿದ
ಸರ್ವಪತಿ
ಅಗಲಿ ತಂದೆಯ
ಜಗತ್ತಿಗೋಸುಗ
ರಕ್ತವ ಚೆಲ್ಲಿದ
ಪರ್ವತದಿ.

——

ನೀತಿಯ ದೇವರೆ
ಪ್ರೀತಿಯ ಮಾಡಿದೆ
ನರರಿಗೆ
ಶಾಪವ ಸೈರಿಸಿ
ತಾಪವ ತಾಳಿದಿ
ಪಾಪಗಳಾ ಪರಿ
ಹಾರಿಸಿದೆ.

——

ಪ್ರಿಯದೇವ ವಾಕ್ಯದೊ
ಯೋಗ್ಯ ಸ್ತೋತ್ರ ನಿನಗೆಂದು
ನಿನ್ನ ಹಾಲು ಕುಡಿದೆ,
ನಿನ್ನ ಅನ್ನ ಭಕ್ಷಿಸೋನು
ಕ್ಷೇಮಕರತಾಪಥಿ
ನಮ್ಮ ಆತ್ಮಕೀಯುಕ್ತಿ

——

ನೀನು ಶತ್ರು ಬಾಣವ
ಹಿಮ್ಮೆಟ್ಟಿಸುವಂಥದಾರು
ನೀನು ದಿವ್ಯ ಖಡಗ
ನನ್ನ ಕೈಗೆ ಜೇಷ್ಟವಾರು
ಉಕ್ಕಿಗಿಂತ ಯುದ್ಧದಿ
ನೀನು ಪಾದವಾಗಿದ್ದಿ.

* ಈ ಗ್ರಂಥದ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಡಲಾಗಿದೆ.



ಹೀಗೆ ಅಂದಿನ ವಿದ್ವಾಂಸರ ಪ್ರಯತ್ನವು ಹರಿದಿತ್ತು. ಅದರ ಮುದ್ರಣಕ್ಕೆ ಉಪಯೋಗಿಸಿದ ಲಿಪಿಯ ಅಚ್ಚು ಮೊಳೆಗಳು ಕೈಬರೆಹದ ರೀತಿಯಲ್ಲಿ ಇವೆಯಲ್ಲದೆ ಕೆಲವು ಗೆರೆಗಳೂ ಪದಗಳೂ ಅಸ್ಪಷ್ಟವಾಗಿವೆ. ಆ ಕಾರಣದಿಂದ ಮೇಲೆ ಕೊಟ್ಟ ಪದ್ಯಭಾಗದ ಕೆಲವು ಚರಣಗಳು ಅರ್ಥದಲ್ಲಿ ಒಂದಕ್ಕೊಂದು ಸಂಬಂಧವಿಲ್ಲದಂತೆ ತೋರುತ್ತವೆ. ಹೇಗೂ B. L. Rice ಇವನೂ ಈ ದಿಶೆಯಲ್ಲಿ ತನ್ನ ಪ್ರಯತ್ನವನ್ನು ಇತರರನ್ನನುಸರಿಸಿ ಮುಂದುವರಿಸಿದನು.

1854 ರಲ್ಲಿ ನಿಯೋಜಿತವಾದ ಕನ್ನಡ ಬೈಬಲ್ ಗ್ರಂಥಗಳ ಪರಿಷ್ಕರಣಾ ಸಮಿತಿಯಲ್ಲಿ Benjamin Rice ಇವನೂ ಓರ್ವ ಸದಸ್ಯನಾಗಿದ್ದನೆಂಬುದನ್ನೂ ಇಲ್ಲಿ ಸ್ಮರಿಸಬೇಕಿದೆ, ಹೀಗೆ ಈ ದೇಶಕ್ಕೆ ಬಂದು ಹತ್ತು ವರ್ಷಗಳಲ್ಲಿಯೇ ಕನ್ನಡದಲ್ಲಿ ಓರ್ವ ಗಣ್ಯ ಬೈಬಲ್ ಸಾಹಿತಿಯೆಂದು ಅವನು ಹೆಸರು ಗಳಿಸಿದನು, ಬೈಬಲ್ ಪರಿಷ್ಕರಣೆ ಸಮಿತಿಯು 1856 ರಲ್ಲಿ ಪ್ರಕಟಿಸಿದ "ಮೋಸೆಯ ವಿರಚಿತವು" ಎಂಬ ಬೈಬಲ್ ಗ್ರಂಥವನ್ನು ಪುನಃ B L. Rice ಇವನು ಪರಿಷ್ಕರಿಸಿ 1861 ರಲ್ಲಿ ಪುನರ್ಮುದ್ರಿಸಲು ಕಾರಣನಾದನು. ಅದೇ ವರ್ಷ Bible Selections ಎಂಬುದಾಗಿ ಚಿಕ್ಕ ಬೈಬಲ್ ಸೂಕ್ತಿಗಳ ಸಂಗ್ರಹವನ್ನೂ ಬರೆದನು.

1860 ರಲ್ಲಿ ಬೈಬಲನ್ನು ಪ್ರಶ್ನೋತ್ತರ ರೂಪದಲ್ಲಿ ಬರೆದದ್ದು Rev. Rice ಇವನ ಇನ್ನೊಂದು ಅಪೂರ್ವ ಸಾಹಸವಾಗಿದೆ. ಅದೇ ವರ್ಷ ಅವನು ಹೊಸ ಒಡಂಬಡಿಕೆ (New Testament) ಎಂದು ಬರೆದದ್ದೂ 1865 ರಲ್ಲಿ ಮತ್ತು 1867 ರಲ್ಲೂ ಪುನರ್ಮುದ್ರಣವಾಗಿ ಎಲ್ಲೆಲ್ಲೂ ಪ್ರಚಾರವಾದುವು. Rev. C. Campbell ಇವನೊಡನೆ ಸೇರಿ B. L. Rice ಇವನು, George Weigle ಇವನು 1848 ರಲ್ಲಿ ಬರೆದಿದ್ದ ಕನ್ನಡ ಬೈಬಲನ್ನು ಪರಿಷ್ಕರಿಸಿ 1860 ರಲ್ಲಿ ಅದನ್ನು ಪುನರ್ಮುದ್ರಿಸಲಿಕ್ಕೆ ಕಾರಣನಾದನು.

**೫. ಬೆಂಜಾಮಿನ್ ರೈಸ್ ಇವನಿಂದ ಇನ್ನೂ ಕೆಲವು ಬೈಬಲ್ ಕೃತಿಗಳು :—**

Benjamin Rice ಇವನು 1860 ರಿಂದ ಮೊದಲ್ಗೊಂಡು ಬಹು ದೊಡ್ಡ ಕನ್ನಡ ವಿದ್ವಾಂಸನಾಗಿ ಶೋಭಿಸಿದನು. ಅವನ ಬೈಬಲ್ ಮತ್ತು ಪಠ್ಯಪುಸ್ತಕಗಳ ಬರೆವಣಿಗೆಯು ಮೇರೆಯಿಲ್ಲದಂತೆ ಹರಿಯಿತು. ಯಾವ ದೇಶೀಯ ವಿದ್ವಾಂಸನನ್ನೂ ಮೀರಿದ ಪಾಂಡಿತ್ಯವನ್ನು ಗಳಿಸಿ ಸರಕಾರದ ಗೌರವಕ್ಕೂ ಪಾತ್ರನಾದನು. 1862 ರಲ್ಲಿ ಅವನು "ಅರುಣೋದಯ" ಪತ್ರಿಕೆಯನ್ನು ಸ್ಥಾಪಿಸಿ ತನ್ನ ಬರೆವಣಿಗೆಯಿಂದ ಜನರ ವಿಚಾರ ಜಾಗೃತಿಯನ್ನು ಹೆಚ್ಚಿಸಿದನು. "ಹಿಂದೂ ಮತವು ಜನರ ಬುದ್ಧಿಯನ್ನು ಕತ್ತಲಾಗಿ ಮಾಡಿದೆ" ಎಂಬುದನ್ನು ಆಧಾರಪೂರ್ವಕವಾಗಿ ಪ್ರತಿಪಾದಿಸಿದನು. Errors of the most monstrous kind are taught in in the Hindu Shastras........Hindus constantly reason on utterly false principles" ಎಂಬುದಾಗಿ ಸಿದ್ಧಾಂತಪಡಿಸುತ್ತಿದ್ದನು. Their minds are so filled with the jungle of falsehood

ಎಂಬುದಾಗಿಯೂ ಶೃತಪಡಿಸಿದನು.

"ಅರುಣೋದಯ"ದಲ್ಲಿ ಬೈಬಲ್ ವಿಚಾರ ಲೇಖನಗಳಲ್ಲದೆ ಸಾಹಿತ್ಯ ಮತ್ತು ಲೌಕಿಕ ವಿಚಾರವಾಗಿಯೂ ಉತ್ತಮ ಲೇಖನಗಳಿರುತಿದ್ದುವೆಂದು ಹಿಂದೆಯೇ ಹೇಳಲಾಗಿದೆ. 1865 ರಲ್ಲಿ B. L. Rice ಇವನು "ವೇದಸಾರ" ಎಂಬುದಾಗಿ ಬರೆದ ೨೮ ಪುಟಗಳ ಕಿರುಹೊತ್ತಗೆಯು 1867 ರಲ್ಲಿ "Essence of Bible" ಎಂಬ ಹೆಸರಿನಿಂದ ಇನ್ನಷ್ಟು ದೀರ್ಘವಾದ ಕನ್ನಡ ಪ್ರಬಂಧವಾಗಿ ಪುನರ್ಮುದ್ರಣವಾಯಿತು. 1870 ರಲ್ಲಿ "ಬಾಲಗೀತ" ಅಥವಾ Hymns for Children ಎಂದು ಬರೆದ ಅವನ ಕನ್ನಡ ಬೈಬಲ್ ಗೀತೆಗಳು ಪುನಃ ಒಂದೆರಡು ಬಾರಿ ಮುದ್ರಣವಾಗಿ ಶಾಲೆಗಳಲ್ಲೂ ಕ್ರೈಸ್ತ ಗುಡಿಗಳಲ್ಲೂ ಉಪಯೋಗಿಸಲ್ಪಟ್ಟಿತ್ತು.

Benjamin Rice ಇವನು "ಬಾಲ್ಯೋಪದೇಶ" ಎಂಬುದಾಗಿ ಚಿಕ್ಕ ಒಂದು ಕೃತಿಯನ್ನು 1850 ರಷ್ಟು ಹಿಂದೆಯೇ ಬರೆದಿದ್ದನು. ಅದು ಅನಂತರ ಆರು ಬಾರಿ ಪುನರ್ಮುದ್ರಣವಾಯಿತೆಂದರೆ ಅದರ ವಿಶಿಷ್ಟತೆ ಏನಿತ್ತೆಂಬುದನ್ನು ಊಹಿಸಿಕೊಳ್ಳಬಹುದು. ಹಿರಿಯರಿಗೂ ಕಿರಿಯರಿಗೂ ತಕ್ಕುದಾದ ಈ ಗ್ರಂಥದ ಕಡೇ ಆವೃತ್ತಿಯ ೨೦೦ ಪುಟಗಳಷ್ಟು ದೊಡ್ಡದಾಗಿ ಪಟ್ಟಿಯು ಕೊಡಲ್ಪಟ್ಟು ಬಹು ಜನಪ್ರಿಯವಾದ ಪಠ್ಯಪುಸ್ತಕವಾದ ಕ್ರೈಸ್ತಗುಡಿಗಳಲ್ಲೂ ಶಾಲೆಗಳಲ್ಲೂ ಉಪಯೋಗಿಸಲ್ಪಟ್ಟಿತ್ತು. ಅದರಲ್ಲಿ Rev. Rice ಇವನ ನಿರೂಪಣಾ ಕ್ರಮವು ಹೀಗೆ ಸರಳ ಸುಂದರವಾಗಿ ಹರಿದಿದೆ :—

"ಸೂರ್ಯನು ಮುಣುಗುವುದನ್ನು ಕುರಿತದ್ದು :—

"ಚಿಕ್ಕವರೆ, ಸೂರ್ಯನನ್ನು ನೋಡಿರಿ. ಅದಕ್ಕೆ ಬಹು ಪ್ರಕಾಶವುಂಟು. ಈಗ ಸಾಯಂಕಾಲವಾಯಿತು. ಸೂರ್ಯನು ಮುಣುಗುತ್ತಾ ಇದ್ದಾನೆ. ಬೆಳಕು ಕಡಿಮೆ ಆಗುತ್ತಾ ಇದೆ. ಇಗೋ! ಕೆಳಗೆ ಹೋಗಿದ್ದಾನೆ. ಕತ್ತಲಾಯಿತು. ಸೂರ್ಯನು ತಿರುಗಿ ಕಾಣಿಸುವುದಿಲ್ಲವೆಂದು ನೆನಸುತ್ತೀರೊ? ಹಾಗಲ್ಲ, ನಾಳೆ ಬಹು ಮಹಿಮೆಯಾಗಿ ಹುಟ್ಟಿ ತಿರುಗಿ ಪ್ರಕಾಶಿಸುವನು.

"ಹೀಗೆ ನೀವು ಪಾಪವನ್ನು ಬಿಟ್ಟು ದೇವರ ಸಹಾಯದಿಂದ ನೀತಿವಂತರಾಗಿ ನಡೆದರೆ ಈ ಲೋಕದಲ್ಲಿ ನಿಮ್ಮ ಒಳ್ಳೆ ನಡತೆ ಮತ್ತೊಬ್ಬರಿಗೆ ಸನ್ಮಾರ್ಗ ತೋರಿಸುವಂಥಾ ಬೆಳಕಾಗಿರುವದು, ಮತ್ತು ಮರಣಕಾಲವು ಬರುವಾಗ ಕತ್ತಲಾದ ಸಮಾಧಿಯಲ್ಲಿ ಇರಿಸಲ್ಪಟ್ಟಾಗ್ಯೂ ದೇವರು ನಿಮ್ಮನ್ನು ಅದರಿಂದ ಎಬ್ಬಿಸಿ ಪರಲೋಕದಲ್ಲಿ ಸೂರ್ಯನ ಹಾಗೆ ಪ್ರಕಾಶವುಳ್ಳವರಾಗಿ ಮಾಡುವನು."

ಇಂಥಾ ನೀತಿ ಪ್ರಚೋದಕವಾದ ವಿಷಯಗಳನ್ನು ಕೊಟ್ಟ ಈ ಗ್ರಂಥದ ಮೇಲ್ಪುಟದಲ್ಲಿ ಅದನ್ನು "ರೈಸ್ ಅಯ್ಯನವರಿಂದ ಬರೆಯಲ್ಪಟ್ಟುದು" ಎಂಬುದಾಗಿ ಹೇಳಿದೆ. ಅದೇ ರೀತಿ ಅವನು ಬರೆದ "ಧರ್ಮಜ್ಞಾನ ಮತ್ತು ಸಮಾಜಜ್ಞಾನ" ಎಂಬ 64 ಪುಟದ ಚಿಕ್ಕ ಹೊತ್ತಗೆಯಲ್ಲೂ ಪಾಶ್ಚಾತ್ಯ ಸಮಾಜ ಜ್ಞಾನದ ಬೈಬಲ್ಲಿನಲ್ಲಿ ನೀತಿ ವಾಕ್ಯಗಳ ಸಮೇತವಾಗಿ ಓದುಗರ ದೃಷ್ಟಿಯನ್ನು ಹರಿಯಿಸಿದ್ದಾನೆ.

## ೬. ‘ ರೈಸ್ ಅಯ್ಯನವರು ’ ಇನ್ನೂ ಹಲವು ಬೈಬಲ್ ಕೃತಿಗಳನ್ನು ರಚಿಸಿದರು :—

Benjamin Rice ಇವನ “ ವೇದಸಾರ ” ಎಂಬ ಕಿರುಹೊತ್ತಗೆಯೂ ಬೈಬಲ್ ಸೂಕ್ತಿಗಳಿಂದ ಪುಟಗಳು ಹೆಚ್ಚಿಸಲ್ಪಟ್ಟು ಪುನರ್ಮುದ್ರಣವಾಗುತ್ತಲೇ ಇದ್ದಿತು. 1874 ರಲ್ಲಿ ಅವನು ಹಿಂದೆಯೇ ಇತರರು ಬರೆದಿದ್ದ “ ದೇವವಾಕ್ಯದ ದ್ವಿಪಂಚಾಶತೌ ನವ ನಿರ್ಧಾರ ” ಈ ಪುಸ್ತಕವನ್ನು ಪರಿಷ್ಕರಿಸಿ ಪ್ರಕಟಿಸಿದನಲ್ಲದೆ ಅದು ಪುನಃ 1881 ರಲ್ಲಿ ಎರಡನೇ ಬಾರಿಗೆ ಅಚ್ಚಾಗಿ ಹೊರಬಂತು. ಇದೇ ವೇಳೆಗೆ ಅವನು Beschi Costanza ಇವನೊಡನೆ ಸೇರಿ 119 ಪುಟಗಳ “ ಪಾರಮಾರ್ಥಗುರುವಿನ ಕತೆ ” ಇವನ್ನು ಕನ್ನಡದಲ್ಲೂ ಇಂಗ್ಲೀಷ್‌ನಲ್ಲೂ ಬರೆದು ಪ್ರಕಾಶಪಡಿಸಲಿಕ್ಕೆ ಕಾರಣನಾದನು.

ಇಷ್ಟೇ ಅಲ್ಲ. B. L. Rice ಇವನು ತನ್ನ ಸಹೋದ್ಯೋಗಿ ಕ್ರೈಸ್ತ ವಿದ್ವಾಂಸರಿಗೂ ಬೈಬಲ್ ಗ್ರಂಥಗಳನ್ನು ಕನ್ನಡದಲ್ಲಿ ಬರೆಯಲು ನೆರವಾದನೆಂಬುದಕ್ಕೆ ಎಷ್ಟೋ ಉದಾಹರಣೆಗಳಿವೆ. 1845 ರಿಂದ 1870ರ ವರೆಗಿನ ಕಾಲು ಶತಮಾನದ ಅವಧಿಯಲ್ಲಿ ಈ “ ರೈಸ್ ಅಯ್ಯನವರು ” ಶಾಲೆಗಳಿಗಾಗಿ ಬರೆದ ಪಠ್ಯಪುಸ್ತಕಗಳಲ್ಲಿ ಹಲವನ್ನು ಕ್ರೈಸ್ತ ಗುಡಿಗಳಲ್ಲೂ ಉಪನ್ಯಾಸ ಕಾಲದಲ್ಲಿ ಉಪಯೋಗಿಸಿದ್ದಾರೆ. ಅಂಥಾ ಪುಸ್ತಕಗಳಲ್ಲೆಲ್ಲಾ ಬೈಬಲ್ ಸಂಬಂಧವಾದ ಕತೆಗಳೂ, ಪ್ರಸಂಗಗಳೂ, ಗೀತೆಗಳೂ, ಹಿತೋಕ್ತಿಗಳೂ ಎಂದು ನೂರಾರನ್ನು ಅವನು ಉಲ್ಲೇಖಿಸಿ ಕನ್ನಡ ಪಾಠಬೋಧೆ ಮತ್ತು ತತ್ವಗಳ ಛಾಯೆಯನ್ನು ಯಥೇಚ್ಛವಾಗಿ ಬೀರಿದ್ದಾನೆ.

ಮಂಗಳೂರು ಬಾಸೆಲ್ ಮಿಷನ್‌ನವರಿಂದ 1881 ರಲ್ಲಿ ಪ್ರಕಟವಾದ ಹೊಸ ಒಡಂಬಡಿಕೆ ಅಥವಾ New Testament ಎಂಬ 897 demy ಪುಟಗಳ ಗ್ರಂಥವನ್ನು C. A. Josiah ಎಂಬ ದೇಶೀಯ ಕ್ರೈಸ್ತನು ಸಂಪಾದಿಸಿದ್ದನು. ಇದು ನಿಜಕ್ಕೂ ಅತ್ಯುತ್ತಮ ವರ್ಗದ ಕನ್ನಡ ಬೈಬಲ್ ಗ್ರಂಥವಾಗಿದ್ದು ಅದರ ಮೇಲ್ಪುಟದಲ್ಲಿ ಅದು Saint Mathew ಇವನ ಸೂಕ್ತಿಗಳ ವ್ಯಾಖ್ಯಾನದ ಒಂದು ಭಾಗವು ಕೂಡಿದೆಯೆಂಬುದಾಗಿ ತಿಳಿಸಿದೆ :—

“ ಘನ ಬಿ. ರೈಸ್ ಅಯ್ಯನವರ ಕೈಕೆಳಗೆ ಲಂಡನ್ ಮಿಶ್ಯನ್ ಉಪದೇಶಿ ಯೋಸೀಯನವರಿಂದ ಕನ್ನಡದಲ್ಲಿ ಟೀಕಿಸಲ್ಪಟ್ಟುದು.

“ ಹೊಸ ಒಡಂಬಡಿಕೆಯ ಪೀಠಿಕೆ, ಮತ್ತಾಯನ (Saint Mathew) ಸುವಾರ್ತೆಯ ಪೀಠಿಕೆ, ಮತ್ತಾಯನು ಬರೆದ ಸುವಾರ್ತೆ.”

ಎಂಬುದಾಗಿ ಹೇಳಿದೆ. Benjamin Rice ಇವನು ತನ್ನ ಬಾಳಿನ ಬಹು ಕಾಲವನ್ನು ಸಾಹಿತ್ಯ ಮತ್ತು ಚಾರಿತ್ರಿಕ ಸಂಶೋಧನೆಗಾಗಿಯೇ ಕಳೆದುದರಿಂದ ಮತ್ತು ಅವನು ತನ್ನ ಕಡೆ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಹಳೇ ಮೈಸೂರು ರಾಜ್ಯ ಸರಕಾರದ ಒರ್ವ ಉನ್ನತ ಅಧಿಕಾರೀ ವರ್ಗಕ್ಕೆ ಸೇರಿದುದರಿಂದ ಅವನು ಸುಮಾರು 1870 ರಿಂದೀಚೆಗೆ ಬೈಬಲ್ ಬರೆವಣಿಗೆಯನ್ನು ಕಡಿಮೆ ಮಾಡಿ ಸಾಹಿತ್ಯ ಸಂಶೋಧನೆಗೆ ತನ್ನ ಸಮಯವನ್ನು ವಿನಿಯೋಗಿಸಿದನು, ಹಾಗಿದ್ದರೂ ಅವನು ಇತರ ಶ್ರೇಷ್ಠ

ಬೈಬಲ್ ಸಾಹಿತಿಗಳಿಗೆ ಸರಿ ಸಮಾನವಾಗಿ ಕನ್ನಡದಲ್ಲಿ ಹಲವು ಅಮೂಲ್ಯ ಬೈಬಲ್ ಕೃತಿಗಳ ರಚನೆಗೆ ಕಾರಣನಾದನು.

**೭. ಕನ್ನಡದ ಕಣ್ಮಣಿ—ವೀರ ಕನ್ನಡಿಗ : ಫರ್ನಾಂಡಿಸ್ ಕಿಟ್ಟೆಲ್ :—***

Rev. Fernandiz Kittel ಇವನಂಥಾ ಬಹು ಶ್ರುತನಾದ ಕನ್ನಡ ವಿದ್ವಾಂಸನು ದೇಶೀಯ ಮತ್ತು ವಿದೇಶೀಯರ ಪೈಕಿ ಆ ವರೆಗೂ ಯಾರೂ ಇರಲಿಲ್ಲ ವೆಂದರೆ ಅತಿಶಯೋಕ್ತಿಯಾಗಲಾರದು. ಇವನು ಕನ್ನಡ ಸಾಹಿತ್ಯದ ಬಗ್ಗೆ ಕೈಕೊಂಡ ಉದ್ಧಾಮ ಕಾರ್ಯಭಾರದ ಬಗ್ಗೆ ಮುಂದಿನ ಭಾಗದಲ್ಲಿ ವಿಶದವಾಗಿ ಹೇಳಲಾಗು ವುದು. ಇವನು Rev. Garrett ಮತ್ತು Rev. Rice ಇವರಂತೆ ಸರಕಾರದ ಯಥೇಚ್ಛ ಆಶ್ರಯವನ್ನು ಪಡೆದಿದ್ದವನಲ್ಲ; Dr. Carey, George Weigle ಮತ್ತು Rev. Moegling ಇವರಂತೆ ಕ್ರೈಸ್ತಮತ ಪ್ರಚಾರಸಂಸ್ಥೆಗಳಿಂದ ವಿಶೇಷ ಪ್ರೋತ್ಸಾಹವನ್ನೂ ಹೊಂದಿದ್ದವನಲ್ಲ; Rev. Buher ಮತ್ತು Dr. Hands ಇವರಂತೆ ಸ್ವಂತ ಮುದ್ರಣಾಲಯಗಳನ್ನಿಟ್ಟುಕೊಂಡು ಮತಪ್ರಚಾರ ಸಂಸ್ಥೆಗಳ ಸಹಾಯಧನವನ್ನು ಆ ರೀತಿ ಹೊಂದಿದವನೂ ಅಲ್ಲ. Rev.F.Kittel ಇವನು ಬರೇ ತನ್ನ ಸ್ವಪ್ರಯತ್ನದ ಬಲದಿಂದ ಇತರರ ದೃಷ್ಟಿಯನ್ನು ತನ್ನೆಡೆಗೆ ಸೆಳೆದು ಕೊಂಡು ತನ್ನ ವಿದ್ಯಾವ್ಯಾಸಂಗದಲ್ಲಿ ಕೃತಾರ್ಥನಾದ ಒರ್ವ ಮಹಾ ತಪಸ್ವಿ ಯಾಗಿದ್ದನು.

Fernandiz Kittel ಇವನು 1832 ರ ಏಪ್ರಿಲ್ ತಿಂಗಳ 7ನೇ ದಿನ ವಾಯುವ್ಯ ಜರ್ಮನಿಯ ಓಸ್ಟ್‌ಫ್ರೈಲೆಂಡ್ ಜಿಲ್ಲೆಯ ರೆಸ್ಟರ್‌ಹಾಫ್ ಎಂಬಲ್ಲಿ ಜನಿಸಿ ದನು. ಅವನ ತಂದೆಯು ಪ್ರೊಟೆಸ್ಟೆಂಟ್ ಪಂಥಕ್ಕೆ ಸೇರಿದ್ದ ಕ್ರೈಸ್ತಗುರುವಾಗಿದ್ದನು. Fernandiz ಇವನ ಬಾಲ್ಯದ ವಿದ್ಯಾಭ್ಯಾಸವು ಜರ್ಮನಿಯ ಓರಿಚ್ ಎಂಬಲ್ಲಿ ನಡೆ ಯಿತು. ಉಚ್ಚ ಶಿಕ್ಷಣವನ್ನು ಸ್ವಿಟ್ಸರ್ಲೇಂಡಿನ ಬಾಸಿಲ್ ಮಿಷನ್ ವಿದ್ಯಾಪೀಠದಲ್ಲಿ 1850 ರ ವರೆಗೆ ನಡೆಸಿದನು. ತನ್ನ ತಂದೆಯಂತೆ ತಾನೂ ಕ್ರೈಸ್ತಮತ ಸೇವಾದೀಕ್ಷೆ ಯನ್ನು ವಹಿಸಿ 1853 ರಲ್ಲಿ ಭಾರತಕ್ಕೆ ಹೊರಟು ಮಂಗಳೂರಿನಲ್ಲಿ ಬಂದಿಳಿದನು. ಬರೇ ೨೧ ವರ್ಷ ಪ್ರಾಯದ ಆ ಯುವಕನಿಗೆ ಅಂದು ಈ ನಾಡಿನಲ್ಲಿ ಉತ್ತಮವಾದ ಭವಿಷ್ಯವೂ ವಾತಾವರಣವೂ ಕಾದಿತ್ತು. ಇಲ್ಲಿಗೆ ಬಂದ ಕೂಡಲೇ ಅವನು ಸಂಸ್ಕೃತ, ಕನ್ನಡ, ತಮಿಳು, ತುಳು, ಕೊಂಕಣಿ, ಮರಾಠಿ ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿತನು, ಮಾತ್ರವಲ್ಲದೆ ಇವುಗಳಲ್ಲೆಲ್ಲಾ ಏಕಸಮಾನವಾದ ಪಾಂಡಿತ್ಯವನ್ನು ಸಂಪಾದಿಸಿದನು. ಅಲ್ಲಿಂದನಂತರ ಅವನು 1892 ರ ವರೆಗೆ ನಲ್ವತ್ತು ವರ್ಷಗಳ ಕಾಲ ಕನ್ನಡ ಬೈಬಲ್ ಸಾಹಿತ್ಯದಲ್ಲಿ ಮಾತ್ರವಲ್ಲ, ಕನ್ನಡ ಭಾಷಾ ಶಾಸ್ತ್ರ, ಸಂಶೋಧನೆ ಇತ್ಯಾದಿಗಳಲ್ಲೂ ಅಮೋಘವಾಗಿ ದುಡಿದ ಒರ್ವ ಕರ್ಮಜೀವಿಯೆಂಬುದು ಜನಜನಿತ ವಾದ ವಿಚಾರವಾಗಿದೆ.

---

* ಇವನ ಭಾವಚಿತ್ರವನ್ನು ಬೇರೆಡೆ ಕೊಡಲಾಗಿದೆ.

Rev. Kittel ಇವನು ತನ್ನ ಪ್ರಾರಂಭದ ಹತ್ತಿಪ್ಪತ್ತು ವರ್ಷಗಳನ್ನು ಬೈಬಲ್ ಸಾಹಿತ್ಯದ ನಿರ್ಮಾಣದಲ್ಲೂ ಶಾಲಾ ಪಠ್ಯಪುಸ್ತಕಗಳ ಬರೆವಣಿಗೆಯಲ್ಲೂ ಕಳೆದನು. ಆ ಕಾಲದಲ್ಲಿ ಅವನು ಮಂಗಳೂರಿನಲ್ಲಿಯೇ ತಂಗಿದ್ದು ಅನಂತರ ಕಡೇ ಸುಮಾರು ಹದಿನೈದು ವರ್ಷಗಳ ಹವಾಮಾನದ ಕಾರಣದಿಂದಾಗಿ ಕೊಡಗಿನ ಮಡಿಕೇರಿಯಲ್ಲಿಯೇ ವಾಸಿಸಿದ್ದನು. ಉತ್ತಮ ಮತಪ್ರಚಾರಕನು ಹೇಗೋ ಹಾಗೆಯೇ ನುರಿತ ಕನ್ನಡ ವಾಗ್ಮಿಯೂ, ಸಂಸ್ಕೃತ ಮತ್ತು ಕನ್ನಡ ಪಂಡಿತನೂ, ವಿನೀತ ಗುಣಸಂಪನ್ನನೂ ಸಮಾಜ ಸುಧಾರಕನೂ ಆಗಿ ಶೋಭಿಸಿದನು. ಇವನ ಬೈಬಲ್ ಮತ್ತು ಸಾಹಿತ್ಯಗ್ರಂಥಗಳೆಲ್ಲವೂ ಇತರರ ಗ್ರಂಥಗಳಂತೆ ಕ್ರೈಸ್ತಮತ ಪ್ರಚಾರಸಂಸ್ಥೆಗಳ ಮತ್ತು ಅಂದಿನ ಸರಕಾರದ ಉದಾರ ಸಹಾಯದಿಂದಲೇ ಪ್ರಕಟವಾದುವು.

**೮. ಫರ್ನಾಂಡಿಸ್ ಕಿಟ್ಟೆಲ್ ಇವನಿಂದ ಬೈಬಲ್ ಪ್ರಸಂಗಗಳು :—**

ಕ್ರಿ. ಶ. 1853 ರಲ್ಲಿ ಈ ದೇಶಕ್ಕೆ ಬಂದ Rev. Kittel ಇವನು 1855 ರಲ್ಲಿಯೇ 'ಹೊಸ ಒಡಂಬಡಿಕೆ' ಅಥವಾ New Testament ಇದರ ಸ್ವಾರಸ್ಯವಾದ ಭಾಗಗಳನ್ನು ಆರಿಸಿ ಕನ್ನಡದಲ್ಲಿ ಬರೆಯಲು ತೊಡಗಿದ್ದೇ ಅವನ ಮೊದಲನೇ ಬೈಬಲ್ ಬರೆಹವಾಗಿದೆ, ಇದನ್ನು ಅವನು ಹೆಚ್ಚಾಗಿ ಜರ್ಮನ್ ಭಾಷೆಯ ಧರ್ಮಗ್ರಂಥಗಳಿಂದ ಹೆಕ್ಕಿ ಭಾಷಾಂತರಿಸಿದನು.

F. Kittel ಇವನು ರಚಿಸಿದ ಕಿರುಹೊತ್ತಗೆಗಳಲ್ಲಿ ಬಹು ಪ್ರಸಿದ್ಧವಾಗಿ ಸಹಸ್ರಾರು ಪ್ರತಿಗಳಂತೆ ಮಾರಾಟವಾದುವುಗಳ ಪೈಕಿ "ಸಂಸಾರ ಕ್ರಮ; ಉಭಯ ಮಾರ್ಗ; ನಂಬಿ ಜೀವಿಸಿರಿ" ಹೀಗೆ ಕೆಲವು ಪ್ರಬಂಧಗಳು ಅವನ ಧಾರ್ಮಿಕ ವಿಚಾರಕ್ಕೂ, ಉತ್ತಮವಾದ ನಿರೂಪಣೆಗೂ ಭಾಷಾಶೈಲಿಗೂ ನಿದರ್ಶನವಾಗಿದ್ದುವು. 1858 ರಿಂದ 1865 ರ ವರೆಗೆ ಇಂಥಾ ಪ್ರಬಂಧಗಳನ್ನು ಚಿಕ್ಕಪುಸ್ತಕದ ರೂಪದಲ್ಲೂ ಲೇಖನಗಳಾಗಿಯೂ ಪ್ರಕಟಿಸಿದನು. "ಡೇನಿಯಲನೂ ಅವನ ಜತೆಗಾರರೂ" ಎಂಬುದಾಗಿ 1865 ರಲ್ಲಿ ಬರೆದ ಬೈಬಲ್ ಪುಸ್ತಕವೊಂದು ಕಿರಿಯರಿಗೂ ಹಿರಿಯರಿಗೂ ಏಕ ಸಮಾನವಾಗಿ ಅಭಿರುಚಿಯನ್ನು ಹುಟ್ಟಿಸಿದ ಉತ್ತಮ ಪ್ರಬಂಧವಾಗಿತ್ತು.

1874 ರಲ್ಲಿ F. Kittel ಇವನು 'Fatalism' ಎಂಬುದರ ಮೇಲೆ ಹಿಂದೂ ಮತ್ತು ಕ್ರೈಸ್ತಧರ್ಮ ನಂಬಿಕೆಗಳ ಆಧಾರವನ್ನು ಕೊಟ್ಟು ಕೆಲವು ಪ್ರಬಂಧಗಳನ್ನು ಬರೆದನು. 1876 ರಲ್ಲಿ "ಲಿಂಗಪೂಜೆಯೆಂಬುದರ ವಿಷಯವಾಗಿ ಜರ್ಮನ್ ಭಾಷೆಯಲ್ಲಿ ಒಂದು ಕಿರುಹೊತ್ತಗೆಯನ್ನು ಬರೆದನು. "Ueber de Ursprung des Linga kultus" ಎಂಬುದಾಗಿ ಹಿಂದೂಸ್ಥಾನದಲ್ಲಿ ಪ್ರಚಲಿತವಿರುವ ಮೂರ್ತಿ ಪೂಜೆಯ ವಿಷಯವಾಗಿ ಚರ್ಚಿಸಿದ್ದನು. ಅದನ್ನೇ ಸಂಕ್ಷೇಪವಾಗಿ ಕನ್ನಡದಲ್ಲೂ ಬರೆದನು; ಅಲ್ಲದೆ ತನ್ನ ಮತಧರ್ಮದ ಆಧಾರಗಳೊಡನೆ ಈ ಆಚಾರವನ್ನು ಅದರಲ್ಲಿ ಖಂಡಿಸಿದನು.

Selections from Scripture Stories ಮತ್ತು Sufferings of Christ ಈ ಎರಡು ಚಿಕ್ಕ ಪುಸ್ತಕಗಳು 5000 ಪ್ರತಿಗಳಿಗೂ ಮೀರಿ ಮುದ್ರಣ

ವಾಗಿ ಮಾರಾಟವಾದುವು. ಬೈಬಲ್ ಕತೆಗಳು, ಪ್ರಸಂಗಗಳು ಮತ್ತು ಸೂಕ್ತಿಗಳನ್ನು ಮೊದಲಿನ ಪುಸ್ತಕದಲ್ಲೂ ಏಸುಕ್ರಿಸ್ತನ ಚರಿತ್ರೆಯನ್ನು ಸೂಕ್ಷ್ಮವಾಗಿ ಎರಡನೇದರಲ್ಲೂ ಜನಸಾಮಾನ್ಯಕ್ಕೆ ಅರ್ಥವಾಗುವಂತೆ ವಿವರಿಸಿ ತಿಳಿಗನ್ನಡ ಶೈಲಿಯಲ್ಲಿ ಬರೆದಿದ್ದನು. ಇವೆರಡೂ ಕಿರುಹೊತ್ತಗೆಗಳೂ 1870 ರ ಕಾಲದಲ್ಲಿ ಪ್ರಕಟವಾದುವು.

"ಪರಮಾತ್ಮ ಜ್ಞಾನ" ಎಂಬುದಾಗಿ ಮತ್ತೊಂದು ಚಿಕ್ಕ ಪುಸ್ತಕವೂ ಹೊರ ಬಂತು. ಅದರಲ್ಲಿ F. Kittel ಇವನು ಬೈಬಲ್‌ನಲ್ಲಿ ತಾನಿಟ್ಟ ಶ್ರದ್ಧೆ ಅಭಿಮಾನ ಗಳದೆಷ್ಟೆಂಬುದನ್ನು ಹಲವು ಹಿತೋಕ್ತಿಗಳ ಆಧಾರದಿಂದ ತೋರ್ಪಡಿಸಿದ್ದಾನೆ. ಈ ಪ್ರಬಂಧವೂ ಒಂದು ಪ್ರಸಂಗದ ರೂಪದಲ್ಲಿ ಬರೆಯಲ್ಪಟ್ಟು ಆ ಕಾಲದಲ್ಲಿ ಎಲ್ಲಾ ಕ್ರೈಸ್ತಗುಡಿಗಳಲ್ಲೂ ಅದರ ಪ್ರತಿಗಳನ್ನು ಹಂಚಲಾಗಿತ್ತು.

### ೯. ಧರ್ಮಬೋಧಕನಾಗಿ ರೆ॥ ಫರ್ನಾಂಡಿಸ್ ಕಿಟ್ಟೆಲ್ ಇವನು :—

Fernandiz Kittel ಇವನು ಇತರ ಹಲವು ಪಾಶ್ಚಾತ್ಯ ಧರ್ಮಗುರುಗಳಂತೆ ಒಂದೇ ಹಾದಿಯನ್ನು ತುಳಿದು ಹೋದವನಲ್ಲ. ತನ್ನಮತವನ್ನು ಹಿಂದೂಮತದ ಜನರಿಗೆ ಪ್ರಚಾರಮಾಡುವಾಗ ತನಗೆ ವೇದೋಪನಿಷತ್ತುಗಳಲ್ಲೂ ಅದೆಷ್ಟು ಪ್ರೌಢ ಜ್ಞಾನವನ್ನು ಗಳಿಸಿದ್ದೇನೆಂಬುದನ್ನೂ ತೋರ್ಪಡಿಸಿದ್ದನು. 1865 ರ ಸೆಪ್ಟಂಬರ್ 23ನೇ ದಿನದಂದು ಮಂಗಳೂರಿನ ಆಂಗ್ಲ ಪಾಠಶಾಲೆಯಲ್ಲಿ ಹಲವು ಧಾರ್ಮಿಕ ಪ್ರಚಾರಗಳನ್ನು ಹೇಳುತ್ತಾ ನಾಲ್ಕು ವೇದಗಳು, ಸಂಹಿತೆಗಳು, ಉಪನಿಷತ್ತುಗಳು ಮೊದಲಾದುವುಗಳ ಮೇಲೆ ಅಮೋಘ ಭಾಷಣವನ್ನು ಕೊಟ್ಟನು. ಆ ಭಾಷಣವನ್ನು ಆವನು ಈ ರೀತಿ ಪ್ರಾರಂಭಿಸಿದನೆಂದು ವರದಿಯಾಯಿತು :—

> 'One day when the compiler of this lecture was occupied with translating a portion of the Yajurveda, viz, Teithiriya Brahamana, an elderly Brahmin entered his room to have a conversation with him. This soon turned upon the specified passage of the Yajurveda...The brahmin thought very highly of that burlsk passage, which surely is quite the contarary of a praise to the glorious and holy God.. Next morning, an English translation of that passage was put into the hands of a young brahmin who is to a great extent free from prejudices and knows English very well. He thoughtfully read it and returned it with the words, "I have never read such nonsense before." Then I told him that he had pronounced a judgment upon the passage of his own most sacred books, presupposing that he would try to retract . .. but Lo, the noble youth abode by than. It is our earnest wish and prayer that the noble youth himself and a great number of his companions may become

children of God in the name of the Saviour Jesus Christ....* ಎರಡೂ ವಿಖ್ಯಾತ ಮತ ಧರ್ಮ ತತ್ವಗಳ ಮೇಲೆ ಅಸಾಧಾರಣವಾದ ಪಾಂಡಿತ್ಯವನ್ನು ಹೊಂದಿದ್ದ ಈ ವಿದ್ವಾಂಸನು ಅದೇಕೋ ಹಿಂದೂ ಧಾರ್ಮಿಕ ಗ್ರಂಥಗಳಲ್ಲಿ ತೋರಿದ ಅಬದ್ಧತೆಯನ್ನು ಕಂಡು ಆ ರೀತಿ ಉದ್ಗರಿಸುತ್ತಾನೆ. ಆದರೆ ಅದೇ ಭಾಷಣದಲ್ಲಿ ಅವನು ಹಿಂದೂ ತತ್ತ್ವಶಾಸ್ತ್ರದ ಆಳವಾದ ತಾತ್ವಿಕ ವಿವೇಚನೆ, ಜೀವಾತ್ಮ, ಪರಮಾತ್ಮ, ದ್ವೈತ, ಅದ್ವೈತ ಇತ್ಯಾದಿ ಸಿದ್ಧಾಂತಗಳ ವೈಜ್ಞಾನಿಕ ವೈಶಿಷ್ಟ್ಯವನ್ನು ವಿವರಿಸುತ್ತಾನೆ. ಹೇಗೂ ಅಂದಿನ ಕ್ರೈಸ್ತಮತ ಬೋಧಕರಲ್ಲಿ ಹಲವರು ಬರೇ ಶುಷ್ಕ ಪಂಡಿತರಾಗಿರದೆ ಉದ್ಧಾಮ ವ್ಯಾಖ್ಯಾನಗಾರರೂ ಆಗಿದ್ದರೆಂಬುದಕ್ಕೆ ಈ Fernandiz Kittel ಇವನು ಮತ್ತು ಇವನಂಥಾ ಇತರ ಕೆಲವರು ನಿದರ್ಶನ ಪ್ರಾಯರು ಎಂದು ಹೇಳಬಹುದು.

1873 ರಲ್ಲಿ Rev. Kittel ಇವನು ಇಂಗ್ಲಿಷ್ ಮತ್ತು ಜರ್ಮನ್ ಬೈಬಲ್ ಗ್ರಂಥಗಳಿಂದ 'ಹೊಸ ಒಡಂಬಡಿಕೆ' ಭಾಗವನ್ನು ಕನ್ನಡಕ್ಕೆ ಭಾಷಾಂತರಿಸಿದ್ದು ಅವನ ಉತ್ತಮ ಕೃತಿಯಾಯಿತು. ಇದನ್ನು ಮಂಗಳೂರು ಬಾಸೆಲ್ ಮಿಷನ್ ಪ್ರಕಟಣಾಲಯದವರು ಮುದ್ರಿಸಿ ಹೊರತಂದರು. ಈ ವೇಳೆಗೆ ಅವನು ಹಿಂದೆ ಬರೆದಿದ್ದ ಕಿರು ಹೊತ್ತಗೆಗಳೂ ಹಲವು ಬಾರಿ ಪುನರ್ಮುದ್ರಣವಾದುವು. ಶಾಲೆಗಳ ಪ್ರಯೋಗಾರ್ಥವಾಗಿ ಅವನು ಬರೆಯುತಿದ್ದ ಪಠ್ಯಪುಸ್ತಕಗಳಲ್ಲೂ ಕ್ರೈಸ್ತಮತ ವಿಚಾರವಾಗಿ ಉತ್ತಮವಾದ ಲೇಖನಗಳನ್ನು ಬರೆದು ಆ ರೀತಿಯಾಗಿಯೂ ತನ್ನ ಬೈಬಲ್ ಸಾಹಿತ್ಯ ಪ್ರಚಾರವನ್ನು ಮುಂದುವರಿಸಿದನು.

### ೧೦. ಕಿಟ್ಟೆಲ್ ಇವನಿಂದ ಹಲವು ಬೈಬಲ್ "ಕಾವ್ಯಮಾಲೆ" ಗಳು :—

F. Kittel ಇವನು 1865 ರಲ್ಲಿ ಮೊದಲ ಬಾರಿಗೆ ೨೦೦ ಪುಟಗಳ "ಕನ್ನಡ ಸಂಗೀತಗಳು" ಇದರ ಸಂಕಲನವನ್ನು ಹೊರತಂದನು. ಇದರಲ್ಲಿ ದೇಶೀಯ ಕವಿಗಳಿಂದ ರಚಿಸಲ್ಪಟ್ಟ ಹಳೆ ಷಟ್ಪದೀ, ತ್ರಿಪದಿ, ವೃತ್ತ ಮತ್ತು ಕಂದಪದ್ಯಗಳ ಸಂಗ್ರಹವಲ್ಲದೆ ತಾನು ಸ್ವತಃ ಬರೆದ ಹಲವು ಬೈಬಲ್ ಕವನಗಳನ್ನೂ ಅದರಲ್ಲಿ ಸೇರಿಸಿದ್ದು ಶಾಲೆಗಳಲ್ಲಿ ಪಠ್ಯಪುಸ್ತಕವಾಗಿಯೂ ಉಪಯೋಗಿಸಲ್ಪಟ್ಟಿತ್ತು. ಅದರನಂತರ 1868 ರಲ್ಲಿ "ಸಣ್ಣ ಕರ್ಣಾಟಕ ಕಾವ್ಯಮಾಲೆ" ಯೆಂಬ ಕವನ ಸಂಗ್ರಹದಲ್ಲೂ ಪ್ರಾಚೀನ ಕನ್ನಡ ಕವಿಗಳ ಕೆಲವು ಪದ್ಯಗಳೊಡನೆ ತನ್ನ ಸ್ವಂತ ಕೃತಿಗಳನ್ನೂ ಅದರಲ್ಲಿ ಸೇರಿಸಿದ್ದನು. ಅದನ್ನು "ಕನ್ನಡ ಕವಿತ್ವದ ಮೊದಲನೇ ಪುಸ್ತಕವು" ಎಂದು ಕರೆದನು. ಪದ್ಯಗಳ ಮೇಲೆ ಮತ್ತು ಪದಗಳ ಮೇಲೆ ಕೊಟ್ಟ ಟೀಕೆ ಮತ್ತು ನಿಘಂಟುಗಳೇ ಸುಮಾರು 60 ಪುಟಗಳಷ್ಟಿದ್ದು ಅದೊಂದು ಪರಿಪುಷ್ಟವಾದ "ಕಾವ್ಯಮಾಲೆ" ಯಾಗಿತ್ತು.

ಈ "ಕಾವ್ಯಮಾಲೆ" ಯಿಂದ Rev. F. Kittel ಇವನು ತಾನಾಗಿಯೇ ರಚಿಸಿದ ಷಟ್ಪದೀ ಕವನಗಳಿಂದ ಒಂದನ್ನು ಹೆಕ್ಕಿ ಇಲ್ಲಿ ಕೊಡಲಾಗಿದೆ :—

" ಪಡಲು ದಿಕ್ಕಿನ ಯೂದಿ ದೇಶದ
ಲಡಿವೆಯೊಂದನು ಪೊಕ್ಕ ಕುರುಬರು
ನಡುವಣಿರುರೊಳ್ ಹಿಂಡುಕಾಯುತ್ತಿರುವ ಸಮಯದಲೀ
ಒಡನೆ ದೇವರ ದೂತ ಬರಲವ
ರೆಡೆಗೆ ದೇವರ ಮಹಿಮೆಯೆಸೆವರ
ತೊಡಗಿ ತಾಗವರಧಿಕ ಭಯದವರಾಗಿ ಬೊಗ್ಗಿದರೂ."

ಇದು ಏಸುವಿನ ಜನನದ ವಿಷಯವಾಗಿ ಅವನು ಬರೆದ ಕವನದಿಂದ ಹೆಕ್ಕಿದುದಾಗಿದೆ. ಇದೇ ರೀತಿ ಬೈಬಲ್ ಕತೆಗಳನ್ನು ವಾರ್ಧಕ ಷಟ್ಪದಿಯಲ್ಲೂ ಅವನು ಬರೆದಿದ್ದಾನೆ. ಇದರಿಂದ ಅವನು ಒರ್ವ ಕನ್ನಡ ಕವಿಯೂಗಿಯೂ ತೋರ್ಪಡಿಸಿಕೊಂಡಿದ್ದಾನೆ. ಭಾರತೀಯನು ಇಂಗ್ಲಿಷ್ ಕವನಗಳನ್ನು ಬರೆದರೆ ಹೇಗೋ ಹಾಗೆಯೇ ಪಾಶ್ಚಾತ್ಯರು ನಮ್ಮ ಭಾಷೆಯಲ್ಲಿ ಕವನಗಳನ್ನು ಬರೆದರೆ ಕಾಣಿಸಿಕೊಳ್ಳುವರೆಂಬುದಕ್ಕೆ F. Kittel ಇವನ "ಕಾವ್ಯಮಾಲೆ" ಯಿಂದ ಹೀಗೊಂದು ವಾರ್ಧಕ ಷಟ್ಪದಿಯನ್ನು ಕೆಳಗೆ ಕೊಡಲಾಗಿದೆ :—

" ಭ್ರಮೆಗೊಂಡರಾ ವಾಕ್ಯಕಾ ಶಿಷ್ಯರಾಗೇಸು
ಮಮತೆಯುವರಾದವರೆ ಯಾಸ್ತಿಯನು ನಂಬುತಲಿ
ದಮೆ ತಪ್ಪಿದಂಥವರು ದಿವರಾಜ್ಯವನ್ನೈದಲಿಷ್ಟಾದುರ್ಲಬವಾಗಿದೇ
ಅಮಲಾತ್ಮ ದೇವರದು ರಾಜ್ಯವನು ಧನದವರು
ತಮ್ಮಯ ಹಮ್ಮೈಲೈದುವದಕಿಂತಲೊಂಟೆ ಪಾರ್
ಗಮಿಸುವದು ಸೂಜಿತೂತಲ್ಲಿಂದ ಸುಲಭವಾಗಿಹುದೆಂದು
ಬೋಧಿಸಿದನು "

ಪ್ರತಿ ಪುಟದ ಕೆಳಗೆ ಕೆಲವು ಕ್ಲಿಷ್ಟಪದಗಳ ಅರ್ಥವನ್ನೂ ಕೊಡುತ್ತಾ ಹೋಗಿದ್ದಾನೆ. F. Kittel ಇವನು ಹಲವು ಭಾಮಿನೀ ಮತ್ತು ವಾರ್ಧಕ ಷಟ್ಪದೀ ಪದ್ಯಗಳನ್ನು ತನ್ನ ಬೈಬಲ್ ಕತೆಯನ್ನು ನಿರೂಪಿಸಲೋಸುಗ ಬರೆದಿರುವನಾದರೂ ಅವೆಲ್ಲವೂ ಬಹು ಪ್ರಯಾಸಪಟ್ಟು ಬರೆದಂತೆಯೇ ತೋರುತ್ತದೆ. ಕ್ರಿ.ಶ. 1874 ರಲ್ಲಿ ಅವನ "ಕಾವ್ಯ ಮಾಲೆ" ಯು 400 ಪುಟಗಳ ದೊಡ್ಡ ಕವನ ಸಂಕಲನವಾಗಿ ಮಾರ್ಪಟ್ಟಿತು. ಅವರಲ್ಲಿ ಇನ್ನೂ ಹಲವು ಪ್ರಾಚೀನ ಪದ್ಯಗಳೂ, ದಾಸರ ಹಾಡುಗಳೂ ಮತ್ತು ತನ್ನದೇ ಆದ ಬೈಬಲ್ ಕವನಗಳನ್ನೂ ಸೇರಿಸಿದನು. ಅದರ ಹಿಂಭಾಗದಲ್ಲಿ ಒಳ್ಳೆಯ ಶಬ್ದಕೋಶ ವನ್ನೂ ಒಂದು ವಿದ್ವತ್ಪೂರ್ಣವಾದ ಇಂಗ್ಲಿಷ್ ಮುನ್ನುಡಿಯನ್ನೂ ಅದಕ್ಕೆ ಸೇರಿಸಿ ದನು. ಪ್ರತಿ ಪದ್ಯಭಾಗದ ಮೇಲೆ ಟೀಕೆ, ವೃತಿ ಇತ್ಯಾದಿಗಳನ್ನು ಕೊಟ್ಟು ಅದೊಂದು ಸಮರ್ಪಕವಾದ "ಕಾವ್ಯ ಮಾಲೆ" ಯಾಗಿ ಪ್ರಕಟಿಸಿದನು.

**೧೧. ಪತ್ರಿಕೆಗಳಲ್ಲಿ ರೆ॥ ಕಿಟ್ಟೆಲ್ಲನ ಬೈಬಲ್ ಲೇಖನಗಳು :—**

1863 ರ ಕಾಲದಲ್ಲಿ Rev. John Mack ಇವನು ನಡೆಸುತ್ತಿದ್ದ "ಸಚಿತ್ರ ಕನ್ನಡ ಮಾಸಪತ್ರಿಕೆ"ಯ ಸಂಪಾದಕನಾಗಿಯೂ Rev. F. Kittel ಇವನು ಕೆಲಕಾಲ ಇದ್ದು ಅದರಲ್ಲಿ ಹಲವು ಬೈಬಲ್ ಲೇಖನಗಳನ್ನು ಬರೆದನು. ಅದರನಂತರ 1863 ರ ನವಂಬರ್ ತಿಂಗಳಿಂದ Benjamin Rice ಇವನ "ಅರುಣೋದಯ"ದಲ್ಲಿ ಸೇರಿ ಅದರಲ್ಲೂ ಹಲವು ವಿದ್ವತ್ಪೂರ್ಣವಾದ ಬೈಬಲ್ ಲೇಖನಗಳನ್ನು ಬರೆದನು. "Church History" ಎಂಬುದಾಗಿ ಬರೆದಿದ್ದ Rev. Kittel ಇವನ ಹೊತ್ತಗೆಯೂ ಧಾರಾವಾಹಿಯಾಗಿ ಅದರಲ್ಲಿ ಪ್ರಕಟವಾಗುತ್ತಾ ಬಂತು. ಜನವರಿ 1864 ರ "ಅರುಣೋದಯ" ಸಂಚಿಕೆಯಲ್ಲಿ "Mosque of Omar" ಅಥವಾ "ಓಮಾರನ ಮಶೀದಿ" ಎಂಬ ಲೇಖನದಿಂದ ಕೆಲವು ಪಂಕ್ತಿಗಳನ್ನು ದಿಗ್ದರ್ಶನಾರ್ಥವಾಗಿ ಕೊಡಲಾಗಿದೆ:—

"....ಮೇಲೆ ಬರೆದ ಮಶೀದಿ ಯೆರೂಸಲೇಮ್ ಪಟ್ಟದಲ್ಲಿ ಇದೆ. ಆ ಪಟ್ಟವು ಪೂರ್ವಕಾದಲ್ಲಿಯೇ ಯೆಹೂದ್ಯರ ಸಂಸ್ಥಾನವಾಗಿತ್ತು. ಅದರಲ್ಲಿ ಅರಸನಾದ ಸೊಲೊಮೊನನು ಅತಿ ಸೌಂದರ್ಯವಾದ ದೇವಾಲಯವನ್ನು ಕಟ್ಟಿಸಿದನು. ಆದರೆ ಅ ಜನರು ನಿಜವಾದ ದೇವರಾಗಿರುವ ಯೆಹೋವನನ್ನು ಬಿಟ್ಟು ವಿಗ್ರಹಾರಾಧನೆಯಲ್ಲಿ ಬಿದ್ದ ಕಾರಣ ದೇವರು ಅವರನ್ನು ಶತ್ರುಗಳ ಕೈಯ್ಯಲ್ಲಿ ಒಪ್ಪಿಸಿ ಆ ಶತ್ರುಗಳಿಂದ ಅವರ ಪಟ್ಟವೂ ದೇಶವೂ ಹಾಳಾಗುವ ಹಾಗೆ ಮಾಡಿದನು ........"

Rev. Kittle ಇವನು Church History ಇದರ ವಿಷಯವಾಗಿ ಇದೇ ಪತ್ರಿಕೆಯಲ್ಲಿ ಬರೆಯುತಿದ್ದ ಲೇಖನಮಾಲೆಯಿಂದ ಕೆಲವು ಪಂಕ್ತಿಗಳನ್ನು ಪುನಃ ಇಲ್ಲಿ ಕೊಡುವುದು ಅವನ ಬರವಣಿಗೆಯ ರೀತಿಯನ್ನು ನೋಡುವ ದೃಷ್ಟಿಯಿಂದ ಉಚಿತವಾಗಿದೆ :—

"ಅಪೋಸ್ತಲರ ಪ್ರಯಾಸದಿಂದಲೂ ಅವರ ಸಹಾಯಕರಿಂದಲೂ ಕ್ರಿಸ್ತಸಭೆಗಳು ಮೊದಲು ಚಿಕ್ಕ ಏಷ್ಯದಲ್ಲಿ ಸ್ಥಾಪಿಸಲ್ಪಟ್ಟದ್ದಲ್ಲದೆ ಮೊದಲನೆ ಎರಡನೇ ಶತಮಾನಗಳೊಳಗೆ ಕ್ರಿಸ್ತನ ಸಭೆಯು ದೂರವಾದ ದೇಶಗಳಲ್ಲಿ ಪ್ರಬಲವಾಯಿತು. ಯಾವ್ಯಾವ ದೇಶಗಳಲ್ಲಿ ಅಂದರೆ (೧) ಯೂರೋಪಿನಲ್ಲಿ..(೨) ಗ್ರೀಸ್ ....(೩) ಇಟಲಿ. ಇಟಲಿ ದೇಶದ ಸಂಸ್ಥಾನವಾನವಾದ ರೋಮದಲ್ಲಿ ಮೊದಲನೇ ಶತಮಾನದಲ್ಲಿ ಅನೇಕ ಕ್ರಿಸ್ಥೀಯರಿದ್ದರು. ಆದರೆ ಅಲ್ಲಿದ್ದ ಸಭೆಯಲ್ಲಿ ಯಾರಿಂದ ಸ್ಥಾಪಿಸಲ್ಪಟ್ಟತೋ ತಿಳಿಯಲಿಲ್ಲ. ಒಂದು ವೇಳೆ ಬೇರೆ ದೇಶಗಳಿಗೆ ಪ್ರಯಾಣ ಮಾಡಿ ಅಲ್ಲಲ್ಲಿ ಸುವಾರ್ತೆಯನ್ನು ಕೇಳಿದಂಥವರು ತಿರಿಗಿ ತಮ್ಮ ದೇಶಕ್ಕೆ ಬಂದು ಅಲ್ಲಿ ವಾಕ್ಯವನ್ನು ಪ್ರಸಿದ್ಧಿ ಮಾಡಿರಬಹುದು ..?

Rev. Kittel ಇವನು ಕ್ರಿಸ್ತಧರ್ಮ ತತ್ವವನ್ನು ಕುರಿತು ಆಗ ಪ್ರಚಾರವಿದ್ದ Evengelical Society Magazine ಎಂಬೀ ಬಗೆಯ ಪತ್ರಿಕೆಗಳಲ್ಲಿ ಇಂಗ್ಲೀಷ್‌ನಲ್ಲೂ ತನ್ನ ಸ್ವದೇಶದ ಪತ್ರಿಕೆಗಳಲ್ಲಿ ಜರ್ಮನ್‌ನಲ್ಲೂ ಲೇಖನಗಳನ್ನು

ಬರೆಯುತ್ತಲೇ ಇದ್ದನು. ಕೆಲಕಾಲ ಅವನು ಮಂಗಳೂರಿನ "ವಿಚಿತ್ರ ವರ್ತಮಾನ ಸಂಗ್ರಹ" ಎಂಬ ಪತ್ರಿಕೆಯ ಸಂಪಾದಕನಾಗಿಯೂ 1862 ರ ಕಾಲದಲ್ಲಿ ಇದ್ದನು. ಹೇಗೂ ಅವನು ಭಾರತಕ್ಕೆ ಬಂದು ಮೊದಲಿನ ಸುಮಾರು ಇಪ್ಪತ್ತು ವರ್ಷಗಳ ಕಾಲ ವರ್ತಮಾನ ಪತ್ರಿಕೆಗಳ ಮೂಲಕವಾಗಿ, ಪಠ್ಯಪುಸ್ತಕಗಳು, ಸಾರ್ವಜನಿಕ ಸಭೆ ಉಪನ್ಯಾಸಗಳು, ಬೈಬಲ್ ಕೀರ್ತನೆಗಳು, ಬೈಬಲ್ ಕೃತಿಗಳು, ಭಾಷಾಂತರಗಳು, ಎಂದು ಮೊದಲಾಗಿ ಕನ್ನಡದಲ್ಲಿ ಬೈಬಲ್ ಸಾಹಿತ್ಯಕ್ಕೆ ತನ್ನ ಪಾಲಿನ ಸೇವೆಯನ್ನು ಧಾರಾಳವಾಗಿ ಸಲ್ಲಿಸಿದ್ದಾನೆ.

## ೧೨. ಜ್ಹಿಗ್ಲರ್, ಗ್ರೇಟರ್ ಮತ್ತು ಇತರ ಬೈಬಲ್ ಸಾಹಿತಿಗಳು :—

ಕಳೆದ ಶತಮಾನದ ಅಪರಾರ್ಧದಲ್ಲಿ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಕೆಲವು ಗಣ್ಯ ಮತ್ತು ಅಗಣ್ಯ ಕನ್ನಡ ಬೈಬಲ್ ಬರೆಹಗಾರರು ಇದ್ದರು. ಅವರ ಪೈಕಿ ಧಾರವಾಡದಲ್ಲಿ ಇದ್ದ ಪ್ರಸಿದ್ಧ ವಿದ್ಯಾತಜ್ಞ Rev. Fredrich Zeigler ಇವನೂ ಮಂಗಳೂರಿನಲ್ಲಿದ್ದ Rev. B. Graeter ಇವನೂ ಪ್ರಮುಖರಾಗಿದ್ದರು. ಇವರಿರ್ವರೂ ಸೇರಿ ಕ್ರಿ.ಶ. 1867 ರಲ್ಲಿ ಬೈಬಲ್ ಹಾಡುಗಳನ್ನು ರಚಿಸಿ ಅವನ್ನು "ಗೀತೆಗಳು" ಎಂಬುದಾಗಿ ಪ್ರಕಟಿಸಿದರು. ಇವರಿರ್ವರೂ ಜರ್ಮನ್ ದೇಶದವರು, ಮತ್ತು ಬಾಸೆಲ್ ಮಿಷನ್‌ಗೆ ಸೇರಿದ್ದವರು. Rev. F. Zeigler ಇವನೊಬ್ಬನೇ 1875 ರಲ್ಲಿ ಆಧುನಿಕ ಕನ್ನಡ ಕ ವ ನ ಗ ಳ ಮಟ್ಟದಲ್ಲಿ ರಚಿಸಿದ "ಕವನಗಳು" 'Hymn Book in Canarese' ಎಂಬ ಬೈಬಲ್ ಪದ್ಯಗಳ ಪುಸ್ತಕ ವೊಂದನ್ನು ಹೊರತಂದನು. ಅದರಲ್ಲಿ ತನ್ನ ಸ್ವಂತ ಹಾಡುಗಳಲ್ಲದೆ ಇತರ ಕ್ರೈಸ್ತ ವಿದ್ವಾಂಸರ ಹಾಡುಗಳೂ ಸೇರಿಸಲ್ಪಟ್ಟಿದ್ದ ಆ ಹೊತ್ತಗೆಯು ಉತ್ತರ ಕರ್ಣಾಟಕದ ಶಾಲೆಗಳಲ್ಲೂ ಕ್ರೈಸ್ತಗುಡಿಗಳಲ್ಲೂ ಪ್ರಚಾರವಿತ್ತು.

Zeigler ಮತ್ತು Gractor ಇವರು ಬರೆದ "ಗೀತೆಗಳು" ದಾಸರ ಪದ ಗಳಿಂದಲೂ, ಆ ಕಾಲದ ದೇಶೀಯ ಕವಿಗಳಿಂದ ಮತ್ತು ಬೈಬಲ್ ಸಾಹಿತಿಗಳಿಂದ ಬರೆಯಲ್ಪಟ್ಟ ತ್ರಿಪದಿ, ಚೌಪದಿ ಮತ್ತು ಷಟ್ಪದೀ ಪದ್ಯಗಳಿಂದಲೂ ತುಂಬಿದ್ದುವು. ಬೈಬಲ್ ಹಾಡುಗಳು ದಾಸರ ಹಾಡುಗಳ ಶೈಲಿಯನ್ನನುಸರಿಸಿ ಬರೆದಂತೆ ಇವೆ. ಈ ಕವನ ಸಂಕಲನಗಳು ಕಳೆದ ಶತಮಾನದೊಳಗಾಗಿ ಹಲವು ಬಾರಿ ಪುನರ್ಮುದ್ರಣ ವಾದುವು. ಹಲವು ಪಾಶ್ಚಾತ್ಯ ಕವಿಗಳ ಕೃತಿಗಳಲ್ಲಿ ಅವರ ರಚನಾ ಕೌಶಲ್ಯವೂ ತೋರಿದ್ದುವಲ್ಲದೆ ಶೈಲಿಯಲ್ಲಿ ಆ ವೇಳೆಗೆ ಪರಿಪಕ್ವತೆಯೂ ಕಾಣಿಸಿಕೊಂಡಿತ್ತು.

ಉತ್ತರ ಕರ್ಣಾಟಕ ಭಾಗಗಳಲ್ಲಿ ಇದ್ದ ಕ್ರೈಸ್ತಗುರುಗಳು ಹಲವರು ಅನಾ ಮಧೇಯರಾಗಿ ಕಿರುಹೊತ್ತಗೆಗಳನ್ನು ತಮ್ಮ ಮತಪ್ರಚಾರಾರ್ಥವಾಗಿ ಬರೆಯುತ್ತಲೇ ಇದ್ದರು. ಅವುಗಳಲ್ಲಿ "ಪ್ರವಾದಿಯಾದ ಯೆಹೋವನು ಮತ್ತು ವಿಗ್ರಹಗಳು." ಅಥವಾ Elijah-the Prophet or Jehovah and the idols" ಎಂಬ 78 ಪುಟಗಳ ಪುಸ್ತಕವು ಇಂಗ್ಲೀಷ್‌ನಲ್ಲೂ ಕನ್ನಡದಲ್ಲೂ ಬರೆಯಲ್ಪಟ್ಟಿತು. History of Joseph ಎಂಬ 80 ಪುಟಗಳ ಕಿರುಹೊತ್ತಗೆಯು ಬಹು ಸಂಖ್ಯೆ

ಯಲ್ಲಿ ಮುದ್ರಣವಾಗಿ ಹಂಚಲಾಯಿತು. ಇವುಗಳಲ್ಲೆಲ್ಲಾ ಅವರ ಭಾಷಾ ಶೈಲಿಯು ಹೇಗಿತ್ತೆಂಬುದಕ್ಕೆ ಇದರಿಂದ ಕೆಲವು ಪಂಕ್ತಿಗಳನ್ನು ದಿಗ್ದರ್ಶನಾರ್ಥವಾಗಿ ಕೊಡಲಾಗಿದೆ:—

"ಆಗ ಯೆಹೂದನು ಅವನ ಸಮೀಪಕ್ಕೆ ಬಂದು ಹೇಳಿದ್ದೇನೆಂದರೆ, ಸ್ವಾಮಿ, ನನ್ನ ಸ್ವಾಮಿಯ ಕಿವಿಗಳಲ್ಲಿ ಒಂದು ಮಾತನ್ನು ಹೇಳುವುದಕ್ಕೆ ನಿನ್ನ ದಾಸನಿಗೆ ಅಪ್ಪಣೆಯಾಗಬೇಕು. ನಿನ್ನ ದಾಸನ ಮೇಲೆ ಕೋಪ ಉರಿಯದೆ ಇರಲಿ. ಯಾಕೆಂದರೆ, ಫರೋನನ ಹಾಗೆ ನೀನು ನನ್ನ ಸ್ವಾಮಿ. ನಿಮಗೆ ತಂದೆಯೂ ಸಹೋದರನೂ ಉಂಟೋ ಎಂದು ತನ್ನ ದಾಸರನ್ನು ಕೇಳಲು ನಾವು ನಮ್ಮ ಕರ್ತನಿಗೆ—ನಮಗೆ ಮುದುಕನಾದ ತಂದೆಯೂ ಅವನ ಮುದಿಪ್ರಾಯದಲ್ಲಿ ಹುಟ್ಟಿದ ಚಿಕ್ಕ ಮಗನೂ ಉಂಟು. ಅವನ ಸಹೋದರನು ಸತ್ತುಹೋಗಿದ್ದಾನೆ. ಅವನೊಬ್ಬನೇ ತನ್ನ ತಾಯಿಗೆ ಉಳಿದಿದ್ದಾನೆ........?

೧೩. ಝಿಗ್ಲರ್ ಮತ್ತು ಹೆನ್ರಿ ಹೈಗ್–ಇವರಿಂದ ಬೈಬಲ್ ಪುಸ್ತಕಗಳು :—

Rev. Fredrich Zeigler ಇವನು ಮೈಸೂರಿನಲ್ಲಿದ್ದ Garrett, ಮದ್ರಾಸಿನಲ್ಲಿ Miller, ಕೊಡಗಿನಲ್ಲಿ Richtor, ಮಂಗಳೂರಿನಲ್ಲಿ Brigel ಈ ಮೊದಲಾದ ವಿದ್ಯಾತಜ್ಞರೂ ಸಮಾಜಸುಧಾರಕರೂ ಆದ ಮತಪ್ರಚಾರಕರ ಗುಂಪಿಗೆ ಸೇರಿದ್ದು ಧಾರವಾಡದಲ್ಲಿ ಅವನು ಕನ್ನಡ ಭಾಷೆಯ ಅಭಿವೃದ್ಧಿಗಾಗಿ ವಿಶೇಷ ಶ್ರಮಿಸಿದನು. ಅಂದಿನ ಪ್ರಸಿದ್ಧ ಸ್ಥಳೀಯ ಪ್ರತಿಭಾಶಾಲಿ ವ್ಯಕ್ತಿಯಾಗಿದ್ದ "ಡೆಪ್ಯುಟಿ" ಚೆನ್ನಬಸಪ್ಪನನ್ನು ತನ್ನ ಸ್ಥಾನದಲ್ಲಿ ಮೇಲಕ್ಕೆ ಏರಿಸಿ ಪ್ರೋತ್ಸಾಹಿಸಲು ಕಾರಣನಾದವನು ಈ Rev. F. Zeigler ಇವನೇ ಆಗಿದ್ದನು. ಉತ್ತರ ಕರ್ಣಾಟಕದಲ್ಲಿ ವಿದ್ಯಾಸಂಸ್ಥೆಗಳು ಮತ್ತು ಬೈಬಲ್ ಗ್ರಂಥಗಳ ಪ್ರಚಾರ ಕಾರ್ಯಗಳಲ್ಲಿ ಇವನು ವಿಶೇಷ ಶ್ರಮವಹಿಸಿದ್ದ ವಿದ್ವಾಂಸನಾಗಿದ್ದನು.

F. Zeigler ಮತ್ತು Rev. Henry Haigh ಇವರ ಜತೆಸೇರಿ "ಸೇಂಟ್ ಮಾರ್ಕನು ಬರೆದ ಸುವಾರ್ತೆ ಅಂದರೆ ಮುಕ್ತಿದಾಯಕನ ಚರಿತೆ" ಎಂಬುದಾಗಿ ಒಂದು ಚಿಕ್ಕ ಪುಸ್ತಕವನ್ನು ಬರೆದದ್ದು 1896 ರಲ್ಲಿ ಪ್ರಕಟವಾಯಿತು. St. Mark ಇವನ ತತ್ವಬೋಧನೆಗಳ ಸಂಗ್ರಹದ ಆ ಹೊತ್ತಗೆಯ ರೂಪದಲ್ಲಿಯೇ St John ಮತ್ತು St. Mathew ಇವರ ಸೂಕ್ತಿಗಳನ್ನೂ ಸಂಗ್ರಹಿಸಿ ಮತ್ತು ವಿವರಿಸಿ ಬರೆದ ಪುಸ್ತಕಗಳು ಅನಂತರ ಹೊರಬಂದುವು. Gospel of St. Luke ಎಂಬ 146 ಪುಟಗಳ ಕನ್ನಡ ಪುಸ್ತಕವೂ Rev. Zeigler ಇವನ ಬರೆವಣಿಗೆಗಳಲ್ಲೊಂದಾಗಿ ತುಂಬಾ ಪ್ರಚಾರವಾದ ಗ್ರಂಥವಾಯಿತು.

Rev. Henry Haigh ಇವನು ವೆಸ್ಲೀ ಮಿಷನ್‌ಗೆ ಸೇರಿದ್ದವನಾಗಿದ್ದನು ಇವನು ಬರೆದ Epistle of St. James ಎಂಬ 90 ಪುಟಗಳ ಕನ್ನಡ ಕೃತಿಯು 1895 ರಲ್ಲಿ ಮುದ್ರಣವಾಗಿ ಪ್ರಕಟವಾಯಿತು. ಕನ್ನಡದಲ್ಲಿ ಆ ವರೆಗೆ ಬರೆಯಲ್ಪಟ್ಟಿದ್ದ ಸಂಪೂರ್ಣ ಬೈಬಲ್ ಗ್ರಂಥಗಳನ್ನೆಲ್ಲಾ ಪರಿಷ್ಕರಿಸಿ ತನ್ನದೇ ಆದ ರೀತಿಯಲ್ಲಿ ಸಹ

ಸ್ವಾರು ಪುಟಗಳಲ್ಲಿ ಹೊಸ ಕನ್ನಡ ಬೈಬಲ್ ಗ್ರಂಥವನ್ನು ಪ್ರಕಟಿಸಿದ್ದು ಅವನ ಮಹತ್ಸಾಧನೆಯೇ ಆಗಿತ್ತು. ಹೀಗಾಗಿ ಕಳೆದ ಶತಮಾನದ ಕಡೇ ದಶಕದಲ್ಲಿ ಇದ್ದ ಬೈಬಲ್ ಸಾಹಿತಿಗಳ ಪೈಕಿ ಈ Rev. Henry Haigh ಇವನೇ ಪ್ರಮುಖ ಕನ್ನಡ ಬರೆಹಗಾರನೆಂದೆನಿಸಿದನು.

ಈ ಅವಧಿಯಲ್ಲಿ ಎಂದರೆ ಕ್ರಿ.ಶ. 1895 ರ ಒಳಗಾಗಿ ಕನ್ನಡ ವಾರ್ತಾಪತ್ರಿಕೆ ಮತ್ತು ಸಾಹಿತ್ಯ ಪತ್ರಿಕೆಗಳ ಸಂಖ್ಯೆಯು ಹೆಚ್ಚುತ್ತಾ ಬಂದಂತೆ ಅವುಗಳಲ್ಲೆಲ್ಲಾ ಕ್ರೈಸ್ತಮತ ಮತ್ತು ಧರ್ಮವನ್ನು ಕುರಿತಾದ ಹಲವು ಬೋಧಪ್ರದವಾದ ಲೇಖನ ಗಳನ್ನೂ ಈ ಎಲ್ಲಾ ಕ್ರೈಸ್ತಗುರುಗಳು ಬರೆಯುತ್ತಲೇ ಇದ್ದರು. ಅಷ್ಟೇ ಅಲ್ಲ, ಕೇಥೊಲಿಕ್ ಮಿಷನ್, ವೆಸ್ಲೀ ಮಿಷನ್. ಬಾಸೆಲ್ ಮಿಷನ್ ಮೊದಲಾದ ಕ್ರೈಸ್ತ ಸಂಸ್ಥೆಗಳು ತಮ್ಮದೇ ಆದ ಕನ್ನಡ ಬೈಬಲ್ ಪತ್ರಿಕೆಗಳನ್ನೂ ಸ್ಥಾಪಿಸಿ ಅವುಗಳಲ್ಲೂ ಕನ್ನಡದಲ್ಲೂ ಇಂಗ್ಲೀಷ್‌ನಲ್ಲೂ ಲೇಖನಗಳನ್ನು ಬರೆಯುತ್ತಾ ಇದ್ದರು.

೧೪. ಕ್ರಿ.ಶ. 1890 ರ **ಕಾಲದಲ್ಲಿ ಪ್ರಕಟವಾದ ಬೈಬಲ್ ಕೃತಿಗಳು :—**

ಕಳೆದ ಶತಮಾನದ ಅಂತ್ಯದಲ್ಲಿ ನೂರಾರು ಕನ್ನಡ ಬೈಬಲ್ ಕೃತಿಗಳು ಹೊರ ಟುವು. ಅವುಗಳಲ್ಲೆಲ್ಲಾ ಯಾರಾರು ಬರೆದರೆಂಬುದು ಸ್ಪಷ್ಟವಿಲ್ಲವಾದರೂ ಅವು ಆಯಾ ಭಾಗದ ಕ್ರೈಸ್ತ ಮತಪ್ರಚಾರ ಕೇಂದ್ರಗಳಿಂದ ತಮ್ಮದೇ ಆದ ಮುದ್ರಣಾಲಯಗಳಲ್ಲಿ ಅಚ್ಚಾಗಿ ಹೊರಬರುತ್ತಿದ್ದುವು. ಅವೆಲ್ಲವನ್ನೂ ಅಂದಿನ ಪಾಶ್ಚಾತ್ಯ ಗುರುಗಳೇ ಬರೆದ ರೆಂಬುದನ್ನು ಆ ಕೃತಿಗಳ ಭಾಷಾ ಶೈಲಿಯಿಂದ ವ್ಯಕ್ತವಾಗುತ್ತದೆ.

ಅಂಥಾ ಹಲವು ಕಿರುಹೊತ್ತಗೆಗಳಲ್ಲಿ "ಪರ್ವತ ಪ್ರಸಂಗ" ಅಥವಾ Sermon of the Mount ಇದೊಂದಾಗಿದೆ. ಅದರಲ್ಲಿ " ತಪ್ಪಿಹೋದ ಕುರಿ, ಹಣ ಮತ್ತು ಮಗ," The parable of the lost sheep, of the piece of silver and of the Prodigal son " ಎಂಬುದಾಗಿ ಮೇಲ್ಪುಟದಲ್ಲಿ ಬರೆ ಯಲ್ಪಟ್ಟುದಲ್ಲದೆ ಬೈಬಲ್ಲಿನ ಹಲವು ಸ್ವಾರಸ್ಯವಾದ ವಿಚಾರಗಳು ಅದರಲ್ಲಿ ಅಡಕವಾ ಗಿವೆ.

" ಯೊಹಾನನು ಬರೆದ ಸುವಾರ್ತೆ ಅಥವಾ The Gospel of John, ಎಂಬ 99 ಪುಟಗಳ ಕಿರುಹೊತ್ತಗೆಯು 1882 ರಲ್ಲಿ ಎರಡನೇ ಬಾರಿಗೆ ಮುದ್ರಣ ವಾಯಿತು. ಇದು ಆಗ ಪ್ರಚಲಿತವಿದ್ದ ನಾಲ್ಕಾರು ಜನ ಕನ್ನಡ ಬೈಬಲ್ ಸಮಿತಿ ಯವರ ಆದೇಶದಂತೆ ಬರೆಯಲ್ಪಟ್ಟುದೆಂದು ಹೇಳಲಾಗಿದೆ.

Rev. J. Hands ಇವನು 1830 ರ ಕಾಲದಲ್ಲಿ ಇಂಗ್ಲಿಷ್‌ನಲ್ಲಿ ಬರೆದಿದ್ದ ಬೈಬಲ್ಲಿನ ಒಂದು ಭಾಗವನ್ನು "ಅಪೋಸ್ತಲನಾದ ಪೌಲು ಎಫೇಸಿ ಪಟ್ಟಣದವರಿಗೆ ಬರೆದ ಪತ್ರಿಕೆಯು" ಎಂಬುದಾಗಿ ಸೂಕ್ಷ್ಮವಾಗಿ ಕನ್ನಡಕ್ಕೆ ಭಾಷಾಂತರವಾಗಿದ್ದು ಅದು 1888 ರ ಕಾಲದಲ್ಲಿ ಅಚ್ಚಾಗಿ ಹೊರಬಂತು.

ಬೆಂಗಳೂರಿನ Auxiliary Society ಎಂಬ ಕ್ರೈಸ್ತ ಸಂಸ್ಥೆಯು " ಮತ್ತಾಯನು ಬರೆದ ಲೋಕರಕ್ಷನನ ವಿವರಮುಂ" ಎಂಬುದಾಗಿ St. Mathew

ಇವನ ಸೂಕ್ತಿಗಳನ್ನು ಸಂಗ್ರಹಿಸಿ ಪ್ರಕಟಿಸಿತು. ೨೨೧ ಪುಟಗಳ ಈ ಪುಸ್ತಕವು 1890 ರಲ್ಲಿ ಮುದ್ರಣವಾಗಿ ಪ್ರಕಟವಾಯಿತು.

Rev. Alexander Ezra ಇವನು "ಸತ್ಯವೇದ ಗ್ರಂಥ ಪೀಠಿಕೆ"—(ರೋಮ್ಯರ ಪತ್ರಿಕೆ) ಅಥವಾ Epistle of Romans ಎಂಬ 88 ಪುಟಗಳ ಕಿರುಹೊತ್ತಗೆಯನ್ನು 1897 ರಲ್ಲೂ, Rev. Henry Gulliford ಇವನು "ಶ್ರೀಪೇತನು ಬರೆದ ಮೊದಲನೇ ಪತ್ರಿಕೆ" ಅಥವಾ First Epistle of St. Peter ಎಂಬ 63 ಪುಟಗಳ ಪ್ರಬಂಧವನ್ನು 1899 ರಲ್ಲೂ ಮುದ್ರಿಸಿ ಹೊರತಂದರು.

ಹೀಗೆ ಕೆಲವರಲ್ಲದೆ ಆಗ ಕನ್ನಡದಲ್ಲಿ ಹಲವು ಬೈಬಲ್ ಲೇಖನಗಳನ್ನು ಬರೆಯುತಿದ್ದ D. A. Rees, E. W. Thompson, H. Rich, Ellis Robers, R. A. Hickling, J. Hermelink ಹೀಗೆ ಮೊದಲಾದವರು ಉತ್ತಮ ಉಪನ್ಯಾಸಕರಾಗಿಯೂ ಪರಿಷ್ಕೃತ ಕನ್ನಡ ಬೈಬಲ್ ಗ್ರಂಥಗಳ ಸಂಪಾದಕರಾಗಿಯೂ ಇದ್ದರು. ಇವರಲ್ಲಿ ಕೆಲವರು ಬೆಂಗಳೂರಿನ Auxiliary Society ಇದರ ಆಶ್ರಯದಲ್ಲಿ "ಏಸುಕ್ರಿಸ್ತನ ಮೂಲಕ ಸ್ಥಾಪಿತವಾದ ಹೊಸ ಒಡಂಬಡಿಕೆ" ಎಂಬ 569 ಪುಟಗಳ ಬೈಬಲ್ ಬರೆಹವನ್ನು ಗ್ರೀಕ್ ಭಾಷೆಯಿಂದ ಕನ್ನಡಕ್ಕಿಳಿಸಿದ್ದು 1891 ರಲ್ಲಿ ಪ್ರಕಟವಾಯಿತು. ಹೀಗೆ ಇನ್ನೆಷ್ಟೋ ಕೃತಿಗಳು ಆಗ ಮೇಲಿಂದ ಮೇಲೆ ಬೆಳಕಿಗೆ ಬಂದುವು.

### ೧೫. ರೆ|| ಈ. ಪಿ. ರೈಸ್ ಮತ್ತಿತರ ಕೆಲವು ಬರೆಹಗಾರರು :—

ಕಳೆದ ಶತಮಾನದ ಅಂತ್ಯದಲ್ಲಿ ಮತ್ತು ಈ ೨೦ನೇ ಶತಮಾನದ ಮೊದಲ ಭಾಗದಲ್ಲಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಇದ್ದ ಪಾಶ್ಚಾತ್ಯ ಕ್ರೈಸ್ತಗುರುಗಳಲ್ಲಿ ಕನ್ನಡದಲ್ಲಿ ಬೈಬಲ್ ಕೃತಿಗಳನ್ನು ರಚಿಸಿ ಪ್ರಸಿದ್ಧರಾದವರು ಹಲವರು ಇದ್ದಾರೆ. ಆದರೆ ಅವರೆಲ್ಲರ ಹೆಸರನ್ನು ಈ ಗ್ರಂಥದಲ್ಲಿ ಸೂಚಿಸುವುದು ಅಪ್ರಕೃತವಾಗಿ ತೋರುತ್ತದೆ. ಹೇಗೂ ಅವರಲ್ಲಿ Rev. Edward Peter Rice ಇವನ ಹೆಸರನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ. ಸುಮಾರು 1885 ರಿಂದ 1925 ರವರೆಗೂ ಇವನು ಕನ್ನಡದಲ್ಲಿ ಬೈಬಲ್ ಪುಸ್ತಕಗಳನ್ನೂ ಸಾಹಿತ್ಯ ಗ್ರಂಥಗಳನ್ನೂ ರಚಿಸಿದ್ದಾನೆ.

Rev. E. P. Rice ಇವನು 'ಹಳೇ ಒಡಂಬಡಿಕೆ' ಅಥವಾ Old Testament ಇದನ್ನು ಸರಳವಾದ ಕನ್ನಡದಲ್ಲಿ 1890ರ ಕಾಲದಲ್ಲಿ ಬರೆದದ್ದು ಅವನ ಮೊದಲಿನ ಪ್ರಯತ್ನವಾಗಿತ್ತು. ಅದರ ನಂತರ ಅವನು 1861 ರಲ್ಲಿ ಪ್ರಕಟವಾದ "ಮೋಸೆಯ ವಿರಚಿತವು–ಮೊದಲನೇ ಕಾಂಡ"ಯೆಂಬುದಾಗಿ 1854ರ ಬೈಬಲ್ ಸಮಿತಿಯವರಿಂದ ಸಿದ್ಧಪಡಿಸಲಾದ ಗ್ರಂಥವನ್ನು ಪುನರ್ವಿಮರ್ಶಿಸಿ ಪ್ರಕಾಶಪಡಿಸಿದನು. ಅದಾದನಂತರ "ಮೋಸೆಯ ಧರ್ಮಶಾಸ್ತ್ರದಲ್ಲಿ ಆದಿಕಾಂಡವು" ಎಂಬ 107 ಪುಟಗಳ ಪುಸ್ತಕವನ್ನು "ಹೊಸ ಒಡಂಬಡಿಕೆ" ಅಥವಾ New Testament ಇದರ ಆಧಾರದಿಂದ ಬರೆದನು. ಕನ್ನಡ ಬೈಬಲ್ "ಕೀರ್ತನೆಗಳು" ಎಂಬ 74 demy ಪುಟಗಳ ಹೊತ್ತಗೆ ಮತ್ತು ಇನ್ನೆಷ್ಟೋ ಸಂಖ್ಯೆಯಲ್ಲಿ ಕನ್ನಡ

ಬೈಬಲ್ ಲೇಖನಗಳನ್ನು ಬರೆದನು. ಇವುಗಳಲ್ಲಿ ಹಲವು ಈ ಶತಮಾನದ ಮೊದಲ ಹತ್ತು ವರ್ಷಗಳ ಕಾಲದಲ್ಲಿ ಮುದ್ರಣವಾಗಿ ಬೆಳಕಿಗೆ ಬಂದುವು.

Edward Peter Rice ಇವನಂತೆ ಈ ಶತಮಾನದ ಪ್ರಾರಂಭದಲ್ಲಿ ಇದ್ದ ಬೈಬಲ್ ಸಾಹಿತಿಗಳಲ್ಲಿ Rev. Gallert ಇವನೊಬ್ಬನು. ಇವನು ಹಲವು ಬೈಬಲ್ ಕವನಗಳನ್ನು ರಚಿಸಿರುವನು. ಅವುಗಳಿಂದ ದೃಷ್ಟಾಂತಕ್ಕಾಗಿ ಈ ಕೆಳಗಿನ ಚರಣಗಳನ್ನು ಇಲ್ಲಿ ಕೊಡಲಾಗಿದೆ:—

ನೀನೀಯುವಷ್ಟು ಸುಖವ
ನಾ ತಿಂದೆ ಕರ್ತನೆ,
ನೀನೀಯುವಷ್ಟು ದುಃಖಾ
ನಾನೀಗ ತಾಳುವೆ!

ನಾಗೈದ ಪಾಪಕೆ
ವಿನಾಶವಾಡದೆನಗೆ—
ನೀ ಗೈವ ಶಿಕ್ಷೆಯು
ಸಂರಕ್ಷ ಮಾತ್ರವು.

ಕಳೆದ ಶತಮಾನಾಂತ್ಯದ ಮತ್ತೊರ್ವ ಪ್ರಸಿದ್ಧ ಬೈಬಲ್ ಸಾಹಿತಿಯು Rev. Ellis Roberts ಇವನು ಕನ್ನಡದಲ್ಲಿ ಅವನು ಬರೆದ New Testament ಇದು 1891 ರಲ್ಲಿ ಪ್ರಕಟವಾಯಿತಲ್ಲದೆ ಅದರನಂತರ ಈ ಶತಮಾನದ ಪ್ರಾರಂಭದಲ್ಲಿ ಅವನ ಇತರ ಕಿರುಹೊತ್ತಗೆಗಳು ಪ್ರಕಾಶವಾದುವು. ಈ ವೇಳೆಗೆ ಕ್ರೈಸ್ತ ಗುಡಿಗಳಲ್ಲಿ ಕಾಲಕ್ಕೆ ತಕ್ಕಂತೆ ಉಪಯೋಗಿಸಬಹುದಾದ ಬೈಬಲ್ ಕವನಗಳು. ಬೈಬಲ್ ಕಲೆಗಳು, ಬೈಬಲ್ ಪ್ರಸಂಗಗಳು ಇತ್ಯಾದಿ ನವನೂತನ ಶೈಲಿಯಲ್ಲಿ ಬರೆಯಲ್ಪಟ್ಟುವು. Alphonso Maria ಇವಳ ಬೈಬಲ್ ಕತೆಗಳು "ಆತ್ಮ ಸ್ನೇಹ" ಎಂಬುದಾಗಿ ಕನ್ನಡದಲ್ಲಿ ಬರೆಯಲ್ಪಟ್ಟಂತೆ ಇನ್ನೆಷ್ಟೋ ಇಂಗ್ಲಿಷ್. ಜರ್ಮನ್, ಗ್ರೀಕ್ ಇತ್ಯಾದಿ ಭಾಷೆಗಳಲ್ಲಿದ್ದ ಬೈಬಲ್ ಬರೆವಣಿಗೆಗಳು ಕನ್ನಡದಲ್ಲೂ ಇತರ ಭಾರತೀಯ ಭಾಷೆಗಳಲ್ಲೂ ಅಸಂಖ್ಯವಾಗಿ ಪ್ರಕಟವಾದುವು. ಹಾಗೆ ಇತ್ತೀಚೆಗೆ ಪ್ರಕಟವಾದ ಗ್ರಂಥಗಳನ್ನು ಅವುಗಳ ಕರ್ತರನ್ನೂ ಹೆಸರಿಸುವುದು ಇಲ್ಲಿ ಅನೌಚಿತ್ಯವಾಗಿ ತೋರುವುದರಿಂದ ಆ ವಿಷಯವನ್ನು ಇಲ್ಲಿ ಪ್ರಸ್ತಾಪಿಸದೆ ಅಂತೆಯೇ ಬಿಡಲಾಗಿದೆ.

**೧೬. ತುಳು ಮತ್ತು ಕೊಂಕಣೀ ಭಾಷೆಗಳಲ್ಲೂ ಬೈಬಲ್ ಸಾಹಿತ್ಯ:—**

ಗೋವಾದಿಂದ ಕಾಸರಗೋಡಿನವರೆಗಿನ ಪಶ್ಚಿಮ ಕರಾವಳಿಯ ಸೀಮೆಗಳಲ್ಲಿದ್ದ ಎಲ್ಲಾ ಪಾಶ್ಚಾತ್ಯ ಕ್ರೈಸ್ತಗುರುಗಳು ಕನ್ನಡವನ್ನು ಮಾತ್ರ ಕಲಿತಿದ್ದ ಅಲ್ಲ. ತುಳು ಮತ್ತು ಕೊಂಕಣಿ ಭಾಷೆಗಳಲ್ಲೂ ಉಪನ್ಯಾಸ, ಭಾಷಣ, ಬೋಧನೆ, ಬರೆವಣಿಗೆ

ಇತ್ಯಾದಿಗಳಲ್ಲಿ ನಿಷ್ಣಾತರಾಗಿದ್ದರು. ಅವರೆಲ್ಲರ ಮೂಲೋದ್ದೇಶವು ಈ ದೇಶದಲ್ಲಿ ತಮ್ಮ ಮತಪ್ರಚಾರ ಕಾರ್ಯವಾಗಿದ್ದುದರಿಂದ ಅವರು ಗ್ರಾಮಾಂತರಗಳ ಒಳಹೊಕ್ಕು ಅಲ್ಲಿಯ ಜನದ ಭಾಷೆಯಲ್ಲಿಯೇ ತಮ್ಮ ಮತಬೋಧನೆಯನ್ನು ಸಾಧಿಸಿದರು. ಕನ್ನಡ ಲಿಪಿಯನ್ನು ಉಪಯೋಗಿಸಿಯೇ ತುಳು ಮತ್ತು ಕೊಂಕಣಿ ಭಾಷೆಗಳಲ್ಲಿ ಬೈಬಲ್ ಪ್ರಸಂಗಗಳು, ಸೂಕ್ತಿಗಳು ಮತ್ತು ಕೆಲವು ಗೀತೆಗಳನ್ನೂ ಬರೆದನು.

ತುಳು ಭಾಷೆಯಲ್ಲಿಯೇ ತಮ್ಮ ಮತಬೋಧನೆ ಮತ್ತು ಲೇಖನ ಬರವಣಿಗೆಗಳನ್ನು ಮೊದಲಾಗಿ ಕೈಕೊಂಡವರಲ್ಲಿ Dr. Hermann Moegling ಇವನೆಂದೇ ಹೇಳಬಹುದು. 1845ರ ಕಾಲದಲ್ಲಿಯೇ ಇವನು ಆ ಭಾಷೆಯಲ್ಲಿ ಕೆಲವು ಚಿಕ್ಕ ಕೃತಿಗಳನ್ನು ಬರೆದು ಪ್ರಚಾರಪಡಿಸಿದ್ದನು. ಅವನನಂತರ Rev. Fernandiz Kittel ಇವನೂ ತುಳು ಭಾಷೆಯಲ್ಲಿ ಮತಬೋಧನೆ, ಭಾಷಣ, ಲೇಖನ ಇತ್ಯಾದಿಗಳ ಬಗ್ಗೆ ಸುಮಾರು 1865ರ ವರೆಗೂ ದುಡಿದನು. ಕ್ರಿ.ಶ. 1870ರ ನಂತರ Rev. Jacob Brigel ಇವನೂ ಅದೇ ದಿಶೆಯಲ್ಲಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಶ್ರಮಿಸಿ ತುಳು ಭಾಷೆಗೆ ತಕ್ಕ ಜೀವಕಳೆಯನ್ನೊದಗಿಸಿದನು. Rev. A. Manners ಇವನು ತುಳು ಭಾಷೆಯಲ್ಲಿ ಉದ್ಧಾವ ಸಾಹಿತಿಯಾಗಿಯೂ ಬೈಬಲ್ ಕೃತಿಗಳನ್ನು ರಚಿಸಿದವನಾಗಿಯೂ ವಿಖ್ಯಾತನಾದನು. Rev. Henry Haigh ಇವನು ಕನ್ನಡದಲ್ಲಿ ಬರೆದಂತೆ ತುಳು ಭಾಷೆಯಲ್ಲೂ ಸಂಪೂರ್ಣ ಬೈಬಲನ್ನು ಬರೆದನು. ಇವರೆಲ್ಲರೂ ತುಳು ಭಾಷಾ ಸಾಹಿತ್ಯದ ಅಭಿವೃದ್ಧಿಗೆ ವಿಶೇಷವಾಗಿ ದುಡಿದಿರುವರೆಂಬುದನ್ನು ಮುಂದಿನ ಭಾಗದಲ್ಲಿ ಹೇಳಲಾಗುವುದು.

ಗೋವಾದಲ್ಲಿದ್ದ ಪಾಶ್ಚಾತ್ಯ ಕ್ರೈಸ್ತಗುರುಗಳು ಕೊಂಕಣಿ ಭಾಷೆಯಲ್ಲಿ ತಮ್ಮ ಮತಬೋಧನೆ ಮತ್ತು ಬೈಬಲ್ ರಚನಾ ಕಾರ್ಯಕ್ರಮಗಳನ್ನು ಸುಮಾರು ಕ್ರಿ.ಶ. 1700ರಷ್ಟು ಹಿಂದಿನಿಂದಲೇ ಪ್ರಾರಂಭಿಸಿದ್ದಾರೆ. ಗೋವಾ ಮತ್ತು ಮಂಗಳೂರಿನಲ್ಲಿದ್ದ Jesuit Fathers ಇವರು ಕನ್ನಡ ಲಿಪಿಯನ್ನು ಉಪಯೋಗಿಸಿ ಕೊಂಕಣಿ ಭಾಷೆಯಲ್ಲಿ ಹಲವು ಬೈಬಲ್ ಕೃತಿಗಳನ್ನು ರಚಿಸಿದ್ದಾರೆ. Rev. de Lorenzo ಇವನು ಕೊಂಕಣಿಯಲ್ಲಿ ಸಂಪೂರ್ಣ ಬೈಬಲನ್ನು ಕ್ರಿ.ಶ. 1787 ರಲ್ಲಿ ಬರೆದನು. ಮಂಗಳೂರಿನ Fr. Thomas Esteva, ಗೋವಾದಲ್ಲಿದ್ದ Rev. da Cunha Rivara, M. de Abreen ಮೊದಲಾದವರು ಕೊಂಕಣಿ ಭಾಷೆಯಲ್ಲಿ ಕನ್ನಡ ಲಿಪಿಯನ್ನುಪಯೋಗಿಸಿ ಬೈಬಲ್ ಕೀರ್ತನೆಗಳನ್ನು ಪ್ರಸಂಗಗಳನ್ನೂ ಬರೆದಿದ್ದಾರೆ. 1860ರ ಕಾಲದಲ್ಲಿ ರಚಿತವಾದ ಕೊಂಕಣೀ ಭಾಷೆಯ ಬೈಬಲ್ ಕೀರ್ತನೆಯೊಂದನ್ನು ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

"1. ಶೀ ಚೋ ದಿಸ್ಯ ಜೇಸು ಪರಂತುಲೊ ಭೈರು ಸೊರ್ನು, ಬೊಸೂ ದೊರ್ಗ್ಯಾಚೆತೊಡ್ಡಿ.

"2. ಆಸಿಸೊಬರ್ ವೊರ್ಸಾ ತಚ್ಚೇ ಲಗೀವ್ ಮೆಲ್ಲಿ ಅಸ್ಸೆ ಜಿನ್ನಿವ್ ಕಿ ತೊ ಎಕದೊಸ್ಕಿರ್ ಚೊಡ್ಡೊನು ಬೊಸ್ಲೊ, ಅನಿಸೊಮೆಸ್ತು ವೊರ್ಸಾ-ವೆಲ್ಲೆರ್ ಉಬಿರಾಲಿ.

"3. ಅನಿತೊ ತಂಚೀ ಲಗೀವು ಸೊಬರ್‌ವೊಸ್ತು ಉಲ್ಯೊಲೊ ಗುಡ್ಡಾವಿಂ ವ್‌ಹೊನ್ನೊನು; ಪೊಳ್ಳೆ ವೊಂಬತೊಲೊ ಪೊಂಪುಕ್ ಬೈರ್ ಸೊರ್ಲೊ........"

ಕೊಂಕಣಿ ಭಾಷೆಯಲ್ಲಿ ಪಾಶ್ಚಾತ್ಯರು ಸಾಹಿತ್ಯ ಗ್ರಂಥಗಳನ್ನು ರಚಿಸಿದುದಕ್ಕಿಂತ ಹೆಚ್ಚಾಗಿ ಬೈಬಲ್ ಗ್ರಂಥಗಳನ್ನೇ ಹೆಚ್ಚು ಪ್ರಕಟಿಸಿದರೆಂದು ಹೇಳಬಹುದು. ಇವರಲ್ಲಿ ಹೆಚ್ಚಿನ ಸಾಹಿತಿಗಳೂ ಮತಪ್ರಚಾರಕರೂ ಪೋರ್ಚುಗೀಸರೇ ಆಗಿದ್ದಾರೆ. Fr. Thomas Estevao ಮತ್ತು J.H. da Cunha Rivara ಇವರು ಕೊಂಕಣಿ ಸಾಹಿತ್ಯಕ್ಕೆ ತಮ್ಮ ಬೈಬಲ್ ಬರೆವಣಿಗೆಗಳ ಮೂಲಕ ವಿಶೇಷ ಕಳೆಯನ್ನಿತ್ತಿದ್ದಾರೆ "Ensaio Historico da Lingua Concani" ಎಂಬೀ ಬಗೆಯ ಉದ್ಧಾವು ಜೀವನ ಚರಿತೆಗಳು ಕೊಂಕಣಿ ಮತ್ತು ಪೋರ್ಚುಗೀಜ್ ಭಾಷೆಗಳಲ್ಲಿ ಏಕಸಮಾನವಾಗಿ ಬರೆಯಲ್ಪಟ್ಟಿವೆ. ಕಾರ್ವಾರ ಮತ್ತು ಮಂಗಳೂರಿನಲ್ಲಿದ್ದ ಕ್ರೈಸ್ತಗುರುಗಳ ಕೊಂಕಣಿ ಭಾಷಾ ಸೇವೆಯು ಸಹಸ್ರಾರು ಕೊಂಕಣಿ ಕೃತಿಗಳ ಮೂಲಕವಾಗಿ ತೋರ್ಪಡಿಸಿಕೊಂಡಿತು. ಹೀಗೆ ಆ ಭಾಷೆಯ ಅಭಿವೃದ್ಧಿಗೆ ಅವರು ಕಾರಣರಾದರಲ್ಲದೆ ಇಂದು ಕೊಂಕಣಿಯು ಒಂದು ಸ್ವತಂತ್ರ ಭಾಷೆಯಾಗಿ ತಲೆಯೆತ್ತುತ್ತಿರುವುದು ಕಳೆದ ಒಂದೆರಡು ಶತಮಾನಗಳ ಕಾಲದ ಪಾಶ್ಚಾತ್ಯರ ಪ್ರಯಾಸದ ಪರಿಣಾಮವೆಂದೇ ಹೇಳಬೇಕಾಗಿದೆ. ಪಶ್ಚಿಮ ಕರಾವಳಿಯಲ್ಲಿ ಕನ್ನಡವು ಸ್ಥಳೀಯ ಕ್ರೈಸ್ತರ ಮನೆ ಮಾತಾಗುವುದು ಬಿಟ್ಟು, ಅದರ ಸ್ಥಾನವನ್ನು ಕೊಂಕಣಿಯು ಅಂದು ಕ್ರೈಸ್ತಮತ ಪ್ರಚಾರಕರ ದೆಸೆಯಿಂದ ಪಡೆಯಿತೆಂಬುದು ಐತಿಹಾಸಿಕವಾಗಿ ನಿಜವಾದ ವಿಚಾರವಾಗಿದೆ.

**೧೭. ಕೊಡವ, ತೋಡ ಮತ್ತು ಬಡಗ ಭಾಷೆಗಳಲ್ಲಿ ಬೈಬಲ್ ಬರೆಹಗಳು :-**

ಕನ್ನಡದ ಉಪಭಾಷೆಗಳಾಗಿ ಪೂರ್ವಕಾಲದಿಂದಲೇ ಗ್ರಾಮಾಂತರಗಳಲ್ಲಿ ಬಳಸಲ್ಪಡುತಿದ್ದ ಕೊಡಗಿನ ಕೊಡವ, ನೀಲಗಿರಿಯ ತೋಡ ಮತ್ತು ಮೈಸೂರಿನ ಬಡಗ ಭಾಷೆಯಂಥಾ ನುಡಿಗಳಲ್ಲೂ ಈ ವಿದೇಶೀಯ ಕ್ರೈಸ್ತ ಮತಬೋಧಕರು ತಮ್ಮ ಸಾಮರ್ಥ್ಯವನ್ನು ತೋರಿಸದೆ ಬಿಡಲಿಲ್ಲ. ಕೊಡವ ನುಡಿಯಲ್ಲಿ ಬೈಬಲ್ ಕೃತಿಗಳು ರಚಿಸಲ್ಪಡದೇ ಇದ್ದರೂ Graetor, Richtor, Cole ಮತ್ತು Kittel ಇವರು ಈ ಭಾಷೆಯಲ್ಲಿ ಸಾಕಷ್ಟು ಪರಿಣತಿಯನ್ನು ಗಳಿಸಿ ಸ್ಥಳೀಯ ಜನರೊಡನೆ ತಮ್ಮ ಮತ ಪ್ರಚಾರಾರ್ಥವಾಗಿ ವ್ಯವಹರಿಸಿದ್ದರು. 1873 ರಲ್ಲಿ Dr. Arthur Burnell ಇವನು "Parable of the Sower etc.," ಎಂಬುದಾಗಿ ಸಂಪಾದಿಸಿದ ಬೈಬಲ್ ಪ್ರಸಂಗವನ್ನು ಕೊಂಕಣಿ, ಮಲೆಯಾಳ, ತೋಡ, ಕೊಡವ ಇತ್ಯಾದಿ ಭಾಷೆಗಳಿಗೆ ಇತರ ವಿದ್ವಾಂಸರ ಸಹಾಯದಿಂದ ಭಾಷಾಂತರಿಸಿ ಪ್ರಕಟಿಸಿದನು. ಅದರಲ್ಲಿ St. Mathew ಇವನ ಸೂಕ್ತಿಗಳ ಒಂದು ಭಾಗವನ್ನು ಕೊಡವ ನುಡಿಯಲ್ಲಿ ಹೀಗೆ ಬರೆದಿದೆ:—

"1. ಆ ನಾಳ್‌ಲ್ ಯೇಸು ಮನೆಂಜಿ ಪೊರಟಿತ್, ಸಮುದ್ರತ್‌ರ ಪಕ್ಕ

ಅಳಿತ್ ಅಂಡತ್.

"2. ಪಿಂಞ ಪೆರ್ತ ಗುಡ್ಡೆ ಜನ ಅಂವಂಡ ಪಕ್ಕ ಕೂಡಿತ್ ಬಂದಾನಂಗೊಂಡ್ ಅಂವ ಹಡಗ್ ಪತ್ತಿತ್ ಎಳತಂಡತ್; ಗುಡ್ಡೆತ್ೀರಾ ಕಶಿಲ್ ನಿಂದತ್.

"3. ಅಕ್ಕ ಅಂವ ಅಯಂಗ್ ಸಾವ್ಯತ್‌ಲಿಂಜಿ ಪೆರ್ತ್ ತಕ್ಕ್ ಪರಂದಿತ್ ಎನ್ನ್‌ನದ್ ಎನ್ನ್‌ೀಂದ್ ಎಣ್ಣ್‌ಚೆಂಗಿ, ಇದಾ, ಬಿತ್ತುವಂವ ಬಿತ್ತುವಕ್ ಪೊರಟಿತ್.

"4. ಅಂವ ಬಿತ್ತುವಕ ಚೆನ್ನಂಗ್ ಬಟ್ಟೆರ ಪಕ್ಕ ಬುದ್ದತ್, ಪಕ್ಷಿಯ ಬಂದಿತ್ ಆದ್‌ನ ತಿಂದ್‌ಬ್‌ಟ್ಟತ್.

"5. ಇಂಞ ಚೆಂನಂಗ್ ಏರ ಮಂಣ್ ಇಲ್ಲತ ಕಲ್ಲ್‌ಜಾಗತ್‌ಲ್ ಬುದ್ದತ್, ಅದಂಗ್ ಆಳತ್ ಮಣ್ಣ್ ಇಲ್ಲತಾನೆಂಗೊಂಡ್ ಅಕ್ಕನ್ನೆ ಮೊಳತತ್........"

ನೀಲಗಿರಿಯ ತೋಡಭಾಷೆಯಲ್ಲಿಯೂ Dr. Burnell ಮತ್ತು G. U. Pope ಇವರಲ್ಲದೆ Col. W. Marshall ಇವನು ಈ ಭಾಷೆಯಲ್ಲಿ ಪ್ರಬಲ ಪಾಂಡಿತ್ಯವನ್ನು ಪಡೆದಿದ್ದು ಅಲ್ಲಿದ್ದ ಇತರ ಐರೋಪ್ಯಾ ಕ್ರೈಸ್ತಗುರುಗಳಿಗೆ ಆ ಭಾಷೆಯಲ್ಲಿಯೇ ಮತಭೋಧನಾ ಕೃತಿಗಳನ್ನು ರಚಿಸಲು ನೆರವಾದನು. George Casamajor ಇವನು Carl Moerika ಇವನೊಡನೆ ಸೇರಿ 1890 ರಲ್ಲಿ St. Luke's ಇವನ ಸೂಕ್ತಿಗಳನ್ನು ತೋಡ ಮತ್ತು ಬಡಗ ಭಾಷೆಗಳಲ್ಲಿ ಬರೆಯಲು ಪ್ರಯತ್ನಿಸಿದನು.

ಈ ಹಲವು ದ್ರಾವಿಡ ಉಪಭಾಷೆಗಳ ಪೈಕಿ ಬಡಗ ಭಾಷೆಯಲ್ಲಿಯೇ ಹೆಚ್ಚು ಬೈಬಲ್ ಗ್ರಂಥಗಳು ರಚಿತವಾದುವು. ಉದಾಹರಣೆಗೆ "ಮನಕನ್ನಡಿ" ಅಥವಾ "Heart Book" ಎಂದು 1894 ರಲ್ಲಿ ಪ್ರಕಟವಾದ ಬಡಗಭಾಷೆಯ ಪುಸ್ತಕದಿಂದ ಈ ಕೆಲವು ಪಂಕ್ತಿಗಳನ್ನು ಎತ್ತಿ ಇಲ್ಲಿ ಕೊಡಲಾಗಿದೆ:—

"ಈ ಮೊಗವ ನೋಡಿಲೆ, ಏಯದೊಂದು ಒಳ್ಳೆಯ ಲಚ್ಚಣವೂ ಕ್ಹಾಂಬದಿಲ್ಲೆ; ಏಕಾಂದಲೆ ಪಾಪದ ಊಳಿಗೆ ಯೆಂದ ಹುಟ್ಟುವ ಸುಕ ದುಕ್ಕಗ್ಳೋಂದ ಮೊಗದ ಉರುಪು ಬದಲಾರ. ಲೋಕದ ಮಸಿಚಗ ಈ ಮೊದಗೊ ಅಪರೂಪ ಆದದ್ದು ಏನೂ ಕ್ಹಾಂಬದುಗಿಲ್ಲೆ. ಆತಿ ಈ ಪಡದೊ ತೋರುವ ಹೆಂಗೆ ಮನಸ್ಸುನ ನಡುನೊ. ಪಿಶಾಚಿಸಿದ್ದು ಅದಿಕಾರ ನಡಿಸಿನ. ಅತವ ಮನಸ್ಸುನ ನೆಲಮೆಯು ಬುದ್ದೀಂದ ಅರಿದೊಂಬ ಒಬ್ಬ ಲೋಕದ ಮಸಿಚಗ ಅವ ನಂಬದೆ ನೆಗೆವ. ಇಲ್ಲದೊಲೆ ಅಪರ ನುಡಿವ. ಏಕಾಂದಲೆ ಅವ ತನ್ನ ಸುಬಾವದ ಒಳಗ್‌ನ ಗುಟ್ಟ್‌ಾ ಇನ್ನೂ ಅರಿಯದೆ ಇದ್ದನೆ.

1890 ರಲ್ಲಿ Rev. Wilhelm Luetze ಇವನು Luke's Gospel ಇದನ್ನು ಬಡಗ ಭಾಷೆಯಲ್ಲಿ 'ಹೊಸ ಒಡಂಬಡಿಕೆ' ಎಂಬುದಾಗಿ ಬರೆದನು. 1896 ರಲ್ಲಿ W. Sikemeir ಇವನು St. Mark ಇವನ ಪ್ರಸಂಗಗಳಲ್ಲಿ ಒಂದಾದ "ಲೋಕರಟ್ಟಗನ ಕತೆ" ಇದನ್ನು 72 ಪುಟಗಳ ಬಡಗ ಭಾಷೆಯ ಪ್ರಬಂಧವಾಗಿ

ಬರೆದನು. ಕೆಲವು ವಿದ್ವಾಂಸರು ತಮ್ಮ ಹೆಸರನ್ನು ಸೂಚಿಸದೆಯೇ ತೋಡ ಮತ್ತು ಬಡಗ ಭಾಷೆಗಳಲ್ಲಿ ಕೆಲವು ಬೈಬಲ್ ಕವನಗಳನ್ನೂ ಪ್ರಸಂಗಗಳನ್ನೂ ಬರೆದಿದ್ದಾರೆ. ಅವರ ಈ ಪರಿಶ್ರಮವೆಲ್ಲವೂ ಅಂದಿನ ಜನಸಾಮಾನ್ಯರಲ್ಲಿ ಜ್ಞಾನ ಮತ್ತು ಭಕ್ತಿ ಪ್ರಚೋದನೆಗೆ ವಿಶೇಷ ಅವಕಾಶವನ್ನೊದಗಿಸಿತು.

---

೧೬

“ ತಾವರಿಯ ಗಿಡಹುಟ್ಟಿ ದೇವರಿಗೆ ನೆರಳಾದಿ
ನಾ ಹುಟ್ಟಿ ಮನಿಗೆ ಎರವಾದೆ ಹಡೆದವ್ವ
ನೀ ಕೊಟ್ಟ ಮನಿಗೆ ಹೆಸರಾದೆ!

ಬಾಲಕರಿಲ್ಲದ ಬಾಳೀದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ, ಬಾಳೆಲೆಯು
ಹಾಸ್ಯುಂಡು ಬೀಸಿ ಒಗೆದಂಗ

[ಗರತಿಯ ಹಾಡು]

ಸುಮಾರು ಕ್ರಿ.ಶ. 1800 ರಿಂದ ಮೊದಲ್ಗೊಂಡು 1900 ರ ವರೆಗಿನ ಒಂದು ನೂರು ವರ್ಷಗಳಲ್ಲಿ ಐರೋಪ್ಯಾದಿಂದ ಬಂದು ಈ ದೇಶದಲ್ಲಿ ಕನ್ನಡವನ್ನು ಕಲಿತು ತಮ್ಮ ಮತಪ್ರಚಾರ ಕಾರ್ಯವನ್ನು ಈ ದೇಶದ ಸ್ಥಳೀಯ ಭಾಷೆಗಳ ಮೂಲಕ ವಾಗಿಯೇ ಸಾಧಿಸಲು ಇಂತಿಷ್ಟು ಬೈಬಲ್ ಸಾಹಿತ್ಯವನ್ನು ಕನ್ನಡದಲ್ಲಿ ಬಿಟ್ಟು ಹೋಗಿದ್ದಾರೆ ಎಂಬುದರ ಒಂದು ಸಿಂಹಾವಲೋಕನವನ್ನಷ್ಟೇ ಈ ವರೆಗೆ ಮಾಡಲಾಯಿತು. ಆ ಕನ್ನಡ ಬೈಬಲ್ ಕೃತಿಗಳ ಹಳೇ ಪ್ರತಿಗಳು ಇಂದಿಗೂ ಹಳೇ ಕ್ರೈಸ್ತಗುಡಿಗಳಲ್ಲಿ ಅಥವಾ ಪುಸ್ತಕಭಂಡಾರಗಳಲ್ಲಿ ಕಾಣಬಹುದು. ಇನ್ನೆಷ್ಟೋ ಪುಸ್ತಕಗಳು ಆ ಕಾಲ ದಲ್ಲಿಯೇ ಮತ್ತು ಇತ್ತೀಚೆಗೆ ಕಾಣೆಯಾಗಿ ಹೋಗಿವೆ. ಹಿಂದಿನ ಪುಟಗಳಲ್ಲಿ ಹೆಸರಿಸಿದ ಪಾಶ್ಚಾತ್ಯ ಲೇಖಕರೂ ಮತ್ತು ಅವರ ಕೃತಿಗಳೂ ಅಷ್ಟೇ ಅಲ್ಲದೆ ಇನ್ನೆಷ್ಟೋ ವಿದ್ವಾಂಸರು ಮತ್ತು ಮತಬೋಧಕರು ಕಳೆದ ಶತಮಾನದಲ್ಲಿ ಕನ್ನಡದಲ್ಲಿ ಬರೆದ ಬೈಬಲ್ ಗ್ರಂಥಗಳು ಈ ಲೇಖಕನ ಅವಗಾಹನೆಗೆ ಬಾರದೇ ಹೋಗಿರಬಹುದು. ಅವೆಲ್ಲವನ್ನೂ ಸಂಶೋಧಿಸಿ ಈ ವಿಷಯವನ್ನು ಪರಿಪುಷ್ಟವಾಗಿ ನಿರೂಪಿಸಿ ನಮ್ಮ ಮತ್ತು ಮುಂದಿನ ಪೀಳಿಗೆಗೆ ಅದರ ಪರಿಚಯವನ್ನು ಮಾಡಿಕೊಡುವುದು ಸೂಕ್ತವಾಗಿದೆ.

ಮತ ಮತ್ತು ಧರ್ಮಗಳು ಯಾವುದೇ ಇರಲಿ, ಕ್ರಿಸ್ತಮತವಿರಲಿ, ಇಸ್ಲಾಂ ಇರಲಿ, ಬೌದ್ಧ ಧರ್ಮವೇ ಇರಲಿ; ಅವೆಲ್ಲವನ್ನೂ ಹಲವು ರೀತಿಯಲ್ಲಿ ಒಂದು ಭಾಷೆ ಯಲ್ಲಿ ನಿರೂಪಿಸಿದಾಗ ಅವೆಲ್ಲವೂ ಆ ಭಾಷಾ ಸಾಹಿತ್ಯವಾಯಿತು! “ಸಹಿತಾಂನಾಂ ಭಾವಃ ಸಾಹಿತ್ಯಾ” ಎಂಬ ನುಡಿಗೆ ಅನುಸಾರವಾಗಿ ಒಂದು ಭಾಷೆಯಲ್ಲಿ ಬರೆದಿಡಲ್ಪಟ್ಟ ಕತೆ ಕವನಗಳೇ ಆಗಲಿ, ವ್ಯಾಕರಣ ನಿಘಂಟುಗಳೇ ಆಗಲಿ, ಸರಕಾರದ ವರದಿಗಳೇ ಇರಲಿ, ಅವೆಲ್ಲವೂ ಆ ಭಾಷೆಯ ಸಾಹಿತ್ಯವಾಗಿ ಶತಮಾನಗಳನಂತರ ಶೋಭಿಸುತ್ತವೆ. ಹಾಗೆ ಬರೆದಿಟ್ಟ ಗ್ರಂಥಗಳ ಉದ್ದೇಶವೇನೇ ಇರಲಿ, ಮತಪ್ರಚಾರವೇ ಆಗಲಿ, ಸಾಹಿತ್ಯ ಪ್ರಚಾರವೇ ಇರಲಿ, ಅವೆಲ್ಲವೂ ಕಾಲಾನುಕಾಲಕ್ಕೆ ದೇಶದಲ್ಲಿ ಉಳಿಯತಕ್ಕ ಆಸ್ತಿಯಾಗಿದೆ. ಆ ದೃಷ್ಟಿಯಿಂದ ಕನ್ನಡದಲ್ಲಿ ಅಂದಿನ ಐರೋಪ್ಯಾ ವಿದ್ವಾಂಸರು ಬರೆದಿಟ್ಟ ನೂರಾರು ಬೈಬಲ್ ಗ್ರಂಥಗಳನ್ನು ಇಂದು ಅವಲೋಕಿಸಿದಾಗ ಅವೆಲ್ಲಾ ಆ ಕಾಲದಲ್ಲಿ ನಮ್ಮ ನಾಡಿನ ಮತ್ತು ದೇಶದ ಜನದ ಮನೋವಿಕಾಸಕ್ಕೆ ಒಂದಲ್ಲ

ಒಂದು ರೀತಿಯಲ್ಲಿ ಸಹಾಯಕವಾಗಿತ್ತೆಂಬುದನ್ನು ಊಹಿಸಲೇ ಬೇಕಾಗಿದೆ. ದೇಶದ ಸಹಸ್ರಾರು ಜನರು ಅಂದು ಕ್ರೈಸ್ತ ಮತಾವಲಂಬಿಗಳಾಗಬೇಕಾದರೆ ಅವರಿಗೆ ಈ ದೇಶೀಯ ಭಾಷೆಗಳಲ್ಲಿ ಪ್ರಚಾರಪಡಿಸಿದ ಬೈಬಲ್ ಸಾಹಿತ್ಯವೂ ತಕ್ಕಷ್ಟು ಸ್ಫೂರ್ತಿಯನ್ನೊದಗಿಸಿತೆಂದೂ ಹೇಳಬಹುದಾಗಿದೆ.

**೨. ಭಾರತದ ಎಲ್ಲಾ ಭಾಷೆಗಳಲ್ಲೂ ಬೈಬಲ್ ಕೃತಿಗಳು ಹೆಚ್ಚಿದುವು :—**

ಕಳೆದ ಶತಮಾನದಲ್ಲಿ ಈ ದೇಶದಲ್ಲಿ ಇದ್ದ ಪಾಶ್ಚಾತ್ಯ ವಿದ್ವಾಂಸರ ಅಪರಿಮಿತ ಸಾಹಸವು ಕನ್ನಡ ಭಾಷೆಗೆ ಮಾತ್ರ ಅನ್ವಯಿಸದೆ ಹಿಂದೂಸ್ಥಾನದ ಇತರ ಭಾಷೆಗಳಲ್ಲೂ ಮೇರೆ ಮೀರಿ ಹರಿಯಿತೆಂಬುದನ್ನು ಹಿಂದೆಯೇ ಹೇಳಲಾಗಿದೆ; ಕಳೆದ 19ನೇ ಶತಮಾನದಲ್ಲಿ ಕನ್ನಡ ಭಾಷೆಯೊಂದರಲ್ಲೇ ಸುಮಾರು ೨೫೦೦ ರಷ್ಟು ಬೈಬಲ್ ಕೃತಿಗಳು, ಸಂಪೂರ್ಣ ಬೈಬಲ್‌ಗಳು, ಬೈಬಲ್ ಪ್ರಸಂಗಗಳು, ಕೀರ್ತನೆಗಳು, ಸೂಕ್ತಿಗಳೇ ಮೊದಲಾಗಿ ಬರೆಯಲ್ಪಟ್ಟು ಮುದ್ರಣವಾಗಿ ಪ್ರಚಾರವಾಗಿದ್ದರೆ, ತಮಿಳು ಭಾಷೆಯಲ್ಲಿ ಸುಮಾರು 3500, ಮಲೆಯಾಳೀ ಭಾಷೆಯಲ್ಲಿ ಸುಮಾರು 2500, ತೆಲುಗು ಭಾಷೆಯಲ್ಲಿ ಸುಮಾರು 3000, ಮರಾಠಿಯಲ್ಲಿ ಸುಮಾರು 2500 ಹೀಗೆ ಮೊದಲ್ಗೊಂಡು ಬೈಬಲ್ ಕೃತಿಗಳು ಪ್ರಚಾರವಾಗಿವೆ. ಉತ್ತರ ಹಿಂದೂಸ್ಥಾನದ ಎಲ್ಲಾ ಭಾಷೆಗಳಲ್ಲೂ ಇದೇ ರೀತಿಯಾಗಿ ಸಹಸ್ರಾರು ಸಂಖ್ಯೆಯಲ್ಲಿ ಬೈಬಲ್ ಗ್ರಂಥಗಳು ಬರೆಯಲ್ಪಟ್ಟಿವೆ. ಅವೆಲ್ಲಾ ಆಯಾ ಭಾಷಾಸಾಹಿತ್ಯಕ್ಕೆ ಪರಿಪುಷ್ಟವಾದ ವಿಚಾರ ಸಂಪತ್ತನ್ನೂ ತಾತ್ವಿಕ ವಿವೇಚನೆಯನ್ನೂ ಆಯಾ ಭಾಷೆಗಳಿಗೆ ಆಧುನಿಕ ಶೈಲಿಯನ್ನೂ ಕೊಡಲು ಸಹಾಯಕವಾದುವೆಂಬುದನ್ನೂ ಒಪ್ಪಲೇ ಬೇಕಾಗಿದೆ.

ಹಿಂದಿನ ಪುಟಗಳಲ್ಲಿ ಹೇಳಿದಂತೆ ಬ್ರಿಟಿಷ್ ಸರಕಾರದ ರಾಜಧಾನಿಯು ೨೦ನೇ ಶತಮಾನದ ಮೊದಲಿನ ಹತ್ತುವರ್ಷಗಳವರೆಗೂ ಬಂಗಾಳ ಮತ್ತು ಕಲ್ಕತ್ತಾ ನಗರವೇ ಆಗಿತ್ತು. ಕಲ್ಕತ್ತಾವು ಪ್ರವೃದ್ಧಮಾನವಾದ ವಿದ್ಯಾ ಹಾಗೂ ವ್ಯಾಪಾರ ಕೇಂದ್ರವಾಗಿ ಬೆಳೆಯಿತು. ಯೂರೋಪು ಖಂಡದಿಂದ ಬರುತ್ತಲಿದ್ದ ಸಹಸ್ರಾರು ಮತ ಬೋಧಕರು ಪ್ರಾರಂಭದಲ್ಲಿ ಬಂಗಾಳದಲ್ಲಿಯೇ ಅಧಿಕ ಸಂಖ್ಯೆಯಲ್ಲಿ ನೆಲೆಸಿದರು. ತಮ್ಮ ಮತಪ್ರಚಾರಕಾರ್ಯವನ್ನು ಅಲ್ಲಿ ಭರದಿಂದ ಸಾಗಿಸಿದರು. ಪರಿಣಾಮವಾಗಿ ಶ್ರೇಷ್ಠ ವಿಪ್ರಬ್ರಾಹ್ಮಣರ ವರ್ಗಕ್ಕೆ ಸೇರಿದ ಬಂಗಾಳದ ಬ್ಯಾನರ್ಜಿ, ಮುಖರ್ಜಿ, ಚಟರ್ಜಿ, ಸಿನ್ಹಾ, ಘೋಷ್ ಎಂಬೀ ಮೊದಲಾದ ಮನೆತನಗಳ ನೂರಾರು ಜನರು ಅಂದೇ ಕ್ರೈಸ್ತಮತಾವಲಂಬಿಗಳಾದರು. ಅಷ್ಟೇ ಅಲ್ಲ, ಬಂಗಾಳೀ ಸಾಹಿತ್ಯದಲ್ಲಿ ಸುಮಾರು 6,000 ಕ್ಕೂ ಮಿಕ್ಕಿ ಬೈಬಲ್ ಗ್ರಂಥಗಳು ಬರೆಯಲ್ಪಟ್ಟು ಪ್ರಚಾರವಾದುವೆಂದರೆ ಅದು ಸಾಮಾನ್ಯವಾದ ವಿಚಾರವೇನೂ ಅಲ್ಲ. ಪರಿಣಾಮವಾಗಿ ಆ ವರೆಗೂ ಭಾರತದ ಇತರ ಭಾಷೆಗಳಂತೆ ಸಾಮಾನ್ಯವಾದ ಒಂದು ಭಾಷೆಯಾಗಿದ್ದ ಬಂಗಾಳಿಯು ಕಳೆದ ಶತಮಾನದಲ್ಲಿ ಒಂದು ಪ್ರೌಢಸ್ಥಾನವನ್ನು ಗಳಿಸಿತು. Dr. William Carey ಇವನೊಬ್ಬನೇ ಸುಮಾರು ಇನ್ನೂರಕ್ಕೂ ಹೆಚ್ಚಾಗಿ ಬಂಗಾಳೀ ಗ್ರಂಥಗಳನ್ನು ಬರೆದು ಬೈಬಲ್ ಸಾಹಿತ್ಯಕೋಶಕ್ಕೆ ಸುರಿಸಿದನೆಂದರೆ ನಿಜಕ್ಕೂ ಅದೊಂದು ಕ್ರಾಂತಿಕಾರಕ

ವಾದ ಸಾಹಸವಾಗಿದೆ.

ಹೀಗೆ ಒಂದೊಂದೇ ಭಾಷೆಯಲ್ಲಿ ಅಷ್ಟು ಗ್ರಂಥಗಳೆಂದರೆ ಹಿಂದೂಸ್ಥಾನದ ಎಲ್ಲಾ ಸಣ್ಣ ಮತ್ತು ಪ್ರಬಲ ಭಾಷೆಗಳಲ್ಲಿ ಪಾಶ್ಚಾತ್ಯರು ಬರೆದ ಪುಸ್ತಕಗಳು ಒಟ್ಟಾಗಿ ಎಷ್ಟು! ಈ ಎಲ್ಲಾ ಭಾಷೆಗಳಲ್ಲಿ ಇರುವ ಬೈಬಲ್ ಕೃತಿಗಳ ಸಂಖ್ಯೆಯೆಷ್ಟು! ಪರಿಣಾಮವಾಗಿ ಅವೆಲ್ಲಾ ಈ ದೇಶದ ಜನರಿಗೆ ಅಂದು ಎಷ್ಟರಮಟ್ಟಿಗೆ ಮನೋವಿಕಾಸವನ್ನು ಮೊಳಗಿಸಲು, ಚೈತನ್ಯವನ್ನು ಬೀರಲು ಮತ್ತು ಹುಮ್ಮಸನ್ನು ಹುಟ್ಟಿಸಲು ಸಹಾಯಕವಾಗಿದ್ದಿತೆಂಬುದನ್ನೂ ಈ ಅಲ್ಪ ಬರೆವಣಿಗೆಯ ಮೂಲಕ ವರ್ಣಿಸಲು ಅಸಾಧ್ಯವಾಗಿದೆ.

**೩. ತಮ್ಮ ಬುದ್ಧಿಬಲ ಮತ್ತು ಜ್ಞಾನಬಲದಿಂದ ನಡೆಸಿದ ಸೇವೆ :—**

ಸುಮಾರು 500 ವರ್ಷಗಳ ಕಾಲ ಮಹಮ್ಮದೀಯ ಆಡಳಿತ, ಸಾಹಿತ್ಯ, ಸಂಸ್ಕೃತಿ, ಇತ್ಯಾದಿಗಳ ಪ್ರಭಾವಕ್ಕೆ ಒಳಗಾದ ಜನರು ಕೇವಲ ವಿಚಾರಶೂನ್ಯ ಮತ್ತು ವಿವೇಕಶೂನ್ಯರಾಗಿ ತೊಳಲುತ್ತಿದ್ದಾಗ ಪಾಶ್ಚಾತ್ಯರು ಅವರನ್ನು ಆ ಅಂಧಕಾರದ ಪರಿಸ್ಥಿತಿಯಿಂದ ಎಬ್ಬಿಸಿದರು. ಮಹಮ್ಮದೀಯ ವಿದ್ವಾಂಸರು ಈ ದೇಶದ ವಿಷಯವಾಗಿ ಆ ಕಾಲದಲ್ಲಿ ಸಾಕಷ್ಟು ಬರೆದಿರುವರಾದರೂ ಅವೆಲ್ಲವನ್ನೂ ಅವರು ತಮ್ಮ ಪರ್ಷಿಯನ್, ಅರಬೀ ಯಾ ತುರ್ಕೀ ಭಾಷೆಗಳಲ್ಲಿ ಬರೆದರು. ಯಾವ ಮಹಮ್ಮದೀಯನೂ ಈ ದೇಶದ ಭಾಷೆಯನ್ನು ಕಲಿತು ಅದರಲ್ಲಿಯೇ ತಮ್ಮ ಖುರಾನ್ ಧರ್ಮಗ್ರಂಥವನ್ನು ಬರೆದದ್ದು ಕಂಡುಬರುವುದಿಲ್ಲ. ಕ್ರಿ.ಶ. 1800 ರ ವರೆಗೂ ಕನ್ನಡ ಭಾಷೆಯಲ್ಲಿ ಯಾವ ಮಹಮ್ಮದೀಯನೂ ತಮ್ಮ ಧರ್ಮ ತತ್ವಗಳ ವಿಚಾರವಾಗಿ ಬರೆದದ್ದು ತೋರುವುದಿಲ್ಲ. ಹಾಗಿದ್ದರೂ ಅವರು ಲಕ್ಷಾಂತರ ಜನವನ್ನು ಕೇವಲ ತಮ್ಮ ಖಡ್ಗಬಲದಿಂದ ತಮ್ಮ ಮತಕ್ಕೆ ಸೇರಿಸಿಕೊಂಡು ಹಾಗೆ ಸೇರಿದ ಜನವನ್ನು ತಮ್ಮ ಸರಕಾರದ ಭದ್ರತೆಯನ್ನು ಕಾಯುವ ಸಿಪಾಯಿಗಳಾಗಿ ಇರಿಸಿದರು.

ಆದರ ಬದಲಾಗಿ ಕ್ರೈಸ್ತರು ಅದೊಂದು ಸುಸಂಸ್ಕೃತ ರೀತಿಯಲ್ಲಿ ಜನರನ್ನು ಮತಾಂತರಗೊಳಿಸಿದರು. ಹಾಗೆ ತಮ್ಮ ಮತಕ್ಕೆ ಸೇರಿದ್ದ ದಳಿದ ವರ್ಗದ ಜನಕ್ಕೆ ಅವರು ಆಸ್ತಿಯಿತ್ತು, ಸೌಕರ್ಯವಿತ್ತು, ವಿದ್ಯೆಯಿತ್ತು ಉತ್ತಮ ಜನಾಂಗವಾಗಿ ಅವರನ್ನು ಮೇಲೆತ್ತಲು ಶ್ರಮಿಸಿದರು. ಹಾಗಾಗಿ ಸಮಾಜಸೇವೆಯೆಂಬುದು ಅಂದಿನ ಕ್ರೈಸ್ತಮತ ಪ್ರಚಾರಕರ ನಿತ್ಯದ ಕಾರ್ಯಕ್ರಮವಾಗಿತ್ತು.

ಈ ದೇಶದ ಜನರ ಮೌಢ್ಯವನ್ನು ನಿವಾರಿಸಲು ಬ್ರಿಟಿಷರು ಎಷ್ಟು ಪ್ರಯತ್ನಿಸಿದರೋ ಅಷ್ಟೇ ಪ್ರಮಾಣದಲ್ಲಿ ಈ ದೇಶದ ಜನರ ಸಂಸ್ಕೃತಿಯನ್ನು ಉಳಿಸಲು ಅವರು ಹೆಣಗಿದರು. ಗೋವಾದಲ್ಲಿ ಪೋರ್ಚುಗೀಸರು ತಮ್ಮ ಮತಕ್ಕೆ ಸೇರಿದ ಹಿಂದೂಜನರ ಉಡಿಗೆ ತೊಡಿಗೆಗಳೆಲ್ಲವನ್ನೂ ಪಾಶ್ಚಾತ್ಯರ ಕ್ರಮಕ್ಕೆ ಬಲಾತ್ಕಾರಿಕವಾಗಿ ತಿರುಗಿಸಿದಾಗ ಬ್ರಿಟಿಷರು ಅಂಥಾ ಮೂರ್ಖತನಕ್ಕೆ ಎಡೆಗೊಡದೆ ಈ ದೇಶದ ಸಂಸ್ಕೃತಿಯನ್ನು ಪೋಷಿಸಿದರು. ಪಂಜಾಬಿನ ಸಿಕ್ಖರು ಸಿಪಾಯಿಗಳಾಗಿಯೂ ಅವರ ರುಮಾಲು ಗಡ್ಡ ಮೀಸೆಗಳನ್ನಂತೆಯೇ ಉಳಿಸಲು ಅನುವಿತ್ತರು, ಬ್ರಾಹ್ಮಣರೂ ಇತರರೂ ತಮ್ಮ

ರುಮಾಲು ಪಂಚೆಗಳಿಂದಲೇ ಮೆರೆದರು. ಈ ದೇಶದ ಜನರು ಉಡಿಗೆ ತೊಡಿಗೆಗಳಲ್ಲಿ ಬಿಳಿಜನವನ್ನು ಅನುಸರಿಸಿದ್ದರೆ ಅದು ಅವರು ತಾವಾಗಿಯೇ ತಮ್ಮ ಅಂದಿನ ಪ್ರಭುಗಳನ್ನು ಮೆಚ್ಚಿಸಲಿಕ್ಕೆ ಅಂಥಾ ವೇಷವನ್ನು ತೊಟ್ಟರಲ್ಲದೆ ಬೇರೇನೂ ಅಲ್ಲ. ಬ್ರಿಟಿಷರು ಇನ್ನೊಂದು ಅರ್ಧ ಶತಮಾನದ ಕಾಲವಾದರೂ ಈ ದೇಶದಲ್ಲಿ ಉಳಿದಿದ್ದರೆ ಮತ್ತು ಅವರಿಂದಲೇ ಆಧುನಿಕ ವಿದ್ಯೆಯನ್ನು ಪಡೆದು ಪ್ರಸಿದ್ಧರಾದ ಈ ದೇಶದ ಜನರು ಅವರಿಗೆ ತಕ್ಕ ರೀತಿಯಲ್ಲಿ ಸಹಕಾರವನ್ನಿತ್ತಿದ್ದರೆ ಅವರು ಈ ದೇಶದಲ್ಲಿ ಇಂದಿಗೂ ಇರುವ ಜಾತಿ ಭೇದ, ಜನಭೇದ, ಇತ್ಯಾದಿಗಳನ್ನೂ ಕಿತ್ತೊಗೆಯುತ್ತಿದ್ದರು. ಆ ಸೌಲಭ್ಯವು ಅವರಿಂದ ಈ ದೇಶಕ್ಕೆ ಒದಗಲಿಲ್ಲ. ಹಾಗಿದ್ದರೂ ಕಳೆದ ಶತಮಾನದ ಆ ಅಲ್ಪ ಅವಧಿಯಲ್ಲಿ ಅವರು ತಮ್ಮ ಬುದ್ಧಿಬಲ ಮತ್ತು ಜ್ಞಾನಬಲವನ್ನು ಉಪಯೋಗಿಸಿ ಈ ದೇಶದಲ್ಲಿ ನಡೆಸಿದ ಕಾರ್ಯವು ಚಿರಸ್ಮರಣೀಯವಾಗಿ ನಿಲ್ಲತಕ್ಕದಾಗಿದೆ.

**೪. ಕ್ರೈಸ್ತರ ವಾಗ್ಬಲಕ್ಕೆ ಹಿಂದೂಧರ್ಮ ಮಣಿಯಲಿಲ್ಲ :—**

ಸುಮಾರು ಕ್ರಿ.ಶ. 1750 ರಿಂದೀಚೆಗೆ ಈ ದೇಶದ ಹಳ್ಳಿಗ್ರಾಮಗಳಲ್ಲಿ ಕ್ರೈಸ್ತಮತಪ್ರಚಾರಕರ ಉಪನ್ಯಾಸಗಳೂ ಬೋಧನೆಗಳೂ ಒಂದಲ್ಲ ಒಂದು ರೀತಿಯಲ್ಲಿ ನಡೆಯುತ್ತಲೇ ಇದ್ದುವು. ಹಲವರು ತಮ್ಮ ಮತಪ್ರಚಾರದ ವಿಷಯವಾಗಿ ಭಾಷಣಗಳನ್ನು ಮಾಡುತ್ತಾ ಇದ್ದಾಗ ಕೆಲವರು ವ್ಯವಸಾಯದ ವಿಷಯವಾಗಿಯೂ ಕೆಲವರು ಆರೋಗ್ಯದ ವಿಷಯವಾಗಿಯೂ ಇನ್ನು ಕೆಲವರು ಕೈಗಾರಿಕೆಯ ವಿಷಯವಾಗಿಯೂ ಜನರಿಗೆ ಬೋಧಿಸುತ್ತಿದ್ದರು. ಕಿರಿಯರಿಗೆ ಶಾಲೆಗಳಲ್ಲಿ ಹೇಗೋ ಹಾಗೆಯೇ ಹಿರಿಯರಿಗೂ ಬೇರೆ ಬೇರೆ ವಿಷಯಗಳ ಮೇಲೆ ವಿದ್ಯಾಭ್ಯಾಸವನ್ನೀಯುತಿದ್ದರು. ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಅವರಿಗೆ ಬ್ರಿಟಿಷ್ ಸರಕಾರದ ಬೆಂಬಲವೂ ಸಹಾನುಭೂತಿಯೂ ಇದ್ದಿತು. ಅವರ ವಿದ್ಯಾಕ್ರಮದಲ್ಲಿ ನೈತಿಕ ವಿಚಾರಗಳಿಗೆ ವಿಶೇಷ ಪ್ರಾಶಸ್ತ್ಯವನ್ನಿತ್ತಿದ್ದರು. ಈ ದೇಶದ ಜನರ ಅನ್ಯಾಯ, ಅನೀತಿ, ಅಕ್ರಮ, ಅವ್ಯವಹಾರ, ದುರ್ಗುಣ ದುರ್ವ್ಯಾಪಾರಗಳ ಬಗ್ಗೆ ನೂರಾರು ಜನರು ಆ ಕಾಲದಲ್ಲಿ ಟೀಕಿಸಿದರು. ಹಾಗೆ ಟೀಕಿಸಿ ಬರೆದ ಹೊತ್ತಗೆಗಳೆಲ್ಲವೂ ಭಾರತೀಯ ಭಾಷೆಗಳಲ್ಲೂ ಇಂಗ್ಲಿಷ್, ಜರ್ಮನ್, ಫ್ರೆಂಚ್ ಇತ್ಯಾದಿ ಭಾಷೆಗಳಲ್ಲೂ ಇವೆ. ಹೇಗೂ ಅಂದಿನ ಕ್ರೈಸ್ತಮತಬೋಧಕರು ಈ ದೇಶದ ವಯಸ್ಕರಿಗೆ ಸಾರ್ವಜನಿಕ ವಿದ್ಯಾಭ್ಯಾಸದ ಅವಕಾಶ ಕಲ್ಪಿಸಿ ಅವರ ನೀತಿ ನಡತೆಗಳನ್ನು ಸರಿಗಟ್ಟಲಿಕ್ಕೂ ತುಂಬಾ ಶ್ರಮಿಸಿದರು.

ಅವರ ಈ ಧರ್ಮಬೋಧೆಯ ಸಡಗರದಲ್ಲಿ ಅವರು ಇತರ ಮತಗಳನ್ನು ನಿಷ್ಕಾರಣವಾಗಿ ಹಳಿದುದ್ದೇ ಇಲ್ಲ. ಹಾಗೆ ಟೀಕಿಸುವ ಸಂದರ್ಭವೊದಗಿದಾಗ ಅವರು ಅದಕ್ಕೆ ವೇದ, ಪುರಾಣ, ಶಾಸ್ತ್ರ, ಸ್ಮೃತಿಗಳ ಆಧಾರಗಳನ್ನು ಕೊಟ್ಟೇ ತಮ್ಮ ಕಾರ್ಯವನ್ನು ಸಾಧಿಸಿದರು. ಈ ದೇಶದ ಭಾಷೆಗಳಲ್ಲಿ ಬಹುಮಟ್ಟಿಗೆ ನುರಿತ ವಿದ್ವಾಂಸರ ಪೈಕಿ ಶೇಕಡ ಐವತ್ತರಷ್ಟು ಜನರು ಕ್ರೈಸ್ತಗುರುಗಳೂ ಸಂಸ್ಕೃತ ಪಂಡಿತರೂ ಆಗಿದ್ದರೆಂಬುದನ್ನು ನೆನೆಯಬೇಕಾಗಿದೆ. ಅಂದಿನ ಬ್ರಾಹ್ಮಣರು ಅಂಥವರ ವಿದ್ವತ್ತನ್ನು ನೋಡಿ ಸಹಿಸಲಾರದೆ ಅವರನ್ನು ಕೇವಲ ಫರಂಗಿಗಳೆಂದು ಹಾಸ್ಯಮಾಡುತಿದ್ದಾಗ ಅಂಥಾ

"ಫರಂಗಿ"ಗಳು ಆ ಬ್ರಾಹ್ಮಣರಿಗಿಂತ ನೂರು ಪಾಲು ಹೆಚ್ಚಿನ ಭಾರತೀಯ ವಿದ್ಯೆಯನ್ನು ಪಡೆದು ಸಂಸ್ಕೃತ ಸಾಹಿತ್ಯದಲ್ಲಿ ಅಪಾರ ಪ್ರಾವೀಣ್ಯವನ್ನು ಸಂಪಾದಿಸಿ ಈ ದೇಶದ ಜನರನ್ನು ದಂಗುಬಡಿಸಿದರು. ಈ ಸಂದರ್ಭದಲ್ಲಿ ಜವಾಹರಲಾಲ್ ನೆಹರು ರವರು ಈ ರೀತಿ ಅವರ ಸಾಹಿತ್ಯಸೇವೆಯನ್ನು ತಮ್ಮ ಒಂದು ಗ್ರಂಥದಲ್ಲಿ ಪ್ರಶಂಸಿಸಿ ಬರೆದರು:

"To Sir William Jones and to many other European scholars, India owes a deep debt of gratitude for the rediscovery of her past literature."

ಪಾಶ್ಚಾತ್ಯರ ಸಾಹಸವು ಹಾಗಿದ್ದಾಗ ಭಾರತೀಯರು ಸಾಕಷ್ಟು ಮುಂದುವರಿದರು; ಅವರು ಸ್ಥಾಪಿಸಿದ ಶಾಲೆಗಳಲ್ಲಿಯೇ ವಿದ್ಯೆಯನ್ನು ಪಡೆದರು; ಕ್ರೈಸ್ತ ಗುರುಗಳೇ ಯೋಗ್ಯ ಅಧ್ಯಾಪಕರಾಗಿಯೂ ಪ್ರಸಿದ್ಧರಾದರು. ಅವರು ಬರೆದ ಪಠ್ಯಪುಸ್ತಕಗಳನ್ನೇ ಮೊದಲ ಬಾರಿಗೆ ಅಂದಿನ ದೇಶೀಯರು ಪಠಿಸಿದರು. ಹಲವು ಸಂದರ್ಭಗಳಲ್ಲಿ ಅವರ ಆಚಾರ ವಿಚಾರಗಳನ್ನೇ ಅನುಸರಿಸಲುದ್ಯುಕ್ತರಾದರು. ಹೀಗಿದ್ದರೂ ಅವರ ವಾಗ್ಬಲಕ್ಕೆ ಹಿಂದೂಧರ್ಮವು ಸುಲಭದಲ್ಲಿ ಮಣಿಯಲಿಲ್ಲ. ಶೇಕಡ 99 ರಷ್ಟು ಜನರು ಹಿಂದೂಗಳಾಗಿಯೇ ಉಳಿದರು; ಅವರಿಂದ ಉತ್ತಮವಾದುವುಗಳೆಲ್ಲವನ್ನೂ ಈ ದೇಶದ ಜನರು ಪಡೆದರು; ಆದರೆ ತಮ್ಮ ಧರ್ಮ ಧ್ಯೇಯಗಳನ್ನು ಮಾತ್ರ ಆ ವಿದೇಶೀಯರಿಗೆ ಮಾರುಗೊಡಲಿಲ್ಲ.

**೫. ದೇಶದ ವಿಧಾಯಕ ಕಾರ್ಯಕ್ರಮಗಳಲ್ಲಿ ಅವರೇ ಮುಂದಾದರು :—**

ಬ್ರಿಟಿಷ್ ರಾಜಕಾರಣಿಗಳು ಯಾವುದೇ ಯೋಜನೆಯನ್ನು ಈ ದೇಶದಲ್ಲಿ ಜಾರಿಗೆ ತಂದರೂ ಅದಕ್ಕೆ ತಕ್ಕ ಸಲಹೆಯನ್ನೀಯಲು ಕ್ರೈಸ್ತಗುರುಗಳೇ ಮುಂದಾದರು. ಕ್ರೈಸ್ತಗುಡಿಗಳನ್ನು ದೇಶದ ಎಲ್ಲಾ ಭಾಗಗಳಲ್ಲಿ ಅವರು ಏರಿಸಿದಾಗ ಅವುಗಳೇ ಈ ದೇಶದಲ್ಲಿ ಮೊದಲ ಬಾರಿಗೆ ಕಟ್ಟಲ್ಪಟ್ಟ ಆಧುನಿಕ ಕ್ರಮದ ಕಟ್ಟೋಣಗಳಾದುವು. ಅನಂತರ ಉತ್ತಮ ಶಿಲಾ ಕಟ್ಟಡಗಳೂ, ಸರಕಾರೀ ಖಚೇರಿಗಳ ಕಟ್ಟಡಗಳೂ ಅಲ್ಲಲ್ಲಿ ಕಟ್ಟಲ್ಪಟ್ಟುವು. ಪೂರ್ವಕಾಲದಲ್ಲಿ ಕಟ್ಟಲ್ಪಟ್ಟದ್ದ ಭವ್ಯವಾದ ದೇವಾಲಯಗಳೂ ಕೋಟೆಗಳೂ ಅಂದಿನ ಶಿಲ್ಪಿ ಶಾಸ್ತ್ರವನ್ನು ಅನ್ವಯಿಸಿ ಕಟ್ಟಲ್ಪಟ್ಟದ್ದಾಗಿದ್ದುವು. ಅದರನಂತರ ಮಹಮ್ಮದೀಯರು ತಮ್ಮದೇ ಆದ ಒಂದು ಕಟ್ಟೋಣಶೈಲಿಯನ್ನು ಇಲ್ಲಿ ಬೇರೂರಿಸಿದರು. ಹಿಂದೂ ರಾಜರ ಮತ್ತು ಪ್ರಭುಗಳ ಮನೆಗಳು ಬರೇ ಕತ್ತಲು ಕೋಣೆಗಳಿಂದ ಮತ್ತು ಹಲವಾರು ಮಳಿಗೆಗಳಿಂದ ಕೂಡಿದ್ದ ಕಟ್ಟೋಣಗಳಾಗಿದ್ದುವು. ಉಳಿದ ಜನವೆಲ್ಲ, ಎಷ್ಟೇ ದೊಡ್ಡವರಿರಲಿ, ಅವರು ಮಣ್ಣುಗೋಡೆಗಳಿಂದೇರಿಸಲ್ಪಟ್ಟ ಹುಲ್ಲಿನ ಚಾವಡಿಗಳಲ್ಲಿಯೇ ವಾಸಿಸಿದ್ದರು.

ಕಳೆದ ಶತಮಾನದಲ್ಲಿ ಅಂಥಾ ಹಳೇ ಕಟ್ಟೋಣ ಚಾವಡಿಗಳನ್ನೆಲ್ಲಾ ಕಳಚಿ ಜನರು ಪಾಶ್ಚಾತ್ಯ ಕ್ರಮದಲ್ಲಿ ತಮ್ಮ ಮನೆಗಳನ್ನು ನಿಲ್ಲಿಸಿದರು. ಆ ವರೆಗೂ ಕಳ್ಳರು ಯಾವ ಗೋಡೆಯ ತೂತದ ಒಳಗಾಗಿ ನುಗ್ಗುವರೋ ಎಂಬ ಭಯದಿಂದ ಇದ್ದ ಕತ್ತಲೆ

ಕೋಣೆಗಳೆಲ್ಲವೂ ವಿಶಾಲವಾದ ಕಿಟಕಿ ಬಾಗಿಲುಗಳ ಮೂಲಕ ಬೆಳಗತೊಡಗಿದುವು. ಹಂಚಿನ ಕಾರ್ಖಾನೆಗಳು ಸ್ಥಾಪನೆಯಾಗಿ ಪಾಶ್ಚಾತ್ಯ ವರ್ತಕರ "ಮಂಗಳೂರು ಹಂಚು" ಹಿಂದೂ ಸ್ಥಾನವೆಲ್ಲಾ ಹಂಚಲ್ಪಟ್ಟುವು. ಮನೆಗಳನ್ನು ಹಂಚಿನಿಂದ ಅಲಂಕೃತವಾಗಿ ಹೊದಿಸಿದರು. ಈ ಬಗ್ಗೆ ಆದ ಬದಲಾವಣೆಗಳನ್ನು ಕುರಿತಾಗಿಯೂ ಹಲವು ಗ್ರಂಥಗಳು ಬರೆಯಲ್ಪಟ್ಟವೆ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕ್ರಿ ಶ. 17 ಮತ್ತು 18ನೇ ಶತಮಾನಗಳಲ್ಲಿ ಕಟ್ಟಲ್ಪಟ್ಟದ್ದ ಕ್ರೈಸ್ತಗುಡಿಗಳು ಮತ್ತು ಇತರ ಕಟ್ಟೋಣಗಳನ್ನು ಕುರಿತು Fr. Joseph Vaz ಇವನು ಇಂಗ್ಲಿಷ್‌ನಲ್ಲಿ ಉತ್ತಮವಾದ ಗ್ರಂಥವನ್ನು ಒಂದುನೂರು ವರ್ಷಗಳಿಗೆ ಹಿಂದೆಯೇ ಬರೆದನು.

ಇದೇ ವಿಷಯವನ್ನು ಮುಂದುವರಿಸಿ ಹೇಳುವುದಾದರೆ ದೇಶದ ಉದ್ದಗಲಕ್ಕೂ ಅವರು ರಸ್ತೆಗಳನ್ನು ನಿರ್ಮಿಸಿದ್ದು ಮತ್ತೊಂದು ಸಾಹಸಕರವಾದ ಕೆಲಸವಾಗಿದೆ. ಆ ವರೆವಿಗೂ ಕಾಡುದಾರಿಗಳಲ್ಲಿಯೇ ಸುತ್ತಾಡುತಿದ್ದ ಮತ್ತು ಸ್ಥಳದಿಂದ ಸ್ಥಳಕ್ಕೆ ಹೋಗುತಿದ್ದ ಸಂದರ್ಭಗಳಲ್ಲಿ ಗಾಡಿಮಾರ್ಗಗಳೂ ರೈಲುದಾರಿಗಳೂ ಕಳೆದ ಶತಮಾನದ ಪ್ರಾರಂಭದಲ್ಲಿಯೇ ಕಾಣಿಸಿಕೊಂಡುವು. ಊರಿಂದ ಊರಿಗೆ ಹೋಗಲಿಕ್ಕೆ ಎಲ್ಲೆಲ್ಲಿ ರಸ್ತೆಗಳು, ಸೇತುವೆಗಳು ಬೇಕೆಂಬುದಾಗಿ ಅಂದಿನ ಕ್ರೈಸ್ತಗುರುಗಳೇ ಸರಕಾರದ ಅಧಿಕಾರಿಗಳಿಗೆ ತಿಳಿಸಿ ಆ ರೀತಿಯಾಗಿ ಅವರು ದೇಶದಲ್ಲಿ ಜನರ ಪ್ರಯಾಣದ ಸೌಕರ್ಯವನ್ನು ಹೆಚ್ಚಿಸಿದರು. ಒಂದು ರೀತಿಯಲ್ಲಿ ಹೇಳುವುದಾದರೆ ಈ ಮತಪ್ರಚಾರ ಕರ ತಂಡವು ಅಂದು ತಮ್ಮ ಧಾರ್ಮಿಕ ಕಾರ್ಯದಲ್ಲಿ ಸಾಗಿಸಿದ ಕೆಲಸಕ್ಕಿಂತ ನೂರು ಪಾಲು ಹೆಚ್ಚಾಗಿ ಈ ದೇಶದ ರಾಜಕೀಯದಲ್ಲೂ ವಿವಿಧ ಯೋಜನೆಗಳ ನಿರ್ಮಾಣ ದಲ್ಲೂ ವಿಧಾಯಕ ಕಾರ್ಯಗಳಲ್ಲೂ ಶ್ರಮವಹಿಸಿ ದುಡಿದು ಜಯಪ್ರದರಾಗಿದ್ದಾರೆ. ಅವರ ಪೈಕಿ ಭಾಷಾಕುಶಲರಾಗಿದ್ದವರು ಸಾಹಿತ್ಯ ಮತ್ತು ವಿದ್ಯಾಪ್ರಗತಿಯ ಕಡೆಗೆ ಲಕ್ಷ್ಯವಿಟ್ಟು ಆ ದಿಶೆಯಲ್ಲಿ ದುಡಿದು ಯಶಸ್ವಿಗಳಾದರು.

**೬. ರಾಜಕೀಯದಲ್ಲೂ ಧಾರ್ಮಿಕ ನೀತಿಯನ್ನು ಅನುಸರಿಸಿದರು :—**

ಬ್ರಿಟಿಷರು ಕಳೆದ ಒಂದೆರಡು ಶತಮಾನಗಳ ಕಾಲದಲ್ಲಿ ತುಂಬಾ ಅನ್ಯಾಯ ವನ್ನು ಹಲವು ರೀತಿಯಲ್ಲಿ ಎಸಗಿದರೆಂದು ಬ್ರಿಟಿಷ್ ವಿದ್ಯಾಪಾರಂಗತರಾದ ಈ ಶತ ಮಾನದ ಭಾರತೀಯರು ಅವರನ್ನು ಹಲವು ಬಾರಿ ಬಾಯ್ತುಂಬಾ ಬೈದುದೂ ಇದೆ. ಆದರೆ ನೂರಿನ್ನೂರು ವರ್ಷಗಳಿಗೆ ಹಿಂದೆ ಅಂದಿನ ವ್ಯಾಪಾರಿಗಳಾಗಿದ್ದ ಅವರು ಮಾಡಿದ ಅನ್ಯಾಯವನ್ನು ಪ್ರತಿಭಟಿಸಲು ಅಂದಿನ ಭಾರತದಲ್ಲಿ ಯಾರೂ ಇರಲಿಲ್ಲ. ಹಾಗೆ ಇದ್ದ ಒಬ್ಬಿಬ್ಬರು ಬ್ರಿಟಿಷ್ ಆಡಳಿತೆಯನ್ನು ತುಂಬಾ ಮೆಚ್ಚಿದ್ದರೆಂಬುದಕ್ಕೆ ಹಿಂದಿನ ಪುಟಗಳಲ್ಲಿ ಸಾಕಷ್ಟು ಹೇಳಲಾಗಿದೆ.

ಬ್ರಿಟಿಷ್ ರಾಜಕಾರಿಣಿಗಳು ಅಲ್ಲೊಂದು ಇಲ್ಲೊಂದು ಎಂಬಂತೆ ಅಕ್ರಮಗಳ ನ್ನೆಸಗಿದಾಗ ಅದನ್ನು ಸರಿಗಟ್ಟಲು ಬ್ರಿಟಿಷ್ ವಿದ್ವಾಂಸರೂ ಕ್ರೈಸ್ತಗುರುಗಳೂ ಮುಂದೆ ಬಂದು ಈ ದೇಶದ ಆಡಳಿತೆಯಲ್ಲಿ ಧಾರ್ಮಿಕ ನೀತಿಯನ್ನು ಅನುಸರಿಸ ಬೇಕೆಂದು ಅವರಿಗೆ ಸಲಹೆಯನ್ನು ಇತ್ತುದಕ್ಕೆ ನೂರಾರು ನಿದರ್ಶನಗಳಿವೆ. ಅಕೃತ್ಯ

ವನ್ನೆಸಗಿದಾಗ ಅವನು ಎಷ್ಟೇ ದೊಡ್ಡವನಾದರೂ ಅವನ ಕುಹಕವನ್ನು ಪ್ರಕಾಶಪಡಿಸಿ ಅವರು ಅಂಥಾ ನೀತಿಯನ್ನು ಖಂಡಿಸಿದ್ದಾರೆಂಬುವಕ್ಕೆ Robert Clive, Warren Hastings ಮೊದಲಾದವರ ಕಾಲದಿಂದಲೇ ನಡೆದ ವಾದವಿವಾದ ಗಳಿಂದ ವ್ಯಕ್ತವಾಗಿದೆ.

ಕ್ರೈಸ್ತರು ತಮ್ಮ ಧರ್ಮವನ್ನು ಬರೇ ಬಾಯಲ್ಲಿ ಹೇಳುತ್ತಾ ಪುಸ್ತಕಗಳಲ್ಲಿ ಬರೆಯುತ್ತಾ ಇದ್ದ ಶುಷ್ಕ ಧರ್ಮಾಭಿಮಾನಿಗಳಲ್ಲ. ಅವರು ತಮ್ಮ ರಾಜನೀತಿಯಲ್ಲಿ ತಪ್ಪಿದ್ದಾಗ ಅವರು ಹಿಡಿದ ದಾರಿ ತಪ್ಪು ಎಂದು ಕ್ರೈಸ್ತ ಧರ್ಮಾಭಿಮಾನಿಗಳು ಅವ ರನ್ನು ಸಾರಿ ಸಾರಿ ಎಚ್ಚರಿಸಿದ್ದಾರೆ. ಉದಾಹರಣೆಗೆ ಹೇಳುವುದಿದ್ದರೆ ಕ್ರಿ.ಶ. 18ನೇ ಶತಮಾನದಲ್ಲಿ ಪಾಶ್ಚಾತ್ಯರು ಈ ದೇಶದಲ್ಲಿ ಅನಾದಿಕಾಲದಿಂದಲೇ ಅನುಸರಿಸಲ್ಪಡು ತ್ತಿದ್ದ ಕೈಗಾರಿಕೆ, ಕೈಮಗ್ಗ, ನೆಯ್ಗೆ ಇತ್ಯಾದಿಗಳನ್ನು ಬಲಾತ್ಕಾರವಾಗಿ ನಿಲ್ಲಿಸಿ ದೇಶದ ಜನವನ್ನು ಬರೇ ವ್ಯವಸಾಯವನ್ನು ಮಾತ್ರ ಆಧರಿಸುವಂತೆ ಮಾಡಿದ ಅವರ ನೀತಿಯನ್ನು ಹಲವು ಪಾಶ್ಚಾತ್ಯ ಧರ್ಮಗುರುಗಳೂ ವಿದ್ವಾಂಸರೂ ಖಂಡಿಸಿದರು. ಇತಿಹಾಸಕಾರ Montgomery Martin ಇವನು 1840 ರಷ್ಟು ಹಿಂದೆಯೇ ಆ ವಿಚಾರವಾಗಿ ಹೀಗೆ ಹೇಳಿದ್ದನು :—

> "India is as much a manufacturing country as an agriculturist ; and he (the Britisher) would seek to reduce her to the position of an agricultural country, seeks to lower her in the scale of civilization......".

ಇಂಥಾ ವಿಷಯಗಳನ್ನು ಹೇಳಿ ಅಂದಿನ ಸರಕಾರವನ್ನು ಎಚ್ಚರಿಸಲು ಈ ದೇಶದಲ್ಲಿ ಒಬ್ಬನೂ ಇರಲಿಲ್ಲ. ಇನ್ನೊಂದು ಉದಾಹರಣೆಯನ್ನು ಹೇಳುವುದಾದರೆ ಬ್ರಿಟಿಷರು ಅಂದು ಈ ದೇಶದಲ್ಲಿ ಪ್ರಚಲಿತವಿದ್ದ ಗ್ರಾಮ ಸಭೆ, ಪುರಸಭೆ, ಇತ್ಯಾದಿ ಸ್ಥಳೀಯ ಸಂಸ್ಥೆಗಳನ್ನು ಕೇಂದ್ರೀಕರಿಸಿ ಅವನ್ನೆಲ್ಲಾ ಸರಕಾರದ ಅಂಕಿತಕ್ಕೆ ತರಲು ಪ್ರಯತ್ನಿಸುತ್ತಿ ದ್ದಾಗ ಮತ್ತೊರ್ವ ಶ್ರೇಷ್ಠ ರಾಜಕಾರಿಣಿ Sir Charles Metcalfe ಇವನು 1830 ರಲ್ಲಿ ಹೇಳಿದ ಮಾತುಗಳು ಎಲ್ಲಾ ಕಾಲಕ್ಕೂ ಅನ್ವಯಿಸುವಂಥಾದಾಗಿದೆ. ಅವನು ಈ ರೀತಿ ಆ ವಿಚಾರವಾಗಿ ಹೇಳಿದನು :—

> "The village communities are little republics having nearly everything they want within themselves ; and almost independent of foreign relations. They seem to last where nothing else lasts...".

ಇಂಥಾ ಸಮದರ್ಶಿಗಳಾದ ವಿದ್ವಾಂಸರೂ ಸುಸಂಸ್ಕೃತರೂ ಅವರ ಪೈಕಿ ಹಲವರಿದ್ದು ದೇಶದ ಅಂದಿನ ಆಡಳಿತ ಪರಿಸ್ಥಿತಿಯನ್ನು ನೆಟ್ಟಗಾಗಿಸಿದರು.

**೭. ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಅವರು ಅಂದೇ ಹೋರಾಡಿದರು :—**

ಕ್ರಿ.ಶ. 1780 ರಿಂದ ದೇಶದಲ್ಲಿ ಒಂದರನಂತರ ಒಂದಾಗಿ ಹಲವು ವಾರ್ತಾ ಪತ್ರಿಕೆಗಳು ಕ್ರೈಸ್ತ ವಿದ್ವಾಂಸರಿಂದ ಸ್ಥಾಪಿಸಲ್ಪಟ್ಟುವು ಎಂಬುದನ್ನು ಹಿಂದೆ ಹೇಳ

ಲಾಗಿದೆ. ಹಾಗೆ ಸ್ಥಾಪನೆಯಾದ ಪತ್ರಿಕೆಗಳಲ್ಲಿ ಕ್ರಿ.ಶ. 1818ರ "The Friend of India" ಎಂಬ ಪತ್ರಿಕೆಯು ಇಂದಿಗೂ "Statesman" ಎಂಬ ಹೆಸರಿನಿಂದ ಕಲ್ಕತ್ತಾ ಮತ್ತು ದಿಲ್ಲಿಯಲ್ಲಿ ಪ್ರಕಟವಾಗುತ್ತಿದೆ. ಪಾಶ್ಚಾತ್ಯ ಕ್ರೈಸ್ತರು ಬಂಗಾಳ ದಲ್ಲಿ ಮತ್ತು ಇತರ ಕಡೆಗಳಲ್ಲಿ ಹೊರಡಿಸುತಿದ್ದ ಪತ್ರಿಕೆಗಳಲ್ಲಿ ತಮ್ಮ ಜನರೇ ನಡೆಸುತ್ತಿದ್ದ ಆಡಳಿತ ನೀತಿಯನ್ನು ಆಗಿಂದಾಗ್ಗೆ ಟೀಕಿಸಿ ತಕ್ಕ ಸಲಹೆಗಳನ್ನು ಆಗಿಂದಾಗ್ಗೆ ಕೊಡುತ್ತಿದ್ದರು. ಆದರೆ ಬ್ರಿಟಿಷ್ ಸರಕಾರವು ಪತ್ರಿಕೆಗಳಿಗೆ ಯಥೇಚ್ಛ ಸ್ವಾತಂತ್ರವನ್ನು ಕೊಡದೆ ಅವುಗಳ ಮೇಲೆ ಕಠಿಣ ಕ್ರಮವನ್ನು ಕೈಕೊಳ್ಳಲಾರಂಭಿಸಿದರು. ಆಗ ಅದಕ್ಕೆ ವಿರುದ್ಧವಾಗಿ ಹಲವು ನಿಷ್ಠಾವಂತ ಪತ್ರಿಕೋದ್ಯಮಿಗಳು ತಮ್ಮ ಪ್ರತಿಭಟನೆಯನ್ನು ಸಾರಿದರು. ಹೀಗೆ ಆ ಕಾಲದಲ್ಲಿ ಎಂದರೆ ಕ್ರಿ.ಶ. 1785ರ ವೇಳೆಗೆ "Freedom of Press" ಇದಕ್ಕೆ ಹೋರಾಡಿದ ಮೊದಲಿಗರಲ್ಲಿ James Buckingham ಇವನು ಪ್ರಮುಖನು. ಇವನು ತನ್ನ ತೀವ್ರ ಪ್ರತಿಭಟನೆಯ ಪರಿಣಾಮವಾಗಿ ಸರಕಾರದ ದೃಷ್ಟಿಗೆ ಬಿದ್ದು ಅನಂತರ ಈ ದೇಶವನ್ನೇ ಬಿಟ್ಟು ಹಿಂದೆರಳಬೇಕಾಯಿತು.

ತನ್ನ ಪ್ರಾಮಾಣಿಕತೆ ಮತ್ತು ದಕ್ಷತೆಗಾಗಿ ಪ್ರಸಿದ್ಧನಾಗಿ ಕ್ರಿ.ಶ. 1800ರ ಕಾಲದಲ್ಲಿ ಹಲವು ಪ್ರಾಂತಗಳ ಅಧಿಕಾರಿಯೂ ಕೆಲಕಾಲ ಇಡೀ ಭಾರತದ ಮುಖ್ಯಾಧಿಕಾರಿಯೂ ಆಗಿದ್ದ Sir Charles Metcalfe ಇವನು ತನ್ನ ಧಾರ್ಮಿಕ ಮನೋವೃತ್ತಿಯ ಪರಿಣಾಮವಾಗಿ ಬ್ರಿಟಿಷ್ ಸರಕಾರದ ಅವಿಶ್ವಾಸಕ್ಕೆ ಪಾತ್ರನಾಗಬೇಕಾಯಿತು. ಹಾಗಿದ್ದರೂ ಅವನು ವೈಯ್ಯಕ್ತಿಕವಾಗಿ ಈ ದೇಶದ ಉತ್ತಮ ಆಡಳಿತೆಯ ಬಗ್ಗೆ ಸರಕಾರಕ್ಕೆ ಬರೆದ ವರದಿಯು ಸುವರ್ಣಾಕ್ಷರದಲ್ಲಿ ಬರೆಯಲ್ಪಡಬೇಕಾಗಿದೆ. ಆಗ ಪ್ರಚಾರವಿದ್ದ ಮತ್ತು ಪಾಶ್ಚಾತ್ಯ ಧರ್ಮಗುರುಗಳೇ ಬಹುಸಂಖ್ಯೆಯಲ್ಲಿ ನಡೆಸುತಿದ್ದ ಪತ್ರಿಕೆಗಳಿಗೆ ತಕ್ಕಷ್ಟು ಸ್ವಾತಂತ್ರ್ಯವನ್ನು ಕೊಡಬೇಕೆಂದು ಸುಮಾರು 180 ವರ್ಷಗಳಿಗೆ ಹಿಂದೆ ಅವನು ಹೀಗೆ ಹೇಳಿದ್ದನು :—

"If their argument be that the spread of knowledge may eventually be fatal to our rule in India, I close with them on that point, and maintain that, whatever may be the consequence, it is our duty to communicate the benefit of knowledge. If India could be preserved as a part of the British Empire only by keeping its inhabitants in a state of ignorance, our domination would be a curse to the country, and ought to cease...I look to the increase of knowledge... that it may unite the people and their rulers in sympathy, and that the differences which separate them may be gradually lessened, and ultimately annihilated .....The promotion of knowledge, of which the liberty of the Press is one of the most efficient instruments, is manifestly an essen-

tial part of that duty. It cannot be that we are permitted by Divine authority to be here merely to collect the revenues of the country......".

ಇದೆಂಥಾ ಅಮೋಘವಾದ ಹಿತೋಪದೇಶವೆಂಬುದನ್ನು ವಾಚಕರು ಗಮನಿಸಬೇಕಿದೆ. ಇಂಥಾ ಶ್ರದ್ಧಾಭಿಮಾನಗಳನ್ನು ಹೊಂದಿದ್ದ ಆ ಪಾಶ್ಚಾತ್ಯ ಜನಾಂಗವು ಅಸಾಮಾನ್ಯ ವರ್ಗಕ್ಕೆ ಸೇರಿದ ಸುಸಂಸ್ಕೃತ ಜನಾಂಗವಾಗಿದೆ. ದೇಶವು ಅವಿದ್ಯೆಯಿಂದ ತುಂಬಿದ್ದರೆ ಮಾತ್ರ ತಮ್ಮ ಅಧಿಕಾರಕ್ಕೆ ಭದ್ರತೆಯೆಂದು ಇಂದಿನ ದೇಶೀಯ ಮುಂದಾಳು ಗಳೇ ತಮ್ಮೊಳಗೇನೇ ಭಾವಿಸುತ್ತಾ ಇರುವಾಗ ಬ್ರಿಟಿಷ್ ಸರಕಾರಕ್ಕೆ ಇಂಥಾ ಮಾತುಗಳನ್ನೂ ಸದಭಿಪ್ರಾಯಗಳನ್ನೂ ಹೇಳಿ ತನ್ನ ವರ್ಚಸ್ಸನ್ನು ಆ ಕಾಲದಲ್ಲಿ ಬೀರಿದ್ದ Sir Charles Metcalfe ಮತ್ತು ಅವನಂತೆಯೇ ಇದ್ದ ಇತರ ಹಲವು ರಾಜಕಾರಣಿಗಳು ಈ ದೇಶಕ್ಕೆ ಸಲ್ಲಿಸಿದ ಸೇವೆಯಿಂದ ಧನ್ಯರಾದರೆಂದೇ ಹೇಳಬಹುದು.

### ೮. ದೇಶೀಯರು ಆತ್ಮಗೌರವ ಸಂಸ್ಕೃತಿಗಳನ್ನು ಉಳಿಸಿದರು :—

"ಮಾಂಥವ ಋಷಿ"ಯೆಂದು ಜನರಿಂದ ಪ್ರೀತಿಯಿಂದ ಕರೆಯಲ್ಪಡುತ್ತಿದ್ದ Sir Thomas Monroe ಇವನನ್ನು ಕುರಿತು ಹಿಂದಿನ ಪುಟಗಳಲ್ಲಿ ಹೇಳ ಲಾಗಿದೆ. ಭಾರತೀಯರಿಗೆ ಸರಕಾರದ ಖಚೇರಿಗಳಲ್ಲಿ ಹುದ್ದೆಗಳನ್ನೂ ರಾಜಕೀಯ ಕ್ಷೇತ್ರಗಳಲ್ಲಿ ಸಾಕಷ್ಟು ಜವಾಬ್ದಾರಿಕೆಯನ್ನೂ ಕೊಡಬೇಕೆಂದು ಸರಕಾರದೊಡನೆ ಹೋರಾಡಿದ ಮತ್ತು ಮದ್ರಾಸು ಆಧಿಪತ್ಯದಲ್ಲಿದ್ದ Sir Thomas Munroe ಇವನು ಕ್ರಿ.ಶ. 1817 ರಲ್ಲಿ ಅಂದಿನ ವೈಸ್ರಾಯಿ Lord Hastings ಇವನಿಗೆ ಬರೆದ ಪತ್ರದಲ್ಲಿ ಹೇಳಿದ ವಿಷಯಗಳು ಇನ್ನಷ್ಟು ಮನಮೋಹಕವಾದುದಾಗಿವೆ :—

"There is perhaps no example of any conquest in which the natives have been so completely excluded from all share of the Government of their country as in British India."

ಇದೇ ವಾದವನ್ನು ಮುಂದುವರಿಸಿ ಕ್ರಿ.ಶ. 1818 ರಲ್ಲಿ ಅವನು ಈ ದೇಶದ ಜನವನ್ನು ಕೇವಲ ಕುರಿಗಳಂತೆ ಕಾಣಬೇಡಿರೆಂದು ಬ್ರಿಟಿಷ್ ಸರಕಾರಕ್ಕೆ ಹೀಗೆ ಬರೆದನು :—

"Foreign conquerers have treated the natives with violence, and often with great cruelty, but none has treated them with so much scorn as we; none have stigmatised the whole people as unworthy of trust, as incapable of honesty, and as fit to be empolyed only where we cannot do without them. It seems to not only ungenerous, but impolitic, to debase the character of a people fallen under our dominion."

ಇಂಥಾ ತತ್ವಜ್ಞರನ್ನೂ ಕಾರ್ಯತತ್ಪರರನ್ನೂ ಋಷಿಗಳೆಂದು ಆದರಿಸಬಹುದಲ್ಲದೆ, ನಮ್ಮ ದೇಶದಲ್ಲಿ ಋಷಿಗಳೆಂದು ಕರೆದುಕೊಂಡವರು ಸಾಧಿಸಿದ್ದೇನು ಎಂಬುದಾಗಿಯೂ ನೆನೆದುಕೊಳ್ಳಬೇಕಾಗಿದೆ. ಇದೇ ರೀತಿ "Princes of Indian Civil

Service" ಎಂಬುದಾಗಿ ಆದರ ಪೂರ್ವಕವಾಗಿ ಕರೆಯಲ್ಪಟ್ಟದ್ದವರ ವರ್ಗಕ್ಕೆ ಸೇರಿದ Sir John Lawrence ಇವನು ಅಂದಿನ ಆಶ್ರೀತ ಸಂಸ್ಥಾನಗಳಲ್ಲಿ ಬ್ರಿಟಿಷರು ತಮ್ಮ ಸೈನ್ಯವನ್ನಿಟ್ಟು ದೇಶೀಯ ರಾಜರಿಗೆ ಯಾವ ಅಧಿಕಾರವನ್ನೂ ಕೊಡದೆ ನಡೆ ಸಿದ ರಾಜನೀತಿಯನ್ನು ಖಂಡಿಸುತ್ತಾ 1846 ರಲ್ಲಿ ಹೀಗೆ ಹೇಳಿದ್ದನು :—

"If there was a device for ensuring mal-Government it is that of a native ruler and minister both relying on foreign bayonets, and directed by a British Resident ; even if all these were able, virtuous and considerate, still the wheels of government could hardly move smoothly ."

ಆದರನಂತರ ಇಂಥಾ ಉದಾತ್ತ ತತ್ವಗಳನ್ನು ಬ್ರಿಟಿಷ್ ಸರಕಾರದ ಮುಂದಿಟ್ಟ ಬ್ರಿಟಿಷ್ ತಾತ್ವಿಕರು ಇನ್ನೆಷ್ಟೋ ಜನವಿದ್ದಾರೆ. ಕಳೆದ ಶತಮಾನಾಂತ್ಯದಲ್ಲಿ ಈ ದೇಶಕ್ಕೆ ಬಂದ ವೈಸ್ರಾಯಿ Lord Curzon ಇವನ ಜನಪ್ರೀಯವಾದ ವಿದ್ಯಾ ಯೋಜನೆ, ದೇಶದ ಗಡಿಗಳ ಭದ್ರತಾ ಯೋಜನೆ, ವಾಸ್ತುಶಿಲ್ಪ ಮತ್ತು ಚಾರಿತ್ರಿಕ ಅವಶೇಷಗಳ ಸಂರಕ್ಷಣಾ ಯೋಜನೆ ಇತ್ಯಾದಿಗಳು ಚಿರಸ್ಮರಣೀಯವಾಗಿವೆ. ತಾಜ ಮಹಲ್ಲಿನಂಥಾ ನೂರಾರು ಹಳೆ ಕಟ್ಟೋಣಗಳನ್ನು ಹಾಳಾಗದಂತೆ ದುರಸ್ತಿಪಡಿಸಿ ನಿಲ್ಲಿಸಿದ ಕೀರ್ತಿಯು ಅವನಿಗೆ ಸಲ್ಲತಕ್ಕದ್ದಾಗಿದೆ. ಇಂದಿನ ಭಾರತೀಯರಿಗೆ ತಮ್ಮ ದೆಂದು ಹೇಳಿಕೊಳ್ಳಲು ಯಾವಾವುದು ಇದೆಯೋ ಅವೆಲ್ಲವನ್ನೂ ಮಹಮ್ಮದೀಯರ ಕರಾಳ ನೀತಿಯಿಂದ ಅವರ ಕೈತಪ್ಪಿಸಿ ಈ ಪಾಶ್ಚಾತ್ಯ ರಾಜಕಾರಿಣಿಗಳು ಈ ದೇಶದಲ್ಲಿ ಉಳಿಸಿಹೋಗಿದ್ದಾರೆ. ಚಕ್ರಾಧಿಪತ್ಯವನ್ನು ಕಟ್ಟಿದ ಆ ಜನಾಂಗದಲ್ಲಿ ಇಂಥಾ ಸೀಮಾ ಪುರುಷರು ಆವಾಗ ತೋರ್ಪಡಿಸಿಕೊಂಡುದು ದೇಶದ ಸುದೈವವಾಗಿದೆ. ಕಳೆದ ಶತ ಮಾನಾಂತ್ಯಕ್ಕೆ ಆಡಳಿತ ವರ್ಗಕ್ಕೆ ಸೇರಿದ ಬಿಳಿ ಜನರಿಗೂ ದೇಶೀಯರಿಗೂ ಖಾನೂನು ಕಾಯಿದೆಗಳಲ್ಲಿ ಯಾವ ಭಿನ್ನ ಭೇದವಿಲ್ಲದಂತೆ ಅವರು ಅನುಸರಿಸಿದ ನೀತಿಯು ಇನ್ನೂ ಆಶಾದಾಯಕವಾಗಿದೆ, ಸುಮಾರು 1890 ರ ಕಾಲದಲ್ಲಿ ಅಂದಿನ ಖಾನೂನು ಖಾಯಿದೆ ಮಂತ್ರಿಯಾಗಿದ್ದ Sir Courtenay Ilbert ಇವನು ಈ ರೀತಿಯಾಗಿ ಒಂದು ಮಸೂದೆಯನ್ನು ಕೇಂದ್ರ ಶಾಸನ ಸಭೆಯಲ್ಲಿ ತಂದನು : —

"Sir Courtenay Ilbert, Law Member,-Government of India, brought in a Bill to remove the disqualification of Indian magistrates from trying Europeans on criminal charges........"

೯. ತಾವೂ ಭಾರತೀಯರೆಂದು ಹೆಮ್ಮೆಯಿಂದ ಹೇಳಿಕೊಂಡರು :—

ಹೀಗೆ ಹಲವು ರೀತಿಯಲ್ಲಿ ಒಂದು ಭವ್ಯ ಆಡಳಿತ ನೀತಿಯನ್ನು ಈ ದೇಶಕ್ಕೆ ಒದಗಿಸಿದ ಪಾಶ್ಚಾತ್ಯರು ದೇಶದ ಅಸ್ತಿತ್ವಕ್ಕೆ ಮತ್ತು ಧಾರ್ಮಿಕ ಮನೋಗುಣಕ್ಕೆ ಒಂದು ಭದ್ರವಾದ ತಳಹದಿಯನ್ನು ಅಂದು ಹಾಕಿದ್ದರು. ಹಿಂದೆಯೇ ಹೇಳಿದಂತೆ ಅದೇ ಪರಂಪರೆಗೆ ಅನುಗುಣವಾಗಿ ಭಾರತೀಯರಿಗೆ ವಿದ್ಯೆ ಮಾತ್ರವಲ್ಲ, ರಾಷ್ಟ್ರೀಯ

ಭಾವನೆಯನ್ನು ಮೊಳಗಿಸಿ ಅವರನ್ನು ನಿದ್ರೆಯಿಂದ ಎಬ್ಬಿಸಿದರು. Sir David Yule, Sir Octavian Hume ಈ ಮೊದಲಾದವರು ನಿಶ್ಚಲ ಭಾರತೀಯ ದೇಶಾಭಿಮಾನಿಗಳಾದರು. ನಮ್ಮದು ಸನಾತನ ಧರ್ಮ; ಹಾಗಂದರೆ ಏನೆಂದು ಇನ್ನೂ ನಮ್ಮ ಬಹು ಸಂಖ್ಯೆಯ ವಿದ್ಯಾವಂತ ಜನಕ್ಕೆ ತಿಳಿದಿಲ್ಲ; ಆದರೆ ಪಾಶ್ಚಾತ್ಯರದು ಬರೇ ೨೦೦೦ ವರ್ಷಗಳಿಂದಿತ್ತಣದ ಬೈಬಲ್ ಧರ್ಮ; ತಮ್ಮ ಆ ಅಮೋಘ ಧರ್ಮನೀತಿ ಗಳನ್ನು ಅವರು ಕಾರ್ಯತಃ ಸಾಧಿಸಿ ತೋರಿಸಿ ತೆರಳಿದರು. ಅವರಲ್ಲಿ ಶೇಕಡ ೨೫ ರಷ್ಟು ರಾಜಕಾರಿಣಿಗಳು “ honest and conscientious ” ಆಗಿ ಇದ್ದರೆಂಬು ದಕ್ಕೆ ನೂರಾರು ಉದಾಹರಣೆಗಳನ್ನು ಕೊಡಬಹುದು. ಇದಕ್ಕೆ ಕಾರಣ ಅವರು ತಮ್ಮ ಬೈಬಲ್ ಧರ್ಮನೀತಿಗಳಲ್ಲಿ ಇಟ್ಟ ನಿಶ್ಚಲ ಶ್ರದ್ಧೆಯೇ ಆಗಿದೆ.

ಅದರನಂತರ ಅವರು ಪ್ರಚಂಡ ವೇದಾಭ್ಯಾಸಿಗಳಾಗಿಯೂ ಶೋಭಿಸಿದ್ದು ಅವರ ಸಾಂಸ್ಕೃತಿಕ ವರ್ಚಸ್ಸಿಗೆ ಇನ್ನಷ್ಟು ಕಳೆಗೊಟ್ಟಂತಾಯಿತು. ಕ್ರಿ.ಶ. 1784 ರಲ್ಲಿ Sir William Jones ಇವನಿಗೆ ಸಂಸ್ಕೃತ ಭಾಷಾ ಬೋಧನೆಯನ್ನೀಯಲು ಯಾವ ಬ್ರಾಹ್ಮಣನೂ ಒಪ್ಪಲಿಲ್ಲ. ಎಲ್ಲರೂ ಅವನನ್ನು ಮ್ಲೇಂಛನೆಂದು ಹಿಂದೂ ಧರ್ಮವನ್ನು ಅಪವಿತ್ರಗೊಳಿಸಲು ಬಂದವನೆಂದೂ ಜರೆದರು. ಆದರೂ ಆ ತಪಸ್ವಿಯು ಬ್ರಾಹ್ಮ ಣೇತರನಾದ ಒರ್ವ ವೈದ್ಯನ ಸಹಾಯವನ್ನು ಪಡೆದು ಸಂಸ್ಕೃತ ಭಾಷೆಯನ್ನು ಮಾತ್ರ ಅಲ್ಲ; ಇಡೀ ಭಾರತೀಯ ಶಾಸ್ತ್ರಗಳೆಲ್ಲವನ್ನೂ ತಿರುವಿ ಹಾಕಿದ ಧೀಮಂತ ವಿದ್ವಾಂಸ ನಾದನು. ಇಂಥಾ ಮೇಧಾವಿಗಳ ಸಾಹಸವು ಎಂದೂ ವ್ಯರ್ಥವಾಗದು ಎಂಬಂತೆ ಅವನ ನಂತರದ ದೇಶದ ಚರಿತ್ರೆಯು ಅವನು ಆಶಿಸಿದ ರೀತಿಯಲ್ಲಿಯೇ ಮುಂದುವರಿಯಿತು. ಭಾರತೀಯರಿಗೆ ಭಾರತೀಯ ವಿದ್ಯೆಯ ರಹಸ್ಯವನ್ನರುಹಬೇಕೆಂಬ ಅವನ ಸಲಹೆಯು ಫಲಕಾರಿಯಾಯಿತು. ಆದರೆ ಈ ದೇಶದ ಜನರು ಅವರ ಆ ಉದಾತ್ತ ನೀತಿಗಳಿಂದ ಸತ್ಪ್ರಯೋಜನವನ್ನು ಹೊಂದಿದರೋ ಎಂಬುದು ಇಂದಿಗೂ ಸಂದೇಹಾಸ್ಪದವಾದ ವಿಚಾರವಾಗಿದೆ.

ತಮ್ಮ ಧರ್ಮ ಸಂಸ್ಕೃತಿಗಳಲ್ಲಿ ತಾವು ಎಂಥಾ ಶ್ರದ್ಧೆಯಿಡಬೇಕೆಂಬುದನ್ನೂ ಪಾಶ್ಚಾತ್ಯರು ತಾವಾಗಿಯೇ ಈ ದೇಶದ ಉಡುಗೆ ತೊಡುಗೆಗಳಲ್ಲಿ ವಿರಾಜಿಸಿ ತಮ್ಮ ದೈನಿಕ ರೀತಿಯಲ್ಲಿ ಋಷಿ ಜೀವನವನ್ನು ಅನುಸರಿಸಿದರೆಂಬುದಕ್ಕೆ ಒಂದಲ್ಲ, ಎರಡಲ್ಲ, ನೂರಾರು ಉದಾಹರಣೆಗಳಿವೆ. Jones, Colebrooke, Wilson ಹೀಗೆ ಹಲವು ವಿದ್ವಾಂಸರು ಭಾರತೀಯ ಉಡುಪಿನಲ್ಲಿಯೇ, ಭಾರತೀಯ ಸಾಹಿತ್ಯ ವ್ಯಾಸಂಗ ದಲ್ಲಿಯೇ ಜೀವನವನ್ನು ಕಳೆದರು. ತಾವು ಭಾರತೀಯರೆಂದೇ ಹೆಮ್ಮೆಯಿಂದ ಹೇಳಿ ಕೊಂಡರು. ಪಾಶ್ಚಾತ್ಯ ಮಹಿಳೆಯರಲ್ಲಿ ಭಾರತೀಯ ಸೀರೆ ಉಡುಗೆಯಿಂದ ಕೆಚ್ಚಿನಿಂದ ಮೊತ್ತಮೊದಲಾಗಿ ಮೆರೆದವಳು Mrs. Anna Maria Jones ಇವಳು ಕ್ರಿ. ಶ. 1790 ರಿಂದ ಅನಂತರ ಒಂದು ನೂರು ವರ್ಷಗಳ ಅವಧಿಯಲ್ಲಿ ಇನ್ನೆಷ್ಟೋ ಐರೋಪ್ಯಾ ಸ್ತ್ರೀ ಮಣಿಗಳು ಆ ರೀತಿ ತೋರ್ಪಡಿಸಿಕೊಂಡು ನಮ್ಮ ಜನದ ಕಣ್ತೆರೆಯಿ ಸಿದರು. ಅದಕ್ಕೆ ಇತ್ತೀಚೆಗಿನ ಉದಾಹರಣೆಗಳೆಂದರೆ Mrs. Anne Besent, Sister Nivedatta Margarett, Miss. Mira Behan ಮೊದಲಾ

ದವರನ್ನು ಹೆಸರಿಸಬಹುದು.

ಭಾರತೀಯರು ಪಾಶ್ಚಾತ್ಯರನ್ನು ಅನುಸರಿಸಿದ್ದು ಕೇವಲ ಗುಲಾಮರಾಗಿ! ಆದರೆ ಪಾಶ್ಚಾತ್ಯರು ಈ ದೇಶದ ರೀತಿ ನೀತಿಗಳನ್ನು ಅನುಸರಿಸಿದ್ದು ನಮ್ಮ ಧರ್ಮ ನೀತಿಗಳಲ್ಲಿ ಅವರು ಇಟ್ಟ ಅಚಲ ಅಭಿಮಾನದ ಸಲುವಾಗಿ! ಈ ರಹಸ್ಯವನ್ನು ಭಾರ ತೀಯರು ಇನ್ನಷ್ಟು ಜಾಗೃತೆಯಿಂದ ಮನಕ್ಕೆ ತಂದುಕೊಂಡು ಎದ್ದೇಳಬೇಕಿದೆ.

### ೧೦. ಇಂಗ್ಲಿಷನ್ನು ಸಂಪರ್ಕಭಾಷೆಯಾಗಿ ಎಲ್ಲೆಡೆಯೂ ಉಪಯೋಗಿಸಿದರು :—

ಇಂಥಾ ಜನವು ತಮ್ಮ ಬೈಬಲ್ ಧರ್ಮಗ್ರಂಥವನ್ನು ಭಾರತೀಯ ಭಾಷೆಗಳಿಗೆ ಇಳಿಸಿದಾಗ ಅದು ಕೇವಲ ಅವರ ಮತಪ್ರಚಾರದ ಸಲುವಾಗಿ ಮಾತ್ರ ಎಂದು ಎಣಿಸಿ ಕೊಂಡರೆ ತಪ್ಪಾದೀತು. ಪಾಶ್ಚಾತ್ಯ ದೇಶಗಳ ಚರಿತ್ರೆ, ಬೈಬಲ್ ಪುರಾಣ ಇತ್ಯಾದಿ ಗಳನ್ನು ನಮ್ಮ ಭಾಷೆಗಳಿಗೆ ಇಳಿಸಿದ್ದರ ನೂರ್ಮಡಿ ಪ್ರಮಾಣದಲ್ಲಿ ಅವರು ಭಾರತೀಯ ಧರ್ಮಗ್ರಂಥಗಳನ್ನು ಅವರ ಭಾಷೆಗಳಿಗಿಳಿಸಿದ್ದಾರೆ. ಈ ರೀತಿ ಅದೊಂದು "two-way traffic" ಎಂಬ ನೀತಿಯನ್ನು ಅನುಸರಿಸಿ "ಇವಳ ಸೊಬಗನವಳು ತೊಟ್ಟು —ಅವಳ ತೊಡಿಗೆ ಇವಳಿಗಿಟ್ಟು" ಎಂಬಂತೆ ಅದ್ಭುತ ಕಾರ್ಯಸಾಧನೆಯಲ್ಲಿ ತತ್ಪರ ರಾದರು. ತಮ್ಮ ಕ್ರೈಸ್ತಗುಡಿಗಳಲ್ಲಿ ಅವರು ಬೈಬಲ್ ಧರ್ಮವನ್ನು ಆ ಕಾಲದಲ್ಲಿ ಬೋಧಿಸಿದರಾದರೂ ದೇಶೀಯರಿಗೆ ವೇದಧರ್ಮದಲ್ಲಿರುವ ಉತ್ತಮ ವಿಷಯಗಳನ್ನು ಕುರಿತಾಗಿಯೂ ಬೋಧಿಸದೆ ಬಿಡಲಿಲ್ಲ. ಹಲವು ವಿದ್ವಾಂಸರಾದ ಕ್ರೈಸ್ತಗುರುಗಳು ತಾವು ಕ್ರೈಸ್ತಗುರುಗಳ ನಿಲುವಂಗಿಯನ್ನು ತೊಟ್ಟಿದ್ದರಾದರೂ ಶ್ರೇಷ್ಠ ವೇದ ಪಾರಂ ಗತರೂ ಆಗಿದ್ದರೆಂಬುದನ್ನು ಗಮನಿಸಿಕೊಳ್ಳಬೇಕಿದೆ. ಆದರೆ ಅವರು ತಮ್ಮ ಈ ಉಭಯ ಧರ್ಮಜ್ಞಾನದ ಬಲದಿಂದ ಭಾರತೀಯ ಧರ್ಮದಲ್ಲಿ ಅಲ್ಲಲ್ಲಿ ತೋರಬಂದ ನ್ಯೂನತೆ ಗಳನ್ನು ಕುರಿತು ನ್ಯಾಯವಾಗಿ ಟೀಕಿಸಿದ್ದಾರೆ; ಅದು ನಿಜಕ್ಕೂ ಅವರ ಹಕ್ಕಾಗಿದೆ. ಕಾಗೆಯಮರಿ ಕಾಗೆಗೆ ಪ್ರಿಯವಾಗಿದ್ದರೂ ಕೋಗಿಲೆಗೆ ಪ್ರಿಯವಾಗಬೇಕಿಲ್ಲವಷ್ಟೆ!

ಕನ್ನಡ ಭಾಷೆಯಲ್ಲಿ ಅವರು ಉಳಿಸಿದ ಬೈಬಲ್ ಸಾಹಿತ್ಯವು ಬಂಗಾಳೀ, ಪಂಜಾಬೀ, ಒರಿಯಾ, ತಮಿಳು ಇತ್ಯಾದಿ ಭಾಷೆಗಳಲ್ಲಿರುವಷ್ಟು ಇಲ್ಲವಾದರೂ ಅವರ ಬರೆವಣಿಗೆಯು ಕ್ರೈಸ್ತಧರ್ಮದ ಎಲ್ಲಾ ತತ್ವನೀತಿಗಳನ್ನು ವ್ಯಾಪಿಸಿದೆ. ಬರೀ ಕೆಲವು ಕನ್ನಡಿಗರು ಮತಾಂತರ ಹೊಂದಿದರಾದರೂ ಅಷ್ಟೊಂದು ಜನಕ್ಕೆ ಅವರು ನಿರ್ಮಿಸಿದ ಸಾಹಿತ್ಯವೂ ಅಪಾರವಾದುದಾಗಿದೆ.

ಕಳೆದ ಶತಮಾನದಲ್ಲಿ ಕನ್ನಡ ನಾಡಿನ ವಿವಿಧಭಾಗಗಳ ವಿವಿಧ ಪ್ರಾಂತಸರಕಾರ ಗಳೊಳಗೆ ಹಂಚಲ್ಪಟ್ಟಿದ್ದಾಗ ಮತ್ತು ಇಡೀ ಹಿಂದೂಸ್ಥಾನದ ಪ್ರಾಂತಗಳನ್ನೆಲ್ಲಾ ಆಡಳಿತ ಸೌಕರ್ಯಕ್ಕನುವಾಗಿ ವಿಭಾಗಿಸಿಟ್ಟಿದ್ದಾಗ ಪಾಶ್ಚಾತ್ಯರು ಸಮಗ್ರ ದೇಶವನ್ನು ಒಂದು ಉಪಖಂಡವೆಂದು ಭಾವಿಸಿ ವ್ಯವಹಾರವನ್ನು ಸಾಗಿಸಿದರು. ವಿವಿಧ ಪ್ರಾಂತ ಗಳೊಳಗಡಗಿದ ಕನ್ನಡನಾಡು ಸಹ ಅವರಿಂದ ಅಪಾರ ಪ್ರಯೋಜನವನ್ನು ಹೊಂದಿತು. ಅಂದಿನ ಪ್ರಧಾನ ಆಧಿಪತ್ಯಗಳಾಗಿದ್ದ ಬಂಗಾಳ, ಬೊಂಬಾಯಿ ಮತ್ತು ಮದ್ರಾಸು

ಸಾಕಷ್ಟು ವಿಶಾಲವಾಗಿದ್ದುವು. ನಾಲ್ಕಾರು ಭಾಷಾ ಪ್ರದೇಶಗಳು ಈ ಆಧಿಪತ್ಯಗಳೊಳಗೆ ಅಡಗಿದ್ದುವು. ಇಂಗ್ಲಿಷ್ ಪ್ರಧಾನಭಾಷೆಯಾಗಿತ್ತಾದರೂ ಇತರ ಭಾಷೆಗಳನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಸಹ ಅಂದಿನ ಸರಕಾರವು ಅಲಕ್ಷಿಸಿದ್ದಿಲ್ಲ. ಹಾಗಿದ್ದಾಗಲೂ ಆಧುನಿಕ ವಿದ್ಯೆಯನ್ನು ಪಡೆದ ದೇಶೀಯರ ಸಂಖ್ಯೆ ಬರೇ ಶೇಕಡ ಆರರಷ್ಟು ಮಾತ್ರ ಇದ್ದಿತು. ನಿರಕ್ಷರಸ್ಥರೇ ಎಲ್ಲೆಲ್ಲೂ ಇದ್ದರು. ಇಂಗ್ಲಿಷ್ ಭಾಷೆ ಇಡೀ ದೇಶಕ್ಕೆ ವ್ಯವಹಾರ ಭಾಷೆಯಾಗಿದ್ದು ಈ ವಿಶಾಲ ದೇಶಕ್ಕೆ ಒಂದು ಸಂಪರ್ಕ ಭಾಷೆಯಾಗಿದ್ದಿತು. ಇಡೀ ದೇಶವು ಒಂದೆಂಬ ಮನೋಗುಣವು ಜನರಲ್ಲಿ ಮೊಳೆಯಿತು. ಪ್ರಾಂತೀಯ ಭಾಷೆಗಳ ಮೂಲಕವೇ ಆಯಾ ಪ್ರಾಂತಗಳ ಏಳಿಗೆಗೆ ಸಾಧನವೆಂಬ ಅಭಿಪ್ರಾಯವನ್ನು ಸುಳ್ಳಾಗಿಸಿತ್ತು. ಆದರೆ ಹೇಗೂ ಸ್ವಾತಂತ್ರ್ಯಾನಂತರ ಈ ಎಲ್ಲಾ ಪರಿಸ್ಥಿತಿಯೂ ತಲೆಕೆಳಗಾಗುವಂತಾಯಿತು. ಹಿಂದೂಗಳು ತಮ್ಮ ಮತ ಧರ್ಮಗಳ ವಿಚಾರದಲ್ಲಿ "constantly reason on utterly false principles", ಎಂಬುದಾಗಿ ಹೇಳಲ್ಪಟ್ಟಂತೆ ಅದೇ ಸುಳ್ಳು ವಾದಗಳನ್ನು ತಮ್ಮ ರಾಜನೀತಿಯಲ್ಲಿಯೂ ಪ್ರತಿಪಾದಿಸಲಾರಂಭಿಸಿ ದೇಶವನ್ನು ಇಂದು ಒಂದು ಬಿಗುಡಾದ ಪರಿಸ್ಥಿತಿಗೆ ತಂದು ಇಳಿಸಿದಾರೆನ್ನಬಹುದು.

### ೧೧. ಕಾಲದಿಂದ ಕಾಲಕ್ಕೆ ಅವರ ಭಾಷಾಶೈಲಿಯು ಚೊಕ್ಕವಾಗಿ ಹರಿಯಿತು :—

ಒಟ್ಟಾಗಿ ಹೇಳುವುದಿದ್ದರೆ ಪಾಶ್ಚಾತ್ಯ ವಿದ್ವಾಂಸರ ಮತ್ತು ಸುಸಂಸ್ಕೃತರಾದ ರಾಜಕಾರಿಣಿಗಳ ಮನೋಧರ್ಮವು ಆ ಕಾಲದಲ್ಲಿ ವಿಶ್ವವ್ಯಾಪಕವಾಗಿತ್ತು. ಲೋಕದ ಬಹುಭಾಗದಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದ ಆ ನಾಗರಿಕ ಜನಾಂಗಕ್ಕೆ ಮತ್ತು ವಿದ್ವಾಂಸರಿಗೆ ಸಂಕುಚಿತ ಭಾವನೆ ಎಂಬುದೇ ಇರಲಿಲ್ಲವೆಂದು ಚಾರಿತ್ರಿಕವಾಗಿ ವ್ಯಕ್ತವಾಗುತ್ತದೆ. ಅವರ ಪೈಕಿ ಮತಪ್ರಚಾರಕರಾಗಿ ಬಂದವರು ತಮ್ಮ ಆ ಕಾರ್ಯವನ್ನು ನಿಷ್ಠೆಯಿಂದ ಮಾಡಲೋಸುಗ, ಮತ್ತು ಈ ದೇಶದ ಜನಕ್ಕೆ ಈ ದೇಶದ ಭಾಷೆಗಳಲ್ಲಿಯೇ ಮತಬೋಧನೆಯನ್ನು ಮಾಡುವ ಉದ್ದೇಶದಿಂದ ಅವರು ಭಾರತೀಯ ಭಾಷೆಗಳನ್ನು ಕಲಿತರು. ಪರಿಣಾಮವಾಗಿ ಅವರು ಆ ಎರಡೂ ಕಾರ್ಯಗಳಲ್ಲಿ ಜಯಪ್ರದರಾದರು. ಒಂದನೇದಾಗಿ ತಮ್ಮ ಮತೀಯಕಾರ್ಯ, ಪ್ರಚಾರ ಇತ್ಯಾದಿ; ಎರಡನೇದಾಗಿ ಈ ದೇಶದ ಭಾಷಾಸೇವೆ!

ಅವರು ಈ ದೇಶದ ಭಾಷೆಗಳಲ್ಲಿ ಬೈಬಲ್ ಗ್ರಂಥಗಳನ್ನು ಸಹಸ್ರಾರು ಸಂಖ್ಯೆಯಲ್ಲಿ ರಚಿಸಿದಾಗ ಅವೆಲ್ಲಾ ಭಾಷಾ ಸೇವೆಯ ದೃಷ್ಟಿಯಿಂದ ರಚಿಸಲ್ಪಟ್ಟುದಲ್ಲ. ಅದು ಕೇವಲ ತಮ್ಮ ಮತಪ್ರಚಾರ ನಿಮಿತ್ತವಾಗಿಯೇ ಆಗಿತ್ತು. ಆದರೆ ಅದರ ಪರಿಣಾಮವು ದ್ವಿಮುಖವಾಗಿ ತೋರ್ಪಡಿಸಿಕೊಂಡಿತು.

ದೇಶೀಯ ವಿದ್ವಾಂಸರು ತಮ್ಮ ತಮ್ಮ ಭಾಷೆಗಳಲ್ಲಿ ಉತ್ತಮ ಗ್ರಂಥಗಳನ್ನು ರಚಿಸುತ್ತಲೇ ಇದ್ದರು. ಆದರೆ ಅವೆಲ್ಲಾ ಬಹುಮಟ್ಟಿಗೆ ಕಾವ್ಯಗಳಾಗಿದ್ದುವು. ಶೇಕಡ 95 ರಂತೆ ಇದ್ದ ದೇಶದ ನಿರಕ್ಷರಸ್ಥರಿಗೆ ತಕ್ಕುದಾದ ಸರಳ ಶೈಲಿಯ ಗದ್ಯ ರಚನೆಗಳು

ಸುಮಾರು 18 ನೇ ಶತಮಾನದ ಪ್ರಾರಂಭದ ವರೆಗೂ ವಿರಳವಾಗಿತ್ತೆಂದೇ ಹೇಳಬಹುದು. ದೇಶೀಯರ ಸಾಹಿತ್ಯ ರಚನೆಯು ಪಂಡಿತರಿಗೆ ಯೋಗ್ಯವಾದುದಾಗಿತ್ತಲ್ಲದೆ ಪಾಮರರಿಗಲ್ಲ. ಕನ್ನಡ ಭಾಷಾ ಸಾಹಿತ್ಯವನ್ನೇ ಪರಿಗಣಿಸಿದ್ದಾದರೆ ಸುಮಾರು 800 ವರ್ಷಗಳ ಹಿಂದಿನ ಚಂಪೂ ಕಾವ್ಯ ಸುಮಾರು ನಾನ್ನೂರು ವರ್ಷಗಳಿಗೆ ಹಿಂದಿನ ಷಟ್ಪದೀ ಕಾವ್ಯಗಳಲ್ಲದೆ ಅದರೊಡನೆಯೇ ದಾಸರ ಹಾಡುಗಳು, ಸಾಂಗತ್ಯಗಳು, ಹಳ್ಳಿ ಹಾಡುಗಳು ಎಂದಿತ್ಯಾದಿಯಾಗಿ ಹರಿದು ಬಂದುವು. ಆರ್ನೂರು ವರ್ಷಗಳಿಗೆ ಹಿಂದೆ ಪ್ರಚಲಿತವಿದ್ದ ವೀರಶೈವರ ವಚನ ಸಾಹಿತ್ಯವೂ ಆಮೇಲೆ ಅದೇಕೋ ಎಂಬಂತೆ ಮುಂದುವರಿದು ಬೆಳೆಯದಾಯಿತು. ಕಳೆದ ಶತಮಾನದ ಪ್ರಾರಂಭದ ವರೆಗೂ ಬರೆಯಲ್ಪಟ್ಟ ವ್ಯಾಕರಣ, ಛಂದಸ್ಸು ಮತ್ತಿತರ ಶಾಸ್ತ್ರೀಯ ಗ್ರಂಥಗಳೂ ಕಾವ್ಯರೂಪದಲ್ಲಿಯೇ ಇದ್ದು ಜನಸಾಮಾನ್ಯರಿಗೆ ಅವೆಲ್ಲಾ ಎಳ್ಳಷ್ಟೂ ಪ್ರಯೋಜನವಾಗಲಿಲ್ಲ; ಅವೆಲ್ಲಾ ಹಿಂದೆಯೇ ಹೇಳಿದಂತೆ ಪಂಡಿತರ ಆಸ್ತಿಯಾಗಿದ್ದುವು. ಅಮರಕೋಶಾದಿ ಕಾವ್ಯ ಗ್ರಂಥಗಳ ಮೂಲಕವೇ ಜನರು ವಿದ್ಯಾಭ್ಯಾಸಕ್ಕೆ ತೊಡಗುತ್ತಿದ್ದ ಪರಿಸ್ಥಿತಿಯಲ್ಲಿ ಯೋಗ್ಯವಾದ, ಪುಷ್ಟವಾದ ಮತ್ತು ದಿಟ್ಟವಾದ ಗದ್ಯ ಸಾಹಿತ್ಯವೆಂಬುದು ಹೇಳಿಕೊಳ್ಳುವಂತೆ ಎಲ್ಲೂ ಇರಲಿಲ್ಲ. ಇತ್ತೀಚೆಗೆ ನಂದಳಿಕೆ ಲಕ್ಷ್ಮೀನಾರಣಪ್ಪನು ಹಳೆಗನ್ನಡ ಶೈಲಿಯಲ್ಲಿ ಬರೆದ ಗದ್ಯ ಗ್ರಂಥಗಳು ನಮ್ಮ ವಿದ್ವಾಂಸರನ್ನು ಬೆರಗಾಗಿಸಿದುವು. ದೇಶೀಯರ ಪೈಕಿ ಅವನೇ ಕನ್ನಡ ಗದ್ಯ ಸಾಹಿತ್ಯಕ್ಕೆ ಮೂಲ ಪುರುಷನೆಂಬಂತಾದನು. ಆದರೆ ಅವನಿಗಿಂತ ಒಂದು ನೂರು ವರ್ಷಗಳಿಗೆ ಹಿಂದೆಯೇ ಪಾಶ್ಚಾತ್ಯ ಕ್ರೈಸ್ತಗುರುಗಳು ಬೈಬಲನ್ನು ಕನ್ನಡ ಗದ್ಯರೂಪದಲ್ಲಿ ಬರೆಯಲಾರಂಭಿಸಿ, ಕಾಲದಿಂದ ಕಾಲಕ್ಕೆ ಅವರ ಭಾಷಾ ಶೈಲಿಯು ಚೊಕ್ಕವಾಗಿ ಮಾರ್ಪಟ್ಟು ಹರಿಯಿತೆಂಬುದು ಸರ್ವರ ಅವಗಾಹನೆಗೆ ಬಂದ ವಿಚಾರವಾಗಿದೆ.

**೧೨. ಕನ್ನಡ ಗದ್ಯ ಸಾಹಿತ್ಯಕ್ಕೆ ಪಾಶ್ಚಾತ್ಯರೇ ಮೂಲಪುರುಷರೆನ್ನಬಹುದು :**

"ಒಡ್ಡಾರಾಧನೆ" ಮತ್ತು ಶಿವಶರಣರ "ವಚನಗಳು" ಇವು ಎಂದೋ ಪ್ರಚಾರವಿದ್ದು ಅನಂತರ ತಣ್ಣಗಾದ ಒಂದು ಬಗೆಯ ವಾಙ್ಮಯವಾಗಿ ಅಂದು ತೋರ್ಪಡಿಸಿಕೊಂಡಿತು. ಆದರೆ 'ಮುದ್ದಣ' ಮತ್ತು ಅವನ ಸಮಕಾಲೀನ ಕನ್ನಡ ಗದ್ಯ ಸಾಹಿತ್ಯದ ನಿರ್ಮಾಪಕರಿಗಿಂತ ಸುಮಾರು ಎಂಭತ್ತು ವರ್ಷಗಳಿಗೆ ಹಿಂದೆಯೇ ೨೦೦೦ ಯಾ ೩೦೦೦ demy ಪುಟಗಳಷ್ಟು ಕನ್ನಡ ಗದ್ಯವನ್ನು ಬರೆದ Dr. John Hands, Dr. William Carey, Rev. William Reeve, Rev. John Reid ಮತ್ತು Rev. George Weigle ಇವರ ಕೃತಿಗಳನ್ನು ಸಾಹಿತಿಗಳು ಅಲಕ್ಷಿಸಿದರೆ ನಮ್ಮ ಸಾಹಿತ್ಯದ ಬೆಳವಣಿಗೆಗೆ ಕಾರಣವಾದ ಒಂದು ಪ್ರಧಾನ ಅಂಗವನ್ನೇ ಕಳಚಿದಂತಾಗುವುದು. ಅವರು ಬರೆದದ್ದು ಬೈಬಲ್ಲೇ ಇರಲಿ, ಖುರಾನ್ ಅಥವಾ ವೇದವೇ ಇರಲಿ! ಅವರ ಉದ್ದೇಶವೂ ಏನೇ ಇರಲಿ! ಆದರೆ ಇವರು ನಿರ್ಮಿಸಿದ ಸಾಹಿತ್ಯವು ಕನ್ನಡದ ಆಸ್ತಿಯಾಗಿದೆ. ಸಾಮಾನ್ಯ ಜನರಿಗೆ ಅರ್ಥವಾಗುವಂತೆ ಸರಳ ಶೈಲಿಯಲ್ಲಿ ಬೈಬಲ್ ಪುರಾಣವೆಲ್ಲವನ್ನೂ ಸಹಸ್ರಾರು ಪುಟ

ಗಳ ಗ್ರಂಥಗಳಾಗಿ ಬೆಳಕಿಗೆ ತಂದ ಆ ಮಹಾನುಭಾವರಾದ ಪಾಶ್ಚಾತ್ಯ ವಿದ್ವಾಂಸರು ಗದ್ಯ ಬರೆವಣಿಗೆಯ ಮೊದಲನೇ ಪ್ರತಿಪಾದಕರಾಗಿದ್ದಾರೆ.

ಪೂರ್ವಕಾಲದಲ್ಲಿ ಜೈನರು, ವೈಷ್ಣವರು, ವೀರಶೈವರು ಮತ್ತಿತರರು ಗ್ರಂಥ ಗಳನ್ನು ರಚಿಸಿದಾಗ ಅವರು ತಮ್ಮ ತಮ್ಮ ಮತಕ್ಕೆ ಸೇರಿದ ತೀರ್ಥಂಕರರನ್ನೂ ದೇವತೆ ಗಳನ್ನೂ ಗುರುಗಳನ್ನೂ ಸ್ತುತಿಸಿಯೇ ಬರೆದುದಾಗಿದೆ. ಅವೆಲ್ಲವೂ ಮತೀಯ ಕೃತಿ ಗಳು, ಶಿವಪುರಾಣವನ್ನು ಬರೆದ ವೀರಶೈವನದು ಅವನ ಮತವನ್ನು ಪ್ರತಿಪಾದಿಸುವ ಗ್ರಂಥ. ಹಾಗೆಯೇ ಇತರ ಎಲ್ಲಾ ಬರೆವಣಿಗೆಗಳು ಇದ್ದುವು. ಕಡೆಗೆ ಅವೆಲ್ಲ ಕನ್ನಡ ಅಥವಾ ಆಯಾ ಭಾಷೆಗಳ ಸಾಹಿತ್ಯದಲ್ಲಿ ಲೀನವಾಗಿ ಉತ್ತಮ ಕೃತಿಗಳೆಂದು ಪೂಜಿಸಲ್ಪಟ್ಟುವು. ಅದೇ ರೀತಿ ಕ್ರೈಸ್ತರು ತಮ್ಮ ಮತದ ಮೇಲೆ ಬರೆದರು. ತಮ್ಮ ಮತವನ್ನು ಕುರಿತಲ್ಲದೆ ಇತರ ಮತಧರ್ಮಗಳ ಮೇಲೆ ಬರೆದ ಭಾರತೀಯರು ಇನ್ನೆಷ್ಟು ಜನ ಇದ್ದಾರೆ? ಯಾರೂ ಇಲ್ಲವೆಂದರೂ ಸಲ್ಲುವುದು! ಆದರೆ ಪಾಶ್ಚಾತ್ಯರು ನಮ್ಮ ಭಾಷೆಗಳಲ್ಲಿ ಅವರ ಧರ್ಮ ಗ್ರಂಥಗಳನ್ನು ಬರೆದು ಅದರೊಡನೆಯೇ ಹಿಂದೂ ಬೌದ್ಧ, ಜೈನ ಇತ್ಯಾದಿ ಮತಗಳ ಮೇಲೆ ಅವರು ಐರೋಪ್ಯಾ ಭಾಷೆಗಳಲ್ಲೂ ಬರೆದಿದ್ದಾರೆ. ಇದು ಸಾಮಾನ್ಯ ವಿಚಾರವೆಂದು ಯಾರಾದರೂ ಭಾವಿಸಿದ್ದರೆ ಅದು ನಮ್ಮ ಜನರ ತಿಳಿಗೇಡಿತನ ಅಥವಾ ಅಹಂಕಾರವೆಂದು ಪರಿಗಣಿಸಿಕೊಳ್ಳಬಹುದು.

ಕಳೆದ ಶತಮಾನದಲ್ಲಿ ಪ್ರಕಟವಾದ ನೂರಾರು ಬೈಬಲ್ ಕೃತಿಗಳೂ ನಮ್ಮ ಸಾಹಿತ್ಯ ಭಂಡಾರದ ಮುತ್ತುರತ್ನಗಳಾಗಿ ಕಂಗೊಳಿಸಬೇಕಾಗಿದೆ. ಪಾಶ್ಚಾತ್ಯರು ತಮ್ಮ ಶೈಲಿಯಲ್ಲಿ ಮತ್ತು ಭಾಷಾ ನಿರೂಪಣೆಯಲ್ಲಿ ಕಾಲದಿಂದ ಕಾಲಕ್ಕೆ ಅಭಿವೃದ್ಧಿ ಗೊಂಡಿದ್ದಾರೆ. ಆ ಬೈಬಲ್ ಗ್ರಂಥಗಳನ್ನು ಕನ್ನಡದಲ್ಲಿ ಅಮೋಘ ಗದ್ಯ ಗ್ರಂಥ ಗಳೆಂದು ಪರಿಗಣಿಸಿ ಅವೆಲ್ಲವನ್ನೂ ಕ್ರೈಸ್ತ ಸಂಸ್ಥೆಗಳೂ ಸಾಹಿತ್ಯ ಸಂಸ್ಥೆಗಳೂ ಒಡ ಗೂಡಿ ಪ್ರಕಟಿಸಿ ಬೆಳಕಿಗೆ ತರುವ ಅವಶ್ಯಕತೆಯಿದೆ. ಆಧುನಿಕ ಗದ್ಯ ಸಾಹಿತ್ಯಕ್ಕೆ ಮೂಲಪುರುಷರಾದ ಅವರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ.

**೧೩. ಪಾಶ್ಚಾತ್ಯರಿಂದ ಒಂದು ನೂರು ವರ್ಷಗಳ ಕನ್ನಡ ಗದ್ಯ ಸಾಹಿತ್ಯ :—**

ದೇಶೀಯರು ಪದ್ಯವನ್ನೇ ಅಲ್ಲ, ಗದ್ಯವನ್ನು ಬರೆದಾಗಲೂ ಲಕ್ಷ್ಮೀನಾರಣಪ್ಪನು ಹಳೆಗನ್ನಡದಲ್ಲಿ ಬರೆದ ರೀತಿಯಲ್ಲಿ "ಕಾಲಪುರುಷಂಗೆ ಗುಣಮಣಮಿಲ್ಲಂ ಗಡಾ" ಎಂಬುದಾಗಿ ಬರೆದು ಹೆದರಿಸಿದನು. ಆದರೆ ಅವು ಪಂಡಿತರಿಗೆ ಮಾತ್ರ ಸಂದು ದಾಗಿತ್ತು. ಜನಸಾಮಾನ್ಯರಿಗೆ ತಕ್ಕುದಾದ ಕನ್ನಡ ಗದ್ಯವನ್ನು ಬರೆಯಲು ಪಾಶ್ಚಾ ತ್ಯರು ಸುಮಾರು ಕ್ರಿ. ಶ. 1800 ರಿಂದಲೇ ಪ್ರಾರಂಭಿಸಿದ್ದಾರೆ, ಅನಂತರ ಪ್ರತಿ ಯೊಂದು ದಶಕದಲ್ಲೂ ಅವರ ಕನ್ನಡ ಗದ್ಯ ಶೈಲಿಯಲ್ಲಿ ಮಾರ್ಪಾಡು ಕಾಣಿಸುತ್ತದೆ. John Hands ಇವನ ಶೈಲಿಗೂ John Reid ಇವನದಕ್ಕೂ George Weigle ಇವನ ಶೈಲಿಗೂ Henry Haigh ಇವನ ಶೈಲಿಗೂ ಎಷ್ಟೋ ವ್ಯತ್ಯಾಸವಿದೆ. ಕಾಲದಿಂದ ಕಾಲಕ್ಕೆ ಭಾಷಾ ನಿರೂಪಣೆ ಪ್ರತಿಪಾದನೆಗಳೂ ಬೆಳೆ ಯುತ್ತಾ ಬಂದಿದೆ. ಕ್ರಿ. ಶ. 1842 ರಿಂದ ಅವರು ಕನ್ನಡದಲ್ಲಿ ಪತ್ರಿಕೆಗಳನ್ನು ಪ್ರಚಾರ

ಪಡಿಸಲಾರಂಭಿಸಿದಾಗ ಕನ್ನಡ ಭಾಷಾ ಶೈಲಿಗೆ ಇನ್ನಷ್ಟು ಪ್ರಾಶಸ್ತ್ಯವಿತ್ತರು. ನಮ್ಮ ದೇಶೀಯ ಪಂಡಿತರು ಹಳೆಗನ್ನಡ ಕಾವ್ಯ ರೂಪದಲ್ಲಿ ಬಣ್ಣಿಸಿದ ವಿಷಯಗಳನ್ನೂ ಬೋಧೆಗಳನ್ನೂ ಪಾಶ್ಚಾತ್ಯರ ತಿಳಿಗನ್ನಡದಲ್ಲಿ ಅಚ್ಚುಮೆಚ್ಚಾದ ಗದ್ಯದಲ್ಲಿ ಬರೆದರು. ಉದಾಹರಣೆಗೆ ಅವರು Apostle Paul ಇವನ ಸೂಕ್ತಿಗಳನ್ನು ಭಾಷಾಂತರಿಸಿದ್ದು ಎಷ್ಟು ಚೆಲೋದಾಗಿದೆಯೆಂಬುದಕ್ಕೆ ಈ ಸೂಕ್ತಿಗಳನ್ನು ಪುನಃ ಎತ್ತಿಕೊಡಲಾಗಿದೆ.

"ಮಕ್ಕಳೇ, ಎಲ್ಲಾದರಲ್ಲಿ ಹೆತ್ತವರಿಗೆ ವಿಧೇಯರಾಗಿ ಇರಿ. ಇದೇ ಕರ್ತನಿಗೆ ಆನಂದಕರವಾದದ್ದು. ತಂದೆಗಳೇ ನಮ್ಮ ಮಕ್ಕಳು ಮನಗುಂದದ ಹಾಗೆ ಅವರಿಗೆ ಕೋಪವನ್ನೆಬ್ಬಿಸಬೇಡಿರಿ.

"ಹೆಂಗಸರೇ, ಕರ್ತನಲ್ಲಿ ಯೋಗ್ಯವಾದ ಪ್ರಕಾರ ಸ್ವಂತ ಗಂಡಂದಿರಿಗೆ ಒಳಗಾಗಿ ಇರಿ. ಗಂಡಸರೇ, ಹೆಂಡಿರನ್ನು ಪ್ರೀತಿ ಮಾಡಿ; ಅವರಿಗೆ ಕಹಿಯಾಗಿರಬೇಡಿರಿ.

"ದಾಸರೇ, ಮನುಷ್ಯರನ್ನು ಮೆಚ್ಚಿಸುವವರಾಗಿ........ಯಜಮಾನರೇ ನಿಮಗೂ ಪರದೇಶದಲ್ಲಿ ಯಜಮಾನನು ಇದ್ದಾನೆಂದು ತಿಳಿಯಿರಿ........"

ಎಷ್ಟು ಸುಂದರವಾದ ನಿರೂಪಣೆ! ಎಷ್ಟು ಮನೋಹರವಾದ ಶೈಲಿ ಮತ್ತು ನುಡಿಗಟ್ಟು! ಅದರಲ್ಲಿ ಅಡಗಿರುವ ಬೋಧೆಯಾದರೂ ಎಷ್ಟು ಹೃತ್ಪೂರ್ವಕವಾದ ದಿವ್ಯವಾಣಿ! ಪಾಶ್ಚಾತ್ಯರಿಗೆ ಧರ್ಮ, ನೀತಿ, ಸಮಾಜ, ಸಭ್ಯತೆ ಇತ್ಯಾದಿಗಳು ಎಷ್ಟು ಮಹತ್ವವಾಗಿದ್ದುದೆಂಬುದನ್ನು ಅವರ ಇಂಥಾ ಹಲವು ಬರೆವಣಿಗೆಗಳಿಂದ ತಿಳಿಯಬಹುದಾಗಿದೆ. ನಮ್ಮ ಪೂರ್ವಕಾಲದ ಋಷಿಗಳೂ ದಾಸರೂ ಹೇಳಿದ್ದನ್ನೇ ಅವರೂ ಅವರ ಮಾತಿನಲ್ಲಿ ಚೊಕ್ಕವಾಗಿ ಪಾಮರ ಜನಪ್ರಿಯವಾಗುವಂತೆ ಹೇಳಿದ್ದಾರೆ. ಭಾಷೆಯನ್ನು ಚೆಲೋ ನುಡಿಧಾರೆಯ ರೂಪದಲ್ಲಿ ಜನಸಾಮಾನ್ಯರ ಹೃದಯಾಂತರಾಳಕ್ಕೆ ಹರಿಯಿಸಿದ್ದಾರೆ.

## ೧೪. ಹೊಸಗನ್ನಡ ಕಾವ್ಯಕ್ಕೆ ಪಾಶ್ಚಾತ್ಯರೇ ತಳಹದಿಯನ್ನು ಹಾಕಿದರು :-

ಕನ್ನಡ ಗದ್ಯಸಾಹಿತ್ಯಕ್ಕೆ ಕಳೆದ ಶತಮಾನಾರಂಭದ ಕ್ರೈಸ್ತ ವಿದ್ವಾಂಸರು ಕಾರಣರಾದರೆಂದು ಹೇಳುವಾಗ ಅದರೊಡನೆಯೇ ಆಧುನಿಕ ಕನ್ನಡ ಕವನಗಳ ರಚನೆಗೆ ಮೇಲ್ಪಂಕ್ತಿಯನ್ನು ಹಾಕಿದವರು ಯಾರು ಎಂಬುದಾಗಿಯೂ ಕೇಳಬೇಕಾಗಿದೆ. ಹೊಸಗನ್ನಡ ಕವನಗಳು ಯಾವಾಗ ಹುಟ್ಟಿದುವು ಎಂಬುದನ್ನು ನ್ಯಾಯವಾಗಿ ಪರ್ಯಾಲೋಚಿಸಬೇಕಾಗಿದೆ. ಹಲವರ ಅಭಿಪ್ರಾಯದಂತೆ ಆಧುನಿಕ ಕನ್ನಡ ಕವನಗಳಿಗೆ ಮೂಲಪುರುಷರು ಇಂಗ್ಲಿಷ್ ವಿದ್ಯೆಯನ್ನು ಪಡೆದ ಈ ಶತಮಾನಾರಂಭವಲ್ಲಿ ಹಿರಿಯ ಕನ್ನಡಿಗರು ಎಂದು ಒಂದು ಬಗೆಯ ಭಾವನೆಯಿದೆ. ಶ್ರೀಕಂಠಯ್ಯನವರು ತಮ್ಮ "ಇಂಗ್ಲಿಷ್ ಗೀತೆಗಳು" ಇದರಲ್ಲಿ "ಇವಳ ಸೊಬಗನವಳು ತೊಟ್ಟು ನೋಡಬಯಸಿದೆ; ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿದೆ" ಎಂದು ಅವರು ಕೆಲವು ಇಂಗ್ಲಿಷ್ ಕವನಗಳನ್ನು ಕನ್ನಡಕ್ಕಿಳಿಸುತ್ತಾ ಹೇಳಿದರು. ಹಾಗಿದ್ದರೂ ಹೊಸಗನ್ನಡ ಕವನಗಳ ರಚನೆಗೂ ಪಾಶ್ಚಾತ್ಯ ವಿದ್ವಾಂಸರೇ ಕಳೆದ ಶತಮಾನದ ಮಧ್ಯಕಾಲದಲ್ಲಿ ಮತ್ತು

ಪಂಜೇ, ಶ್ರೀಕಂಠಯ್ಯ ಮೊದಲಾದವರ ಅಜ್ಜಂದಿರ ಕಾಲದಲ್ಲಿಯೇ ಪ್ರಾರಂಭಿಸಿದ್ದರೆಂದು ಹೇಳಬೇಕಾಗಿದೆ.

ಪಾಶ್ಚಾತ್ಯ ಕ್ರೈಸ್ತ ಮತೋಪದೇಶಕರು ಸುಮಾರು ಕ್ರಿ.ಶ. 1835ರಲ್ಲಿಯೇ ತಮ್ಮ ಕ್ರೈಸ್ತ ಗುಡಿಗಳಲ್ಲಿ ಹಾಡಲಿಕ್ಕೆ ಕನ್ನಡ ಗೀತೆಗಳನ್ನು ರಚಿಸಿದ್ದರು. Rev. Henry Connolly ಇವನ ಬೈಬಲ್ ಗೀತೆಗಳು ಹೊಸಗನ್ನಡ ಶೈಲಿಯಲ್ಲಿಯೇ ಬರೆಯಲ್ಪಟ್ಟವೆ. 1847 ರಲ್ಲಿ Weigle ಮತ್ತು Moegling ಇವರು.—

" ಕಳ್ಳರ ಕೈಯಲಿ ಬಿದ್ದಿಯೊ ಹಣವನು
ಕೊಳ್ಳೆಯ ಕೊಟ್ಟೆಯೊ ಪರದೇಶಿ........"

ಎಂಬುದಾಗಿ ಹೇಳಿದ ಹಲವು ಪದಗಟ್ಟುಗಳು, Benjamin Rice ಇವನು ಕೇವಲ ತನ್ನ ತಾರುಣ್ಯದಲ್ಲಿ ಎಂದರೆ ಸುಮಾರು 1848ರ ಕಾಲದಲ್ಲಿ.—

" ಪಾಪದ ಉಂನತ
ಸ್ಥಾನದಿಂದಿಳಿದ
ಸರ್ವಪತಿ

ಅಗಲಿ ತಂದೆಯ
ಜಗತ್ತಿಗೋಸುಗ
ರಕ್ತವ ಚೆಲ್ಲಿದ
ಪರ್ವತದಿ "

ಎಂಬುದಾಗಿ ಯೇಸುವನ್ನು ಬೆಟ್ಟದ ಮೇಲೆ ಸಿಲುಬೆಗೆ ಹಾಕಿದ ವಿಷಯವಾಗಿ ಬರೆದ ಪದ್ಯವನ್ನೂ, ದಾಸರ ಹಾಡುಗಳ ಶೈಲಿಯಲ್ಲಿ ಹಲವು ಬೈಬಲ್ ಕೀರ್ತನೆಗಳನ್ನು ಹಾಡಿದ Miss Anstey ಇವಳು 1866ರ ಕಾಲದಲ್ಲಿ,—

" ದಾಸರ ಪ್ರಾರ್ಥನೆ ತಪ್ಪದೆ ನಡೆಸುವ
ಏಸುನಾಯಕನೆ ನಮ್ಮರಸು,
ದೋಷಕಾರಿ ಬಲು ದುರ್ಜನನಾದರು
ಕ್ಲೇಶವ ಹರಿಯಿಸಿ ಮಾಡು ನೀ ಲೇಸು !"

ಎಂಬುದಾಗಿ ಬರೆದ ಸುಂದರ ಕವನಗಳೆಲ್ಲಾ ಒಂದು ನೂರು ವರ್ಷಗಳಿಗೂ ಹಿಂದಿನದಾಗಿವೆ. Rev. Abijah Samuel ಇವನ ಹಾಡುಗಳಿಗೆ ಉದಾಹರಣೆಗಳನ್ನು ಹಿಂದೆಯೇ ಕೊಡಲಾಗಿದೆ. ದಾಸರ ಹಾಡುಗಳ ಚರಣಗಳನ್ನು ತಮ್ಮ ಕವನಗಳಿಗೆ ಪೋಣಿಸಿ ಬರೆದ ಹಾಡು 1862ರ "ಅರುಣೋದಯ" ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

"ಕಾಂಚಿ ತಿರುಪತಿ ಕಾಶೀಯಾತ್ರೆ
ಮಿಂಚಿ ಶ್ರಮೆಗಳೊಂದಿದಾಗ್ಯೂ....,
ಅಂಗದ ಮೇಲೆ ಲಿಂಗವ ಕಟ್ಟಿ
ಗಂಗಾಧರನನು, ಪೂಜಿಸಿದಾಗ್ಯೂ....,
ಸುಳ್ಳು ಕಥೆಗಳ ಕಲ್ಪಿಸಿಕೊಂಡು
ಕಳ್ಳ ಬೋಧನೆ ಬೋಧಿಸಿದಾಗ್ಯೂ...."

ಎಂಬೀ ಮೊದಲಾದ ಚರಣಗಳೂ, 1870ರ "ಸಭಾಪತ್ರ"ದಲ್ಲಿ,—

ನಾಳೆ ನಾಳೆ ಎಂದಿನ
ಜೆನಕನ ಮದುವೆ?

ನಾಳೆ ಪಾಠ ಕಲಿತು
ಕಷ್ಟಾಭ್ಯಾಸ ಮಾಳ್ಪದು,"

ಎಂಬುದಾಗಿ ಕಟ್ಟಿದ ಶಿಶುಗವನಗಳೂ, ಅದೇ ಪತ್ರಿಕೆಯಲ್ಲಿ ಪ್ರಕಟವಾದ "ಜೋಗುಳಾಷ್ಟಕದಲ್ಲಿ,—

"ಜೋ ಜೋ ಎನ್ನ ನಿತ್ಯ ಪ್ರಕಾಶ,
ಜೋ ಜೋ ಎನ್ನ ಸತ್ಯಪ್ರವೇಶ,
ಜೋ ಜೋ ಎನ್ನ ಮೃತ್ಯುವಿನಾಶ ..."

ಎಂಬುದಾಗಿಯೂ 1865ರ ಕ್ರೈಸ್ತ ಗೀತೆಗಳ ಸಂಕಲನವೊಂದರಲ್ಲಿ,—

"ನನ್ನ ದೇವ ಪ್ರೀಯ ತಂದೆ
ಬಡ ಬಾಲ ನಾನು ಬಂದೆ,
ಕರ್ತ ಆದಿ ವಸ್ತುವೆ
ನಿನ್ನ ಮುಂದೆ ವಂದಿಪೆ!...."

ಎಂಬೀ ತರಹದ ರಚನೆಗಳೆಲ್ಲಾ ಹೊಸಗನ್ನಡ ಕವನಗಳೇ ಆಗಿವೆ. ಹಾಗಾದರೆ ಈ ಹೊಸಗನ್ನಡ ಕವನಗಳ ಮೂಲ ಯಾರಿಂದ ಮತ್ತು ಯಾವಾಗ ಎಂಬುದನ್ನು ಇಲ್ಲಿ ಇನ್ನೊಮ್ಮೆ ಪ್ರತ್ಯೇಕವಾಗಿ ಹೇಳಬೇಕಾದ ಅವಶ್ಯಕತೆಯಿಲ್ಲ.

**೧೫. ಕನ್ನಡ ಸಾಹಿತ್ಯವನ್ನು ಘೋಷಿಸಿದ ಅವರು ವೀರಕನ್ನಡಿಗರು :—**

ಕಳೆದ ಶತಮಾನದಲ್ಲಿ ಇದ್ದ ದೇಶೀಯ ಸಾಹಿತಿಗಳು ಯಾವಾವ ಬಗೆಯ ಕೃತಿಗಳನ್ನು ರಚಿಸುತಿದ್ದರೆಂದು ಮುಂದಿನ ಪುಟಗಳಲ್ಲಿ ಪ್ರತ್ಯೇಕವಾಗಿ ಹೇಳಲಾಗಿದೆ.

ಅವರು ಹೆಚ್ಚಾಗಿ ಹಳೇ ಷಟ್ಪದೀ ಕ್ರಮವನ್ನೋ ಚಂಪೂ ಕಾವ್ಯವನ್ನೋ ಅನುಸರಿಸಿ ಬರೆಯುತಿದ್ದರು. ಸಾಂಗತ್ಯಗಳು ಮತ್ತು ನಾಟಕಗಳನ್ನೂ ಇತರ ಸಣ್ಣಪುಟ್ಟ ಕಾವ್ಯ ಕೃತಿಗಳನ್ನೂ ಹೊರತರುತಿದ್ದರು. ಆಗ ಮೇಲೆ ಹೇಳಿದಂತೆ ಪಾಶ್ಚಾತ್ಯ ಸಾಹಿತಿಗಳು ತಮ್ಮ ಹೊಸಗನ್ನಡ ಗದ್ಯ ಮತ್ತು ಪದ್ಯಗಳನ್ನೆಲ್ಲಾ ಬರೇ ತಮ್ಮ ಕ್ರೈಸ್ತಗುಡಿಗಳೊಳಗೆ ಅಥವಾ ಕ್ರೈಸ್ತಶಾಲೆಗಳೊಳಗೆ ಓದಿ, ಹಾಡಿ, ಅರ್ಥ ಹೇಳಿ ಪ್ರಚಾರಪಡಿಸಿದ್ದರು. ದೇಶೀಯ ಸಾಹಿತಿಗಳು ಮಾತ್ರ ತಮ್ಮ ಅಲ್ಪ ಸ್ವಲ್ಪ ಷಟ್ಪದಿ, ಸಾಂಗತ್ಯ, ನಾಟಕ, ಯಕ್ಷಗಾನ ಮತ್ತು ಹಳ್ಳಿ ಹಾಡುಗಳಿಂದ ಅಲ್ಲಲ್ಲಿ ತೃಪ್ತರಾದಂತೆ ಇದ್ದರು.

ದೇಶೀಯ ವಿದ್ವಾಂಸರ ಕೃತಿಗಳು ಸುಮಾರು ಕ್ರಿ.ಶ. 1880 ರ ವರೆಗೂ ಅಂತಿದ್ದಾಗ ಅವರಿಂದ ಹೇಳಿಕೊಳ್ಳಲು ಯೋಗ್ಯವಾದ ಗದ್ಯಗ್ರಂಥಗಳಾವುವೂ ಆ ವರೆಗೂ ಬರೆಯಲ್ಪಟ್ಟಿರಲಿಲ್ಲ. ಕ್ರಿ.ಶ. 1885 ರಿಂದ ವೆಂಕಟರಂಗೋ ಕಟ್ಟಿ, ಗಂಗಾಧರ ತುರಮರಿ, ಶಾಂತವೀರ ರಾಚ್ಯದೇವ, ಅಳಸಿಂಗ್ರಾಚಾರ್ಯ, ರಾಮಾನುಜಯಂಗಾರ್ಯ, ಕರಿಬಸವ ಶಾಸ್ತ್ರಿ ಈ ಮೊದಲಾದ ಕೆಲವರು Rev. F. Zeigler, Rev. Benjamin Rice, Rev. Jacob Brigel ಇಂಥಾ ಕೆಲವು ಕನ್ನಡ ವಿದ್ವಾಂಸರ ಪ್ರೇರೇಪಣೆಯಿಂದ, ಪ್ರೋತ್ಸಾಹದಿಂದ, ಆದರ್ಶದಿಂದ ಮತ್ತು ಸಹಕಾರದಿಂದ ಉದ್ಧಾಮ ಗದ್ಯಗ್ರಂಥಗಳ ರಚನೆಗೆ ಕಾರಣರಾದರು. ಕಳೆದ ಶತಮಾನದ ಅಂತ್ಯದೊಳಗಾಗಿ ಈ ದೇಶೀಯ ಪಂಡಿತರು, ಭಾಗವತ, ರಾಮಾಯಣ, ಮಹಾಭಾರತ, ಶಿವಪುರಾಣ ಇತ್ಯಾದಿಗಳನ್ನು ಕನ್ನಡ ಗದ್ಯರೂಪದಲ್ಲಿ ಬರೆಯಲು ತೊಡಗಿದರು. ಅವೆಲ್ಲಾ ಕನ್ನಡ ಸಾಹಿತ್ಯದಲ್ಲಿ ಅಮೂಲ್ಯಕೃತಿಗಳಾದುವು. ಆದರೆ ಅವರಾರೂ ಅವರಿಗಿಂತ ಎಷ್ಟೋ ಹಿಂದೆ ಬೈಬಲ್ ಪುರಾಣವನ್ನೂ ಕನ್ನಡ ಗದ್ಯದಲ್ಲಿ ಬರೆದು ಕ್ರೈಸ್ತಗುಡಿಗಳೊಳಗೆ ಮಾತ್ರ ಉಪಯೋಗಿಸಿದ್ದನ್ನು ನೋಡಿದಂತೆ ತೋರುವುದಿಲ್ಲ. ಹೇಗೂ ಸಾಹಿತ್ಯಕ್ಕೆ ಜನಭೇದ, ಜಾತಿಭೇದ, ದೇವರುಗಳ ಭೇದ ಇತ್ಯಾದಿಗಳು ಇಲ್ಲವಷ್ಟೆ! ಹಿಂದೂ ಪುರಾಣ, ಬೌದ್ಧಪುರಾಣ, ಕ್ರೈಸ್ತಪುರಾಣಗಳೆಲ್ಲವೂ ಕನ್ನಡದಲ್ಲಿಯೇ ಬರೆಯಲ್ಪಟ್ಟಿರುವಾಗ ಅವೆಲ್ಲವೂ ಕನ್ನಡ ಸಾಹಿತ್ಯ ಭಂಡಾರದೊಳಕ್ಕೆ ಏಕ ಸಮಾನವಾಗಿ ಸೇರಬೇಬೇಕು. ಅವನ್ನು ರಚಿಸಿದವರು, ಯಾವ ದೇಶದವರೇ ಆಗಲಿ, ಯಾವ ಮತದವನೇ ಆಗಲಿ, ಯಾವ ಬಣ್ಣದವನೇ ಆಗಲಿ, ಅವರೆಲ್ಲರೂ ಕನ್ನಡಿಗರೇ ಆಗಿದ್ದಾರೆ. ಕನ್ನಡನಾಡಿನಲ್ಲಿ ಹುಟ್ಟಿದ್ದರಿಂದ ಮಾತ್ರ ಒರ್ವನು ಕನ್ನಡಿಗನೆನಿಸಲಾರನು; ಕನ್ನಡ ಸಂಸ್ಕೃತಿಗೆ ಮತ್ತು ಭಾಷೆಗೆ ಅವನು ಸಲ್ಲಿಸುವ ಸೇವೆಯಿಂದ ಅವನು ಹಾಗೆಂದು ಕರೆಯಲ್ಪಡಲರ್ಹನಾಗುವನು. ಈ ದೃಷ್ಟಿಯಿಂದ Dr. Hands, Dr. Carey Rev. Weigle, B. L. Rice, John Garrett, F. Kittel ಮೊದಲಾದವರು ಧೀಮಂತ ಕನ್ನಡಿಗರಾಗಿ, ಕನ್ನಡ ಸಾಹಿತಿಗಳಾಗಿ, ಕನ್ನಡ ಸಂಸ್ಕೃತಿಯ ಅನ್ವೇಷಕರಾಗಿ ಬಾಳಿದರು. ಒಂದಲ್ಲ ಒಂದು ವಿಧದಲ್ಲಿ ಇವರು ಕನ್ನಡ ಸಾಹಿತ್ಯವನ್ನು ಪೋಷಿಸಿದ ವೀರ ಕನ್ನಡಿಗರಾಗಿ ಅಪಾರ ಸೇವೆಯನ್ನೆಸಗಿ ಇಂದೀಗ ಕೀರ್ತಿಶೇಷರಾಗಿರುವರು.

**೧೬. ದೇಶೀಯ ಭಾಷಾಸಾಹಿತ್ಯವನ್ನು ಸಮೃದ್ಧಗೊಳಿಸಲು ನೆರವಾದರು :–**

ಸುಮಾರು 1820 ರಲ್ಲಿ Fr. Dubois ಇವನೂ ಸುಮಾರು 1850 ರಲ್ಲಿ Rev. Garrett ಇವನೂ ಕರ್ಣಾಟಕದಲ್ಲಿ ಕ್ರೈಸ್ತಮತವು ಹೆಚ್ಚಾಗಿ ಬೇರೂರ ಲಿಲ್ಲ; ಮತ್ತು ಹಾಗಾಗಲು ತುಂಬಾ ಪ್ರಯಾಸವಿದೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದರು. ಅದೇ ರೀತಿ Rev. George Wuerth ಇವನು ತನ್ನ Native Christian Literature ಎಂಬ ಪ್ರಬಂಧದಲ್ಲಿ ಹೀಗೆ ಹೇಳಿದ್ದಾನೆ;—

> "ಕರ್ಣಾಟಕ ದೇಶದಲ್ಲಿ ಕ್ರೈಸ್ತಧರ್ಮ ಹಿಡಿದವರು ಸ್ವಲ್ಪ ಜನ. ಯಾಕೆಂದರೆ ಈ ಧರ್ಮ ಕರ್ಣಾಟಕ ಜನರೊಳಗೆ ಇನ್ನು ಬಹಳ ಪ್ರಕಟವಾಗಿರುವುದಿಲ್ಲ. ಆದರೂ ಈ ಧರ್ಮಕ್ಕೆ ಸಂಬಂಧವಾದ ಹಲವು ಕೃತಿಗಳಿವೆ......."

ಈ ಹೇಳಿಕೆಗಳಿಂದ ಏನು ವ್ಯಕ್ತವಾಗುತ್ತವೆಂದರೆ ಈ ಧರ್ಮಗುರುಗಳಲ್ಲಿ ಹಲವರು ತಮ್ಮ ವೇಳೆಯನ್ನೆಲ್ಲಾ ಕನ್ನಡ ಸಾಹಿತ್ಯ ಪ್ರಚಾರದಲ್ಲಿ ಕಳೆಯುತ್ತಾ ತಮ್ಮ ಧರ್ಮ ಪ್ರಚಾರಕಾರ್ಯವನ್ನು ಹಿಂದಿರಿಸಿದರು. ಹಿಂದಿನ ಭಾಗದಲ್ಲಿ ಹಲವು ಬಾರಿ ಹೇಳಿದಂತೆ ಕಳೆದ ಶತಮಾನದಲ್ಲಿ ದೇಶೀಯ ಸಾಹಿತ್ಯಗಳ ಅಭಿವೃದ್ಧಿಗೆ ಇವರು ದುಡಿದಷ್ಟು ಈ ದೇಶದ ಜನರು ಎಲ್ಲೂ ದುಡಿಯಲಿಲ್ಲ. ಈ ದೇಶೀಯ ಸಾಹಿತ್ಯಗಳ ಪೈಕಿ ನೂರಾರು ಜನ ವಿದ್ವಾಂಸರು ಬಂಗಾಳೀ ಸಾಹಿತ್ಯದ ನಿರ್ಮಾಣಕ್ಕೆ ತಮ್ಮ ಬೈಬಲ್ ಕೃತಿಗಳ ಮೂಲಕವಾಗಿ ಶ್ರಮಿಸಿದರು. 1800 ರಿಂದ ಸುಮಾರು 1820 ರ ವರೆಗೆ ಆ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಸುಮಾರು 15,000 ಬಂಗಾಳೀ ಪುಸ್ತಕಗಳು ಬರೆಯಲ್ಪಟ್ಟುವೆಂದರೆ ಸಾಮಾನ್ಯವಾದ ವಿಚಾರವೇನೂ ಅಲ್ಲ. ಈ ಪಾಶ್ಚಾತ್ಯರು ತಮ್ಮ ಆ ಸಮಯವನ್ನೆಲ್ಲಾ ಮಹಮ್ಮದೀಯರಂತೆ ಕೈಯ್ಯಲ್ಲಿ ಖಡ್ಗವನ್ನು ಹಿಡಿದುಕೊಂಡು ಬಲಾತ್ಕಾರಿಕವಾಗಿ ಮತಪರಿವರ್ತನಾ ಕಾರ್ಯಕ್ಕೆ ತೊಡಗಿದ್ದರೆ ಈ ದೇಶದಲ್ಲಿ ಕ್ರೈಸ್ತರ ಸಂಖ್ಯೆಯು ಇನ್ನೆಷ್ಟೋ ಹೆಚ್ಚುತಿತ್ತು.

ಹಾಗಿದ್ದರೂ ಬಂಗಾಳ, ಅಸ್ಸಾಮ್. ನಾಗಾಪ್ರದೇಶ, ವಾಯುವ್ಯ ಪ್ರದೇಶ, ಕೊಂಕಣ, ಕೇರಳ, ತಿನ್ನವೆಲ್ಲಿ ಮತ್ತು ಪೂರ್ವಕರಾವಳೀ ಭಾಗಗಳಲ್ಲಿ ಸಾಕಷ್ಟು ಜನರು ಕ್ರೈಸ್ತ ಮತಾವಲಂಬಿಗಳಾಗಿದ್ದರೂ ಅದು ಅಲ್ಪವೇ ಆಗಿದೆ. ಅದರ ಬದಲಾಗಿ ಈ ಎಲ್ಲಾ ಪ್ರದೇಶಗಳಲ್ಲಿ ನಿರ್ಮಾಣವಾದ ದೇಶೀಯ ಬೈಬಲ್ ಸಾಹಿತ್ಯಕೃತಿಗಳ ಸಂಖ್ಯೆಯು ಕಳೆದ ಶತಮಾನದಲ್ಲಿ ಎಣಿಸಲಾರದಷ್ಟು ಆಗಿವೆ. ಇದರಿಂದಲಾಗಿ ಆ ವರೆಗೂ ದೇಶೀಯರಿಂದಲೇ ತೃಣೀಕರಿಸಲಾಗಿದ್ದ ನೂರಾರು ಭಾಷೆಗಳೂ ಉಪಭಾಷೆಗಳೂ ಸಮಾಜದಲ್ಲಿ ಗಣ್ಯಸ್ಥಾನವನ್ನು ಪಡೆದುವು. ಹಿಂದೆ ಹೇಳಿದಂತೆ ಗೋವಾ ಪ್ರಾಂತದಿಂದ ತೆರೆಗೆಟ್ಟುಹರಿದ ಕೊಂಕಣಿ ಭಾಷಾ ನುಡಿಗಟ್ಟುಗಳು ಸಹ ಪಶ್ಚಿಮ ಕರಾವಳೀ ಸೀಮೆಗಳಲ್ಲಿ ಒಂದು ಪ್ರಧಾನ ಭಾಷೆಯೆಂಬಂತೆ ತೋರ್ಪಡಿಸಿಕೊಂಡಿತು. ನಾನೂರು ವರ್ಷಗಳಿಗೂ ಹೆಚ್ಚು ಕಾಲ ಪೋರ್ಚುಗೀಸ್ ಧರ್ಮಗುರುಗಳ ಸ್ಥಳೀಯ ಜನರೊಡನೆ ಸಂಪರ್ಕವನ್ನು ಬೆಳೆಸಲು ಆ ಭಾಷೆಯನ್ನು ಉಪಯೋಗಿಸಿದ್ದರು; ಅಂತೆಯೇ ಅವರಲ್ಲಿ ಗ್ರಂಥಗಳನ್ನೂ ರಚಿಸಿ ಆ ಭಾಷೆಗೆ ಜೀವವನ್ನಿತ್ತರು. Rev. Kittel ಇವನು ಈ ರೀತಿಯಾಗಿ ಹೇಳಿದ್ದಾನೆ—

"The west coast of India has been for nearly three centuries the seat of a very considerable literary activity. By the end of the sixteenth century the Goa Jesuits had introduced the printing and published many Konkani works in the Roman character which they first used in a scientific manner......Since 1835, the Basel Missionaries have amply made up for previous deficiencies.........."

### ೧೭. ಕ್ರೈಸ್ತ ಧರ್ಮಬೋಧೆಯು ಹಿಂದೂಮತವನ್ನೇ ಗಣ್ಯಸ್ಥಾನಕ್ಕೇರಿಸಿತು:

ಪಾಶ್ಚಾತ್ಯ ಕ್ರೈಸ್ತ ವಿದ್ವಾಂಸರು ತಮ್ಮ ಧರ್ಮಬೋಧೆಯ ಕಾರಣದಿಂದ ದೇಶೀಯ ಭಾಷೆಗಳನ್ನು ಕಲಿತು ಆಯಾ ಸಾಹಿತ್ಯಕ್ಕೆ ಪುನರ್ಜೀವವನ್ನಿತ್ತರೆಂಬುದು ನಿರ್ವಿವಾದವಾದ ವಿಷಯವಾಗಿದೆ. ಕ್ರಿ. ಶ. 10 ನೇ ಶತಮಾನದ ವರೆಗೂ ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳ ಮೂಲದಿಂದ ಹೊರಟ ಈ ನೂರಾರು ದೇಶೀಯ ನುಡಿಗಟ್ಟುಗಳು ಮಹಮ್ಮದೀಯರ ಕಾಲದಲ್ಲಿ ಅಂತೆಯೇ ಸೊರಗಿದ್ದುವು. ಮೊಗಲರು ಪರ್ಷಿಯನ್—ಅರಬೀ ಭಾಷಾ ಮಿಶ್ರಿತ ಹಿಂದೂಸ್ಥಾನೀಯನ್ನೂ ಮತ್ತು ಕ್ರಿ. ಶ. 16 ನೇ ಶತಮಾನದಲ್ಲಿ ತೋದರಮಲ್ಲನು ಪರ್ಷಿಯನ್ ಭಾಷೆಯನ್ನೂ ರಾಜಭಾಷೆಯಂತೆ ಸಾರಿದಾಗ ಆ ವಿದೇಶೀಯ ಭಾಷೆಗಳು ಯಾವುದೋ ಒಂದು ರೂಪಾಂತರಕ್ಕೊಳಗಾಗಿ ಈ ದೇಶದಲ್ಲಿ ಪ್ರಚಾರವಿತ್ತು. ಬ್ರಿಟಿಷರು 18 ನೇ ಶತಮಾನದಲ್ಲಿ ಹಿಂದೂಸ್ಥಾನೀಯನ್ನು ಜನಸಾಮಾನ್ಯರೊಳಗೆ ಹರಡಲು ಸಹಾಯಕರಾದರು. ತಮ್ಮ ಸೇನಾ ಸಿಪಾಯಿಗಳಿಗಾಗಿ ಉರ್ದೂ ಎಂಬ ಮಿಶ್ರ ಭಾಷೆಯನ್ನೂ ಪ್ರಚಾರಪಡಿಸಿದರು. ಹೇಗೂ ಕಳೆದ ಶತಮಾನದ ಪ್ರಾರಂಭದೊಳಗಾಗಿ ಹಿಂದೂಸ್ಥಾನೀ, ಉರ್ದೂ ಭಾಷೆಗಳಲ್ಲದೆ ಸುಮಾರು 1500 ವರ್ಷಗಳ ಕಾಲಕ್ಕೂ ಹಿಂದೆಯೇ ಪ್ರಚಾರವಿದ್ದ ಈ ದೇಶದ ಎಲ್ಲಾ ಪ್ರಾಂತೀಯ ಪ್ರಧಾನಭಾಷೆಗಳಿಗೂ ಬ್ರಿಟಿಷರು ಪ್ರಾಶಸ್ತ್ಯವಿತ್ತರು. ವಿದ್ವಾಂಸರು ಅವುಗಳ ಅನ್ವೇಷಣೆಗೆ ತೊಡಗಿದರು; ಕ್ರೈಸ್ತ ಗುರುಗಳು ಆ ಎಲ್ಲಾ ಭಾಷೆಗಳಲ್ಲೂ ತಮ್ಮ ಬೈಬಲ್ ಕೃತಿಗಳನ್ನು ರಚಿಸಲು ಅನುವಾದರು—

"By the 18th century, when the English appeared on the scene, the regional languages had come of age." ಎಂದು ಕುರುಕ್ಷೇತ್ರ ವಿಶ್ವವಿದ್ಯಾಲಯದ ಪ್ರೊ. ಬುದ್ಧ ಪ್ರಕಾಶ ಇವನು ಹೇಳುತ್ತಾನೆ. ಅಷ್ಟೇ ಅಲ್ಲ, ಪ್ರಾಂತೀಯ ಭಾಷೆಗಳ ಪ್ರಗತಿಯೊಡನೆಯೇ ಇಂಗ್ಲಿಷ್ ಭಾಷೆಯ ಪ್ರಾಶಸ್ತ್ಯವೂ ಹೆಚ್ಚುತ್ತಾ ಬಂತು.

ಇಂಥಾ ಕ್ರಾಂತಿಕಾರಕವಾದ ಬದಲಾವಣೆಗೆ ಪಾಶ್ಚಾತ್ಯ ಕ್ರೈಸ್ತ ವಿದ್ವಾಂಸರೇ ಕಾರಣರಾಗಿದ್ದಾರೆ. ತಮ್ಮ ಧರ್ಮಬೋಧೆಯೊಡನೆ ಹಿಂದೂ ಧರ್ಮದ ಪ್ರಬುದ್ಧತೆಯನ್ನೂ ಅವರು ಜನರಿಗೆ ಬೋಧಿಸಿದರು. ಬ್ರಾಹ್ಮಣ ಗುರುಗಳು ಮಾಡದೆ ಇದ್ದ ಕೆಲಸವನ್ನು ಕ್ರೈಸ್ತ ಗುರುಗಳು ಮಾಡಿದರು. ಶೇಕಡ ೯೦ ರಷ್ಟು ನಿರಕ್ಷರಸ್ತರಾಗಿ, ದಲಿತರಾಗಿ, ದರಿದ್ರರಾಗಿ, ಸೊರಗಿದ್ದ ಹಿಂದೂಜನಕ್ಕೆ ಆ ಕಾಲದಲ್ಲಿ ತಮ್ಮ ಮತ

ವೇನು, ಧರ್ಮವೇನು ಎಂದೂ ಏನೂ ತಿಳಿಯದೇ ಇದ್ದಾಗ, 600 ವರ್ಷಗಳ ಮಹಮ್ಮದೀಯ ಆಡಳಿತೆ ಮತ್ತು ಪರ್ಷಿಯನ್ ಭಾಷೆಯ ಪ್ರಾಬಲ್ಯತೆಯಿಂದ ಇಡೀ ದೇಶವೇ ಕಳೆಗುಂದಿದ್ದಾಗ ಆ ಪರಿಸ್ಥಿತಿಯನ್ನು ಸುಧಾರಿಸಲು ಪಾಶ್ಚಾತ್ಯ ಧರ್ಮ ಗುರುಗಳೂ ವಿದ್ವಾಂಸರೂ ಈ ದೇಶಕ್ಕೆ ದೇವದೂತರಂತೆ ಬಂದು ಹಿಂದೂಮತ, ಹಿಂದೂಜನ, ಹಿಂದೂ ಧರ್ಮ, ಹಿಂದೂದೇಶ ಎಂಬುವನ್ನೆಲ್ಲಾ ವೇದೋಪನಿಷತ್ತು ಗಳ ಆಧಾರದಿಂದ ಬೋಧಿಸಲು ಆರಂಭಿಸಿದಾಗ ಜನರು ಎಚ್ಚೆತ್ತರು. ಕೆಲವೇ ಬ್ರಾಹ್ಮಣ ವಿದ್ವಾಂಸರು ಈ "ಫರಂಗಿ"ಗಳ ವಿಚಾರ ಜ್ಞಾನವನ್ನು ನೋಡಿ ಕಂಗೆಟ್ಟರು. ಶೇಕಡ ಒಂದರಂತೆ ಜನವು ಕ್ರೈಸ್ತಮತಕ್ಕೆ ಸೇರಿದ್ದರೂ ಅವರೊಡನೆಯೆ ನಡೆದ ಅಥವಾ ಅವರು ನಡೆಯಿಸಿದ ಹಿಂದೂಮತದ ಉದ್ಧಾರ ಕಾರ್ಯವು ಮಹತ್ತಾದ ಸಾಮಾಜಿಕ ಕ್ರಾಂತಿಯೆಂಬುದು ಪುನಃ ಹೇಳಲೇ ಬೇಕಾಗುತ್ತದೆ—

> "...For this progress of Christianity (in India), our old Brahmin imperialism is mainly responsible. Our Brahmins made the Hindus so blind that they could not recognize those with their own flesh and blood. Christianity had to come to identify them as Hindus. What a tragedy!"

ಎಂಬುದಾಗಿ ಬೊಂಬಾಯಿಯ ತೀವ್ರಗಾಮಿ ಪತ್ರಿಕೋದ್ಯಮಿ ಬಾಬುರಾವ್ ಪಟೇಲ್ ಇವನು ಖೇದಪೂರ್ವಕವಾಗಿ ಬರೆಯುತ್ತಾನೆ. ಒಟ್ಟಾಗಿ ಕಳೆದ ಒಂದೆರಡು ಶತಮಾನ ಗಳ ಕಾಲದ ಕ್ರೈಸ್ತ ವಿದ್ವಾಂಸರ ಸೇವೆಯು ಈ ದೇಶದ ಪ್ರಾಚೀನ ಮತ, ಧರ್ಮ, ಶಾಸ್ತ್ರ, ಸಾಹಿತ್ಯ, ಸಂಸ್ಕೃತಿ ಮತ್ತು ಕಲೆಗಳೆಲ್ಲವನ್ನೂ ಉಚ್ಛ್ರಾಯಸ್ಥಾನಕ್ಕೇರಿಸಿತು. ದೇಶದ ಭವ್ಯ ಪರಂಪರೆಯನ್ನು ಮತ್ತು ವೈಭವವನ್ನು ಕಾಲಗರ್ಭದಿಂದ ಅಗಿದೊಗೆದು ಜನದ ಮುಂದಿರಿಸಿತು. ಈ ಪಾಶ್ಚಾತ್ಯ ಜನಾಂಗದ ದೀಕ್ಷಾಬದ್ಧವಾದ ಅಂದಿನ 18 19 ನೇ ಶತಮಾನಗಳ ಕಾಲದ ಸೇವೆಯು ಸುದೈವವು ಈ ದೇಶಕ್ಕೆ ಇತ್ತ ಕೊಡುಗೆ ಯಾಗಿದೆ. ಅವರು ಎಸಗಿದ ಒಂದೆರಡು ಅಕ್ರಮಗಳನ್ನು ಹಿಮಾಲಯದಷ್ಟು ದೊಡ್ಡದು ಮಾಡಿ ಅವರ ನೂರಾರು ಸಹಸ್ರಾರು ಒಳ್ಳೆಯ ಕೆಲಸಗಳನ್ನು ದೇಶವು ಮರೆತರೆ ನಾವು ಮತ್ತು ಈ ದೇಶವು ಅವರಿಗೆ ಆಭಾರಿಗಳಾದಂತೆ ಆಗಲಿಲ್ಲವೆಂಬುವನ್ನು ನೆನೆದು ಅವರ ಬಹುಮುಖ 'ಸೇವೆಯನ್ನು ಸುವರ್ಣಾಕ್ಷರದಲ್ಲಿ ಬರೆದು ಮುಂದಿನ ಪೀಳಿಗೆಗೆ ತಿಳಿಸಬೇಕಾಗಿದೆ; ಹಾಗೂ ಅವರಿಗೆ ಈ ದೇಶವು ಅತ್ಯಂತ ಕೃತಜ್ಞವಾಗ ಬೇಕಿದೆ!

——

# ಭಾಗ-೩

## ೧೭

" ಸಂಜೆ ಸೇರಿತು ಬಂದು ಕನ್ನಡದ ನಾಡಿನೊಳು
ಮಂಜು ಮುಸುಕಿದ ಕತ್ತಲೆಯಗೂಡಿಸಿತೊ ?
ನಂಜೇರಿ ನಿದ್ದೆಗೈದಿತೊ ?.....................
ಮುಂಜಾವಿನಸವಳ ತೆಂಬೆಲರೊಡನೆ ಮುದ್ದಣನ
ಹುಂಜವೆಕ್ಕೆಕ್ಕಿ ಕೂಗಿದ ಮೇಲೆ ಆ ದನಿಯು
ಸಂಜೀವನೆಬ್ಬಿಸಿತು ಸಾಸಿಗರ ಹಿಂಜರಿಯದಂಥ
ಚೈತನ್ಯವನ್ನು !

[ದ. ರಾ. ಬೇಂದ್ರೆ]

ಕ್ರಿ.ಶ. 18ನೇ ಮತ್ತು 19ನೇ ಶತಮಾನಗಳಲ್ಲಿ ಕನ್ನಡ ಸಾಹಿತ್ಯವು ಬಹುಮುಖವಾಗಿ ಬೆಳೆದಿದೆಯಾದರೂ ಅದರ ಬೆಳವಣಿಗೆಗೆ ಉತ್ತೇಜನವೀಯಲು ತಕ್ಕ ದೇಶೀಯ ಸರಕಾರವಾಗಲೀ ಸಾಹಿತ್ಯ ಸಂಘಟನಾ ಸಂಸ್ಥೆಗಳಾಗಲೀ ಅಂದು ಇರಲಿಲ್ಲ. ರಾಜಕೀಯ ಕಾರಣಗಳಿಂದ ನಾಡು ಛಿದ್ರವಾಗಿತ್ತಲ್ಲದೆ ಸಮಾಜವೂ ಅದೊಂದು ಬಗೆಯ ಕೋಲಾಹಲಕ್ಕೊಳಗಾಗಿ ಕುಸಿದಿದ್ದಿತು. ಹೀಗಿದ್ದರೂ ಸಮಾಜದಲ್ಲಿ ಕನ್ನಡ ಸಾಹಿತ್ಯವು ಒಂದಲ್ಲ ಒಂದು ರೀತಿಯಲ್ಲಿ ಅದರ ಪರಿಣಾಮವನ್ನು ಬೀರಿತ್ತು. ಲಕ್ಷ್ಮೀಶನ ಜೈಮಿನಿ ಭಾರತ, ಕುಮಾರವ್ಯಾಸನ ಭಾರತ, ತೊರವೇ ರಾಮಾಯಣ, ರತ್ನಾಕರನ ಭರತೇಶ ವೈಭವ, ಹೊನ್ನಮ್ಮನ ಹದಿಬದೆಯ ಧರ್ಮ, ಶಿವಶರಣರ ವಚನಗಳು ಜನಪದ ಹಾಡುಗಳು ಯಕ್ಷಗಾನ ಮತ್ತು ಬಯಲಾಟಗಳು ಇತ್ಯಾದಿಯಾಗಿ ಎಲ್ಲೆಲ್ಲೂ ಪ್ರತಿಷ್ಠಾಪಿಸಿದುವು. ಇವೆಲ್ಲಾ ನೂರಾರು ಕನ್ನಡ ಕವಿಗಳು ಮತ್ತು ಬರೆಹಗಾರರ ಮೂಲಕ ಇನ್ನಷ್ಟು ತ್ವರಿತಗತಿಯಲ್ಲಿ ಪ್ರಚಾರವಾದುವು. ಈ ವೇಳೆಗೆ ಉದ್ದಾಮ ಪಂಡಿತರು ಹಲವರು ಇದ್ದರಾದರೂ ಹೆಸರಾಂತ ಕವಿಗಳ ಮತ್ತು ಕಾವ್ಯಗಳ ಅಭಾವವು ಕ್ರಿ.ಶ. 18ನೇ ಶತಮಾನಾಂತ್ಯದಲ್ಲಿ ಈ ದೇಶದಲ್ಲಿ ಎದ್ದು ಕಾಣುತಿತ್ತು.

ಹಾಗಿದ್ದರೂ ಕನ್ನಡನಾಡಿನಲ್ಲಿ ಕಳೆದ ಶತಮಾನದಿಂದ ಆರಂಭಗೊಂಡು ಅನಂತರ " ಮುದ್ದಣನ ಹುಂಜವೆಕ್ಕೆಕ್ಕಿ ಕೂಗುವ " ವರೆಗೂ ಕನ್ನಡ ಸಾಹಿತ್ಯ ನಿರ್ಮಾಣವು ನಡುಗನ್ನಡ ಮತ್ತು ಹೊಸಗನ್ನಡ ಸಾಹಿತ್ಯಕ್ಕೆ ಒಂದು ಬಗೆಯ ಸಮನ್ವಯವನ್ನು ಒದಗಿಸಿದೆ. ಹಳೆಗನ್ನಡ ಕಾವ್ಯಗಳ ಕಾಲವು ಅಷ್ಟರಲ್ಲಿ ಮುಗಿದಿದ್ದು ನವ ಅರುಣೋದಯದ ಸುಪ್ರಭಾತವು ಮೂಡಿದೆ. ಹಲವು ಸಣ್ಣಪುಟ್ಟ ಕೃತಿಗಳು ಪ್ರೋತ್ಸಾಹಕ್ಕೆ ಅಭಾವವಿದ್ದ ಆ ಕಾಲದಲ್ಲಿ ಸಣ್ಣದಾಗಿ ತೋರಿದ್ದರೂ ಅವುಗಳಲ್ಲಿ ಅನೇಕ ಉತ್ತಮ ಕೃತಿಗಳಾಗಿದ್ದು ಇಂದಿಗೂ ಪುನರ್ಮುದ್ರಣವಾಗುವಷ್ಟು ಯೋಗ್ಯವಾಗಿವೆ.

## ೨. "ಕರ್ಣಾಟಕ ದೇಶ"ದ ಅಂದಿನ ವ್ಯಾಪ್ತಿ ಎಷ್ಟು?

ಕ್ರಿ.ಶ. 1800 ರಿಂದ ಕನ್ನಡ ಭಾಷಾ ಪ್ರದೇಶವನ್ನು ಬ್ರಿಟಿಷರು ತಮ್ಮ ಆಡಳಿತ ಸೌಕರ್ಯಕ್ಕನುವಾಗುವಂತೆ ಮದ್ರಾಸು, ಬೊಂಬಾಯಿ ಮತ್ತು ಹೈದರಾಬಾದು ರಾಜ್ಯ ಸರಕಾರಗಳೊಳಗೆ ಹಂಚಿದರು. ಹೈದರ ಮತ್ತು ಟಿಪ್ಪುಸುಲ್ತಾನ ಇವರು ಸಂಪಾದಿಸಿದ್ದ ವಿಶಾಲ ರಾಜ್ಯವನ್ನು ಹೀಗೆ ಒಡೆದು ಅದರಿಂದ ಎಂಟು ಕನ್ನಡ ಜಿಲ್ಲೆಗಳನ್ನು ಮೈಸೂರು ರಾಜವಂಶಕ್ಕೆ ಒಪ್ಪಿಸಿದ್ದು ಹಳೇ ಮೈಸೂರು ರಾಜ್ಯವಾಯಿತು. ಬ್ರಿಟಿಷರ ಅಂಕಿತದೊಳಗಿದ್ದ ಈ ದೇಶೀಯ ರಾಜರು ಗೌರವಾನ್ವಿತ ಗೊಂಬೆಗಳಂತಿದ್ದು ಆಡಳಿತ ವ್ಯವಹಾರವೆಲ್ಲವೂ ಕುಂಪೆನೀ ಸರಕಾರದ ಅಧಿಕಾರಿಗಳಿಂದಲೇ ನಡೆಸಲ್ಪಟ್ಟಿತು.

ಈ ರೀತಿ ಕರ್ಣಾಟಕವೆಂಬ ರಾಜ್ಯವು ಅಂದು ಇಲ್ಲದೇ ಇದ್ದಿದ್ದರೂ ಕರ್ಣಾಟಕ ಸಂಸ್ಕೃತಿ, ಭಾಷೆ ಕಲೆ ವಾಙ್ಮಯ ಇತ್ಯಾದಿಗಳು ಪರೋಕ್ಷವಾಗಿ ಶತಮಾನಗಳ ಕಾಲದಿಂದಲೇ ಇದ್ದಂತೆಯೇ ಅಂದೂ ಇತ್ತು.

ಆಂಗ್ಲೇಯರು ಅಂದು ವಶಪಡಿಸಿ ಆಳಲು ತೊಡಗಿದ ಈ ದೇಶವನ್ನು ಆಸೇತು ಹಿಮಾಚಲ ಪರ್ಯಂತವಾಗಿ ಅನ್ವೇಷಿಸಿದ ಅವರ ಸಾಹಸವು ಅಸಾಮಾನ್ಯವಾದುದಾಗಿದೆ. ಹಿಂದಿನ ಕಾಲದ ಯಾವ ದೇಶೀಯ ಸರಕಾರವೂ ಹಿಂದೆಂದೂ ಕೈಗೊಳ್ಳದಿದ್ದ ಈ ದೇಶದ ಅಪಾರ ಸಾಹಿತ್ಯ ಮತ್ತು ಸಂಸ್ಕೃತಿಗಳ ಆಳವೆಷ್ಟೆಂಬುದನ್ನು ಅವರು ಪರಿಶೋಧಿಸಿ ಈ ಪ್ರಾಚೀನ ದೇಶದ ಪೂರ್ವಾಪರಗಳೇನೆಂಬುದನ್ನು ಲೋಕಕ್ಕೆ ತಿಳಿಸಿದರು.

"ಕರ್ಣಾಟಕ ದೇಶ" ಎಂಬುದಾಗಿ ಒಂದು ದೇಶವು ಇದ್ದಿಲ್ಲವಾದರೂ ಹಾಗೆಂದೇ ಈ ಪುರಾತನ ನೆಲವನ್ನು ಪಾಶ್ಚಾತ್ಯರು ಕಳೆದ ಶತಮಾನದಲ್ಲಿ ತಮ್ಮ ಪರಿಶೋಧನಾ ವರದಿಗಳಲ್ಲಿ ಬರೆದರು. ಕರ್ಣಾಟಕ ಭಾಷಾ ಸೀಮೆಗಳಾವುವು, ಕರ್ಣಾಟಕ ದೇಶದ ಮೇರೆ ಏನು ಎಂಬುದನ್ನು ಅವರು ಸ್ಪಷ್ಟಪಡಿಸಿದರು.

ಭಾಷಾವಾರು ಪ್ರಾಂತಗಳಾದ ಇಂದಿನ ಗೊಂದಲದ ಕಾಲಕ್ಕೂ ಕಳೆದ ಶತಮಾನದ ಮಧ್ಯಭಾಗಕ್ಕೂ ಈ ನೂರು ವರ್ಷಗಳ ಅವಧಿಯಲ್ಲಿ ಕನ್ನಡನಾಡಿನ ಗಡಿ ಸೀಮೆಯು ಬಗ್ಗೆ ಎಷ್ಟು ವ್ಯತ್ಯಾಸ ತೋರಿಬಂದಿದೆಯೆಂಬುದನ್ನು ಅಂದಿನ ಆಂಗ್ಲೇಯ ಪರಿಶೋಧಕರು ಬರೆದಿಟ್ಟ ವರದಿಗಳಿಂದ ತಿಳಿದುಕೊಳ್ಳಬಹುದು. Col. Mark Wilks ಇವನಿಂದ ಸುಮಾರು ಕ್ರಿ.ಶ. 1810 ರಷ್ಟು ಹಿಂದೆಯೇ ಪರಿಗಣಿಸಲಾದ ಕರ್ಣಾಟಕದ ಮೇರೆಯು ಈ ಕೆಳಗಿನಂತೆ ಇತ್ತು :—

'...The boundaries of the Karnataka country, which is comparatively a modern designation are better known. They commenced near the town of Bedar in the latitude of 18″ 45″ north about 60 miles north-west from Hyderabad. Following the course of the Tamil language to the south-east, the country was limited by a waving line which nearly

touched Adoni, went to the west of Gooty, skirted the town of Anantapur, and passing through Nandidoorg, touched the range of Eastern Ghats. Thence pursuing the southern course to the mountainous pass of Guzzelhutty, it continued to follow the abrupt turn caused by the chasm of the Western hills between the town of Coimbatore, Pollachy, Palghat, and turning to the north-west, skirted the edges of the Western ghats nearly as far as the source of the the Kistna; whence following first an eastren and afterwards a north-eastern course, it is terminated in rather an actue angle near Bedar, already described as its northern limit. The name still exists in Carnatic-the name applied by the Europeans to the country from Cape Comorin to the northern Circars lying east of the Ghats and extending to the sea on the Coromondol coast......".*

**೩. ಕರ್ಣಾಟಕದ ಅಂದಿನ ಮೇರೆಯು ಒತ್ತರಿಸಲ್ಪಟ್ಟದೆ :—**

ಕನ್ನಡ ಭಾಷಾಪ್ರದೇಶವನ್ನು ಕಳೆದ ಶತಮಾನದ ಆರಂಭದಲ್ಲಿದ್ದ ಪ್ರಸಿದ್ಧ ಸಂಶೋಧಕ Col. Colin Mackenzie ಇವನಿಂದ ಹಿಡಿದು ಕಳೆದ ಶತಮಾನಾಂತ್ಯದಲ್ಲಿ "Linguistic Survey of India" ಇದನ್ನು ತಯಾರಿಸಿದ Dr. George Grierson ಇವನ ವರೆಗೆ ಹಲವು ಪಾಶ್ಚಾತ್ಯ ವಿದ್ವಾಂಸರು ಹಲವು ರೀತಿಯಲ್ಲಿ ಅನ್ವೇಷಿಸಿದ್ದಾರೆ. Sir. Alex. Cunningham. Sir William Hunter ಈ ಮೊದಲಾದ ಪ್ರಸಿದ್ಧ ವಿದ್ವಾಂಸರ ಸೃಷ್ಟಿಗೂ ಈ ನಾಡು ಬಿದ್ದಿದೆ. ಬೊಂಬಾಯಿ ಆಧಿಪತ್ಯದಲ್ಲಿ Dr. James Burgess, ಮದ್ರಾಸು ಆಧಿಪತ್ಯದಲ್ಲಿ Dr. Arthur Burnell. ಹಳೇ ಮೈಸೂರು ರಾಜ್ಯದಲ್ಲಿ Sir Mark Wilks ಮತ್ತು Benjamin Rice ಮತ್ತು ಅಂದಿನ ಪುಟ್ಟ ಕೊಡಗು ಪ್ರಾಂತದಲ್ಲಿ Lieut. Connar ಇವರು ಇನ್ನಿತರ ಹಲವು ವಿದ್ವಾಂಸರನ್ನನುಸರಿಸಿ ಅಥವಾ ಅವರು ಇವರನ್ನನುಸರಿಸಿ ಕನ್ನಡ ಭಾಷಾಪ್ರದೇಶದ ಪರಿಮಿತಿಯೆಷ್ಟೆಂಬುದನ್ನು ಅಲ್ಲಲ್ಲಿ ಅಳೆದುನೋಡಿದ್ದಾರೆ. ಹೇಗೂ ಒಂದುನೂರು ವರ್ಷಗಳ ಹಿಂದೆ ಇದ್ದುದಕ್ಕೂ ಈಗ ಇರುವ ಕರ್ಣಾಟಕದ ಮೇರೆಗೂ ಎಲ್ಲೆಲ್ಲಿ ವ್ಯತ್ಯಾಸವಿದೆ, ಯಾವಾವುದು ವಾದಾಸ್ಪದವಾದ ಗಡೀ ಸೀಮೆಗಳಾಗಿವೆಯೆಂಬುದನ್ನು ಸುಮಾರು ಎಂಭತ್ತು ವರ್ಷಗಳಿಗೆ ಹಿಂದಿನ ಆವರ ವರದಿಯಿಂದ ತಿಳಿಯಬಹುದಾಗಿದೆ :—

"......The extact boundaries of the Canarese language may be designated by line drawn from Sadashivagad ......to the west of Dharwar, Belgaum and Hookery through Caughal

* The Madras Manual, Vol. I. (1885)

and Karandwar, passing between Keligaum and Pendigaum through Brahampuree on the Bhima and Sholapuri, and thence to the neighbourhood of Beedar. From Sadashivagad, followlng the southern boundary of Soondah to the top of the Western Ghats, it comprehends the whole of Mysore and Coimbatore and the line of Eastern Ghats. In certain portions of the area occupied by the Canarese there is an inter-mixture of Mahratta speaking population...It is largely spoken in the western taluks of Bellary, in the northern taluks of South Kanara, in the Kollegal taluk of Coimbatore, and, it is the principal language of Nilgiries. In these districts it is a local language.'

ಕನ್ನಡ ಭಾಷೆಯನ್ನು ಆಡುವ ಜನರು ಈ ಮೇಲೆ ಹೇಳಿದ ಭಾಷಾ ಪ್ರದೇಶದೊಳಗೆ ಅಲ್ಲದೆ ನೆರೆನಾಡು ಮತ್ತು ಹೊರನಾಡುಗಳಲ್ಲೂ ಲಕ್ಷಗಟ್ಲೆಯಾಗಿ ಹಲವು ಶತಮಾನಗಳಿಂದಲೇ ಇದ್ದಾರೆ, ಇಂದಿಗೂ ಅಚ್ಚಗನ್ನಡವೇ ಮನೆಮಾತಾಗಿರುವ ಸಹಸ್ರಾರು ಕನ್ನಡಿಗರು ತಮಿಳುನಾಡು, ಆಂಧ್ರ ಮತ್ತು ಮಹಾರಾಷ್ಟ್ರ ಪ್ರಾಂತಗಳಲ್ಲಿ ಹಬ್ಬಿದ್ದಾರೆ. ಇವರೆಲ್ಲಾ ವಿಜಯನಗರ ರಾಜ್ಯದ ಕಾಲದಲ್ಲಿ ಅಲ್ಲಲ್ಲಿ ಚದರಿದ ಕನ್ನಡ ಕುಟುಂಬಗಳೆಂದು ತಿಳಿದುಬಂದಿದೆ. ಹೇಗೂ ಮೇಲಿನ ಹೇಳಿಕೆಯನ್ನು ಮುಂದುವರಿಸಿ ಕನ್ನಡದ ಬಗೆಯಾಗಿ ಇನ್ನಷ್ಟು ಕೆಲವು ವಿಷಯಗಳನ್ನು ಮೇಲಿನ ವರದಿಯಲ್ಲಿ ಪ್ರಸ್ತಾಪಿಸಿದೆ. ಐತಿಹಾಸಿಕವಾಗಿ ಅಂದಿನ ಪರಿಸ್ಥಿತಿಯು ಎಂತಿದ್ದಿತೆಂಬುದನ್ನು ತಿಳಿಯಲು ಅದು ಸಹಾಯಕವಾಗುವುದು :—

"........In districts such as Madura, Trichinopoly and Tinnevelly, it is spoken by castes who have migrated from the Karnataka Desha. There is an ancient Canarese language, analogous to ancient Tamil and nearly as artificial. The dialect of Badagas, a numerous Hindu tribe in the Nilgiries who have migrated from the plains, is a very ancient one......The Kannada character is, in all, essentially identical with that of Telugu, but there is archaic character for Sanskrit inscriptions found over a large area, called Haleygannada. The number of Kannada speaking people is estimated at one and a quarter millions in the territories of the Nizam, the Mysore Raja and the provinces of Madras and Bombay........"

**೪. ಜಾರ್ಜ್ ಗ್ರೀಯರ್ಸನ್ ಇವನು ಬಿಡಿಸಿದ ಕರ್ಣಾಟಕದ ನೇರೆ :—**

ಮದ್ರಾಸು ಸರಕಾರವು ಪ್ರಕಟಿಸಿದ ಕರ್ಣಾಟಕ ಪ್ರಾಂತದ ಈ ಮೇಲಿನ



ಪ್ರಸಿದ್ಧ ಕನ್ನಡ ಸಾಹಿತಿ ಮತ್ತು ಭಾರತೀಯ ಇತಿಹಾಸ
ಸಂಶೋಧಕ ಜಾನ್ ಫೇಥ್‌ಫುಲ್ ಫ್ಲೀಟ್, ಸಿ.ಐ.ಇ.

ಭಾರತೀಯರಿಗೆ ದೇಶಾಭಿಮಾನವನ್ನು ಹುಟ್ಟಿಸಲು ಕಾರಣಭೂತರಾದ ಅಂದಿನ ಪಾಶ್ಚಾತ್ಯ ಧುರೀಣರು—(1904ರಲ್ಲಿ ಬೊಂಬಾಯಿ ಕಾಂಗ್ರೆಸ್ ಅಧಿವೇಶನ ವೇಳೆಗೆ ತೆಗೆದ ಚಿತ್ರ.)

ಕುಳಿತವರಲ್ಲಿ ೧ನೇ ಡಿನ್ಶಾವಾಚಾ, ೨ನೇ ವಿಲಿಯಮ ವೆಡರಬರ್ನ್, ೩ನೇ ಫಿರೋಜ್‌ಷಾ ಮೆಹತಾ, ೪ನೇ ಅಧ್ಯಕ್ಷ ಹೆನ್ರಿಕಾಟನ್, ೫ನೇ ಸ್ಯಾಮ್ಯುಯಲ್ ಸ್ಮಿತ್, ೬ನೇ ಸುರೇಂದ್ರನಾಥ ಬ್ಯಾನರ್ಜಿ, ೭ನೇ ಜಿ. ಎಸ್. ಘೋಸಾಲ್.

ನಿಂತವರಲ್ಲಿ ೪ನೇ ಆರ್. ಕೆ. ಕಾಮಾ, ೫ನೇ ಗೋಪಾಲಕೃಷ್ಣ ಗೋಖಲೆ, ೬ನೇ ವೀರರಾಘವಚಾರ್ಯ, ೧೧ನೇ ಹಸನ್‌ಭದ್ರುದ್ದುನ್ ಟ್ಯಾಬ್ಜಿ.



ಸರ್ ವಿಲಿಯಂ ಜೋನ್ಸ್ ಇವನ ಸ್ಮರಣಾರ್ಥವಾಗಿ ಆಕ್ಸ್‌ಫರ್ಡ್‌ನಲ್ಲಿ ಇರುವ ಭವ್ಯ ಬೆಂಗಲ್ಲು ಸ್ಮಾರಕ. ಇಲ್ಲಿ ಅವನು ಭಾರತೀಯ ಪಂಡಿತರೊಡನೆ ವ್ಯಾಸಂಗಮಾಡುವುದನ್ನು ತೋರಿಸಲಾಗಿದೆ.

e. ಸ್ರಗ್ಧರೆ. ಇದು ಸಹ ಪದಪದದಲ್ಲಿ 21 ಅಕ್ಷರವು.

ಭೂಮಿ-ಜ್ವಾಲೇಂದು-ದೇವಾಧಿಪಪುರ-ಗಣದಿಂ ಮುಂತೆ ತೋಯ-
[ತ್ರಯಂಗಳ್
ತಾಮೆತ್ತಲ್ ಬಂದು ಚಲ್ವಾಗಿರೆ, ಹಯ-ನಿಕರ-ಸ್ಥಾನದೊಳ್ ನಿಲ್ವಿನಂ ವಿ
ಶ್ರಾಮಂ, ಛಂದಕ್ಕಲಂಕಾರಮಿದೆನೆ ಜನಕಾನಂದಮಂ ಮಾಡುಗುಂ,
[ಸ್ರಗ್-
ಧಾಮ-ಪ್ರೋದ್ದಾಮ-ಕೇಶಾನ್ವಿತೆ, ಬಗೆ, ಪೆಸರಿಂ ಸ್ರಗ್ಧರಾ-ನಾಮ-
ವೃತ್ತಂ! ॥ 12 ॥

ಟೀ. ಭೂಮಿಗಣ=———; ಜ್ವಾಲಗಣ=—⏑—; ಇಂದುಗಣ=—⏑⏑; ದೇವಾಧಿಪಪುರಗಣ=⏑⏑⏑; (ಇವರಿಂದೆ ಮುಂತೆ ಮೂಱು ತೋಯಗಣಂಗಳು ತಾವು ಎತ್ತಲ್ ಬಂದು ಚಲ್ವಾಗಿ ಇರೆ) ತೋಯಗಣ=⏑——. ಇಂತು ——— | —⏑— | —⏑⏑ | ⏑⏑⏑ | ⏑—— | ⏑—— | ⏑—— ಎಂಬ ಗಣಗಳ ಹಯ-ನಿಕರವೆಂಬ 7ನೆಯ 7ನೆಯ ಅಕ್ಷರದಲ್ಲಿ ವಿಶ್ರಾಮವೆಂಬ ಯತಿ ನಿಲ್ವಿನಂ (=ನಿಲೆ), ಛಂದಕ್ಕೆ ಅಲಂಕಾರಂ ಇದು ಎನೆ ಜನಕೆ ಆನಂದಮಂ ಮಾಡುಗುಂ, ಪೆಸರಿಂ (ಅದು) ಸ್ರಗ್ಧರಾ-ನಾಮ-ವೃತ್ತಂ, ಬಗೆ, ಸ್ರಜ್ಜಿನ ಧಾಮವಾದಂಥ ದೊಡ್ಡ ಕೂದಲುಳ್ಳ ಹೆಂಗತಿಯೇ!

f. ಮಹಾಸ್ರಗ್ಧರೆ. ಇದು ಪದಪದದಲ್ಲಿ 22 ಅಕ್ಷರವು.

ಮಹಾಸ್ರಗ್ಧರೆ

ಮರುದಾಕಾಶ-ದ್ವಯೇಂದ್ರಾನಿಲ-ಹುತವಹ-
[ಯುಗ್ಮಾಂಗಜನ್ಮಾಂತಕರ್ಗಳ್
ಬರೆ, ಪಕ್ಷ-ಸ್ಥಾನದೊಳ್ ನಿಲ್ತಿರೆ ವಿರತಿ, ಮಹಾಸ್ರಗ್ಧರಾ-
[ನಾಮ-ವೃತ್ತಂ. ।
ಗುರು-ವಿದ್ಯಾ-ಪ್ರೇಮಿ, ಅಭ್ಯಾಸದೆ ವಿಲಸಿತೆ, ಚಾರ್ವಾನನೇ,
[ಕಾವ್ಯ-ಮೋದಾ
ಸ್ಫುರಿತ-ಪ್ರೋದ್ಭಾಸಿ, ಕಾಂಚೀ-ಖಚಿತ-ರಶನಿ-ಯುಕ್ತಾಂಗನೇ, ಕೇಳ್,
ಪ್ರಿಯಾಖ್ಯೇ! ॥ 13 ॥

ಚಿ॥ ಫ. ಕಿಟ್ಟೆಲ್ ಇವನ ‘ಕರ್ಣಾಟಕ ಕಾವ್ಯಮಾಲೆ’ಯಲ್ಲಿ ವಿವರಿಸಿದ ಛಂದೋಶಾಸ್ತ್ರ ಭಾಗದ ಒಂದು ಪುಟ.

Sûtra 102.—*Adu-idu-udûnâm ante va-tau pumsi.*

Vṛitti.—*Eteshâm prakṛiti-vis'eshâṇâm pul-liṅga-vivakshâyâm sarvâsu vibhaktishu parabhûtâsv ante va-tau bhavataḥ* ।

Prayoga.—*Avam, ivam, uvam, avanam, ivanam, uvanam, âtam, îtam, ûtam, âtanam, îtanam, ûtanam* ।

[The roots of *adu*, *idu*, *udu*, on taking the masculine terminations of all the cases change their last syllable to *va* and *ta*.]

Sûtra 103.—*Vaḷ-ke-cha striyâm.*

Vṛitti.—*Tesham strîtva-vivakshâyâm sarvâsu vibhaktishu antyasya vaḷ-ke iti bhavataḥ* ।

Prayoga.—*Avaḷ, ivaḷ, uvaḷ, avaḷam, ivaḷam, uvaḷam, âke, îke, ûke, âkeyam, îkeyam, ûkeyam* ।

[For the feminine of all the cases to *vaḷ* and *ke*.]

Sûtra 104.—*Dîrghaḥ ka-tayoḥ.*

Vṛitti.—*Eteshâm eva ka-tayoḥ pûrva-svarasya dîrgho bhavati* । *pûrvoktodâharaṇeshv eva spashṭam* ।

[The vowel is lengthened before *k* and *t*.]

---

ಸೂತ್ರ ॥ ಅದುಇದುಉದೂನಾಮನ್ತೇ ವತೌ ಪುಂಸಿ ॥ ೧೦೨ ॥

ವೃತ್ತಿ ॥ ಏತೇಷಾಂ ಪ್ರಕೃತಿವಿಶೇಷಾಣಾಂ ಪುಲ್ಲಿಙ್ಗವಿವಕ್ಷಾಯಾಂ ಸರ್ವಾಸು ವಿಭಕ್ತಿಷು ಪರಭೂತಾಸ್ವನ್ತೇ ವತೌ ಭವತಃ ॥

ಪ್ರಯೋಗ ॥ ಅವಂ । ಇವಂ । ಉವಂ । ಅವನಂ । ಇವನಂ । ಉವನಂ । ಆತಂ । ಈತಂ । ಊತಂ । ಆತನಂ । ಈತನಂ । ಊತನಂ ॥

ತಾತ್ಪರ್ಯ ॥ ಅದು ಇದು ಉದು ಎಂಬ ಪ್ರಕೃತಿಗಳ ಪುಲ್ಲಿಂಗದಲ್ಲಿ ಸರ್ವವಿಭಕ್ತಿಗಳೂ ಪರವಾಗುತ್ತಿರಲಾಗಿ ಅನ್ತದಲ್ಲಿ ವಕಾರ ತಕಾರಗಳಾಗುವವು.

ಸೂತ್ರ ॥ ವಳ್ಕೇಚಸ್ತ್ರಿಯಾಂ ॥ ೧೦೩ ॥

ವೃತ್ತಿ ॥ ತೇಷಾಂ ಸ್ತ್ರೀತ್ವವಿವಕ್ಷಾಯಾಂ ಸರ್ವಾಸು ವಿಭಕ್ತಿಷು ಅನ್ತ್ಯಸ್ಯ ವಳ್ಕೇ ಇತಿ ಭವತಃ ॥

ಪ್ರಯೋಗ ॥ ಅವಳ್ । ಇವಳ್ । ಉವಳ್ । ಅವಳಂ । ಇವಳಂ । ಉವಳಂ । ಆಕೆ । ಈಕೆ । ಊಕೆ । ಆಕೆಯಂ । ಈಕೆಯಂ । ಊಕೆಯಂ ॥

ತಾತ್ಪರ್ಯ ॥ ಅವುಗಳ ಸ್ತ್ರೀಲಿಂಗದಲ್ಲಿ ಸರ್ವ ವಿಭಕ್ತಿಗಳೂ ಪರವಾಗುತ್ತಿರಲಾಗಿ ಅನ್ತದಲಿ ವಳ್ ಕೆ ಯೆಂಬವುಗಳಾಗುವವು.

ಸೂತ್ರ ॥ ದೀರ್ಘಃ ಕತಯೋಃ ॥ ೧೦೪ ॥

ವೃತ್ತಿ ॥ ಏತೇಷಾಮೇವ ಕತಯೋಃ ಪೂರ್ವಸ್ವರಸ್ಯ ದೀರ್ಘೋ ಭವತಿ । ಪೂರ್ವೋಕ್ತೋದಾಹರಣೇಷ್ವೇವ ಸ್ಪಷ್ಟಂ ॥

ತಾತ್ಪರ್ಯ ॥ ಇವುಗಳಲ್ಲಿನ ಕಕಾರ ತಕಾರಗಳ ಪೂರ್ವ ಸ್ವರಕ್ಕೆ ದೀರ್ಘವಾಗುತ್ತದೆ. ಈ ವಿಷಯವು ಹೇಳಿದ ಉದಾಹರಣೆಗಳಿಂದಲೇ ಸ್ಪಷ್ಟವಾದೆ.

ಬೆಂಜಾಮಿನ್ ರೈಸ್ ಇವನಿಂದ ಸಂಪಾದಿತವಾದ 'ಕರ್ಣಾಟಕ ಭಾಷಾಭೂಷಣ' ಇದರ ಒಂದು ಪುಟ.

## SYLLABLES

11. The short vowel ಅ *a*, is inherent in the *initial* or complete form of every consonant; so that every letter is capable of being a complete syllable. Thus, ಅವನ *a-va-na*, of him: ಅವಳ *a-va-ḷa*, of her; ಅವರ *a-va-ra*, of them; ಅದರ *a-du-ra*, of it.

12. The inherent vowel may be cut off by placing the mark ್ on the upper part of the consonant; thus, ರ *ra* becomes ರ್ *r*, ವ *va* becomes ವ್ *v*, &c. The consonant so deprived, is called a half-letter.

The inherent vowel is also cut off when its consonant is placed below the line, or under another consonant, in the formation of a syllable: thus, ಪ್ರ *pra*, ಗ್ನ *gna*, ದ್ವ *dwa*, ಸ್ನ *sna*, &c.

13. When a syllable is formed of two or more consonants, and one vowel, the vowel is always joined to the first or uppermost consonant, but sounded after the last or lowest one; thus, ಕ್ಲಿ *kli*, ತ್ಯು *tyu*, ಸ್ತ್ರೀ *strí*.

14. The half-letter ರ್ *r*, is pronounced before the letter or syllable which, in writing and printing precedes it; thus, ವರ್ಗ *warga*, ಕರ್ತನು *kartanu*, ಕೊರ್ತಾಗಿ *kortági*.

## SANDHI, OR THE UNION OF WORDS.

This occasions the elision, insertion, and permutation of letters.

### A VOWEL CUT OFF, OR A HALF LETTER INSERTED.

The following observations will save the learner some perplexity in the compounding of words, the declension of nouns, and the conjugation of verbs.

15. When a word ending in ಅ *a*, ಇ *i*, ಈ *í*, ಉ *u*, or ಎ *e*, is followed by an affix commencing with a vowel, euphony requires the following changes; viz

16. First, The terminating ಅ *a*, is cut off. Thus ಕುರುಬ *kuruba*, and the plural affix ಅರು *aru*, become ಕುರುಬರು *kurubaru*, shepherds. See 1st Declension. ಮಾಡುತ್ತ *máḍutta* and ಏನೆ *éne*, become ಮಾಡುತ್ತೇನೆ *máḍutténe*, I do. See 1st Conjugation.

17. Second, The terminating ಅ *a* may either be cut off, or ಯ್ *y* may be inserted. Thus, ಮಾಡುತ್ತ *máḍutta* and ಇದ್ದನು *iddanu*, become ಮಾಡುತ್ತಿದ್ದನು *máḍuttiddanu*, or ಮಾಡುತ್ತ ಯಿದ್ದನು *máḍutta yiddanu*, he was doing. See 1st Conjugation.

1855ರಲ್ಲಿ ಥಾಮಸ್ ಹಡ್ಸನ್ ಇವನು ಬರೆದ ಕನ್ನಡ ವ್ಯಾಕರಣ—
ಇಂಗ್ಲಿಷ್‌ನಲ್ಲಿ ವಿವರಣೆ ಸಹಿತವಾಗಿ !

tandos serpentes.

ನಾಗಸ್ತಂಭ cirrus capillorum nefastus.

ನಾಗಸ್ವರ id. q. ನಾಗಸರ.

ನಾಗಕೊ vortex quidam in Godavery.

ನಾಗೆ mensura quatuor ಮುಷ್ಟಿ aequivalens.

ನಾಗಾಂಬ soror Basuae.

ನಾಗಾಭರಣ Siva.

ನಾಗಾರ್ಜುನ nomen antiqui cujusdam regis.

ನಾಗಾಲು quadrupes. — ನಾಗಾಲಿ ಓಟ, ನಾಗಾಲುಬಿದ್ದೋಟ velociter currere. (quadrupes.)

ನಾಗಾವುದ quatuor ಗಾವುದ sive quadraginta millia anglica.

ನಾಗಾಶನ 1 rex avium. 2 leo. 3 fulgur. 4 ignis.

ನಾಗಾಸನ sedes in qua ponitur idolum.

ನಾಗಿನಿ, ನಾಗಿಣಿ, monstrum habens formam serpentis et virginis.

ನಾಗೊಳ mensura quatuor cola gis aequivalens.

ನಾಚಿಕೆ pudor, rubor, verecundia. — ನಾಚಿಕೆಗೇಡಿ, impudens, effrons. — ನಾಚಿಕೆಗೊಳ್ಳು.... ಪಡು, vid ನಾಚು. v.

ನಾಚು v. pudere, erubescere, confusionem pati. — ನಾಚಿಸು pudore afficere, rubore suffundere.

ನಾಚು s. chorea, saltatio. — ನಾಚುಮಾಡು, saltare.

ನಾಜರು vicecomes, magistratus.

ನಾಜೂಕು delicatus, lenis, tenuis.

ನಾಟ saltatio, ludus scenicus.

ನಾಟಕ comoediae vel tragediae exhibitio, mimicus ludus. — ನಾಟಕಸ್ತ್ರೀ saltatrix. — ನಾಟಕಧಾರಿ 1 numen. 2 ille qui pupas in scenam agit.

ನಾಟರಾಗ, ನಾಟಿರಾಗ, praeludium.

ನಾಟು 1 plantare, figere in terram. 2 adigere (gladium, sagittam, etc.) — ನಾಟಿಸು plantandum, infigendum curare.

ನಾಟ್ಯ scientia vel ars scenica, saltatio; cantus, saltationis et musice conjunctio. — ನಾಟ್ಯಗಾರ, ನಾಟ್ಯದವ, comoedus, histrio. — ನಾಟ್ಯಗಾತಿ saltatrix. — ನಾಟ್ಯಶಾಲೆ.... ರಂಗ, theatrum, scena, saltatorius ludus.

ನಾಡ vid. ನಾಟ್ಯ.

ನಾಡದು tertia dies. vid. ನಾಳಿದ್ದು.

ನಾಡಾಡಿ, ನಾಡಾಡಿಗ viator.

ನಾಡಿ 1 arteriae pulsus. 2 quodcumque tubulatum organum corporis, (v. g. arteriae, venae, intestina, etc.) 3 culmus plantae alicujus 4 fistula (ulcus.) 5 hora (20 minutis constans.) 6 tubus. 7 gramen quoddam repens. 8 aura vitalis, spiritus 9 vid. ನಾಗ ನಾಡಿದರ. — ನಕ್ಷತ್ರನಾಡಿ stellarum infausta conjunctio (in nativitate.) ...... ಪ್ರಧಾನನಾಡಿ, mediocris con-

1835 ರಲ್ಲಿ ರಿ॥ ಬಾಟೆಲೂ ಇವನಿಂದ ಬರೆಯಲ್ಪಟ್ಟ ಲ್ಯಾಟಿನ್-ಕನ್ನಡ ಅರ್ಥಕೋಶದ ಒಂದು ಪುಟ.

## ಅಥಯೋಧ್ಯಾಕಾಣ್ಡಃ ॥

ತತಸ್ ಭರತ-ಶತ್ರುಘ್ನೌ ತಾತ-ಆದೇಶೇನ ಜಗ್ಮತುಸ್ ।

ಯುಧಾಜಿತ್-ಅಭಿಧಾನಸ್ಯ ಮಾತುಲಸ್ಯ ಪುರಂ ಪ್ರತಿ ॥ ॥೧॥

ರಾಮ-ಅಭಿಷೇಚನಂ ಕರ್ತುಂ ಯತಮಾನಂ ಮಹೀ-ಪತಿಮ್ ।

ಮಂಥರಾ-ಆಕುಲಿತ-ಸ್ವ-ಅಂತಾ ಕೈಕೇಯೀ ದುರ್ವಚಸ್ ಅಬ್ರವೀತ್ ॥ ॥೨॥

ಯದಿ ತ್ವಂ ಸತ್ಯ-ಸಂಗರಸ್ ಅಸಿ ಷಂಬರ-ಸಂಗರ-ಸಮುದೀರಿತ-ವರ-
ಯುಗಲೇ ಪ್ರಥಮಸ್ಯ ಫಲಂ ರಾಮಸ್ಯ ವನ-ವಾಸಂ ದ್ವಿತೀಯಸ್ಯ ಭರತ-
ಅಭಿಷೇಚನಂ ಚ ವಿಧೇಹಿ ॥ ॥೧॥

ನ ಇದಂ ಯದಿ ವಿಷಂ ಉಪಭುಜ್ಯ ಪಶ್ಯತಸ್ ತವ ಪ್ರಾಣಾನ್
ತ್ಯಜಾಮಿ ಇತಿ ॥೨॥

ಇದಂ ಪರುಷಂ ಆಕರ್ಣ್ಯ ಮೂರ್ಛಿತಸ್ ನೃಪತಿಸ್ ಭುವಿ ।

ಪಪಾತ ವಜ್ರ-ನಿರ್ಭಿನ್ನ-ಪಕ್ಷಸ್ ಪರ್ವತ-ರಾಟ್ ಇವ ॥ ॥೩॥

ಅಸತ್ಯ-ಭೀತಸ್ ನೃಪತಿಸ್ ಚಿರೇಣ ಪ್ರಾಪ್ಯ ಚೇತನಾಮ್ ।

ಕೈಕೇಯೀಂ ಪ್ರಾರ್ಥಯಾಮಾಸ ರಾಮಸ್ಯ ಪುರ-ವರ್ತನಮ್ ॥ ॥೪॥

ಬೆಂಜಾಮಿನ್ ರೈಸ್ ಇವನು 1868ರಲ್ಲಿ ಬರೆದು ಪ್ರಕಟಿಸಿದ
'ಸಂಸ್ಕೃತ ಪ್ರದರ್ಶಿನಿ' ಇದರ ಒಂದು ಪುಟ.

ಭೂಮಿಯ ಅಳತೆಯಾನೆ ಇಂಗ್ಲೀಷ ಅಳತೆಯ
ವಿವರವು.

ಇಂಗ್ಲೀಷ ಇಂಚ್.

೧೪೪ = ೧ ಇಂಗ್ಲೀಷ ಫೂಟ್.

೧೨೯೬ = ೯ = ೧ ಇಂಗ್ಲೀಷ ಗಜ.

೯೮೦೧ = ೬೮¹/₁₆ = ೭⁹/₁₆ = ೧ ಆಣೆ.

೧೫೬೮೧೬ = ೧೦೮೯ = ೧೨೧ = ೧೬ = ೧ ಗುಂಟೆ.

೬೨೭೨೬೪೦ = ೪೩೫೬೦ = ೪೮೪೦ = ೬೪೦ = ೪೦ = ೧ ಯೇಕರೆ.

೬೪೦ ಯೇಕರೆಗಳು ಅಂದರೆ ೧ ಇಂಗ್ಲೀಷ ಮೈಲ್.

Capt. Best. 1857.
on Surveying

— ೨೩ —

ಗಳ್ದರೆ, ಇವುಗಳನ್ನು ಪ್ರತ್ಯೇಕವಾಗಿ ಯೋಗಿಸಿ, ಚತುಃಕೋಣಾದ ಯೋಗಕೆಗೆ ಕೂಡಿಸಬೇಕು. ಹ್ಯಾಗಂದರೆ.—




ಇಲ್ಲಿ ಬರದಿರುವ ಕ್ಷೇತ್ರದಲ್ಲಿ ಗಪ ಯೆಂಬ ರೇಖೆಗೆ=೬, ಟವ=೪, ಚಬ=೫, ಜರ=೬ ಯೆಂಬ ಅಳತೆಗಳು ಕಲ್ಪಿಸಿ ಇರಲಿ. ಅದೇ ಪ್ರಕಾರ ಕಗ ಯೆಂಬುವದಕ್ಕೆ ೫, ಗಚ, ಚಜ, ಜಟ ಯೆಂಬುವುಗಳಲ್ಲಿ ವೊಂದೊಂದಕ್ಕೆ ೧೦, ಟಡ ಯೆಂಬುವದಕ್ಕೆ ೮, ಯೆಂಬ ಅಳತೆಯು ಕಲ್ಪಿಸಿ ಇರಲಿ. ಹೀಗಿರಲಾಗಿ

ಅರ್ಧ ಗಪ=೩
ಅರ್ಧ ಟವ=೨
ಚಬ=೫
ರಜ=೬ } ಜಮಲಾ=೧೬.

ಹೀಗಿರುವದರಿಂದ ಗಟವಪ ಯೆಂಬ ಚತುಃಕೋಣಾದ ಚೌಕಳತೆ $\frac{೧೬ \times ೩೦}{೪} = ೧೨೦$

ಆದರೆ ಗಪಕ ಯೆಂಬ ತ್ರಿಕೋಣ=೫ × ೩=೧೫
ಟವಡ..................=೮ × ೨=೧೬ | ೩೧

ಸಮಸ್ತ ಕಪವಡಟಗ ಯೆಂಬ ಕ್ಷೇತ್ರದ ಚೌಕಳತೆ ೧೫೧

1859 ರಲ್ಲಿ ಕೇಪ್ಟನ್ ಬೆಸ್ಟ್ ಇವನಿಂದ ರಚಿತವಾದ ಸಾಂಖ್ಯಮಾಸಸ
ಅಳತೆ ವಿವರ–(ಭೂಮಿಯನ್ನು ಸರ್ವೇ ಮಾಡುವ ಕ್ರಮ)–ಇದರ ಒಂದು ಪುಟ.

**ತೆತ್ತಿಸು** tĕttisu. 1. To cause to pay. [illegible] (Šl. 364, *only* in Šl., also p. 268).

**ತೆತ್ತಿಸು** tĕttisu. 2. To bring into close connection: to cause to enter as nails (Čpr. 7, after 96) or arrows (J. 25, 47), to set, as precious stones (Rāv. 8, 9; 8, after 8; V. 4, 33), to insert, as decorations in a street (Bp. 4, 3), as an ornament in the nose (19, 21);—to pierce through, as a pointed object (Rāv. 10, after 31);—to bring in contact with, as the lower part of an arrow with the bow-string. [illegible] (Mr. 295); —to pierce, as with an arrow (Bh. 8, 26, 7; J. 14, 4). 2, to enter, to pierce (J. 12, 25; 23, 40; 25, 40). [illegible] No. 104).

**ತೆತ್ತೀಸು** tĕttīsu. Thirty-three (Mhr. [illegible]; Rām. 6, 50, 8; Bh. 1, 20, 56).

**ತೆತ್ತು** tĕttu. 1. P. p. of ತೆರ್, ತೆರು. Having paid, etc.

**ತೆತ್ತು** tĕttu. 2. To intertwine, to interweave, to twist (T. [illegible]; M. [illegible], closeness; cf. [illegible], ತೆತ್ತು 3). 2, to be twisted, to twist (Bh. 8, 23, 5); to be connected or befriended (J. 26, 6).

**ತೆತ್ತು** tĕttu. 3. — [illegible] q. v.

**ತೆನಸು** tĕnasu. = ತಿನಸು 2, etc. (My.).

**ತೆನೆ** tĕnĕ. 1. (A point); a spike, an ear of corn ([illegible] Šm. 108; [illegible] Hlā.; My.; T. [illegible], M. [illegible], to branch out; T. [illegible], M. [illegible], branching out, as an ear of corn; M. [illegible], a point; see s. [illegible] 3). [illegible] (Čt. II, 14; Šm. 66). [illegible] Nr.; see Šl. 303). [illegible] (Mr. 372). [illegible] (Prv.). 2, the upper part or coping of a wall, the top of a rampart, a merlon of a fort (Čpr. 1, 108; Rām. 6, 11, 2; Č. Bp. 42, 22; My.). [illegible] Hlā.; [illegible] Nr. 149). See [illegible] — ತೆನೆಗಿಡ. The Indian millet, Panicum italicum Lin. (Sl. & Pl.). — [illegible] The parapet on a rampart, or the top of a merlon (Čpr. 1, 118; J. 3, 21). — ತೆನೆ ತೆನೆ. rep. (Bp. 16, 18). — [illegible] To get ears (Čpr. 1, 90).

**ತೆನೆ** tĕnĕ. 2. = [illegible], etc. (My.). [illegible] (My.). — [illegible] The embryo to remain, not to miscarry, as a cow (My.). — [illegible] (My.).

**ತೆಪ್ಪ** tĕppa. 1. = ತೆಪ್ಪನೆ, etc. — [illegible] rep. [illegible] (Šmd. 229 Mdb.).

**ತೆಪ್ಪ** tĕppa. 2. (Šmd. 48). (fr. [illegible], cf. [illegible] 1). A float, a raft ([illegible] Hlā.; [illegible] Nr.; Šl. 84; [illegible] G.; My.; Tu.; T. [illegible], Tĕ. [illegible]; Mhr., H. [illegible]). [illegible] (Prv.). [illegible]; Abh. P. 18, 19; Šāv. 5, after 14. — ತೆಪ್ಪೋತ್ಸವ. -ಉತ್ಸವ. Rowing an idol in a decorated boat up and down an illuminated tank at the time of a yearly jātrĕ (My.).

**ತೆಪ್ಪಗೆ** tĕppagĕ. = ತೆಪ್ಪನೆ. (fr. [illegible]). At leisure, at ease; comfortable; well (My.).

**ತೆಪ್ಪನೆ** tĕppanĕ. = ತೆಪ್ಪಗೆ. (My.).

**ತೆಪ್ಪಱ್** tĕppaṟ. ತೆಪ್ಪಱು. = [illegible]. To become conscious, to recover one's senses, to recover from fainting. (Tĕ. [illegible], to recover from illness; to escape from danger). [illegible] (My.). 2, to animate ([illegible] Šmd. Dh.). [illegible] (Šmd. 285).

**ತೆಪ್ಪಱಿಸು** tĕppaṟisu. = [illegible]. To recover one's senses, to become conscious, to start up, to awake (My. with [illegible]).

**ತೆಬ್ಬು** tĕbbu. To fly or jump about (?). ([illegible]) (Bh. 8, 13, 25). [illegible] (8, 26, 56).

**ತೆಮರ್** tĕmar. 1. (Šmd. 58). = ತೆವರ್ (128), ತೆವರು 1 q. v. [illegible] (83).

**ತೆಮರ್** tĕmar. 2. = (ತಿಮರ್ 1), ತೆವರು 2. To rub (Rāv. 12, 58); to rub out, to destroy (V. 5, after 39; Šāv. 5, 40).

**ತೆಮುಳ್ದು** tĕmaḷdu. To collect, to gather, to heap up, to accumulate ([illegible] Šmd. Dh.; cf. [illegible] 2, [illegible]). [illegible] (Čpr. 7, 49).

**ತೆಮ್ಬು** tĕmbu. = ತೆಂಕ, etc. — [illegible] q. v. — [illegible] (Šmd. 210, v. r. [illegible]). South wind.

**ತೆಮ್ಮಲ್** tĕmmal. A mass, a multitude, etc. ([illegible], etc. Šm. 54; [illegible], etc., [illegible] Kk. 17; [illegible], etc. Šs.; Tĕ. [illegible]; cf. [illegible] 1, [illegible] 2, [illegible] 1, [illegible]).

**ತೆಯ್ಯ** tĕyya. ತೆಯ್ಯ. (= [illegible] 1). Stop, delay ([illegible] Čt. I, 55, v. r. [illegible]).

**ತೆರ** tĕra. = ತೆರವು (Šmd. 56). The state of being balled or heaped one upon the other, a mass, etc. (see T., M. s. [illegible]). — ತೆರ ತೆರ. rep. [illegible] (J. 13, 5).

**ತೆರಟು** tĕraṭu. To make round (T. [illegible]); to roll up: to tuck up (a garment when passing a river, My.); to join, to unite (T.; see [illegible] 2, [illegible]).

**ತೆರನ್ತು** tĕrantu. (Šmd. 42). To make a gift of raiment to the bride and bridegroom at a wedding ([illegible] Šmd. Dh.; [illegible] Cm.; [illegible] G.; cf. [illegible], etc.).

**ತೆರಯಿಸು** tĕrayisu. (or [illegible], q. v.) [illegible] (Šmd. 65). [illegible] or [illegible] (189).

ರೆ|| ಕಿಟ್ಟೆಲ್ ಇವನ 'ಕನ್ನಡ ಅರ್ಥಕೋಶ'ದ ಒಂದು ಪುಟ.



ರ॥ ಫ್ರೈಡ್ರಿಕ್ ಜಿಗ್ಲರ್

ವಿವರಣೆಯನ್ನು ಸುಮೂರು 150 ವರ್ಷಗಳಿಗೆ ಹಿಂದೆ Sir Mark Wilks ಇವನು ಬರೆದುದರಿಂದ ಹೆಕ್ಕಿಕೊಟ್ಟದ್ದೇ ಆಗಿದೆ. ಅದರನಂತರ Sir W. W. Hunter ಇವನೂ ಅದನ್ನೇ ಒಪ್ಪಿ ತನ್ನ "Gazetteers of India" ಇದರಲ್ಲಿ ಸಮರ್ಥಿಸಿದನು. ಆದರೆ ಕಳೆದ ಶತಮೂನದ ಅಂತ್ಯದಲ್ಲಿ ಹಿಂದೂದೇಶದ "Linguistic Survey" ಇದನ್ನು ನಡೆಸಿ ಹಿಂದೂಸ್ಥಾನದ ಪ್ರತಿಯೊಂದು ಭಾಷೆ ಮತ್ತು ಉಪಭಾಷೆಯನ್ನು ಕುರಿತು ಕೂಲಂಕುಶವಾಗಿ ಪ್ರಸ್ತಾಪಿಸಿ ಸುಮಾರು 9000 foolscap ಪುಟಗಳಿಗೂ ಮಿಾರಿ ವಿಶೇಷ ವರದಿಯನ್ನು ತಯಾರಿಸಿದ George A. Grierson* ಇವನು ಕರ್ಣಾಟಕದ ವ್ಯಾಪ್ತಿಯನ್ನು ಕುರಿತು ಬರೆದದ್ದು ಇನ್ನಷ್ಟು ಅಧಿಕೃತವಾದುದಾಗಿದೆ. ಇವನು ತನ್ನ ವರದಿಯ ನಾಲ್ಕನೇ ಗ್ರಂಥಕಾಂಡದಲ್ಲಿ ಕರ್ಣಾಟಕವನ್ನು ಕುರಿತು ಈರೀತಿ ಪ್ರಸ್ತಾಪಿಸಿದ್ದಾನೆ:—

"......Kannada is the principal language of Mysore and adjoining parts of Coimbatore, Salem, Anantpur and Bellary. The frontier thence goes northwards through dominions of the Nizam, as far as Bidar, where it turns almost due west on to about the 78 th degree and further southwards so as to include the south-eastern portion of Jat and Daphlapur. Kannada is also spoken in the extreme south-east of Satara, in the Taluka Tasgoon, to some extent in the Aundh state of Satara Agency: and in the south of Belgaum, and further to the west, in Kolahpur almost so far west as the town of Kolahpur. The line thence turns southwards, following the ghats to about Honnawar where it goes down to the sea. In north Kanara, Kannada is the official language all over the distriet. It is the principal language of South Kanara with the exception of the southern-most corner. The frontier line thence coincides with the southern frontier of Mysore, Kanarese dialects are also spoken in Nilgiries, and the language has, lastly been brought by immigrants to Madura and to the Central Provinces.

" Kannada is bounded on the north and west by Mahratti......and on the east by Telugu and Tamil and on the south by Tamil, Malayalam, Kodagu and Tulu......The most important dialect is Badaga, spoken in the Nilgiries by the so-called Badagas or Bughers. It is more ancient form

---

* Grierson ಇವನು ಕೊಟ್ಟ ದಕ್ಷಿಣದ ಭೂಪಟವನ್ನು ಬೇರೆಡೆ ಕೊಡಲಾಗಿದೆ.

than ordinary Kannada and in several points agrees with the language of old literature."

ಇದರಂತೆ ಮತ್ತು ಇದಕ್ಕಿಂತಲೂ ಹಿಂದೆ ಕನ್ನಡ ಭಾಷಾ ಪ್ರದೇಶದ ಮೇರೆಯನ್ನು ವಿವರಿಸಿದ ಆಂಗ್ಲೇಯರು ಇಂದಿನ ಕನ್ನಡ ಪ್ರಾಂತಕ್ಕಿಂತಲೂ ಸ್ವಲ್ಪ ವಿಸ್ತಾರವಾದ ಕರ್ಣಾಟಕವನ್ನೇ ಚಿತ್ರಿಸಿದ್ದಾರೆ. ಇವರೆಲ್ಲರ ಅಭಿಪ್ರಾಯದಂತೆ ನೀಲಗಿರಿ ಜಿಲ್ಲೆಯೂ ಕರ್ಣಾಟಕಕ್ಕೆ ಸೇರಬೇಕಾಗಿದ್ದುದೇ ಆಗಿದೆ. ಕೊಂಕಣಿಯೂ ಮರಾಠಿಯ ಒಂದು ಉಪಭಾಷೆಯೆಂದು ಹೇಳಲ್ಪಟ್ಟರೂ ಕೊಂಕಣವು ಪೂರ್ವಕಾಲದಿಂದಲೇ ಕರ್ಣಾಟಕ ದೊಳಗಡಗಿತ್ತೆಂದು ತಿಳಿಯುತ್ತದೆ. ತುಳು, ಕೊಡವ ಮತ್ತು ಬಡಗ ಭಾಷೆಗಳೂ ಕನ್ನಡದ ಉಪಭಾಷೆಗಳೆಂಬುವನ್ನು Caldwell, Kittel, Grierson ಮೊದ ಲಾದ ಭಾಷಾಶಾಸ್ತ್ರಜ್ಞರು ಒಪ್ಪಿದ್ದಾರೆ.

ಹೇಗೂ ಕಳೆದ ಶತಮಾನದ ಅಂತ್ಯದಲ್ಲಿ ಮತ್ತು ಈಚೆಗೆ ಈ ಎಲ್ಲಾ ಗಡೀ ಸೀಮೆಗಳಲ್ಲೂ ನೆರೆ ಭಾಷಾ ಜನವು ಒತ್ತರಿಸಿ ಬಂದರೆಂದು ತಿಳಿಯುತ್ತದೆ. ನೀಲಗಿರಿ ಮತ್ತು ಹೊಸೂರುಗಳಲ್ಲಿ ತಮಿಳರು, ಬಳ್ಳಾರಿ ಮತ್ತು ಕೋಲಾರಗಳಲ್ಲಿ ಆಂಧ್ರರು, ಬೆಳಗಾವಿ, ಕಾರವಾರಗಳಲ್ಲಿ ಮರಾಠರು ಮತ್ತು ದಕ್ಷಿಣ ಕನ್ನಡ ಮತ್ತು ಕೊಡಗಿನಲ್ಲಿ ಮಲೆಯಾಳಿಗಳು ಬಹು ಸಂಖ್ಯೆಯಲ್ಲಿದ್ದು ಹೊಸ ಸಮಸ್ಯೆಗೆ ಕಾರಣರಾಗಿದ್ದಾರೆ. ಒಂದು ನೂರು ವರ್ಷಗಳಿಗೆ ಹಿಂದೆ ಕನ್ನಡ ನಾಡಿನ ಗಡಿಯು ಇಂದಿನವಕ್ಕಿಂತ ವ್ಯಾಪ್ತ ವಾಗಿದ್ದಿತೆಂಬುದನ್ನು ಆಯಾ ಗಡೀ ಸೀಮೆಗಳಲ್ಲಿದ್ದ ಆಂಗ್ಲ ಸಾಹಿತಿಗಳ ಬರೆವಣಿಗೆ ಯಿಂದ ತಿಳಿಯುತ್ತದೆ. ಉದಾಹರಣೆಗೆ ಚಂದ್ರಗಿರಿ ಮತ್ತು ಕಲ್ಯಾಣಪುರಿ ನದಿಗಳು ತೌಳವ ನಾಡಿನ ದಕ್ಷಿಣ ಸರಹದ್ದುಗಳೆಂದು Dr. R. Caldwell ಇವನು ಹೇಳಿ ದಂತೆ ಬೆಳಗಾವಿ, ಸಾಂಗ್ಲಿ, ಸತಾರ, ಕೋಲಾಪುರ ಇತ್ಯಾದಿ ಸೀಮೆಗಳೂ ಕನ್ನಡ ನಾಡಿನ ಭಾಗವೆಂಬುದಕ್ಕೆ ಅದೆಷ್ಟೋ ಸಾಕ್ಷ್ಯವಿವೆ.

**೫. 'ಕರ್ಣಾಟಕ'– ಈ ಹೆಸರು ಕನ್ನಡನಾಡಿನಷ್ಟೇ ಪುರಾತನವಾದುದು :–**

'ಕರ್ಣಾಟಕ' ಎಂಬೀ ಶಬ್ದವನ್ನು ದಕ್ಷಿಣ ಹಿಂದೂಸ್ಥಾನಕ್ಕೆ ಅನ್ವಯಿಸುವಂತೆ ಸುಮಾರು ೨೦೦೦ ವರ್ಷಗಳಿಗೆ ಹಿಂದೆಯೇ ಉಪಯೋಗಿಸಿದ್ದು ಕಂಡುಬರುತ್ತದೆ. ಮೂಲತಃ ಈ ಹೆಸರು ದಖ್ಖಣದ ಕನ್ನಡ ಭಾಷಾ ಪ್ರದೇಶವನ್ನು ಕುರಿತು ಹೇಳಿದ ರಾದರೂ 'ಕರ್ಣಾಟಕ'ವೆಂಬ ಪದವನ್ನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಅರ್ಥ ದಲ್ಲಿ ಉಪಯೋಗಿಸಿದಂತೆಯೂ ತೋರುತ್ತದೆ, ವೇದಗಳ ಕಾಲದಲ್ಲಿ ಮತ್ತು ಭಾಗವತ ಪುರಾಣದಲ್ಲಿ ದಖ್ಖಣವನ್ನು ಕರ್ಣಾಟಕವೆಂಬುದಾಗಿ ಕರೆದಿದ್ದಾರೆ. ಕ್ರಿ. ಶ. ೨ನೇ ಶತಮಾನದಲ್ಲಿ ಭೂಗೋಳ ಶಾಸ್ತ್ರಜ್ಞ Ptolemy ಇವನು ದಖ್ಖಣವನ್ನು ಕರ್ಣಾಟಕ ವೆಂದು ಕರೆಯುತಿದ್ದರೆಂದು ಸೂಚಿಸಿದ್ದಾನೆ. ಕಾವೇರಿ ನದಿಯನ್ನು ಕುರಿತಾಗಿಯೂ ಅವನು ಪ್ರಸ್ತಾಪಿಸಿದ್ದಾನೆ. ಕ್ರಿ. ಶ. ೩ನೇ ಶತಮಾನದಿಂದ ೧೧ನೇ ಶತಮಾನದ ವರೆಗೂ ಇಂದಿಗಿಂತಲೂ ವಿಶಾಲವಾಗಿದ್ದ ಅಂದಿನ ಕನ್ನಡ ಭಾಷಾ ಸೀಮೆಯೆಲ್ಲವನ್ನೂ ಕರ್ಣಾಟಕವೆಂದೇ ಕರೆಯುವ ರೂಢಿಯಿತ್ತೆಂದು ಪಾಶ್ಚಾತ್ಯ ಪಂಡಿತರು ಹೇಳುತ್ತಾರೆ.

ಕ್ರಿ. ಶ. ೫ನೇ ಶತಮಾನದಲ್ಲಿದ್ದ ಖಗೋಳ ಶಾಸ್ತ್ರಜ್ಞ ವರಾಹಮಿಹಿರನೂ ಕರ್ಣಾಟಕ ವನ್ನು ಕುರಿತು ಪ್ರಸ್ತಾಪಿಸಿದ್ದಾನೆ.

"ವಿಶ್ವಗುಂಡ ದರ್ಶನಂ" ಎಂಬ ಗ್ರಂಥದಲ್ಲಿ "ಕರ್ಣಾಟಕ ದೇಶೋಯಾ ಪೂರ್ವಂ ಕರ್ಣದೇಶಂ ಅಭೂಸ್ಯಾತ್" ಎಂಬುದಾಗಿ ಕರ್ನಾಟ ಮತ್ತು ಕರ್ಣದೇಶ ಗಳ ಕುರಿತಾಗಿ ಹೇಳಲ್ಪಟ್ಟಿದೆ. ಕರ್ಣ ದೇಶದ ಬಗ್ಗೆ ಅಷ್ಟೇನೂ ಸ್ಪಷ್ಟವಾಗಿ ತಿಳಿದು ಬಂದಿಲ್ಲವಾದರೂ ಪಂಪನು ತನ್ನ "ವಿಕ್ರಮಾರ್ಜುನ ವಿಜಯ"ದಲ್ಲಿ "ಅಂತು ವಸು ಷೇಣಂ .. ಕರ್ಣಂ ಎಂಬೋಂ ಆದಂ" ಎಂದು ಹೇಳಿದ್ದನ್ನು ಕುರಿತಾಗಿ ಆ ಹೆಸರಿನ ಒಂದು ದೇಶವು ಕರ್ಣಾಟಕದ ಒಂದು ಭಾಗವಾಗಿ ಇದ್ದಿರಬಹುದೆಂದು ಊಹಿಸಲಾಗಿದೆ. ಕ್ರಿ. ಶ. ೧೧ನೇ ಶತಮಾನದಲ್ಲಿ ಆಲ್ಬಿರೂನಿಯು ದಕ್ಷಿಣ ಹಿಂದೂಸ್ಥಾನವನ್ನು ಪೂರ್ತಿ ಯಾಗಿ ಕರ್ಣಾಟಕವೆಂದು ಕರೆದಿದ್ದಾನೆ. ನೃಪತುಂಗನು 'ಕಾವೇರಿಯಿಂದ ಗೋದಾ ವರಿ'ಯವರೆಗೆ ಕನ್ನಡ ನಾಡು ಎಂದೂ ಆ ಭೂಭಾಗದ ಜನರು ಕನ್ನಡ ಭಾಷೆಯನ್ನು ಆಡುತಿದ್ದವರೆಂದೂ ಹೇಳಿದಾಗ 'ಕನ್ನಡ' ಮತ್ತು 'ಕರ್ಣಾಟಕ' ಪದಗಳು ಒಂದೇ ಅರ್ಥದಲ್ಲಿ ಹುಟ್ಟಿದ ತತ್ಸಮ ತದ್ಭವ ಪದಗಳೆಂದು ತಿಳಿಯುತ್ತದೆ. ಆ ಕಾಲದ ಕನ್ನಡ ವನ್ನು 'ಹಳಗನ್ನಡ'ವೆಂದು ಕರೆಯುತಿದ್ದರೆಂದು 'ಸುಭಾಷಿತ'ವೆಂಬ ಗ್ರಂಥದಿಂದ ತಿಳಿಯುತ್ತದೆ, 'ಒಳಗನ್ನಡ ಬೆಳುಗನ್ನಡ' ತೆಲುಗನ್ನಡ ಅಚ್ಚಗನ್ನಡಂ ಸಕ್ಕಜಮುಂ || ಎಳಗನ್ನಡ ಹಳಗನ್ನಡ ಉಂಟೆ ಕನ್ನಡಕ್ಕಿಳೆಯೊಳ್ || ಎಂಬುದಾಗಿ ಒಂದು ಕಂದ ಪದ್ಯವು ಇದೆ. ಇದರಲ್ಲಿ ಪೂರ್ವದ ಹಳಗನ್ನಡವು ಕ್ರಿ. ಶ. ೩ನೇ ಶತಮಾನದ ಕದಂಬರ ಕಾಲದಲ್ಲಿ ಬನವಾಸಿಯಲ್ಲಿ ಪ್ರಚಾರವಿತ್ತೆಂದು ಹೇಳಲಾಗಿದೆ.

ಚಾಳುಕ್ಯರು. ರಾಷ್ಟ್ರಕೂಟರು, ಹೊಯ್ಸಳರು ಮತ್ತು ಇತರ ರಾಜವಂಶಗಳು ಕರ್ನಾಟಕ ಸಿಂಹಾಸನಾಧೀಶ್ವರರೆಂದು ಅಖಿಲ ಭಾರತ ಪ್ರಸಿದ್ಧಿಯಾಗಿದೆ. ಕರ್ನಾ ಟಕದ ರಾಜವಂಶಗಳು ಉತ್ತರ ಭಾರತ ಮತ್ತು ನೇಪಾಳದವರೆಗೂ ತಮ್ಮ ಪ್ರಭಾವ ವನ್ನು ಬೀರಿದ್ದಾರೆ. ವಿಜಯನಗರದ ರಾಜರಂತೂ ಕರ್ನಾಟಕದ ರಾಜರು. ಕ್ರಿ. ಶ. ೧೦ನೇ ಶತಮಾನದಿಂದಿತ್ತಲಾಗಿ ಎಷ್ಟೋ ಕನ್ನಡ ತೆಲುಗು ಮತ್ತು ತಮಿಳು ಕವಿ ಗಳು ಕನ್ನಡ ಭಾಷಾ ಪ್ರದೇಶವನ್ನು 'ಕರ್ನಾಟಕ'ವೆಂದೂ, ಕನ್ನಡ ಕಲೆ, ಸಾಹಿತ್ಯ. ಸಂಗೀತ ಇತ್ಯಾದಿಗಳನ್ನು ಕರ್ಣಾಟಕಾ ಲಲಿತಕಲೆಗಳೆಂದೂ ಕರೆದಿದ್ದಾರೆ, "ಕರ್ಣಾ ಟರೇ ಏವ ಗೀಃ" ಎಂದು ಹೇಳಿದ ವೈಯ್ಯಾಕರಣಿ ಭಟ್ಟಾಕಳಂಕನ ಕಾಲದವರೆಗಿನ ಹಿಂದಿನ ಎಲ್ಲಾ ಕನ್ನಡ ಕವಿಗಳೂ ಸಾಹಿತಿಗಳೂ 'ಕನ್ನಡ' ಮತ್ತು 'ಕರ್ನಾಟಕ' ಇವುಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಹೀಗೆ ಕನ್ನಡ ಭಾಷೆಗಿಂತಲೂ ಹಿರಿದಾದ ಕನ್ನಡನಾಡು. ಅದಕ್ಕೂ ಹಿರಿದಾದ 'ಕರ್ಣಾಟಕ'ವೆಂಬ ಹೆಸರನ್ನು ಬಹು ಪೂರ್ವಕಾಲದಿಂದಲೇ ಹೊತ್ತುಕೊಂಡು ಬಂದಿದೆ. ಆದರೆ ಈ ಎಲ್ಲಾ ಪದಗಳ ಮತ್ತು ಹೆಸರುಗಳ ಮೇಲೆ ಪಾಶ್ಚಾತ್ಯ ಪಂಡಿತರ ವ್ಯಾಖ್ಯಾನವು ಎಂತಿದ್ದಿತೆಂಬುದನ್ನು ಮುಂದೆ ಅಲ್ಲಲ್ಲಿ ಹೇಳಲಾಗಿದೆ.

**೬. ಶತಮಾನಗಳ ಕಾಲದ ಕನ್ನಡ ಸಾಹಿತ್ಯದಲ್ಲಿ ವೈವಿಧ್ಯ :—**

ಈ ವಿಷಯವಾಗಿ ಕೂಲಂಕುಶವಾಗಿ ಇಲ್ಲಿ ಪ್ರಸ್ತಾಪಿಸುವ ಅವಶ್ಯಕತೆಯು ತೋರುವುದಿಲ್ಲ. ಪೂರ್ವಕಾಲದ ಶಾಸನಗಳಲ್ಲಿ ತೋರಿಬಂದ ಕನ್ನಡ ಅಕ್ಷರಗಳೂ ಭಾಷೆಯೂ ಕ್ರಿ.ಶ. 8ನೇ ಶತಮಾನದಿಂದೀಚೆಗೆ ಎಷ್ಟೋ ಮಾರ್ಪಾಡಾಯಿತು. ಜೈನ ಮತ್ತು ವೈಷ್ಣವ ಕವಿಗಳು ಚಂಪೂ ಕಾವ್ಯರಾಶಿಗಳನ್ನು ಮೇಲಿಂದ ಮೇಲೆ ಬರೆದಾಗ ಅಂದಿನ ಕನ್ನಡ ಸಾಹಿತ್ಯದ ಮತ್ತು ಭಾಷೆಯು ಪೂರ್ಣ ಸ್ವರೂಪವು ವ್ಯಕ್ತವಾಯಿತು. ವೀರಶೈವರ ವಚನ ಸಾಹಿತ್ಯವೂ ವೈಷ್ಣವ ಕವಿಗಳ ಷಟ್ಪದಿಯೂ ಜನಸಾಮಾನ್ಯರಿಗೆ ತಕ್ಕುದಾದ ಭಾಷೆಯಲ್ಲಿ ಬರೆಯಲ್ಪಟ್ಟದ್ದು ಅದೇ ಸುಮಾರು ಆರೆಂಟು ಶತಮಾನಗಳ ವರೆಗೆ ಜನಪ್ರೀಯವಾದ ಸಾಹಿತ್ಯವಾಯಿತು.

ಆದರೆ ಕ್ರಿ.ಶ. 19ನೇ ಶತಮಾನದಲ್ಲಿ ಕನ್ನಡ ಸಾಹಿತಿಗಳು ವಿವಿಧ ರೀತಿಯ ಅಭ್ಯಾಸ ಬಲಕ್ಕೆ ಒಳಗಾದರು. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಪ್ರಚಾರವಿದ್ದ ಲಾವಣಿಗಳು, ದಾಸರ ಪದಗಳು, ಗರತಿಯರ ಹಾಡುಗಳು. ಶೋಭಾನೆ ಹಾಡುಗಳು, ಐರಾವತ ಹಾಡು. ಗೋವಿನ ಹಾಡು ಇತ್ಯಾದಿಗಳಂಥಾ ವಿದ್ವತ್ಪೂರ್ವಕವಾದ ಹಳ್ಳಿಯ ಹಾಡುಗಳು ಜನರಲ್ಲಿ ಸಾಹಿತ್ಯಾಭಿರುಚಿಯನ್ನುಂಟುಮಾಡಲು ಸಹಾಯಕವಾದುವು. ಇವುಗಳೊಡನೆ ಪುರಾಣ ಕತೆಗಳನ್ನೊಳಗೊಂಡ ಪದ್ಯಗಳು. ಗದ್ಯ. ನಾಟಕ. ಭಾಷಾ ಶಾಸ್ತ್ರ ಇತ್ಯಾದಿಗಳನ್ನು ಕುರಿತಾದ ಬರೆವಣಿಗೆಗಳೂ ತುಂಬಾ ಪ್ರಚಾರವಾದುವು. ಪೂರ್ವಕಾಲದ ಸಂಸ್ಕೃತ ಮತ್ತು ಕನ್ನಡ ಕಾವ್ಯಗಳು ಗದ್ಯರೂಪಕ್ಕೆ ಇಳಿಸಲ್ಪಟ್ಟುವು. ಹಲವು ಪ್ರಾಚೀನ ಸಂಸ್ಕೃತ ನಾಟಕಗಳು ಕನ್ನಡಕ್ಕೆ ಭಾಷಾಂತರಿಸಲ್ಪಟ್ಟುವು; ಪುರಾತನ ಧರ್ಮಶಾಸ್ತ್ರಗಳನ್ನು ಕುರಿತಾದ ಗ್ರಂಥಗಳ ಮೇಲೆ ಟೀಕೆಗಳು ಬರೆಯಲ್ಪಟ್ಟುವು.

ಕನ್ನಡ ಸಾಹಿತ್ಯದಲ್ಲಿ ಈ ರೀತಿಯಾಗಿ ತೋರಿಬಂದ ವೈವಿಧ್ಯವು ಕಾಲಕ್ಕೆ ತಕ್ಕಂಥಾ ದೊಡ್ಡ ಬದಲಾವಣೆಯೆಂದೇ ಅನ್ನಬೇಕು. ಪೂರ್ವದಲ್ಲಿ ಜೈನ ಸಾಹಿತ್ಯವು ತೀರಾ ಹಳೆಗನ್ನಡ ಮತ್ತು ಚಂಪೂಕಾವ್ಯಗಳು; ಅನಂತರ ವಚನಸಾಹಿತ್ಯವು ಹೃದಯಂಗಮವಾಗುವಂತೆ, ನಿರೂಪಿಸಲ್ಪಟ್ಟಿತು; ಅದರೆಡೆಯಲ್ಲಿ ಹಲವು ಉದ್ದಾಮ ಕವಿಗಳು ಷಟ್ಪದಿಯಲ್ಲಿಯೇ ತೃಪ್ತರಾದರು. ಆದರೆ ಆ ಹಳೆ ಪರಂಪರೆಯಿಂದ ಬೇರ್ಪಟ್ಟು ಈ 18 ಮತ್ತು 19ನೇ ಶತಮಾನಗಳಲ್ಲಿ ಕನ್ನಡ ಸಾಹಿತ್ಯವು ವಿವಿಧ ರೀತಿಯ ಸಾಧನೆಗಳಿಗೆ ಒಳಗಾಯಿತು.

ಅಷ್ಟೇ ಅಲ್ಲ, ದಾಸರ ಹಾಡುಗಳು ಸಂಗೀತಶಾಸ್ತ್ರವನ್ನು ಬೆಳಗಿಸಿತು; ಗಮಕಿಗಳ, ಮತ್ತು ಕೀರ್ತನಗಾರರ ತಂಡವೂ ಹುಟ್ಟಿತು; ನಾಟಕಮಂಡಳಿಗಳೂ ಸ್ಥಾಪಿತವಾದುವು; ಯಕ್ಷಗಾನ, ಬಯಲಾಟ ಮತ್ತು ಭಾಗವತಾಟಗಳು ಹಳ್ಳಿಯ ಜನಕ್ಕೆ ದಿನನಿತ್ಯದ ಆಕರ್ಷಕ ಸಾಧನಗಳಾದುವು. ಹರಿಕಥಾ ಮತ್ತು ಪುರಾಣ ಕಥಾ ಪ್ರವಚನಗಳು "ಅನುಭವ ಮಂಟಪ"ದ ಪರಂಪರೆಯಲ್ಲಿ ಮುಂದುವರಿದು ಜನರಲ್ಲಿ ನೈತಿಕ ಮತ್ತು ಧಾರ್ಮಿಕ ಭಾವನೆಗಳನ್ನು ಪ್ರಚೋದಿಸಿದುವು. "ಧರಣಿಮಂಡಲ ಮಧ್ಯದೊಳಗೆ, ಶ್ರೀಗುರುವೆ ಜಯತುಜಯಾತೊ, ಸ್ವಾಮಿದೇವನೆ ಲೋಕಪಾಲನೆ."

ಎಂಬೀ ಬಗೆಯ ಉನ್ನತ ಮಟ್ಟದ ಜನಪದ ಹಾಡುಗಳೂ ಪ್ರಾರ್ಥನಾಗೀತೆಗಳೂ ನಾಡಿನ ಜನತೆಯಲ್ಲಿ ಇದ್ದ ಸಹಜವಾದ ಭಕ್ತಿ, ವಿದ್ವತ್ತು, ಪ್ರತಿಭೆಗಳನ್ನು ಪ್ರದರ್ಶಿಸುವಂಥಾ ಅಮೋಘ ರಚನೆಗಳಾಗಿದ್ದುವು.

**೭. ಕಳೆದ ಶತಮಾನದ ಹಲವು ಕವಿಗಳು ಮತ್ತು ಕಾವ್ಯಗಳು :—**

ಕ್ರಿ. ಶ. 19 ನೇ ಶತಮಾನದಲ್ಲಿ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಸುಪ್ರಸಿದ್ಧರಾದ ಕೆಲವು ಸಾಹಿತಿಗಳು ಇದ್ದರು. ಕೃಷ್ಣರಾಜ, ಲಿಂಗರಾಜ, ದೇವಲಾಪುರದ ನಂಜುಂಡ, ಚೆಲುವಾಂಬೆ, ಬಾಲಾಚಾರ್ಯ ಸಕ್ಕರಿ ಅಥವಾ ಶಾಂತಕವಿ ಮೊದಲಾದವರು ಪೌರಾಣಿಕ ವಿಷಯುಗಳನ್ನು ಸರಳವಾದ ಕನ್ನಡಕ್ಕೆ ಇಳಿಸಿದ್ದಾರೆ. ಆ ಕಾಲದ ಷಟ್ಪದೀ ಕೃತಿಗಳಲ್ಲಿ ಬಾಲಾಚಾರ್ಯ ಅಥವಾ ಶಾಂತಕವಿಯ ವಿರಹತರಂಗ, ಸುಧಾಮ ಚರಿತ್ರೆ, ಮೇಘದೂತ, ಕೃಷ್ಣರಾಜನ ಸೌಗಂಧಿಕಾ ಪರಿಣಯ, ಮಧುಗಿರಿ ನಂಜಪ್ಪನ ಕೃಷ್ಣರಾಜೇಂದ್ರ ವಿಲಾಸ, ಭೋಗಾನಂದನ ದೃಗ್ದೃಶ್ಯ ವಿಲಾಸ ಮೊದಲಾದುವು ಪ್ರಸಿದ್ಧವಾಗಿದ್ದುವು.

ಇದೇ ವೇಳೆಗೆ ಬೆಳಕಿಗೆ ಬಂದ ಕೆಲವೇ ಚಂಪೂ ಬರೆವಣಿಗೆಗಳ ಪೈಕಿ ತಮ್ಮಯ ಶಾಸ್ತ್ರಿಯ ರಾಜವಂಶ ರತ್ನಪ್ರಭೆ, ಲಿಂಗರಾಜನ ನಳಕೂಬರ ವಿಲಾಸ ಮತ್ತು ಗಯ ಚರಿತ್ರೆ, ತಿಪ್ಪಣಾರ್ಯನ ಹನುಮದ್ವಿಲಾಸ, ಪಂಚಭಾಷಾ ಪ್ರಬಂಧ ಹೀಗೆ ಕೆಲವು ಆಗಿದ್ದುವು. ನಂಜುಂಡನ ಲಿಂಗಸ್ತುತಿ ಮತ್ತು ಲಿಂಗರಾಜನ ವೀರಭದ್ರಶತಕ ಇವು ಪೂರ್ತಿ ವೃತ್ತಕಾವ್ಯಗಳಾಗಿದ್ದುವು. ದ್ವಿಪದಿಯಲ್ಲಿ 'ಜಲಕ್ರೀಡೆ', ತ್ರಿಪದಿಯಲ್ಲಿ 'ಗಿರಿಜಾ ಕಲ್ಯಾಣ', ಚೌಪದಿಯಲ್ಲಿ 'ಕೃಷ್ಣನ ಬಾಲಲೀಲೆ' ಮತ್ತು ಷಟ್ಪದಿಯಲ್ಲಿ ಮಹದೇವನ 'ಮಹಲಿಂಗೇಂದ್ರ ವಿಜಯ' ಇವು ಎಲ್ಲೆಲ್ಲೂ ಹಾಡಲ್ಪಡುತಿದ್ದುವು.

ಇನ್ನುಳಿದ ಜನಪ್ರಿಯವಾದ ಕೆಲವು ಬರೆಹಗಳಲ್ಲಿ "ಶುಕಸಪ್ತತಿ", ವಿಜಯದಾಸರ ಪದಗಳು, ಕೃಷ್ಣರಾಜನ ತಲಕಾವೇರಿ ಮಹಾತ್ಮ್ಯೆ, ತೆನ್ನಾಲಿ ರಾಮಕೃಷ್ಣನ ಕಥೆ, ಬಾಲಾಚಾರ್ಯನ ಭಾರತದ ಕಥೆಗಳು, ಬಸವಲಿಂಗನ ಕೃಷ್ಣಾರ್ಜುನ ದುಂದುಮೆ, ನಂಜುಂಡನ ಕೃಷ್ಣೇಂದ್ರ ಗೀತೆ, ತಿಮ್ಮಣ್ಣನ ಕೃಷ್ಣ ಪಾರಿಜಾತ, ಲಿಂಗರಾಜನ ಕೃಷ್ಣ ಬಾಲಲೀಲೆ ಮತ್ತು ಚೂಡಾಮಣಿ ಇತ್ಯಾದಿ ಗದ್ಯ ಮತ್ತು ಪದ್ಯ ಹೊತ್ತಗೆಗಳು ಉತ್ತಮ ಕೃತಿಗಳ ಸಾಲಿಗೆ ಸೇರಿದ್ದುವು.

ಸುಮಾರು 1875 ರಿಂದೀಚೆಗೆ ಪದ್ಮರಾಜ ಪಂಡಿತನು ಹಲವು ಕಿರು ಹೊತ್ತಗೆಗಳನ್ನೂ ಸಂಸ್ಕೃತದಲ್ಲಿ "ಜಿನೇಂದ್ರಮಾಲಾ" ದಂಥಾ ಕೆಲವು ಪ್ರೌಢ ಗ್ರಂಥಗಳನ್ನೂ ಬರೆದನು. ಅವುಗಳಲ್ಲಿ ಹಲವು ಆಗಲೇ ಮುದ್ರಣವಾದುವು. ಅವುಗಳಲ್ಲಿ "ಬಾಗಿಲು ತಡೆಯುವ ಹಾಡು, ಪದ್ಮಸಾರ, ಸೂಕ್ತಿ ಮುಕ್ತಾವಳಿ, ಉದಯರಾಗಪದ, ಭವ್ಯಾಮೃತ ಇತ್ಯಾದಿಗಳು ಪ್ರಸಿದ್ಧವಾಗಿದ್ದುವು, ಇದೇವೇಳೆಗೆ ಕೃಷ್ಣರಾಜನ 'ಉಷಾ ಪರಿಣಯ', ನಂಜಯ್ಯನ 'ರಾಧಾವಿಲಾಸ' ಮತ್ತು ಶಾಂತಕವಿಯ 'ವತ್ಸಲಾಹರಣ' ಸಾಂಗತ್ಯಗಳೂ ಗ್ರಾಮಾಂತರಗಳೆಲ್ಲಲ್ಲೂ ಹಾಡಲ್ಪಡುತ್ತಿದ್ದುವು. ಕಳೆದ ಶತಮಾನದ ಅಂತ್ಯದಲ್ಲಿ ಟಿ. ಆರ್. ಕೃಷ್ಣಾಚಾರ್ಯನು ಮೂಂಡೂಕ್ಯ ಉಪನಿಷತ್ತನ್ನೂ, ವೆಂಕಟ

ಕೃಷ್ಣಯ್ಯನು ತ್ರೈತ್ರೀಯೋಪನಿಷತ್ತನ್ನೂ ಕನ್ನಡದಲ್ಲಿ ಬರೆದನು. ತಿರುಮಲ ಐಯ್ಯಾಂಗಾರ್ಯನು ಅಪ್ರತಿಮ ವೀರಚರಿತ್ರೆ, ಚಿಕ್ಕದೇವರಾಜ ವಿಜಯ, ಚಿಕ್ಕದೇವ ರಾಜ ವಂಶಾವಳಿ ಇತ್ಯಾದಿಗಳನ್ನು ಸಂಪಾದಿಸಿ ಹೊರತಂದನು.

## ೮. ಇನ್ನೂ ಕೆಲವು ಉತ್ತಮ ಕನ್ನಡ ಪ್ರಕಟಣೆಗಳು :—

ಕಳೆದ ಶತಮಾನದ ಮಧ್ಯಭಾಗದಿಂದ ಕರ್ಣಾಟಕದ ಎಲ್ಲಾ ಭಾಗಗಳಲ್ಲೂ ಪ್ರಚಲಿತವಿದ್ದ ಗ್ರಂಥಗಳ ಪೈಕಿ ಬ್ರಹ್ಮಾಂಡ ವಿವರ, ರಾಜಾವಳೀ ಕಥೆ, ವತ್ಸರಾಜನ ಕಥೆ, ಐರಾವತ ಕಥೆ, ಬ್ರಹ್ಮ ವಿದ್ಯಾವಿಲಾಸ, ವಂಶರತ್ನಾಕರದ ಟೀಕೆ ಮೊದಲಾದುವು ಗಳಾಗಿದ್ದುವು. ಕೆಲವು ಲಘು ಬರೆಹಗಳಲ್ಲಿ ಚಂದ್ರಹಾಸನ ಕಥೆ, ಚಂದ್ರಾವಳೀ ಕಥೆ, ಅಭಿನವ ಪಂಚತಂತ್ರ, ದೇವೀ ಮಹಾತ್ಮ್ಯೆ, ಬಲಿ ಚರಿತ್ರೆ, ಸಮುದ್ರಮಥನ ಕಥೆ, ಸಾಲಿಗ್ರಾಮ ಮಹಾತ್ಮ್ಯೆ ಇವುಗಳೂ 1870ರ ಕಾಲದಲ್ಲಿಯೇ ಮುದ್ರಣವಾಗಿ ನಾಡಿನ ಉದ್ದಗಲಕ್ಕೂ ಪ್ರಚಾರವಾದುವು.

ಇವೆಲ್ಲವನ್ನೂ ಬರೆದ ಹಳೇ ವರ್ಗಕ್ಕೆ ಸೇರಿದ್ದ ಕವಿಗಳಲ್ಲಿ ಬಾಲಾಚಾರ್ಯ ಅಥವಾ 'ಶಾಂತ ಕವಿ' ಇವನು ಪ್ರಸಿದ್ಧನೆನ್ನಬಹುದು. ಪದ್ಯ, ಗದ್ಯ ಮತ್ತು ನಾಟಕ ಗಳಲ್ಲೆಲ್ಲಾ ಇವನು ವಿಶೇಷ ಅಭಿರುಚಿಯನ್ನು ತೋರಿಸಿದ್ದಾನೆ. ಕವಿ ಕೃಷ್ಣರಾಜನೆಂಬ ವನು ಮೈಸೂರು ರಾಜವಂಶಕ್ಕೆ ಸೇರಿದವನಾಗಿರಬಹುದು. ಅದೇ ಸಮಯದಲ್ಲಿ ಅವನ ಸಮಕಾಲೀನನಾಗಿದ್ದ ಕವಿ ಲಿಂಗರಾಜನೂ ಹಲವು ವಿಚಾರಪೂರ್ಣವಾದ ಕಿರು ಹೊತ್ತಗೆಗಳನ್ನು ಬರೆದಿದ್ದಾನೆ. ಇವನನ್ನು ಪೂರ್ಣಯ್ಯನ ನಂತರ ಮೈಸೂರಿನ ಮುಖ್ಯ ಮಂತ್ರಿಯಾಗಿದ್ದ ಲಿಂಗರಾಜನೆಂದು ಕೆಲವರು ಹೇಳಿದರೆ ಇನ್ನು ಕೆಲವರು ಕಳೆದ ಶತಮಾನಾರಂಭದಲ್ಲಿ ಕೊಡಗಿನ ಅರಸನಾಗಿದ್ದ 2ನೇ ಲಿಂಗರಾಜನೆಂದು ಹೇಳಿದ್ದಾರೆ. ಆದರೆ ಮೈಸೂರಿನ ಮುಖ್ಯಮಂತ್ರಿಯಾಗಿದ್ದ ಆ ಲಿಂಗರಾಜನು ಕೇವಲ ಅಸಭ್ಯ ಮತ್ತು ಅಸಂಸ್ಕೃತನಾದ ವ್ಯಕ್ತಿಯಾಗಿದ್ದನೆಂದು ಆಧಾರಪೂರ್ವಕವಾಗಿ ತಿಳಿದು ಬರು ತ್ತದೆ. ಅದೇ ರೀತಿ ಕೊಡಗಿನ ಲಿಂಗರಾಜನು ಗ್ರಂಥಗಳನ್ನು ಬರೆಯುವಷ್ಟೇನೂ ವಿದ್ಯಾ ವಂತನಾಗಿರಲಿಲ್ಲ. ಇವನ ಅಣ್ಣ ದೊಡ್ಡ ವೀರರಾಜನು ರಾಜೇಂದ್ರನಾಮೆಯನ್ನು* ಕ್ರಿ. ಶ. 1807ರಲ್ಲಿ ಇತರರಿಂದ ಬರೆಸಿದನು. ಹೇಗೂ ರಾಜರಿಗೂ ಮಂತ್ರಿಗಳಿಗೂ ಕವಿ ಗಳ ಹೆಸರು ಇದ್ದ ಮಾತ್ರಕ್ಕೆ ಅವರೇ ಕವಿಗಳೆಂದು ಹೇಳುವುದು ನಿಜಕ್ಕೂ ತಪ್ಪಾಗಿದೆ ಯೆಂದು ಹೇಳದೆ ಸಾಧ್ಯವಿಲ್ಲ.

ಕೆಲವು ಉದ್ದಾಮ ಪಂಡಿತರು ತಾವೇ ಗ್ರಂಥಗಳನ್ನು ಬರೆಯುವಲ್ಲದೆ ಪೂರ್ವದ ಕವಿಗಳ ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಿಸಿದ್ದಾರೆ. ಹೊಲಕಲ್ಲು ನರಸಿಂಹಯ್ಯನು ದಾಸರ ಪದಗಳು ಮತ್ತು ನಿಜಗುಣ ಶಿವಯೋಗಿಯ ಶಾಸ್ತ್ರೀಯ ಗ್ರಂಥವನ್ನೂ ಸಂಪಾ ದಿಸಿದನು. ವೆಂಕಟರಮಣ ಶಾಸ್ತ್ರಿ, ಅಯ್ಯಾಶಾಸ್ತ್ರಿ ಮತ್ತು ಟಿ. ರಾಮಾನುಜಯ್ಯ

---

* 'ರಾಜೇಂದ್ರನಾಮೆಯ'ಯ ಮೊದಲ ಪುಟದ ಮುದ್ರಣ ಚಿತ್ರವನ್ನು ಜೊತೆಗೆ ಕೊಡ ಲಾಗಿದೆ.

ಇವರು ರಾಮಾಯಣವನ್ನು ಪದ್ಯ ಮತ್ತು ಗದ್ಯಗಳೆರಡರಲ್ಲೂ ಬರೆದರು. ಆಳಸಿಂಗ್ರಾಚಾರ್ಯನು 1880 ರಲ್ಲಿ ಕರ್ಣಾಟಕ ಭಾಷಾ ಭೂಷಣವನ್ನೂ, ಆರ್. ನರಸಿಂಹಾಚಾರ್ಯನು 1898 ರಲ್ಲಿ ಕಾವ್ಯಾವಲೋಕನವನ್ನೂ ಸಂಪಾದಿಸಿದರು. ಗಂಗಾಧರ ಟೂರಮರಿಯು 357 ಪುಟಗಳ 'ಶಬ್ದ ಮಂಜರಿ'ಯನ್ನೂ ಕರಿಬಸವ ಶಾಸ್ತ್ರಿಯು 'ಕರ್ಣಾಟಕ ಶಬ್ದಮಂಜರಿ'ಯನ್ನೂ ರಚಿಸಿದ್ದು ಆ ಕಾಲಕ್ಕೆ ಉಪಯುಕ್ತವಾದ ಗ್ರಂಥಗಳಾದುವು. ಪಂಜೆ ಮಂಗೇಶರಾಯನು 1897 ರಲ್ಲಿ 'ವಿರೂಪಾಕ್ಷ ಪುರಾಣ'ವನ್ನು ಸಂಪಾದಿಸಿ ಪ್ರಕಟಿಸಿದನು. ಎಳಂದೂರು ಸುಬ್ಬಣ್ಣ ಶಾಸ್ತ್ರಿಯು 1894ರಲ್ಲಿ "ರಸರತ್ನಾಕರ" ಮತ್ತು "ಖಗೇಂದ್ರ ಮಣಿದರ್ಪಣ" ಇದನ್ನೂ ಸಂಪಾದಿಸಿದನು. ಕಾರ್ಕಳ ಚರಿತ್ರೆ, ಜಿನಪುರಾಣ ಇತ್ಯಾದಿಗಳನ್ನು ಬರೆದ ಪದ್ಮರಾಜ ಪಂಡಿತನು "ಅಕಲಂಕಾಷ್ಟಕ" ಮತ್ತು "ರಸರತ್ನಾಕರ" ವನ್ನು ನೂತನ ರೀತಿಯಲ್ಲಿ ಬರೆದು ಪ್ರಕಟಿಸಿದನು. ಇವರಲ್ಲಿ ಬರೀ ನಾಲ್ಕಾರು ಜನರಲ್ಲದೆ ಇತರರು ಅಂದು ನಾಡಿನಲ್ಲಿ ಹಬ್ಬಿದ್ದ ಹೊಸ ವಾಙ್ಮಯದ ಗಂಧಗಾಳಿಗೆ ಎಟುಕದಿದ್ದವರಾಗಿದ್ದರು, ಎಂಬುದನ್ನು ಇಲ್ಲಿ ಗಮನಿಸಿಕೊಳ್ಳಬೇಕಾಗಿದೆ.

### ೯. ಹಳ್ಳಿಯ ಬಯಲಾಟಗಳು, ಯಕ್ಷಗಾನ ಮತ್ತು ನಾಟಕಗಳು :—

ಕನ್ನಡನಾಡಿನ ಕರಾವಳೀ ಸೀಮೆಯಲ್ಲಿ ತಾಳಮದ್ದಳೆ, ಯಕ್ಷಗಾನ ಹಾಡು ಮತ್ತು ಆಟಗಳು ಸುಮಾರು 16 ನೇ ಶತಮಾನದಿಂದಲೇ ಜನಪ್ರಿಯವಾದ ಕಲೆಯಾಗಿ ಮತ್ತು ಕೇರಳದ 'ಕಥಕ್ಕಳಿ'ಯ ಒಂದು ರೂಪಾಂತರವಾಗಿ ಪ್ರಚಾರವಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಾರ್ಥಿಸುಬ್ಬನು ತಾಳಮದ್ದಳೆ ಮತ್ತು ಯಕ್ಷಗಾನ ಆಟಕ್ಕೆ ನಾವಿನ್ಯತೆಯನ್ನು ಒದಗಿಸಿದನು. ಸ್ವತಃ ಕವಿಯೂ ಕಲಾಪ್ರಚೋದಕನೂ ಆದ ಅವನು ಹಲವು ಪೌರಾಣಿಕ ಕತೆಗಳನ್ನು ಯಕ್ಷಗಾನ ಆಟಕ್ಕೆ ಅಳವಡುವಂತೆ ಬರೆದನು. ಇವನ್ನನುಸರಿಸಿ ಇತರರೂ ಆ ಕತೆಯಲ್ಲಿ ಹೆಚ್ಚಿನ ಅಭಿರುಚಿಯನ್ನು ತೋರಿಸಿದರು. ಹುರುಳಿ ಭೀಮರಾಯ, ನಂದಳಿಕೆ ಲಕ್ಷ್ಮೀನಾರಣಪ್ಪ ಮೊದಲಾದವರು ಹಲವು ಯಕ್ಷಗಾನ ಕೃತಿಗಳನ್ನು 'ತಾಳಮದ್ದಳೆ' ಆಟಕ್ಕೆ ಅಳವಡುವಂತೆ ಬರೆದರು. ಲವಕುಶರ ಕಾಳಗ, ಅಂಗದ ಸಂಧಾನ, ಸುಧನ್ವ ಕಾಳಗ, ಮೈರಾವಣ, ಬಾಣಾಸುರ, ಲವಣಾಸುರ ಕಾಳಗಗಳೇ ಮೊದಲಾದ ಹಾಡುಗಬ್ಬಗಳು ಬಯಲಾಟಗಳ ಮೂಲಕ ಜನರಿಗೆ ಪರಿಚಿತವಾದುವು. ಆ ಕಾಲದಲ್ಲಿ ಬಯಲಾಟಗಳು ಮತ್ತು ಭಾಗವತಾಟಗಳು, ಸುಗ್ಗಿ ಆಟ ಮತ್ತು ದೀಪಾವಳೀ ಆಟಗಳು ನಾಡಿನ ಎಲ್ಲಾ ಭಾಗದಲ್ಲೂ ಬೇರೆ ಬೇರೆ ರೀತಿಯಿಂದ ಮತ್ತು ಉತ್ಸಾಹದಿಂದ ಆಡಲ್ಪಡುತ್ತಿದ್ದುವು.

ನಾಟಕ ರಂಗಸ್ಥಳಗಳಂತೂ ಕರ್ಣಾಟಕದ ಪ್ರಾಮುಖ್ಯವಾದ ಊರುಗಳಲ್ಲೆಲ್ಲಾ ಆಕರ್ಷಕವಾಗಿ ಕಟ್ಟಲ್ಪಟ್ಟು ಅಂದಿನ ಅಭಿನಯ ಕಲೆಯು ವಿದ್ಯಾವಂತರಾದ ಜನರನ್ನೂ ಎಲ್ಲೆಲ್ಲೂ ಆಕರ್ಷಿಸಿತು! ನಾಟಕ ಸಂಸ್ಥೆಗಳು ಹುಟ್ಟಿದುವು, ಮೈಸೂರು, ಬಳ್ಳಾರಿ, ಧಾರವಾಡ ಇತ್ಯಾದಿ ಜಿಲ್ಲೆಗಳ ನಾಟಕ ಮಂಡಳಿಗಳು ಡೇರೆಗಳನ್ನೂ ಇತರ ಸಲಕರಣೆಗಳನ್ನೂ ಊರಿನಿಂದ ಊರಿಗೆ ಸಾಗಿಸಿ ಬಹು ಉತ್ಸಾಹದಿಂದ ರಂಗಸ್ಥಳಗಳನ್ನು

ಕಟ್ಟಿ ಆಡುತ್ತಿದ್ದರು. ಪೌರಾಣಿಕ ಮತ್ತು ಲೌಕಿಕ ಪ್ರಸಂಗಗಳನ್ನು ಬಹು ದಕ್ಷರಾದ ನಟರು ಮತ್ತು ನಟಿಯರು ಅಭಿನಯಿಸುತಿದ್ದರು. ಉತ್ತಮ ನಟನಟಿಯರ ಹಲವು ಪೀಳಿಗೆಗಳೇ ಹುಟ್ಟಿದುವು; ಕನ್ನಡನಾಡಿನಲ್ಲಿ ನಾಟಕ ಕಲೆಯನ್ನು ಬಹು ಮೇಲಕ್ಕೆ ಎತ್ತಿದರು. ಗುಬ್ಬಿ ವೀರಣ್ಣ, ಸದಾಶಿವರಾಯರೇ ಮೊದಲಾದ ನಟಶ್ರೇಷ್ಟರು ಎಲ್ಲೆಲ್ಲೂ ಪ್ರಶಂಸೆಗೆ ಒಳಗಾದರು. ಪ್ರಸಿದ್ಧ ಮರಾಠೀ ನಟ "ಬಾಲಗಂಧವ" ಇವನೂ ಕನ್ನಡಿಗ ನಾಗಿದ್ದು ಧಾರವಾಡದಿಂದ ಕೋಲಾಪುರಕ್ಕೆ ಹೋಗಿ ಅಲ್ಲಿ ಗಂಗಾಧರ ಟುರಮುರಿ ಮೊದಲಾದ ವಿದ್ವಾಂಸರ ಆಶ್ರಯದಲ್ಲಿ ಕನ್ನಡ ಮತ್ತು ಮರಾಠಿ ನಾಟಕಗಳಲ್ಲಿ ಹೆಚ್ಚಾಗಿ ಸ್ತ್ರೀಪಾತ್ರವನ್ನು ವಹಿಸಿ ಉತ್ತಮ ನಟನೆಂದು ಪ್ರಸಿದ್ಧನಾದನು. ಭಕ್ತ ಪ್ರಹ್ಲಾದ, ವೀರ ಅಭಿಮನ್ಯು, ಸತ್ಯಹರಿಶ್ಚಂದ್ರ, ಜರಾಸಂಧ ವಧೆ, ಸೀತಾ ಸ್ವಯಂವರ, ರಾವಣ ವಧೆ, ಕಬೀರದಾಸ, ಸದಾರಮೆ ಎಂಬೀ ಮೊದಲಾದ ನಾಟಕಗಳು ಅಂದಿನ ನಿತ್ಯದ ಕಥಾವಸ್ತುಗಳಾಗಿದ್ದುವು.

ಹಲವು ವಿಖ್ಯಾತ ವಿದ್ವಾಂಸರು ಪ್ರಾಚೀನ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ಮುಳುಬಾಗಿಲಿನ ದೊಂಢೋ ನರಸಿಂಹರಾಯನು ಉತ್ತರ ರಾಮಚರಿತ್ರ, ಮಾಲವಿಕಾಗ್ನಿಮಿತ್ರ ಮತ್ತು ಮೃಚ್ಛಕಟಿಕ ನಾಟಕಗಳನ್ನು ಕನ್ನಡಕ್ಕೆ ಇಳಿಸಿದನು. 'ಅಭಿನವ ಕಾಳಿದಾಸ' ಬಸವಪ್ಪಶಾಸ್ತ್ರಿಯು ಅಭಿಜ್ಞಾನ ಶಾಕುಂತಲಾ ಮತ್ತು ಚಂಡಕೌಶಿಕ ನಾಟಕಗಳನ್ನು ಕನ್ನಡದಲ್ಲಿ ಬರೆದನು. ಬಾಲಾಚಾರಿ ಸಕ್ಕರಿಯು ಸೀತಾರಣ್ಯ ಪ್ರವೇಶ ನಾಟಕ ಮತ್ತು ಶಿರಿಯಾಳ ಸತ್ವಪರೀಕ್ಷೆ ಎಂಬ ಎರಡು ನಾಟಕ ಗಳನ್ನೂ ಸೋಸಲೆ ಅಯ್ಯಾಶಾಸ್ತ್ರಿಯು ಕನ್ನಡ ರಾಮಾಯಣ ನಾಟಕವನ್ನೂ ಶಂಕರ ಶಾಸ್ತ್ರಿಯು ಹರಿಶ್ಚಂದ್ರ ನಾಟಕವನ್ನೂ ಬರೆದರು. ಅನಂತನಾರಾಯಣ ಶಾಸ್ತ್ರಿಯು ನಾಗಾನಂದ ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಿದನು.

### ೧೦. "ಹೃದ್ಯವಾದ ಗದ್ಯ"ದಲ್ಲಿ ಕೆಲವು ಕನ್ನಡ ಗ್ರಂಥಗಳು :—

ಕಳೆದ ಶತಮಾನದ ಮಧ್ಯಕಾಲದ ವರೆಗೂ ಕನ್ನಡ ಸಾಹಿತ್ಯದಲ್ಲಿ ಗದ್ಯ ಬರೆವಣಿಗೆಯು ಕೇವಲ ಒಂದೆರಡೆಂಬಂತೆ ಮಾತ್ರವಿದ್ದಿತು," ಸಾಹಿತ್ಯವೆಂದರೆ ಎಲ್ಲವೂ ಕಾವ್ಯರೂಪದಲ್ಲಿಯೇ ತೋರ್ಪಡಿಸಿಕೊಳ್ಳಬೇಕೆಂದು ಪ್ರಾಚೀನ ಕವಿಗಳು ನಂಬಿದ್ದರು. ಆ ಕಾರಣದಿಂದಲೇ ವ್ಯಾಕರಣ, ಛಂದಸ್ಸು ಇತ್ಯಾದಿ ಶಾಸ್ತ್ರಗಳನ್ನೂ ಕಾವ್ಯರೂಪ ದಲ್ಲಿಯೇ ಅವರು ಬರೆದರು. ಹೇಗೂ ಇತ್ತೀಚೆಗೆ ಪರಿಸ್ಥಿತಿಯ ಬದಲಾಯಿತು. ರಾಮಾಯಣ, ಮಹಾಭಾರತ ಮತ್ತು ಭಾಗವತಗಳು ಕನ್ನಡ ಗದ್ಯದಲ್ಲಿ ತೋರ್ಪ ಟ್ಟುವು. ಈ ಗದ್ಯ ಸಾಹಿತ್ಯಕ್ಕೆ ಕಳೆದ ಶತಮಾನದಲ್ಲಿ ಈ ದೇಶದಲ್ಲಿ ಇದ್ದ ಪಾಶ್ಚಾತ್ಯ ವಿದ್ವಾಂಸರೂ ಮಾರ್ಗದರ್ಶಕರಾದರು. ಅಂತೆಯೇ ಬ್ರಹ್ಮೋತ್ತರಖಂಡ ಶಿವ ಪುರಾಣಾದಿ ಕನ್ನಡ ಗದ್ಯಗ್ರಂಥಗಳು ಕಳೆದಶತಮಾನದಲ್ಲಿ ಮೇಲಿಂದ ಮೇಲೆ ಪುನರ್ಮುದ್ರಣವಾದುವು.

ಮದ್ರಾಸು ವಿದ್ಯಾ ಇಲಾಖೆಯಲ್ಲಿದ್ದ 'ದೇವ ಶಿಖಾಮಣಿ' ಅಳಸಿಂಗ್ರಾ ಚಾರ್ಯನು 1880 ರಿಂದಲೇ ರಾಮಾಯಣ, ಮಹಾಭಾರತ ಮತ್ತು ಭಾಗವತ

ಗಳನ್ನು ಗದ್ಯ ರೂಪದಲ್ಲಿ ಬರೆದವು ಅಮೋಘ ಕೃತಿಗಳಾದುವು. ಮೈಸೂರು ಪ್ರಾಕ್ತನ ಪರಿಶೋಧನಾ ಇಲಾಖೆಯಲ್ಲಿದ್ದ ರಾಮಾನುಜಯ್ಯಂಗಾರ್ಯನು ಮಹಾಭಾರತ ಮತ್ತು ಭಾಗವತ ಪುರಾಣಗಳನ್ನು ಕನ್ನಡ ಗದ್ಯಕ್ಕೆ ಇಳಿಸಿದ್ದು ಅವೆಲ್ಲಾ ಸರಕಾರದ ಮೂಲಕ ವಾಗಿಯೇ ಪ್ರಕಟವಾದುವು. ಕರಿಬಸವಶಾಸ್ತ್ರಿಯು ವೀರಶೈವ ಧರ್ಮ, ಬಸವೇಶ ಪುರಾಣ ಮತ್ತು ಸಿದ್ದೇಶ್ವರ ಪುರಾಣಗಳನ್ನೂ ಕನ್ನಡದಲ್ಲಿ ಬರೆದನು. ಇದೇ ರೀತಿ ಯಲ್ಲಿ ಬಸವಲಿಂಗ, ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ, ಎಸ್. ಜಿ. ನರಸಿಂಹಾಚಾರ್ಯ ಮೊದಲಾದವರು ಪೌರಾಣಿಕ ಗ್ರಂಥಗಳನ್ನು ಗದ್ಯರೂಪದಲ್ಲಿ ಬರೆದರು.

ಆದರೆ ಇವರೆಲ್ಲರ ಎಡೆಯಲ್ಲಿ ಕನ್ನಡ ಗದ್ಯಕ್ಕೆ ಸಾರ್ವಭೌಮನೆಂದೆನ್ನಬಹುದಾದ 'ಮುದ್ದಣ' ಅಥವಾ ನಂದಳಿಕೆ ಲಕ್ಷ್ಮೀನಾರಾಣಪ್ಪನು ದಕ್ಷಿಣ ಕನ್ನಡ ಜಿಲ್ಲೆಯ ಆದಾವುದೋ ಒಂದು ಭಾಗದಿಂದ "ಕನ್ನಡಂ ಕತ್ತುರಿಯಲ್ತೆ" ಎಂದೆನ್ನುತ್ತಾ ತನ್ನ "ಅದ್ಭುತ ರಾಮಾಯಣ" ವನ್ನು ಮೊದಲು ಗದ್ಯ ರೂಪದಲ್ಲಿ ಬರೆದು ಅನಂತರ "ಶ್ರೀರಾಮ ಪಟ್ಟಾಭಿಷೇಕ"ವನ್ನು ವಾರ್ಧಕ ಷಟ್ಪದಿಯಲ್ಲಿ ಬರೆದನು. ಆದರ ನಂತರ "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂದು ಸಾರಿ "ರಾಮಾಶ್ವಮೇಧ"ವೆಂಬ ಗದ್ಯ ಕಾವ್ಯವನ್ನು ಅದ್ಭುತವಾಗಿಯೇ ಬರೆದನು. ಸ್ವಯಂ ಸ್ಫೂರ್ತಿ ಪ್ರತಿಭೆಗಳಿಂದ ಕೂಡಿದ್ದ 19ನೇ ಶತಮಾನದ ಸಾಹಿತಿಗಳಲ್ಲಿ ಇವನು ಪ್ರಸಿದ್ಧನಾದನಲ್ಲದೆ ಇವನ "ರಾಮಾಶ್ವ ಮೇಧವು"ವು ಎಲ್ಲಾ ಕಾಲಕ್ಕೂ ಅತೀ ಪ್ರೌಢವಾದ ಗದ್ಯ ಗ್ರಂಥವೆಂದೆನಿಸಿತು. ಅಲ್ಲದೆ ಇವನ ಬರೆವಣಿಗೆಯು ಕನ್ನಡ ಗದ್ಯ ಸಾಹಿತ್ಯಕ್ಕೆ ಒಂದು ಕ್ರಾಂತಿಕಾರಕವಾದ ಸನ್ನಿವೇಶವನ್ನೂ ಅಂದು ಒದಗಿಸಿತು.

ಇದೇ ವೇಳೆಗೆ ಹಲ ಕೆಲವು ಸಣ್ಣ ಪುಟ್ಟ ಕಾದಂಬರಿಗಳೂ ಅಲ್ಲಲ್ಲಿ ಬೆಳಕಿಗೆ ಬಂದುವು. ಪ್ರಸಿದ್ಧ ಕಾದಂಬರೀಕಾರ ಎಂ. ಎಸ್. ಪುಟ್ಟಣ್ಣ, 'ಇಂದಿರಾಬಾಯಿ,' ಸೀಮಂತಿನೀ' ಇತ್ಯಾದಿಗಳನ್ನು ಬರೆದ ಗುಳವಾರಿ ವೆಂಕಟರಾವ", 'ನಗೆಗಡಲ'ನ್ನು ಬರೆದು ಕನ್ನಡಿಗರನ್ನು ನಗಿಸಿದ ಆರ್. ನರಸಿಂಹಾಚಾರ್ಯ Col. James Tod ಇವನ ರಾಜಸ್ಥಾನದ ಚರಿತ್ರೆಯಿಂದ ಸ್ಫೂರ್ತಿ ಹೊಂದಿ 'ಆರ್ಯ ಕೀರ್ತಿ'ಯನ್ನು ಬರೆದ ಚ. ವಾಸುದೇವಯ್ಯ ಹೀಗೆ ಕೆಲವರು ಕಳೆದ ಶತಮಾನಾಂತ್ಯದಲ್ಲಿ ಕನ್ನಡ ಗದ್ಯ ಬರೆವಣಿಗೆಗೆ ಉತ್ತಮ ಭವಿಷ್ಯವಿದೆಯೆಂದು ಸ್ವತಃ ಬರೆದು ತೋರಿಸಿದರು. ಇವರೊಡನೆ ಇವರೆಲ್ಲರಿಗಿಂತಲೂ ಮಿಗಿಲಾಗಿ ಬಂಕಿಂಚಂದ್ರನ ಹತ್ತಿಪ್ಪತ್ತು ಬಂಗಾಳೀ ಕಾದಂಬರಿ ಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಹೊಸಗನ್ನಡ ಬರವಣಿಗೆಯ ಶೈಲಿಗೆ ಒಂದು ಹೊಸ ಮೆರುಗನ್ನು ಕೊಟ್ಟ ಬಿ. ವೆಂಕಟಾಚಾರ್ಯನು ಜನಪ್ರೀಯನಾದ ಸಾಹಿತಿಯಾಗಿ ಪ್ರಸಿದ್ಧನಾದನು.

## ೧೧. ಇಂಗ್ಲಿಷ್ ಗದ್ಯ ಮತ್ತು ನಾಟಕಗ್ರಂಥಗಳು ಕನ್ನಡದಲ್ಲಿ:—

ಆಗ ಪ್ರಚಲಿತವಿದ್ದ ಆಂಗ್ಲೇಯ ವಿದ್ಯಾ ಕ್ರಮವು ಹೊಸ ರೀತಿಯಲ್ಲಿ ಗ್ರಂಥ ಗಳನ್ನು ರಚಿಸಲು ವಿದ್ವಾಂಸರನ್ನು ಪ್ರೇರೇಪಿಸಿತಾದರೂ ಆ ಹಾದಿಯಲ್ಲಿ ಕನ್ನಡಿಗರು ನಡೆಯಲು ತುಂಬಾ ಶ್ರಮಪಡಬೇಕಾಗಿತ್ತು. ಈ ಮೇಲಿನ ಹಲವು ಗ್ರಂಥಕರ್ತರು

ಅಂದು ಕರ್ಣಾಟಕದಲ್ಲಿದ್ದ J. Garrett. D. Sanderson, G. L. Wurth, B. Lewis Rice ಮೊದಲಾದ ಐರೋಪ್ಯಾ ವಿದ್ವಾಂಸರ ಸಲಹೆ ಯಂತೆ ಮತ್ತು ಅವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನನುಸರಿಸಿ ಪುಸ್ತಕಗಳನ್ನು ಬರೆದರು. ಹೀಗಾಗಿ ಆಧುನಿಕ ರೀತಿಯಲ್ಲಿ ಗ್ರಂಥ ರಚನಾ ಕಾರ್ಯವು ಈ ದೇಶದಲ್ಲಿ 1820 ರಿಂದಲೇ ಆರಂಭವಾಗಿ ಅಲ್ಲಲ್ಲಿ ಹೊಸ ರೀತಿಯಲ್ಲಿ ಬರೆದ ಗ್ರಂಥಗಳು ತೋರಿ ಬಂದುವು.

ಕ್ರಿ. ಶ. 1842 ರಷ್ಟು ಹಿಂದೆಯೇ ವೆಂಕಟಸುಬ್ಬಯ್ಯ ಮತ್ತು ಅಬ್ದುಲ್ ಖಾದರ್ ಇವರು ಸೇರಿ ಹಿಂದೂಸ್ಥಾನೀ ಮತ್ತು ಇಂಗ್ಲಿಷ್‌ನಲ್ಲಿ ಬರೆಯಲ್ಪಟ್ಟಿದ್ದ History of Thugs ಇದನ್ನು ಕನ್ನಡ ಕಾದಂಬರೀ ಶೈಲಿಯಲ್ಲಿ ಬರೆದರು. 1854 ರಲ್ಲಿ ಕೃಷ್ಣಸ್ವಾಮಿ ಐಯ್ಯಂಗಾರ್ಯನು Robinson Crusoe ಇದನ್ನು 305 ಪುಟಗಳಲ್ಲಿ ಕನ್ನಡದಲ್ಲಿ ಬರೆದನು. ಇಂಗ್ಲಿಷ್‌ನಿಂದ ಹಲವು ಕಿರುಹೊತ್ತಗೆಗಳು ಸರಕಾರೀ ಪ್ರಕಟಣೆಗಳೂ ಕನ್ನಡಕ್ಕೆ ಆಂದೇ ಭಾಷಾಂತರವಾದುವು.

ಆಂಗ್ಲ ಭಾಷಾ ಪರಿಣತರಾದ ಕೆಲವು ದೇಶೀಯ ವಿದ್ವಾಂಸರು ಷೇಕ್ಸ್‌ಪಿಯರಿ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ವೆಂಕಟೇಶ ಭೀಮರಾಯನ Romeo and Juliet ಇದನ್ನು 'ಕಮಲಾಕ್ಷ ಮತ್ತು ಪದ್ಮಗಂಧಿ'ಯೆಂಬ ಹೆಸರಿನಿಂದ ಕಾದಂಬರೀ ರೂಪದಲ್ಲಿ ಬರೆದನು. ಆನಂದರಾಯನು ಅದೇ ನಾಟಕವನ್ನು 'ರಾಮ ವರ್ಮ ಮತ್ತು ಲೀಲಾವತಿ' ಯೆಂದೂ, Merchant of Venice ಇದನ್ನು 'ಪಾಂಚಾಲೀ ಪರಿಣಯ'ವೆಂದೂ ಕನ್ನಡದಲ್ಲಿ ಬರೆದನು. ಸೋಮನಾಥಯ್ಯನು Taming of the Shrew ಇದನ್ನು 'ಗಯ್ಯಾಳಿಯನ್ನು ಸಾಧು ಮಾಡುವಿಕೆ' ಎಂದೂ All is well that ends well ಇದನ್ನು 'ಸತೀಮಣಿ ವಿಜಯ' ಎಂದೂ ಕನ್ನಡದಲ್ಲಿ ಬರೆದನು.

ಬಸವಪ್ಪಶಾಸ್ತ್ರಿಯು Othello ಇದನ್ನು 'ಶೂರಸೇನ ಚರಿತ್ರೆ'ಯೆಂದೂ ಸಿ. ನಂಜಪ್ಪನು Cymbeline ಇದನ್ನೂ ಕನ್ನಡದಲ್ಲಿ ಬರೆದರು. ಎಂ. ಎಸ್. ಪುಟ್ಟಣ್ಣನು King Lear ಇದನ್ನು 'ಹೇಮಚಂದ್ರ ವಿಲಾಸ'ವೆಂದೂ ಅದರೊಡನೆ Cymbeline ನಾಟಕವನ್ನೂ ಕನ್ನಡ ಗದ್ಯರೂಪಕ್ಕಿಳಿಸಿದನು. ಅದೇ ರೀತಿ ಅಣ್ಣಾಜೀರಾಯನು Two Gentlemen of Veronna ಇದನ್ನು ಗದ್ಯರೂಪ ದಲ್ಲಿ ಭಾಷಾಂತರಿಸಿದನು. 1898 ರಲ್ಲಿ 'ಕರ್ಣಾಟಕ ಗ್ರಂಥಮಾಲಾ' ಪ್ರಕಟಣೆ ಯವರು The Tempest ಅಥವಾ 'ಚಂಡಮಾರುತ' ಇದರ ಕನ್ನಡ ಭಾಷಾಂತರ ವನ್ನು ಹೊರತಂದರು.

## ೧೨. ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ'ದ ಮುದ್ರಣ :—

ಪಾಶ್ಚಾತ್ಯ ವಿದ್ವಾಂಸರು ಕಳೆದ ಶತಮಾನದ ಆದಿಯಿಂದಲೇ ಅಪೂರ್ವವಾದ ಪ್ರಾಚೀನ ಸಾಹಿತ್ಯ ಮತ್ತು ಶಾಸ್ತ್ರೀಯ ಗ್ರಂಥಗಳನ್ನು ತಾವಾಗಿಯೇ ಸಂಪಾದಿಸಿ ಮುದ್ರಿಸಿ ಪ್ರಕಟಿಸುತಿದ್ದರೆಂಬುದು ಹಿಂದೆಯೇ ಹೇಳಲಾಗಿದೆ. ಈ ಕೆಲಸದಲ್ಲಿ ಅಂದಿನ

ಆಂಗ್ಲ ಸರಕಾರವೂ ಅವರಿಗೆ ಧಾರಾಳ ಪ್ರೋತ್ಸಾಹವನ್ನೀಯುತ್ತಿತ್ತು. ಕನ್ನಡನಾಡಿನಲ್ಲೂ ಸುದೈವವಶಾತ್ತಾಗಿ ಕೆಲವು ಪ್ರಸಿದ್ಧ ಐರೋಪ್ಯಾ ವಿದ್ವಾಂಸರಿದ್ದರು. ಅವರಲ್ಲಿ Rev. John Garrett ಇವನೊಬ್ಬನು. ಕನ್ನಡದಲ್ಲಿ ಪ್ರಥಮ ಬಾರಿಗೆ ಮುದ್ರಣವಾದ ಗ್ರಂಥಗಳ ಪೈಕಿ ಲಕ್ಷ್ಮೀಶನ ' ಜೈಮಿನಿ ಭಾರತ 'ವು ಒಂದಾಗಿದೆ. ಆ ವರೆಗೆ ಶಬ್ದಮಂಜರಿ, ಕನ್ನಡ ಅಮರಕೋಶ ಎಂಬಿತ್ಯಾದಿ ಕೆಲವು ಕಿರುಹೊತ್ತಗೆಗಳು ಮುದ್ರಣವಾಗಿದ್ದುವು. ಆದರೆ ಪ್ರಬಲ ಸಾಹಿತ್ಯಗ್ರಂಥಗಳಲ್ಲಿ ' ಜೈಮಿನಿ ಭಾರತ 'ವೇ ಮೊದಲಾಗಿ ಮುದ್ರಣವಾದುದೆನ್ನಬಹುದು.

Rev. Garrett ಇವನು ಈ ಕಾವ್ಯವನ್ನು "the celebrated Kannada poem" ಎಂದು ಶ್ಲಾಘಿಸಿದ್ದನು. ಅಲ್ಲದೆ ಅವನ ಸಂಪಾದಕತ್ವದಲ್ಲಿಯೇ ಅದರ ಪ್ರಥಮ ಮುದ್ರಣವು ಕ್ರಿ.ಶ. 1848 ರಲ್ಲಿ ಮಂಗಳೂರು ಬಾಸೆಲ್ ಮಿಷನ್ ಮುದ್ರಣಾಲಯದಲ್ಲಿ ಆಯಿತು. ಇದರಲ್ಲಿ ಈ ಗ್ರಂಥವು 353 foolscap ಪುಟಗಳಲ್ಲೂ ಅದರೊಡನೆಯೇ ' ರಾವಣ ದಿಗ್ವಿಜಯ ' ಕಾವ್ಯವು 65 ಪುಟಗಳಲ್ಲಿಯೂ ದಾಸರ ಪದಗಳು ಮತ್ತು ' ಭಕ್ತಿಸಾರ ' ಇವು ೨೦ ಪುಟಗಳಲ್ಲೂ ಮುದ್ರಣವಾಗಿ ಒಟ್ಟಾಗಿ 438 foolscap ಪುಟಗಳ ಗ್ರಂಥವಾಯಿತು.* ಈ ಜನಪ್ರಿಯವಾದ ಕಾವ್ಯ ಮತ್ತು ಹಾಡುಗಳ ಗ್ರಂಥವು ಕ್ರಿ.ಶ. 1869 ಮತ್ತು 1879 ರಲ್ಲಿ ಎರಡುಬಾರಿ ಪುನರ್ಮುದ್ರಣವಾಯಿತು. ಅದರ ನಾಲ್ಕನೇ ಆವೃತಿಯು 1880 ರಲ್ಲಾಯಿತು. ಅನಂತರ ಇಪ್ಪತ್ತು ವರ್ಷಗಳಲ್ಲಿ ಅದು ಪುನಃ ಮೂರು ಬಾರಿ ಪುನರ್ಮುದ್ರಣವಾಯಿತೆಂದರೆ ಈ ಕಾವ್ಯವು ಜನರ ಮೇಲೆ ಎಂಥಾ ಪರಿಣಾಮವನ್ನುಂಟುಮಾಡಿತೆಂದು ತಿಳಿಯಬಹುದಾಗಿದೆ.

ಅಷ್ಟೇ ಅಲ್ಲ, ಕಳೆದ ಶತಮಾನದಲ್ಲಿ ಜೈಮಿನಿ ಭಾರತವೊಂದೇ ಕರ್ಣಾಟಕದ ವಿವಿಧ ಮುದ್ರಣಾಲಯಗಳಲ್ಲಿ ಸುಮಾರು ಇಪ್ಪತ್ತು ಬಾರಿ ಪುನರ್ಮುದ್ರಣವಾಗಿದೆ. ಸಿದ್ಧಲಿಂಗ ಶಾಸ್ತ್ರಿ, ವೆಂಕಟರಂಗೋಕಟ್ಟಿ, ಹೀಗೆ ಹಲವು ದೇಶೀಯರೂ ಅದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು ಅದರ ಕೆಲವು ಭಾಗಗಳನ್ನು ಇಂಗ್ಲಿಷ್, ಜರ್ಮನ್ ಇತ್ಯಾದಿ ಭಾಷೆಗಳಿಗೆ ಅನುವಾದಿಸಿದ್ದಾರೆ. ಬಿಜಾಪುರದ ಕೆ. ಬಿ. ಜೆಂಡಿಗೇರಿ ಇವನು ಇದರ 9 ನೇ ಪರಿಚ್ಛೇದದಿಂದ 13 ರ ವರೆಗಿನ ಭಾಗವನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾನೆ.

### ೧೩. ದೇಶೀಯ ವಿದ್ವಾಂಸರಿಂದ ಶಾಲಾ ಪಠ್ಯಪುಸ್ತಕಗಳು :—

ಆಂಗ್ಲೇಯ ವಿದ್ಯಾಕ್ರಮಕ್ಕೆ ಅನುಗುಣವಾಗಿ ಕಳೆದ ಶತಮಾನದ ಪ್ರಾರಂಭದಲ್ಲಿ ಶಾಲೆಗಳಿಗೆ ಬೇಕಾದ ಪಠ್ಯಪುಸ್ತಕಗಳನ್ನು ರಚಿಸಲು ಪ್ರಾರಂಭಿಸಿದಾಗ ದೇಶೀಯ ವಿದ್ವಾಂಸರೂ ಪಾಶ್ಚಾತ್ಯರನ್ನು ಅನುಸರಿಸಿ ಪಠ್ಯಪುಸ್ತಕಗಳ ರಚನೆಗೆ ತೊಡಗಿದರು. ಹೀಗೆ ಬರೆದ ಪುಸ್ತಕಗಳಲ್ಲಿ ಹೆಚ್ಚಾಗಿ ಚಿಕ್ಕ ಚಿಕ್ಕ ಶಾಲಾವ್ಯಾಕರಣಗಳಾಗಿದ್ದುವು. ಮೊತ್ತಮೊದಲಾಗಿ ಎಂದರೆ 1840 ರಲ್ಲಿ ಎ. ಶ್ರೀನಿವಾಸರಾಯನು ಕನ್ನಡ ಕತೆಗಳು

* ಇದರ ಮೊದಲ ಮುದ್ರಣದ ಮೊದಲ ಪುಟದ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಮತ್ತು ನಾಡಿನ ಭೂವಿವರವನ್ನೊಳಗೊಂಡ ಪಠ್ಯಪುಸ್ತಕವೊಂದರಲ್ಲಿ ಕನ್ನಡ ವ್ಯಾಕರಣ ವನ್ನು ಸವಿಸ್ತಾರವಾಗಿ ಪ್ರಸ್ತಾಪಿಸಿದ್ದನು. ಇದನ್ನು 1846 ರಲ್ಲಿ Walter Elliot ಇವನು ಪರಿಷ್ಕರಿಸಿ ಮದ್ರಾಸಿನಲ್ಲಿ ಪುನರ್ಮುದ್ರಿಸಿದನು.

ಕ್ರಿ. ಶ. 1870 ರಲ್ಲಿ ಶ್ರೀನಿವಾಸ ಕವೀಶನು "ಹೊಸಗನ್ನಡ ನುಡಿ ಚಂದ್ರಿಕೆ ವ್ಯಾಕರಣ"ವನ್ನು ಬರೆದನು. ಬೆಂಗಳೂರಿನಲ್ಲಿ ಅಧ್ಯಾಪಕನಾಗಿದ್ದ ಹೊನ್ನಪ್ಪನು 1890 ರಲ್ಲಿ 114 ಪುಟಗಳ ಕನ್ನಡ ವ್ಯಾಕರಣವನ್ನೂ ಧಾರವಾಡದಲ್ಲಿ ಅಧ್ಯಾಪಕ ನಾಗಿದ್ದ ಮುಳುಬಾಗಿಲಿನ ದೊಂಥೊ ನರಸಿಂಹರಾಯನು "ನುಡಿಗಟ್ಟು" ಎಂಬ ೨೦೦ ಪುಟಗಳ ಕನ್ನಡ ವ್ಯಾಕರಣವನ್ನೂ ಬರೆದರು. ಕನ್ನಡ ಛಂದೋಶಾಸ್ತ್ರವನ್ನು ಆಧುನಿಕ ರೀತಿಯಲ್ಲಿ ಬರೆದ ದೇಶೀಯರಲ್ಲಿ ಕಳೆದ ಶತಮಾನದ ಆರಂಭದಲ್ಲಿದ್ದ ಶಾಂತಿ ರಾಜಪಂಡಿತನೇ ಮೊದಲಿಗನು. ಕಾರವಾರದ ಅಧ್ಯಾಪಕ ನರಸಿಂಹ ಮಾಧವ ಮಹಿ ಷಿಯು 1893 ರಲ್ಲಿ 82 ಪುಟಗಳ ಕನ್ನಡ ಛಂದೋಶಾಸ್ತ್ರವನ್ನು ಬರೆದನು.

ಕ್ರಿ. ಶ. 1860 ರಿಂದ ಮಾಧ್ಯಮಿಕ ಮತ್ತು ವಿಶ್ವವಿದ್ಯಾಲಯದ ತರಗತಿಗಳಿಗೆ ಕನ್ನಡ ಪಠ್ಯ ಪುಸ್ತಕಗಳನ್ನು ಕೆಲವು ದೇಶೀಯ ವಿದ್ವಾಂಸರು ಬರೆಯುತಿದ್ದರು. ಇವರಲ್ಲಿ 1865 ರಲ್ಲಿದ್ದ ಶ್ರೀನಿವಾಸಯ್ಯನು ಕನ್ನಡ ಪ್ರಬಂಧ ರಚನೆ, ಸಂಭಾಷಣೆ ಇತ್ಯಾದಿಗಳ ವಿವರವನ್ನು ಕೊಟ್ಟು ಅದರ ಇಂಗ್ಲಿಷ್ ಭಾಷಾಂತರ ಸಮೇತ ಪ್ರಕಟಿಸಿದ ಪುಸ್ತಕವು ಮೊದಲನೆಯದಾಗಿದೆ. ಬೊಂಬಾಯಿ ಸರಕಾರದ ವಿದ್ಯಾ ಇಲಾಖೆಯಲ್ಲಿದ್ದ ವೆಂಕಟ ರಂಗೋ ಕಟ್ಟಿಯು ಗಣಿತ, ವಿಜ್ಞಾನ, ಚರಿತ್ರೆ, ಭೂಗೋಳ ಶಾಸ್ತ್ರಗಳ ಪಠ್ಯ ಪುಸ್ತಕಗಳನ್ನು ಬರೆದನು. ಇವನ "ಕರ್ಣಾಟಕ ವರ್ಣನೆಯೂ ಇತಿಹಾಸವೂ" ಉತ್ತಮವಾಗಿದ್ದು ಅದರಲ್ಲಿ ಕೊಡಲ್ಪಟ್ಟ ಕರ್ಣಾಟಕದ ಭೂಪಟವು ಇಂದಿಗೂ ಸಮರ್ಪಕವಾಗಿದೆ.* ಇದೇ ಗ್ರಂಥಕರ್ತನು ಬೊಂಬಾಯಿ ಸರಕಾರವು ಇಂಗ್ಲಿಷಿನಲ್ಲಿ ಬರೆಯಿಸಿದ್ದ ಕಾರವಾರ, ಬೆಳಗಾವಿ, ಬಿಜಾಪುರ ಮತ್ತು ಧಾರವಾಡವಲ್ಲಿ ಜಿಲ್ಲೆಗಳ Gazetteers ಇದನ್ನು 1890 ರಲ್ಲಿ ಸಂಕ್ಷೇಪವಾಗಿ ಕನ್ನಡಕ್ಕೆ ಭಾಷಾಂತರಿಸಿದನು.

ಗಣಿತ, ಸಂಕ್ಷೇಪ ಗಣಿತ, ಅಂಕಗಣಿತ ಎಂಬೀ ಬಗೆಯ ಚಿಕ್ಕ ಪಠ್ಯ ಪುಸ್ತಕ ಗಳು ಕ್ರಿ. ಶ. 1852ರಿಂದ ಮೊದಲ್ಗೊಂಡು ಕೆಲವು ದೇಶೀಯ ಅಧ್ಯಾಪಕರು ಬರೆಯು ತಿದ್ದರು. ಎಸ್. ಜಿ. ನರಸಿಂಹಾಚಾರ್ಯನ 'ಪದ್ಯಸಾರ"ದಂಥಾ ಕಿರುಹೊತ್ತಗೆ ಗಳನ್ನು ಕನ್ನಡ ಭಾಷಾಬೋಧೆಗೆ ಉಪಯೋಗಿಸುತಿದ್ದರು. ಆಗ ವಿದ್ಯಾ ಇಲಾಖೆಯ ಅಧಿಕಾರಿಗಳಾಗಿ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಇದ್ದ Lewis Rice, E. Marsden, W. Campbell ಮೊದಲಾದವರು ಆಯಾ ಭಾಗದ ದೇಶೀಯ ಪಂಡಿತರಿಂದ ಕನ್ನಡ, ಗಣಿತ, ಚರಿತ್ರೆ, ಭೂಗೋಳ ಇತ್ಯಾದಿ ಪಠ್ಯ ಪುಸ್ತಕಗಳನ್ನು ತಮ್ಮ ಸಲಹೆಗನುವಾಗಿ ಬರೆಯಿಸಿದರು. ಅದಕ್ಕೆ ನಿದರ್ಶನವಾಗಿ Rev. G. U. Pope ಇವನು ಇಂಗ್ಲಿಷ್‌ನಲ್ಲಿ ಬರೆದ ಈ ದೇಶದ ಚರಿತ್ರೆಯನ್ನು ವೆಂಕಟರಂಗೋ ಕಟ್ಟಿಯು 1875 ರಲ್ಲಿ "ಹಿಂದೂಸ್ಥಾನದ ಇತಿಹಾಸ ಸಾರ" ಎಂಬುದಾಗಿ ೨೦೦

* ಕರ್ಣಾಟಕದ ಈ ಭೂಪಟವನ್ನು ಇನ್ನೊಂದೆಡೆ ಕೊಡಲಾಗಿದೆ.

ಪುಟಗಳ ಭಾಷಾಂತರ ಪಠ್ಯ ಗ್ರಂಥವನ್ನು ಬರೆದಂತೆ ಇನ್ನೂ ಹಲವು ದೇಶೀಯರು ಬರೆದರು.

**೧೪. ದೇಶೀಯ ಕ್ರೈಸ್ತರಿಂದ ಬರೆಯಲ್ಪಟ್ಟ ಪುಸ್ತಕಗಳು :—**

ವಿದೇಶೀಯ ಕ್ರೈಸ್ತಮತ ಪ್ರಚಾರಕರ ಪ್ರಭಾವದಿಂದ ಕೆಲವು ಜನರು ಕಳೆದ ಶತಮಾನದಲ್ಲಿ ಕ್ರೈಸ್ತ ಮತಾವಲಂಬಿಗಳಾದರು. ಆದರೆ ಅವರ ಪೈಕಿ ವಿದ್ಯಾವಂತರಾದವರ ಸಂಖ್ಯೆಯು ಬಹುಕಡಿಮೆಯಿತ್ತು. ಹೇಗೂ ಕೆಲವರು ಅಂದಿನ 'ಪಾದರಿ'ಗಳ ಸಂಪರ್ಕದಿಂದ ಇಂಗ್ಲಿಷ್ ವಿದ್ಯೆಯನ್ನು ಗಳಿಸಿದರು. ಅಲ್ಲಲ್ಲಿ ಕ್ರೈಸ್ತ ಮಿಷನರಿ ಶಾಲೆಗಳು ಸ್ಥಾಪಿತವಾದಾಗ ಅವರಿಗೆ ಆಧುನಿಕ ರೀತಿಯಲ್ಲಿ ವಿದ್ಯೆಯನ್ನು ಪಡೆಯುವ ಅವಕಾಶವುಂಟಾಗಿ ಅವರಲ್ಲಿ ಕೆಲವರು ಮುಂದುವರಿದು ಸರಕಾರದ ಆಶ್ರಯದಲ್ಲಿ ವಿವಿಧ ಹುದ್ದೆಗಳನ್ನು ಪಡೆದರು. ಇನ್ನು ಕೆಲವರು ತಾವೇ ಕ್ರೈಸ್ತ ಧರ್ಮಪ್ರಚಾರಕರಾಗಿ ಹಿಂದೂಧರ್ಮದ ವಿರೋಧವಾಗಿ ಪಾಶ್ಚಾತ್ಯ ಮತಧರ್ಮ ಬೋಧನೆಯನ್ನು ಮಾಡಲು ತೊಡಗಿದರು.

ಇಂಥವರಲ್ಲಿ ವೆಸ್ಲೀಯನ್ ಕ್ರೈಸ್ತ ಸಂಸ್ಥೆಗೆ ಸೇರಿದ್ದ ಜಾನ್ ಶ್ಯಾಮರಾಯನು ಒಬ್ಬನು. ಇವನು ಹಲಕೆಲವು ಬೈಬಲ್ ಕಿರುಹೊತ್ತಗೆಗಳನ್ನು ಕ್ರಿ.ಶ. 1850ರ ಕಾಲದಲ್ಲಿ ಕನ್ನಡದಲ್ಲಿ ಬರೆದು ಪ್ರಚಾರಪಡಿಸಿದನು. 1854ರಲ್ಲಿ ಇವನು ಪ್ರಾಥಮಿಕ ದರ್ಜೆಗಳಿಗೆ ತಕ್ಕುದಾದ ಕನ್ನಡ ಪಠ್ಯಪುಸ್ತಕಗಳನ್ನು 119 ಪುಟಗಳ ಶಾಲಾ ವ್ಯಾಕರಣವನ್ನೂ ಬರೆದನು. ಅಂತೆಯೇ ಇನ್ನೊರ್ವ ಕ್ರೈಸ್ತ ಮತಾವಲಂಬಿ ಆನಂದ ರಾಯು ಕೌಂಡಿನ್ಯನು ಮಂಗಳೂರು ಬಾಸೆಲ್ ಮಿಷನ್ನಿನ ಆಶ್ರಯದಲ್ಲಿ ಕ್ರೈಸ್ತ ಮತ ಸಂಬಂಧವಾದ ಕನ್ನಡ ಲೇಖನಗಳನ್ನು ಬರೆದನು. E. Moegling, D. Sanderson ಮೊದಲಾದವರೊಡನೆ ಸೇರಿ 1860 ರಲ್ಲಿ 'New Testament' ಇದನ್ನು ಭಾಷಾಂತರಿಸಿದನು. "ಕ್ರೈಸ್ತ ಮತ ಬೋಧನೆ" ಎಂಬ ಪುಸ್ತಕವನ್ನು ರಚಿಸಿದನು. Collenso ಇವನ "ಗಣಿತ ವಿದ್ಯೆ" ಇದನ್ನು ಇಂಗ್ಲಿಷ್ನಿಂದ ಭಾಷಾಂತರಿಸಿದನು. ಕ್ರಿ.ಶ. 1863 ರಲ್ಲಿ J. H. Kurtz ಇವನ 'Sacred History' ಎಂಬ ಧರ್ಮಗ್ರಂಥವನ್ನು ಕನ್ನಡಕ್ಕಿಳಿಸಿದನು. 1867 ರಲ್ಲಿ "ಕ್ರೈಸ್ತಧರ್ಮ ತತ್ವಗಳು" ಎಂಬ ಪುಸ್ತಕವನ್ನು ಇಂಗ್ಲಿಷ್ ಟಿಪ್ಪಣಿಗಳ ಸಮೇತವಾಗಿ ಬರೆದನು. ಆ ಕೌಂಡಿನ್ಯನು ಬರೆದ ಗ್ರಂಥಗಳಲ್ಲಿ "ಸಂಕ್ಷೇಪವಾದ ಪುನಃಸ್ಥಾಪನೆಯ ಚರಿತ್ರವು" ಅಥವಾ "History of Reformation" ಎಂಬುದು ನಿಜವಾಗಿಯು ಉತ್ತಮವಾಗಿದೆ. ಲೂಥರನ ಮತಧರ್ಮವನ್ನು ಕುರಿತು ಬರೆದ ಈ ಪುಸ್ತಕವು ಶಾಲೆಗಳಲ್ಲೂ ಉಪಯೋಗಿಸಲ್ಪಟ್ಟಿತು. ಅವನ ಕನ್ನಡ ಬರೆವಣಿಗೆಗೆ ನಿದರ್ಶನವಾಗಿ ಈ ಭಾಗವನ್ನು ಅದರಿಂದ ಎತ್ತಿಕೊಡಲಾಗಿದೆ :—

"... ಲುಥರನು ಸ್ನೇಹಭಾವದಿಂದ ಸಮಾಧಾನದ ಪತ್ರಿಕೆಯನ್ನು ಬರೆದು, ಅದರ ಕಾಟಕ್ಕಾಯಿಸುವರಿಗೆ ದೇವರ ವಾಕ್ಯದಿಂದ ಸತ್ಯಬೋಧನೆ ಹೇಳಿ ಈ ದ್ರೋಹಕರವಾದ ಅನರ್ಥವನ್ನು ಬಿಡಬೇಕೆಂದು ಬೇಡಿಕೊಂಡನು.

ಅತ್ತ ಕಡೆಯಲ್ಲಿ ಅರಸು ಮುಂತಾದ ಪ್ರಭುಗಳಿಗೂ ಅವರು ಜನರ ಮೇಲೆ ಅನೇಕ ಸರ್ತಿ ನಡೆಸುವ ಅನ್ಯಾಯವನ್ನು ತೋರಿಸಿಕೊಟ್ಟು ನೀತಿಯಿಂದಲೂ ನಿಧಾನತ್ವ ದಿಂದಲೂ ವರ್ತಿಸತಕ್ಕದ್ದೆಂದು ಬಹು ಆಸಕ್ತಿಯಿಂದ ತಿಳಿಸಿದನು....?

ಇವರ ನಂತರ ಕಾರವಾರ. ಬೆಳಗಾವಿ. ಮಂಗಳೂರು ಮೊದಲಾದೆಡೆಗಳಲ್ಲಿದ್ದ ಕೆಲವು ದೇಶೀಯ ಕ್ರೈಸ್ತ ಅಧ್ಯಾಪಕರು ಚಿಕ್ಕ ಮಕ್ಕಳಿಗೆ ತಕ್ಕುದಾದ ಕಿರು ಹೊತ್ತಗೆ ಗಳು ಕ್ರಿ. ಶ. 1885ರ ನಂತರದ ಕಾಲದಲ್ಲಿ ಬರೆದರು. ಜಿ. ನರೋನ್ಹಾ ಇವನು 1888ರಲ್ಲಿ ಬರೆದ "ಅಪಾಯದಲ್ಲಿನ ಉಪಾಯ ಸಂಗ್ರಹವುಂ" ಎಂದು ಪ್ರಥಮ ಚಿಕಿತ್ಸೆಗೆ ಸಂಬಂಧಿಸಿದ ಉತ್ತಮವಾದ ಪಠ್ಯ ಪುಸ್ತಕವು 1896 ರಲ್ಲಿ ಪುನರ್ಮುದ್ರಣ ವಾಯಿತು.

**೧೫. ಕಳೆದ ಶತಮಾನದ ಕೆಲವು ಸಾಹಿತಿಗಳೂ ಸಂಶೋಧಕರೂ :—**

ಈವರೆಗೆ ಹೇಳಲ್ಪಟ್ಟ ಗ್ರಂಥಗಳೆಲ್ಲಕ್ಕೂ ಹಿರಿದಾಗಿ ಕ್ರಿ.ಶ. 1830 ರಷ್ಟು ಹಿಂದೆಯೇ ಅಮರಸಿಂಹನ ಅ ಮ ರ ಕೋ ಶ ವು ಕನ್ನಡಕ್ಕಿಳಿಸಲ್ಪಟ್ಟು ಮುದ್ರಣ ವಾಯಿತು. 378 ಪುಟಗಳ ಈ ಕನ್ನಡ ಅಮರಕೋಶವು ಅದರ ಮೂಲ ಮತ್ತು ಟೀಕೆ ಗಳ ಸಮೇತವಾಗಿ ಯಾರಿಂದ ಭಾಷಾಂತರವಾಗಿ ಯಾವ ಮುದ್ರಣಾಲಯದಲ್ಲಿ ಅಚ್ಚಾಗಿ ಹೊರಬಂತೋ ತಿಳಿಯದು. ಹಳಗನ್ನಡ ಅಚ್ಚು ಮೊಳೆಗಳಲ್ಲಿ ಮುದ್ರಣವಾದ ಈ ಗ್ರಂಥವು ಕನ್ನಡದಲ್ಲಿ 170 ವರ್ಷಗಳಿಗೆ ಹಿಂದೆ ಮುದ್ರಣವಾದ ಮೊದಲನೇ ಸಾಹಿತ್ಯ ಗ್ರಂಥವೆನ್ನಬಹುದು.

ಇದರೊಡನೆಯೇ ಶ್ರೀರಂಗಪಟ್ಟಣ ಕೃಷ್ಣಮಾಚಾರ್ಯನಿಂದ ಕ್ರಿ.ಶ. 1820 ರಲ್ಲಿ ಬರೆಯಲ್ಪಟ್ಟ 'ಧಾತು ಮಂಜರಿ'ಯೂ ಮದ್ರಾಸಿನಲ್ಲಿ ಮುದ್ರಣವಾಗಿ ಪ್ರಕಟ ವಾಯಿತು. ಸಿ. ಕೃಷ್ಣಮ್ಮಾ ಇವನು 1852 ರಲ್ಲಿ ವಿಧವಾ ವಿವಾಹವನ್ನು ಕುರಿತು ಪ್ರತಿಪಾದಿಸುತ್ತಾ ಒಂದು ಕಿರುಹೊತ್ತಗೆಯನ್ನು ಬರೆದನು. ಹೆಚ್. ನರಸಿಂಹಯ್ಯನು 1866 ರಲ್ಲಿ ಬರೆದ 114 demy ಪುಟಗಳ ವಿಕ್ರಮಾದಿತ್ಯನ ಚರಿತ್ರೆಯು ಮೈಸೂರು ಸರಕಾರದ ವಿದ್ಯಾಧಿಕಾರಿ John Garrett ಇವನ ಪ್ರೋತ್ಸಾಹದಿಂದ ಪ್ರಕಟ ವಾಯಿತು. ಧಾರವಾಡದ ರಾಮಚಂದ್ರ ದೇಶಪಾಂಡೆ ಇವನು ನೂರ್ಜಹಾನ್, ನಾನಾ ಫಡ್ನವಿಸ, ಭರತಖಂಡದ ಧರ್ಮ ಸಂಸ್ಥಾಪಕರು ಎಂಬೀ ಬಗೆಯ ಪುಸ್ತಕಗಳನ್ನು ರಚಿಸಿದನು.

1869 ರಲ್ಲಿ ಆರೋಗ್ಯಪಿಳ್ಳೆ ಇವನು "ಮಾದೇಶ್ಯವಿ ಉಪದ್ರವ ವಿವೇಚಕ ಬೋಧಿನಿ" ಎಂಬುದಾಗಿ ರೋಗಸಿವಾರಣೆಗೆ ಉಪಾಯವನ್ನು ಸೂಚಿಸಿ 81 ಪುಟಗಳ ಪುಸ್ತಕವನ್ನೂ 1888 ರಲ್ಲಿ ವೆಂಕಟಸ್ವಾಮಿ ಐಯರನು ಆರೋಗ್ಯಶಾಸ್ತ್ರವನ್ನು ಕುರಿತಾದ ಪಠ್ಯಪುಸ್ತಕವನ್ನೂ ರಚಿಸಿದರು. ಕ್ರಿ.ಶ. 1890ರ ಕಾಲದಲ್ಲಿ ಲಕ್ಷ್ಮಣ ಭಟ್ಟ ಇವನು "ಕಾವ್ಯಪುಂಜ"ವನ್ನೂ ಸಿ. ವತ್ಸಾ ಇವನು "ಪಂಚತಂತ್ರ"ವನ್ನೂ, ಕಾದಂಬರಿಕಾರ ಎಂ. ಎಸ್. ಪುಟ್ಟಣ್ಣನು ಚರಿತ್ರೆ, ಕನ್ನಡ ಮತ್ತು ನೀತಿಚಿಂತಾಮಣಿ ಪಠ್ಯಪುಸ್ತಕಗಳನ್ನೂ ಪ್ರಕಟಿಸಿದರು.

ಮೈಸೂರಿನಲ್ಲಿ B. Lewis Rice ಇವನ ಆಶ್ರಯದಲ್ಲಿ ರಾಮಾನುಜಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಇವರು ತಮ್ಮ ಇತರ ಸಾಹಿತ್ಯ ಗ್ರಂಥಗಳೊಡನೆ ಕನ್ನಡ ಸಾಹಿತ್ಯ ಮತ್ತು ಚರಿತ್ರೆಯ ಸಂಶೋಧನೆಯಲ್ಲೂ ನಿರತರಾಗಿ ಹಲವು ಶಾಸನಗಳನ್ನೂ ಓಲೆಗ್ರಂಥಗಳನ್ನೂ ಬೆಳಕಿಗೆ ತಂದರು. ಇವರೊಡನೆ ಕವಿ ಚರಿತ್ರಕಾರ ಆರ್. ನರಸಿಂಹಾಚಾರ್ಯನೂ ಇದ್ದನು. ಅದೇ ಕಾಲಕ್ಕೆ ಬಸವಪ್ಪ ಶಾಸ್ತ್ರಿ, ಅಳಸಿಂಗ್ರಾಚಾರ್ಯ, ಶ್ರೀನಿವಾಸಾಚಾರ್ಯ, ಯು. ಮಂಗೇಶರಾಯ ಮೊದಲಾದ ಪಂಡಿತರು ವಿಶ್ವವಿದ್ಯಾಲಯದ ಮಟ್ಟಕ್ಕೆ ಬೇಕಾದ ಕನ್ನಡ ಪಠ್ಯಪುಸ್ತಕಗಳನ್ನು ಪ್ರತಿವರ್ಷವೂ ಸಂಪಾದಿಸುತಿದ್ದರು. ಇವರೆಲ್ಲರ ಪೈಕಿ ಬೊಂಬಾಯಿ ಸರಕಾರದಲ್ಲಿದ್ದ ಕಾಶೀನಾಥ ಪಥಕ್ ಇವನು ಘನ ವಿದ್ವಾಂಸನಾಗಿ "ಕವಿರಾಜಮಾರ್ಗ" ವನ್ನು ಸಂಪಾದಿಸಿದುದಲ್ಲದೆ ಕರ್ಣಾಟಕ ಪ್ರಾಕ್ತನ ಪರಿಶೋಧನೆಯನ್ನು ಕುರಿತು ಹಲವು ವಿದ್ವತ್ಪೂರ್ವಕವಾದ ಲೇಖನಗಳನ್ನು Indian Antiquary, Asiatic Researches ಮೊದಲಾದುವುಗಳಲ್ಲಿ ಪ್ರಕಟಿಸುತಿದ್ದನು.

೧೬. ಅಂದಿನ ವಿವಿಧ ರೀತಿಯ ಕನ್ನಡ ಬರವಣಿಗೆಗಳು :—

ಮದ್ರಾಸು ಬೊಂಬಾಯಿ ಮತ್ತು ಹಳೆ ಮೈಸೂರು ರಾಜ್ಯಸರಕಾರಗಳು ಅಂದಿನ ರಾಜ್ಯಾಂಗ ವ್ಯವಸ್ಥೆ, ಖಾನೂನು ಕಾಯಿದೆ, ವ್ಯವಸಾಯ ಮತ್ತು ಕೋರ್ಟು ಖಚೇರಿಗಳಿಗೆ ಸಂಬಂಧಿಸಿದ ಎಲ್ಲಾ ಪ್ರಕಟಣೆಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಜನಕ್ಕೆ ಹಂಚುತಿದ್ದರು. ಮೈಸೂರಿನಲ್ಲಿ ಆ ಸರಕಾರ ಪ್ರಕಟಣೆಗಳನ್ನೆಲ್ಲಾ ಕ್ರಿ.ಶ. 1860 ರಲ್ಲಿ ಕೃಷ್ಣಸ್ವಾಮಿ ಐಯ್ಯಂಗಾರ್ಯನು 281 demy ಪುಟಗಳಲ್ಲಿ ಸಂಗ್ರಹಿಸಿದ್ದು ಸರಕಾರದಿಂದಲೇ ಪ್ರಕಟವಾಯಿತು ; ಇದನ್ನು "for the use of foreign students" ಎಂದು ಹೇಳಲಾಗಿತ್ತು. ಅಷ್ಟರವರೆಗೂ ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಬಳಕೆಯಲ್ಲಿದ್ದ ತಮಿಳು, ಮರಾಠಿ, ಹಿಂದೂಸ್ಥಾನೀ ಇತ್ಯಾದಿ ಭಾಷೆಗಳು ಹಿಂದಕ್ಕೆ ಸರಿದು ಇಂದಿನ ಕರ್ಣಾಟಕದ ಮೇರೆಯೊಳಗೆ ಅಡಗಿದ್ದ ಕನ್ನಡ ಸೀಮೆಗಳಲ್ಲಿ ಬರೇ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳು ಮಾತ್ರ ರೂಢಿಯಲ್ಲಿರುವಂತಾದುವು. ಸರಕಾರದ ಆಶ್ರಯದಲ್ಲಿ ಹೊರಡುತಿದ್ದ ಕೆಲವು ಇಂಗ್ಲಿಷ್ ಪತ್ರಿಕೆಗಳಲ್ಲದೆ ಕನ್ನಡದಲ್ಲೂ ವಾರ್ತಾಪತ್ರಿಕೆಗಳು ಕ್ರಿ.ಶ. 1860 ರಿಂದ ಹೊರಡಲಾರಂಭವಾದುವು.

ಈ ರೀತಿ ಕಳೆದ ಶತಮಾನದ ಅಂತ್ಯದೊಳಗಾಗಿ ವಿವಿಧ ರೀತಿ ಕನ್ನಡ ಭಾಷೆಯ ಮತ್ತು ಸಾಹಿತ್ಯದ ಬೆಳವಣಿಗೆಯಾಯಿತು. ಅದರೊಡನೆಯೇ ಆಧುನಿಕ ಕನ್ನಡಗದ್ಯ ಮತ್ತು ಸಾಹಿತ್ಯದ ನಿರ್ಮಾಣಕ್ಕೂ ಪ್ರಾರಂಭವಾಗಿ ಆಂಗ್ಲ ವಿದ್ಯೆಯನ್ನು ಪಡೆದ ಸಾಹಿತಿಗಳು ಹೊಸ ದೃಷ್ಟಿಯಿಂದ ಗ್ರಂಥಗಳನ್ನು ರಚಿಸಲು ತೊಡಗಿದರು. ಈ ವರೆಗೆ ಹೇಳಲ್ಪಟ್ಟ ಕನ್ನಡ ಪುಸ್ತಕಗಳ ಜತೆಗೆ 1892 ರಲ್ಲಿ ರಾಮಾನುಜಯ್ಯಂಗಾರ್ಯನು ಪ್ರಾಚೀನ ಕನ್ನಡ ಕವಿಗಳ ಉತ್ತಮ ಪದ್ಯಭಾಗಗಳನ್ನು ಸಂಗ್ರಹಿಸಿ ಪ್ರತಿ ತಿಂಗಳೂ "ಕರ್ಣಾಟಕ ಕಾವ್ಯಮಂಜರಿ" ಎಂಬ ನವೀನ ಪತ್ರಿಕೆಯನ್ನು ಆರೆಂಟು ವರ್ಷಗಳ ಕಾಲ ನಡೆಸಿದನು. ಬಿ. ಮಲ್ಲಪ್ಪನು ಬಾಣನ "ಕಾದಂಬರಿ"ಯನ್ನು 417 ಪುಟ

* ಕನ್ನಡ ಸಾಹಿತ್ಯ ಪರಿಷತ್ತು ...



ಗಳಲ್ಲಿ ಭಾಷಾಂತರಿಸಿ ಪ್ರಕಟಿಸಿದನು. ಬೆಳಗಾವಿಯ ಹೆಚ್. ಗೋವಿಂದ ಜೋಷಿಯು "ಸಾಮತಿ ಸಂಗ್ರಹ" ಎಂಬುದಾಗಿ ಕನ್ನಡ ಗಾದೆ ಮತ್ತು ನುಡಿಗಟ್ಟುಗಳ ಸಂಕಲನ ವನ್ನು 1894 ರಲ್ಲಿ ಪ್ರಕಟಿಸಿದನು. ಬೊಂಬಾಯಿ ಸರಕಾರವ ಆಶ್ರಯವಲ್ಲಿ ಕಾಶೀ ನಾಥ ಪಥಕ್ ಇವನ ಸಂಶೋಧನಾ ಲೇಖನಗಳು ಪ್ರಕಟವಾಗುತ್ತಲೇ ಇದ್ದುವು. ದೋಂಡೊ ನರಸಿಂಹರಾಯನ "ನುಡಿಗಟ್ಟು" ಎರಡನೇ ಬಾರಿಗೆ ಕ್ರಿ.ಶ. 1894 ರಲ್ಲಿ ಮುದ್ರಣವಾಯಿತು. ಕಾರವಾರದ ಶ್ರೀರಾಮ್ ಅನಂತ್ ಇವನ ಕನ್ನಡ ವ್ಯಾಕರಣ ವೊಂದು 1899 ರಲ್ಲಿ ಪ್ರಕಟವಾಯಿತು.

ಕಳೆದ ಶತಮಾನದ ಮಧ್ಯಭಾಗದಲ್ಲಿ ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ "A Grammatical Vocabulary" ಇದನ್ನು ಎಂ. ರಾಮಸ್ವಾಮಿ ಇವನು ಕ್ರಿ. ಶ. 1858ರಲ್ಲಿ ಮೊದಲನೇ ಬಾರಿಗೆ ರಚಿಸಿದ ದೇಶೀಯ ವಿದ್ವಾಂಸನಾಗಿದ್ದನು. ಅವನನಂತರ 1895 ರ ವರೆಗೂ ಕನ್ನಡ 'ನುಡಿಗಟ್ಟು' ಮತ್ತು 'ಶಬ್ದಮಂಜರಿ' ಇತ್ಯಾದಿಗಳನ್ನು ಬರೆದ ಉಳ್ಳಾಲ ನರಸಿಂಹರಾಯನ ವರೆಗೂ ಹಲವು ಪಂಡಿತರು ಕನ್ನಡ ಸಾಹಿತ್ಯಪ್ರಚಾರದ ಬಗ್ಗೆ ವಿವಿಧರೀತಿಯ ವಿಚಾರಪ್ರಸಂಗಗಳನ್ನು ನಡೆಸಿ ದ್ದಾರೆ.

**೧೭. ವೃತ್ತಾಂತ ಪತ್ರಿಕೆಗಳು ಜನರನ್ನು ಜಾಗೃತರಾಗಿಸಿದುವು :—**

ಪಾಶ್ಚಾತ್ಯ ವಿದ್ಯಾತಜ್ಞರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನನುಸರಿಸಿ ಕನ್ನಡಿಗರು ಕಳೆದ ಶತಮಾನದ ಮಧ್ಯದಲ್ಲಿ ವರ್ತಮಾನ ಪತ್ರಿಕೆಗಳನ್ನು ನಡೆಸಲುದ್ಯುಕ್ತರಾದರು. ಅಷ್ಟರವರೆಗೆ ಹಳೇ ಮೈಸೂರು ರಾಜ್ಯಸರಕಾರವು ನಡೆಸುತಿದ್ದ "ಕರ್ಣಾಟಕ ವಾಗ್ವಿ ಧಾಯಿನಿ" ಯೆಂಬ ಸಾಹಿತ್ಯ ಪತ್ರಿಕೆಯಲ್ಲಿ ಪ್ರತಿ ತಿಂಗಳೂ ಮುಖ್ಯವಾರ್ತೆಗಳೂ ದೇಶೀಯ ಪಂಡಿತರ ಲೇಖನಗಳೂ ಪ್ರಕಟವಾಗುತಿದ್ದುವು.

ಕ್ರಿ.ಶ. 1865 ರಲ್ಲಿ "ಕರ್ಣಾಟಕ ಪ್ರಕಾಶಿಕಾ" ಪತ್ರಿಕೆಯು ಟಿ. ಸಿ. ಶ್ರೀನಿ-ವಾಸಾಚಾರ್ಯನ ಸಂಪಾದಕತ್ವದಲ್ಲಿ ನಡೆಸಲ್ಪಡುತಿದ್ದಿತು. ಇದರೊಡನೆಯೇ ನಾಡಿನ ಬೇರೆ ಬೇರೆ ಕೇಂದ್ರಗಳಲ್ಲಿ ದೇಶೀಯರಿಂದಲೇ ನಡೆಸಲ್ಪಡುತಿದ್ದ ಚಿಕ್ಕ ಮಾಸಪತ್ರಿಕೆ ಗಳು ಅಲ್ಲಲ್ಲಿ ಹುಟ್ಟಿದುವು. ಇವುಗಳ ಪೈಕಿ ಬೆಳಗಾವಿಯ ಜಿಲ್ಲೆಯ ವಿದ್ಯಾಖಾತೆ ಯವರು ಪ್ರಕಟಿಸುತಿದ್ದ "Canarese School Paper" * ಎಂಬುದು ಬಹು ಉತ್ತಮ ತರಗತಿಯದಾಗಿತ್ತು. 1867 ರಿಂದ ಪ್ರಾರಂಭವಾದ ಈ ಮಾಸ ಪತ್ರಿಕೆಯು 16 ಯಾ 24 ಪುಟಗಳ ಕಿರುಹೊತ್ತಗೆಯ ರೂಪದಲ್ಲಿ ನಾಲ್ಕಾರು ವರ್ಷ ಗಳ ಕಾಲ ನಡೆಯಿತು. ಆಗ "ಬೆಳಗಾವಿ ಸಮಾಚಾರ" ನಡೆಸುತಿದ್ದ ಬಿ. ಹರಿಹನುಮಂತ ಮತ್ತು ರಾ. ಪ್ರಭಾಕರ ಇವರೇ ಈ ಶಾಲಾಪತ್ರಿಕೆಯ ಸಂಪಾದಕರೂ ಆಗಿದ್ದರು.

ಪಾಶ್ಚಾತ್ಯ ಕ್ರೈಸ್ತಮತ ಪ್ರಚಾರಕರು 1840 ರಿಂದ ಮೊದಲ್ಗೊಂಡು ಮಂಗ ಳೂರು, ಕಾರವಾರ, ಮೈಸೂರು ಮತ್ತು ಬಳ್ಳಾರಿ ಕೇಂದ್ರಗಳಿಂದ ಹೊರಡಿಸುತಿದ್ದ ಚಿಕ್ಕ

* ಈ ಪತ್ರಿಕೆಯ ಮೇಲ್ಪುಟಗಳ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಪತ್ರಿಕೆಗಳು 1865 ರ ಕಾಲಕ್ಕೆ ದೇಶೀಯ ವಿದ್ವಾಂಸರ ಸಂಪಾದಕತ್ವದಲ್ಲಿ ಪ್ರಕಟವಾಗಲಾರಂಭವಾದುವು. ಇಂಥಾ ಪತ್ರಿಕೆಗಳಲ್ಲಿ ಮೈಸೂರು ಅರಸರ ಆಶ್ರಯದಲ್ಲಿ ಹೊರಡುತಿದ್ದ "ವೃತ್ತಾಂತ ಬೋಧಿನಿ"ಯು ಒಂದಾಗಿತ್ತು.* ಸುಮಾರು 1857 ರಿಂದ ಇದು ಹಳೇ ಮೈಸೂರು ರಾಜ್ಯದಲ್ಲಿ ತುಂಬಾ ಪ್ರಚಾರವಿದ್ದ ಪತ್ರಿಕೆಯಾಗಿತ್ತು. ಇದರನಂತರ 1867ರಲ್ಲಿ ಮೈಸೂರಿನಿಂದ "ವೃತ್ತಾಂತ ಪತ್ರಿಕಾ" ಮತ್ತು 1868ರಿಂದ ಮಂಗಳೂರಿನಿಂದ "ಸುಬೋಧಿನಿ" ಪತ್ರಿಕೆಗಳೂ ಐರೋಪ್ಯಾ ವಿದ್ವಾಂಸರ ಹಿನ್ನೆಲೆಯಲ್ಲಿ ಮತ್ತು ದೇಶೀಯರ ಸಂಪಾದಕತ್ವದಲ್ಲಿ ಹೊರಟುವು.

1888 ರಲ್ಲಿ ಬಿ. ನರಸಿಂಹರಾಯನು "ಸೂರ್ಯೋದಯ ಪ್ರಕಾಶಿಕಾ" ಎಂಬ ಕನ್ನಡ ದಿನ ಪತ್ರಿಕೆಯನ್ನು ಮೊದಲಬಾರಿಗೆ ಹೊರಡಿಸಿದನು. ಇಷ್ಟರಲ್ಲಿ ಇನ್ನೂ ಕೆಲವು ಸಣ್ಣ ಪುಟ್ಟ ಪತ್ರಿಕೆಗಳು ಇತರ ಪ್ರಮುಖ ಕೇಂದ್ರಗಳಿಂದ ಹೊರಡಲನುವಾದುವು. ಇವುಗಳಲ್ಲೆಲ್ಲಾ ಉತ್ತಮ ಲೇಖನಗಳು ಮಾತ್ರವಲ್ಲದೆ ಸರಕಾರೀ ಪ್ರಕಟಣೆಗಳೂ, ಜಾಹೀರಾತುಗಳೂ ತುಂಬಿರುತಿದ್ದುವು. ಈ ಪತ್ರಿಕೆಗಳನ್ನು ಸರಕಾರದವರು ಪೋಷಿಸುತಿದ್ದರೆಂಬುದಕ್ಕೂ ಅಂದಿನ ಜಾಹೀರಾತುಗಳು ಎಂತಿರುತಿದ್ದುವೆಂಬುದಕ್ಕೂ ನಿದರ್ಶನವಾಗಿ 1860 ರ "ವೃತ್ತಾಂತ ಬೋಧಿನಿ"ಯಿಂದ ಈ ಕೆಳಗಿನ ಪಂಕ್ತಿಗಳನ್ನೆತ್ತಿ ಕೊಡಲಾಗಿದೆ :—

> "ಮೈಸೂರು ಸಂಸ್ಥಾನದ ನೌಕರ ಪೇಷಾ ಜನಗಳ ಬಹಲಿ ಬರತರಫು ರಜಾ ವಗೈರೆ ಸವಾರ್ ಕಚ್ಚೇರಿ ಇಲಾಖೆ–ಸನ್ 1860 ನೆಯ ಯಿಸವಿ ಜನವರಿ ೧೮ ತಾ. ೬ ನೆಯ ರಿಜಮೆಂಟು.–ಸರ್ ಜಫರ್‌ದಾರರು ಬಾಕರು ದೀಖಾನರು, ಲವಾಜಮಾಭರತಿಯ ಬಗ್ಗೆ ರಿಸಾಲ್‌ದಾರಿ ಕೆಲಸಕ್ಕೆ ಬಡತಿ ಮಾಡಲ್ಪಟ್ಟರು.
>
> "ಸದರ ಹೂ ಸರ್ ಜಫರ್‌ದಾರಿ ಕೆಲಸಕ್ಕೆ ಜಮಾದಾರ್ ಕಾದರ್ ಖಾನರು ನಿಯಮಿಸಲ್ಪಟ್ಟರು."
>
> "..........ಚಂದಾದಾರರಿಗೆ ಸುಲಭವಾಗುವದಕ್ಕಾಗಿ, ಕಮಿಷನರು ಸಾಹೇಬ್ ಬಹದೂರ್‌ರವರು ೧ ವರುಷದವರಿಗೂ ಈ ಮೈಸೂರು ಸೀಮೆಯಲಿ ಯಾವ ಸ್ಥಳಕ್ಕೆ ಈ ಪತ್ರಿಕೆಯನ್ನು ಕಳುಹಿಸಿದಾಗ್ಯೂ ಟಪಾಲು ಹಾಸಲು ಮಾಫಿ ಮಾಡಿ ಇದ್ದಾರೆ..........."

ಹೀಗೆ 1860 ರಿಂದ 40 ವರ್ಷಗಳ ಅವಧಿಯಲ್ಲಿ ವಾರ್ತಾಪತ್ರಿಕೆಗಳ ಸಂಖ್ಯೆ ಹೆಚ್ಚಿದುವು. ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಕಾರವಾರ ಬೆಳಗಾವಿ, ಮಂಗಳೂರು, ಬಳ್ಳಾರಿ ಇತ್ಯಾದಿ ಸ್ಥಳಗಳಲ್ಲಿ ಆಯಾ ಸ್ಥಳಗಳಿಗೆ ತಕ್ಕುದಾದ ಚಿಕ್ಕ ಪತ್ರಿಕೆಗಳು ದೇಶೀಯರ ಸಂಪಾದಕತ್ವದಲ್ಲಿಯೇ ಹುಟ್ಟಿ ಪ್ರಚಾರವಾದುವು. ಇವುಗಳ ಮುದ್ರಣಕ್ಕೆ ಉಪಯೋಗಿಸುತಿದ್ದ ಕಾಗದವೂ ಭಾಷಾ ಶೈಲಿಯೂ ವಾರ್ತೆಗಳನ್ನು ಪ್ರಕಟಿಸುವ

* ಈ "ವೃತ್ತಾಂತ ಬೋಧಿನಿ"ಯ ಮೊದಲ ಪುಟದ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಕ್ರಮವೂ ಕ್ರಿ.ಶ. 1860 ರಿಂದ 1895 ರ ವರೆಗೆ ಎಷ್ಟೋ ಸುಧಾರಿತ ಸ್ಥಿತಿಗೆ ತಲಪಿ ಪತ್ರಿಕಾ ವ್ಯವಸಾಯವು ಕನ್ನಡನಾಡಿನಲ್ಲಿ ನೆಲೆವೂರಿದಂತೆ ತೋರಿತು.

**೧೮. ಕೃಷ್ಣಮಾಚಾರ್ಯನ "ಹೊಸಗನ್ನಡ ನುಡಿ ವ್ಯಾಕರಣ" :—**

ಶ್ರೀರಂಗಪಟ್ಣ ಕೃಷ್ಣಮಾಚಾರ್ಯನು ಉಚ್ಚದರ್ಜೆಯ ಆಂಗ್ಲ ವಿದ್ಯೆಯನ್ನು ಪಡೆದ ಕನ್ನಡಿಗರಲ್ಲಿ ಮೊದಲನೆಯವನೆಂದೆನ್ನಬಹುದು. ಇವನು ಮದ್ರಾಸಿನ Fort St. George College of Indian Languages ಇಲ್ಲಿ ಇಂಗ್ಲಿಷ್, ಸಂಸ್ಕೃತ, ತಮಿಳು ಮತ್ತು ಪರ್ಷಿಯನ್ ಭಾಷೆಗಳನ್ನು ಶಾಸ್ತ್ರೀಯವಾಗಿ ಕಲಿತು ಆನಂತರ ವಕೀಲ ವೃತ್ತಿಗೂ ಓದಿದ್ದನು. ಕ್ರಿ.ಶ. 1810 ರ ಕಾಲದಲ್ಲಿ ಪ್ರಸಿದ್ಧ ಐರೋಪ್ಯಾ ವಿದ್ವಾಂಸರಾದ William Mckerrel ಮತ್ತು William Reeve ಇವರು ಮದ್ರಾಸಿನಲ್ಲಿ ಕನ್ನಡ ವ್ಯಾಕರಣ ಮತ್ತು ಅರ್ಥಕೋಶಗಳನ್ನು ಬರೆಯುತಿದ್ದಾಗ ಈ ಕೃಷ್ಣಮಾಚಾರ್ಯನು ಅವರಿಗೆ ವಿಶೇಷ ಸಹಾಯಕನಾಗಿದ್ದನು.

ಕನ್ನಡ ವ್ಯಾಕರಣವನ್ನು ಆಧುನಿಕ ರೀತಿಯಲ್ಲಿ ಬರೆದ ದೇಶೀಯರಲ್ಲಿ ಈ ಕೃಷ್ಣಮಾಚಾರ್ಯನೇ ಮೊದಲಿಗನು. ಆದರೆ ಇವನಿಗೆ ಅದಕ್ಕೆ ಹಿನ್ನೆಲೆಯನ್ನು ಕಲ್ಪಿಸಿದವರು ಮೇಲಿನ ಪಾಶ್ಚಾತ್ಯವಿದ್ವಾಂಸರು! 1820 ರಲ್ಲಿ ಇವನು "ಧಾತು ಮಂಜರಿ" ಯನ್ನು ಬರೆದು ಅನಂತರ 1830 ರ ಕಾಲದಲ್ಲಿ "ಹೊಸಗನ್ನಡನುಡಿ ವ್ಯಾಕರಣ"* ಇದನ್ನು ಬರೆದದ್ದು ಕ್ರಿ.ಶ. 1838 ರಲ್ಲಿ ಮದ್ರಾಸು ಸರಕಾರ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾಯಿತು. 216 folio ಪುಟಗಳ ಈ ವ್ಯಾಕರಣಗ್ರಂಥದ ಮೊದಲ ಪುಟದಲ್ಲಿ ಹೀಗೆ ಹೇಳಿದೆ :--

> "ಚೆನ್ನಪಟ್ನ (ಮದ್ರಾಸು) ದಲ್ಲಿರುವ ಸದರದಾಲತ್ತು ಕೋರ್ಟಿನಲ್ಲಿ ಪ್ಲೀಡರಾಗಿರುವಂಥಾ ಶ್ರೀರಂಗಪಟ್ಣದ ಕೃಷ್ಣಮಾಚಾರ್ಯರು ಮಾಡಿದಂಥಾ ಹೊಸಗನ್ನಡ ನುಡಿಗನ್ನಡಿ."

ಈ ಗ್ರಂಥರಚನೆಗೆ ಪಾಶ್ಚಾತ್ಯರು ಆಗ ಅನುಸರಿಸಿದ್ದ ಸಂಭಾಷಣೆಯ ಶೈಲಿಯನ್ನೇ ಉಪಯೋಗಿಸಿದಲ್ಲದೆ W. Mckerrel ಮತ್ತು William Carey ಇವರು ಬರೆದ ರೀತಿಯನ್ನೇ ಹೋಲುತ್ತದೆ. ಇದರ ಪ್ರಥಮ ಮುದ್ರಣವು ದೊರಗಾವ ಕಾಗದದ ಮೇಲೆ ಹಳೇ ನಮೂನೆಯ ಅಚ್ಚುಮೊಳೆಗಳಿಂದ ಮುದ್ರಣವಾಗಿದೆ. ಇವನ ಪ್ರಶ್ನೋತ್ತರ ಶೈಲಿಯು ಈ ರೀತಿ ಹರಿದಿದೆ :—

> "ಕೃತ್ಪ್ರತ್ಯಯದಲ್ಲೇನು ಹೇಳಲ್ಪಡುತ್ತದೆ ?
>
> "ಕೃತ್ಪ್ರತ್ಯಯಗಳ ಸ್ವರೂಪವೂ ಅವುಗಳ ಅರ್ಥಗಳೂ ಬರುವಾಗ ಪ್ರಕೃತಿ ಪ್ರತ್ಯಯಗಳಿಗೆ ಬರುವ ಲೋಪಾಗಮಾದೇಶಗಳೂ ಹೇಳಲ್ಪಡುತ್ತವೆ.
>
> "ಕೃತ್ಪ್ರತ್ಯಯಗಳು ಯಾವವರ ಮೇಲೆ ಬರುತ್ತವೆ ?
>
> "ಧಾತುಗಳ ಮೇಲೆ ಬರುತ್ತವೆ.

---

* ಈ ವ್ಯಾಕರಣ ಗ್ರಂಥದ ಒಂದು ಪುಟದ ಚಿತ್ರವನ್ನು ಬೇರೆಡೆ ಕೊಟ್ಟದೆ.

"ಆ ಪ್ರತ್ಯಯಗಳು ಯಾವರ್ಥದಲ್ಲಿ ಬರುತ್ತವೆ?

"ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣಗಳೆಂಬ ಆರು ಕಾರಕಾರ್ಥದಲ್ಲಿಯೂ ಭಾವಾರ್ಥದಲ್ಲಿಯೂ ಬರುತ್ತವೆ."

ಹೀಗೆಯೇ ಉದ್ದಕ್ಕೂ ಪ್ರಸ್ತಾಪಿಸಲಾಗಿದೆ. ಈ ವ್ಯಾಕರಣ ಗ್ರಂಥದ ಎರಡನೇ ಮುದ್ರಣವು ಕ್ರಿ.ಶ. 1883 ರಲ್ಲಿ ಮಂಗಳೂರು ಬಾಸೆಲ್ ಮಿಷನ್ ಛಾಪಖಾನೆಯಲ್ಲಾಯಿತು. ಕೃಷ್ಣಮಾಚಾರ್ಯನ ಈ ವ್ಯಾಕರಣವು ಕಳೆದ ಶತಮಾನದಲ್ಲಿ ಭಾಷಾಶಾಸ್ತ್ರಜ್ಞರಿಗೆ ವಿಶೇಷ ಪ್ರಯೋಜನವಾಗಿತ್ತು. ಅವನ ಪಾಂಡಿತ್ಯವನ್ನು ಕುರಿತು ಕನ್ನಡ ಭಾಷೆಯಲ್ಲಿ ಪ್ರಪ್ರಥಮ ನಿಘಂಟುಕಾರನಾದ William Reeve ಇವನು ಹೀಗೆ ಹೇಳಿದ್ದಾನೆ;—

"This respectable individual is decidedly the best informed and the most correct Kannada scholar the Author has ever met with... ."

## ೧೯. ಕೃಷ್ಣಮಾಚಾರ್ಯನಿಂದ ನರಸಿಂಹಾಚಾರ್ಯನ ವರೆಗೆ :—

ಕ್ರಿ.ಶ. 19 ನೇ ಶತಮಾನದ ಪ್ರಾರಂಭದಲ್ಲಿ ಇದ್ದ ಕನ್ನಡಿಗ ಘನ ವಿದ್ವಾಂಸನು ಈ ಶ್ರೀರಂಗಪಟ್ಟ ಕೃಷ್ಣಮಾಚಾರ್ಯನು, William Mckerrel ಮತ್ತು William Reeve ಇವರಂಥಾ ಪ್ರತಿಭಾವಂತ ಪಾಶ್ಚಾತ್ಯ ವಿದ್ವಾಂಸರ ಪ್ರಶಂಸೆಗೆ ಪಾತ್ರನಾದ ಇವನು ತನ್ನ ವ್ಯಾಕರಣ ಮತ್ತು 'ಶಬ್ದ ಮಂಜರಿ' ಗಳನ್ನು 1830 ರಲ್ಲಿ ಬರೆದು ಕಿರಿಯ ಸಾಹಿತಿಗಳಿಗೆ ಆಧುನಿಕ ರೀತಿಯಲ್ಲಿ ಗ್ರಂಥಗಳನ್ನು ಬರೆಯಲು ಮಾರ್ಗದರ್ಶಕನಾದನು. ಇದೇ ರೀತಿ ಅಂದಿನ ನೂರಾರು ಐರೋಪ್ಯಾ ಸಾಹಿತಿಗಳ ಆದರ್ಶವನ್ನನುಸರಿಸಿ ದೇಶೀಯ ಪಂಡಿತರು ಕನ್ನಡ ಸಾಹಿತ್ಯದ ಏಳಿಗೆಗಾಗಿ ದುಡಿಯಲುನುವಾದರು. ಸಂಶೋಧನೆ, ಪರಿಶೋಧನೆ, ಅನ್ವೇಷಣೆಗಳ ಕಾರ್ಯಕ್ಕೆ ಇವರನ್ನು ಇಳಿಸಿದವರು ಕಳೆದ ಶತಮಾನದಲ್ಲಿದ್ದ ಪಾಶ್ಚಾತ್ಯ ಪಂಡಿತರು; ಅಂತಾಗದೇ ಹೋಗಿದ್ದರೆ ಪರಿಸ್ಥಿತಿಯು ಇಂದು ತುಂಬಾ ನಿರಾಶಾದಾಯಕವಾಗಿರುತಿತ್ತು.

ರಾ. ನರಸಿಂಹಾಚಾರ್ಯ ಮತ್ತು ಎಸ್. ಜಿ. ನರಸಿಂಹಾಚಾರ್ಯ ಇವರು ಜತೆಗೂಡಿ ರಚಿಸಿದ 'ಕರ್ಣಾಟಕ ಕವಿಚರಿತ್ರೆ'ಯ ಒಂದನೇ ಭಾಗವು ಪ್ರಕಟವಾದಾಗ ಕನ್ನಡ ಸಾಹಿತ್ಯದ ಆಧಿಕ್ಯವೆಷ್ಟೆಂಬುದರ ಬಗ್ಗೆ ಕನ್ನಡಿಗರಿಗೆ ತಿಳಿಯಬಂತು. ಇಷ್ಟರಲ್ಲಿ ಈ ದೇಶದ ಎಲ್ಲಾ ಸಂಸ್ಕೃತ ಕಾವ್ಯ ಮತ್ತು ಶಾಸ್ತ್ರ ಗ್ರಂಥಗಳೂ ಇತರ ಪ್ರಾಂತೀಯ ಭಾಷೆಗಳ ಕೆಲವು ಪ್ರಧಾನ ಗ್ರಂಥಗಳೂ ಯೂರೋಪಿನ ಭಾಷೆಗಳಿಗಿಳಿಸಲ್ಪಟ್ಟು ಎಲ್ಲೆಡೆಯೂ ಪ್ರಚಾರವಾಗಿದ್ದುವು. ಕನ್ನಡದಲ್ಲಿ ಆ ವರೆಗೆ ಕೆಲವೇ ಗ್ರಂಥಗಳು ಐರೋಪ್ಯಾ ವಿದ್ವಾಂಸರ ವ್ಯಾಸಂಗಕ್ಕೊಳಗಾಗಿದ್ದುವು. ಆ ಕಾರಣದಿಂದ John F. Fleet ಇವನು "ಕರ್ನಾಟಕ ಕವಿಚರಿತ್ರೆ"ಯ ಮೊದಲ ಭಾಗವು ಪ್ರಕಟವಾದಾಗ ಅದನ್ನು Indian Antiquary ಪತ್ರಿಕೆಯಲ್ಲಿ ವಿಮರ್ಶಿಸುತ್ತಾ ಈ ರೀತಿಯಾಗಿ ಹೇಳಿದನು :—

"... We would ask the authors to bear in mind that there are in Europe many scholars and the number of them is always increasing—who are greatly interested in the vernaculars of India, but who do not themselves read those vernaculars, and to whom therefore, books such as the present one must remain sealed books...We would express the hope that R. Narasimhachar and his collaborator may see their way to giving us, some day an English epitome of their present volume, and of those which, we trust, they will bring out in succession."

ಇದರಿಂದ ಪಾಶ್ಚಾತ್ಯರು ಈ ದೇಶದ ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಅದೆಷ್ಟು ನಿಷ್ಠೆಯಿಂದ ದುಡಿದರೆಂದೂ ಅದೆಷ್ಟು ಶ್ರದ್ಧೆಯಿಂದ ತಾವು ಸಾಹಿತ್ಯಾನ್ವೇಷಣೆಯನ್ನು ಈ ದೇಶದಲ್ಲಿ ಎಸಗಿದರೆಂದೂ ವ್ಯಕ್ತವಾಗುತ್ತದೆ. ಶ್ರೀರಂಗಪಟ್ಟ ಕೃಷ್ಣಮಾಚಾರ್ಯನು ಹೇಗೋ ಹಾಗೆಯೇ ಕಳೆದ ಶತಮಾನದ ಅಂತ್ಯದಲ್ಲಿದ್ದ ರಾ. ನರಸಿಂಹಾಚಾರ್ಯನೇ ಮೊದಲ್ಗೊಂಡು ಇದ್ದ ಕೆಲವು ಕನ್ನಡಿಗ ಸಾಹಿತ್ಯಾಭ್ಯಾಸಿಗಳು ಐರೋಪ್ಯಾ ವಿದ್ವಾಂಸರ ಶಿಷ್ಯರಾಗಿ ಅವರ ಸಲಹೆಯಂತೆ ಅವರ ಮೇಲ್ಪಂಕ್ತಿಯನ್ನನುಸರಿಸಿ ಹೊಸ ಸಾಹಿತ್ಯ ವನ್ನು ಸೃಷ್ಟಿಸಿದರು. ಶ್ರೀರಂಗಪಟ್ಟ ಕೃಷ್ಣಮಾಚಾರ್ಯನಿಗೆ William Reeve ಮತ್ತು John Mckerrel ಇವರು ಹೇಗೆ ಸ್ಫೂರ್ತಿಯಿತ್ತರೋ ಅದೇ ರೀತಿ ಸುಮಾರು ಎಂಭತ್ತುವರ್ಷಗಳನಂತರ ರಾ. ನರಸಿಂಹಾಚಾರ್ಯ ಮತ್ತಿತರರಿಗೆ ಅಂದಿನ ಐರೋಪ್ಯಾ ವಿದ್ವಾಂಸರು ವಿಶೇಷ ಪ್ರೋತ್ಸಾಹವನ್ನಿತ್ತು ಅವರನ್ನು ಮುಂದೊಯ್ದರು.

ಹೀಗಾಗಿ ಸುಮಾರು 1890 ರಿಂದೀಚೆಗಿನ ಸಾಹಿತ್ಯವು ಹೆಚ್ಚಾಗಿ ಕನ್ನಡಿಗ ರಿಂದಲೇ ಸೃಷ್ಟಿಸಲ್ಪಟ್ಟಿತ್ತಾದರೂ ಅದರ ಶೈಲಿ. ರೂಪು. ವಿಧಾನ. ಭಾವ. ಭಂಗಿ ಯೆಲ್ಲವೂ ಪಾಶ್ಚಾತ್ಯರದೇ ಆಗಿದೆ. ಈ ದೃಷ್ಟಿಯಿಂದ ಕಳೆದ ಶತಮಾನದ ಅಂತ್ಯದಲ್ಲಿ ಕನ್ನಡ ಸಾಹಿತ್ಯಾಭ್ಯಾಸಿಗಳ ಹಳೇ ಪರಂಪರೆಯು ಕೊನೆಗೊಂಡು ಹೊಸ ಪೀಳಿಗೆ ಯೊಂದರ ಉದಯವಾಗುತ್ತಲಿತ್ತು. ಆಂಗ್ಲ ವಿದ್ಯಾಪಾರಂಗತರಾದ ಅವರು ಹೊಸ ಗನ್ನಡ ಸಾಹಿತ್ಯಕ್ಷೇತ್ರದಲ್ಲಿ ಹಿರಿಯರಾಗಿ ವಿರಾಜಿಸಿದರು. ಅವರಲ್ಲಿ Rice, Zeighler ಮೊದಲಾದವರ ಆಶ್ರಯದಲ್ಲಿ ದುಡಿದ ರಾಮಾನುಜಯ್ಯಂಗಾರ್, ನರ-ಸಿಂಹಾಚಾರ್ಯ. 'ಡೆಪ್ಯುಟಿ' ಚೆನ್ನಬಸಪ್ಪ. ಗಂಗಾಧರ ಟುರಮುರಿ ಇವರನ್ನು ಮೊದ ಲ್ಗೊಂಡು ಬಿ. ವೆಂಕಟಾಚಾರ್ಯ, ಹೆಚ್. ನಂಜುಂಡಯ್ಯ. ಎಂ. ಎಸ್. ಪುಟ್ಟಣ್ಣ, ತಾರಾನಾಥ, ಗಗನನಾಥ. ದ. ಕೃ. ಭಾರದ್ವಾಜ. ಆಲೂರು ವೆಂಕಟರಾಯ. ಬೆನಗಲ್ ರಾಮರಾಯ, ಉಳ್ಳಾಲ ಮಂಗೇಶರಾಯ. ಪಂಜೇ ಮಂಗೇಶರಾಯ. ಚ. ವಾಸ ದೇವಯ್ಯ. ಬಿ. ಎಂ. ಶ್ರೀಕಂಠಯ್ಯ, ಗೋವಿಂದ ಪೈ ಮೊದಲಾದವರು ಆಗ ತೀರಾ ಯುವಕರಾಗಿದ್ದು ಕನ್ನಡ ಕಾದಂಬರಿ. ಕವಿತೆ. ಶಾಲಾ ವ್ಯಾಕರಣ. ಕವಿಚರಿತ್ರೆ. ಕವಿ ಕಾಲ ವಿಚಾರ ಇತ್ಯಾದಿಗಳ ಬಗೆಯಾಗಿ ತಾವು ಪಡೆದಿದ್ದ ಆಂಗ್ಲ ವಿದ್ಯಾವಾಙ್ಮಯದ ಪ್ರಭಾವದಿಂದ ಹೊಸ ಪ್ರಯೋಗವನ್ನು ನಡೆಸಲು ಆರಂಭಿಸಿದರು.

" ನಾಡಿನ ಪುಣ್ಯದ ಪೂರ್ವ ದಿಗಂತದಿ
ನವ ಅರುಣೋದಯ ಹೊಮ್ಮುತಿದೆ,
ಚಿರನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!
ಅಭಿನವ ಮಧು ಕೋಕಿಲ ಕಲಕಂಠದಿ
ಸ್ವರ ಸುರ ಚಾಪಗಳುಣ್ಮುತಿವೆ
ಶ್ಯಾಮಲ ಕಾನನ ಸುಮ ಸಮ್ಮೇಲದಿ
ಇಂಚರ ಸಾಸಿರ ಪೊಣ್ಮುತಿವೆ!"

[ಕು. ವೆಂ. ಪುಟ್ಟಪ್ಪ]

ಕ್ರಿ.ಶ. 19 ನೇ ಶತಮಾನದಲ್ಲಿ ಕನ್ನಡ ಸಾಹಿತ್ಯದ ಪರಿಮಿತಿ, ಬೆಳವಣಿಗೆ ಮತ್ತು ರೂಪುರೇಷೆಗಳೆಂತೆಂಬುದರ ಸಿಂಹಾವಲೋಕನವನ್ನು ಹಿಂದಿನ ಪುಟಗಳಲ್ಲಿ ಮಾಡಲಾಯಿತು. ಇನ್ನೀಗ ಕನ್ನಡ ಸಾಹಿತ್ಯಕ್ಕೆ ಐರೋಪ್ಯಾ ಸಾಹಿತಿಗಳಿಂದ ಅದೆಷ್ಟು ಸೇವೆ ಸಲ್ಲಿಸಲಾಗಿದೆಯೆಂದು ಹೇಳಲು ಪ್ರಯತ್ನಿಸಲಾಗಿದೆ.

ಕಳೆದ ಒಂದೆರಡು ಶತಮಾನಗಳ ಕಾಲದಲ್ಲಿ ದೇಶೀಯರು ಕನ್ನಡದಲ್ಲಿ ಅಥವಾ ಪರ್ಶಿಯನ್ ಭಾಷೆಯಲ್ಲಿ ಬರೆದ ಹಲವು ವಿಚಾರಗಳು ಕೇವಲ ಅಂದಿನ ಅರಸರನ್ನೂ ಪ್ರಮುಖರನ್ನೂ ಕಾಲಕ್ಕನುಗುಣವಾಗಿ ಮತ್ತು ತಮ್ಮ ಸ್ವಾರ್ಥಸಾಧನೆಗೆ ಅನುಕೂಲವಾಗುವಂತೆ ಹೊಗಳಿ ಬರೆದುದಷ್ಟೇ ಅಲ್ಲದೆ ಹೆಚ್ಚೇನೂ ತೋರುವುದಿಲ್ಲ. ಹಲವು ಸಂದರ್ಭಗಳಲ್ಲಿ ಅವರು ಕೊಟ್ಟ ಅಂಕೆಸಂಖ್ಯೆಗಳು ಸಹ ನಂಬಲು ಅಸಾಧ್ಯವಾಗಿ ಇವೆ. ಇಂದಿನ ಕಾಲದ ಮಹಾಕವಿಗಳು ಸ್ಥಳೀಯ ಪ್ರಮುಖರನ್ನು ಭೀಮನಿಗೆ, ಅರ್ಜುನನಿಗೆ ಅಥವಾ ಶ್ರೀಕೃಷ್ಣನಿಗೆ ಸಮಾನರೆಂದು ಹೇಳಿ ಬರೆದು ತಮ್ಮ ಕಾಲವನ್ನು ತಳ್ಳಿದಂತೆ ಇತ್ತೀಚೆಗೆ ಕ್ರಿ.ಶ. 18 ನೇ ಶತಮಾನದ ಒರ್ವ ಬ್ರಾಹ್ಮಣನನು ಅಂದಿನ ಮಹ್ಮದೀಯ ನಾಯಕನನ್ನು ರಾಮಚಂದ್ರನಿಗೆ ಸಮಾನನಾದವನೆಂದು ಬರೆದಿದ್ದಾನೆ. ಇಂಥಾ ಅಪಹಾಸ್ಯದ ಬರೆವಣಿಗೆಗಳನ್ನು ಒಂದೆಡೆಯಿಟ್ಟು ನಾಡಿನ ಚರಿತ್ರೆಯನ್ನು ಸಮದೂಗಿಸಲು ಪಾಶ್ಚಾತ್ಯರು ಅಂದು ಬರೆದಿಟ್ಟುವುಗಳನ್ನು ತುಲನಾತ್ಮಕವಾಗಿ ಪರಿಷ್ಕರಿಸಿ ಬೆಳಕಿಗೆ ತರಬೇಕಿದೆ.

ಬ್ರಿಟಿಷ್ ಸರಕಾರವು ಆ ಕಾರಣದಿಂದ ಎಂಬಂತೆ ಈ ದೇಶದ ವಿವಿಧ ಪ್ರಾಂತಗಳ ಚಾರಿತ್ರಿಕ ಆನ್ವೇಷಣೆಯನ್ನೆಸಗಲು ತಜ್ಞರಾದ ವಿದ್ವಾಂಸರನ್ನು ಅಲ್ಲಲ್ಲಿ ನೇಮಿಸಿದರು. ಈ ದೇಶದ ವಿದ್ಯಾಕ್ರಮವನ್ನು ಸರಿಗಟ್ಟುವ ಬಹು ದೊಡ್ಡ ಜವಾಬ್ದಾರಿಕೆಯನ್ನು ಅಂದಿನ ಕ್ರೈಸ್ತ ಗುರುಗಳ ವಶಕ್ಕೆ ಬಿಟ್ಟರು. ಅದರ ಪರಿಣಾಮವಾಗಿಯೇ ಹಲವು ಐತಿಹಾಸಿಕ ಮತ್ತು ಸಾಂಸ್ಕೃತಿಕ ಗ್ರಂಥಗಳೂ ಅವರಿಂದ ಇಂಗ್ಲಿಷ್‌ನಲ್ಲಿ ಪ್ರಕಟಿಸಲ್ಪಟ್ಟವು; ಹೊಸ ವಿದ್ಯಾ ಯೋಜನೆಗನುವಾಗಿ ಶಾಲಾ ಪಠ್ಯ ಪುಸ್ತಕಗಳನ್ನೂ ತಯಾರಿಸಿದರು. ಅವುಗಳೊಡನೆಯೇ ವ್ಯಾಕರಣ, ನಿಘಂಟುಗಳೂ ಗಣಿತ, ವಿಜ್ಞಾನ

ಕಾವ್ಯೇತಿಹಾಸ ಪುಸ್ತಕಗಳೂ ಮೇಲಿಂದ ಮೇಲೆ ಪ್ರಚಾರವಾದುವು. ಹೀಗಾಗಿ ದೇಶ ದಲ್ಲಿ ಒಂದು ಹೊಸ ಶಿಕ್ಷಣ ಕ್ರಮ ಮತ್ತು ವಿದ್ಯಾ ವಾಙ್ಮಯವು ಬೆಳಗತೊಡಗಿತು.

೨. ದಖ್ಖಣದ ಹಾಗೂ ಕರ್ಣಾಟಕದ ಭೂಪಟಗಳು :—

ಹಿಂದೂಸ್ಥಾನದ ಭೂಪಟಗಳನ್ನು ಕ್ರಿ.ಶ. 1780 ರ ಒಳಗಾಗಿಯೇ ವಿವಿಧ ರೀತಿ ಯಲ್ಲಿ ಬಿಡಿಸಿದ್ದ ಪಾಶ್ಚಾತ್ಯ ಭೌಗೋಲಿಕ ತಜ್ಞರು ಅವರ ಕಾರ್ಯಭಾರವನ್ನು ಅವಿರತ ವಾಗಿ ನಡೆಸುತ್ತಲೇ ಇದ್ದರು, ದಕ್ಷಿಣ ಹಿಂದೂಸ್ಥಾನದಲ್ಲಿ ಹೈದರಾಲಿಯು ಪ್ರಬಲನಾದ ನಂತರ ಮತ್ತು ಆವನು ಫ್ರೆಂಚರ ಸ್ನೇಹವನ್ನು ಗಳಿಸಿ ಆಂಗ್ಲೇಯರಿಗೆ ವಿರೋಧವಾಗಿ ಹೋರಾಡುತಿದ್ದಾಗ ಕುಂಪೆನೀ ಸರಕಾರದ ದೃಷ್ಟಿಯು ಹೆಚ್ಚಾಗಿ ದಖ್ಖಣದತ್ತ ಬಿತ್ತು. ಉತ್ತರ ಭಾರತದ ಬಹು ಭಾಗವನ್ನು ಅನ್ವೇಷಿಸಿ ಚಿತ್ರಿಸಿದ ಆಂಗ್ಲೇಯ ತಜ್ಞರು ದಕ್ಷಿಣ ಹಿಂದೂಸ್ಥಾನದ ಬಗ್ಗೆಯೂ ಅದೇ ಕಾತರತೆಯನ್ನು ತೋರಿಸಿದರು. ಪೋರ್ಚು ಗಲ್ಲಿನ ಭೂಗೋಳ ಶಾಸ್ತ್ರಜ್ಞನಾದ D' Anville ಇವನು ಕ್ರಿ.ಶ. 1752 ರಲ್ಲಿ ಬಿಡಿಸಿದ ಹಿಂದೂಸ್ಥಾನದ ಭೂಪಟವು ಈ ದೇಶದ ಪೂರ್ಣ ಪರಿಚಯವನ್ನು ಕೊಟ್ಟಿತು. ಅದನ್ನನುಸರಿಸಿಯೇ James Rennel ಇವನು ಕ್ರಿ.ಶ. 1781 ರಲ್ಲಿ ಬಂಗಾಳದ ಮತ್ತು 1792 ರಲ್ಲಿ ಇಡೀ ಹಿಂದೂಸ್ಥಾನದ ಭೂಪಟಗಳನ್ನು ವಿವರಣಾತ್ಮಕವಾಗಿ ಚಿತ್ರಿಸಿದನು.

ಈ ಭೂಪಟಗಳಲ್ಲಿ ದಖ್ಖಣದ ರಾಜ್ಯಗಳನ್ನೂ ಮೊದಲ ಬಾರಿಗೆ ಅಲ್ಲಲ್ಲಿ ಗುರ್ತಿಸ ಲಾಗಿತ್ತು. ಇಕ್ಕೇರಿ, ಮೈಸೂರು. ಆರ್ಕಾಟು, ಮದ್ರಾಸು. ಹೈದರಾಬಾದು, ತಿರು ವಾಂಕೂರು ಮೊದಲಾದ ರಾಜ್ಯಗಳನ್ನೂ ಸಾಧಾರಣಮಟ್ಟಿಗೆ ಅವುಗಳಲ್ಲಿ ತೋರಿಸ ಲಾಗಿತ್ತು. ಸುಮಾರು ಕ್ರಿ.ಶ. 1796 ರಲ್ಲಿ Col. Lambton ಇವನು ಹಳೆ ಮೈಸೂರು ರಾಜ್ಯ, ಕೊಡಗು ಮತ್ತು ಪಶ್ಚಿಮ ಕರಾವಳೀ ಸೀಮೆಗಳನ್ನು ಅಳೆದು ಚಿತ್ರಿಸಿದನು. ಅನಂತರ ಅದೇ ಕೆಲಸವನ್ನು ಅನುಸರಿಸಿ ದಖ್ಖಣದ ಬೇರೆ ಬೇರೆ ಪ್ರಾಂತ ಗಳ ಪಟಗಳನ್ನೂ T. Burns, W. Wood, J. Saunders ಮೊದಲಾದ ವರು ಬಿಡಿಸಿದರು. ಇವರೆಲ್ಲರ ಚಿತ್ರಣಕ್ಕೆ ತಕ್ಕ ರೂಪನ್ನು ಕ್ರಿ. ಶ. 1825 ರಲ್ಲಿ Great Trigonometrical Survey of India ಇಲಾಖೆಯ ಅಧಿ ಕಾರಿಯಾಗಿದ್ದ George Everest ಇವನು ಕೊಟ್ಟನು. ಆ ಇಪ್ಪತ್ತೈದು ವರ್ಷ ಗಳ ಅವಧಿಯಲ್ಲಿ ಅವರು ದಕ್ಷಿಣದ ಪ್ರಾಂತಗಳನ್ನು ಸಾಕಷ್ಟು ಅಳೆದುದು ಮಾತ್ರವಲ್ಲ; ಅದರೊಡನೆಯೇ ತಮಗೆ ಅಲ್ಲಲ್ಲಿ ದೊರೆತ ನಾಡಿನ ಐತಿಹಾಸಿಕ, ಸಾಹಿತ್ಯ ಮತ್ತು ವಾಸ್ತುಶಿಲ್ಪ ಅವಶೇಷಗಳನ್ನೂ ಸಂಗ್ರಹಿಸಿದರು. ಈ ಎಲ್ಲಾ ಸಂಶೋಧಕರಿಗೆ Col. Colin Mackenzie ಇವನು ಮಾಡಿದ ಪರಿಶೋಧನಾ ವಿವರಣೆಗಳು ವಿಶೇಷ ಸಹಾಯಕವಾಗಿದ್ದುವು. “Our knowledge of the literature of South India was entirely due to Col. Colin Mackenzie” ಎಂಬುದಾಗಿ ಅವನನಂತರ ದಖ್ಖಣದಲ್ಲಿ ಓಡಾಡಿದ ಪಾಶ್ಚಾತ್ಯ ಸಾಹಿತಿಗಳೂ ಸಂಶೋಧ ಕರೂ ಹೇಳಿದರು.

**೩. 'ಕೆನರೀಸ್' ಮತ್ತು 'ಕೆನರಾ' ಎಂಬ ಶಬ್ದಗಳು ಹೇಗೆ ಬಂದುವು:-**

ಕ್ರಿ.ಶ. 14 ನೇ ಶತಮಾನದಿಂತ್ತಲಾಗಿ ಈ ದೇಶಕ್ಕೆ ಬರುತ್ತಲಿದ್ದ ಪಾಶ್ಚಾತ್ಯರು ಪಶ್ಚಿಮ ಕರಾವಳಿಯಲ್ಲಿ ಬಂದಿಳಿದು ಅನಂತರ ಒಳನಾಡುಗಳಲ್ಲಿ ಹಬ್ಬಿದರು. ಹೀಗೆ ಬಂದವರು ಅಂದಿನಿಂದಲೇ ತಮ್ಮ ಪ್ರವಾಸ ವರದಿಗಳನ್ನು ಬರೆಯುತ್ತಲೇ ಇದ್ದರು; ಅವರಲ್ಲಿ ಅನೇಕರು ಕರ್ಣಾಟಕ ಮತ್ತು ಕನ್ನಡ ಭಾಷೆಯನ್ನು ಕುರಿತಾಗಿಯೂ ಪ್ರಸ್ತಾಪಿಸಿದ್ದಾರೆ. ಹಿಂದೂಸ್ಥಾನದ ವಿಷಯವಾಗಿ ಕ್ರಿ.ಶ. 1551 ರಲ್ಲಿ Fernao Lopez ಇವನು 'Hsitoria....Conquista da India' ಎಂಬುದಾಗಿ ತನ್ನ ಪೋರ್ಚುಗೀಸ್ ಭಾಷೆಯಲ್ಲಿ ಬರೆದ ಗ್ರಂಥವೇ ಮೊದಲನೇದಾಗಿದೆ. ಇದು 1833 ರಲ್ಲಿ ಲಿಸ್ಬನ್‌ನಲ್ಲಿ ಎರಡನೇ ಬಾರಿಗೆ ಮುದ್ರಣವಾಯಿತು. ಇದರಲ್ಲಿ "the language of the 'Gentoos' is Canara" ಎಂದು ಹೇಳಿದೆ. ಕನ್ನಡ ಭಾಷೆಗೆ ಐರೋಪ್ಯಾ ಬರೆವಣಿಗೆಗಳಲ್ಲಿ 'ಕೆನರಾ' ಎಂದು ಹೇಳಿದ್ದು ಇದೇ ಮೊದಲನೇ ಬಾರಿಗೆ ಎಂದು ತಿಳಿಯಲಾಗಿದೆ.

ಈ 'ಕೆನರಾ' ಮತ್ತು 'ಕೆನರೀಸ್' ಎಂಬಿವು ಪೋರ್ಚುಗೀಸರಿಂದಲೇ ಮೊದಲು ರೂಢಿಗೆ ಬಂತೆಂದೂ ಕ್ರಿ. ಶ. 15 ನೇ ಶತಮಾನದಿಂದಲೇ ಕನ್ನಡವನ್ನು 'Canarijis' ಎಂಬುದಾಗಿ ಪೋರ್ಚುಗೀಸರು ಹೇಳುತಿದ್ದರೆಂದೂ Edward P. Rice ಇವನು ಹೇಳುತ್ತಾನೆ. ಹೀಗೆ ಅವರು ಕೊಂಕಣದ ನೆಲವನ್ನೂ ಜನವನ್ನೂ ಕರೆಯುತಿದ್ದಾಗ ಇತರ ಐರೋಪ್ಯಾ ಸಾಹಿತಿಗಳು ಆ ಶಬ್ದವನ್ನು 'ಕೆನರೀಸ್' ಎಂದೂ ಕರಾವಳೀ ಕನ್ನಡ ಜಿಲ್ಲೆಗಳನ್ನು 'ಕೆನರಾ' ಎಂದೂ ಹೇಳಲಾರಂಭಿಸಿದರು. Dr. G. Buehler ಇವನು 'Canara' ಎಂಬುದನ್ನು ಜರ್ಮನ್ ಭಾಷೆಯಲ್ಲಿ 'Kanaresische' ಎಂದು ಬರೆದಿದ್ದಾನೆ.

'ಕರ್ಣಾಟಕ' ಮತ್ತು 'ಕನ್ನಡ' ಎಂಬ ಪದಗಳ ಟ-ವರ್ಗದ ಅಕ್ಷರಗಳ ಉಚ್ಚಾರಣೆಯು ಐರೋಪ್ಯಾ ಜನಕ್ಕೆ ಸರಿಯಾಗಿ ಹಿಡಿಸದಿದ್ದಂತೆ ತೋರುತ್ತದೆ. ಹೆಬ್ರ್ಯೂ ಜನಾಂಗಕ್ಕೆ ಸೇರಿದ ಜರ್ಮನ್ನರೂ ಸೆಮಿಟಿಕ್ ವರ್ಗದ ಪೂರ್ವ ಐರೋಪ್ಯಾ ಖಂಡದ ಜನರೂ good ಎಂಬುದನ್ನು 'ಗುಡ್' ಎಂದೂ that ಎಂಬುದನ್ನು 'ದೆತ್' ಎಂದೂ ಉಚ್ಚರಿಸುತ್ತಾರೆ. ಅದೇ ರೀತಿ ಡ-ಕಾರವನ್ನು ರ-ಕಾರವಾಗಿ ಹಲವು ಬಾರಿ ಉಪಯೋಗಿಸುತ್ತಾರೆ. ಅದಕ್ಕನುಗುಣವಾಗಿಯೇ 'ಕನ್ನಡ' ಎಂಬುದನ್ನು Canara ಎಂದೂ, ಕನ್ನಡಭಾಷೆಗೆ Canarese ಎಂದೂ ಧಾರವಾಡವನ್ನು Dharwar ಎಂದೂ, ಕಾರ್ವಾಡವನ್ನು Carwar ಎಂದೂ, ಬಡಗ ಇದನ್ನು Burgher ಎಂದೂ, ಕೊಡಗನ್ನು Coorg ಎಂದೂ, ಮಡಕೇರಿ ಇದನ್ನು Mercara ಎಂದೂ ಮೊದಲಾಗಿ ಬದಲಾಯಿಸಿ ಡ-ಕಾರವನ್ನು ನುಂಗಿದ್ದಾರೆ. ಕೊಡಗು ಎಂಬುದನ್ನು Coorg ಎಂದು ಯಾವಾಗ ಕರೆಯತೊಡಗಿದರೋ ಎಂದು 140 ವರ್ಷಗಳಿಗೆ ಹಿಂದಿದ್ದ Dr. H. Moegling ಇವನು ಪ್ರಶ್ನಿಸಿದ್ದಾನೆ. ಹೀಗೆ ಸುಮಾರು ಮುನ್ನೂರು ವರ್ಷಗಳ ಕಾಲ ಪಾಶ್ಚಾತ್ಯರು ಈ ಶಬ್ದಗಳನ್ನು ಹೀಗೆ ಉಪಯೋಗಿಸಿದ್ದರಿಂದ ಅಂತೆಯೇ ಅವು ಬಳಕೆಯಲ್ಲಿ ಬಂದುವು. ಆದ್ದರಿಂದ 'ಕೆನರೀಸ್'

ಎಂಬುದೇ ಒಂದು ಭಾಷೆ, 'ಕನ್ನಡ'ಯೆಂದರೆ ಮತ್ತೊಂದು ಭಾಷೆಯೆಂಬುದಾಗಿ ಹೊರನಾಡಿನ ಜನಕ್ಕೆ ಒಮ್ಮೊಮ್ಮೆ ತೋರಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.

**೪. 'ಕೆನರೀಸ್'–ಈ ಪ್ರಯೋಗವು ತಪ್ಪೆಂದು ಪಾಶ್ಚಾತ್ಯರೇ ಹೇಳಿದರು:–**

ಹೇಗೂ ಆ ಕಾಲದಲ್ಲಿ ಅಂದಿನ ಸಾಮ್ರಾಜ್ಯವಾದಿಗಳು ಬಳಕೆಗೆ ತಂದ ಆ ಶಬ್ದಗಳನ್ನೇ ನಮ್ಮ ಜನರೂ ಅಂತೆಯೇ ಉಪಯೋಗಿಸುತ್ತಾ ಅದನ್ನೇ ನೂರು ಸರ್ತಿ ಕಂಠಪಾಠ ಮಾಡುತ್ತಾ ಬಂದರು. ಹಾಗಿದ್ದರೂ ಅಂದಿನ ಕೆಲವು ಪ್ರಸಿದ್ಧ ಐರೋಪ್ಯ ವಿದ್ವಾಂಸರು ಆ ಶಬ್ದಗಳ ಪ್ರಯೋಗವು ತಪ್ಪೆಂದು ಸ್ಪಷ್ಟವಾಗಿ ಹೇಳುತ್ತಲೂ ಇದ್ದರು. ಹೀಗೆ ಹೇಳಿದವರಲ್ಲಿ Dr William Carey ಇವನೇ ಮೊದಲಿಗನು. ಕ್ರಿ. ಶ. 1818 ರ ಕಾಲದಲ್ಲಿ ಅವನು ಕನ್ನಡ ಮತ್ತು ಇತರ ಭಾರತೀಯ ಭಾಷೆಗಳನ್ನು ಅನ್ವೇಷಿಸುತ್ತಾ ಹೀಗೆ ಹೇಳಿದನು:—

> "The Karnata—erroneously called by Europeans the Canara language, is spoken through a very large extent of a country."

ಹೀಗಿದ್ದರೂ ಎಲ್ಲಾ ಇಂಗ್ಲಿಷ್ ಬರೆವಣಿಗೆಗಳಲ್ಲಿ ಈ ಅಬದ್ಧ ಶಬ್ದಗಳು ಅಂತೆಯೇ ಉಪಯೋಗಿಸಲ್ಪಡುತ್ತಾ ಬಂದುವು. ಇದೇ ವಿಷಯವಾಗಿ ನಲ್ವತ್ತು ವರ್ಷಗಳನಂತರ ದ್ರಾವಿಡ ಭಾಷಾಶಾಸ್ತ್ರಜ್ಞನಾದ Rev. Robert Caldwell ಇವನು ಇನ್ನಷ್ಟು ವಿಷದವಾಗಿ ಪ್ರಸ್ತಾಪಿಸಿ 'ಕರ್ಣಾಟಕ' ಮತ್ತು 'ಕನ್ನಡ' ಪದಗಳು ಪಾಶ್ಚಾತ್ಯರಿಂದ ತಪ್ಪಾಗಿ ಉಪಯೋಗಿಸಲ್ಪಡುತ್ತಿದೆಯೆಂದು ಈ ರೀತಿ ಹೇಳಿದನು:—

> "The word Karnataka has now got into the hands of foreigners, who have given it a new and entirely erroneous application........and it was further corrupted by the Canarese people themselves into Kannada or Canarese."

ಅನಂತರ ಸುಮಾರು ಮೂವತ್ತು ವರ್ಷಗಳು ಕಳೆದ ಮೇಲೆ ಕನ್ನಡ ಭಾಷಾಪಂಡಿತನೂ ಸಂಶೋಧಕನೂ ಆದ Benjamin L. Rice ಇವನು ಅದೇ ವಿಷಯವಾಗಿ ಹೀಗಂದನು:—

> "The corruption of Kannada by Europeans into Canara, has given rise to the term Canarese, mistakenly used by them as the name of the language."

ಅಲ್ಲದೆ ಮುಂದುವರಿದು ಈ ರೀತಿ ಹೇಳಿದನು:—

> "It would be in every way an improvement, were the local Governments and Universities, whose example is necessary in order to introduce the change, to give up the hybrid terms Kanarese, in favour of Kannada, the real name of the language, which presents no difficulty in pronunciation."

ಎಂಬುದಾಗಿ ವ್ಯಕ್ತವಾಗಿ ಹೇಳಿದ್ದರೂ ಈ 'ಕೆನರೀಸ್' ಎಂಬೀ ಪದಪ್ರಯೋಗವು ಇತ್ತೀಚೆಗಿನವರೆಗೂ ಬಳಕೆಯಲ್ಲಿ ಇತ್ತು. Dr. John F. Fleet ಇವನು ತನ್ನ ಮಿತ್ರನೋರ್ವನ ಸಂಶೋಧನಾ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುತ್ತಾ ಈ ರೀತಿ ಹೇಳಿದ್ದನ್ನೂ ಇಲ್ಲಿ ಸೂಚಿಸಬಹುದಾಗಿದೆ :—

"I have taken the liberty of substituting the word 'Canarese' for the 'Canara' of the German original. The form 'Kanara' with the lingual 'n' is nothing but an imaginative advance upon the 'Kanara' with the dental 'in' for which, itself, there is no basis in the Kannada language, nor any necessity."

ಈ ಮೇಲಿನ ಎಲ್ಲಾ ಅಭಿಪ್ರಾಯಗಳನ್ನು ಮಲೆಯಾಳ ಭಾಷಾ ಪಂಡಿತನಾದ Dr. Gundart ಇವನು ಸಮರ್ಥಿಸುತ್ತಾನೆ. ಹೇಗೂ ಇಂದಿನ ಪರಿಸ್ಥಿತಿಯಲ್ಲಿ ಅಂದಿನ ಅಬದ್ಧ ಪ್ರಯೋಗಗಳೆಲ್ಲವೂ ನಿರ್ನಾಮವಾಗುತ್ತಾ ಇವೆಯಾದರೂ ಕಳೆದ ಒಂದೆರಡು ಶತಮಾನಗಳ ಕಾಲದ ಐತಿಹ್ಯದಲ್ಲಿ ಈ ಬಗೆಯ ಆಂಗ್ಲಪದ ಸಂಪತ್ತು ನಿರುಪಾಯವಾಗಿ ನಮ್ಮ ಸಾಹಿತ್ಯದಲ್ಲಿ ಸಾಕಷ್ಟು ಉಳಿದಿವೆ.

**೩. ಯೂರೋಪಿನ ಸಾಹಿತ್ಯದಲ್ಲಿ ಕನ್ನಡ ಪದಗಳ ಪ್ರಯೋಗ :—**

ಪಾಶ್ಚಾತ್ಯ ದೇಶಗಳ ಸಾಹಿತ್ಯಕ್ಕೆ ಕನ್ನಡ ಶಬ್ದಗಳು ಸುಮಾರು ೨೦೦೦ ವರ್ಷಗಳಿಗೆ ಹಿಂದೆಯೇ ಹೋಗಿವೆ. ಕೊಂಕಣದ ವ್ಯಾಪಾರಿಗಳು ಗ್ರೀಸ್ ಮತ್ತು ರೋಮ್ ದೇಶಗಳ ವ್ಯಾಪಾರಿಗಳೊಡನೆ ಸಂಪರ್ಕ ಬೆಳೆಸಿದಾಗ ಕೆಲವು ಕನ್ನಡ ಶಬ್ದಗಳನ್ನುಪಯೋಗಿಸಿದ್ದು ಗ್ರೀಕ್ ಸಾಹಿತ್ಯದಲ್ಲಿ ಅಡಕವಾಗಿವೆಯೆಂಬುದು ಚಾರಿತ್ರಿಕವಾಗಿ ತಿಳಿದು ಬಂದ ವಿಚಾರವಾಗಿದೆ. ಅಲ್ಲಿಂದನಂತರ ಅಂಥಾ ಸಂಪರ್ಕವು ನಿಕಟವಾಗಿ ಮುಂದುವರಿದಿದ್ದರೂ ಭಾರತೀಯ ಭಾಷಾ ಶಬ್ದಗಳು ಪಾಶ್ಚಾತ್ಯ ಸಾಹಿತ್ಯಕ್ಕೆ ಮೇಲಿಂದ ಮೇಲೆ ಹರಿದಿದ್ದರೂ ಅವುಗಳಲ್ಲಿ ಎಷ್ಟು ಕನ್ನಡ ಶಬ್ದಗಳು ಆ ರೀತಿ ಉಪಯೋಗಿಸಲ್ಪಟ್ಟಿವೆಯೆಂಬುದು ಇನ್ನೂ ತಿಳಿಯಬೇಕಾದ ವಿಚಾರವಾಗಿದೆ. ಆದರೆ ಕ್ರಿ.ಶ. 15 ನೇ ಶತಮಾನದಿಂದ ಹಲವು ಕನ್ನಡ ಪದಗಳು ಲ್ಯಾಟಿನ್, ಗ್ರೀಕ್, ಇಟಾಲಿಯನ್, ಪೋರ್ಚುಗೀಸ್ ಮತ್ತಿತರ ಭಾಷೆಗಳೊಳಗೆ ಹೋಗಿವೆ. ಭಾರತದ ಸಂಪತ್ತನ್ನು ವರ್ಣಿಸಿದ ಅಂದಿನ ಪ್ರಯಾಣಿಕರು ಇಲ್ಲಿನ ಹಲಕೆಲವು ಸ್ಥಳಗಳ, ವಸ್ತುಗಳ, ಗಿಡಮರಗಳ ಮತ್ತು ಪ್ರಾಣಿಪಕ್ಷಿಗಳ ಹೆಸರುಗಳನ್ನು ಅಂತೆಯೇ ತಮ್ಮ ಭಾಷೆಗಳಲ್ಲಿ ಬರೆದಿದ್ದಾರೆ.

ಕ್ರಿ.ಶ. 1748 ರಲ್ಲಿ ಲೈಪ್‌ಸ್ಜಿಗ್‌ನಲ್ಲಿ ಪ್ರಕಟವಾದ ಮತ್ತು ಭಾರತೀಯ ಭಾಷೆಗಳನ್ನು ಕುರಿತಾಗಿ ಬರೆದ J. F. Fritz ಇವನ "Orientalischar und Occidentaliachar Sprachmeister" ಎಂಬ ಗ್ರಂಥದಲ್ಲಿ ಎಲ್ಲಾ ಕನ್ನಡ ಅಂಕೆಗಳನ್ನೂ ಮೂವತ್ತಾರು ಕನ್ನಡ ಶಬ್ದಗಳನ್ನೂ ಕೊಡಲಾಗಿವೆ. ಈ ವರೆಗೆ ತಿಳಿದು ಬಂದ ಗ್ರಂಥಗಳಲ್ಲಿ ಹೀಗೆ ಹಲವು ಕನ್ನಡ ಶಬ್ದಗಳನ್ನೂ ೧, ೨, ೩, ೪, ಎಂಬೀ

ಕನ್ನಡ ಅಂಕೆಗಳನ್ನೂ ಉಪಯೋಗಿಸಿರುವುದು ಅದೆ ಮೊದಲನೆಯದೆಂದು ಹೇಳಲಾಗಿದೆ. ಈ ಗ್ರಂಥದ ಬಹು ಭಾಗವು ಜರ್ಮನ್‌ನಲ್ಲೂ ಕೆಲವು ಭಾಗ ಲ್ಯಾಟಿನ್ ಭಾಷೆಯಲ್ಲೂ ಇದೆ. ಇದರ ನಂತರ ಕ್ರಿ.ಶ. 1786 ರಲ್ಲಿ ಸ್ಪೇಯಿನ್ ದೇಶದ Lorenzo Hervas ಎಂಬ Jesuit ಪಂಥದವನು "Vocabulario—Poliglotto...." ಎಂಬ ಗ್ರಂಥದಲ್ಲಿ 63 ಕನ್ನಡ ಶಬ್ದಗಳನ್ನು ಉಪಯೋಗಿಸಿ ಮೇಲಿನ ಗ್ರಂಥದಂತೆಯೇ ಕನ್ನಡ ಭಾಷೆಯ ವಿಷಯವಾಗಿ ಹೇಳಿದ್ದಾನೆ. ಅದರ ನಂತರ ಡೆನ್ಮಾರ್ಕಿನ ಕ್ರೈಸ್ತಗುರು Benjamin Schulze ಇವನು Mithridates Oder Allegemine ಎಂಬುದಾಗಿ ಕ್ರಿ. ಶ. 1806 ರಲ್ಲಿ ಬರೆದ ಧರ್ಮಗ್ರಂಥದಲ್ಲಿ ಶ್ರೀಕೃಷ್ಣನನ್ನು ಕುರಿತಾದ ಸ್ತೋತ್ರವನ್ನು ಕೆಲವು ಕನ್ನಡ ಪಂಕ್ತಿಗಳಲ್ಲಿ ಬರೆದಿದ್ದು ಆ ಕೃತಿಯು ಬರ್ಲಿನ್‌ನಲ್ಲಿ ಪ್ರಕಟವಾಯಿತು.

ಕನ್ನಡ ಪದಗಳು ಪದಸರಣಿಗಳು ಯೂರೋಪು ಖಂಡದ ಸಾಹಿತ್ಯದಲ್ಲಿ ಹೀಗೆ ಅಲ್ಲಲ್ಲಿ ಕಾಣಿಸಿಕೊಂಡಾಗ ಹಿಂದೂಸ್ಥಾನದಲ್ಲಿದ್ದ ಪಾಶ್ಚಾತ್ಯರು ತಮ್ಮ ವಿದ್ಯಾವ್ಯಾಸಂಗದ ಆಕಾಂಕ್ಷೆಯಿಂದಲೂ ಬೈಬಲ್ ಧರ್ಮಗ್ರಂಥವನ್ನು ಈ ದೇಶದ ಜನಕ್ಕೆ ಇಲ್ಲಿಯ ಭಾಷೆಗಳ ಮೂಲಕ ಪರಿಚಯ ಮಾಡಿಸುವ ಸಲುವಾಗಿಯೂ ಕನ್ನಡವನ್ನು ತಾವಾಗಿಯೇ ಕಲಿತರು. ಕ್ರಿ.ಶ. 18 ನೇ ಶತಮಾನದ ಅಂತ್ಯದಲ್ಲಿ ಕನ್ನಡ ಅಚ್ಚು ಮೊಳೆಗಳು ಸಿದ್ಧವಾದೊಡನೆಯೇ ಬಂಗಾಳದ ಶ್ರೀರಾಮ್‌ಪುರದ ಕ್ರೈಸ್ತಮತ ಪ್ರಚಾರಕರು ಕನ್ನಡವನ್ನು ನಿಷ್ಠೆಯಿಂದ ಕಲಿಯಲಾರಂಭಿಸಿದರು. ಆದರೆ ಅಂದಿನ ಕನ್ನಡ ಅಚ್ಚು ಲಿಪಿಗಳು ಕೈ ಬರೆಹಗಳಂತೆ ಓರೆಕೋರೆಯಾಗಿ ಇರುತಿದ್ದುವು. ಕಾಗದವು ದೊರಗಾಗಿರುತಿದ್ದಿತು. ಮುದ್ರಣ ಕೆಲಸವೂ ಬಹು ಸಮಯ ಹಿಡಿಯುತ್ತಿತ್ತು. ಹೀಗಿದ್ದ ಪರಿಸ್ಥಿತಿಯಿಂದ ಒಮ್ಮೆಲೇ ಈ ಎಲ್ಲಾ ದಿಶೆಯಲ್ಲಿ ಪರಿಷ್ಕೃತ ಬದಲಾವಣೆಗಳು ಕಳೆದ ಶತಮಾನದ ಮಧ್ಯ ಕಾಲಕ್ಕೆ ತೋರಿಬಂದುವು.

**೬. 'ಕರ್ಣಾಟಕ' ಮತ್ತು 'ಕನ್ನಡ' ಶಬ್ದಗಳು ಹೇಗೆ ಹುಟ್ಟಿದುವು ?—**

'ಕರ್ನಾಟಕ' ಮತ್ತು 'ಕನ್ನಡ' ಎಂಬೀ ಪದಗಳು ಮೂಲತಃ ಹೇಗೆ ಮತ್ತು ಎಂದು ಹುಟ್ಟಿದುವು ಎಂಬ ಅನ್ವೇಷಣೆಯಿಂದಲೇ ಐರೋಪ್ಯಾ ಕನ್ನಡ ಪಂಡಿತರು ತಮ್ಮ ಸಾಹಿತ್ಯ ಸೇವೆಯನ್ನು ಆರಂಭಿಸಿದ್ದಾರೆ. ಕ್ರಿ.ಶ. 18 ನೇ ಶತಮಾನಾಂತ್ಯದಲ್ಲಿ Col. Colin Mackenzie ಇವನು 'ಕರ್ಣಾಟಕ' ಎಂಬುವಕ್ಕೆ ದೇಶೀಯ ಪಂಡಿತರು ಹೇಳಿದ್ದನ್ನು ಒಪ್ಪಿ 'ಕರ್ಣ-ಅಟೇತಿ-ಕರ್ಣಾಟಃ' ಅಥವಾ 'Passing to the ears' ಎಂಬುದಾಗಿ ಹೇಳಿದ್ದನು. ಕರ್ಣಾಟಕ ದೇಶವನ್ನು ಕುರಿತು 'the honoured and renowned Country' ಎಂದು ಅಭಿಮಾನಪೂರ್ವಕವಾಗಿ ಹೇಳಿದನು. ಇದನ್ನನುಸರಿಸಿ Col. Meadows Taylor ಇವನು 'Karna-Ata' ಎಂಬುದಕ್ಕೆ 'amusing or Pleasing to the ear-the Sweet musical Canarese' ಎಂಬುದಾಗಿ ಹೇಳಿದನು.

'ಕನ್ನಡ' ಪದವು 'ಕರ್ಣಾಟಕ' ಇದರ ತದ್ಭವವೆಂದು ಭಟ್ಟಾಕಳಂಕನವರೆಗಿನ

ಎಲ್ಲಾ ಹಿಂದಿನ ಕನ್ನಡ ವ್ಯಾಕರಣಗಾರರು ಹೇಳಿದ್ದಾರೆ. ಆದರೆ ಮೂಲತಃ ಈ 'ಕನ್ನಡ' ಶಬ್ದಕ್ಕೆ ಏನು ಅರ್ಥವೆಂದು ಐರೋಪ್ಯಾ ವಿದ್ವಾಂಸರು ಶೋಧಿಸುವುದರಲ್ಲಿ ಕಾತರರಾದರು. 'ಕರ್-ನಾಡು, ಕಪ್ಪು ಮಣ್ಣಿನ ನಾಡು ಕನ್ನಾಡು, ಕನ್ನಡ' ಎಂದು ಆಗಿರಬಹುದೆಂದು Dr. Robert Caldwell ಇವನು ಊಹಿಸುತ್ತಾನೆ. ಅಂತೆಯೇ Rev. F. Kittel ಇವನು ಆ ವಿಷಯವಾಗಿ ಹೀಗನ್ನುತ್ತಾನೆ—

> "The term Kannada-the Canarese of European writers, is formed from Kar—Nadu—the black cultivated country—black soil, which characterises the plateau of Deccan. In Sanskrit, the term appears as Karnata-Ka."

ಕ್ರಿ.ಶ. 5 ನೇ ಶತಮಾನದಲ್ಲಿ ಮತ್ತು ಅದಕ್ಕೂ ಹಿಂದಿನ ಸಂಸ್ಕೃತ ಬರೆವಣಿಗೆಗಳಲ್ಲಿ 'ಕರ್ಣಾಟಕ' ಎಂಬ ಪದವು ಉಪಯೋಗಿಸಲ್ಪಟ್ಟದೆ. 'ಸುಭಾಷಿತ' ದ ಒಂದು ಕಂದ ಪದ್ಯದಲ್ಲಿ 'ಒಳುಗನ್ನಡ. ಬೆಳುಗನ್ನಡ, ತೆಲುಗನ್ನಡ, ಎಳಗನ್ನಡ, ಹಳಗನ್ನಡ' ಎಂಬುದಾಗಿ 'ಕನ್ನಡ' ಪದವನ್ನು ಕುಣಿಸಿದೆ. ನೃಪತುಂಗನು 'ನಾಡೆ ಕನ್ನಡದ ತಿರುಳ್' ಎಂದು ಹೇಳಿದನು. ಹೀಗಾಗಿ ಈ 'ಕನ್ನಡ' ಎಂಬ ಶಬ್ದವೂ 'ಕರ್ಣಾಟಕ' ದಲ್ಲೇ ಪುರಾತನವಾದುದಾಗಿ ತೋರುತ್ತದೆ. Dr. Gundart ಇವನ ಅಭಿಪ್ರಾಯದಂತೆ "ಕರ್-ಕಪ್ಪು ; ನಾಟು- ನಾಡು ; ಕರ್‌ನಾಡು, ಕರ್‌ನಾಟು, ಕರ್ಣಾಟ" ಎಂದಾಗುತ್ತದೆ. ಅಲ್ಲದೆ ಅದು "ಕಮ್ಮಿತ್ತು ನಾಡು", ಶ್ರೀಗಂಧ ಮಸಾಲೆಗಳಿಂದ ತುಂಬಿದ ಪರಿಮಳಭರಿತವಾದ ನಾಡು ಎಂದು ಏಕೆ ಆಗಿರಬಾರದು ಎಂದು ಕೇಳಿದ್ದರಲ್ಲೂ ಔಚಿತ್ಯವಿದೆ.

ತೆಲುಗು ಭಾಷಾ ಪಂಡಿತ Fr. C. P. Brown ಇವನು ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗಿ 'ಕನ್ನಡ' ಮತ್ತು ಉತ್ತರ ಅಮೇರಿಕಾ ಖಂಡದ 'ಕೆನಡಾ' ಇವೆರಡು ಭೂಭಾಗಳಿಗೆ ಏನಾದರೂ ಸಂಬಂಧವಿದೆಯೋ ಎಂದು ನೋಡಲು ಯತ್ನಿಸಿದ್ದಾನೆ. ಏಕೆಂದರೆ ದೂರದ ಆ ಭೂಖಂಡದ ಪೂರ್ವಕಾಲದ ಜನವನ್ನು ಇಂದಿಗೂ 'Indians' ಎಂದೇ ಕರೆಯುತ್ತಾರೆ. ಹಿಂದೂ ಸಂಸ್ಕೃತಿಯ ಕುರುಹುಗಳು ಅಲ್ಲಿ ಅದೆಷ್ಟೋ ಇವೆ. ಸಹಸ್ರಾರು ವರ್ಷಗಳಿಗೆ ಹಿಂದೆ ಭಾರತೀಯರು ಅಲ್ಲೆಲ್ಲಾ ಸಂಚರಿಸಿದ್ದರೆಂಬುದಕ್ಕೆ ಪೌರಾಣಿಕ ಆಧಾರಗಳೂ ಇವೆ. ಹಿಂದೂ ಸಾಹಿತ್ಯ ಮತ್ತು ಪುರಾಣಗಳನ್ನೆಲ್ಲಾ ಕರತಲಾಮಲಕವಾಗಿಸಿಕೊಂಡ Charles Brown ಇವನು ಕನ್ನಡ ಮತ್ತು ಕೆನಡಾ ಇವುಗಳೊಳಗೆ ಸಂಬಂಧವನ್ನು ಕಲ್ಪಿಸಲು ಯತ್ನಿಸಿದರಲ್ಲಿ ಔಚಿತ್ಯವಿಲ್ಲದೆ ಇಲ್ಲವೆಂದೂ ಹೇಳಬಹುದು.

ಆದರೆ ಕೆನಡಾ ದೇಶದ ಭಾಷಾತಜ್ಞರು ಅದನ್ನೇ ಬೇರೊಂದು ರೀತಿಯಲ್ಲಿ ಹೇಳುತ್ತಾ ಆ ದೇಶಕ್ಕೆ ಹಾಗೆ ಹೆಸರು ಎಂತಾಯಿತೆಂದು ನಾಲ್ಕಾರು ಕಾರಣಗಳನ್ನು ಕೊಡುತ್ತಾರೆ. ಪೂರ್ವಕಾಲದ ಆ ದೇಶದ ಜನರು ಅಮೇರಿಕಾದ ಆ ಭೂಭಾಗವನ್ನು 'ಕನಟ' ಅಥವಾ 'ಕಾನಟ' ಎಂದು ಕರೆಯುತ್ತಿದ್ದರು. ಅದೇ ಹೆಸರು 'ಕೆನಟಾ'

ಅಥವಾ 'ಕೆನಡಾ' ಎಂದಾಯಿತೆಂದು ಹೇಳುತ್ತಾರೆ. ಹಾಗೆ ಹೇಳಿದಾಗ ಅವರು ಈ ರೀತಿಯಾಗಿಯೂ ಊಹಿಸುತ್ತಾರೆ :—

"It may be 'a variation of Canara or Canarta (Carnata), names or places in southern India, and that it was chosen because the explorers perhaps thought that they had landed in India."

ಇದರಿಂದ ಈ ಪ್ರಾಂತದ ಹೆಸರನ್ನೇ ಎರವಾಗಿ ಅಲ್ಲಿಗೆ ಹೊತ್ತುಕೊಂಡುಹೋದರೆಂದೂ ತಿಳಿಯಬಹುದಾಗಿದೆ. ಒಟ್ಟಾಗಿ ದ್ರಾವಿಡಭಾಷಾ ವಿಶಾರದ Rev. Robert Caldwell ಇವನು ಹೇಳುವುದೂ ಒಂದು ರೀತಿಯಲ್ಲಿ ಸೂಕ್ತವಾಗಿದೆ :—

"The term Karnata or Karnataka, is said to have been a generic term, including both the Telugu and Kannada peoples and their languages, though it is admitted that it usually denoted the latter alone...... The use of the term is of considerable antiquity as we find it in Varahamihira at the beginning of the 5th century A.D."

## ೭. ಕರ್ನಲ್ ಮಾರ್ಕ್ ವಿಲ್ಕ್ಸ್—ಇವನ ಜೀವನ ಪರಿಚಯ :—

Col. Mark Wilks ಮತ್ತು Col. Mark Cubbon ಈ ಇರ್ವರು ಸಹೋದರರು ಕಳೆದ ಶತಮಾನದಲ್ಲಿ ಹಳೇ ಮೈಸೂರು ರಾಜ್ಯಕ್ಕೆ ಸಲ್ಲಿಸಿದ ಸೇವೆಯು ಸುವರ್ಣಾಕ್ಷರದಲ್ಲಿ ಬರೆದಿಡತಕ್ಕಂಥಾದ್ದಾಗಿದೆ. ಅವರನಂತರ ಹಲವು ವಿಖ್ಯಾತ ರಾಜ ಕಾರಣಿಗಳೂ ದೇಶೀಯ ದಿವಾನರೂ ಇದ್ದರಾದರೂ ಅಂದಿನ ಮೈಸೂರಿಗೆ ಹೊಸ ರೂಪು ಆಕರ್ಷಣೆಗಳನ್ನು ಈ Mark ಸಹೋದರರು ಕೊಟ್ಟರೆಂಬುದು ಐತಿಹಾಸಿಕ ವಾಗಿ ಒಪ್ಪತಕ್ಕಂಥಾ ವಿಚಾರವಾಗಿದೆ.

Mark Wilks ಇವನು ಇಂಗ್ಲೆಂಡಿನ ಮ್ಯಾನ್ ದ್ವೀಪವಲ್ಲಿ ಜನಿಸಿದನು. ತನ್ನ ದೇಶದ ವಿಖ್ಯಾತ ವಿದ್ಯಾಪೀಠಗಳಲ್ಲಿ ಪ್ರೌಢವ್ಯಾಸಂಗವನ್ನು ಹೊಂದಿ ಕಡೆಗೆ ಅಲ್ಲಿಯೇ ಉಚ್ಚ ಅಧಿಕಾರಸ್ಥಾನಕ್ಕೇರಿಸಲ್ಪಟ್ಟ ಒರ್ವ ವಿದ್ಯಾವಂತ ರಾಜಕಾರಿಣಿ ಯಾಗಿದ್ದನು. ಅವನು ಈ ದೇಶಕ್ಕೆ ಬಂದು ಪರ್ಷಿಯನ್, ಬಂಗಾಳೀ, ಹಿಂದೂ ಸ್ಥಾನೀ ಮತ್ತು ಸಂಸ್ಕೃತ ಭಾಷೆಗಳಲ್ಲಿ ತಕ್ಕಷ್ಟು ಪಾಂಡಿತ್ಯವನ್ನು ಸಂಪಾದಿಸಿದನು. Asiatic Researches ಪತ್ರಿಕೆಯಲ್ಲಿ ಹಲವು ಐತಿಹಾಸಿಕ ಲೇಖನಗಳನ್ನು ಬರೆದು ಒರ್ವ ಶ್ರೇಷ್ಠ ಸಂಶೋಧಕನೆಂದು ಪ್ರಸಿದ್ಧನಾದನು. ಕೆಲಕಾಲ ಅವನು Royal Asiatic Society ಇದರ ಉಪಾಧ್ಯಕ್ಷನಾಗಿಯೂ ಇದ್ದು Rev. Carey, Sir Colebrooke ಮತ್ತು Prof. Wilson ಇವರಂಥಾ ವಿದ್ವಾಂ ಸರ ಆದರಕ್ಕೂ ಪಾತ್ರನಾಗಿದ್ದನು.

ಪರ್ಷಿಯನ್ ಭಾಷೆಯಿಂದ ಹಲವಾರು ಚಾರಿತ್ರಿಕ ವಿವರಗಳನ್ನು Mark

Wilks ಇವನು ಇಂಗ್ಲಿಷ್‌ಗೆ ಇಳಿಸಿದಲ್ಲದೆ Akhlak-i-Naseri ಎಂಬ ಪರ್ಷಿಯನ್ ಗ್ರಂಥವನ್ನೂ ಇತರ ಒಂದೆರಡು ಗ್ರಂಥಗಳನ್ನೂ ಇಂಗ್ಲಿಷ್‌ಗೆ ಭಾಷಾಂತರಿಸಿದನು. ಪರ್ಷಿಯನ್ ವಿದ್ವಾಂಸ ನಾಸಿರುದ್ದೀನನ ತಾತ್ವಿಕ ಗ್ರಂಥಗಳನ್ನು ಭಾಷಾಂತರಿಸಿದಲ್ಲದೆ ಅವುಗಳ ಮೇಲೆ ಟೀಕೆಯನ್ನೂ ಬರೆದನು. ಅವನ ಬರೆವಣಿಗೆಯನ್ನು ಒರ್ವ ವಿಮರ್ಶಕನು ಪ್ರಶಂಸಿಸುತ್ತಾ "Col. Mark Wilks'........masterly analysis and statements of the contents of the philosophical works of Nasiruddin........", ಎಂಬುದಾಗಿ ಅವನು ಪರ್ಷಿಯನ್ ಸಾಹಿತ್ಯದಲ್ಲಿ ತೋರಿಸಿದ ಅಭಿಮಾನವನ್ನು ಕುರಿತು ಹೇಳಲಾಗಿತ್ತು.

Col. Wellesley ಇವನ ಮಿತ್ರನಾಗಿದ್ದ ಈ ಸೇನಾನಿ-ವಿದ್ವಾಂಸನು ಕ್ರಿ. ಶ. 1799 ರಲ್ಲಿ ಶ್ರೀರಂಗಪಟ್ಟ ಯುದ್ಧವಾದಾಗ ಕಲ್ಕತ್ತಾದಲ್ಲಿದ್ದನು. ಅದರನಂತರ ಅವನು ಹಳೇ ಮೈಸೂರು ರಾಜ್ಯದ ಮುಖ್ಯಾಧಿಕಾರಿಯಾಗಿಯೂ ಕೆಲಕಾಲ ಇದ್ದನು. ಈ ದೇಶದಲ್ಲಿ ಕ್ರಿ. ಶ. 1800 ರಿಂದ ವಿವಿಧ ಅಧಿಕಾರಸ್ಥಾನಗಳನ್ನು ಪಡೆದ Mark Wilks ಇವನು ಸೇಂಟ್ ಹೇಲಿನ್ನಾ ದ್ವೀಪದ ರಾಜಪಾಲನಾಗಿಯೂ ಇದ್ದುದಲ್ಲದೆ ಅಷ್ಟರಲ್ಲಿ ತನ್ನ ಬರೆವಣಿಗೆಯಲ್ಲಿ ಪರಿಪಕ್ವತೆಯನ್ನು ಹೊಂದಿ ಅವನ ಕೃತಿಗಳು ಸರ್ವರ ಪ್ರಶಂಸೆಗೂ ಪಾತ್ರವಾಯಿತು. ಆಗ ಅಲ್ಲಿ ಕೈದಿಯಾಗಿದ್ದ Napoleon Bonaparte ಇವನು ಸಹ Mark Wilks ಇವನ ಸಾಹಿತ್ಯ ಮತ್ತು ಇತಿಹಾಸಜ್ಞಾನವನ್ನು ನೋಡಿ ಮೆಚ್ಚಿದನು. ಅವನ ಗ್ರಂಥಗಳು ಅವನಿದ್ದಾಗಲೇ ಲಂಡನ್‌ನಲ್ಲಿ ಕುಂಪೆನೀ ಸರಕಾರದ ಮೂಲಕವಾಗಿ 1830 ರ ಒಳಗಾಗಿ ಮುದ್ರಣವಾಗಿ ಪ್ರಚಾರವಾದುವು.

**೮. ಮಾರ್ಕ್‌ವಿಲ್ಕ್ಸ್ ಇವನಿಂದ 'ಮೈಸೂರು ರಾಜ್ಯದ ಚರಿತ್ರೆ !':—**

ಮೈಸೂರು ರಾಜವಂಶದ ಚರಿತ್ರೆಯೊಂದು ಕ್ರಿ.ಶ. 1795 ರ ಕಾಲದಲ್ಲಿ ಕನ್ನಡದಲ್ಲಿ ಬರೆದಿದ್ದುದನ್ನು 1798 ರಲ್ಲಿ ಟಿಪ್ಪು ಸುಲ್ತಾನನ ಆಜ್ಞಾನುಸಾರವಾಗಿ ಪರ್ಷಿಯನ್ ಭಾಷೆಗೆ ಇಳಿಸಲಾಗಿತ್ತು. ಕ್ರಿ. ಶ. 1799 ರಲ್ಲಿ ಕಡೇ ಮೈಸೂರು ಯುದ್ಧದ ನಂತರ ಶ್ರೀರಂಗಪಟ್ಟದ ಗ್ರಂಥಭಂಡಾರದಲ್ಲಿದ್ದ ಹಲವು ಗ್ರಂಥಗಳನ್ನೆಲ್ಲಾ ಬ್ರಿಟಿಷರು ಕಲ್ಕತ್ತಾಗೆ ಸಾಗಿಸಿದರು. ಅವುಗಳೊಡನೆ ಈ ಮೈಸೂರು ಚರಿತ್ರೆಯ ಕನ್ನಡ ಮತ್ತು ಪರ್ಷಿಯನ್ ಭಾಷಾಂತರ ಪ್ರತಿಗಳೂ ಇದ್ದುವು. Col. Kirpatrick ಇವನು ಆ ಪ್ರತಿಗಳನ್ನು ಮೊದಲಬಾರಿಗೆ ಅಲ್ಲಿ ಕಂಡಾಗ ಅವುಗಳನ್ನು ಕೂಡಲೇ ತೆಗೆದುಕೊಂಡು Col. Wellesley ಇವನಿಗೆ ಒಪ್ಪಿಸಿ ತಾವು ಹೊಸತಾಗಿ ಪಡೆದ ಆ ರಾಜ್ಯದ ಚರಿತ್ರೆಯನ್ನು ಬರೆಯಲು ಆ ಗ್ರಂಥಗಳು ಸಹಾಯಕವಾಗುವುದೆಂದು ಹೇಳಿದನು.

ಟಿಪ್ಪುವಿನ ಪತನಾನಂತರ ಹಳೇ ಮೈಸೂರು ರಾಜ್ಯದ ರೆಸಿಡೆಂಟ್ ಆಗಿದ್ದ Col. Mark Wilks ಇವನು ಅಷ್ಟರಲ್ಲಿ ದಕ್ಷಿಣದ ಹಿಂದೂಸ್ಥಾನದ ಚರಿತ್ರೆಯನ್ನು ಸಂಪೂರ್ಣವಾಗಿ ಅಭ್ಯಸಿಸಿ ಬರೆಯಲು ಆರಂಭಿಸಿದ್ದನು. ಅದು Historical Sketches of South India ಎಂಬ ಮೂರು ಕಾಂಡಗಳ ಮಹಾಗ್ರಂಥವಾಗಿ

1810 ರಲ್ಲಿ ಲಂಡನ್ನಿನಲ್ಲಿ ಪ್ರಕಟವಾಯಿತು. ಕುಂ ಪೆ ನೀ ಸರ ಕಾ ರ ವು ಅವನಿಗೆ ಮೈಸೂರು ಚರಿತ್ರೆಯ ಕನ್ನಡ ಮತ್ತು ಪರ್ಷಿಯನ್ ಓಲೆಗಳನ್ನು ಕೊಟ್ಟು ಅದನ್ನು ಪ್ರತ್ಯೇಕವಾಗಿ ಮತ್ತು ಇನ್ನೂ ವಿಸ್ತೃತವಾಗಿ ಇಂಗ್ಲಿಷ್‌ನಲ್ಲಿ ಬರೆಯುವಂತೆ ವಿಧಿಸಿತು. ಹೀಗೆ ಆರಂಭವಾದ ಅವನ History of Mysore ಇದು ಕ್ರಿ. ಶ. 1807 ರ ಕಾಲಕ್ಕೆ ಸಿದ್ಧವಾಗಿ ಅದರ ಮೊದಲ ಭಾಗವು ಇಂಗ್ಲೆಂಡಿನಲ್ಲಿ ಮುದ್ರಣವಾಯಿತು. ಅದರನಂತರ ಅದೇ ಗ್ರಂಥವು ಇನ್ನೂ ಹೆಚ್ಚಿನ ವಿಷಯಗಳನ್ನೊಳಗೊಂಡು ಮೂರು ಕಾಂಡಗಳಾಗಿ 1817 ರಲ್ಲಿ ಪ್ರಕಟವಾಯಿತು. 1869ರಲ್ಲಿ ಅದೇ ಕೃತಿಯು ಮದ್ರಾಸಿನಲ್ಲಿ ಪುನರ್ಮುದ್ರಣವಾದಾಗ Asiatic Society Journal ಪತ್ರಿಕೆಯು ಅದನ್ನು ವಿಮರ್ಶಿಸುತ್ತಾ ಹೀಗಂದಿತು :—

"........Of his (Wilks') "History of Karnataka", it may be safely asserted that it, in conjunction with many other important works, will prove to the world that the East India Company, has long possessed, among its most active and laborious servants, men whose genius, talents and acquirements would confer distinction upon any country, however enlightened. The 'History of Mysore' displays a degree of research acumen, vigour and elegance, that must render it a work of a standard importance in English literature."

Col. Mark Wilks ಇವನು ದಕ್ಷಿಣ ಹಿಂದೂಸ್ಥಾನದ ಚರಿತ್ರೆಯನ್ನು ಕುರಿತು ಬರೆದ ಈ ಎರಡು ಗ್ರಂಥಗಳಲ್ಲಿ ಕರ್ಣಾಟಕದ ಪ್ರಾಚೀನ ಇತಿಹಾಸ, ಜನಜೀವನ, ಭಾಷೆ, ಪ್ರಾಂತಗಳ ಭೌಗೋಲಿಕ ವಿಚಾರ ಇತ್ಯಾದಿಗಳನ್ನು ಪ್ರಸ್ತಾಪಿಸಿದ್ದು ಇಂದಿಗೂ ಆಧಾರಪೂರ್ವಕವಾದ ನಿಲುವು ಆಗಿದೆ. ಕರ್ಣಾಟಕದ ಸಂಬಂಧವಾಗಿ ಇವನು ಪ್ರತಿಪಾದಿಸಿದ ವಿವರಗಳನ್ನೇ ಕಳೆದ ಶತಮಾನದಲ್ಲಿ ಸರಕಾರವು ಪ್ರಕಟಿಸುತಿದ್ದ ಹೊತ್ತಿಗೆಗಳಲ್ಲಿ ಆಗಿಂದಾಗ್ಗೆ ಉದಾಹರಿಸುತಿದ್ದರು.

**೯. ಕ್ಯಾಪ್ಟನ್ ಮೊಹೊನಿಯು ಕೊಡಗಿನ ಚರಿತ್ರೆಯನ್ನು ಬರೆದನು :—**

ಕ್ರಿ.ಶ. 18ನೇ ಶತಮಾನದ ಅಂತ್ಯದಲ್ಲಿ ಕೊಡಗಿನ ಹೆಸರು ಇಡೀ ಭಾರತದಲ್ಲಿ ಕೇಳಿಸಿತು. ಕ್ರಿ.ಶ. 1792 ರಲ್ಲಿ ಕುಂಪೆನೀ ಸರಕಾರವು ಕೊಡಗಿನ ರಾಜನೊಡನೆ ಒಂದು ಒಪ್ಪಂದವನ್ನು ಮಾಡಿ ಆ ಜಿಲ್ಲೆಯನ್ನು ತಮ್ಮ ಕರಗತಮಾಡಿಕೊಂಡರು. ಟಿಪ್ಪುವಿನ ಪ್ರತಿಭಟನೆಯು ಆ ಜಿಲ್ಲೆಯೊಳಗಾಗದಂತೆ ಬ್ರಿಟಿಷರು ಎಚ್ಚರದಿಂದಿದ್ದರು. ಆ ಸಮಯದಲ್ಲಿ ಎಂದರೆ, Col. Mark Wilks ಇವನು ಮೈಸೂರು ಚರಿತ್ರೆಯನ್ನು ಬರೆಯುವುದಕ್ಕಿಂತ ಹತ್ತು ವರ್ಷಗಳಿಗೆ ಹಿಂದೆ. ಮತ್ತು ಕೊಡಗಿನ ದೊಡ್ಡ ವೀರರಾಜನು ತನ್ನ "ರಾಜೇಂದ್ರನಾಮೆ" ಯನ್ನು ಕನ್ನಡದಲ್ಲಿ ಬರೆಸಿದುವಕ್ಕಿಂತ ಎಂಟು ವರ್ಷಗಳಿಗೆ ಹಿಂದೆ ಕೊಡಗಿನಲ್ಲಿ ಆಗ ರೆಸಿಡೆಂಟ್ ಆಗಿದ್ದ Capt Danis Mahoney ಇವನು ಆ ಜಿಲ್ಲೆಯ ಚರಿತ್ರೆಯನ್ನು ಬರೆದವರಲ್ಲಿ ಮೊದಲಿಗನಾದನು.

ಇಂದಿಗೆ 175 ವರ್ಷಗಳಿಗೆ ಹಿಂದೆ ಕೊಡಗಿನ ಗುಡ್ಡಕಾಡುಗಳಲ್ಲಿ ಸುತ್ತಾಡಿ, ದೇಶೀಯ ಭಾಷೆಗಳನ್ನು ಕಲಿತು, ಲಿಖಿತ ಆಧಾರವು ಏನೂ ಇಲ್ಲದಿದ್ದಾಗ ಜನರಿಂದ ವಿಷಯ ಗಳನ್ನು ಕೇಳಿ ಸಂಗ್ರಹಿಸಿ ಬರೆದ ಅವನ ವರದಿಯು ಅನಂತರದ ಲೇಖಕರಿಗೆ ಅಧಿಕೃತ ಆಧಾರವಂತಾಯಿತು. ಅವನು ಇದನ್ನು ಕೊಡಗಿನ ರಾಜನ ಅಂದಿನ ವಾಸಸ್ಥಾನ ವಾಗಿದ್ದ ನಾಲ್ಕುನಾಡಿನಲ್ಲಿ ಅಥವಾ ಅವನು ಬರೆದಂತೆ Naukanaar ನಲ್ಲಿ ಬರೆ ದನು. (ಇಲ್ಲಿ ನಾಡು ಎಂಬುದು Naar ಎಂದಾದುದನ್ನು ಗಮನಿಸಬೇಕಿದೆ.) Capt. Mahoney ಇವನ ಈ ಕೃತಿಯು ಈ ಜಿಲ್ಲೆಯ ಪರಿಚಯವನ್ನು ಕೊಡುವ ವರದಿ ಯಂತಿದ್ದರೂ ಅದೊಂದು ಸಮರ್ಪಕ ಹೊತ್ತಗೆಯಾಗಿದೆ. ಅದನ್ನು ಅವನು ಹೀಗೆ ಆರಂಭಿಸಿದ್ದಾನೆ :—

> "When first arrived at this from the coast, I investigated by conversations with the Raja, the history of the present Raja, the history of the present Coorg possessions having retrospect to as remote a period as the authourities sanctioned........".

ಈ ಕೃತಿಯು ಸುಮಾರು ಒಂಮನೂರು folio ಪುಟಗಳಷ್ಟಿದ್ದು ಕೈಬರೆವಣಿಗೆಯಲ್ಲಿಯೇ ಇದೆ. ಕ್ರಿ.ಶ. 1798ರ ಮೇ ತಿಂಗಳಲ್ಲಿ ಅವನು ಅದನ್ನು ಕುಂಪೆನೀ ಸರಕಾರಕ್ಕೆ ಕಳುಹಿಸಿಕೊಟ್ಟನು.

ವೀರರಾಜನ ಬರೆಯಿಸಿದ " ರಾಜೇಂದ್ರನಾಮೆ "ಯು ಕನ್ನಡದಲ್ಲಿ 1806 ರಲ್ಲಿ ಸಿದ್ಧವಾಯಿತು. ಮರುವರ್ಷವೇ ಅವನು ಅದರ ಇಂಗ್ಲಿಷ್ ಭಾಷಾಂತರವನ್ನು Lieut. Abercromby ಇವನಿಂದ ಮಾಡಿಸಿ ಅದರ ಪ್ರತಿಗಳನ್ನು ತನ್ನ ಆಂಗ್ಲೇಯ ಮಿತ್ರರಿಗೆ ಹಂಚಿದನು. ಅದರನಂತರ ಅದನ್ನು ಪರ್ಷಿಯನ್ ಭಾಷೆಗೂ ಇಳಿಸಲಾಯಿತು.

ಕ್ರಿ.ಶ. 1809 ರಲ್ಲಿ ರಾಜನ ಖಚೇರಿಯಲ್ಲಿದ್ದ ಪರ್ಷಿಯನ್ ಭಾಷಾ ಮುನಿಷಿ ಮಹ್ಮದ್ ಇಬ್ರಾಹಿಂ ಇವನು "ರಾಜೇಂದ್ರನಾಮೆ"ಯನ್ನು ಹಿಂದೂಸ್ಥಾನೀ ಭಾಷೆಗೆ ಅನುವಾದಿಸಿದನು. ಸುಮಾರು 360 folio ಪುಟಗಳ ಈ ಕೈಬರೆಹದ ಹೊತ್ತಗೆಯ ಮೇಲ್ಪುಟದಲ್ಲಿ Rajas of Kurg ಏಂಬುದಾಗಿ ಬರೆದಿದೆ. ಆದರೆ ರಾಜನ ಆಜ್ಞಾನುಸಾರವಾಗಿ ಬರೆದ ಈ ಗ್ರಂಥವು ಬರೇ ರಾಜನ ಹೇಳಿಕೆಯನ್ನೇ ಅಲ್ಲಲ್ಲಿ ಕೊಟ್ಟಂತೆ ತೋರುತ್ತದೆ. ಆದರೆ Capt. Danis Mahoney ಇವನ ನಿಷ್ಪಕ್ಷ ಪಾತವಾದ ನಿರೂಪಣೆಯು ಮತ್ತೊಂದು ಅಮೂಲ್ಯವಾದ ಸಂಶೋಧನಾ ಕೃತಿಯಾಗಿದೆ.

**೧೦. ಹೆನ್ರಿಸ್ಟೋಕ್ಸ್ ಇವನು ಮಲೆನಾಡಿನ ಉದ್ದಗಲವನ್ನಳೆದನು :—**

Col. Mark Wilks ಇವನ " ಮೈಸೂರು ಚರಿತ್ರೆ "ಯೊಡನೆ ಸಮದೂಗ ಬಹುದಾದ ಈ ನಾಡಿನ ಇತಿಹಾಸ ಗ್ರಂಥವು ಬಹುಕಾಲದವರೆಗೂ ಬರಲಿಲ್ಲ. ಆದರೂ ಕಳೆದ ಶತಮಾನದ ಪ್ರಾರಂಭದಿಂದಲೇ ಹಲವು ಆಂಗ್ಲೇಯ ಅಧಿಕಾರಿಗಳು ತಾವು

ಯಾವಾವ ಪ್ರಾಂತದಲ್ಲಿ ಮತ್ತು ಜಿಲ್ಲೆಗಳಲ್ಲಿ ದುಡಿಯುತಿದ್ದರೋ ಆಯಾ ಪ್ರಾಂತಗಳ ಮತ್ತು ಜಿಲ್ಲೆಗಳ ಚರಿತ್ರೆ, ಜನಜೀವನ, ಸಾಹಿತ್ಯ, ಕಲೆ ಇತ್ಯಾದಿಗಳನ್ನು ಕುರಿತು ಗ್ರಂಥಗಳನ್ನು ರಚಿಸಿದರು.

ಹಿಂದೂಸ್ಥಾನದ ಪಶ್ಚಿಮ ಭಾಗದಲ್ಲಿ ಮಲೆನಾಡು ಗುಡ್ಡಕಾಡುಗಳು ಸುಮಾರು ಒಂದು ಸಾವಿರ ಮೈಲು ಉದ್ದಕ್ಕೂ ಹಾಯ್ದಿದೆ, ಈ ಮಲೆನಾಡಿನ ಎಲ್ಲಾ ಭಾಗಗಳನ್ನು ಬಳಸಿ ಅದರ ಪ್ರಮಾಣ ಹೇಗೆ ಎಂತೆಂಬುದನ್ನು ಕಳೆದ ಶತಮಾನದಲ್ಲಿ ಕೆಲವು ಆಂಗ್ಲೇಯರು ಹೇಳಿದರಾದರೂ ಅವರ ಪೈಕಿ Henry J. Stokes ಇವನು ಆ ವಿಷಯವಾಗಿ ಸವಿಸ್ತಾರವಾಗಿ ಪ್ರತಿಪಾದಿಸಿದನು. ಇವನು ಬೊಂಬಾಯಿ ಆಧಿಪತ್ಯದಲ್ಲಿ ಸುಮಾರು 1825ರ ಕಾಲದಲ್ಲಿದ್ದು ಉತ್ತರ ಕರ್ಣಾಟಕ ಮತ್ತು ಮಲೆನಾಡು ಸೀಮೆಗಳಲ್ಲೆಲ್ಲಾ ಸಂಚರಿಸಿ ಆಯಾ ಭಾಗಗಳ ಮರ, ಗಿಡ, ಮಣ್ಣು, ಬೆಳೆ, ಪ್ರಾಣಿ ಪಕ್ಷಿ, ನದಿ, ಬೆಟ್ಟ, ಜನಜೀವನ ಇತ್ಯಾದಿಗಳನ್ನು ಕುರಿತು ಸುದೀರ್ಘವಾದ ವರದಿಯನ್ನು ಬರೆದು ಸರಕಾರಕ್ಕೆ ಸಲ್ಲಿಸಿದನು. ಬೆಳಗಾವಿ ಜಿಲ್ಲೆಯಲ್ಲಿ ಬಹುಕಾಲವಿದ್ದ ಈ H. J. Stokes ಇವನು ಗೋವಾ, ಕಾರವಾರ ಧಾರವಾಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಮಲೆನಾಡು ಭಾಗಗಳಲ್ಲಿ ಬಹುಪ್ರಯಾಸಪಟ್ಟು ಸಂಚರಿಸಿದ್ದಾನೆ. ಅವನು ಎಂಥಾ ಸಾಹಸಿಯೆಂಬುದು ಆ ಗ್ರಂಥದ ಪ್ರಮಾಣದಿಂದಲೇ ವ್ಯಕ್ತವಾಗುತ್ತದೆ.

ಮಲೆನಾಡಿನ ನೈಸರ್ಗಿಕ ಸಂಪತ್ತು ಅಪಾರವಾಗಿದೆಯೆಂಬುದನ್ನು ಸೂಚಿಸುತ್ತಾ ಅಲ್ಲಿ ವಾಸಿಸುವ ಜನರ ಜೀವನವು ಬೇರೆ ಬೇರೆ ಋತುಗಳಲ್ಲಿ ಹೇಗೆ ಸಾಗಿಸಲ್ಪಡುತ್ತಿವೆಯೆಂಬುದನ್ನೂ ಅವನು ಮನಮೋಹಕವಾಗಿ ವಿವರಿಸಿದ್ದಾನೆ. ನಾಡಿನ ಸೃಷ್ಟಿ ಸೌಂಧರ್ಯವನ್ನು ಕಂಡು ಮುಗ್ಧನಾಗುತ್ತಾನೆ. ಜನಜೀವನವನ್ನು ಕುರಿತು ಹೇಳುವಾಗ ಅದನ್ನು ಯಾವ ರೀತಿಯಲ್ಲಿ ಅಭಿವೃದ್ಧಿಪಡಿಸಬಹುದೆಂದು ಸಲಹೆಗಳನ್ನಿತ್ತಿದ್ದಾನೆ. ಹೀಗೆ ಹಲವು ವಿಷಯಗಳನ್ನು ಪ್ರಸ್ತಾಪಿಸಿದ ಅವನ ಗ್ರಂಥದಿಂದ ಈ ಕೆಲವು ಪಂಕ್ತಿಗಳನ್ನು ನಿದರ್ಶನಾರ್ಥವಾಗಿ ಕೊಡಲಾಗಿದೆ—

"...In the Malnad, villages were almost unknown. The owner of each estate had a large house on some eligible part of it; and his tenants, labourers and slaves resided on their respective allotments. Each village in the open country had its community, composed of Gowda, Talwar or watchman, Maadiga, Baraki or Kulwadi, whose office seems to be the same as that of any menials. There was also in every village an influential and generally rather old ryot, 'the chief ryot—the wise man' who was consulted on all occasions....Slavery chiefly however in the agrarian form, existed from time immemorial, and to a great extent, in the Malnad...".

## ೧೧. ಜೋಗು ಜಲಪಾತ-ಗಾರ್ಡನ್ ಫೋರ್ಬ್ಸ್ ಇವನ ಕವನ:—

Gordon Forbes ಇವನು ಸುಮಾರು 1850ರ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ರೆವಿನ್ಯೂ ಇಲಾಖೆಯ ಅಧಿಕಾರಿಯಾಗಿದ್ದನು. ಮಲೆನಾಡಿನ ಸೌಂದರ್ಯವನ್ನು ಕಂಡು ಬೆರಗಾದ ಇವನು ಜೋಗು ಜಲಪಾತವನ್ನು ಸಂದರ್ಶಿಸಿದನಲ್ಲದೆ ಅಲ್ಲಿಯೇ ಇರಿತು ಒಂದು ಚೆಲೋಕವನವನ್ನು ಅದರ ವಿಷಯವಾಗಿ ಅಲ್ಲಿನ ಸಂದರ್ಶಕರ ಪುಸ್ತಕದಲ್ಲಿ ಬರೆದು ಹಿಂದಿರುಗಿದನು. ಸುಮಾರು ನಲ್ವತ್ತು ವರ್ಷಗಳ ನಂತರ ಆ ಕವನವು Indian Antiquary ಪತ್ರಿಕೆಯಲ್ಲಿ ಪ್ರಕಟವಾಯಿತು. Gordon Forbes ಇವನ ಕವನವು ಈ ರೀತಿ ಹರಿದಿದೆ:—

"Untamed yet ancient river! Since the flood
Your tribute, gathered from a thousand rills—
Increasing journeys to the Western main
Anon, as now in summer heats, waxed low,
Winning slow way amongst the wave-worn rocks;
Anon, ere many moons, above their crests
Rolling triumphant, an all conquering flood.
Thy varied scenes are like a changeful life.
Turmoil and rest; now harrassed and now still.

"Thou hast deep reaches where thy waters rest
Calm as a healthful sleep; there drink at noon
The wild herds of the woods; there with deep shade
Primeval forests eurtain thy repose,
Then on with gentle flow and rippling sound—
Dimpled as mirth and musical as joy!
On, lured to swiftness, or provoked to strife
By rough obstruction or inviting slope—
On still unconscious to the awful brink,
Where the wild plunge hath made thee glorious.

"Mortal! Where wast thou when the hand of God
Quarried the chasms in the living rock,
And rent the cliff to give the torrent away?
How pigmy on the brink thy stature shows,
Topping a rampant of a thousand feet!
Bend over the cliff when the uplifting clouds
Reveal the terrors of the deep abyss,
Where the blue pigeon circles at mid-height,
And in the spray the darting swallow bathes;

Then, with firm foot and brain undizzied hurl
A fragment from the precipice, and mark—
With fearful sympathy–its long, long fall!

"It dwindles to a speck, yet still descends,
Descends and vanishes ere yet the eye
Discerns the signal of its distant splash.
Grudge not the toil to track you rugged stair
Down where huge fragments strew the torrent bed.
Look up and scan the tow ring precipice;
Sat ever beauty on such awful front!

"How goodly are thy robes, thou foam clad 'queen'.
What hues of heaven are woven in thy skirt;
Thy misty veil, how gracefully it falls—
For ever falls and yet unveils thee not!
Down the black rock in many a show'ry jet
Like arrowy meteors in the midnight sky,
Prone shoot the parted waters, And lo where
With angry roar athwart the precipice
In mighty furrows rushes to the plunge
A headlong torret, But majestic most
Thy stately fall, unbroken to the base,
Fair column of white water meekly shrined
In the dim grandeur of thy gloomy chasm.

"Imperishable waters! To the Place
From whence ye came incessant ye return,
Dissolve, condense and constant reappear;
A river now, and now a restless wave,
Aloft a heaven–obscuring canopy,
A thunder–cloud alighting in soft rain,
Or split in torrents on the streaming earth,
Again to gather, and perchance again
Shoot from yon heights a sounding cataract!"

೧೨. ಪ್ರತಿಯೊಂದು ಕನ್ನಡ ಜಿಲ್ಲೆಯನ್ನು ಕುರಿತು ಗ್ರಂಥಗಳು :—

ಬ್ರಿಟಿಷರು ತಾವು ವಶಪಡಿಸಿಕೊಂಡ ಸೀಮೆಗಳ ಆಡಳಿತವನ್ನು ಪ್ರಾರಂಭಿಸುವುದಕ್ಕೆ ಎಷ್ಟೋ ಹಿಂದೆ ಅವುಗಳ ಭೂಗೋಳ, ಚರಿತ್ರೆ, ಜನಜೀವನ ಇತ್ಯಾದಿಗಳನ್ನು

ಕುರಿತು ಪರಿಚಯ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಅವರ ಆ ಧೋರಣೆಗನುವಾಗಿ ಕಳೆದ ಶತಮಾನದ ಮೊದಲ ಭಾಗದಲ್ಲಿಯೇ ಕನ್ನಡ ನಾಡಿನ ಪ್ರತಿಯೊಂದು ಜಿಲ್ಲೆಯನ್ನು ಕುರಿತಾಗಿಯೂ ಸವಿಸ್ತಾರ ವರದಿಗಳನ್ನು ಬರೆದು ಗ್ರಂಥರೂಪದಲ್ಲಿ ಪ್ರಕಟಿಸಿದರು. " Selections from the Records " ಎಂಬುದಾಗಿ ಇಡೀ ರಾಜ್ಯದ ವಿಷಯವಾಗಿ ಕ್ರಿ. ಶ. 1831 ರಲ್ಲಿ ಹಳೆ ಮೈಸೂರು ಸರಕಾರವು ಬರೆಯಿಸಿದ್ದು 1864 ರಲ್ಲಿ ಮುದ್ರಣವಾಯಿತು. ಅದು ಸಾಲದೆಂಬಂತೆ Major W. Hill ಇವನು ಹಾಸನ ಜಿಲ್ಲೆ, Capt. Gordon ಇವನು ಶಿವಮೊಗ್ಗ ಜಿಲ್ಲೆ, J. Wellesley ಇವನು ಮೈಸೂರು ಜಿಲ್ಲೆ ಮತ್ತು Major C. Pearce ಇವನು ತುಮಕೂರು ಜಿಲ್ಲೆಗಳನ್ನು ಕುರಿತು ಬೇರೆ ಬೇರೆ ಕಾಲದಲ್ಲಿ ಬರೆದರು.

ಮದ್ರಾಸು ಆಧಿಪತ್ಯಕ್ಕೆ ಸೇರಿಸಲ್ಪಟ್ಟಿದ್ದ ದಕ್ಷಿಣ ಕನ್ನಡ ಜಿಲ್ಲೆಯನ್ನು ಕುರಿತು F. M. Mascarenhas ಮತ್ತು ಬಳ್ಳಾರಿ ಜಿಲ್ಲೆಯ ವಿಷಯವಾಗಿ J. Kelsall ಇವರೂ ಬರೆದರು. ದೇಶೀಯ ರಾಜ್ಯವಾಗಿ ಆಗ ಇದ್ದ ಕೊಡಗನ್ನು 1817ರಲ್ಲಿ ಅಳೆದು ಅನ್ವೇಷಿಸಿ Lieut. Connor ಇವನು ಬರೆದನು. E. G. Lynn ಇವನು ಕ್ರಿ.ಶ. 1844 ರಲ್ಲಿ ಹೈದರಾಬಾದ್ ರಾಜ್ಯದ Gazetteers ಗಳನ್ನು ಬರೆದಾಗ ಬಿದರೆ, ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳನ್ನು ಕುರಿತೂ ವಿಸ್ತಾರವಾಗಿ ಪ್ರಸ್ತಾಪಿಸಿದನು. ಅನಂತರ A. C. Lyal ಮತ್ತು Col. Meadows Taylor ಇವರು ಹೈದರಾಬಾದ್ ಕನ್ನಡ ಜಿಲ್ಲೆಗಳಲ್ಲಿ 1870ರ ಕಾಲದಲ್ಲಿ ಪ್ರಾಕ್ತನ ವಸ್ತು ಪರಿಶೋಧನೆಯನ್ನು ನಡೆಸಿ ಹಲವು ವಿಚಾರಗಳನ್ನು ಬಯಲಿಗೆಳೆದು ವಿವರಿಸಿದರು.

ಬೊಂಬಾಯಿ ಆಧಿಪತ್ಯಕ್ಕೆ ಸೇರಿದ್ದ ಕನ್ನಡ ಜಿಲ್ಲೆಗಳ ಪೈಕಿ ಬೆಳಗಾವಿ ಮತ್ತು ಉತ್ತರಕನ್ನಡ ಜಿಲ್ಲೆಗಳ ವಿಷಯವಾಗಿ Henry Stokes ಇವನು 1840 ರಲ್ಲಿ ಬರೆದನು. ಈ ಎರಡು ಜಿಲ್ಲೆಗಳೊಂದಿಗೆ ಬಿಜಾಪುರ ಮತ್ತು ಧಾರವಾಡವನ್ನೂ ಸೇರಿಸಿ ಅವುಗಳ Gazetteers ಗಳನ್ನು ಕ್ರಿ. ಶ. 1841 ರಲ್ಲಿ ಕಲ್ಕತ್ತಾದಲ್ಲಿದ್ದ W. Rushtor ಇವನು ಬರೆದನು. ಕೆಳದಿ ಮತ್ತು ಬಿದನೂರು ರಾಜ್ಯಗಳ ಚರಿತ್ರೆಯನ್ನು ಪ್ರತ್ಯೇಕವಾಗಿ F. M. Mascarenhas ಇವನು ಬರೆದನು. James Campbell ಇವನು ಬೊಂಬಾಯಿ ಆಧಿಪತ್ಯದ ನಾಲ್ಕು ಕನ್ನಡ ಜಿಲ್ಲೆಗಳ Gazetteers ಗಳನ್ನು 1880 ರಲ್ಲಿ ಸಂಪಾದಿಸಿ ಪ್ರಕಟಿಸಿದನು. ಇದೇ ವೇಳೆಗೆ James Burgess ಇವನು ಬಿದರೆ ಮತ್ತು ಗುಲ್ಬರ್ಗಾ ಜಿಲ್ಲೆಗಳ ವಾಸ್ತುಶಿಲ್ಪವನ್ನು ಕುರಿತಾಗಿ ಪರಿಶೋಧನಾ ವರದಿಗಳನ್ನೂ ಸಚಿತ್ರವಾಗಿ ಬರೆದು ಪ್ರಕಟಿಸಿದನು.

ಹೀಗೆ ಕಳೆದ ಶತಮಾನದ ಅವಿಭಾಜ್ಯ ಭರತಖಂಡದ ಸುಮಾರು ಒಂದುಸಾವಿರ ಚಿಕ್ಕ ಮತ್ತು ದೊಡ್ಡಪ್ರಾಂತಗಳ ಮತ್ತು ಎಲ್ಲಾ ಜಿಲ್ಲೆಗಳ ವಿಚಾರವಾಗಿಯೂ ಪ್ರತ್ಯೇಕ ಚರಿತ್ರೆ ಮತ್ತು ಪರಿಚಯಗ್ರಂಥಗಳನ್ನು ಆಂಗ್ಲೇಯ ವಿದ್ವಾಂಸರು ಬರೆದಿದ್ದಾರೆ. ಅಷ್ಟೇ ಅಲ್ಲ, ಈ ಎಲ್ಲಾ ಭಾಗಗಳಲ್ಲಿ ದುಡಿಯುತಿದ್ದ ಸಹಸ್ರಾರು ಐರೋಪ್ಯಾಧಿಕಾರಿಗಳೂ ಸೇನಾಧಿಕಾರಿಗಳೂ ತಮ್ಮ ಆತ್ಮಚರಿತ್ರೆ ಅಥವಾ " Memoirs "

ಇವುಗಳನ್ನು ಬರೆದು ಆಯಾಕಾಲದ ಚರಿತ್ರೆಗೆ ಪರಿಪುಷ್ಟವಾದ ವಿಚಾರಸಂಪತ್ತನ್ನು ಒದಗಿಸಿದ್ದಾರೆ. ಕರ್ಣಾಟಕ ಅಥವಾ ಕನ್ನಡ ಭಾಷಾಸೀಮೆಗಳ ಜನರು ಆಗ ದಕ್ಷಿಣ ದಲ್ಲೆಲ್ಲಾ ಹರಡಿದ್ದಾಗ ಆ ಜನರ ಪ್ರಾಚೀನ ಚರಿತ್ರೆ ಮತ್ತು ಸಾಹಿತ್ಯಗಳನ್ನೆಲ್ಲಾ ಐತಿಹಾಸಿಕವಾಗಿ ಒಂದುಗೂಡಿಸಿ ಅವುಗಳ ಮೇಲೆ ತಕ್ಕಪರಿಶೀಲನೆಯನ್ನು ನಡೆಸುವುದು ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ. ಜನರೂ, ಭಾಷೆಗಳೂ, ಸಂಸ್ಕೃತಿಯೂ ಬೇರೆ ಬೇರೆಯಾಗಿ ಈ ವಿಶಾಲದೇಶದಲ್ಲಿ ತೋರಿದ್ದರೂ ಇಡೀ ದೇಶವನ್ನು ಒಂದೇ ರಾಜ ಕೀಯ ಘಟಕವಾಗಿ ಭಾವಿಸಿಯೇ ಅವರು ಸ್ಥಳೀಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅನ್ವೇಷಣೆಯನ್ನು ನಡೆಸಿ ಈ ರೀತಿ ಸಹಸ್ರಾರು ಗ್ರಂಥಗಳ ಮೂಲಕ ಈ ದೇಶದ ಜನ ರಿಗೆ ತಮ್ಮ ಐತಿಹಾಸಿಕ ಮೇಲ್ಮೆಯ ಪರಿಚಯವನ್ನು ಮಾಡಿಕೊಟ್ಟ ಅಂದಿನ ಆಂಗ್ಲ ಉತ್ಸಾಹಿಗಳು ಕೃತಾರ್ಥರಾಗಿರುವರು!

**೧೩. ಕನ್ನಡ ಭಾಷಾಶಾಸ್ತ್ರಜ್ಞರಲ್ಲಿ ಮೊದಲಿಗನು ಡಾ. ಜಾನ್ ಹೇಂಡ್ಸ್ :—**

Dr. John Hands ಇವನೊರ್ವ ಅಸಾಮಾನ್ಯ ಸಾಹಿತಿ ಮತ್ತು ಮತ ಪ್ರಚಾರಕನೆಂಬುದನ್ನು ಹಿಂದಿನ ಪುಟಗಳಲ್ಲಿ ಹೇಳಲಾಗಿದೆ. ಕನ್ನಡ ಭಾಷಾ ಪಂಡಿತ ರಾಗಿ ಕಳೆದ ಶತಮಾನದ ಮೊದಲ ಭಾಗದಲ್ಲಿ ಇದ್ದ Dr. Carey ಮತ್ತು John Mackerrel ಇವರ ಸಮಕಾಲೀನನಾಗಿ Dr. Hands ಇವನು ಇದ್ದುದಲ್ಲದೆ ಕನ್ನಡ ವ್ಯಾಕರಣ ಮತ್ತು ಶಬ್ದಕೋಶಗಳ ರಚನೆಗೆ ತೊಡಗಿದ ಪಾಶ್ಚಾತ್ಯ ವಿದ್ವಾಂಸ ರಲ್ಲಿ ಇವನೇ ಮೊದಲಿಗನು. ಕನ್ನಡ ವ್ಯಾಕರಣವನ್ನು ಇವನು ಬರೆಯಲು ಪ್ರಾರಂಭಿ ಸಿದ್ದನಾದರೂ ಅದು ಪೂರ್ತಿಯಾಗದೆ ಅಂತೆಯೇ ನಿಂತುಹೋಯಿತು. ಅದರ ಕೆಲವು ಭಾಗವನ್ನು ಶ್ರೀರಾಮ್‌ಪುರ ಮುದ್ರಣಾಲಯಕ್ಕೆ ಅಚ್ಚುಹಾಕಲಿಕ್ಕೆಂದು ಕಳುಹಿಸಿದ್ದು ಕ್ರಿ.ಶ. 1812 ರಲ್ಲಿ ಆ ಛಾಪಖಾನೆಗೆ ಬೆಂಕಿಹಿಡಿದ ಸಂದರ್ಭದಲ್ಲಿ ಅವನ ಇತರ ಬೈಬಲ್ ಓಲೆಗಳೊಡನೆ ಅದೂ ಬೆಂದುಹೋಯಿತು. ಹೀಗಾಗಿ ಅವನು ಹಲವು ವಿಷಯಗಳಲ್ಲಿ ನಿರಾಶೆಯನ್ನು ಹೊಂದಿ ಕಡೆಗೆ ಬೈಬಲ್ಲಿನ ಕನ್ನಡ ಬರೆವಣಿಗೆಯಲ್ಲಿಯೇ ಬಹುಕಾಲವನ್ನು ಕಳೆದನು.

Dr. John Hands ಇವನು ಕ್ರಿ. ಶ. 1828 ರಲ್ಲಿ ತನ್ನ ಸ್ವದೇಶವಾದ ಇಂಗ್ಲೆಂಡಿಗೆ ರಜೆಯ ನಿಮಿತ್ತವಾಗಿ ಹೋಗಿದ್ದಾಗ ಕನ್ನಡ ಅಚ್ಚು ಮೊಳೆಗಳನ್ನು ಹಿಂದಿದ್ದ ಸ್ಥಿತಿಯಿಂದ ಮಾರ್ಪಾಡಿಸಿ ಹೊಸತಾಗಿ ಮತ್ತು ಸ್ಪಷ್ಟವಾಗಿ ನಿರ್ಮಿಸಿ ತಂದುದು ಅವನ ಮತ್ತೊಂದು ಸಾಹಸವಾಗಿದೆ. ಆ ವರೆಗೂ ಕನ್ನಡ ಅಕ್ಷರಗಳ ಅಚ್ಚು ಮುದ್ರಿಸಲಿಕ್ಕೆ ಯೋಗ್ಯವಾಗಿದ್ದಂತೆ ಇರಲಿಲ್ಲ.

ಕನ್ನಡ-ಇಂಗ್ಲಿಷ್ ನಿಘಂಟನ್ನೂ ಬರೆಯಲು ಪ್ರಾರಂಭಿಸಿದ್ದ ಪಾಶ್ಚಾತ್ಯ ಕನ್ನಡ ವಿದ್ವಾಂಸರಲ್ಲಿ Dr. Hands ಇವನೇ ಮೊದಲನೆಯವನು. ಆದರೆ ಅವನ ಈ ಕೃತಿಯೂ ಪೂರ್ತಿಯಾಗದೆ ಮತ್ತು ಅಚ್ಚು ದೊರೆಯದಿದ್ದುದು ಕನ್ನಡ ಸಾಹಿತ್ಯದ ದುರ್ದೈವವಾಗಿದೆ. ಕ್ರಿ.ಶ. 1833 ರ ಒಳಗಾಗಿ ಅವನು ತನ್ನ ಶಬ್ದಕೋಶದ ಕರಡು ಪ್ರತಿಯನ್ನು ತಯಾರಿಸಿದ್ದನು. ಅಂಥಾ ಒಂದು ಗ್ರಂಥರಚನೆಗೆ ಹಿಂದಿನ ಯಾವ

ಆಧಾರವೂ ಇಲ್ಲದೆ ಮೊದಲಬಾರಿಗೆ ಕೈಕೊಳ್ಳುವಾಗ ಅದೆಷ್ಟು ಪ್ರಯಾಸಕರವಾದ ಮತ್ತು ಅಗಾಧವಾದ ಕೆಲಸವಾಗಿತ್ತೆಂಬುದನ್ನು Dr. John Hands ಇವನ ಮಾತುಗಳಿಂದಲೇ ತಿಳಿಯಬಹುದು :—

"The work was commenced sixteen years ago, and scarcely a day has passed when health would allow, in which I have not laboured therein……."

ಇದರಿಂದ ಅವನು ಕ್ರಿ.ಶ. 1815 ರಿಂದಲೇ ಈ ಶಬ್ದಕೋಶದ ರಚನೆಗೆ ಆರಂಭಿಸಿದ್ದನೆಂದು ವ್ಯಕ್ತವಾಗುತ್ತದೆ. ಅದು ಅವನು ಬರೆದ ರೀತಿಯಲ್ಲಿಯೇ ಅಚ್ಚಾಗಿ ದೊರೆಯದಿದ್ದರೂ ಕನ್ನಡ ವ್ಯಾಕರಣ ಮತ್ತು ನಿಘಂಟುಗಳ ರಚನೆಗೆ ಅವನು ತಕ್ಕ ತಳಹದಿಯನ್ನು ಹಾಕಿದ್ದ ಗಣ್ಯ ಭಾಷಾಶಾಸ್ತ್ರಜ್ಞನೆಂಬುದು ಅವನ ನಂತರ ಅದೇ ಕೆಲಸಗಳನ್ನು ಕೈಗೊಂಡ ಇತರ ಆಂಗ್ಲ ವಿದ್ವಾಂಸರು ಪ್ರಶಂಸಾಪೂರ್ವಕವಾಗಿ ಒಪ್ಪಿದ್ದಾರೆ.

### ೧೪. ಕನ್ನಡ ಗ್ರಂಥಗಳಲ್ಲಿ ಮೊದಲು ಅಚ್ಚಾದುದು ಕ್ಯಾರಿ ಇವನ ವ್ಯಾಕರಣ* :—

ಕನ್ನಡ ಬೈಬಲು ಗ್ರಂಥಗಳಲ್ಲಿ Dr. John Hands ಇವನದು ಮೊದಲು ಅಚ್ಚಾದುದಾದರೆ ಸಾಹಿತ್ಯ ಗ್ರಂಥಗಳಲ್ಲಿ Rev. William Carey ಇವನು ರಚಿಸಿದ 145 ಪುಟಗಳ ಕನ್ನಡ ವ್ಯಾಕರಣವು 1817 ರಲ್ಲಿ ಮೊದಲ ಬಾರಿಗೆ ಮುದ್ರಣವಾಗಿ ಹೊರಬಂತು. Rev. Carey ಇವನ ವಿದ್ವತ್ತು ಮತ್ತು ಪ್ರಭಾವವು ಬಹುಮುಖವಾದುದು. ಅವನಿಗೆ ತಿಳಿದಿದ್ದ ಭಾಷೆಗಳು ಅಸಂಖ್ಯವಾಗಿದ್ದುವು. ಅವನ ಭಾಷಾಶಾಸ್ತ್ರ ಪಾಂಡಿತ್ಯವೂ ಅಪಾರವಾದುದು. ಪರ್ಶಿಯನ್, ಬಂಗಾಳೀ, ಒರಿಯಾ, ಪಂಜಾಬೀ, ಮರಾಠಿ, ತೆಲುಗು, ಬರ್ಮಿ, ನೇಪಾಳೀ, ಚೀನೀ, ಇತ್ಯಾದಿಯಾಗಿ ಮೂವತ್ತೈದು ಭಾಷೆಗಳಲ್ಲೂ ಅವನು ಕೈಯ್ಯಾಡಿಸಿದ ಧೀರ! ಅವನು ಬರೆದ ಕನ್ನಡ ವ್ಯಾಕರಣವು ಅವನ ಶ್ರೀರಾಮ್‌ಪುರ ಮುದ್ರಣಾಲಯದಲ್ಲಿ Rev. Hands ಇವನ ಬೈಬಲ್ಲು ಪ್ರಕಟವಾಗುವ ಮುಂಚೆಯೇ 1817 ರಲ್ಲಿ ಅಚ್ಚಾದುದರಿಂದ ಅದು ಕನ್ನಡದಲ್ಲಿ ಮುದ್ರಣವಾಗಿ ಪ್ರಕಟವಾದ ಮೊದಲನೇ ಗ್ರಂಥವಾಯಿತು. 145 ಪುಟಗಳ ಚಿಕ್ಕ ಹೊತ್ತಗೆಯಾದರೂ ನಿರೂಪಣೆಯು ಸ್ಪಷ್ಟವಾಗಿದೆ. ವ್ಯಾಕರಣದ ಎಲ್ಲಾ ವಿವರಣೆಗಳನ್ನೂ ಇಂಗ್ಲಿಷ್‌ನಲ್ಲಿಯೇ ಕೊಟ್ಟಿರುವನು. ಮದ್ರಾಸಿನಲ್ಲಿದ್ದ ತೆಲುಗು ಭಾಷಾ ಪಂಡಿತ F. W Ellis ಇವನು ತೆಲುಗು ಮತ್ತು ಕನ್ನಡ ಭಾಷೆಗಳ ಮೇಲೆ ನಡೆಸಿದ ಪ್ರಯೋಗವನ್ನು ಸದುಪಯೋಗಪಡಿಸಿ Rev. Carey ಇವನು ಈ ಕನ್ನಡ ವ್ಯಾಕರಣವನ್ನು ಆಧುನಿಕ ರೀತಿಯಲ್ಲಿ ಬರೆದವರಲ್ಲಿ ಮೊದಲಿಗನೆಂದರೂ ಸಲ್ಲುವುದು ; ಏಕೆಂದರೆ ಇವನಿಗಿಂತ ಹಿಂದೆ Rev. Hands ಇವನು ಬರೆದದ್ದು ಪೂರ್ತಿಯಾಗಿರಲಿಲ್ಲ, ಮತ್ತು ಅದು ಅಚ್ಚಾಗಿ ಪ್ರಕಟವಾಗುವ ಸುದೈವವನ್ನೂ ಪಡೆಯಲಿಲ್ಲ.

* ಇದರ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಈ ವ್ಯಾಕರಣ ಪುಸ್ತಕದ ಮೊದಲ ಪುಟದಲ್ಲಿ ಅದರ ಕರ್ತೃವನ್ನು ಕುರಿತು ಇಂಗ್ಲಿಷಿನಲ್ಲಿ ಹೀಗೆ ಬರೆಯಲಾಗಿದೆ—

"A Grammar of the Kurnataka language by W. Carey D. D., Professor of the Sungskrita, Bengalee and Mahratta languages in the College of Fort William; Serampore; Printed at Mission Press".

ಇದರಲ್ಲಿರುವ ಭಾಷೆ ಮತ್ತು ನಿರೂಪಣಾ ಕ್ರಮುವೆಲ್ಲವೂ ಸುಮಾರು 170 ವರ್ಷಗಳಿಗೆ ಹಿಂದಿನ ಕಾಲಕ್ಕೆ ತಕ್ಕಂತೆಯೇ ಇದೆ. ಇಂಗ್ಲಿಷಿನಲ್ಲಿ ವಿವರಣೆಗಳಿಂದ ಕೂಡಿದ ಅದರಿಂದ ಈ ಭಾಗವನ್ನು ಎತ್ತಿ ಇಲ್ಲಿ ಕೊಡಲಾಗಿದೆ—

"The future tense is formed by affixing to the root ತೆನೆ for the first person singular, and ತೆವೆ for the plural, ತಿ for the second person, and ತಿರಿ for the plural, ತಾನೆ for the third person singular, and ತಾರೆ for the plural." Example: ಮಾಡುತೆನೆ; ಮಾಡುತೆವೆ; ಮಾಡುತಿ, ಮಾಡುತಿರಿ; ಮಾಡುತ್ತಾನೆ, ಮಾಡುತವೆ"—ಇತ್ಯಾದಿ.

William Carey ಇವನ ಕನ್ನಡ ಭಾಷಾ ವ್ಯಾಸಂಗವು ವ್ಯಾಕರಣವನ್ನು ಬರೆಯುವಷ್ಟು ಪ್ರೌಢವಾಗಿದ್ದಿತೋ ಇಲ್ಲವೋ ಎಂದು ಅವನೇ ಸಂದೇಹಪಡುತ್ತಾನೆ. ಆ ಕಾರಣದಿಂದ ತಾನು ಮೊದಲ ಬಾರಿಗೆ ಕನ್ನಡ ವ್ಯಾಕರಣವನ್ನು ಬಂಗಾಳೀ, ಮರಾಠೀ, ತೆಲುಗು ಮತ್ತು ಪಂಜಾಬೀ ಭಾಷೆಗಳಲ್ಲಿ ಪ್ರಯತ್ನಿಸಿದಂತೆ ಬರೆದಿರುವೆನೆಂದು ಹೇಳುತ್ತಾ ತನ್ನ ಮುನ್ನುಡಿಯಲ್ಲಿ ಹೀಗೆ ವಿನಂತಿಸುತ್ತಾನೆ—

"Should someone who has a more intimate knowledge of the Kurnata language than the Author of this short work can boast of, favour the world with a more ample grammar of it, it is highly probable that the present one would be nearly superseded thereby..."

ಅಂದಿನ ಹಿಂದೂಸ್ಥಾನದಲ್ಲಿ ಪ್ರತಿಭಾವಂತ ವಿದ್ವಾಂಸನಾಗಿದ್ದ ಇವನು ಕನ್ನಡ ಭಾಷೆಯಲ್ಲೂ ಅಪಾರ ಬೈಬಲ್ ಸಾಹಿತ್ಯ ಮತ್ತು ಈ ವ್ಯಾಕರಣ ಗ್ರಂಥದ ಮೂಲಕವಾಗಿ ತನ್ನ ಸೇವಾ ಮುದ್ರೆಯನ್ನೊತ್ತಿ ಕೀರ್ತಿಶೇಷನಾದನು.

**೧೫. ಜಾನ್ ಮೆಕ್ರೆಲ್ ಇವನಿಂದ ರಚಿತವಾದ "ಕರ್ಣಾಟಕ ವ್ಯಾಕರಣ":—**

ಆಧುನಿಕ ಕನ್ನಡ ವ್ಯಾಕರಣ ಪುಸ್ತಕಗಳ ರಚನೆಗೆ 'ತ್ರಿಮೂರ್ತಿ' ಗಳಂತಿದ್ದವರು Rev. Hands, Dr. Carey ಮತ್ತು John Mckerrel ಇವರು. ಇವರ ಪೈಕಿ J. Mckerrel ಇವನು 1816 ರಲ್ಲಿ ಬರೆದ 211 ಪುಟಗಳ ವ್ಯಾಕರಣವು ಕ್ರಿ. ಶ. 1820 ರಲ್ಲಿ ಮದ್ರಾಸಿನ Fort St. George College Press ನಲ್ಲಿ ಅಚ್ಚಾಯಿತು. ಈ ಗ್ರಂಥವು ಅದರ ಪ್ರಮಾಣದಲ್ಲೂ ವಿಷಯ ನಿರೂಪಣೆಯಲ್ಲೂ ಎಷ್ಟೋ ಉತ್ತಮವಾದುದೆಂಬುದಾಗಿ ಪ್ರಸಿದ್ಧವಾಯಿತು.

ಮದ್ರಾಸು ಸರಕಾರದ ವಿದ್ಯಾಖಾತೆಗೆ ಸೇರಿದ್ದ John Mckerrel ಇವನು ಸಂಸ್ಕೃತ, ಪರ್ಷಿಯನ್, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ನಿಸ್ಸೀಮ ಪಂಡಿತನಾಗಿದ್ದನು. ದೇಶೀಯ ಭಾಷೆಗಳಲ್ಲಿ ವ್ಯಾಕರಣ ಗ್ರಂಥಗಳ ಅವಶ್ಯಕತೆವೆಷ್ಟಿದೆ ಯೆಂಬುದಾಗಿ ಇವನು ಕ್ರಿ.ಶ. 1809 ರಲ್ಲಿಯೇ ಕುಂಪೆನೀ ಸರಕಾರಕ್ಕೆ ಒಂದು ವರದಿ ಯನ್ನು ಬರೆದಿದ್ದನು. ಅಲ್ಲದೆ ಈ ಕನ್ನಡ ವ್ಯಾಕರಣವನ್ನು ಬರೆದ ಉದ್ದೇಶವೇನೆಂಬು ದಾಗಿ ಅವನು ತನ್ನ ವ್ಯಾಕರಣ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾನೆ—

"In India, a knowledge of languages of the country is of the highest importance to public interests, for, without that knowledge no public servant can discharge the duties of his office."

ಈ ಗ್ರಂಥ ರಚನೆಗೆ John Mckerrel ಇವನು ಬಹು ಶ್ರಮವಹಿಸಿದ್ದಾನೆ. 'ಶಬ್ದಮಣಿ ದರ್ಪಣ, ಶಬ್ದಾನುಶಾಸನ' ಮೊದಲಾದ ಪ್ರಾಚೀನ ಗ್ರಂಥಗಳ ಆಧಾರ ದಿಂದ ಇಂಗ್ಲಿಷ್‌ನಲ್ಲಿ ವಿವರಣೆಗಳ ಸಮೇತವಾಗಿ ಬಹು ಸ್ಪಷ್ಟವಾಗಿ ವಿಷಯಗಳನ್ನು ನಿರೂಪಿಸಿದ್ದಾನೆ. ಇದರ ಮುದ್ರಣವಾದರೋ ಆ ಕಾಲದ ದೊರಗಾದ ಕಾಗದದ ಮೇಲೆ ಚೊಕ್ಕವಾಗಿ ಬಿದ್ದಿದೆ. ಇದನ್ನು ಇಂಗ್ಲೆಂಡಿನ ಅಂದಿನ ಅರಸನಾದ George IV ಇವನಿಗೆ "ಅರ್ಪಣೆ" ಮಾಡಿದ್ದಾನೆ. ಭಾಷಾಶಾಸ್ತ್ರದ ವಿಷಯವಾಗಿಯೂ ಸಾಕಷ್ಟು ವಿವರಿಸಿದ್ದಾನೆ; ಅಲ್ಲದೆ 'ಶಬ್ದಮಣಿ ದರ್ಪಣ'ವು ತನಗೆ ಅದರ ರಚನೆಗೆ ಎಷ್ಟು ಪ್ರಯೋಜನವಾಯಿತೆಂಬುದನ್ನು ತನ್ನ ಮುನ್ನುಡಿಯ ಕೊನೇ ಭಾಗದಲ್ಲಿ ಹೀಗಂದಿದ್ದಾನೆ—

"In the course of my labours I have derived much information from a very scarce and accurate treatise upon the ancient dialect, which was compiled about seven centu ries ago, by an Indian author named Kesava, and by him termed "Shabda—Mani—Darpana" or the Mirror of the Verbal gems...I feel myself under considerable obligations to E. Richard Sullivam Esq., for his kindness in procuring for me from the Raja of Mysore, the work of Keshava (Kesiraja)."

John Mckerrel ಇವನಿಂದ ರಚಿತವಾದ ಈ ವ್ಯಾಕರಣವು ಕಳೆದ ಶತಮಾನ ದಲ್ಲಿ ಕನ್ನಡ ಶಾಲಾ ವ್ಯಾಕರಣಗಳನ್ನು ಬರೆದ ಹಲವು ವಿದ್ವಾಂಸರಿಗೆ ಕೈಗನ್ನಡಿ ಯಂತಿತ್ತು. ಇದನ್ನು ಅನುಸರಿಸಿಯೇ ಕೃಷ್ಣಮಾಚಾರ್ಯ ಮೊದಲಾದ ದೇಶೀಯ ಪಂಡಿತರು ಆಧುನಿಕ ರೀತಿಯಲ್ಲಿ ವ್ಯಾಕರಣಗಳನ್ನು ಬರೆಯಲು ತೊಡಗಿದರು. ಇದನ್ನು ಪುನರ್ಮುದ್ರಿಸಿದರೆ ಇಂದಿಗೂ ಉಪಯೋಗಿಸಬಹುದಾದ ಸುಂದರವಾದ ಒಂದು ಶಾಸ್ತ್ರೀಯ ಸಾಹಿತ್ಯ ಗ್ರಂಥವು ಅದಾಗಿದೆ.

## ೧೬. ವಿಲಿಯಂ ರೀವ್ ಇವನಿಂದ ಇಂಗ್ಲಿಷ್–ಕನ್ನಡ ಅರ್ಥಕೋಶ :—

Rev William Reeve ಇವನೂ ಹಿಂದೂಸ್ಥಾನಕ್ಕೆ ಕ್ರೈಸ್ತಮತ ಪ್ರಚಾರಾರ್ಥವಾಗಿಯೇ ಬಂದು ಕಲ್ಕತ್ತಾದಲ್ಲಿ ಕೆಲಕಾಲ ಇದ್ದು ಸಂಸ್ಕೃತ. ಬಂಗಾಳೀ, ಹಿಂದೂಸ್ಥಾನೀ. ಒರಿಯಾ ಮೊದಲಾದ ಭಾಷೆಗಳನ್ನು ಕಲಿತನು. ಅನಂತರ ಸುಮಾರು 1818 ರ ಕಾಲದಲ್ಲಿ ಮದ್ರಾಸಿಗೆ ಬಂದು ದಾಕ್ಷಿಣಾತ್ಯ ಭಾಷೆಗಳನ್ನು ಕಲಿತು ಅವುಗಳಲ್ಲೆಲ್ಲಾ ಅಪೂರ್ವ ಪಾಂಡಿತ್ಯವನ್ನು ಸಂಪಾದಿಸಿದನು. ಇಷ್ಟರಲ್ಲಿ ಇವನು ಬಂಗಾಳೀ ಮತ್ತು ಒರಿಯಾ ಸಾಹಿತ್ಯದಲ್ಲಿ ಹಲವು ಬೈಬಲ್ ಗ್ರಂಥಗಳನ್ನು ಬರೆದು ಕಡೆಗೆ ತಮಿಳು ಮತ್ತು ಕನ್ನಡದಲ್ಲೂ ತನ್ನ ಧರ್ಮಗ್ರಂಥವನ್ನು ಬರೆಯಲು ಆರಂಭಿಸಿದನು. ಒರಿಯಾ–ಇಂಗ್ಲಿಷ್ ನಿಘಂಟನ್ನು ಸಹ ತನ್ನ ಭಾಷಾ ಕಾರ್ಯಕ್ರಮದೊಳಗಡಗಿಸಿ ಆ ಕೆಲಸವನ್ನೂ ಒಂದೆಡೆ ಸಾಗಿಸುತ್ತಿದ್ದನು. 1820 ರ ಕಾಲದಲ್ಲಿ ಅವನು ಕನ್ನಡ ಶಬ್ದ ಕೋಶಕ್ಕೆ ವಿಚಾರಗಳನ್ನು ಸಂಗ್ರಹಿಸುವ ನಿಮಿತ್ತವಾಗಿ ಬೆಂಗಳೂರಿನಲ್ಲಿದ್ದನು. ತಾನು ಕನ್ನಡ ಭಾಷೆಯಲ್ಲಿ ವಿಶೇಷ ಆಸಕ್ತಿಯನ್ನು ವಹಿಸಲು ಕಾರಣವೇನೆಂದು William Reeve ಇವನು ಈ ರೀತಿಯಾಗಿ ಹೇಳಿದನು :—

> "One of the Author's principal objects of coming to India, being to assist in translating the Holy scriptures into Carnataca, and he was also necessarily led to pay particular attention to that language, both as to analogies running through its structure; the various inflections which take place in the several classes of its artificial signs and the principles which regulate the position or collocation of words in the formation of its sentences......"

Rev. William Reeve ಇವನು ಬರೆದ ಸಾಹಿತ್ಯಗ್ರಂಥಗಳಲ್ಲಿ ಪ್ರಸಿದ್ಧವಾದವುಗಳು ಅವನ ಒರಿಯಾ ಮತ್ತು ಕನ್ನಡ ನಿಘಂಟುಗಳು. ಹಲವು ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದ ಇವನು ಕನ್ನಡ ಭಾಷೆಯ ಅನ್ವೇಷಣೆಯಲ್ಲಿ ವಿಶೇಷ ಶ್ರದ್ಧೆಯನ್ನಿಟ್ಟಿದ್ದನೆಂಬುದು ಅವನ ಮೇಲಿನ ಮಾತುಗಳಿಂದ ತಿಳಿಯುತ್ತದೆ. ಕ್ರಿ.ಶ. 1824 ರ ವೇಳೆಗೆ ಅವನ ಇಂಗ್ಲಿಷ್–ಕನ್ನಡ ಅರ್ಥಕೋಶವು ಸುಮಾರು 850 folio ಪುಟಗಳ ಪ್ರಮಾಣದಲ್ಲಿ ಪ್ರಕಟವಾಯಿತು. ಈ ನಿಘಂಟು ಕನ್ನಡವನ್ನು ಕಲಿಯತಕ್ಕ ಪಾಶ್ಚಾತ್ಯರಿಗೂ ಇತರ ದೇಶೀಯಭಾಷಾ ಪಂಡಿತರಿಗೂ ಉಪಯೋಗಕರವಾದುದಾದ ಬೃಹದ್ಗ್ರಂಥವಾಗಿ ಪ್ರಕಟವಾಯಿತು.* ಕನ್ನಡ ಸಾಹಿತ್ಯದಲ್ಲಿ ಅಂಥಾ ಅಭೂತಪೂರ್ವ ಸಾಧನೆಯನ್ನು ಹಿಂದಾರೂ ಕೈಗೊಂಡಿರಲಿಲ್ಲ.

John Hands ಇವನು ಇಂಥಾ ಒಂದು ಶಬ್ದಕೋಶವನ್ನು ರಚಿಸಲು ತಕ್ಕ ತಳಹದಿಯನ್ನು ಹಾಕುತ್ತಾ ಇದ್ದಾಗ William Reeve ಇವನು ಒಂದಲ್ಲ ನಾಲ್ಕು ಹೆಜ್ಜೆ ಮುಂದೆ ಹೋಗಿ ಇಂಥಾ ಒಂದು ಅಪಾರ ಅರ್ಥಕೋಶವನ್ನು ತಯಾರಿಸಿದನು.

---

* ಇದರ ಒಂದು ಪುಟದ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಇದರಲ್ಲಿ ಇಂಗ್ಲಿಷ್ ಶಬ್ದಗಳಿಗೆ ಇಂಗ್ಲಿಷ್‌ನಲ್ಲಿ ಅರ್ಥವನ್ನು ಕೊಟ್ಟುದರ ಜತೆಗೆ ಕನ್ನಡದಲ್ಲೂ ಅರ್ಥವನ್ನು ಮತ್ತು ವಿವರಣೆಯನ್ನು ಕೊಟ್ಟಿದ್ದಾನೆ. ಒಟ್ಟಾಗಿ ಈ ಅರ್ಥಕೋಶದಲ್ಲಿ ಸುಮಾರು 25,000 ಶಬ್ದಗಳ ಅರ್ಥವನ್ನು ಕನ್ನಡದಲ್ಲಿ ಕೊಟ್ಟಿದ್ದಾನೆ. ಈ ಇಂಗ್ಲಿಷ್—ಕನ್ನಡ ನಿಘಂಟುವಿನ ಪ್ರಕಟಣೆಯಿಂದ ಮತ್ತು Carey ಮತ್ತು Mckerrel ಇವರ ಆಧುನಿಕ ಕನ್ನಡ ವ್ಯಾಕರಣಗ್ರಂಥಗಳ ರಚನೆಯಿಂದ ಕನ್ನಡ ಸಾಹಿತ್ಯವು ಆ 1825 ರ ಕಾಲದಲ್ಲಿ ಒಂದು ಹೊಸ ಯುಗಕ್ಕೆ ಕಾಲಿಟ್ಟಿತೆಂದೆನ್ನಬಹುದು. ಈ ನಿಘಂಟಿನ ಸಂಕಲನ ಮತ್ತು ಮುದ್ರಣಕ್ಕೆ ಅಂದಿನ ಮೈಸೂರು ಮತ್ತು ಮದ್ರಾಸು ಪ್ರಾಂತ ಸರಕಾರಗಳು William Reeve ಇವನಿಗೆ ವಿಶೇಷ ಸಹಾಯವನ್ನಿತ್ತುವು.

**೧೭. ಕನ್ನಡ-ಇಂಗ್ಲಿಷ್ ಅರ್ಥಕೋಶದ ಪಿತಾಮಹ-ವಿಲಿಯಂ ರೀವ್ :—**

ಕ್ರಿ. ಶ. 1824 ರಲ್ಲಿ ಇಂಗ್ಲಿಷ್-ಕನ್ನಡ ಅರ್ಥಕೋಶವನ್ನು ಮುದ್ರಿಸಿ ಪ್ರಕಟಿಸಿದ Rev. Wiliiam Reeve ಇವನು ಕ್ರಿ. ಶ. 1832 ರ ಒಳಗಾಗಿ ಅದಕ್ಕಿಂತಲೂ ದೊಡ್ಡ ಪ್ರಮಾಣದ ಕನ್ನಡ-ಇಂಗ್ಲಿಷ್ ನಿಘಂಟನ್ನು ಸಿದ್ಧಪಡಿಸಿ ಬೆಳಕಿಗೆ ತಂದನು. ಸುಮಾರು 1430 folio ಪುಟಗಳ ಈ ಬೃಹದ್ಗ್ರಂಥಕೋಶದ ರಚನೆಯಿಂದ ಈ ಪಾಶ್ಚಾತ್ಯ ತಪಸ್ವಿಯು ತನ್ನ ಹೆಸರನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಜರಾಮರವಾಗಿಸಿದ್ದಾನೆ.

ಈ ಅರ್ಥಕೋಶವು ಮದ್ರಾಸಿನ Government Gazette Press ನಲ್ಲಿ ಅಂದವಾಗಿ ಮುದ್ರಣವಾಗಿದೆ. ಅದನ್ನು ನಿಘಂಟುಕಾರನು ತನಗೆ ಆ ಕಾರ್ಯದಲ್ಲಿ ನೆರವಾದ ಅಂದಿನ ಮದ್ರಾಸು ಗವರ್ನರ್ Lord Lushington ಮತ್ತು ಕುಂಪೆನಿ ಸರಕಾರದ Court of Directors ಈ ಸರ್ವರಿಗೂ 'ಅರ್ಪಣೆ' ಮಾಡಿದ್ದಾನೆ. ಕಳೆದ ಶತಮಾನದ ಮೊದಲ ಸುಮಾರು ಎಂಭತ್ತು ವರ್ಷಗಳ ಕಾಲದ ವರೆಗೂ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ William Reeve ಇವನ ಅರ್ಥಕೋಶಗಳೇ ಕೈದೀವಿಗೆಯಾಗಿದ್ದುವು ಅವನು ಅವರಲ್ಲಿ ಶಬ್ದಾರ್ಥಗಳನ್ನು ಹೇಗೆ ಕೊಟ್ಟಿರುವನೆಂಬುದಕ್ಕೆ ಈ ಉದಾಹರಣೆಗಳನ್ನು ಕೊಡಲಾಗಿದೆ :—

ಬಂಟ—s. n. A hero or warrior, a foot soldier, a servant, a pawn-at chess ;

ಬಂಡ—adj. Obstinate, perverse, forward, disobedient, unfeeling, selfish, s. n. wool.

ಬಂಡಣ-s. n War, combat, fight, battle.

ಹಲವು ಸಂದರ್ಭಗಳಲ್ಲಿ ಒಂದೊಂದು ಶಬ್ದದ ವಿವಿಧ ಕನ್ನಡ ರೂಪಾಂತರಗಳನ್ನು ಕೊಟ್ಟು ಅರ್ಥವನ್ನು ಸಮರ್ಪಕವಾಗಿ ವಿವರಿಸಿದ್ದಾನೆ. ಹಾಗೆ ವಿವರಿಸಲ್ಪಟ್ಟ ಶಬ್ದಗಳ ಅರ್ಥವು ಹಲವೆಡೆ ಹತ್ತು ಪಂಕ್ತಿಗಳಷ್ಟು ದೀರ್ಘವಾಗಿ ವಿವರಿಸಲ್ಪಟ್ಟಿದೆ. ಅವನು ಚತುರಾಸ್ಯ, ಶಬ್ದಮಂಜರಿ, ಅಮರಕೋಶ, ಕಬ್ಬಿಗರ ಕೈಪಿಡಿ ಇತ್ಯಾದಿಗಳನ್ನು ಆಧಾರ

ವಾಗಿಟ್ಟುಕೊಂಡು ಈ ಅರ್ಥಕೋಶವನ್ನು ತಯಾರಿಸಿದನು. ಈ ಕೆಲಸವಲ್ಲಿ ತನಗಾದ ಅನುಭವವೆಂತೆಂದು William Reeve ಇವನು ಹೀಗೆ ಹೇಳಿದ್ದಾನೆ:—

"The task has been at all times most laborious........ extremely insipid, unprofitable and irksome."

ಇಷ್ಟು ದೊಡ್ಡ ಅರ್ಥಕೋಶವನ್ನು ಬರೆಯುವ ಹೊಣೆಯನ್ನು ಹೊತ್ತ ಈ ವಿದ್ವಾಂಸನು ತಾನು ಅದನ್ನು ನಿಸ್ವಾರ್ಥದೃಷ್ಟಿಯಿಂದ ಮತ್ತು ಸೇವಾಭಾವದಿಂದ ಕೈಗೊಂಡನೆಂಬುದನ್ನು ಹೀಗೆ ತಿಳಿಸಿದ್ದಾನೆ:—

"It has been persecuted with long and frequent interruptions......The motives which have incited and substained perseverence to the end have been, partly the prospect of usefulness and advantage to the public service, but chiefly that of furnishing facilities for promoting and expediting the mental and spiritual improvement......of those .. amongst whom the Karnataka language is vernacular."

ಈ ಮಹಾಪಂಡಿತನ ಸಾಹಸವು ಆ ಕಾಲದಲ್ಲಿ ಇತರ ಪಾಶ್ಚಾತ್ಯ ವಿದ್ವಾಂಸರನ್ನು ಬೆರಗಾಗಿಸದೆ ಇರಲಿಲ್ಲ. William Reeve ಇವನ ಈ ನಿಘಂಟುವನ್ನು ಕುರಿತು ಐವತ್ತು ವರ್ಷಗಳನಂತರ ಅವನಂತೆಯೇ ಇನ್ನೊಬ್ಬ ನಿಘಂಟುಕಾರನಾದ Rev. Fernandiz Kittel ಇವನು ಈ ರೀತಿಯಾಗಿ ಪ್ರಶಂಸಿಸಿದನು.—

"Considering the conditions of Kannada scholarship when it was compiled, Mr. W. Reeve's work was wonderful production......".

Rev. Reeve ಇವನ ಈ ಕನ್ನಡ ಇಂಗ್ಲಿಷ್ ನಿಘಂಟಿಗೂ ಮದ್ರಾಸು ಸರಕಾರವು ವಿಶೇಷ ಸಹಾಯವನ್ನೀಯಿತು; ಅನಂತರ ಸರಕಾರದ ಮೂಲಕವಾಗಿಯೇ ಈ ಅರ್ಥಕೋಶದ ಪ್ರತಿಯೊಂದಕ್ಕೆ ರೂ. 12 ರಂತೆ ಒಂದು ನೂರನಲ್ವತ್ತು ವರ್ಷಗಳಿಗೆ ಹಿಂದೆ ಮಾರಾಟ ಮಾಡಿದರು ಎಂದರೆ ಈಗಿನ ರೂಪಾಯಿ ಬೆಲೆಯಲ್ಲಿ ಪ್ರತಿಯೊಂದಕ್ಕೆ ರೂ. 200 ರಷ್ಟು ಬೆಲೆಯಾಯಿತು. ನಿಜವಾಗಿಯೂ ಈ ಗ್ರಂಥವು ಆ ಬೆಲೆಗೆ ಅರ್ಹವಾದುದಾಗಿಯೇ ಇದೆ!

---

## ೧೯

“ಲೆಕ್ಕಿಗ ಮಿತಾಕ್ಷರರು ಬೆಳೆದು ಹುರಿದಿಹ ನಾಡು
ಜಕ್ಕಣನ ಶಿಲ್ಪಿಕಲೆಯಚ್ಚರಿಯ ಕರುಗೋಡು,
ಚೊಕ್ಕ ಮತಗಳ ಸಾರಿದವರಿಗಿದು ನೆಲೆವೀಡು
ಬೊಕ್ಕಸದ ಕಣಜವೈ ವಿದ್ವತ್ತೆಗಳ ಕಾಡು—

“ಪಾವನೆಯರಾ ಕೃಷ್ಣೆ ಭೀಮೆಯರ ತಾಯ್ನಾಡು
ಕಾವೇರಿ ಗೋದೆಯರು ಮೈದೊಳೆವ ನಲುನಾಡು
ಆವಗಂ ಸ್ಫೂರ್ತಿಸುವ ಕಬ್ಬಿಗನ ನಡೆಮಾಡು
ಕಾವ ಗಡುಗಿನ ವೀರ ನಾರಾಯಣನ ಬೀಡು.

[ಹು. ನಾರಾಯಣರಾವ್]

ಸುಮಾರು ಕ್ರಿ.ಶ. 1850ರ ವರೆಗೂ ಬ್ರಿಟಿಷ್ ಸರಕಾರವು ತನ್ನ ಅಧಿಕಾರವನ್ನು ಈ ದೇಶದಲ್ಲಿ ಭದ್ರಪಾಗಿಸಲು ಹೆಣಗುತ್ತಲೇ ಇದ್ದಿತು. ಕಡೇ ಮೈಸೂರು ಯುದ್ಧದನಂತರ ಪಂಜಾಬು ಯುದ್ಧ, ಅಫಘಾನ್ ಯುದ್ಧ, ನೇಪಾಳ ಯುದ್ಧ ಹೀಗೆ ಮೊದಲಾಗಿ ಯುದ್ಧಗಳು ಆಗುತ್ತಲೇ ಇದ್ದುವು. ಅಷ್ಟರಲ್ಲಿ ಅವರು ಕೈಗೊಂಡಿದ್ದ ಹಲವು ಪ್ರಗತಿಪರ, ಯೋಜನೆಗಳು ಸಹ ಅಂದಿನವರೆಗೂ ಅಂಥಾದ್ದೇನೂ ಕಾಣದೇ ಇದ್ದ ಈ ದೇಶದ ಜನವನ್ನು ದಂಗು ಬಡಿಸಿದುವು; ಪರಿಣಾಮವಾಗಿ ಕ್ರಿ.ಶ. 1857 ರಲ್ಲಿ ಅಲ್ಲಲ್ಲಿ ಅತೃಪ್ತಿಗೊಂಡ ಮತ್ತು ಪದಚ್ಯುತರಾದ ದೇಶೀಯ ಪ್ರಮುಖರು ಜನವನ್ನು ಊದಿ ಉಬ್ಬಿಸಿ ಒಂದು ಗೊಂದಲವನ್ನು ಎಬ್ಬಿಸಿದರು. ಇಂದೀಗ ಅದನ್ನು ನಮ್ಮ ಸ್ವಾತಂತ್ರ್ಯ ಸಮರಸ ಮೊದಲನೇ ಹಂತವೆಂದು ಹೇಳುತ್ತಾರೆ. ಹೇಗೂ ಹಿಂದೆಂದೋ ಅಗಲಿ ಹೋಗಿದ್ದ ಆ ಸ್ವಾತಂತ್ರ್ಯಕ್ಕೆ ಪುನಃ ಜೀವಕಳೆಯನ್ನಿತ್ತು ಈ ವಿಶಾಲ ದೇಶವನ್ನು ಒಂದೇ ಪ್ರಭುತ್ವದ ಮತ್ತು ಒಂದೇ ಧ್ವಜದ ಅಡಿಯಲ್ಲಿ ಕಟ್ಟಿಟ್ಟವರು ಬ್ರಿಟಿಷರೇ ಆಗಿದ್ದಾರೆ.

ಪರಿಸ್ಥಿತಿಯು ಹಾಗಿದ್ದಾಗ ಐರೋಪ್ಯಾ ಸಾಹಿತಿಗಳು ಕ್ರೈಸ್ತ ಮತಪ್ರಚಾರಕರಾದ ವಿದ್ವಾಂಸರೂ ತಮ್ಮ ವ್ಯವಹಾರವನ್ನು ಎಂದಿನಂತೆ ನಡೆಸುತ್ತಾ ಮುಂದುವರಿದರು. ದಂಗೆಯೋ ಧಾಳಿಯೋ ಧೂರ್ತತೆಯೋ ಏನೊಂದೂ ಅವರನ್ನು ಬಾಧಿಸಲಿಲ್ಲ. ಅವರ ಸಾಹಿತ್ಯ ಸೇವೆ, ವಿದ್ಯಾಪ್ರಚಾರ, ಐತಿಹಾಸಿಕ ಅನ್ವೇಷಣೆಗಳೆಲ್ಲವೂ ಭರದಿಂದ ನಡೆಯುತ್ತಲೇ ಇದ್ದಿತು. ಬೈಬಲ್ ಸಾಹಿತ್ಯ, ಪಠ್ಯಪುಸ್ತಕಗಳ ರಚನೆ, ಉದ್ಗ್ರಾಮ ನಿಘಂಟುಗಳು, ವ್ಯಾಕರಣ ಗ್ರಂಥಗಳು, ಇತಿಹಾಸಗಳು, ಧರ್ಮಗ್ರಂಥಗಳು ಎಂದು ಮೇಲಿಂದ ಮೇಲೆ ಪ್ರಕಟವಾಗುತ್ತಲೇ ಇದ್ದುವು.

ಕ್ರಿ.ಶ. 1800 ರಿಂದಲೇ ನಾಡಿನ ಉದ್ದಗಲಕ್ಕೂ ಹಲವು ಶಾಲೆಗಳನ್ನು ಸ್ಥಾಪಿಸಿದ್ದ ಅಂದಿನ ಪಾಶ್ಚಾತ್ಯ ಕ್ರೈಸ್ತ ಗುರುಗಳು ಸುಮಾರು 1825 ರಿಂದ

ಉತ್ತಮ ಮಟ್ಟದ ಪಠ್ಯಪುಸ್ತಕಗಳನ್ನು ತಮ್ಮ ವಿದ್ಯಾಕ್ರಮಕ್ಕೆ ತಕ್ಕಂತೆ ರಚಿಸ ತೊಡಗಿದರು. ತಾವು ಬೈಬಲನ್ನು ಮಾತ್ರ ಬರೆದರೆ ಸಾಲದು; ತಾವು ಬರೆದುದನ್ನು ಓದಲಿಕ್ಕೂ ಕಲಿಯಲಿಕ್ಕೂ ತಕ್ಕಂಥಾ ಅಕ್ಷರಸ್ಥರಾದ ದೇಶೀಯರ ಸಂಖ್ಯೆಯನ್ನು ಹೆಚ್ಚಿಸುವ ಕಾತರವೂ ಅವರಲ್ಲಿತ್ತು. ಆದುದರಿಂದ ಇಂಗ್ಲಿಷ್, ಕನ್ನಡ, ಚರಿತ್ರೆ, ಭೂಗೋಳ ಇತ್ಯಾದಿ ಪಾಠಪುಸ್ತಕಗಳನ್ನು ಶಾಲೆಗಳ ಉಪಯೋಗಕ್ಕಾಗಿ ಬರೆದು ಪ್ರಕಟಿಸಲಾರಂಭಿಸಿದರು.

**೨. ಶಾಲೆಗಳ ಪ್ರಯೋಗಾರ್ಥವಾಗಿ ಹಲವು ಪಠ್ಯಪುಸ್ತಕಗಳು :—**

ಸುಮಾರು ಕ್ರಿ.ಶ. 1835 ರಿಂದ ಶಾಲೆಗಳಿಗೆ ತಕ್ಕುದಾದ ಪಠ್ಯಪುಸ್ತಕಗಳ ರಚನೆಗೆ ಆರಂಭವಾದುವು. ಅವುಗಳನ್ನು ಸರಕಾರದವರು ಅಥವಾ ಕ್ರೈಸ್ತರವೇ ಆದ ಮುದ್ರಣಾಲಯಗಳ ಸಂಸ್ಥಾಪಕರು ಐರೋಪ್ಯಾ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸುತಿದ್ದರು. ಆ ಕಾರಣದಿಂದ ಹಲವು ಪಠ್ಯಪುಸ್ತಕಗಳ ಲೇಖಕರು ಯಾರೆಂಬುದು ಸ್ಪಷ್ಟವಾಗುವುದಿಲ್ಲ. ಅಲ್ಲದೆ ಅಂದಿನ ಕೆಲವು ಪುಸ್ತಕಗಳಲ್ಲಿ ಕರ್ತೃಗಳ ಹೆಸರುಗಳೂ ಸೂಚಿತವಾಗಿಲ್ಲ.

ಅಂದಿನ ಹೊಸ ವಿದ್ಯಾಕ್ರಮಕ್ಕನುಗುಣವಾಗಿ ಮತ್ತು ಹೊಸ ರೀತಿಯಲ್ಲಿ ಬರೆಯಲಾರಂಭವಾದ ಆ ಪುಸ್ತಕಗಳು ನಿರೂಪಣೆ ಮತ್ತು ವಿಷಯ ಸಂಗ್ರಹಣದಲ್ಲಿ ಪರಿಪುಷ್ಟವಾಗಿವೆ. ಭಾಷಾಬೋಧನೆಗೆ ಅವರು ವಿಶೇಷ ಪ್ರಾಶಸ್ತ್ಯವಿತ್ತಿದ್ದರು. ವ್ಯಾಕರಣ ಪಠ್ಯಪುಸ್ತಕಗಳು ಹಲವು ಬರೆಯಲ್ಪಟ್ಟುವು. 1841ರಲ್ಲಿ ಬೆಂಗಳೂರು ವೆಸ್ಲೀಯನ್ ಛಾಪಖಾನೆಯಲ್ಲಿ ಮುದ್ರಣವಾದ "ಕನ್ನಡ ವ್ಯಾಕರಣ ಸಂಗ್ರಹ" ಎಂಬ 57 ಪುಟಗಳ ಹೊತ್ತಗೆಯನ್ನು ಬೆಂಗಳೂರು School Book Society ಇವರ ಮೂಲಕವಾಗಿ ಪ್ರಕಟವಾಗಿ ಎಲ್ಲಾ ಶಾಲೆಗಳಲ್ಲೂ ಉಪಯೋಗಿಸಲಾಗಿತ್ತು.

ಕ್ರಿ.ಶ. 1842 ರಲ್ಲಿ ಬಾಸೆಲ್ ಮಿಷನ್‌ನ ಮೂಲಕ ಮಂಗಳೂರಿನಲ್ಲಿ ಪ್ರಕಟವಾದ ಭೂಗೋಳ ಮತ್ತು ಖಗೋಳಶಾಸ್ತ್ರದ ಪ್ರಶ್ನೋತ್ತರ ಶೈಲಿಯ 60 ಪುಟಗಳ ಚಿಕ್ಕ ಪುಸ್ತಕವು Catechism in Geography and Astronomy ಎಂದು ಕರೆಯಲ್ಪಟ್ಟು ಅತಿ ಉತ್ತಮವಾದುದಾಗಿತ್ತು. 1843 ರಲ್ಲಿ ಬೊಂಬಾಯಿ ಅಧಿಪತ್ಯದ ವಿದ್ಯಾಇಲಾಖೆಯು "ಕನ್ನಡ ಬಾಲವ್ಯಾಕರಣ" ಎಂಬುದನ್ನು ಬರೆಯಿಸಿ ಉತ್ತರ ಕರ್ನಾಟಕದ ಶಾಲೆಗಳಲ್ಲಿ ಹಂಚಿದರು. ಇದು ಸಹ ಪ್ರಶ್ನೋತ್ತರ ಶೈಲಿಯಲ್ಲಿಯೇ ಬರೆಯಲ್ಪಟ್ಟುದಾಗಿತ್ತು. ಅದೇ ವರ್ಷ "ವಿಲಿಯಮೆಂಬವನ ಚರಿತ್ರೆ" ಎಂಬ 69 ಪುಟಗಳ ಪುಸ್ತಕವು ಇಂಗ್ಲೆಂಡಿನ ರಾಜ ಮೊದಲನೇ ವಿಲಿಯಮನನ್ನು ಕುರಿತು ಬರೆದದ್ದು ಚರಿತ್ರೆ ಪಾಠಕ್ಕೆ ಉಪಯೋಗಿಸಲ್ಪಟ್ಟಿತು. ಇದು ಬೆಂಗಳೂರಿನ School Book Society ಮೂಲಕ ಪ್ರಕಟವಾಯಿತು.

ಕ್ರಿ.ಶ. 1845ರಲ್ಲಿ ಮೈಸೂರಿನ ವೆಸ್ಲೀ ಮುದ್ರಣಾಲಯದವರು A Manual of Geography ಎಂಬ ೩೩೦ ಪುಟಗಳ ಭೂಗೋಳ ವಿವರಣೆಯನ್ನು ಪ್ರಕಟಿಸಿದ್ದು ಪರಿಪುಷ್ಟವಾದ ಕನ್ನಡ ಪಠ್ಯಪುಸ್ತಕವಾಗಿತ್ತು. ಈ ವಿಷಯದ ಮೇಲೆ ಅಂಥಾ

ಪಠ್ಯಪುಸ್ತಕ ಬರೆಯಲ್ಪಟ್ಟುದು ಅದೇ ಮೊದಲೆಂದು ಹೇಳಬಹುದಾಗಿದೆ. ಅನಂತರ ಆವರಿಂಪಲೇ 1847 ರಲ್ಲಿ "ಭೂಗೋಳದ ವಿವರ" ಎಂಬುದಾಗಿ 498 ಪುಟಗಳ ಸವಿಸ್ತಾರವಾದ ಭೂಗೋಳ ಪಠ್ಯಪುಸ್ತಕವೊಂದು ಪ್ರಕಟಿಸಲಾಯಿತು. ಇದೇ ವರ್ಷ ಬೊಂಬಾಯಿ ವಿದ್ಯಾಖಾತೆಯವರು ೧4 ಪುಟಗಳ Outlines of Geography ಎಂಬುದಾಗಿ ಕನ್ನಡದಲ್ಲಿ ಮತ್ತೊಂದು ಭೂಗೋಳಶಾಸ್ತ್ರ ಪಠ್ಯಪುಸ್ತಕವನ್ನು ಬರೆಯಿಸಿ ಹೊರತಂದರು.

The Rudiments of Canarese Grammar ಎಂಬುದಾಗಿ ಒಂದು ಕನ್ನಡ ವ್ಯಾಕರಣವೂ, Easy Lessons in English and Canarese ಎಂಬ ೨೦೦ ಪುಟಗಳ ಭಾಷಾ ಪಠ್ಯಪುಸ್ತಕವೂ 1847 ರಲ್ಲಿ ಬೆಳ್ಳಾರಿಯ Mission Press ಇಲ್ಲಿಂದ ಪ್ರಕಟವಾಯಿತು. ಇವುಗಳ ಪೈಕಿ ಮೇಲಿನ ಕನ್ನಡ ವ್ಯಾಕರಣವನ್ನು ಬೊಂಬಾಯಿ ಸರಕಾರದವರು 1849 ರಲ್ಲಿ ಪುನರ್ಮುದ್ರಿಸಿ ಶಾಲೆಗಳಲ್ಲಿ ಉಪಯೋಗಿಸಿದರು.

### ೩. ಜಾನ್‌ರೀಡ್ ಇವನಿಂದ "ಇಂಗ್ಲಿಷ್–ಕನ್ನಡ ಬೋಧೆ"* :—

ಐರೋಪ್ಯ ಮತಪ್ರಚಾರಕರು ಆಗ ಬರೆಯಲಾರಂಭಿಸಿದ ಶಾಲಾ ಪಠ್ಯಪುಸ್ತಕಗಳು ಕಿರಿಯರಿಗೆ ಹೇಗೊ ಹಾಗೆಯೇ ಹಿರಿಯರಿಗೂ ತುಂಬಾ ಉಪಯುಕ್ತವಾದುದಾಗಿತ್ತು. ನಿರಕ್ಷರಸ್ಥರಿಂದಲೇ ತುಂಬಿದ್ದ ಈ ದೇಶದಲ್ಲಿ ಆ ರೀತಿ ಹೊಸತಾಗಿ ಮುದ್ರಣವಾದ ಕೈಪಿಡಿಗಳು ಅಂದಿನ ಜನತೆಗೆ ವಿಚಾರ ಜಾಗೃತಿಯನ್ನೀಯಲು ಸಹಾಯಕವಾಗಿದ್ದುವು. ಅಂಥಾ ಪುಸ್ತಕಗಳಲ್ಲಿ Rev. John Reid ಇವನು ಬರೆದ A help in Acquiring a Knowledge in English Language ಎಂಬ 173 demy ಪುಟಗಳ ಹೊತ್ತಗೆಯು 1837 ರಲ್ಲಿ ಬಳ್ಳಾರಿಯಲ್ಲಿ ಮುದ್ರಣವಾಗಿ ಕನ್ನಡನಾಡಿನ ಹಲವೆಡೆ ಅದರ ಪ್ರತಿಗಳನ್ನು ಹಂಚಲಾಯಿತು. ಆ ಪುಸ್ತಕದ ಮೇಲ್ಪುಟದಲ್ಲಿ ಈ ರೀತಿಯಾಗಿ ಒಂದು ಇಂಗ್ಲಿಷ್ ವಾಕ್ಯವನ್ನು ಕೊಡಲಾಗಿದೆ:—

> "Of all the things, knowledge is esteemed the greatest treasure, from incapability to be stolen, from incapability to be given away, and from incapability to be destroyed."

ಈ ಪುಸ್ತಕವು 1840 ರಲ್ಲಿ ಎರಡನೇ ಬಾರಿಗೆ ಮುದ್ರಣವಾಯಿತು. ಈ ಎರಡನೇ ಆವೃತ್ತಿಯಲ್ಲಿ ಆ ರಚನೆಯ ಉದ್ದೇಶವೇನೆಂಬುದನ್ನು ತನ್ನ ಮುನ್ನುಡಿಯಲ್ಲಿ John Reid ಇವನು ಹೀಗಂದಿರುವನು :—

> "This little book is designed as far as practicable to supply the place of a teacher to those natives who wish to acquire a knowledge of the English language ; it also affords a like facility to such Europeans as may wish to acquire a knowledge of Carnataka language."

* ಇದರ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಈ ಹೇಳಿಕೆಯನ್ನು ಅವನು ಕನ್ನಡದಲ್ಲೂ ಅನುವಾದಿಸಿದ್ದಾನೆ. ಅವನ ಬರೆವಣಿಗೆಯು ಹೇಗಿತ್ತೆಂಬುದಕ್ಕೆ ಮೇಲಿನ ವಾಕ್ಯದ ಕನ್ನಡಾನುವಾದವನ್ನು ಕೆಳಗೆ ಕೊಡಲಾಗಿದೆ.

"ಈ ದೇಶಸ್ಥರಲ್ಲಿ ಯಾರು ಇಙ್ಗ್ಲಿಷ್ ಭಾಷೆಯನ್ನು ವಾದಿಸುವದಕ್ಕೆ ಯಿಛೈಸುತ್ತಾರೋ ಅವರಿಗೆ ಚಿಕ್ಕ ಪುಸ್ತಕವು ಕೂಡುವ ಮಟ್ಟಿಗೂ ವುಪಾಧ್ಯಾಯನಿಗೆ ಪ್ರತಿಯಾಗಿರಲಾಲೋಚಸಲ್ಪಟ್ಟದೆ. ಯಿದಲ್ಲದೆ ಇಙ್ಗ್ಲಿಷ್ ಜನರಲ್ಲಿ ಯೊರು ಕನ್ನಡ ಭಾಷೆಯನ್ನು ಕಲಿಯುವುದಕ್ಕೆ ಯಿಚ್ಛಿಸುತ್ತಾರೋ ಅವರಿಗೂ ಯಿದು ಹಾಗೆಯೇ ಉಪಯೋಗವಾಗುವುದು."

ಈ ಪುಸ್ತಕದ ಪರಿಷ್ಕೃತ ಮುದ್ರಣವೂ ಅನಂತರ ಒಂದೆರಡು ಬಾರಿ ಆದುವಲ್ಲದೆ ಅದು ಹಲವು ವರ್ಷಗಳ ಕಾಲ ಕರ್ಣಾಟಕದ ಎಲ್ಲಾ ಶಾಲೆಗಳಲ್ಲೂ ಕನ್ನಡ ಮತ್ತು ಇಂಗ್ಲಿಷ್ ಭಾಷಾ ಬೋಧೆಗೆ ಉಪಯೋಗಿಸಲ್ಪಟ್ಟಿತ್ತು. ಎರಡು ಭಾಷೆಗಳನ್ನೂ ಒಂದೇ ಪುಸ್ತಕದ ಮೂಲಕ ಕಲಿಯುವವರಿಗೆ ತಕ್ಕಂತೆ ಅದು ರಚಿಸಲ್ಪಟ್ಟಿತ್ತು.

**೪. ವಾಲ್ಟರ್ ಎಲ್ಯಟ್ ಇವನಿಂದ "ಇಸೋಪನ ಕತೆಗಳು" :—**

Walter Elliot ಇವನು ಕಳೆದ ಶತಮಾನದ ಮೊದಲಾರ್ಧದಲ್ಲಿದ್ದ ಇನ್ನೊಬ್ಬ ಪ್ರಚಂಡ ವಿದ್ವಾಂಸನು. ಇವನು ಪರ್ಷಿಯನ್, ಸಂಸ್ಕೃತ, ತಮಿಳು, ಕನ್ನಡ ಇತ್ಯಾದಿ ಭಾಷೆಗಳಲ್ಲಿ ಸಮಾನ ಪಾಂಡಿತ್ಯವನ್ನು ಹೊಂದಿದ್ದು ಒರ್ವ ಗಣ ಸಂಶೋಧಕನೂ ಆಗಿದ್ದನು. ಶಾಲೆಗಳಿಗೆ ಉತ್ತಮ ವರ್ಗದ ಪಠ್ಯಪುಸ್ತಕಗಳನ್ನು ಅಂದಿನ ನೂತನಕ್ರಮದ ವಿದ್ಯಾಯೋಜನೆಯ ಕಾಲದಲ್ಲಿ ರಚಿಸಿದವರಲ್ಲಿ ಇವನೂ ಒಬ್ಬನು. Walter Elliot ಇವನು "ಇಸೋಪನ ಕತೆಗಳು" ಇದನ್ನು ಕನ್ನಡಕ್ಕೆ ತಿಳಿಸಿದವರಲ್ಲಿ ಮೊದಲಿಗನೆನ್ನಬಹುದು. ಈ ಗ್ರಂಥದ ಮೊದಲನೇ ಮುದ್ರಣವು ಬಳ್ಳಾರಿಯಲ್ಲಿ 1840ರಲ್ಲಾಯಿತು. ಸುಮಾರು ೨೦೦ demy ಪುಟಗಳ ಈ ಪುಸ್ತಕದಲ್ಲಿ 188 ನೀತಿ ಕಥೆಗಳಿವೆ. ಅದರಲ್ಲಿ ಕೊಟ್ಟಿರುವ ಈ ಮೊದಲನೇ ಕಥೆಯನ್ನು W. Elliot ಇವನ ನಿರೂಪಣಾ ಶೈಲಿಯು ಎಂತಿದೆಯೆಂಬುದಕ್ಕೆ ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ :—

"ನಾಯಿಯೂ ಅದರ ನೆರಳೂ—ಒಂದಾನೊಂದು ನಾಯಿ ತನ್ನ ಬಾಯ್ಯೊಳಗೆ ಮಾಂಸದ ಕರಣಿ ಕಚ್ಚಿಕೊಂಡು ಹೊಳೆದಾಟಿ ಆಚೇ ಕಡೆಗೆ ಹೋಗೋ ಸಮಯದಲ್ಲಿ ನೀರೊಳಗೆ ತನ್ನ ನೆರಳ ತಾನೇ ಕಂಡು, ಇದು ಎರಡನೇ ನಾಯಿ, ಮಾಂಸ ಕಚ್ಚಿಕೊಂಡು ಹೋಗುತ್ತದೆಂದು ನೆನಿಸಿ, ಅದರ ಬಾಯ್ಯೊಳಗಿನ ಮಾಂಸವನ್ನು ಕಸುಕೊಳ್ಳಬೇಕೆಂಬ ಕಾರ್ಪಣ್ಯ ಮನಸ್ಸು ಹಿಡಿದು ತನ್ನ ಬಾಯ್ಯಿ ತೆರದು ಅದರನ್ನು ಹಿಡಿಯಲಿಕ್ಕೆ ಹೋಗೋಣದರಿಂದ ತನ್ನ ಬಾಯ್ಯೊಳಗಿದ್ದ ಮಾಂಸದ ಕರಣಿ ನೀರೊಳಗೆ ಬಿದ್ದು ಹರಿದು ಹೋಯಿತು. ಮತ್ತು ತನ್ನ ಮೋರೆ ನೀರೊಳಗೆ ಮುಳುಗಿಸೋದರಿಂದ ಎರಡನೇ ನಾಯಿ ಕಾಣಿಸದೇ ಹೋಯಿತು.

"ತಾತ್ಪರ್ಯ—ದೇವರು ತನಗೆ ಕೊಟ್ಟದ್ದರಲ್ಲೇ ಸಂತೋಷವಾಗದೆ, ದಾವನು ೨ ನೆಯವರ ವಿಷಯಕ್ಕೆ ಅಪೇಕ್ಷಿಸುತ್ತಾನೋ ಅವನಿಗೆ ಆ ವಿಷಯ ಪ್ರಾಪ್ತಿಯಾಗೋದಿಲ್ಲ. ಆಶೆ ಇದ್ದ ಮೂಲ, ತನ್ನಹತ್ತ್ರೀಲಿ ಇದ್ದದನ್ನ ಕಳ ಕೊಳ್ಳುತ್ತಾನೆ."

ಇದೇ ರೀತಿ ಪ್ರತಿಯೊಂದು ಕತೆಯನ್ನೂ ಅದು ಪ್ರತಿಪಾದಿಸುವ ನೀತಿಯೇನೆಂಬುದರ ಸೂಚನೆಯೊಡನೆ ನಿರೂಪಿತವಾಗಿದೆ. ಸುಮಾರು 130 ವರ್ಷಗಳಿಗೆ ಹಿಂದಿನ ಮುದ್ರಣ ವಾದುದರಿಂದ ಈ ಗ್ರಂಥವು ಹಳೇ ಕನ್ನಡ ಅಚ್ಚು ಮೊಳೆಗಳಲ್ಲಿ ಇದ್ದು ಒಂದೊಂದೆಡೆ ಲಿಪಿಯು ಅಸ್ಪಷ್ಟವಾಗಿದೆ. ಮುದ್ರಾಸಿನ Asylum Press ಇಲ್ಲಿ ಮುದ್ರಣವಾಗಿ ಅದರ ಮೊದಲನೇ ಆವೃತ್ತಿಯು ಪ್ರಕಟವಾಯಿತು. ಇದರ ಎರಡನೇ ಮುದ್ರಣವು 1869 ರಲ್ಲಾಯಿತು. ೨೪೪ ಪುಟಗಳ ಈ ಗ್ರಂಥವು ಮತ್ತು ಮುದ್ರಿತಾಕ್ಷರಗಳು ಸ್ಪಷ್ಟವಾಗಿಯೂ ಸುಂದರವಾಗಿಯೂ ಇವೆ. ಅಲ್ಲದೆ ಅದು ನಾಡಿನ ಎಲ್ಲಾ ಶಾಲೆಗಳಲ್ಲೂ ಜನಪ್ರೀಯ ಪಠ್ಯಪುಸ್ತಕ ಹಾಗೂ ಕತೆ ಪುಸ್ತಕವಾಗಿ ಉಪಯೋಗಿಸಲ್ಪಟ್ಟಿತ್ತು.

**೫. ವಾಲ್ಟರ್ ಎಲ್ಯಟ್ ಇವನ ಭಾಷಾಶಾಸ್ತ್ರ ಬರೆವಣಿಗೆಗಳು :—**

Walter Elliot ಇವನು ಒರ್ವ ಘನ ಸಂಶೋಧಕನಾಗಿದ್ದನು. ಆದರೆ ಅವನ ಬರೆವಣಿಗೆಗಳಲ್ಲಿ ಹಲವು ಅವನೊಡನೆಯೇ ಅದೃಶ್ಯವಾಗಿವೆ. ದ್ರಾವಿಡ ಭಾಷಾ ಶಾಸ್ತ್ರದ ವಿಷಯವಾಗಿ ಇತರರು ತಮ್ಮ ಸಂಶೋಧನಾ ವರದಿಗಳನ್ನು ಬರೆಯುವುದ ಕ್ಕಿಂತ ಎಷ್ಟೋ ಮೊದಲಾಗಿ ಇವನು "Language of the Gonds" ಎಂಬುದರ ಮೇಲೂ, ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳು ಅವುಗಳಿಗಿರುವ ಸಾಮ್ಯತೆ, ಹಲವು ದ್ರಾವಿಡ ಭಾಷಾ ನುಡಿಗಟ್ಟುಗಳ ಸಮಾನ ಪ್ರಯೋಗ ಮೊದ ಲಾದುವನ್ನು ಕುರಿತು 1847 ರ "Asiatic Researches" ಪತ್ರಿಕೆಯಲ್ಲಿ ವಿದ್ವತ್ಪೂರ್ವಕವಾದ ಲೇಖನಗಳನ್ನು ಬರೆದಿದ್ದಾನೆ.

ಅಷ್ಟೇ ಅಲ್ಲ, ಕನ್ನಡ ಭಾಷೆಯಲ್ಲಿ ಬಳಕೆಯಲ್ಲಿರುವ ಹಲವು ವಿಶಿಷ್ಟ ಪದಗಳನ್ನು ಮತ್ತು ಪದ ಪ್ರಯೋಗಗಳನ್ನು ಇತರ ಭಾಷೆಗಳೊಂದಿಗೆ ತುಲನಾತ್ಮಕವಾಗಿ ವಿಮರ್ಶಿಸಿ ದ್ದಾನೆ. ಅವನು ಬರೆದ Canarese Vocabulary ಎಂಬ ಶಬ್ದ ಮಂಜರಿ ಮತ್ತು ಆ ಶಬ್ದ ಪ್ರಯೋಗಗಳನ್ನೂ ಕುರಿತಾದ ಲೇಖನವೂ ಮೇಲಿನ ಪತ್ರಿಕೆಯಲ್ಲಿ ಪ್ರಕಟವಾಗಿದೆ. Walter Elliot ಇವನ ಈ ಇಂಗ್ಲಿಷ್ ಬರೆವಣಿಗೆಯಿಂದ ಕನ್ನಡ ಭಾಷೆಯೇನೆಂಬುದನ್ನು ಇತರ ಭಾಷಾ ಸಾಹಿತಿಗಳು ಆ ಕಾಲದಲ್ಲಿ ತಿಳಿಯು ವಂತಾದರು.

ಕನ್ನಡ ಮತ್ತು ಇತರ ಭಾಷೆಗಳಲ್ಲಿ ಪಠ್ಯಪುಸ್ತಕಗಳ ಬರೆವಣಿಗೆಯಲ್ಲೂ Walter Elliot ಇವನು ಅಂದಿನ ವಿವಿಧ ಪ್ರಾಂತಗಳ ವಿದ್ಯಾ ಇಲಾಖೆಗಳಿಗೆ ಸಹಕಾರಿಯಾಗಿದ್ದನು. ಮದ್ರಾಸು ಸರಕಾರಕ್ಕೂ, ಮಂಗಳೂರಿನ ಬಾಸೆಲ್ ಮಿಷ ನ್ನಿಗೂ ಮೈಸೂರಿನ ವೆಸ್ಲೀ ಮಿಷನ್ನಿಗೂ ತನ್ನ ಹೆಸರನ್ನು ನಮೂದಿಸದೆಯೇ ಹಲ ಕೆಲವು ಪಠ್ಯಪುಸ್ತಕಗಳನ್ನು ಬರೆದುಕೊಟ್ಟಿದ್ದಾನೆ. ಹಾಗೆ ಪ್ರಕಟವಾದ ಪುಸ್ತಕಗಳಲ್ಲಿ

ಮಕ್ಕಳ ಕತೆ ಪುಸ್ತಕಗಳು, ಭೂಗೋಳ, ಚರಿತ್ರೆ ಇತ್ಯಾದಿ ಪಠ್ಯಪುಸ್ತಕಗಳು ಹಲವು ಶಾಲೆಗಳಲ್ಲಿ ಪ್ರಚಾರವಿದ್ದುವು. ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ "ಸುಲಭ ಪಾಠಗಳು" ಎಂಬುದಾಗಿ ಎರಡು ಭಾಷೆಯಲ್ಲೂ ಪಾಠಗಳನ್ನು ಒಂದೇ ಪುಸ್ತಕದಲ್ಲಿ ಬರೆದಿದ್ದಾನೆ. 1846 ರಲ್ಲಿ ದೇಶೀಯನೊರ್ವನು ಸಂಗ್ರಹಿಸಿದ ಸರಕಾರದ ಪತ್ರವ್ಯವಹಾರಗಳ ಸಂಕಲನವನ್ನು Walter Elliot ಇವನು ಪರಿಷ್ಕರಿಸಿ ತನ್ನ ಇಂಗ್ಲಿಷ್ ಬರೆವಣಿಗೆ ಯೊಡನೆ ಪುನಃ ಸಂಪಾದಿಸಿದನು. ಹೇಗೂ ಇವನು ಬರೆದ ಹಲವು ಚಿಕ್ಕ ಹೊತ್ತಗೆ ಗಳಲ್ಲಿ ಯಾವಾವುದು ಯಾವಾವ ಕಾಲದಲ್ಲಿ ಅವನಿಂದ ಬರೆಯಲಾಯಿತೆಂಬುದನ್ನು ನಿಶ್ಚಯವಾಗಿ ಈಗ ಹೇಳಲಿಕ್ಕೆ ಅಸಾಧ್ಯವಾಗಿದೆ.

**೬. ಬ್ರಿಯೊನ್ ಹಾಡ್ಜ್‌ಸನ್ ಇವನ ಮತ್ತು ಇತರರ ಲೇಖನಗಳು :—**

Brian Hodgson ಈ ಭಾರತೀಯ ಭಾಷಾ ಪಂಡಿತನ ವಿಷಯವಾಗಿ ಹಿಂದಿನ ಪುಟಗಳಲ್ಲಿ ಸಾಕಷ್ಟು ಹೇಳಲಾಗಿದೆ. ಉತ್ತರ ಭಾರತದ ಮತ್ತು ದಕ್ಷಿಣದ ಭಾಷೆಗಳ ಅನ್ವೇಷಣೆಯನ್ನು ಶಾಸ್ತ್ರೀಯವಾಗಿ ನಡೆಸಿದ ಇವನು ಕನ್ನಡ ಭಾಷೆಯ ವಿಷಯವಾಗಿಯೂ ಸಾಕಷ್ಟು ಪ್ರಸ್ತಾಪಿಸಿದ್ದಾನೆ. Walter Elliot ಇವನ ಸಹಾಯವನ್ನು ಪಡೆದು ದ್ರಾವಿಡ ಭಾಷೆಗಳ ಪೂರ್ವಾಪರಗಳೆಂತೆಂಬುದನ್ನೂ ಹೇಳಿ ದಲ್ಲದೆ ಹಿಂದೆಯೇ ಹೇಳಿದಂತೆ ದಕ್ಷಿಣದ ಭಾಷೆಗಳೆಲ್ಲಾ ದ್ರಾವಿಡ ಭಾಷಾವರ್ಗಕ್ಕೆ ಸೇರಿದುವುಗಳೆಂದು ಹೇಳಲಿಕ್ಕೂ ಅವನೇ ಮೊದಲನೆಯವನಾದನು.

Dr. Brian Hodgson ಇವನು Aborgines of Southern India ಎಂಬುದಾಗಿ ಬರೆದ ವಿದ್ವತ್ಪೂರ್ಣವಾದ ಇಂಗ್ಲಿಷ್ ಲೇಖನದಲ್ಲಿ ಕನ್ನಡ ನಾಡಿನ ವಿವಿಧ ಜನತೆಯ ವಿಷಯವಾಗಿಯೂ ಹಲವು ವಿಚಾರಗಳನ್ನು ಹೇಳಿದ್ದಾನೆ. ಕ್ರಿ. ಶ. 1849 ರಲ್ಲಿ ಅವನು Kannada Vocabulary ಎಂಬುದಾಗಿ ಕನ್ನಡ ಪದಗಳು ಮತ್ತು ನುಡಿಗುಟ್ಟುಗಳನ್ನು ಕುರಿತ ಲೇಖನ ಮಾಲೆಯನ್ನು ಇಂಗ್ಲಿಷ್‌ನಲ್ಲಿಯೇ ಬರೆದು ಪ್ರಕಟಿಸಿದ್ದನು. ಅದು 1880 ರಲ್ಲಿ 352 ಪುಟಗಳ ಪುಸ್ತಕವಾಗಿ ಪ್ರಕಟವಾಯಿತು.

ಈ ಅವಧಿಯಲ್ಲಿ, ಎಂದರೆ 1845 ರ ಕಾಲದಲ್ಲಿ ಕನ್ನಡ ಭಾಷಾ ಬೋಧೆಗೆ ತಕ್ಕುದಾದ ಕೆಲವು ಪುಸ್ತಕಗಳು ಇತರರಿಂದ ತಮ್ಮ ಹೆಸರನ್ನು ಸೂಚಿಸದೆಯೇ ಬರೆಯಲ್ಪಟ್ಟುವು. Rev. W. H. Pinnock ಇವನು ಪ್ರಶ್ನೋತ್ತರ ಶೈಲಿ ಯಲ್ಲಿ ಬರೆದ ಇಂಗ್ಲಿಷ್ ವ್ಯಾಕರಣವು ಅಂತೆಯೇ ಕನ್ನಡದಲ್ಲಿ ಮೈಸೂರು ವೆಸ್ಲೀ ಮುದ್ರಣಾಲಯದವರಿಂದ 1845 ರಲ್ಲಿ ಬರೆಯಿಸಿ ಪ್ರಕಟಿಸಲಾಯಿತು. ಅಲ್ಲದೆ Rev. Pinnock ಇವನು Rev. Lennie ಇವನು ಬರೆದ ಇಂಗ್ಲಿಷ್ ವ್ಯಾಕರಣ ವನ್ನೂ ಕನ್ನಡಕ್ಕೆ ಭಾಷಾಂತರಿಸಿ 1850 ರಲ್ಲಿ ಬೆಳಕಿಗೆ ತಂದನು.

ಇವೆಲ್ಲಕ್ಕಿಂತಲೂ ಉತ್ತಮವಾದ ಒಂದು ಪಠ್ಯಪುಸ್ತಕವು "J. B. C." ಎಂಬವನಿಂದ "Phrase Book" ಎಂಬುದಾಗಿ ಕರೆಯಲ್ಪಟ್ಟು 1848 ರಲ್ಲಿ ವೆಸ್ಲೀ ಛಾಪಖಾನೆಯವರಿಂದಲೇ ಪ್ರಕಟವಾಯಿತು. ಇಂಗ್ಲಿಷ್ ಪದಗಳ ಮತ್ತು

ಪದಗಟ್ಟುಗಳ ಅರ್ಥವನ್ನು ಕನ್ನಡದಲ್ಲಿ ವಿವರಿಸುವ ಈ ಶಬ್ದಾರ್ಥ ಮಂಜರಿಯು ಅಂದಿನ ಭಾಷಾ ವಿದ್ಯಾರ್ಥಿಗಳಿಗೆ ವಿಶೇಷ ಉಪಯೋಗವಾಗಿತ್ತು. ಇದರ ಮೊದಲನೇ ಆವೃತಿಯು ೨೫೦ ಪುಟಗಳಷ್ಟಿದ್ದು ಸಹಸ್ರಾರು ಸಂಖ್ಯೆಯಲ್ಲಿ ಮುದ್ರಣವಾಗಿ ಪ್ರಚಾರವಾಗಲು ಅದರ ಎರಡನೇ ಆವೃತಿಯು Idiomatical Exercises ಎಂಬ ಹೆಸರಿನಿಂದ ೨೯೬ ಪುಟಗಳಲ್ಲಿ ಪ್ರಕಟವಾಯಿತು. ಇದರ ಕರ್ತೃವಿನ ಪೂರ್ಣ ಹೆಸರನ್ನು ಅದರಲ್ಲಿ ಕೊಡದಿದ್ದರೂ ಅದೊಂದು ಜನಪ್ರಿಯ ಪಠ್ಯಪುಸ್ತಕವಾಗಿ ಮತ್ತು ಕೈಪಿಡಿಯಾಗಿ ಬಹುಕಾಲ ಪ್ರಚಾರದಲ್ಲಿತ್ತು. ಅದರ ಮೂರನೇ ಮುದ್ರಣವು 1854 ರಲ್ಲೂ ನಾಲ್ಕನೇ ಆವೃತಿಯು 1857 ರಲ್ಲೂ ಆಯಿತು.

**೭. ಗೇರೆಟ್ಟ್ ಇವನ ಮೂವತ್ತು ವರ್ಷಗಳ ಅಮೋಘ ಸಾಹಿತ್ಯ ಸೇವೆ :—**

Rev. John Garrett ಇವನು ಕಳೆದ ಶತಮಾನದ ಮಧ್ಯಭಾಗದಲ್ಲಿ ಇದ್ದ ಓರ್ವ ಧೀಮಂತ ಸಾಹಿತಿ, ವಿದ್ವಾಂಸ, ವಿದ್ಯಾತಜ್ಞ, ನಿಘಂಟುಕಾರ, ವ್ಯಾಕರಣಗಾರ, ಮುದ್ರಣಾಲಯಗಳ ಸಂಸ್ಥಾಪಕ ಇತ್ಯಾದಿಯಾಗಿ ಓರ್ವ ವರ್ಣರಂಜಿತ ವ್ಯಕ್ತಿಯಾಗಿ ಶೋಭಿಸಿದನು. ನಾಡಿನ ವಿದ್ಯಾಕ್ಷೇತ್ರದಲ್ಲಿ ಅವನ ಸೇವೆಯು ಬಹುಮುಖವಾಗಿ ಹರಿದಿದೆ. ಓರ್ವ ಕ್ರೈಸ್ತಗುರುವಾಗಿ ಈ ದೇಶಕ್ಕೆ ಬಂದು, ಮೈಸೂರು ವೆಸ್ಲೀ ಕ್ರೈಸ್ತ ಕೇಂದ್ರದ ಮುಖ್ಯ ಸಂಚಾಲಕನಾಗಿ ಅವನು ಮುಟ್ಟಿದೆಲ್ಲವೂ ಚಿನ್ನವಾಯಿತೆಂಬಂತೆ ಅಪಾರ ಸಾಧನೆಗಳನ್ನು ಯಶಸ್ವಿಯಾಗಿ ನಡೆಸಿ ಕೀರ್ತಿಶೇಷನಾದನು.

Rev. Garrett ಇವನು ತನ್ನ ಬೈಬಲ್ ಪ್ರಚಾರ ಕಾರ್ಯಕ್ಕಿಂತ ನಾಲ್ಮಡಿ ಶ್ರದ್ಧೆಯಿಂದ ಹಳೆ ಮೈಸೂರು ರಾಜ್ಯದಲ್ಲಿ ವಿದ್ಯಾಪ್ರಚಾರ ಕಾರ್ಯವನ್ನು ನಡೆಸಿದನು. ತನ್ನ ವೆಸ್ಲೀ ಛಾಪಖಾನೆಗಳ ಮೂಲಕ ನೂರಾರು ಪಠ್ಯಪುಸ್ತಕಗಳನ್ನು ಇತರ ಆಂಗ್ಲ ವಿದ್ಯಾತಜ್ಞರಿಂದ ಬರೆಯಿಸಿ ಮತ್ತು ತಾನಾಗಿ ಬರೆದು ಪ್ರಕಟಿಸಿದನು. ಪ್ರಾಥಮಿಕ ಶಾಲೆಗಳಿಗೆ ತಕ್ಕುದಾದ ಯೂಕ್ಲಿಡನ 'ರೇಖಾಗಣಿತ' ಇದನ್ನು 1866 ರಲ್ಲಿ 103 ಪುಟಗಳ ಪಠ್ಯಪುಸ್ತಕವಾಗಿ ತಯಾರಿಸಿದನು. ಅವನು ಇಂಗ್ಲಿಷಿನಲ್ಲಿ ಬರೆದಿದ್ದ 'ಹಿಂದೂ ದೇಶದ ಚರಿತ್ರೆ'ಯೆಂಬ 124 ಪುಟಗಳ ಪಠ್ಯಪುಸ್ತಕವು ಸಿಂಗರಾರಿಯೆಂಬ ದೇಶೀಯನಿಂದ 1867 ರಲ್ಲಿ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟಿತು. "ಪದ್ಯಸಾರ" ಎಂಬುದಾಗಿ ಅವನು ಸಂಪಾದಿಸಿದ್ದ ಕವನ ಸಂಕಲನವು 1868 ರಲ್ಲಿ ಪ್ರಕಟವಾಯಿತು. ಮೈಸೂರು ಸರಕಾರ ಛಾಪಖಾನೆಯಲ್ಲಿ ಮುದ್ರಣವಾದ 126 ಪುಟಗಳ ಈ ಹೊತ್ತಗೆಯು ಎಲ್ಲಾ ಶಾಲೆಗಳಲ್ಲೂ ಪಠ್ಯಪುಸ್ತಕವಾಗಿ ಉಪಯೋಗಿಸಲ್ಪಟ್ಟಿತ್ತು. ಇದರಲ್ಲಿ ವಿದ್ಯಾರ್ಥಿಗಳಿಗೂ ಹಿರಿಯರಿಗೂ ತಕ್ಕುದಾದ ಮತ್ತು ಧರ್ಮಬೋಧೆಗೆ ಸಂಬಂಧವಾದ ಹಲವು ಉತ್ತಮ ಕವನಗಳು ಇವೆ. G. Wurth ಇವನು ಸಂಪಾದಿಸಿದ್ದ Canarese Poetical Anthology ಇದನ್ನು Rev. Garrett ಇವನು 1869 ರಲ್ಲಿ ಪರಿಷ್ಕರಿಸಿ ಪುನಃ ಮುದ್ರಿಸಿ ಹೊರತಂದನು.

Rev. John Garrett ಇವನು ಅಖಿಲ ಭಾರತ ಖ್ಯಾತಿಯ ವಿದ್ಯಾತಜ್ಞನಾಗಿ ಅಂದು ಶೋಭಿಸಿದ್ದನು. ಹಳೆ ಮೈಸೂರು ರಾಜ್ಯಸರಕಾರವು ಅವನನ್ನು ಶಾಲೆ

ಗಳ ಪರಿಶೀಲಕನಾಗಿ ಆರಂಭದಲ್ಲಿ ನೇಮಿಸಿದ್ದು, ಅನಂತರ ಅವನ ಕರ್ತವ್ಯ ದಕ್ಷತೆ ಮತ್ತು ಸಾಹಿತ್ಯ ಸೇವೆಯನ್ನು ಗಮನಿಸಿ ಅವನನ್ನು ಇಡೀ ರಾಜ್ಯದ ವಿದ್ಯಾಧಿಕಾರಿಯಾಗಿ Director of Public Instruction ಹುದ್ದೆಗೆ ಏರಿಸಿ ಗೌರವಿಸಿತು. ಸುಮಾರು ಕ್ರಿ. ಶ. 1840 ರಿಂದ 1870 ರ ವರೆಗೆ ಅವನು ಆ ರಾಜ್ಯದ ವಿದ್ಯಾ ಪ್ರಗತಿಯ ಮಟ್ಟಗೆ ಹಲವು ರೀತಿಯಲ್ಲಿ ಶ್ರಮಿಸಿದನು.

**೮. ಗೇರೆಟ್ಟ್ ಇವನಿಂದ ಭಗವದ್ಗೀತೆಯ ಕನ್ನಡ ಭಾಷಾಂತರ :—**

ಶ್ರೀಮದ್ಭಗವದ್ಗೀತೆಯನ್ನು ಇಂಗ್ಲಿಷ್ ಮತ್ತಿತರ ಪಾಶ್ಚಾತ್ಯ ಭಾಷೆಗಳಿಗೆ ಅನುವಾದವಾಗಿ ಪ್ರಕಟವಾದ ವಿಚಾರವನ್ನು ಹಿಂದಿನ ಪುಟಗಳಲ್ಲಿ ಸಾಕಷ್ಟು ಹೇಳಲಾಗಿದೆ. ಕನ್ನಡದಲ್ಲಿ ಅದನ್ನು Rev. John Garrett ಇವನು ಕ್ರಿ. ಶ. 1844 ರಲ್ಲಿ ಬರೆದಾಗ ಪಾಶ್ಚಾತ್ಯ ವಿದ್ವಾಂಸರಲ್ಲಿ ಕನ್ನಡದಲ್ಲಿ ಗೀತೆಯನ್ನು ಬರೆದವರಲ್ಲಿ ಅವನೇ ಮೊದಲಿಗನಾದನು; ಅಲ್ಲದೆ ಗೀತೆಯನ್ನು ಕನ್ನಡ ಗದ್ಯರೂಪದಲ್ಲಿ ಬರೆದವರಲ್ಲಿ ಅವನೇ ಎಲ್ಲರಿಗಿಂತಲೂ ಮುಂದಾದನು. ಈ ಗ್ರಂಥವು ಕ್ರಿ.ಶ. 1846 ರಲ್ಲಿ ಬೆಂಗಳೂರು ವೆಸ್ಲೀ ಛಾಪಖಾನೆಯಲ್ಲಿ folio ಪುಟಗಳ ಆಕಾರದಲ್ಲಿ ಅಂದವಾಗಿ ಮುದ್ರಣವಾಯಿತು. ಅದನ್ನು Rev. Garrett ಇವನು ಅಂದಿನ ಮೈಸೂರು ರಾಜ್ಯದ ಅಧಿಕಾರಿಯಾಗಿದ್ದ Sir Mark Cubbon ಇವನಿಗೆ "ಅರ್ಪಣೆ" ಮಾಡಿದ್ದಾನೆ.* ಇದರಲ್ಲಿ Charles Wilkins ಇವನು 1784 ರಲ್ಲಿ ಬರೆದ ಗೀತೆಯ ಇಂಗ್ಲಿಷ್ ಭಾಷಾಂತರ ಮಾತ್ರವಲ್ಲದೆ ಆ ಗ್ರಂಥಕ್ಕೆ Warren Hastings ಇವನು ಬರೆದ ಮುನ್ನುಡಿಯನ್ನೂ ಪ್ರಾರಂಭದಲ್ಲಿ ಕೊಡಲಾಗಿದೆ. ಅದರೊಡನೆ Rev. R. D. Griffith ಇವನು ಗೀತೆಯನ್ನು ಕುರಿತು ಇಂಗ್ಲಿಷ್‌ನಲ್ಲಿ ಬರೆದ ಪ್ರಬಂಧ, G. H. Weigle ಇವನು ಬರೆದ ಗೀತೆಯ ಜರ್ಮನ್ ಭಾಷಾಂತರ, Baron Humboldt ಇವನು ಜರ್ಮನ್‌ನಲ್ಲಿ ಬರೆದ ಗೀತೆಯನ್ನು ಕುರಿತಾದ ಟೀಕೆ ಮತ್ತು A. G. Schlegel ಇವನು ಬರೆದ ಗೀತೆಯ ಲ್ಯಾಟಿನ್ ಭಾಷಾಂತರವೆಲ್ಲವೂ ಅಡಕವಾಗಿ ಒಂದು ಸುಂದರವಾದ ಪುಸ್ತಕವಾಗಿದೆ. ಒಟ್ಟಾಗಿ ಸಂಸ್ಕೃತ, ಕನ್ನಡ, ಜರ್ಮನ್, ಇಂಗ್ಲಿಷ್ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಆವರೆಗೆ ಬರೆಯಲ್ಪಟ್ಟ ಗೀತಾನುವಾದವೆಲ್ಲವನ್ನೂ Rev. Garrett ಇವನು ಈ ಅಂದವಾದ ಹೊತ್ತಗೆಯಲ್ಲಿ ಕೊಟ್ಟು ತನ್ನ ಸಾಹಸದಲ್ಲಿ ಪರಿಪೂರ್ಣನಾಗಿದ್ದಾನೆ ಎಂದಷ್ಟೇ ಹೇಳಬಹುದು.

ಮೊದಲ ಬಾರಿಗೆ ಕನ್ನಡ ಗದ್ಯದಲ್ಲಿ ತೋರ್ಪಟ್ಟ ಮತ್ತು ಐರೋಪ್ಯಾ ವಿದ್ವಾಂಸನೊರ್ವನಿಂದ ಬರೆಯಲ್ಪಟ್ಟ ಈ ಭಗವದ್ಗೀತೆಯ ಅನುವಾದ ಶೈಲಿಯು ಎಂತಿದೆಯೆಂಬುದಕ್ಕೆ ಅದರ ಮೊದಲ ಅಧ್ಯಾಯದಿಂದ ಕೆಲವು ವಾಕ್ಯಗಳನ್ನು ಎತ್ತಿ ನಿದರ್ಶನಾರ್ಥವಾಗಿ ಇಲ್ಲಿ ಕೊಡಲಾಗಿದೆ—

"ಶ್ಲೋಕ ೧—ಪುಣ್ಯಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧಾಪೇಕ್ಷೆಯುಳ್ಳವರಾಗಿ ಕೂಡಿರುವ ನನ್ನ ಮಕ್ಕಳಾದ ಕೌರವರೂ ಪಾಂಡವರೂ ಏನು

* ಇದರ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಮಾಡುತ್ತಾರೆ, ಹೇಳೈಯ್ಯಾ ಸಂಜಯ,"

"ಶ್ಲೋಕ ೧೨—ಆ ದುರ್ಯೋಧನನಿಗೆ ಸಂತೋಷವನ್ನು ಹುಟ್ಟಿಸುವನಾಗಿ ಗುರುಕುಲ ಪಿತಾಮಹನಾದ ಭೀಷ್ಮನು ಪ್ರತಾಪಶಾಲಿಯಾದುದರಿಂದ ಘಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖವನ್ನು ವೂದಿದನು."

"ಶ್ಲೋಕ ೧೩—ಅನಂತರದಲ್ಲಿ ಸಂಗಡಲೆ ಶಂಖ, ಭೇರಿ, ಪಣವ, ಆನಕ, ಗೋಮುಖ ಈ ಮುಂತಾದ ವಾದ್ಯಗಳು ಬಾರಿಸಲ್ಪಟ್ಟದರಿಂದ ಆ ಶಬ್ದವು ಬಹಳವಾಗಿ ಆಯಿತು."

"ಶ್ಲೋಕ ೧೪—ಆ ವೇಳೆಯಲ್ಲಿ ಬಿಳಿ ಕುದುರೆಗಳು ಕಟ್ಟಲ್ಪಟ್ಟ ದೊಡ್ಡ ರಥದಲ್ಲಿ ಕುಳಿತಿರುವ ಕೃಷ್ಣಾರ್ಜುನರು ದಿವ್ಯಶಂಖಗಳನ್ನು ಧ್ವನಿಮಾಡಿದರು."

ಈ ರೀತಿಯಾಗಿ ತಿಳಿಗನ್ನಡ ಶೈಲಿಯಲ್ಲಿ ಇವನ ಅನುವಾದವು ಉದ್ದಕ್ಕೂ ಹರಿದಿದೆ. ಸಂಸ್ಕೃತ, ಕನ್ನಡ ಮತ್ತು Charles Wilkins ಇವನ ಇಂಗ್ಲಿಷ್ ಅನುವಾದ ಇವೆಲ್ಲವೂ ಜತೆ ಜತೆಯಾಗಿಯೇ ಉಲ್ಲೇಖವಾಗಿದ್ದು ಈ ಗ್ರಂಥವು ನಿಜಕ್ಕೂ ಆಕರ್ಷಕವಾಗಿದೆ.

**೯. ಜಾನ್ ಗೇರೆಟ್ಸ್ ಇವನಿಂದ ಕನ್ನಡ–ಇಂಗ್ಲಿಷ್ ಅರ್ಥಕೋಶ :—**

Rev. John Garrett ಇವನು ಕ್ರಿ. ಶ. 1845 ರ ಕಾಲದಲ್ಲಿ ಶಾಲಾ ವಿದ್ಯಾರ್ಥಿಗಳ ಪ್ರಯೋಜನಾರ್ಥವಾಗಿ William Reeve ಇವನ ಅರ್ಥಕೋಶವನ್ನು ಚುಟುಕಾಗಿ ಮಾಡಿ ಸಂಪಾದಿಸಿ ಪ್ರಕಟಿಸಿದ್ದನು. W. Reeve ಇವನ ಇಂಗ್ಲಿಷ್–ಕನ್ನಡ ನಿಘಂಟನ್ನು A Manual of English–Canarese Dictionary ಎಂಬುದಾಗಿ ಕರೆದು ಅದರಿಂದ ಸುಮಾರು 23,000 ಇಂಗ್ಲಿಷ್ ಪದಗಳನ್ನು ಆರಿಸಿ ಸಂಕ್ಷೇಪಿಸಿ ಪ್ರಕಟಿಸಿದ್ದು Rev. Garrett ಇವನು ಇದ್ದಾಗಲೇ ಐದುಬಾರಿ ಸಹಸ್ರಾರು ಪ್ರತಿಗಳಂತೆ ಮುದ್ರಣವಾದುವು. ಇದರ ಕಡೇ ಆವೃತಿಯು 1872 ರಲ್ಲಾಯಿತು. ಅದೇ ರೀತಿ William Reeve ಇವನ ಕನ್ನಡ–ಇಂಗ್ಲಿಷ್ ನಿಘಂಟನ್ನು A Manual of Canarese and English Dictonary ಎಂಬುದಾಗಿ ಕರೆದು ಪ್ರಕಟಿಸಿದ್ದರ ಎರಡನೇ ಮುದ್ರಣವು 1863 ರಲ್ಲಿ 711 ಪುಟಗಳ ಸಮೇತವಾಗಿ ಮೈಸೂರು ಸರಕಾರ ಮುದ್ರಣಾಲಯದಿಂದ ಹೊರಬಂತು. ಇದು 1865 ರಲ್ಲಿ 907 ಪುಟಗಳಲ್ಲೂ 1871 ರಲ್ಲಿ ಪುನಃ 1000 ಪುಟಗಳನ್ನು ಮೀರಿಯೂ ಪುನರ್ಮುದ್ರಣವಾಗಿ ಎಲ್ಲೆಲ್ಲೂ ಉಪಯೋಗಿಸಲ್ಪಟ್ಟಿತ್ತು.

Rev. Garrett ಇವನು ಬರೆದ ಈ ಅರ್ಥಕೋಶಗಳ ಪ್ರಕಟಣೆಗೆ Sir Mark Cubbon ಇವನು ಸರಕಾರದ ವತಿಯಿಂದ ವಿಶೇಷ ಪ್ರೋತ್ಸಾಹವನ್ನಿತ್ತು ಆವನಿಗೆ ಸಹಕರಿಸಿದನು. ಆವನ ಕನ್ನಡ–ಇಂಗ್ಲಿಷ್ ನಿಘಂಟಿನಲ್ಲಿ ಸುಮಾರು 18,000 ಶಬ್ದಗಳಷ್ಟು ಇದ್ದು ಆ ಗ್ರಂಥವು "a very simple and yet exhaustive in its treatment of words and their meanings" ಎಂದು ಹೇಳಲ್ಪಟ್ಟಿತ್ತು. ಅವುಗಳಲ್ಲಿ ಶಬ್ದಾರ್ಥಗಳು ಹೀಗೆ ಕೊಡಲ್ಪಟ್ಟವೆ :—

"ತೀವ್ರ—haste, expedition ; Adj : quick, speedy.
ಬಾಧ್ಯ—relationship, obligatory, duty ;
Adj : related to.

ಹೀಗೆಯೇ ರಾಶಿ, ರಾಹು, ರೂಢಿ, ರುಚಿ ಇತ್ಯಾದಿ ಶಬ್ದಗಳಿಗೆ ಏಳೆಂಟು ಪಂಕ್ತಿಗಳಲ್ಲಿ ಅರ್ಥವನ್ನು ವಿವರಿಸಿ ಕೊಡಲಾಗಿದೆ. ಅ-ಕಾರದಿಂದ ಹಿಡಿದು ಕ್ಷ-ಕಾರದವರೆಗೂ ಕ್ಷಣ, ಕ್ಷಯ, ಕ್ಷೇತ್ರ, ಕ್ಷೀಣ ಎಂದು ಮೊದಲಾಗಿ ಶಬ್ದಾರ್ಥಗಳು ಸ್ಪಷ್ಟವಾಗಿ ಕೊಡಲ್ಪಟ್ಟವೆ. ಈ ಅರ್ಥಕೋಶದ ಕಡೇ ಮುದ್ರಣವು ಕ್ರಿ. ಶ. 1886 ರಲ್ಲಿ ಬಾಸೆಲ್ ಮಿಷನ್ ಮುದ್ರಣಾಲಯದವರಿಂದಾಯಿತಲ್ಲದೆ ಅದು ಆ ಕಾಲಕ್ಕೆ ಮತ್ತು ಎಲ್ಲಾ ಕಾಲಕ್ಕೆ ತಕ್ಕುದಾದ ಉತ್ತಮವಾದ ಕೈಪಿಡಿಯಾಗಿದೆ. ಇದನ್ನು A School Dictionary ಎಂದು ಕರೆದಿದ್ದು ಆಕಾರದಲ್ಲಿ $4\frac{1}{4}$" ಮತ್ತು $2\frac{1}{2}$" ಯಷ್ಟಿದ್ದು ಬರೀ 656 ಪುಟಗಳಷ್ಟಕ್ಕೆ ಸಂಗ್ರಹಿಸಲಾಗಿತ್ತು.

### ೧೦. ಜಾನ್ ಗೇರೆಟ್ಟ್ ಇವನಿಂದ ಸಂಪಾದಿತವಾದ 'ಶಬ್ದಮಣಿದರ್ಪಣ' :-

Rev. John Garrett ಇವನು 1865 ರ ಕಾಲದಲ್ಲಿ ಹಳೆ ಮೈಸೂರು ಸರಕಾರದ ವಿದ್ಯಾಧಿಕಾರಿಯಾಗಿದ್ದಾಗ ಶಾಲೆಗಳ ಪ್ರಯೋಜನಾರ್ಥವಾಗಿ ಹಲವು ಪಠ್ಯ ಪುಸ್ತಕಗಳನ್ನೂ ನಿಘಂಟುಗಳನ್ನೂ ಸಂಪಾದಿಸಿದ್ದನು. ಅದೇ ರೀತಿ ಕನ್ನಡ ವ್ಯಾಕರಣ ದಲ್ಲೂ ಅವನು ನಿಷ್ಠಾವಂತ ವಿದ್ಯಾರ್ಥಿಯಾಗಿ ಶೋಭಿಸಿದನು. ಪುರಾತನ ವ್ಯಾಕರಣ ಮತ್ತು ಶಾಸ್ತ್ರೀಯ ಗ್ರಂಥಗಳನ್ನು ಅನ್ವೇಷಿಸುತಿದ್ದ ಈ ವಿದ್ವಾಂಸನಿಗೆ ಆ ಕಾಲದಲ್ಲಿ ಅಂಥಾ ಪುಸ್ತಕಗಳು ದೊರಕಲು ಎಷ್ಟು ಕಷ್ಟವಿತ್ತೆಂಬುದನ್ನು ಮತ್ತು ದೇಶೀಯ ಬ್ರಾಹ್ಮಣ ಪಂಡಿತರು ತಮ್ಮ ಸ್ವಯಂಪ್ರತಿಷ್ಠೆ ಮತ್ತು ಮೂಢನಂಬಿಕೆಗಳ ಕಾರಣ ದಿಂದ ಅವುಗಳನ್ನು ಇತರರಿಗೆ ತೋರಿಸದೇ ಇದ್ದುದನ್ನು ಕುರಿತು, "a general unwillingness to make valuable books common" ಎಂದು ಹೇಳಿ ಅಂದಿನ ಪರಿಸ್ಥಿತಿಯನ್ನು ವಿವರಿಸಿದ್ದನು.

John Garrett ಇವನು ಕೇಶಿರಾಜನ 'ಶಬ್ದಮಣಿದರ್ಪಣ' ವನ್ನು ಸಂಶೋಧಿಸಿ ಮತ್ತು ಸಂಪಾದಿಸಿ ಪ್ರಕಟಿಸಿದ ಆಧುನಿಕ ಪಂಡಿತರಲ್ಲಿ ಮೊದಲಿಗನಾಗಿರು ವನು. ಆ ವರೆಗೂ ತಾಳೆವೋಲೆಗಳಲ್ಲಿಯೇ ಹುದುಗಿದ್ದ ಆ ಅಪೂರ್ವ ಕನ್ನಡ ವ್ಯಾಕ ರಣವನ್ನು ಆವನು 1868 ರಲ್ಲಿ ಮೈಸೂರು ಸರಕಾರದ ಛಾಪಖಾನೆಯಲ್ಲಿ ಮುದ್ರಿಸಿ ಬೆಳಕಿಗೆ ತಂದನು. 322 ಪುಟಗಳ ಆ ಗ್ರಂಥವು ಉತ್ತಮವಾದ ಕಾಗದದಲ್ಲಿ ಸ್ಪಷ್ಟ ವಾದ ಮತ್ತು ಸುಂದರವಾದ ಅಚ್ಚಿನ ಮೊಳೆಗಳಲ್ಲಿ ಸೊಗಸಾಗಿ ಮುದ್ರಣವಾಗಿದೆ. ಇದರ ಸಂಪಾದನೆಗೆ Rev. Garrett ಇವನು ಹಲವು ಕಡೆಗಳಿಂದ ಓಲೆಪ್ರತಿ ಗಳನ್ನು ಸಂಗ್ರಹಿಸಿ ಮತ್ತು ಅವುಗಳ ಬರೆವಣಿಗೆಯನ್ನೆಲ್ಲಾ ಪರಿಶೀಲಿಸಿ ಶ್ರಮಿಸಬೇ ಕಾಯಿತೆಂದು ನ್ಯಾಯವಾಗಿ ಹೇಳಿದ್ದಾನೆ. ಹಾಗೆ ಸಂಪಾದಿತವಾದ ಆ 'ಶಬ್ದಮಣಿ ದರ್ಪಣ'ದ ಮುನ್ನುಡಿಯಲ್ಲಿ ಆವನು ಹೀಗೆ ಬರೆದಿದ್ದಾನೆ :—

"It is remarkable that work so highly esteemed by learned natives as the Shabdamani-Darpana, should not have printed before. But the fact is that there is a general unwillingness to make valuable books common. Manuscript copies have been hoarded up and privately studied........"

ಪರಿಸ್ಥಿತಿಯು ಹಾಗಿದ್ದಾಗ ಆ ಕಾಲದಲ್ಲಿ ಈ ವಿದೇಶೀಯ ವಿದ್ವಾಂಸರು ಪ್ರದರ್ಶಿಸಿದ ಕರ್ತವ್ಯನಿಷ್ಠೆ ಮತ್ತು ಸಾಹಿತ್ಯಸೇವೆಯನ್ನು ಎಷ್ಟು ಪ್ರಶಂಸಿಸಿದರೂ ಅದು ಅಲ್ಪವೆಂದೇ ಹೇಳಬೇಕಾಗಿದೆ. ಈ ವ್ಯಾಕರಣ ಗ್ರಂಥವು ಮೂಲದಲ್ಲಿದ್ದಂತೆಯೇ ಮುದ್ರಣವಾಗಿದೆ. ಪ್ರತಿ ಅಧ್ಯಾಯ ಮತ್ತು ವಿಷಯಗಳನ್ನು ಕುರಿತಾದ ಶಿರೋನಾಮಗಳು ಮಾತ್ರ ಇಂಗ್ಲಿಷ್‌ನಲ್ಲಿ ಬರೆಯಲ್ಪಟ್ಟಿವೆ. ಈ ವಿಶೇಷ ವ್ಯಾಕರಣವು ಈ ರೀತಿ ಮುದ್ರಣವಾಗಿ ಪ್ರಥಮ ಬಾರಿಗೆ ಬೆಳಕು ಕಂಡಾಗ ಕನ್ನಡ ಸಾಹಿತ್ಯವೃಕ್ಷದ ಒಂದು ಪ್ರಧಾನವಾದ ಕುಡಿಯು ಚಿಗುರಿ ಸಾಹಿತಿಗಳ ಮನತಣಿಸಿತೆಂಬಂತೆ ಪ್ರಸಿದ್ಧಿಯಾಯಿತು.

## ೧೧. ಗೇರೆಟ್ಟ್ ಇವನ ವ್ಯಾಕರಣ ಮತ್ತು ಇತರ ಪುಸ್ತಕಗಳು :—

"ಕರ್ಣಾಟಕ ವಾಗ್ವಿಧಾಯಿನಿ" ಎಂಬ ಸಾಹಿತ್ಯ ಪತ್ರಿಕೆಗೆ ಕಾರಣರಾದವರಲ್ಲಿ John Garrett ಇವನೇ ಪ್ರಮುಖನಾಗಿದ್ದನು. ಇವನು ಶಾಲೆಗಳ ಉಪಯೋಗಕ್ಕೆ ತಕ್ಕುದಾದ ಚಿಕ್ಕ ಶಾಲಾ ವ್ಯಾಕರಣಗಳನ್ನು ಕ್ರಿ. ಶ. 1865ರ ವರೆಗೂ ಸಂಪಾದಿಸಿದ್ದನಲ್ಲದೆ 1869 ರ "ವಾಗ್ವಿಧಾಯಿನಿ" ಪತ್ರಿಕೆಯಲ್ಲಿ ಕನ್ನಡ ವ್ಯಾಕರಣವನ್ನು ಪ್ರಶ್ನೋತ್ತರ ಶೈಲಿಯಲ್ಲಿ ಬರೆದುದರಲ್ಲಿ ಅವನ ಕೈವಾಡವೂ ಇತ್ತು. ಉದಾಹರಣೆಗೆ ಅದರಿಂದ ಕೆಲವು ಪ್ರಶ್ನೋತ್ತರಗಳನ್ನು ಎತ್ತಿ ಇಲ್ಲಿ ಕೊಡಲಾಗಿದೆ :—

"ಶಬ್ದ ನಿರ್ಣಯ ಪ್ರಕರಣದಲ್ಲಿ ಏನು ಹೇಳಲ್ಪಡುತ್ತದೆ?

"ಶಬ್ದ ಭೇದಗಳೂ ಅವುಗಳ ರೂಪ ನಿಷ್ಪತ್ತಿಯೂ ಹೇಳಲ್ಪಡುತ್ತದೆ.

"ನಾಮ ಪದಗಳಿಗೆ ಬರುವ ಸಂಕೇತಗಳು ಯಾವುವು."

"ಲಿಂಗ, ವಚನ, ವಿಭಕ್ತಿ ಎಂಬ ಮೂರು ಸಂಕೇತಗಳು........

"ಪ್ರಕೃತಿ ಭಾವ ಎಂದರೇನು?

"ಮುಂಚೆ ಹೇಳಿದ ಸಂಸ್ಕೃತ ಸಂಧಿ ಕನ್ನಡ ಸಂಧಿಗಳನ್ನು ಮಾಡಿ, ಅಕ್ಷರಗಳನ್ನು ಕೂಡಿಸದೆ ಪ್ರತ್ಯೇಕವಾಗಿ ಉಚ್ಚರಿಸುವುದು ಪ್ರಕೃತಿ ಭಾವಯೆನ್ನಿಸುವುದು."

ಸುಮಾರು 1858 ರಿಂದ 1875ರ ವರೆಗೆ ದಕ್ಷಿಣ ಕರ್ಣಾಟಕದ ಎಲ್ಲಾ ಶಾಲೆಗಳಲ್ಲೂ John Garrett ಇವನು ಬರೆದ ಶಾಲಾ ವ್ಯಾಕರಣಗಳೇ ಉಪಯೋಗಿಸಲ್ಪಟ್ಟಿದ್ದುವು. John Mckerrel ಇವನ ನಂತರ Rev. Garrett ಇವನೇ ಪ್ರಬಲ ಕನ್ನಡ ವೈಯ್ಯಾಕರಣಿಯಾಗಿ ಕನ್ನಡ ವ್ಯಾಕರಣ ಪಠ್ಯಪುಸ್ತಕಗಳನ್ನು ವಿವಿಧ ರೀತಿಯಲ್ಲಿ ಬರೆದಿದ್ದನು.

Garrett ಇವನು ಕರ್ಣಾಟಕದ "ದಾಸರ ಹಾಡುಗಳು" ಇವನ್ನು ಸುಮಾರು 1855 ರ ಕಾಲದಲ್ಲಿಯೇ ಸಂಪಾದಿಸಿದ್ದನು. 171 ಪುಟಗಳ ಆ ಹಾಡು

ಗಳ ಸಂಕಲನವು ಎರಡನೇ ಬಾರಿಗೆ 1871 ರಲ್ಲಿ ಮುದ್ರಣವಾಗಿ ಪ್ರಕಟವಾಯಿತು. "Mysore and Coorg" ಎಂಬುದಾಗಿ ಅವನು ಬರೆದ ಅಂದಿನ ಪ್ರತ್ಯೇಕ ಮೈಸೂರು ಮತ್ತು ಕೊಡಗು ರಾಜ್ಯಗಳ ಭೂಗೋಳ ಮತ್ತು ಚರಿತ್ರೆ ಪುಸ್ತಕವೊಂದು ಶಾಲೆಗಳಲ್ಲಿ ಉಪಯೋಗಿಸಲ್ಪಟ್ಟದ್ದು ಉತ್ತಮವಾದ ಪಠ್ಯಪುಸ್ತಕವಾಗಿತ್ತು. ಇಷ್ಟೇ ಅಲ್ಲದೆ ತನ್ನ ಮೇಲ್ವಿಚಾರಣೆಯಲ್ಲಿ ನಡೆಯುತಿದ್ದ "ವಾಗ್ಭಧಾಯಿನೀ" ಸಾಹಿತ್ಯ ಪತ್ರಿಕೆಯಲ್ಲೂ ವಿದ್ವತ್ಪೂರ್ಣವಾದ ಕನ್ನಡ ಲೇಖನಗಳನ್ನೂ ಬರೆಯುತ್ತಲೇ ಇದ್ದನು.

**೧೨. ಗೇರೆಟ್ಸ್ ಇವನ ಪಂಚತಂತ್ರ, ಭಾಷಾಮಂಜರಿ ಮತ್ತು ವಸ್ತುಕೋಶ–**

Rev. John Garrett ಇವನ ಅಪಾರ ಸಾಹಿತ್ಯ ಸೇವೆಯು ಇಷ್ಟರಿಂದಲೇ ಮುಗಿಯಲಿಲ್ಲ. ಕನ್ನಡದಲ್ಲೂ ಜರ್ಮನ್ ಭಾಷೆಯಲ್ಲೂ ಬೈಬಲ್ ಹೊತ್ತಗೆಗಳನ್ನು ಅವನು ಬರೆಯುತಿದ್ದಾಗ 1848 ರಷ್ಟು ಹಿಂದೆಯೇ ಕನ್ನಡ ಸಾಹಿತ್ಯದ ವಿಷಯವಾಗಿ ಸವಿಸ್ತಾರವಾದ ಗ್ರಂಥವೊಂದನ್ನು ಜರ್ಮನ್‌ನಲ್ಲಿ ಬರೆದಿದ್ದನು. "Uber Canaresische Sprache und Literatur ಎಂಬುದಾಗಿ ಕರೆಯಲ್ಪಟ್ಟ ಈ ಗ್ರಂಥವು ಎರಡು ಕಾಂಡಗಳಾಗಿ ಪ್ರಕಟವಾಯಿತು. ಇದರ ನಂತರ ಅವನು ಬರೆದ English and Canarese Vocabulary of familiar words with easy sentences ಎಂಬ ಅಮೂಲ್ಯವಾದ ಕೈಪಿಡಿಯು ಕ್ರಿ. ಶ. 1864 ರಲ್ಲಿ ಬೆಂಗಳೂರಿನಲ್ಲಿ ಎರಡನೇ ಬಾರಿಗೆ ಮುದ್ರಣವಾಗಿ ಪ್ರಚಾರವಾಯಿತು. ಅದೇ ರೀತಿ ಅವನು ರಚಿಸಿದ A Polyglott Vocabulary–English, German, Canarese, Tulu and Malayalam in the Vernacular and Roman letters (Tentative Edition) ಎಂಬ ಉತ್ತಮ ಭಾಷಾ ಮಂಜರಿಯೊಂದು ಮಂಗಳೂರಿನಲ್ಲಿ 1880 ರಲ್ಲಿ ಎರಡನೇ ಬಾರಿಗೆ ಪ್ರಕಟವಾಯಿತು. ಕ್ರಿ. ಶ. 1852 ರಿಂದಲೇ ಇಂಥಾ ಮಹತ್ತಾದ ಕೃತಿಗಳನ್ನು ರಚಿಸಲು ಪ್ರಾರಂಭಿಸಿದ್ದ Rev. Garrett ಇವನು ಅವುಗಳಲ್ಲೆಲ್ಲಾ ತನ್ನ ಭಾಷಾಜ್ಞಾನ ಮತ್ತು ವಿಚಾರ ಜ್ಞಾನವನ್ನು ಬಹುಮುಖವಾಗಿ ಪ್ರದರ್ಶಿಸಿದ್ದಾನೆ.

Rev. Garrett ಇವನು 'ಪಂಚತಂತ್ರ'ವನ್ನು ಕನ್ನಡದಲ್ಲಿ ಬರೆದದ್ದು 1865 ರಲ್ಲಿ ಮುದ್ರಣವಾಯಿತು. ಅದರಲ್ಲಿ Prof. Horace Wilson ಇವನು ಬರೆದ ಅಮೂಲ್ಯವಾದ ಒಂದು ಮುನ್ನುಡಿಯು ಇಂಗ್ಲಿಷ್‌ನಲ್ಲಿದೆ. ಈ 'ಪಂಚತಂತ್ರ'ವೂ ಪಠ್ಯಪುಸ್ತಕವಾಗಿ ಉಪಯೋಗಿಸಲ್ಪಟ್ಟು ಅದರ ನಂತರ ಒಂದೆರಡು ಬಾರಿ ಪುನರ್ಮುದ್ರಣವಾಯಿತು.

John Garrett ಇವನ ಮತ್ತೊಂದು ಗ್ರಂಥವು ಬಹು ದೊಡ್ಡ ಪ್ರಮಾಣದಲ್ಲಿ ಇಂಗ್ಲಿಷ್‌ನಲ್ಲಿ ತೋರ್ಪಡಿಸಿಕೊಂಡಿತು. ಹಿಂದೂಸ್ಥಾನದ ಪ್ರಾಚೀನ ಸಾಹಿತ್ಯ, ಪುರಾಣ, ಇತಿಹಾಸ, ಕಲೆ ಇತ್ಯಾದಿಗಳನ್ನು ಕುರಿತು ಮತ್ತು ಅವುಗಳಿಗೆ ಸಂಬಂಧಿಸಿದ ಶಬ್ದಗಳ ವಿವರಣೆ, ಹೆಸರುಗಳ ಐತಿಹ್ಯ ಮೊದಲಾದುವುಗಳ ಸಂಪೂರ್ಣ ಪರಿಚಯ

ವನ್ನು ಕೊಡುವ "ವಸ್ತುಕೋಶ"ವು 793 demy ಪುಟಗಳಲ್ಲಿ ನೂರಾರು ಚಿತ್ರಗಳೂ ಮತ್ತು ಬಣ್ಣ ಚಿತ್ರಗಳ ಸಹಿತವಾಗಿ 1871 ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡನಾಡಿನ ವಿಷಯವಾಗಿಯೂ ಸಾಕಷ್ಟು ಪ್ರಸ್ತಾಪಿಸಿದೆ. ಎಲ್ಲಾ ವ್ಯಾವಹಾರಿಕ ಮತ್ತು ಪೌರಾಣಿಕ ಶಬ್ದಗಳ ಮತ್ತು ಹೆಸರುಗಳ ಅರ್ಥವೂ ಟೀಕೆಯೂ ಈ ಗ್ರಂಥದಲ್ಲಿ ಅಡಕವಾಗಿ ಇದೊಂದು Classical Dictionary ಎಂಬಂತೆ ಪರಿಪೂರ್ಣವಾಗಿ ತೋರ್ಪಡಿಸಿಕೊಂಡಿದೆ, ಒಟ್ಟಾಗಿ Rev. Garrett ಇವನು ಇಂಗ್ಲಿಷ್, ಜರ್ಮನ್ ಮತ್ತು ಕನ್ನಡ ಭಾಷೆಗಳಲ್ಲಿ ಏಕ ಸಮಾನವಾದ ಪಾಂಡಿತ್ಯವನ್ನು ಪಡೆದಿದ್ದ ಮಹಾ ವಿದ್ವಾಂಸನಾಗಿದ್ದನೆಂಬುದು ಅವನ ಕೃತಿಗಳಿಂದ ವ್ಯಕ್ತವಾಗುತ್ತದೆ. ಕನ್ನಡ ಸಾಹಿತ್ಯಕ್ಕೆ ಅಂಥಾ ಒರ್ವ ಪುಣ್ಯಾತ್ಮನ ಸೇವೆಯು ಆ ಕಾಲದಲ್ಲಿ ದೊರಕಿದ್ದು ನಾಡಿನ ವಿದ್ಯಾ ಇಲಾಖೆಯ ಮತ್ತು ಜನತೆಯ ಸುದೈವವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಕಲ್ಕತ್ತಾದಲ್ಲಿ ಕುಂಪೆನೀ ಸರಕಾರದ ಮೇಲೆ ಪ್ರಭಾವವನ್ನು ಬೀರಿ ಜನಸೇವೆಯನ್ನು ಸಾಹಿತ್ಯಸೇವೆಯನ್ನೂ ಅವ್ಯಾಹತವಾಗಿ ನಡೆಸಿದ Dr. William Carey ಇವನು ಹೇಗೋ ಹಾಗೆಯೇ ಹಳೇ ಮೈಸೂರು ರಾಜ್ಯ ಸರಕಾರಕ್ಕೆ ಆಧಾರಸ್ತಂಭವಾಗಿ ತಕ್ಕ ಸಲಹೆಯನ್ನಿತ್ತು. ಮುಂದೊಯ್ಯಲು ಮತ್ತು Col. Mark Cobbon ಇವನ ಬಲಗೈಯ್ಯಾಗಿ ಅವನಿಗೆ ಸಹಕರಿಸಲು Rev. John Garrett ಇವನು ಇಂದಿಗೆ 120 ವರ್ಷಗಳಿಗೆ ಹಿಂದೆ ಇದ್ದನು.

**೧೩. ಕನ್ನಡ ಪತ್ರಿಕೆಗಳನ್ನು ನೊದಲಾಗಿ ಆರಂಭಿಸಿದ ಡಾ. ಮ್ಯಾಗ್ಲಿಂಗ್ :-**

ಕ್ರಿ. ಶ. 1780 ರಿಂದ ಈ ದೇಶದಲ್ಲಿ ಇಂಗ್ಲಿಷ್ ಪತ್ರಿಕೆಗಳು ಹಲವು ಪ್ರಚಾರವಾದುದನ್ನು ಕುರಿತು ಹಿಂದೆ ಹೇಳಲಾಗಿದೆ. ದೇಶೀಯ ಭಾಷೆಗಳ ಪೈಕಿ ಬಂಗಾಳಿಯಲ್ಲಿ ಮೊದಲಾಗಿ ಪತ್ರಿಕೆಗಳು ಹೊರಟುವು. Rev. J. J. Marshman ಇವನು ಬಂಗಾಳಿಯಲ್ಲಿ ಮೊದಲು ಪತ್ರಿಕೆಯನ್ನು ನಡೆಸಲಾರಂಭಿಸಿದನು. ಇತಿಹಾಸಕಾರನೂ ಪತ್ರಿಕೋದ್ಯಮಿಯೂ ಆದ Rev. Marshman ಇವನನ್ನು "a Friend of India" ಎಂಬುದಾಗಿ ಅವನ ಪತ್ರಿಕೆಗಳನ್ನು ವಿಮರ್ಶಿಸುತ್ತಾ Sir John Kaye ಇವನು ಹೇಳಿದನು. Rev. Carey ಮತ್ತು Rev. Marshman ಇವರ ಉತ್ಸಾಹದಿಂದ ಪ್ರಾರಂಭಿಸಲ್ಪಟ್ಟ "ಸಮಾಚಾರ ಚಂದ್ರಿಕಾ", "ಸಮಾಚಾರ ದರ್ಪಣ" ಎಂಬೀ ಬಂಗಾಳೀ ಪತ್ರಿಕೆಗಳು ಬಹು ವರ್ಷಗಳ ವರೆಗೂ ಪ್ರಚಾರದಲ್ಲಿತ್ತು. ಅದೇ ವೇಳೆಗೆ ಬೊಂಬಾಯಿಯಿಂದ "ಸಂಸ್ಕೃತ ಚಂದ್ರಿಕೆ" ಎಂಬ ಕೈಬರೆಹದ ಸಾಹಿತ್ಯ ಪತ್ರಿಕೆಯೊಂದು ಹೊರಟಿತು. ಅಂತೆಯೇ ಪರ್ಷಿಯನ್, ಹಿಂದೂಸ್ಥಾನಿ, ತಮಿಳು ಮೊದಲಾದ ದೇಶೀಯ ಭಾಷೆಗಳಲ್ಲೂ ಪಾಶ್ಚಾತ್ಯ ಕ್ರೈಸ್ತಗುರುಗಳು ಆಯಾ ಸಾಹಿತ್ಯ ಪ್ರಚಾರಾರ್ಥವಾಗಿಯೂ ತಮ್ಮ ಬೈಬಲ್ ಉಪದೇಶದ ಸಲುವಾಗಿಯೂ ಪತ್ರಿಕೆಗಳನ್ನು ಅಲ್ಲಲ್ಲಿ ನಡೆಸಲಾರಂಭಿಸಿದರು.

Sir Charles Metcalfe ಇವನು ಪತ್ರಿಕೆಗಳಿಗೆ ಸಾಕಷ್ಟು ಸ್ವಾತಂತ್ರ್ಯವಿರಬೇಕೆಂದು ಪ್ರತಿಪಾದಿಸಿದುದನ್ನು ಕ್ರಿ. ಶ. 1800 ರಲ್ಲಿ Marques of

Wellesley ಇವನು ಒಪ್ಪದೆ ದೇಶದಲ್ಲಿದ್ದ ವಾರ್ತಾಪತ್ರಿಕೆಗಳ ಮೇಲೆ ಕಠಿಣ ಖಾನೂನುಗಳನ್ನು ಜಾರಿಗೆ ತಂದನು. Lord Lytton ಇವನ ಕಾಲದ ವರೆಗೂ ಪತ್ರಿಕೆಗಳ ಮೇಲೆ ಸರಕಾರವು ತಮ್ಮ ಪ್ರಭಾವವನ್ನು ಬೀರುತಿದ್ದುದರಿಂದ ಸುಮಾರು 1872 ರಲ್ಲಿ ಇತಿಹಾಸಕಾರ ಮತ್ತು ಸಂಶೋಧಕನಾದ Sir W. W. Hunter ಇವನು ಹೀಗೆ ಹೇಳಿದ್ದನು :—

> "......If the Press is to be muzzled, are we to allow private meetings, with verbatim reports of the speeches and proceedings ?......The Press Act depends on the people's ignorance and cowardice. Their ignorance for the Indian journalist has only to reproduce paragraphs from English opposition papers and pamphlets in order to stir up feelings, more damaging to us, and more seditious than any of those quoted by Lord Lytton........"

ಕ್ರಿ. ಶ. 1855 ರ ವರೆಗೂ ದೇಶದಲ್ಲಿ ಇದ್ದ ನೂರಾರು ಇಂಗ್ಲಿಷ್ ಪತ್ರಿಕೆಗಳ ಮತ್ತು ಕೆಲವು ದೇಶೀಯ ಭಾಷಾ ಪತ್ರಿಕೆಗಳ ಸಂಪಾದಕರೆಲ್ಲರೂ ಪಾಶ್ಚಾತ್ಯರೇ ಆಗಿದ್ದರು. ದೇಶೀಯರಿಗೆ ತಮ್ಮ ಹಕ್ಕು ಬಾಧ್ಯತೆಗಳೆಂದರೇನು ; ಖಾನೂನು ಬದ್ಧವಾದ ಚಳವಳ ವೆಂದರೇನು ಎಂಬುದು ಸುಮಾರು 1880 ರ ವರೆಗೂ ತಿಳಿದಿರಲಿಲ್ಲ ; ಅವಕ್ಕೆಲ್ಲಾ ಅಂದಿನ ಪಾಶ್ಚಾತ್ಯ ರಾಜ್ಯಕಾರಿಣಿಗಳೇ ತಮ್ಮೊಳಗಿನ ವಾಗ್ವಾದಗಳನ್ನು ಬಹಿರಂಗ ವಾಗಿ ತೋರ್ಪಡಿಸಿ ಈ ದೇಶದ ಜನಕ್ಕೆ ಪತ್ರಿಕಾ ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯ ರಾಜಕೀಯ ಸ್ವಾತಂತ್ರ್ಯ ಇತ್ಯಾದಿಗಳು ಎಂತೆಂಬುದನ್ನು ತೋರಿಸಿಕೊಟ್ಟರು.

ಕನ್ನಡ ಭಾಷೆಯಲ್ಲಿ, ಹಿಂದೆಯೇ ಹೇಳಿದಂತೆ, ಕ್ರಿ. ಶ. 1860 ರ ವರೆಗೂ ಉತ್ತಮ ವೃತ್ತಾಂತ ಪತ್ರಿಕೆಯು ಹುಟ್ಟಿರಲಿಲ್ಲ. Rev. H. Moegling ಇವನು 1842 ರಲ್ಲಿ ಸ್ಥಾಪಿಸಿದ 'ಮಂಗಳೂರು ಸಮಾಚಾರ' ಮತ್ತು 1844 ರಲ್ಲಿ ಬಳ್ಳಾರಿಯಲ್ಲಿ ಸ್ಥಾಪಿಸಿದ 'ಕನ್ನಡ ಸಮಾಚಾರ'ಗಳೆಂಬ ನಾಲ್ಕಾರು folio ಪುಟ ಗಳ ಪಕ್ಷ ಪತ್ರಿಕೆಗಳು ಕ್ರೈಸ್ತಮತ ಸಂಬಂಧವಾದ ಕೆಲವು ಲೇಖನಗಳಿಂದ ಪ್ರಕಟ ವಾಗುತಿದ್ದುವು. ಅವನ ಆ ಪ್ರಯತ್ನದಲ್ಲಿ ಅವನಿಗೆ ಸಹಾಯಕವಾಗಿ Rev. C. Grenier ಮತ್ತು Rev. Buhrer ಇವರೂ ಇದ್ದರು. ಬರೇ ಕೈಬರೆವಣಿಗೆ ಪತ್ರಿಕೆಯಾಗಿ ಆರಂಭಗೊಂಡ ಈ ಪಕ್ಷಪತ್ರಿಕೆಗಳು ಅನಂತರ ಶಿಲಾಮುದ್ರಣಯಂತ್ರ (Cyclostyle)ದ ಮೂಲಕ ಅಚ್ಚುಹಾಕಿ ಪ್ರಚಾರವಾಗುತ್ತಿತ್ತು.

### ೧೪. ಮ್ಯಾಗ್ಲಿಂಗನು ಇನ್ನೂ ಕೆಲವು ಪತ್ರಿಕೆಗಳನ್ನು ಸ್ಥಾಪಿಸಿದನು :—

Rev. H. Moegling ಇವನು ಮೈಸೂರಿನ ಸಾಹಿತ್ಯ ಪತ್ರಿಕೆ "ಕರ್ಣಾಟಕ ವಾಗ್ವಿಧಾಯಿನಿ"ಯನ್ನು ಸ್ಥಾಪಿಸಲು ಕಾರಣರಾದವರಲ್ಲಿ ಒಬ್ಬನಾಗಿ ದ್ದನು. ಅವನು 1842 ರಲ್ಲಿ ಆರಂಭಿಸಿದ್ದ "ಮಂಗಳೂರು ಸಮಾಚಾರ" ಪತ್ರಿಕೆಯು ಕೆಲಕಾಲ ನಿಂತುಹೋಗಿದ್ದು ಅನಂತರ 1858 ರಲ್ಲಿ ಪುನಃ ಆರಂಭಿಸಿ ಪ್ರಚಾರಪಡಿಸಿ

ದನು. ಹೀಗೆಯೇ ಹೇಳಿದಂತೆ Rev. Jacob Brigel ಇವನೊಡನೆ ಸೇರಿ 1868 ರಲ್ಲಿ ಉಡುಪಿಯಲ್ಲಿ "ಸಭಾ ಪತ್ರ" ಇದರ ಸ್ಥಾಪನೆಗೂ ಅವನು ಕಾರಣ ನಾಗಿದ್ದನು. ಅವನ ಬರೆವಣಿಗೆಗಳೆಲ್ಲಾ ಹೆಚ್ಚಾಗಿ ಬೈಬಲ್ ಸಾಹಿತ್ಯಕ್ಕೆ ಅನ್ವಯಿಸಿದ್ದಿ ತಾಗಿದ್ದರೂ ಕನ್ನಡ ಪತ್ರಿಕೆಗಳ ಸಂಚಲನಾ ಕಾರ್ಯದಲ್ಲಿ ಅವನು ತೋರಿಸಿದ್ದ ಹುರುಪು ಉತ್ಸಾಹಗಳು ಅಸಾಮಾನ್ಯವಾಗಿದ್ದುವು.

ಕ್ರಿ. ಶ. 1842 ರಿಂದ 1862 ರ ವರೆಗಿನ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಹುಟ್ಟಿದ ಹಲಕೆಲವು ಕನ್ನಡ ಪತ್ರಿಕೆಗಳು ಬರೇ ನಾಲ್ಕಾರು folio ಪುಟಗಳಲ್ಲಿ ಮತ್ತು ಸಚಿತ್ರವಾಗಿ ಹೊರಡುತಿದ್ದುವು. ಅವೆಲ್ಲಾ ಮಾಸಪತ್ರಿಕೆಗಳು ಅಥವಾ ಪಕ್ಷ ಪತ್ರಿಕೆಗಳಾಗಿದ್ದುವು. ಲೋಕ ವ್ಯವಹಾರವನ್ನು ಜನತೆಗೆ ತಿಳಿಸುವ ಹಂಬಲ ದೊಂದಿಗೆ ಕ್ರೈಸ್ತಮತ ತತ್ವಗಳ ಪ್ರಸಾರಕ್ಕೂ ಅವನ್ನು ಬಳಸಿದ್ದರು. ಉದಾಹರಣೆಗೆ 1844 ರ ಸೆಪ್ಟಂಬರ್ ತಿಂಗಳ "ಕನ್ನಡ ಸಮಾಚಾರ" ಪತ್ರಿಕೆಯಲ್ಲಿ Rev. Moegling ಇವನು ಬರೆದಿರಬಹುದಾದ ಒಂದು ಲೇಖನದಿಂದ ಈ ಭಾಗವನ್ನು ಎತ್ತಿ ಕೊಡಲಾಗಿದೆ. ಕಾಲಕ್ಕೆ ತಕ್ಕಂಥಾ ವಿಚಾರವನ್ನು ಅವರು ಈ ರೀತಿ ಜನರಿಗೆ ತಿಳಿಸುತಿದ್ದರೆಂದು ವ್ಯಕ್ತವಾಗುತ್ತದೆ :—

"ಯಿಾಗ ಬೇರೆ ದೇಶಸ್ಥರು ಹತ್ತಿ ಬೆಳೆಸಿದ್ದು ಹನನಮಾಡಿ ಯಿಂಗ್ರೇಜಿ ದೇಶಕ್ಕೆ ಕಳುಹಿಸುತ್ತಾರೆ. ಮತ್ತು ಯಿಾ ಪ್ರಕಾರ ಯೆಷ್ಟು ಅರಳೆ ಯಿಾಸವಿ 1834ನೇ ವರುಷದಲ್ಲಿ ಯಿಂಗ್ರೇಜಿ ದೇಶಕ್ಕೆ ಬಂದಿತ್ತೆಂದು ಮುಂದೆ ಬರದ ಯಾದೆಯಿಂದ ನೋಡಬಹುದು. (೧) ಅಮೇರಿಕಾ ಖಂಡದಿಂದ 8,21,500 ಖಂಡಿಗಳು, ಬ್ರಸ್ಸಿಲ್‌ಯೆಂಬ ದೇಶದಿಂದ 53,570 ಖಂಡಿಗಳು, ಪಶ್ಚಿಮ ಹಿಂದುಸ್ಥಾನದಿಂದ 14,290, ಐಗುಪ್ತ ದೇಶದಿಂದ 44,640, ಆಫ್ರಿಕಾ ಖಂಡದಿಂದ 60,710, ಮೆಕ್‌ಸಿಕೊಯೆಂಬ ದೇಶದಿಂದ 62,500, ಹಿಂದು ಸ್ಥಾನದಿಂದ 3,30,340, ಯಿನ್ನೂ ಬೇರೆ ದೇಶಗಳಿಂದ ೨.೨೦,೦೦೦ ಖಂಡಿಗಳು."

### ೧೫. ಮ್ಯಾಗ್ಲಿಂಗನು ಕನ್ನಡ ಪಂಚಾಂಗವನ್ನೂ ಪ್ರಕಟಿಸಿದನು :—

ಪ್ರಾಚೀನ ಹಿಂದೂಸ್ಥಾನದ ಜನರು ಜ್ಯೋತಿಷ್ಯ ಶಾಸ್ತ್ರಕ್ಕೆ ವಿಶೇಷ ಪ್ರಾಧಾ ನ್ಯತೆಯನ್ನು ಇತ್ತಿದ್ದರು. ಸುಮಾರು ಆರ್ನೂರು ವರ್ಷಗಳ ಕಾಲ ಮಹ್ಮದೀಯರು ಈ ದೇಶದಲ್ಲಿ ಹಿಂದೂ ಸಂಸ್ಕೃತಿಯನ್ನೇ ನಿರ್ಮೂಲ ಮಾಡಲೆತ್ನಿಸುತ್ತಿದ್ದಾಗ ಜ್ಯೋತಿಷ್ಯ ಶಾಸ್ತ್ರಮಾತ್ರವಲ್ಲ, ಎಲ್ಲಾ ಹಿಂದೂ ಧರ್ಮಶಾಸ್ತ್ರಗಳೂ ಜನರಿಗೆ ಅಪರಿ ಚಿತವಾಗುವ ದುಃಸ್ಥಿತಿಯಲ್ಲಿತ್ತು. ಉದಾಹರಣೆಗೆ ಹಳೇ ಮೈಸೂರು ರಾಜ್ಯದಲ್ಲಿ ದೇಶೀಯ ರಾಜರು ಹಿಂದೂ ಜ್ಯೋತಿಷ್ಯ ಶಾಸ್ತ್ರವನ್ನು ಮನ್ನಿಸಿದ್ದರು; ಆದರೆ 1788ರ ಕಾಲದಲ್ಲಿ ಟಿಪ್ಪುಸುಲ್ತಾನನು ಹಿಂದೂ ಕಾಲಗಣನೆ, ಜ್ಯೋತಿಷ್ಯ ಇತ್ಯಾದಿಗಳನ್ನೆಲ್ಲಾ ಮೂಲೆಗಿಟ್ಟು ತನ್ನದೆ ಆದ ಪಂಚಾಂಗವನ್ನು ಬರೆಯಿಸಿದನು. ಭಾರತದ ಬೇರೆ ಬೇರೆ ರಾಜ್ಯಗಳಲ್ಲೂ ಮಹ್ಮದೀಯ ಸುಲ್ತಾನರು ಆ ರೀತಿಯಾಗಿಯೇ ಅಂದು ತಮ್ಮ ದಬ್ಬಾ

ಳಿಕೆಯನ್ನು ಸಾಧಿಸಿದರು.

1799ರ ಶ್ರೀರಂಗಪಟ್ಟಣ ಯುದ್ಧದನಂತರ ಟಿಪ್ಪುವಿನ ಗ್ರಂಥಭಂಡಾರವನ್ನು ಶೋಧಿಶಿದಾಗ Col. Kirpatrick ಇವನಿಗೆ ಟಿಪ್ಪುವಿನ ಪಂಚಾಂಗವು ದೊರೆಯಿತು; ಆದರೆ ಹಿಂದೂ ಸಂಸ್ಕೃತಿಯ ಪುನರೋದ್ಧಾರಕ್ಕಾಗಿ ಶ್ರಮಿಸುತ್ತಿದ್ದ ಆಂಗ್ಲೇಯರು ಮಹ್ಮದೀಯ ಕಾಲಗಣನೆ ಇತ್ಯಾದಿಗಳನ್ನು ಒಂದೆಡೆಯಿಟ್ಟು ಹಿಂದೂ ಕಾಲಗಣನೆಯನ್ನೇ ಉಪಯೋಗಿಸುವಂತೆ ವಿಧಿಸಿದರು; ಅದರೊಡನೆಯೇ ತಮ್ಮ ಕ್ರೈಸ್ತ ಕಾಲಗಣನೆಯನ್ನೂ ಖಾನೂನುಬದ್ಧವಾಗಿ ಜಾರಿಗೆ ತಂದರು.

ಜ್ಯೋತಿಷ್ಯವನ್ನು ಕಲಿತ ಬ್ರಾಹ್ಮಣರು ಹಲವರು ಇದ್ದರಾದರೂ ಅವರ ಆ ವಿದ್ವತ್ತಿನ ಸದುಪಯೋಗವನ್ನು ಪಡೆದದ್ದು ಪಾಶ್ಚಾತ್ಯರೇ ಆಗಿದ್ದಾರೆ. Dr. Hermann Moegling ಇವನು ಮಂಗಳೂರು ಬಾಸೆಲ್ ಮಿಷನ್ನಿನ Rev. C. Grenier ಮತ್ತು Rev. Buhrer ಇವರೊಡನೆ ಸೇರಿ 1853ರಿಂದ Mangalore Almanac ಅಥವಾ 'ಮಂಗಳೂರು ಪಂಚಾಂಗ' ಎಂಬುದಾಗಿ ಪ್ರತಿ ವರ್ಷವೂ ಹೊರಡಿಸುತ್ತಿದ್ದುದು ಮತ್ತೊಂದು ಪ್ರಗತಿಪರವಾದ ಯೋಜನೆಯಾಗಿತ್ತು. ಈ ಪಂಚಾಂಗದ ಸಂಪಾದನಾ ಕಾರ್ಯವು 1853ರಿಂದ 1859ರ ವರೆಗೆ ನಡೆದು, ಮಧ್ಯದಲ್ಲಿ ಕೆಲಕಾಲ ನಿಂತಿದ್ದು, ಅನಂತರ ಪುನಃ ಕೆಲವು ವರ್ಷಗಳ ನಂತರ ಪ್ರಾರಂಭವಾಯಿತು. ಇದನ್ನನುಸರಿಸಿ ಇತರ ಕೆಲವು ಕನ್ನಡ ಪಂಚಾಂಗಗಳೂ ಆಮೇಲೆ ಪ್ರಕಟವಾಗಲಾರಂಭಿಸಿದ್ದುವು. ಆದರೆ ಈ 'ಮಂಗಳೂರು ಪಂಚಾಂಗ'ವು ಅಂದಿನ ಮಂಗಳೂರು ಪಂಚಿನಷ್ಟೇ ನಾಡೆಲ್ಲಾ ಪ್ರಸಿದ್ಧವಾಗಿತ್ತು.

## ೧೬. ಮ್ಯಾಗ್ಲಿಂಗ್ ಇವನಿಂದ 'ರಾಜೇಂದ್ರನಾಮೆ'ಯ ಪ್ರಕಟಣೆ:—

ಕ್ರಿ.ಶ. 1807ರಲ್ಲಿ Abercromby ಇವನು ದೊಡ್ಡ ವೀರರಾಜನ ಆಜ್ಞಾನುಸಾರವಾಗಿ ಕೊಡಗಿನ 'ರಾಜೇಂದ್ರನಾಮೆ'ಯನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದನು. Rev. H. Moegling ಇವನು ಕೊಡಗಿನಲ್ಲಿ ತನ್ನ ಮತ ಪ್ರಚಾರಾರ್ಥವಾಗಿ ತಿರುಗುತ್ತಿದ್ದಾಗ ಅವನು ಈ 'ರಾಜೇಂದ್ರನಾಮೆ'ಯ ಮೂಲ ಕನ್ನಡ ಪ್ರತಿಯನ್ನು ಮತ್ತು ಭಾಷಾಂತರವಾದ ಇಂಗ್ಲಿಷ್ ಪ್ರತಿಯನ್ನೂ ಪಡೆದು ಅವುಗಳನ್ನು 1854ರಲ್ಲಿ ಮಂಗಳೂರು ಬಾಸೆಲ್ ಮಿಷನ್‌ಗೆ ಮುದ್ರಿಸಲಿಕ್ಕಾಗಿ ಒಪ್ಪಿಸಿದನು. ಇದರ ಕನ್ನಡ ಮತ್ತು ಇಂಗ್ಲಿಷ್ ಅನುವಾದದ ಮುದ್ರಣವು ಜತೆಜತೆಯಾಗಿಯೇ ನಡೆಸಲ್ಪಟ್ಟಿತು. ಹಿಂದಿನ ಕನ್ನಡ ಬರೆವಣಿಗೆಯನ್ನು Rev. Moegling ಇವನು ತಿದ್ದಿ ಪರಿಷ್ಕರಿಸಿದ್ದನು. ಇದರ ಮುದ್ರಣಕ್ಕೆ ಉಪಯೋಗಿಸಿದ ಕನ್ನಡ ಅಚ್ಚು ಮೊಳೆಗಳು ಆ ಕಾಲದಲ್ಲಿ ಉಪಯೋಗಿಸಲ್ಪಡುತ್ತಿದ್ದ ಅಚ್ಚು ಮೊಳೆಗಳಿಗಿಂತ ಭಿನ್ನವಾಗಿದೆ. ಒತ್ತಕ್ಷರಗಳಾವುದನ್ನೂ ಉಪಯೋಗಿಸದೆ ಬರೆಯಲ್ಪಟ್ಟ ಆ ಗ್ರಂಥದಿಂದ ಈ ವಾಕ್ಯವನ್ನು ಎತ್ತಿ ಇಲ್ಲಿ ಕೊಡಲಾಗಿದೆ:—

"ರಾಜೇಂದ್‌ರ ನಾಮೆ—ಅಂದರೆ ಹಾಲೇರಿ ವೀರರಾಜೇಂದ್‌ರ ವೊಡೆಯರು ಬರಸಿದ ಕೊಡಗಿನ ಚರಿತ್‌ರವು—ಮುದ್‌ರಾಸಿನ ಆದಿಪತ್‌ಯದ ಅಪ್

ಪಣೆಯಿಂದ ಪ್ರಕಟಿಸಿದರು."

ಇದರ ಮೊದಲ ಪುಟದ ಒಂದು ವಾಕ್ಯವು ಹೀಗಿದೆ:--

"ಆಂಗೀರಸ ಸಂವತ್ಸರದಲ್ಲಿ ವೀರರಾಜವಡೆಯರ ಪೌತ್ರರಾದ ಅಪ್ಪಾಜಿ ವಡೆಯರ ಪುತ್ರರಾದ ಮುದ್ದುರಾಜ ವಡೆಯರವರು ಪೂರ್ವಾರ್ರಭ್ಯ ದೊರೆತನ ಮಾಡಿ ಬಂದಂಥಾ ಸಿಂಹಾಸನದ ಜಾಗಾ ಹಾಲೇರಿ ಅರಮನೆ ಆದ್ದರಿಂದ, ಅಲ್ಲಿ ಇದ್ದುಕೊಂಡು ರಾಜ್ಯಭಾರ ಮಾಡುತ್ತಾ ಇದ್ದರು........"

ಇಂದಿನ ಲಿಪಿಸಂಸ್ಕರಣಾ ಪಂಡಿತರು ಇದಕ್ಕೇನನ್ನುವರೋ ತಿಳಿಯಬೇಕಾಗಿದೆ. ಸುಮಾರು ಒಂದುನೂರ ಇಪ್ಪತ್ತು ವರ್ಷಗಳಿಗೆ ಹಿಂದೆ ಈ ಗ್ರಂಥದ ಸುಮಾರು 180 folio ಪುಟಗಳನ್ನೂ ಇದೇ ರೀತಿ ಒತ್ತಕ್ಷರವನ್ನುಪಯೋಗಿಸದೇ ಬರೆದು ಮುದ್ರಿಸಿದ್ದಾರೆ. ಈ ಬರೆವಣಿಗೆ ಕ್ರಮ ಮತ್ತು ಲಿಪಿಯನ್ನು ಕುರಿತು ಆ ಗ್ರಂಥದ ಮುನ್ನುಡಿಯಲ್ಲಿ Rev. Moegling ಇವನು ಹೀಗನ್ನುತ್ತಾನೆ :—

"Abont the Kannada script adopted, the early European typographers sought the models of their types not in the forms to which the 14 th century had become accustomed, but in those more elegant ones which were to be found in manuscripts of the 12 th ; and, that the expulsion of all the abbreviations and monograms which abounded in later manuscripts and in the early prints has increased the elegance and intelligibility of books especially in the Greek language. In a similar manner, it is hoped, that once the eye is accustomed to the change, those who are familiar with Kannada reading, will find the new system at least as convenient as the old........Canarese alphabets like most of this country, is essentially syllabic ; that is, its fundamental plan is to express each syllable and all preceding consonants being heaped together in vertical order........".

೧೭. ದಾಸರ ಹಾಡುಗಳನ್ನು ಮ್ಯಾಗ್ಲಿಂಗನು ಜರ್ಮನ್‌ಗೆ ಇಳಿಸಿದನು :—

ಕರ್ಣಾಟಕದ ದಾಸ ಸಾಹಿತ್ಯವನ್ನು ಪಾಶ್ಚಾತ್ಯ ಭಾಷೆಗಳಿಗೆ ತಿಳಿಸಿದವರಲ್ಲಿ Dr. Hermann Moegling ಇವನೇ ಮೊದಲಿಗನು. ಪುರಂದರ, ಕನಕ ಮತ್ತಿತರ ದಾಸರ ಹಾಡುಗಳನ್ನು ಅವನು ಕನ್ನಡದಲ್ಲೂ ಜರ್ಮನ್ ಭಾಷೆಯಲ್ಲೂ ಬರೆದಿದ್ದು 516 ಪುಟಗಳ ಗ್ರಂಥವಾಗಿ 1860 ರಲ್ಲಿ ಪ್ರಕಟವಾಯಿತು. ಇದೇ ಜರ್ಮನ್ ಗ್ರಂಥವು ಎರಡನೇ ಬಾರಿಗೆ ಜರ್ಮನಿಯ ಲೈಪ್‌ಜಿಗ್‌ನಲ್ಲಿ 1864 ರಲ್ಲಿ ಮುದ್ರಣವಾಯಿತೆಂದರೆ ಜರ್ಮನಿಯ ಜನರು ಅದನ್ನು ಎಷ್ಟರಮಟ್ಟಿಗೆ ಮೆಚ್ಚಿದ್ದರೆಂಬುದು ತಿಳಿಯಬಹುದಾಗಿದೆ. ಆ ಗ್ರಂಥದ ಮೇಲ್ಪುಟದಲ್ಲಿ ಹೀಗೆ ಬರೆಯಲ್ಪಟ್ಟಿದೆ.

"Lieder Kanaresischer Sanger. Uebersetzt von H. Fr. Moegling....Proben von Purandara Dasa und Kanaka Dasa. Kanaresischer text des ersten Dutzend Dasara Padagalu. Zweites Dutzend....Leipzig.

ದಾಸ ಸಾಹಿತ್ಯವನ್ನು ಕುರಿತು Rev. Moegling ಇವನು ಬರೆದ ಜರ್ಮನ್ ಲೇಖನಗಳು German Oriental Society ಯ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ಕ್ರಿ. ಶ. 1848 ರಿಂದ ಮೂರು ವರ್ಷಗಳ ಕಾಲ ಅವನು ಬೆಂಗಳೂರಿನಲ್ಲಿದ್ದು Bibliotheca Carnatica ಎಂಬ ಗ್ರಂಥಕೋಶದ ಸಂಗ್ರಹದ ಬಗ್ಗೆಯಾಗಿಯೂ ದುಡಿದನು. ಹಲವು ವರ್ಷಗಳ ನಂತರ ತನ್ನ ಸ್ವದೇಶಕ್ಕೆ ಹಿಂದಿರುಗಿದ ಮೇಲೂ ಕನ್ನಡ ಸಾಹಿತ್ಯದ ಉತ್ತಮ ಪದ್ಯ ಭಾಗಗಳನ್ನು ಜರ್ಮನ್‌ಗೆ ಭಾಷಾಂತರಿಸುತ್ತಲೇ ಇದ್ದನೆಂಬುದಕ್ಕೆ ಅವನು ಜೈಮಿನಿ ಭಾರತದ ಕೆಲವು ಭಾಗಗಳನ್ನು ಆ ಭಾಷೆಗಿಳಿಸಿದ್ದೇ ಉದಾಹರಣೆಯಾಗಿದೆ. ಜರ್ಮನ್ ಭಾಷೆಯಲ್ಲಿ 324 ಪುಟಗಳಷ್ಟು ಬರೆದ ಈ ಕನ್ನಡ ಜೈಮಿನಿ ಭಾರತವು ಜರ್ಮನಿಯ ಲೈಪ್‌ಸ್ಜಿಗ್‌ನಲ್ಲಿ 1870 ರಲ್ಲಿ ಮುದ್ರಣವಾಗಿ ಪ್ರಕಟವಾಯಿತು. ಆ ಗ್ರಂಥದ ಮೇಲ್ಪುಟದಲ್ಲಿ ಈ ರೀತಿ ಬರೆಯಲ್ಪಟ್ಟಿದೆ—

"Essetes und Zweites Kapitel des altakanaresichen Jeimini Bharata....aus dem Kanareseischen Umgeschrieben, wortlich ubersetzt und mit Erlauterungen versehen von Dr. H. Fr. Moegling........Leipzig.

ಹೀಗೆ ಕನ್ನಡ ಸಾಹಿತ್ಯದಲ್ಲಿ ಉತ್ತಮವಾದುವನ್ನು Fr. Moegling ಇವನು ತನ್ನ ಸ್ವಭಾಷೆಗೆ ಸಾಗಿಸಿದ್ದಾನೆ. 1859 ರಲ್ಲಿ ಅವನು ಸಂಗ್ರಹಿಸಿದ "ಕನ್ನಡ ಗಾದೆಗಳು" ಎಂಬ 151 ಪುಟಗಳ ಪುಸ್ತಕದಲ್ಲಿ 3547 ಗಾದೆಗಳಿವೆ. ದೃಷ್ಟಾಂತಕ್ಕಾಗಿ ಅದರಿಂದ ಈ ಕೆಲವನ್ನು ಇಲ್ಲಿ ಕೊಡಲಾಗಿದೆ—

"ಅ–ಆ ಬಾರದಿದ್ದರೆ ಅಮರನಾದರೂ ಹೇಳು.
"ಅಂಕಣದ ಮನೆಯಾದರೆ ಕೊಂಕಣಿಗನಿಗೆ ಆಗದೆ?
"ಅಂಗಡಿ ಇದ್ದರೆ ಸಾಲದು; ಮುಂಗಡ ಬೇಕು.
"ಅಂಗರಕ್ಷೆ ಇಲ್ಲದವನಿಗೆ ಬಂಗಾರವೇಕೆ?
"ಅಂಚು ಇಲ್ಲದ ಹೊಲವಿಲ್ಲ, ಸಂಚುಯಿಲ್ಲದ ಮಾತು ಇಲ್ಲ.
"ಅಂಬು ತಾಗಿದರೂ ಹಂಬಲು ಬಿಡಲಿಲ್ಲ."

ಇಂಥಾ ಕೆಲವು ಸ್ವಾರಸ್ಯ ವಿಚಾರಗಳನ್ನೂ ಅವನು ಇಂಗ್ಲಿಷ್‌ನಲ್ಲೂ ಜರ್ಮನ್‌ನಲ್ಲೂ ಬರೆದಿದ್ದಾನೆ. ಕೊಡಗಿನ ಜನಜೀವನ, ಚರಿತ್ರೆ ಇತ್ಯಾದಿಗಳನ್ನು ಕುರಿತು ಅವನು 1852 ರಲ್ಲಿ "Coorg Memoirs" ಎಂಬ 280 ಪುಟಗಳ ಪುಸ್ತಕವನ್ನು ಇಂಗ್ಲಿಷ್‌ನಲ್ಲಿ ಬರೆದನು. ಅದೇ ಪುಸ್ತಕವು ಅವನಿಂದ ಜರ್ಮನ್ ಭಾಷೆಗೆ 'Kurgaland....' ಎಂದು ಭಾಷಾಂತರವಾಗಿ 1865 ರಲ್ಲಿ ಪ್ರಕಟವಾಯಿತು.

## ೧೪. ಮ್ಯಾಗ್ಲಿಂಗನು ತೌಳವ ಸಂಸ್ಕೃತಿಯನ್ನು ಮೊದಲ ಬಾರಿಗೆ ಬೋಧಿಸಿದನು :—

ಕನ್ನಡ, ತಮಿಳು, ಸಂಸ್ಕೃತ, ಪರ್ಷಿಯನ್ ಇತ್ಯಾದಿ ಭಾಷೆಗಳನ್ನು ಕಲಿತಿದ್ದ ಈ ವಿದ್ವಾಂಸನು ತುಳು ಮತ್ತು ಕೊಂಕಣಿ ಭಾಷೆಗಳಲ್ಲೂ ವಿಶೇಷ ಪಂಡಿತನಾಗಿದ್ದನು. ತುಳು ನಾಡಿನಲ್ಲೆಲ್ಲಾ ತನ್ನ ಮತ ಪ್ರಚಾರಾರ್ಥವಾಗಿ ಸಂಚರಿಸುತಿದ್ದ Rev. Moegling ಇವನು ನೂರಾರು ತುಳು ಪಾಡ್ದನಗಳನ್ನು ಸಂಗ್ರಹಿಸಿದನು; ತುಳು ಸಂಸ್ಕೃತಿಯನ್ನು ಅನ್ವೇಷಿಸಿದನು. ಪರಿಣಾಮವಾಗಿ ಇವನು ಆ ವರೆಗೆ ಸಂಗ್ರಹಿಸಿದ್ದ ಹಲವು ಕೊಡವ ಮತ್ತು ತುಳು ಜನಪದ ಹಾಡುಗಳನ್ನು ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಿಗಿಳಿಸಿದನು. ತುಳು ಭಾಷೆಯ ಜನಪ್ರಿಯ ಹಾಡಾದ 'ಕೋಟಿ-ಚೆನ್ನಯ' ಇದನ್ನು ಸಂಗ್ರಹಿಸಿ ಕನ್ನಡದಲ್ಲಿ ಬರೆದು ಪ್ರಚಾರಪಡಿಸಿದವರಲ್ಲಿ ಇವನೇ ಮೊದಲಿಗನಾಗಿರುವನು.

ಒಟ್ಟಾಗಿ Rev. Moegling ಇವನು ಕರ್ಣಾಟಕದಲ್ಲಿ Dr. William Carey ಇವನೆಂದೇ ಹೇಳಬಹುದು. ನಿಷ್ಠಾವಂತ ಕ್ರೈಸ್ತಮತ ಬೋಧಕನಾಗಿದ್ದುದರ ಜತೆಗೆ ಸುಮಾರು 1835 ರಿಂದ ಮೂವತ್ತೈದು ವರ್ಷಗಳ ಕಾಲ ಕನ್ನಡ ನಾಡಿನಲ್ಲಿ ಮತಪ್ರಚಾರ ಸಾಹಿತ್ಯ ಪ್ರಚಾರವೆಂದು ಬಹು ಬಗೆಯಲ್ಲಿ ಶ್ರಮಿಸಿದ್ದಾನೆ. ಬಂಗಾಳದಲ್ಲಿ W. Carey ಇವನು ಈ ದೇಶದ "a large mass of humanity.... grovelling in darkness" ಎಂಬುದಾಗಿ ಭಾವಿಸಿ ಸಮಾಜಸೇವೆ, ಸಾಹಿತ್ಯ ಸೇವೆ ಧರ್ಮಬೋಧೆ ಇತ್ಯಾದಿಗಳನ್ನು ಮಾಡಿದಂತೆ ಕರ್ಣಾಟಕದಲ್ಲೂ Fr. Moegling ಇವನು ಅದೇ ರೀತಿ ದುಡಿದನು. Rev. Carey ಮತ್ತು Fr. Ward ಇವರು 1803 ರಲ್ಲಿ ಭಾರತೀಯ ಭಾಷಾ ಲಿಪಿಗಳ ಅಚ್ಚು ಮೊಳೆಗಳನ್ನು ಪರಿಷ್ಕರಿಸಿದಂತೆ Fr. Moegling ಇವನೂ ಕನ್ನಡ ಲಿಪಿಗಳ ಅಚ್ಚು ಮೊಳೆಗಳನ್ನು ಪರಿಷ್ಕರಿಸಿದ್ದನೆಂದು 'ರಾಜೇಂದ್ರನಾಮೆ'ಯ ಮುದ್ರಣಾಕ್ಷರಗಳಿಂದ ವ್ಯಕ್ತವಾಗುತ್ತದೆ.

ಬಂಗಾಳೀ ದಾಸರ ಹಾಡುಗಳನ್ನು ಸಂಗ್ರಹಿಸಿ ಭಾಷಾಂತರಿಸಿದವರಲ್ಲಿ W. Carey ಇವನೇ ಮೊದಲಿಗನು. ಅವನು ಹಿಂದೂ ದೇವಸ್ಥಾನಗಳಿಗೆ ಹೋಗಿ ದಾಸರ ಹಾಡುಗಳನ್ನು ಹಾಡುತ್ತಾ ಕಾಲವನ್ನು ಕಳೆಯುತ್ತಿದ್ದನಂತೆ! ಅದೇ ರೀತಿ Rev. Moegling ಇವನು ಕನ್ನಡ ದಾಸರ ಹಾಡುಗಳನ್ನೆಲ್ಲಾ ಮೊದಲಾಗಿ ಸಂಗ್ರಹಿಸಿದನು. 1871 ರ 'Madras Times' ಪತ್ರಿಕೆಯಲ್ಲಿ "Moegling is the first in Kannada to bring out Dasa songs" ಎಂಬುದಾಗಿ Charles Gover ಇವನು ಬರೆದಿದ್ದಾನೆ. Carey ಮತ್ತು Marshman ಇವರು ಬಂಗಾಳೀ, ಸಂಸ್ಕೃತ ಇತ್ಯಾದಿ ಭಾಷಾ ಪತ್ರಿಕೆಗಳ ಮೂಲ ಕರ್ತೃಗಳು ಹೇಗೋ ಹಾಗೆಯೇ ಕನ್ನಡ ಭಾಷಾ ಪತ್ರಿಕೆಗಳ ಪ್ರಥಮ ಸಂಸ್ಥಾಪಕನಾಗಿ Rev. Moegling ಇವನು ಪ್ರಸಿದ್ಧನಾದನು. Rev. Carey ಇವನು ಬಂಗಾಳೀ ಬೈಬಲುಗಳನ್ನು ಸಹಸ್ರಾರು ಪ್ರತಿಗಳಂತೆ ಹತ್ತಿಪ್ಪತ್ತು ಬಾರಿ ಮುದ್ರಿಸಿ

ಹಂಚಿ, ಮೂಢ ನಂಬಿಕೆ ಅಥವಾ ಅಂಧಶ್ರದ್ಧೆಯಿಂದ ನರಳುವ ಈ ದೇಶದ ಜನವನ್ನು ಮೇಲೆತ್ತಲು ಯತ್ನಿಸಿದಂತೆ ಮತ್ತು ಹಲವರನ್ನು ಕ್ರೈಸ್ತ ಮತಕ್ಕೆ ಪರಿವರ್ತನೆಗೊಳಿಸಿದಂತೆಯೇ Rev. Moegling ಇವನೂ ಸಹ ಅದೇ ದೃಷ್ಟಿಯಿಂದ ಪಶ್ಚಿಮ ಕರ್ನಾಟಕದಲ್ಲಿ ತನ್ನ ಧರ್ಮಬೋಧೆ ಮತ್ತು ಜ್ಞಾನಬೋಧೆಯನ್ನು ಯಶಸ್ವಿಯಾಗಿ ಕೈಕೊಂಡನು.

ಕರ್ಣಾಟಕವು ಈ ಧರ್ಮಗುರು Rev. Moegling ಇವನಿಗೆ ಹಲವು ವಿಧದಲ್ಲಿ ಋಣಿಯಾಗಬೇಕಿದೆ. John Garrett ಮತ್ತು ಇತರರಂತೆ ಇವನು ಸರಕಾರೀ ಹುದ್ದೆಯನ್ನು ಪಡೆಯದೇ ಬರೇ ಒರ್ವ ತೀವ್ರಗಾಮಿಯಾಗಿ ಮತಪ್ರಚಾರಕನಾಗಿ ಇವನು ನಡೆಸಿದ ಸಾಹಿತ್ಯಸೇವೆಯು ಅಪರಿಮಿತವಾಗಿದೆ. ಇವನು ಪ್ರಾರಂಭಿಸಿದ ಪತ್ರಿಕಾ ವ್ಯವಸಾಯ, ದಾಸರ ಹಾಡು ಮತ್ತು ಕನ್ನಡ ಜೈಮಿನಿ ಭಾರತದ ಜರ್ಮನ್ ಭಾಷಾಂತರಗಳು, ಕನ್ನಡ ಲಿಪಿ ಸಂಸ್ಕರಣೆ, ತೌಳವ ಸಂಸ್ಕೃತಿಯ ಅನ್ವೇಷಣೆ ಮತ್ತು ಪ್ರಚಾರ, ಮತ್ತು ಇವನು ಹೊರಡಿಸಿದ ವಾರ್ಷಿಕ ಪಂಚಾಂಗಗಳೆಲ್ಲಾ ಕ್ರಾಂತಿಕಾರಕವಾದ ಕೆಲಸವಾಗಿವೆ. ಅವನು ಮಂಗಳೂರು, ಉಡುಪಿ, ಕೊಡಗು, ಬಳ್ಳಾರಿ ಮತ್ತು ಬೆಂಗಳೂರುಗಳಲ್ಲಿ ಕೆಲವು ವರ್ಷಗಳ ಕಾಲವಿದ್ದು ತನ್ನ ಕಾರ್ಯಕ್ಷೇತ್ರವನ್ನು ವಿಶಾಲವಾಗಿಸಿ ಅಷ್ಟೇ ಉತ್ಸಾಹದಿಂದ ದುಡಿದು ಕೃತಾರ್ಥನಾಗಿರುವನು.

---

೨೦

“ಬಂದಿಹಿರಿ, ಬಂದಿಹಿರಿ, ಕನ್ನಡದ ಮಣಿಗಳಿರ,
ಬಂದಿಹಿರಿ, ಕನ್ನಡದ ದೇವಿಯಾರಾಧನೆಗೆ,
ಇಂದು ಸ್ವಾಗತವು ನಿಮಗೆ!
ತಂದಿಹಿರಿ ನೀವಿಂದು ಹೊಸದೊಂದು ಭಾಗ್ಯವನು
ಈ ನಮ್ಮ ‘ಮೈಸೂರಿ’ಗೆ!
ಗೆಳೆಯ ಕನ್ನಡಿಗರೇ, ಸ್ವಾಗತವು ನಿಮಗೆ!

[ತೀ. ನಂ. ಶ್ರೀಕಂಠಯ್ಯ]

ಕ್ರಿ. ಶ. ಸುಮಾರು 1845 ರಿಂದ ಈ ದೇಶದಲ್ಲಿ ಪ್ರಾಥಮಿಕ ಶಾಲೆಗಳು ಮಾತ್ರವಲ್ಲ; ಮಾಧ್ಯಮಿಕ ಶಾಲೆಗಳೂ ಅಲ್ಲಲ್ಲಿ ಸ್ಥಾಪಿಸಲ್ಪಟ್ಟು ಹಲವೆಡೆ ಉತ್ತಮವಾದ ಶಾಲಾ ಕಟ್ಟೋಣಗಳೂ, ಶಾಸ್ತ್ರೀಯ ರೀತಿಯಲ್ಲಿ ಪಾಠ ಪ್ರವಚನವೂ, ಪ್ರವೀಣ ಐರೋಪ್ಯ ಅಧಿಕಾರಿಗಳೂ ಅಧ್ಯಾಪಕರೂ ಮೊದಲ್ಗೊಂಡು ಶಿಕ್ಷಣಕ್ರಮವು ಉನ್ನತ ಮಟ್ಟಕ್ಕೇರಿಸಲ್ಪಟ್ಟಿತು. ಆ ವರೆಗೂ ನಮ್ಮ ದೇಶದಲ್ಲಿ ಕೆಲವರಿಗೆ ಮಾತ್ರ ಮೀಸಲಾಗಿದ್ದ ವೇದಾಧ್ಯಯನ, ಅಮರಕೋಶ, ಜೈಮಿನಿ ಭಾರತ, ಗಣಿತದಲ್ಲಿ ‘ಹಾಗ-ಬೇಳೆ-ಮುಪ್ಪಾಗ’ ಕ್ರಮವೆಲ್ಲವೂ ಕಾಲಕ್ರಮೇಣ ಬದಲಾಯಿಸಲ್ಪಟ್ಟವು. ದೇಶೀಯ ಭಾಷೆ, ಬರೆವಣಿಗೆ, ಓದುವಿಕೆ, ಪದ್ಯಪಠಣ, ಗಣಿತ, ಭೂಗೋಳ ಶಾಸ್ತ್ರ ಇತ್ಯಾದಿಗಳನ್ನು ಹೊಸ ಕ್ರಮದಲ್ಲಿ ಬೋಧಿಸಲು ತೊಡಗಿದರು. ಪ್ರಾಥಮಿಕ ಶಾಲೆಗಳಲ್ಲಿ ಸಾಮಾನ್ಯ ವಿಜ್ಞಾನ, ಆರೋಗ್ಯಶಾಸ್ತ್ರ, ಆಯಾ ಜಿಲ್ಲೆಗಳ ಚರಿತ್ರೆ, ಭೂವಿವರಣೆ, ಹಾಡುಗಾರಿಕೆ, ಕೈಗಾರಿಕೆ ಮೊದಲಾದುವು ಕಲಿಸಲ್ಪಡುತ್ತಿದ್ದುವು. ಇಂಗ್ಲಿಷ್ ಭಾಷಾ ಶಿಕ್ಷಣಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ನುರಿತ ಅಧ್ಯಾಪಕರು ಇಲ್ಲದೇ ಇದ್ದಿದ್ದರೂ ಅನೇಕ ಶಾಲೆಗಳಲ್ಲಿ ಇಂಗ್ಲಿಷ್ ಶಿಕ್ಷಣವೂ ಭರದಿಂದ ಸಾಗಿತು.

ಕ್ರಿ. ಶ. 1857 ರಲ್ಲಿ ಕಲ್ಕತ್ತಾ, ಬೊಂಬಾಯಿ, ಮತ್ತು ಮದರಾಸಿನಲ್ಲಿ ವಿಶ್ವವಿದ್ಯಾಲಯಗಳ ಸ್ಥಾಪನೆಯಾದುವು; ಹೊಸ ವಿದ್ಯಾಕ್ರಮವೂ ಪಾಠಕ್ರಮ ಪಟ್ಟಿಗಳೂ ಜಾರಿಗೆ ಬಂದುವು. ಕರ್ಣಾಟಕದ ಪ್ರಮುಖ ಕೇಂದ್ರಗಳಲ್ಲಿ ವಿಶ್ವವಿದ್ಯಾಲಯ ಮಟ್ಟದ ಕೆಲವು ಕಲಾಶಾಲೆಗಳೂ ತೆರೆಯಲ್ಪಟ್ಟವು. ಇವುಗಳಲ್ಲೆಲ್ಲಾ ಕ್ರೈಸ್ತಮತ ಪ್ರಚಾರಕರಾದ ಪಾಶ್ಚಾತ್ಯ ವಿದ್ವಾಂಸರೇ ಅಂದಿನ ಆಂಗ್ಲೇಯ ಸರಕಾರದ ವಿಶೇಷ ಉತ್ಸಾಹವನ್ನು ಪ್ರದರ್ಶಿಸಿದರು. ತಮ್ಮ ಬೈಬಲ್ ಪುಸ್ತಕಗಳ ಮುದ್ರಣಕ್ಕೆಂದು ಸ್ಥಾಪಿಸಲ್ಪಟ್ಟ ಛಾಪಖಾನೆಗಳಲ್ಲೆಲ್ಲಾ ಪಠ್ಯಪುಸ್ತಕಗಳನ್ನು ಅವಿರತವಾಗಿ ಅಚ್ಚು ಹಾಕಿಸಿದರು. ಬಳ್ಳಾರಿ, ಧಾರವಾಡ, ಬೆಳಗಾವಿ, ಮೈಸೂರು ಮಂಗಳೂರು ಮತ್ತು ಬೆಂಗಳೂರು ಈ ಕೇಂದ್ರಗಳಲ್ಲಿ ಪಠ್ಯಪುಸ್ತಕಗಳ ಡಿಪೋ’ಗಳು ತೆರೆಯಲ್ಪಟ್ಟು ಅವುಗಳ ಮೂಲಕ ಅವುಗಳನ್ನು ಎಲ್ಲಾ ಶಾಲೆಗಳಿಗೂ ಹಂಚುತ್ತಿದ್ದರು. ಕರ್ಣಾಟಕದ ವಿವಿಧ ಜಿಲ್ಲೆಗಳು ಆಗ ಬೇರೆ ಬೇರೆ ರಾಜ್ಯ ಸರಕಾರಗಳೊಳಗೆ ಅಡಗಿದ್ದಿತ್ತಾದರೂ

ಶಿಕ್ಷಣಕ್ರಮ ವ್ಯವಸ್ಥೆಯು ಎಲ್ಲಾ ಕಡೆಗಳಲ್ಲೂ ಸಾಧಾರಣ ಒಂದೇ ರೀತಿಯಲ್ಲಿ ನಿರ್ಮಿಸಲ್ಪಟ್ಟಿತ್ತು.

೨. ನವೀನ ಶಿಕ್ಷಣಕ್ರಮಕ್ಕೆ ತಕ್ಕಂಥಾ ಪಠ್ಯಪುಸ್ತಕಗಳು :—

ಶಾಲೆಗಳ ಸಂಖ್ಯೆಯು ಹೆಚ್ಚಿದಂತೆ ಪಠ್ಯಪುಸ್ತಕಗಳೂ ಅದೇ ಪ್ರಮಾಣದಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರಕಟವಾಗಲಾರಂಭವಾದುವು. ಬೊಂಬಾಯಿ, ಮದರಾಸು ಮತ್ತು ಮೈಸೂರು ರಾಜ್ಯಗಳ ವಿದ್ಯಾ ಇಲಾಖೆಯವರು ಕ್ರಿ. ಶ. 1830 ರಿಂದ ಪಠ್ಯ ಪುಸ್ತಕಗಳನ್ನು ಪಾಶ್ಚಾತ್ಯ ವಿದ್ವಾಂಸರಿಂದಲೇ ಬರೆಯಿಸಿದರು. ಅಂಥಾ ಪುಸ್ತಕಗಳಲ್ಲಿ ಕಾಲದಿಂದ ಕಾಲಕ್ಕೆ ನಾವಿನ್ಯತೆಯೂ ಪರಿಪುಷ್ಟತೆಯೂ ಇದ್ದೇ ಇದ್ದಿತು. ಉದಾ ಹರಣೆಗೆ 1858 ರಲ್ಲಿ ಬೆಂಗಳೂರು ಕ್ಯಾಥೊಲಿಕ್ ಮಿಷನ್‌ನವರು ಪ್ರಕಟಿಸಿದ ಚಿಕ್ಕ "ಗಣಿತ ಶಾಸ್ತ್ರದ ಸಂಕ್ಷೇಪ ಪುಸ್ತಕ"ಯೆಂಬ ಕೈಪಿಡಿಯು ಆ ವರೆಗೆ ಬೆಳಕಿಗೆ ಬಾ ದಿದ್ದಂಥಾ ಅಮೂಲ್ಯ ಕೃತಿಯಾಗಿದೆ. ಇದೇ ಪುಸ್ತಕವು 1864ರಲ್ಲಿ 96 ಪುಟಗಳಲ್ಲಿ ಪುನರ್ಮುದ್ರಣವಾಯಿತು. 1858 ರಲ್ಲಿ ಮಂಗಳೂರು ಬಾಸಿಲ್ ಮಿಷನ್‌ನವರು "ಬಡ್ಡಿಯ ಜಂತ್ರಿ" ಎಂಬುದಾಗಿ ಒಂದು ಕೈಪಿಡಿಯನ್ನು ಪ್ರಕಟಿಸಿದರು. ಅದರಲ್ಲಿ—

ಒಂದು ಪೈಯಿಂದ 1000 ರೂಪಾಯಿ ವರೆಗೆ
ಒಂದು ದಿನದಿಂದ 100 ವರ್ಷಗಳ ಪರ್ಯಂತರ.
100 ಕ್ಕೆ 12ರ ಪ್ರಕಾರ ಆಗುವ ಬಡ್ಡಿಯ ಪಟ್ಟಿಗಳು"

ಎಂಬುದಾಗಿ ಗಣಿತ ವಿದ್ಯೆಯನ್ನು ಆರಂಭಿಸುವವರಿಗೆ ತಕ್ಕುದಾದ ಹೊತ್ತಗೆಯಾಗಿತ್ತು. ಹಲವು ಸಂದರ್ಭಗಳಲ್ಲಿ ಇಂಗ್ಲೆಂಡಿನ ಶಾಲೆಗಳಲ್ಲಿ ಉಪಯೋಗಿಸುತ್ತಿದ್ದ ಪಠ್ಯಪುಸ್ತಕ ಗಳನ್ನು ಅಂತೆಯೇ ಭಾಷಾಂತರಿಸಿ ಭಾರತೀಯ ಶಾಲೆಗಳಲ್ಲಿ ಉಪಯೋಗಿಸಿದ್ದರು. ಹಾಗೆ ಭಾಷಾಂತರಿಸುವಾಗ ಗಣಿತ ಪುಸ್ತಕಗಳಲ್ಲೂ ಕನ್ನಡ ಶಬ್ದಗಳನ್ನು ಹೇಗೆ ಬಳಸಿದ್ದರು ಎಂಬುವದಕ್ಕೆ Colinso's Arithmetic ಇದರಿಂದ ಅನುವಾದಿಸ ಲ್ಪಟ್ಟ ಈ ಭಾಗಗಳನ್ನು ದೃಷ್ಟಾಂತಕ್ಕಾಗಿ ಕೊಡಲಾಗಿದೆ :—

"3 ಬಡ್ಡಿಯಲ್ಲಿದ್ದ 100 ಪೌಂಡಿನ ಸಂಚಯ ಪತ್ರವನ್ನು 91 ಪೌಂಡು 15 ಶಿಲ್ಲಿಂಗ್‌ಗೆ ಮಾರುವಲ್ಲಿ 540 ಪೌಂಡಿಗೆ ಸಂಚಯದ ಶೇಕಡಗೆ ⅛ ದಲಾಲಿ ಕಳೆದು ಎಷ್ಟು ಸಂಚಯ ತಕ್ಕೊಳ್ಳಬಹುದು?

"ವಿಷಮ ಭಿನ್ನರಾಶಿಯನ್ನು ಪೂರ್ಣಾಂಕ ಅಥವಾ ಭಾಗಾನುಬಂಧ ಪೂರ್ಣಾಂಕ ಮಾಡುವದಕ್ಕೆ ಸೂತ್ರ :—

"ಅಂಶವನ್ನು ಛೇದದಿಂದ ಭಾಗಿಸು ; ಲಬ್ಧವು ಪೂರ್ಣಾಂಕವಾಗುವದು, ಮತ್ತು ಶೇಷ ಉಳಿದರೆ ಆ ಶೇಷವು ಅನುಬಂಧದ ಅಂಶವಾಗುವುದು.

ಉದಾ. (1) $\frac{45}{9} = 5$ (2) $\frac{113}{15} = 7\frac{8}{15}$

ಆ ಕಾಲದಲ್ಲಿ ಪ್ರಾಥಮಿಕ ದರ್ಜೆಗಳ ಮಾತ್ರ ಗಣಿತವನ್ನು ಕನ್ನಡದಲ್ಲಿ ಕಲಿಸು

ತಿದ್ದರು. ಮಾಧ್ಯಮಿಕ ತರಗತಿಗಳಿಗೆ ಪಾಠಪ್ರವಚನಗಳೆಲ್ಲವೂ ಇಂಗ್ಲಿಷ್‌ನಲ್ಲಿಯೇ ನಡೆಯುತಿದ್ದುದರಿಂದ ಹಲವು ಬಗೆಯ ಇಂಗ್ಲಿಷ್ ಪಠ್ಯಪುಸ್ತಕಗಳಿಗಂತೂ ಏನೂ ಅಭಾವವಿರಲಿಲ್ಲ.

### ೩. ಚಾರ್ಲ್ಸ್ ಬ್ರೌನ್ ಇವನಿಂದ ಇಂಗ್ಲಿಷ್-ಕನ್ನಡ "ಸಂಭಾಷಣಾ ಗ್ರಂಥ" :—

ಮದ್ರಾಸು ಸರಕಾರದಲ್ಲಿ ಉಚ್ಚ ಅಧಿಕಾರಿ ಸ್ಥಾನಗಳನ್ನು ಹೊಂದಿ ಅನಂತರ ನ್ಯಾಯಾಧೀಶ ಪದವಿಗೇರಿದ Charles Philip Brown ಇವನು ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲೆಲ್ಲಾ ಪಂಡಿತನಾಗಿದ್ದನು. ತೆಲುಗು ವ್ಯಾಕರಣ ಮತ್ತು ನಿ ಘ ಂ ಟು ಗ ಳ ನ್ನು ರಚಿಸಿ ಪ್ರಖ್ಯಾತನಾದ ಇವನು Dialogue in English and Canarese ಎಂಬ ಚಿಕ್ಕ ಪುಸ್ತಕವನ್ನು ಬರೆದಿದ್ದು ಹಲವು ವರ್ಷಗಳ ಕಾಲ ಕನ್ನಡ ಶಾಲೆಗಳಲ್ಲಿ ಪಠ್ಯಪುಸ್ತಕವಾಗಿ ಉಪಯೋಗಿಸಲ್ಪಟ್ಟಿತು. 1852 ರಲ್ಲಿ ಪ್ರಕಟವಾದ ಈ ಕೈಪಿಡಿಯು ಒಂದೆರಡು ಬಾರಿ ಪುನರ್ಮುದ್ರಣವೂ ಆಯಿತು. ಇಂಗ್ಲಿಷ್ ಭಾಷೆಯನ್ನು ಪ್ರಾರಂಭದಲ್ಲಿ ಕಲಿಯುವವರಿಗೆ ಅದು ಎಷ್ಟು ಅನುಕೂಲವಾಗಿತ್ತೆಂಬುದಕ್ಕೆ ಈ ಕೆಲವು ಉದಾಹರಣೆಗಳನ್ನು ಅದರಿಂದ ಎತ್ತಿ ಕೊಡಲಾಗಿದೆ—

"Are all your people well?
ನಿಂಮವರೆಲ್ಲಾ ಕ್ಷೇಮವಾಗಿದ್ದಾರೆಯೆ?
All are well; only Pattabhirama is poor in health.
ಯೆಲ್ಲರೂ ಕ್ಷೇಮವಾಗಿದ್ದಾರೆ; ಪಟ್ಟಾಭಿರಾಮನಿಗೆ ಮಾತ್ರ ಮೈ ಲಘುವಿಲ್ಲ.
He has been ill a great many days.
ಅವನು ಬಹಳ ದಿನದಿಂದ ಮೈ ಸ್ವಸ್ಥವಿಲ್ಲದೆ ಯಿದ್ದಾನೆ.
True, his appears to be a chronic disorder.
ನಿಜವೇ, ಅತಂದು ದೀರ್ಘವ್ಯಾಧಿಯಾಗಿ ಕಾಣಬರುತ್ತೆ.
Does no one now administer medicine to him?
ಯಿೂಗ ಅವನಿಗೆ ಯಾರುನ್ನೂ ಔಷಧಾ ಕೊಡೋದಿಲ್ಲವೆ?...."

Rev. C. P. Brown ಇವನು ದ್ರಾವಿಡ ಭಾಷೆಗಳ ತುಲನಾತ್ಮಕ ಅನ್ವೇಷಣೆಯನ್ನೆಸಗಲು Robert Caldwell ಇವನಿಗೆ ಮಾರ್ಗದರ್ಶಕನಾಗಿದ್ದ ಹಿರಿಯ ಸಾಹಿತಿಯಾಗಿದ್ದನು. John Garrett ಇವನು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಗಿಂತ ಮಿಗಿಲಾಗಿ ಅವನು ತೆಲುಗು ಭಾಷೆಗೆ ಸಲ್ಲಿಸಿದ್ದಾನೆ. ತೆಲುಗು ಮತ್ತು ಕನ್ನಡವು ಲಿಪಿಯಲ್ಲೂ ಭಾಷೆಯಲ್ಲೂ ಒಂದೇ ಆಗಿದ್ದು ವ್ಯಾಕರಣದಲ್ಲಿ ಮಾತ್ರ ಬೇರೆಯಾಗಿದೆಯೆಂದು ಪ್ರತಿಪಾದಿಸಿ ಆವೆರಡೂ ಭಾಷೆಗಳನ್ನು ಒಂದಾಗಿಸುವ ಯೋಜನೆಯನ್ನು ಸುಮಾರು 140 ವರ್ಷಗಳಿಗೆ ಹಿಂದೆ Rev. C. P Brown ಇವನು ಆಲೋಚಿಸಿದ್ದನು. ಇವನು ಮದ್ರಾಸು ಆಧಿಪತ್ಯದಲ್ಲಿಯೇ ತನ್ನ ಅಧಿಕಾರಾವಧಿಯನ್ನು ಕಳೆದುದರಿಂದ ಕನ್ನಡ ಸಾಹಿತ್ಯಕ್ಕೆ ಇವನ ಸೇವೆಯು ಒದಗದಾಯಿತು; ಆದರೆ ತೆಲುಗು

ಸಾಹಿತ್ಯದಲ್ಲಿ ಇಂದಿಗೂ ಅವನ ಹೆಸರು ಮನೆ ಮಾತಾಗಿ ಉಳಿದಿದೆ.

**೪. ಕ್ಯಾಂಪ್ಬೆಲನಿಂದ ವ್ಯಾಕರಣ ಮತ್ತು 'ಬಾಲ್ಯೋಪದೇಶ'ಗಳು:—**

ಬೈಬಲ್ ಸಾಹಿತಿಯಾದ Rev. C. Campbell ಇವನು ಪಠ್ಯಪುಸ್ತಕಗ ರಚನೆಯಲ್ಲಿಯೂ ಅಭಿರುಚಿಯನ್ನು ತೋರಿಸಿದನು. ಕ್ರಿ. ಶ. 1849 ರಲ್ಲಿ ಅವನು 8 ಪುಟಗಳ ಕನ್ನಡ ಶಾಲಾ ವ್ಯಾಕರಣವನ್ನು ಬರೆದಿದ್ದು ಹಲವು ವರ್ಷಗಳ ಕಾಲ ಎಲ್ಲಾ ಶಾಲೆಗಳಲ್ಲೂ ಉಪಯೋಗಿಸಲ್ಪಟ್ಟಿತ್ತು. 1852 ರಲ್ಲಿ ಅವನು "ಬಾಲ್ಯೋಪದೇಶ ಎಂಬುದಾಗಿ ಇನ್ನೊಂದು ಸೊಗಸಾದ ಪಠ್ಯಪುಸ್ತಕವನ್ನು ರಚಿಸಿದನು. ಹಲವು ನೀ ವಾಕ್ಯಗಳಿಂದ ಮತ್ತು ನೀತಿಕಥೆಗಳಿಂದ ಕೂಡಿದ್ದ ಈ 'ಬಾಲ್ಯೋಪದೇಶವು' ಕನ್ನ ಭಾಷಾ ಪಾಠಕ್ಕೂ ತಕ್ಕುದಾದ ಹೊತ್ತಗೆಯಾಗಿ ಅದು ಸಹ ಒಂದೆರಡು ಬಾರಿ ಪು ಮುದ್ರಣವಾಯಿತು. 1870ರಲ್ಲಿ Rev. Campbell ಇವನ Element of Canarese Grammar for natives ಎಂಬ ಇನ್ನೊಂದು ಸಂಕ್ಷಿ ವ್ಯಾಕರಣ ಪುಸ್ತಕವು ಪ್ರಕಟವಾಯಿತು.

ಬೊಂಬಾಯಿ ಅಧಿಪತ್ಯದ ವಿದ್ಯಾ ಇಲಾಖೆಯಲ್ಲಿದ್ದ John Mc Culloc ಇವನು ಹಲವು ಕನ್ನಡ ಮತ್ತು ಭೂಗೋಳಶಾಸ್ತ್ರ ಪಠ್ಯಪುಸ್ತಕಗಳನ್ನು ಬರೆದನು ಇವನ ಪುಸ್ತಕಗಳು ಉತ್ತರ ಕರ್ನಾಟಕದ ಶಾಲೆಗಳಲ್ಲಿ ಕ್ರಿ.ಶ. 1850 ರಿಂದ ಹಲ ವರ್ಷಗಳವರೆಗೂ ಉಪಯೋಗಿಸಲ್ಪಟ್ಟಿದ್ದುವು. ಬೊಂಬಾಯಿಯಲ್ಲಿದ್ದ Thoma Candy ಇವನು 445 ಪುಟಗಳ ಮರಾಠಿ ಭಾಷಾಪಠ್ಯಪುಸ್ತಕವನ್ನು 1855 ರ ಬರೆದಿದ್ದನು. ಅದು ಬಹು ಉತ್ತಮವಾದ ಪುಸ್ತಕವೆಂದು ಪರಿಗಣಿಸಲಾಗಿತ್ತು. ಅದನ ಜಿ. ಎಂ. ಟೂರಮುರಿ ಇವನು ಕನ್ನಡಕ್ಕೆ ಭಾಷಾಂತರಿಸಿದ್ದು ಹಲವು ಬಾರಿ ಪುನರ್ಮು ದ್ರಣವಾಗಿ ಕನ್ನಡ ಪಠ್ಯಪುಸ್ತಕವಾಗಿಯೂ ಉಪಯೋಗಿಸಲಾಯಿತು. ಈ ಪುಸ್ತಕ ಕಡೇ ಮುದ್ರಣವು 1870 ರಲ್ಲಾಯಿತು.

1864 ರಲ್ಲಿ "ಭೂಗೋಳಶಾಸ್ತ್ರ ಸಂಕ್ಷೇಪವು" ಎಂಬ 438 ಪುಟಗಳ ಪ ಪುಸ್ತಕವೂ, ಇಂಗ್ಲೆಂಡಿನ ಚರಿತ್ರೆಯು ಸಂಭಾಷಣಾ ರೂಪದಲ್ಲಿಯೂ ಪ್ರಕಾಶ ಯಿತು. ಇವುಗಳ ಕರ್ತೃಗಳ ಹೆಸರು ಆ ಗ್ರಂಥಗಳಲ್ಲಿ ಸೂಚಿತವಾಗದಿದ್ದರೂ ಅ ಉತ್ತಮವಾಗಿ ಬರೆಯಲ್ಪಟ್ಟ ಗ್ರಂಥಗಳಾಗಿದ್ದುವು. ಇಂಗ್ಲೆಂಡಿನ ಚರಿತ್ರೆಯು ಪ್ರಶ್ನೋ ತ್ತರ ರೂಪದಲ್ಲಿ ಕಾಣಿಸಿಕೊಂಡುದು ಅದೇ ಮೊದಲನೇದಾಗಿದೆ. ಅದರಲ್ಲಿ ಕೆಲ ಪ್ರಶ್ನೆಗಳು ಹೀಗಿವೆ:—

"ಚಾರ್ಲ್ಸೆಂಬವನಿಗೆ ಬದಲಾದವನ್ಯಾರು?
ಜೇಂಸ್ ಎಂಬ ರಾಯನ ಮುಖ್ಯ ತಪ್ಪು ಯಾವುದು?
ಆನ್ನೆಂಬ ರಾಣಿಯ ಪ್ರಧಾನ ಸೇನಾಪತಿಯು ಯಾರು?
ಹೇಸ್ಟಿಂಗ್ಸ್ ಯುದ್ಧವಾದ ಮೇಲೆ ವಿಲಿಯಂ ಎಂಬವನು ಹಕ್ಕು ಇಲ್ಲದೆ
ಇಂಗ್ಲಿಷ್ ಸಿಂಹಾಸನವನ್ನು ವಶಮಾಡಿಕೊಂಡನೊ?
೨ ನೇ ಎಡ್ವರ್ಡ್ ಎಂಬ ರಾಯನ ಕಾಲದಲ್ಲಿ ನಡೆದ ಪ್ರಧಾನ ಸಂಗತಿ

ಯಾವುದು ?"

ಶಾಲೆಗಳಲ್ಲಿ ಹುಡುಗರಿಗೆ ಪಠ್ಯಪುಸ್ತಕದ ಬದಲಾಗಿ ಸುಲಭರೀತಿಯಲ್ಲಿ ಬರೆದ notes ಇವುಗಳನ್ನು ಕೊಡುವುದು ಇತ್ತೀಚಿಗಿನ ಅಭ್ಯಾಸವೆಂದು ಹಲವರು ತಿಳಿದುಕೊಂಡಿದ್ದರೆ ಅದು ತಪ್ಪೆಂದೇ ಹೇಳಬೇಕು. ಏಕೆಂದರೆ ಕಲಿಯತಕ್ಕ ಪಾಠಗಳನ್ನು ಸುಲಭರೂಪದಲ್ಲಿ ಮತ್ತು ಪ್ರಶ್ನೋತ್ತರರೂಪದಲ್ಲಿ ಕೊಡುವುದು ಸುಮಾರು 130 ವರ್ಷಗಳಿಗೆ ಹಿಂದೆಯೇ ಇದ್ದಿತೆಂಬುದು ಮೇಲಿನ ಹಲವು ಉದಾಹರಣೆಗಳಿಂದ ತಿಳಿಯುತ್ತದೆ.

**೫. ಭೂಗೋಳ ಮತ್ತು ಚರಿತ್ರೆಯನ್ನು ಕುರಿತು ಹಲವು ಪುಸ್ತಕಗಳು :—**

ಕ್ರಿ. ಶ. 1857 ರಲ್ಲಿ J. G. Duff ಇವನು ಭೂಗೋಳ ಶಾಸ್ತ್ರ ಪಠ್ಯಪುಸ್ತಕಗಳನ್ನು ಮರಾಠಿ ಮತ್ತು ಕನ್ನಡದಲ್ಲಿ ಸಂಭಾಷಣೆಯ ರೂಪದಲ್ಲಿ ಬರೆದದ್ದು ಉತ್ತರ ಕರ್ನಾಟಕದ ಶಾಲೆಗಳಲ್ಲಿ ಬಳಸಲಾಗಿತ್ತು. 1858 ರಲ್ಲಿ D. A. Esdai'e ಇವನು ಮಹಾರಾಷ್ಟ್ರದ ಭೂಗೋಳ ಮತ್ತು ಚರಿತ್ರೆಯನ್ನು ಕನ್ನಡದಲ್ಲಿ 104 ಪುಟಗಳಲ್ಲಿ ಸಂಭಾಷಣೆಯ ರೂಪದಲ್ಲಿ ಬರೆದದ್ದು ಬೆಂಗಳೂರು ವೆಸ್ಲೀ ಮುದ್ರಣಾಲಯದಿಂದ ಪ್ರಕಟವಾಯಿತು. ಈ ಸಂಭಾಷಣೆಯ ಒಂದು ಭಾಗವು ಹೀಗಿದೆ :—

" ಮಹಾರಾಷ್ಟ್ರ ದೇಶವು ಯಾವ ಕಡೆಯಲ್ಲಿ ಇದೆ ?

" ದಕ್ಷಿಣ ಹಿಂದೂಸ್ಥಾನದೊಳಗೆ ಇದೆ.

" ದಕ್ಷಿಣ ಹಿಂದೂಸ್ಥಾನವೆಂದರೇನು ?

" ನರ್ಮದಾ ನದಿಯ ಮತ್ತು ಮಹಾನದಿಯ ದಕ್ಷಿಣದಲ್ಲಿ ಇರುವ ದೇಶವು.

" ದಕ್ಷಿಣ ಹಿಂದೂಸ್ಥಾನದ ಯಾವ ಕಡೆಗೆ ಮಹಾರಾಷ್ಟ್ರ ಇದೆ ?

" ವಾಯುವ್ಯ ದಿಕ್ಕಿಗೆ ಇದೆ.

" ಈ ಮಹಾರಾಷ್ಟ್ರ ದೇಶದ ಮೇರೆಗಳು ಎಲ್ಲಿಂದ ಎಲ್ಲಿಯ ತನಕ ಇದೆ ?

" ಈ ದೇಶದ ಉತ್ತರಕ್ಕೆ ಸಾತಪುಡಾ ಎಂಬ ಒಂದು ಬೆಟ್ಟ ಇದೆ. ಪೂರ್ವಕ್ಕೆ ವೈನಗಂಗಾ, ವರದಾ ಎಂಬ ಎರಡು ನದಿಗಳು ಇವೆ. ಆಗ್ನೇಯ ದಿಕ್ಕಿಗೆ ಮಹೂರೆ ಎಂಬ ಊರ ಹಿಡಿದು ಗೋವೆಯ ವರೆಗೂ ಸೊಟ್ಟವಾದ ಮೇರೆ ಇದೆ. ಇವೇ ಮಹಾರಾಷ್ಟ್ರ ದೇಶದ ಮೇರೆಗಳು.

" ಮಹಾರಾಷ್ಟ್ರ ದೇಶದಲ್ಲಿ ಯಾವ ಭಾಷೆಗಳು ಉಂಟು ?

" ಮರಾಠಿ. ಗುಜರಾಥೀ. ಮಾಳವ. ತೆಲುಗು. ಕರ್ನಾಟಕ. ದಖನೀ ಈ ಆರು ಭಾಷೆಗಳು ಉಂಟು."

ಈ ಮೇಲಿನ ವಿವರಣೆಯಿಂದ ಅಂದಿನ ಮಹಾರಾಷ್ಟ್ರದ ಮೇರೆ ಪ್ರಮಾಣಗಳೆಷ್ಟೆಂಬುದನ್ನು ತಿಳಿಯಬಹುದಾಗಿದೆ.

ಕ್ರಿ. ಶ. 1867 ರಲ್ಲಿ " ಇಂಗ್ಲೆಂಡ್ ಸೀಮೆಯ ಚರಿತ್ರೆಯ ಪ್ರಶ್ನೋತ್ತರವಾದ ಸಂಕ್ಷೇಪವು ". ಎಂಬ ಪುಸ್ತಕದ ಎರಡನೇ ಮುದ್ರಣವು 104 ಪುಟಗಳುಳ್ಳದ್ದಾಗಿ ಪ್ರಕಟವಾಯಿತು. 1868 ರಲ್ಲಿ " ಭೂಗೋಳವರ್ಣನೆಯ ಮೊದಲನೇ ಪುಸ್ತಕವು " ಎಂಬ ಚಿಕ್ಕಪುಸ್ತಕವು ಮಂಗಳೂರು ಬಾಸೆಲ್ ಮಿಷನ್ ನವರಿಂದ ಪ್ರಕಾಶಿಸಲಾಯಿತು. ಈ

ಎರಡು ಪಠ್ಯಪುಸ್ತಕಗಳನ್ನು ರಚಿಸಿದವರಾರೆಂದು ಅದರಲ್ಲಿ ಸೂಚಿತವಾಗಲಿಲ್ಲ. 1870 ರಲ್ಲಿ ಬೊಂಬಾಯಿ ವಿದ್ಯಾಖಾತೆಯಲ್ಲಿದ್ದ Archibald Geikie ಇವನು 107 ಪುಟಗಳ "ಪ್ರಾಕೃತಿಕ ಭೂಗೋಳ ಶಾಸ್ತ್ರ" ಇದನ್ನು ಬರೆದನು. ಇದು ಮತ್ತೊಂದು ಉಪಯುಕ್ತವಾದ ಭೂಗೋಳ ಪಠ್ಯಪುಸ್ತಕವಾಗಿತ್ತು.

**೬. ಥಾಮಸ್ ಹಡ್ಸನ್ ಇವನ ವ್ಯಾಕರಣ ಪುಸ್ತಕಗಳು :—**

John Mckerrell ಮತ್ತು William Carey ಇವರನಂತರ ಪ್ರಸಿದ್ಧ ಪಾಶ್ಚಾತ್ಯ ಕನ್ನಡ ವ್ಯಾಕರಣಗಾರನು Rev. Thomas Hudson ಇವನು. ಇವನಿಗಿಂತ ಹಿಂದಿನ ವಿದ್ವಾಂಸರು ಆ ವರೆಗೆ ಬರೆದ ವ್ಯಾಕರಣಗ್ರಂಥಗಳು ಅವನಿಗೆ ತೃಪ್ತಿಕರವಾಗಿ ಕಂಡುಬರದೆ ವಿಷಯಗಳು ಯದ್ವಾತದ್ವವಾಗಿ "Chostic Material" ಗಳಂಪ ತೋರಿದ ಕಾರಣದಿಂದ ತಾನಾಗಿಯೇ ಆಧುನಿಕ ರೀತಿಯಲ್ಲಿ ವ್ಯಾಕರಣವನ್ನು ಬರೆಯಲು ತೊಡಗಿದನು. ಕ್ರಿ. ಶ. 1848 ರಲ್ಲಿ ಶಾಲಾಮಕ್ಕಳಿಗೆ ತಕ್ಕುದಾದ ಕನ್ನಡ ವ್ಯಾಕರಣವೊಂದನ್ನು ಬರೆದಿದ್ದನು. ಪುನಃ 1855 ರಲ್ಲಿ ಇನ್ನಷ್ಟು ಪರಿಷ್ಕೃತ ರೀತಿಯಲ್ಲಿ 128 ಪುಟಗಳ ಶಾಲಾವ್ಯಾಕರಣವೊಂದನ್ನು ಬರೆದನು. ಅದರ ನಂತರ Thomas Hudson ಇವನು 1859 ರಲ್ಲಿ ಬರೆದ ಕನ್ನಡ ವ್ಯಾಕರಣವು ಅವನ ಅಪಾರ ವಿದ್ವತ್ತನ್ನು ಪ್ರದರ್ಶಿಸಿತ್ತು. ಈ ಮಹಾಗ್ರಂಥದ ಎರಡನೇ ಮುದ್ರಣವು An Elementary Grammar of Kannada Language ಎಂಬುದಾಗಿ ಬೆಂಗಳೂರು ವೆಸ್ಲೀಯನ್ ಛಾಪಖಾನೆಯಲ್ಲಿ 1864 ರಲ್ಲಿ ಅಚ್ಚಾಗಿ ಹೊರಬಂತು.

Thomas Hudson ಇವನು ಹಿಂದಿನ ಪಾಶ್ಚಾತ್ಯ ವ್ಯಾಕರಣಗಾರರಂತೆ ಇಂಗ್ಲಿಷ್‌ನಲ್ಲಿಯೇ ಎಲ್ಲಾ ವಿವರಣೆಗಳನ್ನು ಕೊಟ್ಟಿದ್ದಾನೆ. ಉದಾಹರಣೆಗೆ ಅವನ ಪುಸ್ತಕದಿಂದ ಈ ಕೆಳಗಿನ ಭಾಗಗಳನ್ನು ಎತ್ತಿಕೊಡಲಾಗಿದೆ.

"Relative participles admit of a nominative case before them and perform the office of verb and relative pronoun to nouns and pronouns following them, as :

ಅವನು ಮಾಡಿದ ಕೆಲಸ—The work which he did.
ನಾವು ಬಂದ ದಾರಿ—The way by which we came.
ನೀನು ಹೋಗುವ ಊರು—The town to which you are going.

"The relative participles govern a preceding noun like a verb, as :

ಮನೆಯನ್ನು ಕಟ್ಟಿದ ಮನುಷ್ಯನು—The man who built the house.
ಕುರಿಗಳನ್ನು ಕಾಯುವ ಕುರುಬನು—The shepherd who tends sheep.

"When a word ending in ಅ, ಇ, ಈ, ಉ, or ಎ, is followed by an affix commencing with a vowel, euphony requires the following changes, viz :

"First, the terminating ಅ is cut off. Thus ಕುರುಬ and the plural affix ಅರು become ಕುರುಬರು shepherds. ಮಾಡುತ್ತ and ಏನೆ become ಮಾಡುತ್ತೇನೆ.

"Second, the terminating ಅ may either be cut off or ಯ್ may be inserted. Thus: ಮಾಡುತ್ತ and ಇದ್ದನು become ಮಾಡುತಿದ್ದನು or ಮಾಡುತ್ತಾಯಿದ್ದನು he was doing.

ಹೀಗೆ ಎಲ್ಲಾ ವಿವರಣೆಗಳು ಉಭಯ ಭಾಷಾ ವ್ಯಾಸಂಗಕ್ಕೆ ಅನುಕೂಲವಾಗುವಂತೆ ಪ್ರತಿಪಾದಿಸಲಾಗಿದೆ. ಯಾವ ಪುಟವನ್ನು ನೋಡಿದರೂ ಅವನ ನಿರೂಪಣೆಯು ಸ್ಪಷ್ಟವಾಗಿ ಹರಿದಂತೆ ಕಾಣುತ್ತದೆ.

"Affirmative Mood—Simple tenses:

Present Gerund ಕರೆಯುತಾ and peronal affixes: First person ಕರೆಯುತ್ತೇನೆ. Second person ಕರೆಯುತ್ತಿ. Third person ಕರೆಯುತ್ತಾನೆ, ತ್ತಾಳೆ, or ತ್ತದೆ.

Past tense—First person ಕರೆದೆನು. Second person ಕರೆದಿ, ಕರೆದೆ. Third person ಕರೆದನು, ಕರೆದಳು, ಕರೆಯಿತು.

Future tense—First person ಕರೆಯುವೆನು. Second person ಕರೆಯುವಿ, ಕರೆಯುವೆ. Third person ಕರೆಯುವನು, ವಳು, ವದು.

Rev. Thomas Hudson ಇವನು ಕ್ರಿ. ಶ. 1860 ರ ಕಾಲದಲ್ಲಿ ದಾಸರ ಹಾಡುಗಳಲ್ಲಿ ಹಲವನ್ನು ಸಂಗ್ರಹಿಸಿದಲ್ಲದೆ ಅವುಗಳಲ್ಲಿ ಕೆಲವನ್ನು ಇಂಗ್ಲಿಷ್‌ಗೂ ಭಾಷಾಂತರಿಸಿದ್ದಾನೆ. ಆದರೆ ಅವನ ಕೃತಿಗಳ ಪೈಕಿ ಮೇಲಿನ ಕನ್ನಡ ವ್ಯಾಕರಣವು ನಿಜಕ್ಕೂ ಪರಿಪುಷ್ಟವಾದ ಒಂದು ಗ್ರಂಥವಾಗಿದೆ.

**೭. ಕೇಪ್ಟನ್ ಬೆಸ್ಟ್ ಇವನ "ಪಾಯಮಾನಸಿಕ ಲೆಖ್ಖದ ವಿವರವು" :—**

ಇದೊಂದು ಸ್ವಾರಸ್ಯವಾದ ಮತ್ತು ತೀರಾ ಚಿಕ್ಕದಾದ ಶಾಸ್ತ್ರೀಯ ಪುಸ್ತಕವಾಗಿದೆ. 1857 ರಲ್ಲಿ (ಮಹಾ ದೊಡ್ಡದಂಗೆಯು ನಡೆದ ವರ್ಷದಲ್ಲಿ), Capt. Samuel Best ಇವನು "Method of Surveying" ಅಥವಾ "ಪಾಯಮಾನಸಿಕ ವ್ಯಾಯಮಾನ" ಎಂಬ ಪುಸ್ತಕವನ್ನು ಬರೆದಿದ್ದು ಮಂಗಳೂರು ಬಾಸೆಲ್ ಮಿಷನ್‌ನವರಿಂದ ಪ್ರಕಟವಾಯಿತು.* ಭೂಮಿಯ ಅಳತೆಯನ್ನು ಎಣಿಸುವ ಇಂಥಾ ಒಂದು ಶಾಸ್ತ್ರೀಯ ಗ್ರಂಥವು ಕನ್ನಡದಲ್ಲಿ ಅಂದು ಬರೆಯಲ್ಪಟ್ಟುದು ಆಶ್ಚರ್ಯಕರವಾದ ವಿಚಾರವಾಗಿದೆ. ಈ ಶಾಸ್ತ್ರದ ಗಣಸೀಯ ಪಟ್ಟಿಗಳೂ ಗಣಿತ ಶಾಸ್ತ್ರದ ವಿವರಣೆ ಸಮೇತವಾಗಿ ಇದರಲ್ಲಿ ಕೊಡಲ್ಪಟ್ಟಿವೆ. ಮೇಲ್ಪುಟದಲ್ಲಿ "ಕೇಪ್ಟನ್ ಬೆಸ್ಟ್ ಸಾಹೇಬರು ಮಾಡಿದ್ದು" ಎಂದು ಬರೆದಿದೆ. ಇದನ್ನು ಮುದ್ರಿಸಿದ ಕನ್ನಡ ಅಚ್ಚುಮೊಳೆಗಳು ಇತರ ಕನ್ನಡ ಪುಸ್ತಕಗಳಿಗೆ ಉಪಯೋಗಿಸಿದುದಕ್ಕಿಂತ ಎಷ್ಟೋ

---

* ಈ ಪುಸ್ತಕದ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಟ್ಟಿದೆ.

ಭಿನ್ನವಾಗಿದೆ. ಈ ಕೆಳಗಿನ ಅಂಶಗಳನ್ನು ಅದರಿಂದ ನಿದರ್ಶನಾರ್ಥವಾಗಿ ಕೊಡಲಾಗಿದೆ:—

"ಭೂಮಿಯ ಅಳತೆ ಯಾನೆ ಚಚೌಕ ಅಳತೆಯ ವಿವರವು.

ಚಚೌಕ ಇಂಚ್ 144 = 1 ಚಚೌಕ ಫೂಟ್.

1296 = 9 — ಚಚೌಕ ಗಜ.

9801 = $68\frac{1}{16}$ = $7\frac{9}{16}$ = 1 ಅಣೆ.

156816 = 1089 = 121 = 16 = 1 ಗುಂಟೆ.

6272640 = 43560 = 4840 = 640 = 40 = 1 ಯೇಕರೆ.

640 ಯೇಕರೆಗಳು ಅಂದರೆ 1 ಚಚೌಕ ಮೈಲ್."

ಹೀಗೆ ಕೆಲವು ಸೂತ್ರಗಳನ್ನು ಕೊಡುತ್ತಾ Capt. Samuel Best ಇವನು ತನ್ನ ವಿಷಯ ನಿರೂಪಣೆಯನ್ನು ಹೇಗೆ ಮಾಡುತಿದ್ದಾನೆಂಬುದಕ್ಕೆ ಈ ಕೆಳಗಿನ ಒಂದು ಭಾಗವನ್ನು ಆ ಪುಸ್ತಕದಿಂದ ಎತ್ತಿಕೊಡಲಾಗಿದೆ. ಪ್ರತಿಯೊಂದು ಅಂಶವ ಮೇಲೂ ತಕ್ಕ ರೇಖಾ ನಕ್ಷೆಯನ್ನು ಬಿಡಿಸಿ ವಿವರಿಸಿದ್ದಾನೆ:—

"ಯೇಕರೆ, ಗುಂಟೆ, ಆಣೆಗಳಾಗಿ ಅಳತೆ ಮಾಡುವ ಬಗ್ಯೆ 33 ಫೂಟ್ ಉದ್ದವಾಗಿರುವಂಥಾ 16ಗೊಣಸುಗಳಾಗಿ ವಿಭಾಗಿಸುವಂಥ ವೊಂದು ಸಂಕೋಲೆ ಬೇಕು. ಅದರ ವೊಂದೊಂದು ಗೊಣಸು ಸ್ವಲ್ಪ ಕಡಿಮೆ 24 III ಇಂಚ್ ಉದ್ದವಾಗಿರುವದು. ಈ ಸಂಕೋಲೆಯಿಂದ ಅಳತೆ ಮಾಡಿದ ಮೇಲೆ ಅಡ್ಡಗಲದ ಸಂಕೋಲೆಗಳ ಮತ್ತು ಗೊಣಸುಗಳ ಲೆಖ್ಖದಿಂದ ಗುಣಿಸಬೇಕು. ಈ ಪ್ರಕಾರ ಯೆಣಿಕೆ ಮಾಡುವಲ್ಲಿ ವೊಂದು ಗೊಣಸಿನಿಂದ ಗುಣಿಸಿದ ವೊಂದು ಸಂಕೋಲೆ ವೊಂದು ಆಣೆಯಾಗುವದೆಂದೂ, ವೊಂದು ಸಂಕೋಲೆಯಿಂದ ಗುಣಿಸಿದ ಸಂಕೋಲೆಯು ಗುಂಟೆಯಾಗುವದೆಂದೂ, ವೊಂದು ಗೊಣಸಿಂದ ಗುಣಿಸಿದ ಗೊಣಸು ಚಚೌಕ ಗೊಣಸಾಗುವದೆಂದೂ, ಹದಿನಾರು ಗೊಣಸುಗಳು ವೊಂದು ಆಣೆಯಾಗುವದೆಂದೂ 40 ಗುಂಟೆಗಳು ವೊಂದು ಯೇಕರೆಯಾಗುವದೆಂದೂ ತಿಳಿದು ಕೊಳ್ಳತಕ್ಕದ್ದು........"

ಇದೇ ರೀತಿ ಇನ್ನೂ ಹಲವು ಬಗೆಯಲ್ಲಿ ಭೂಮಿ ಅಳತೆಯ ಪಟ್ಟಿಯನ್ನು ತಯಾರಿಸಿ ಅವುಗಳನ್ನೆಲ್ಲಾ ರೇಖಾ ಚಿತ್ರಗಳ ಸಹಿತ ವಿವರಿಸಿ ಈ "ಪಾಯಮಾನಸಿಕ ಲೆಖ್ಖದ ವಿವರ" ವನ್ನು ಕೊಡಲಾಗಿದೆ. ವೃತ್ತಿಯಲ್ಲಿ ಒರ್ವ ಸೇನಾ ನಾಯಕನಾದ ಈ Capt. S. Best ಇವನು ಈ ಅಳತೆ ಪಾಯಮಾನ ಶಾಸ್ತ್ರದಲ್ಲಿ ಒರ್ವ ತಜ್ಞನೆಂಬುದನ್ನು ತನ್ನ ಈ ಕೃತಿಯಿಂದ ತೋರ್ಪಡಿಸಿದ್ದಾನೆ.

### ೮. ದಕ್ಷಿಣ ಭಾರತದ "ರೈಲ್‌ವೇ ಗೈಡ್" ಕನ್ನಡದಲ್ಲಿ ಪ್ರಕಟವಾಯಿತು:-*

ಬ್ರಿಟಿಷ್ ಸರಕಾರವು 1850 ರ ಕಾಲದಲ್ಲಿಯೇ ದೇಶದ ಉದ್ದಗಲಕ್ಕೂ ಹಲವು ರೈಲು ಮಾರ್ಗಗಳನ್ನು ಸಿದ್ಧಪಡಿಸಿದ್ದರು. ಇದೇನು ಉಗಿ, ಹೊಗೆಗಳನ್ನು ಕಾರುತ್ತಾ

* ಇದರ ಒಂದು ಪುಟದ ಚಿತ್ರವನ್ನೂ ಕೊಡಲಾಗಿದೆ.

ಓಡುವ ಭೂತಗಳೋ ಎಂದು ಅಂದಿನ ಜನರು ಭಾವಿಸಿದ್ದರೆ, ಅದರಲ್ಲಿ ಆಶ್ಚರ್ಯವೇನೂ ಇಲ್ಲ. ದಕ್ಷಿಣ ಹಿಂದೂಸ್ಥಾನದಲ್ಲಿ ಮದ್ರಾಸಿನಿಂದ ನಾಲ್ಕಾರು ದಾರಿಗಳಿಗಾಗಿ ರೈಲು ಮಾರ್ಗಗಳು ಹಾಕಲ್ಪಟ್ಟುವು. ದೇಶೀಯ ಭಾಷೆಗಳಲ್ಲೆಲ್ಲಾ ಜನರ ಪ್ರಯಾಣಕ್ಕನುವಾಗುವಂತೆ Railway Guide ಇವುಗಳನ್ನು ಬರೆಯಿಸಿ ಹಂಚಿದರು. ಕನ್ನಡದಲ್ಲಿ ಅಂಥಾ ಒಂದು ಪುಸ್ತಕವು 1856 ಮದರಾಸಿನಲ್ಲಿ ಮುದ್ರಣವಾಗಿ ಹಂಚಲಾಯಿತು. ಅದರ ಮೇಲ್ಪುಟದಲ್ಲಿ ಈ ರೀತಿ ಬರೆಯಲ್ಪಟ್ಟಿದೆ.

"ಇಂಡಿಯಾ ದೇಶದಲ್ಲಿ ರೈಲವೇಯನ್ನು ಕುರಿತು ಆಕಟ್ ಎಂಬ ಹೆಸರುಳ್ಳ 1854 ನೇ ಈಸವಿ ಆಗಸ್ಟ್ ೧೨ ನೇ ಮರುಕುಂ 1854 ನೇ ಈಸವಿ 18 ನೇ ನಂಬರು ನ್ಯಾಯವಿಧಾಯಕ ಸಭೆಯ ಆಕಟನ್ನೂ ಅನುಸರಿಸಿ ಸನ್ 1856 ನೇ ಈಸವಿ ಜೂನ್ ೧೨ ನೇ ಮರುಕಂ 180 ನೇ ನಂಬರು ಬಾಬತು ಯೆಕಸ್ಟ್ರಾಕಟ್ ಮಿ ನೀ ಟ ಸ್ ಆಫ್ ಕನ್‌ಸಲ್‌ಟೇಷನ್ ಎಂಬುವದರಲ್ಲಿ ಗವರನ್‌ಮೆಂಟಿನವರಿಂದ ಸ್ಯಾಂಕಷಾನ್ ಆಗಿದೆ.

"ಮದ್ರಾಸ್, 13 ನೇ ಜೂನ್ 1856. T. T. Pears,
Consulting Engineer for Railways."

ಈ ಹೊತ್ತಿಗೆಯಲ್ಲಿ ಮದ್ರಾಸಿನಿಂದ ಬೆಂಗಳೂರಿಗೆ, ಮದ್ರಾಸಿನಿಂದ ಮಲೆಯಾಳಕ್ಕೆ, ಮದ್ರಾಸಿನಿಂದ ಉತ್ತರದ ನಗರಗಳಿಗೆ ಹೋಗುವ ರೈಲುಗಳ ದಿನ, ಗಂಟೆ, ನಿಮಿಷ ಇತ್ಯಾದಿಗಳ ಸಕಲ ವಿವರಗಳನ್ನೂ ಸ್ಥಳದಿಂದ ಸ್ಥಳಕ್ಕೆ ಎಷ್ಟು ಮೈಲಿಗಳು, ಎಲ್ಲೆಲ್ಲಿ ಎಷ್ಟು ಸಮಯ ನಿಲ್ಲುವುದು, ಒಂದನೇ ತರಗತಿ, ೨ ನೇ, ಮತ್ತು ೩ ನೇ ತರಗತಿಗಳಿಗೆ ಎಷ್ಟೆಷ್ಟು ಪ್ರಯಾಣ ಶುಲ್ಕ ಇತ್ಯಾದಿಗಳನ್ನೆಲ್ಲಾ ಸ್ಪಷ್ಟವಾಗಿ ಕೊಟ್ಟಿದೆ. ಅದರಲ್ಲಿ ಒಂದು ರೈಲುಮಾರ್ಗದ ವಿವರಣೆ ಹೀಗೆ ಕೊಡಲ್ಪಟ್ಟಿದೆ:—

"ಮದ್ರಾಸಿನಿಂದ ನೈಋತ್ಯ ಭಾಗವಾಗಿ ಆರುಕೋಣ, ವೇಲೂರು, ಶಾಲ್ಯ, ಕೊಯಿಮುತ್ತೂರು, ಪಾಲಘಾಟ್, ಬೇಪೂರು—ಈ ಸ್ಥಳಗಳಿಗೆ ಹೋಗುವ ಭಂಡಿ. ಮದ್ರಾಸಿನಿಂದ ಮೈಲುಗಳು ; ಸ್ಟೇಷನ್‌ಗಳ ಹೆಸರುಗಳು ; ದಿವಸಗಳು ; ಹೊರಡುವ ಸಮಯ........ಇತ್ಯಾದಿ.

"ಸ್ಟೇಷನ್‌ಗಳು—ಮದ್ರಾಸ್ ; ಪೆರಂಬೂರು ; ಆವಡಿ, ತಿನ್ನನೂರು ; ತಿರವಳ್ಳೂರು, ಕಡುಂಬುತ್ತೂರು ; ಆರುಕೋಣ ; ರಡ್ಡಿಪಳ್ಳಿ. (ರಡ್ಡಿಪಳ್ಳಿಯಿಂದ ಪಶ್ಚಿಮಕ್ಕೆ ಹೊರಡುವದು) ಆರುಕೋಣ ; ಆರುಕಾಟು ; ತಿರುವೆಲಂ ; ವೆಲ್ಲೂರು ; ಗುಡಿಯಾತ ; ಆಂಬೂರು ; ವಾಣಂಬಾಡಿ ; ಜೋಲಾರಪೇಟೆ. (ಜೋಲಾರು ಪೇಟೆಯಿಂದ ಬೆಂಗಳೂರು ಸೇರುವದು.)."

ಈ 1856 ರ ಪ್ರಕಟಣೆಯನಂತರ ಇತರ ಕನ್ನಡ ರೈಲು "ಗೈಡ್" ಗಳು ಕಾಲದಿಂದ ಕಾಲಕ್ಕೆ ಹಲವು ಬಾರಿ ಪ್ರಕಟವಾಗುತ್ತಾ ಬಂದುವು. ಇವು ಅಂದಿನ ಜನಕ್ಕೆ ಈ ದೇಶದ ಉದ್ದಗಲ, ಹೊಸ ಸ್ಥಳಗಳ ಹೆಸರುಗಳು ಮತ್ತು ಅವುಗಳ ಪರಿಚಯ ; ಸ್ಥಳದಿಂದ ಸ್ಥಳಕ್ಕೆ ಪ್ರಯಾಣ ಮಾಡಬೇಕೆಂಬುವ ಕುತೂಹಲ ಇತ್ಯಾದಿಗಳನ್ನು ತಿಳಿಯಲು ಮತ್ತು ಅನುಸರಿಸಲು ಕೆರಳಿಸಿದುವು.

**೯. ಪೊಲೀಸ್ ಖಾನೂನುಗಳ ಕೈಪಿಡಿಯು ಕನ್ನಡದಲ್ಲಿ ಪ್ರಕಟವಾಯಿತು :—**

ಕ್ರಿ. ಶ. 18 ನೇ ಶತಮಾನದವರೆಗೂ ಪೂರ್ವಕಾಲದ ಸರಕಾರಗಳು ವಿಧಿಸುತ್ತಿದ್ದ ಖಾನೂನು ಕಾಯಿದೆಗಳೆಲ್ಲಾ ಹೆಚ್ಚಾಗಿ ಬಾಯಿಂದ ಬಾಯಿಗೆ ಎಂಬಂತೆ ಜನರೊಳಗೆ ಪ್ರಚಾರವಾಗುತ್ತಿದ್ದವು. ಎಲ್ಲಾ ಭಾಗದಲ್ಲೂ ನಿರ್ದಿಷ್ಟವಾಗಿ ಬರೆದಿಡಲ್ಪಟ್ಟ ಖಾನೂನುಗಳು ಅಂದಿನ ವಿವಿಧ ರಾಜರ ಮತ್ತು ನಾಯಕರ ಕಾಲದಲ್ಲಿ ತೀರಾ ಕಡಿಮೆಯಾಗಿದ್ದುವು. ರಾಜರು ನಿರಂಕುಶ ಅಧಿಕಾರಿಗಳಾಗಿ ಸಾರುತಿದ್ದ ಮಾತುಗಳೇ ಖಾನೂನುಗಳಾಗಿ ಅಲ್ಲಲ್ಲಿ ಪ್ರಚಾರವಾಗುತ್ತಿದ್ದುವು. ಆದರೆ ಬ್ರಿಟಿಷರು ಈ ದೇಶಕ್ಕೆ ಬಂದನಂತರ ಮತ್ತು ಮುದ್ರಣ ಸೌಕರ್ಯಗಳು ಹೆಚ್ಚಿದ ನಂತರ ಪ್ರತಿಯೊಂದು ಖಾನೂನು ಕಾಯಿದೆಯೂ ಕಾಗದದ ಮೇಲೆ ಕಾಣಿಸಿಕೊಂಡು ಜನರಿಗೆ ವಿಚಾರ ಜ್ಞಾನವನ್ನೀಯಲು ಸಹಾಯಕವಾಯಿತು.

ಸರಕಾರದ ಎಲ್ಲಾ ಪತ್ರಗಳೂ ಖಾನೂನುಗಳೂ ಪುಸ್ತಕಗಳ ರೂಪದಲ್ಲಿ ಹೊರಡಿಸಿದಾಗ ಪೊಲೀಸ್ ಇಲಾಖೆಗೆ ಸಂಬಂಧಪಟ್ಟ ಇಸ್ತಿಹಾರುನಾಮೆಗಳನ್ನು Guide to Police ಎಂಬುದಾಗಿ ಕನ್ನಡದಲ್ಲೂ 96 ಪುಟಗಳಷ್ಟು ಪುಸ್ತಕ ರೂಪದಲ್ಲಿ ಮುದ್ರಿಸಿ 1860 ರ ಕಾಲದಲ್ಲಿ ಹಂಚಿದರು. ಮಂಗಳೂರಿನಲ್ಲಿ ಪ್ರಕಟವಾದ "Policeman's Catechism" ಇದು ತಳುವಾರರಿಗೆ ತಮ್ಮ ಕರ್ತವ್ಯವೇನೆಂದು ತಿಳುಹಿಸಲು ಪ್ರಶ್ನೋತ್ತರ ರೂಪದಲ್ಲಿ ಬರೆಯಲ್ಪಟ್ಟದೆ. ಅದರಿಂದ ಒಂದು ಭಾಗವನ್ನು ಎತ್ತಿ ಇಲ್ಲಿ ಕೊಡಲಾಗಿದೆ—

> "ಪೊಲೀಸ್—ಸರಕಿಲಾರ ನಂಬ್ರ 38 ; —ತಾ॥ 12 ನೇ ದಶಂಬರ 1860ನೇ ಇಸವಿ—"ಯೆಲ್ಲಾ ಪೋಲಿಸ್ ಜನರು ಅಂದರೆ ಜನರಾಲ್ ಮತ್ತು ಗ್ರಾಮು ಪೋಲಿಸ್‌ನವರು ಸಹಾ ಸುಪರಿಂಟೆಂಡೆಂಟ ಸಾಹೇಬರ ಯಾ ಜನರಾಲ್ ಪೋಲಿಸ್ ಇನ್ಸ್‌ಪೆಕ್ಟರ ಅಪ್ಪಣೆಗಳ ಹೊರ್ತು ಆಯುಧಗಳನ್ನು ಹಿಡಕೊಳ್ಳುವ ಜನರ ತಂಟೆಗೆ ಹೋಗಲಿಕ್ಕೂ ಅಥವಾ ಅವರಿಂದ ಅವುಗಳನ್ನು ತೆಗೆದುಕೊಳ್ಳಲಿಕ್ಕೆ ಪ್ರಯತ್ನ ಮಾಡಕೂಡದ್ದಾಗಿ ಅವರು ಅಪ್ಪಣೆ ಪಡಕೊಂಡಿರುತ್ತಾರೆಂಬ-ತಾರೀಕು ಸದರ್...."

ಇದೇ ರೀತಿ ಮತ್ತೊಂದು ಪೊಲೀಸ್ ಖಾನೂನು ಪುಸ್ತಕವೂ 1863 ರಲ್ಲಿ ಪ್ರಕಟವಾಯಿತು. ಅದರಲ್ಲಿ ಹೀಗೆ ಬರೆಯಲ್ಪಟ್ಟದೆ—

> "ಪೊಲೀಸ್ ಸ್ಟೇಶನ್ ಹೌಸ್ ಆಫೀಸರರ ಪ್ರಯೋಜನಾರ್ಥವಾದ 1859 ನೇ ಇಸವಿ ನಂಬ್ರ ೨೪ ನೇ ಆಕ್ಟಿನ ಮತ್ತು 1862 ನೇ ಇಸವಿ ನಂಬ್ರ ೨೫ ನೇ ಆಕ್ಟಿನ ನಿಘಂಟು ಪ್ರಕಾರ ಅನುಕ್ರಮಣಿಕೆಯ ಸಹಿತವಾದ ಸಾರಾಂಶ.... (1863)"

ಈ ಎರಡನೇ ಪುಸ್ತಕವು 150 ಪುಟಗಳಷ್ಟು ದೊಡ್ಡದಿದೆ. ಇಂಥಾ ಪ್ರಕಟಣೆಗಳೆಲ್ಲವೂ ಅಂದಿನ ಜನಕ್ಕೆ ಖಾನೂನು ಕಾಯಿದೆಗಳೆಂದರೇನು, ಸರಕಾರವೆಂದರೇನು, ಎಂದಿತ್ಯಾದಿ ವಿಷಯಗಳನ್ನು ತಿಳಿಸಲು ತುಂಬಾ ಸಹಾಯಕವಾಗಿದ್ದುವು.

**೧೦. ವೃತ್ತಾಂತ ಪತ್ರಿಕೆಗಳು ಮತ್ತು ಖಾನೂನು ಜಾಹೀರಾತುಗಳು :—**

ಕ್ರಿ. ಶ. 1856 ರಿಂದ ಕನ್ನಡದಲ್ಲಿ ನ್ಯಾಯವಾದ ವಾರ್ತಾಪತ್ರಿಕೆಗಳು ಒಂದರ ನಂತರ ಒಂದಾಗಿ ತೋರಿ ಬಂದುವು. ಅವುಗಳ ಪೈಕಿ ಬೆಂಗಳೂರಿನಿಂದ ಹೊರಡುತಿದ್ದ "ಮೈಸೂರ ವೃತ್ತಾಂತ ಬೋಧಿನಿ" ಮತ್ತು ಮೈಸೂರಿನಿಂದ ಇಂಗ್ಲಿಷನಲ್ಲೂ ಕನ್ನಡದಲ್ಲೂ ಪ್ರಕಟವಾಗುತ್ತಿದ್ದ "Recorder" ಈ ಪತ್ರಿಕೆಗಳು ಹಿರಿದಾಗಿದ್ದುವು. "ವೃತ್ತಾಂತ ಬೋಧಿನಿ"ಯ ಚಂದಾದಾರರಿಗೆ ಹೀಗೆ ಶರತ್ತುಗಳನ್ನು ಪ್ರಕಟಿಸಿದ್ದನ್ನು ಪುನಃ ಇಲ್ಲಿ ಕೊಡಲಾಗಿದೆ—

"ವರುಷ ಒಂದಕ್ಕೆ ಮೂರು ರೂಪಾಯಿಗಳು ಮುಂಗಡವಾಗಿ ಕೊಡತಕ್ಕದ್ದು. ಕೆಲವು ತಿಂಗಳು ಮಾತ್ರವಾಗಲಿ, ಅಥವಾ ಒಂದು ಪತ್ರಿಕೆಯನ್ನು ಮಾತ್ರವಾಗಲಿ ತೆಗೆದುಕೊಳ್ಳುವರು ಪತ್ರಿಕೆ ೧ ಕ್ಕೆ ೨ ಆಣೆಗಳ ಮೇರೆ ಕೊಡಬೇಕು.

"ಚಂದಾದಾರರಿಗೆ ಸುಲಭವಾಗುವದಕ್ಕಾಗಿ, ಕಮಿಷನರು ಸಾಹೇಬ್ ಬಹದೂರವರು ೧ ವರುಷದವರಿಗೂ ಈ ಮೈಸೂರು ಸೀಮೆಯಲಿ ಯಾವ ಸ್ಥಳಕ್ಕೆ ಈ ಪತ್ರಿಕೆಯನ್ನು ಕಳುಹಿಸಿದಾಗ್ಯೂ ಟಪಾಲು ಹಾಸಲು ಮಾಫಿ ಮಾಡಿ ಇದ್ದಾರೆ."

ಈ "ಮೈಸೂರ ವೃತ್ತಾಂತ ಬೋಧಿನಿ" ಪತ್ರಿಕೆಯು ದೊಡ್ಡ folio ಪುಟಗಳ ಆಕಾರದಲ್ಲಿ 12 ಪುಟದಿಂದ 16 ಪುಟಗಳಲ್ಲಿ ಪ್ರತಿ ಶನಿವಾರ ದಿನ ಹೊರಡುತಿತ್ತು. ಬೆಂಗಳೂರು ವೆಸ್ಲೀನ್ ಛಾಪಖಾನೆಯಲ್ಲಿ ಮುದ್ರಣವಾಗುತಿದ್ದ ಈ ಪತ್ರಿಕೆಯ ಮೊದಲ ಪುಟದಲ್ಲಿ ಹೀಗೆ ಬರೆದಿರುತಿತ್ತು—

"ಈ ಪತ್ರಿಕೆಯು ಆಳಿದ ಮಹಾಸ್ವಾಮಿಗಳಾದ ಮಹಾರಾಜ ಶ್ರೀ ಕೃಷ್ಣರಾಜ ವಡೆಯರವರ ಪೋಷಣೆಯಿಂದ ನಿರ್ಮಿಸಲ್ಪಟ್ಟು ಪ್ರತಿ ಶನಿವಾರ ಪ್ರಕಟಿಸಲ್ಪಡುತ್ತದೆ."

ಇದರಲ್ಲಿ ಇಂಗ್ಲಿಷ್ ಮತ್ತು ಕನ್ನಡ ಜಾಹೀರಾತುಗಳೂ, ಹವಾಮಾನ ವಾರ್ತೆ, ಸಾಮಾನುಗಳ ಬೆಲೆ ಇತ್ಯಾದಿಯಾಗಿ ಕೊಡಲ್ಪಟ್ಟಿದ್ದುವು. ವೆಸ್ಲೀ ಮುದ್ರಣಾಲಯದವರ ಜಾಹೀರಾತು ಒಂದು ಹೀಗಿತ್ತು—

"ಛಾಪಖಾನೆ ಪ್ರಕಟಣೆ—ಯಾವ ಬಗೆಯಾದ ಕಾಗದಗಳು ಛಾಪಿಸಲ್ಪಡಬೇಕಾಗಿದ್ದರೂ ನಮ್ಮ ಛಾಪಖಾನೆಯಲ್ಲಿ ಸುಲಭವಾಗಿಯೂ ಚೆನ್ನಾಗಿಯೂ ಛಾಪಿಸಲ್ಪಡುತ್ತದೆ. ಆದ್ದರಿಂದ ಪ್ರಕೃತ ಕನ್ನಡ ಇಂಗ್ಲಿಷ್ ಯಿ ಎರಡು ಭಾಷೆಗಳೊಳಗೆ ಯಾವ ಬಗೆಯಾದ ವಿಷಯಗಳನ್ನು ಛಾಪಿಸಬೇಕಾಗಿದ್ದಾಗ್ಯೂ ಖಾಯಿಷ್ ಪಡತಕ್ಕವರು ನಂಮ ಬಳಿಗೆ ಬಂದಲ್ಲಿ ಅವರ ಕೆಲಸ ನಿರ್ವಹಿಸಲ್ಪಟ್ಟೀತು."

ಈ ಪತ್ರಿಕೆಯು ಹೇಗೋ ಹಾಗೆಯೇ ಮೈಸೂರಿನ "Recorder" ಪತ್ರಿಕೆಯೂ ಉಚ್ಚ ಮಟ್ಟದಲಿದ್ದು ಅದನ್ನೂ ಐರೋಪ್ಯಾ ವಿದ್ವಾಂಸರೇ ನಡೆಸಿದ್ದರು. ಸರಕಾರದ ಇಶ್ತಿಹಾರು ನಾಮೆಗಳು, ಜಾಹೀರಾತುಗಳು, ಮತ್ತು ವಾರ್ತೆಗಳು ಅವುಗಳಲ್ಲಿ ತುಂಬಿ

ರುತ್ತಿದ್ದವು. ಚಂದಾದಾರರ ಪೈಕಿ ವಿದೇಶೀಯರೆ ಸುಮಾರು 1870 ರ ವರೆಗೂ ದೇಶೀಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದರು.

## ೧೧. "ಕರ್ಣಾಟಕ ಪ್ರಕಾಶಿಕಾ," "ನ್ಯಾಯ ಸಂಗ್ರಹ" ಇತ್ಯಾದಿ ಪ್ರಕಟಣೆಗಳು :—

"ಕರ್ಣಾಟಕ ಪ್ರಕಾಶಿಕಾ" ಎಂಬ ಮತ್ತೊಂದು ಪ್ರಸಿದ್ಧ ವಾರ ಪತ್ರಿಕೆಯು ಪ್ರಾರಂಭದಲ್ಲಿ ವಿದೇಶೀಯರಿಂದ ನಡೆಸಲ್ಪಡುತ್ತಿದ್ದು ಅನಂತರ 1865 ರಿಂದ ದೇಶೀಯರ ಸಂಪಾದಕತ್ವದಲ್ಲಿ ಪ್ರಕಟವಾಗಲಾರಂಭವಾಯಿತು. ಆಗ ವಾರ್ತೆಗಳ ಸಂಚಾಲನಕ್ಕೆ ಹೆಚ್ಚು ಅನುಕೂಲತೆಯಿದ್ದಿಲ್ಲವಾದರೂ ಅಂದಿನ ಹಲವು ಇಂಗ್ಲಿಷ್ ಪತ್ರಿಕೆಗಳಿಂದ ಮತ್ತು ಇತರ ಕನ್ನಡ ಪತ್ರಿಕೆಗಳಿಂದ ವಾರ್ತೆಗಳನ್ನು ಸಂಗ್ರಹಿಸಿ ಅದರಲ್ಲಿ ಕೊಡಲಾಗಿತ್ತು. 1870 ರ ಕಾಲಕ್ಕೆ "ಕರ್ಣಾಟಕ ಪ್ರಕಾಶಿಕಾ" ಪತ್ರಿಕೆಯು ನಾಡಿನಲ್ಲಿ ಪ್ರಮುಖವಾದ ವಾರ್ತಾ ಪತ್ರಿಕೆಯಾಗಿ ವಿಶೇಷ ಪ್ರಚಾರವಾಯಿತು.

ಇದೇ ಕಾಲಕ್ಕೆ ಮಂಗಳೂರು, ಬಳ್ಳಾರಿ, ಧಾರವಾಡ ಮತ್ತು ಮೈಸೂರು ಕೇಂದ್ರಗಳಿಂದ ಚಿಕ್ಕ ಪತ್ರಿಕೆಗಳು ಹೊರಡಲಾರಂಭವಾದುವು. ಮಂಗಳೂರಿನ "Canarese Informer" ಅಥವಾ "ಮಂಗಳೂರು ಸಮಾಚಾರ" ಬಾಸೆಲ್ ಮಿಷನ್‌ನವರಿಂದಲೇ ಮುದ್ರಣವಾಗಿ ಪ್ರಚಾರವಾಗುತ್ತಿತ್ತು. 1863 ರ ಈ ಪತ್ರಿಕೆಯೊಂದರಲ್ಲಿ ಹೀಗೆ ಒಂದು ವಾರ್ತೆ ಕೊಡಲ್ಪಟ್ಟಿತ್ತು—

> "ಕೊಡಗದಲ್ಲಿ ಒಂದು ವಿದ್ಯಾಶಾಲೆಯನ್ನು ಸ್ಥಾಪಿಸುವದಕ್ಕಾಗಿ ಜನರು ಹಣ ಕೂಡಿ ಇನ್ನೂ ಹೆಚ್ಚು ಸಹಾಯ ಸಿಕ್ಕುವ ಹಾಗೆ ಗೌರ್ನಮೆಂಟಿನವರಿಗೆ ಒಂದು ಅರ್ಜಿಯನ್ನು ಬರೆದುಕೊಂಡಿದ್ದಾರೆಂಬ ವಿಷಯವು ಮೈಸೂರಿನ 'ರಿಕಾರ್ಡರ್' ಪತ್ರಿಕೆಯಿಂದ ತಿಳಿದು ಬರುತ್ತದೆ."

ಅದೇ ಪತ್ರಿಕೆಯಲ್ಲಿ 1863 ರಲ್ಲಿ ಸ್ಥಾಪಿತವಾದ ಮದ್ರಾಸು ವಿಶ್ವವಿದ್ಯಾಲಯದಲ್ಲಿ 1857 ರಲ್ಲಿ ಬಿ.ಎ.. ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗಳ ಪೈಕಿ ಎಂಟು ಮಂದಿ ತೇರ್ಗಡೆಯಾಗಿರುವರೆಂಬ ವಾರ್ತೆಯೂ ಇತ್ತು. 1863 ರಲ್ಲಿ ಎಂಟು ಮಂದಿ ಮಾತ್ರ ತೇರ್ಗಡೆಯಾದರೆ ಆ ಸಂಖ್ಯೆಯನ್ನು 1963 ಕ್ಕೆ ನೂರು ವರ್ಷಗಳ ನಂತರದ ಸಂಖ್ಯೆಗೆ ಹೋಲಿಸಿದರೆ ಅದೆಷ್ಟು ಸಾವಿರ ವಿದ್ಯಾರ್ಥಿಗಳೆಂದು ತಿಳಿಯುವುದು ಸ್ವಾರಸ್ಯವಿದೆ.

ಮಂಗಳೂರಿನಿಂದ "ನ್ಯಾಯ ಸಂಗ್ರಹ" ಅಥವಾ "A Selection of Law Matters" ಎಂಬ ಪಕ್ಷ ಪತ್ರಿಕೆಯು ಹತ್ತಾರು demy ಪುಟಗಳ ಆಕಾರದಲ್ಲಿ 1868 ರಿಂದ ಹೊರಡಲು ಆರಂಭವಾಯಿತು. ಇದರಲ್ಲಿ ಕೋರ್ಟು ಖಚೇರಿಗಳಲ್ಲಿ ಜಾರಿಗೆ ಬಂದ ಖಾನೂನುಗಳು, ಸರಕಾರದಿಂದ ಹೊರಡಿಸಿದ ಖಾನೂನುಗಳು ಇತ್ಯಾದಿಯಾಗಿ ಸಂಗ್ರಹವಾಗಿ ಅಡಕವಾಗಿರುತ್ತಿದ್ದುವು. ಹೆಚ್ಚಾಗಿ ಇಂಗ್ಲಿಷ್ ಶಬ್ದಗಳೇ ಕನ್ನಡದಲ್ಲಿ ಬರೆಯಲ್ಪಡುತ್ತಿದ್ದ ಈ ಪತ್ರಿಕೆಯಿಂದ ಈ ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ*—

* ಈ ಪತ್ರಿಕೆಯ ಮೊದಲ ಪುಟದ ಚಿತ್ರವನ್ನು ಕೊಡಲಾಗಿದೆ.

"ಸನ್ 1861 ನೇ ಇಸವಿ 43 ನೇ ಮೊಕದ್ದಮೆಯಲ್ಲಿ ಪಾರ್ಶೀಪೂರ 1 ನೇ ಕ್ಲಾಸ್ ಸಬ್ ಮೆಜಿಸ್ಟ್ರೇಟ್ ನಡಿಸಿದ ಪ್ರೊಸಿಡಿಂಗ್, ಕಾನೂನಿಗೆ ವಿರೋಧವಾದ್ದೆಂತ ಕ್ರಿಮಿನಲ್ ಪ್ರೊಸಿಡ್ಯೂರ್ ಕೋಡಿನ 434 ನೇ ಪ್ರಕರಣ ಪ್ರಕಾರ ವಿಚಾರಿಸಿದ್ದು ಮೆಜಿಸ್ಟ್ರೇಟರು ಹೈಕೋರ್ಟಿಗೆ ರಿಫರ್ ಮಾಡಿ ಬರೆದ ಕಳೆದ ಎಪ್ರಿಲ್ 1 ನೇ ತಾರೀಖಿನ ಕಾಗದ 2 ನೇ ಓದಲಾಯಿತು....ಇಂಡಿಯನ್ ಪಿನಲ್ ಕೋಡಿನ 269 ನೇ ಪ್ರಕರಣದ ತಕ್ಸೀರು ಈ ಮೊಕದ್ದಮೆ ಸ್ಥಾಪಿಸಿದ್ದು ತಪ್ಪು ಎಂತ ಹೈಕೋರ್ಟಿನವರಿಗೆ ಕಂಡುಬರುತ್ತದೆ...."

೧೩. "ಬೆಳಗಾವಿ ಸಮಾಚಾರ"ದಿಂದ ಕೆಲವು ಜಾಹೀರಾತುಗಳು :—

ಕ್ರಿ. ಶ. 1869 ರಿಂದ 1871 ರ ವರೆಗೆ ಬೆ ಳ ಗಾ ವಿ ಯ ಲ್ಲಿ "School Paper" ಅಥವಾ "ಶಾಲಾ ಪತ್ರಿಕೆ"ಯೆಂಬುದು 32 demy ಪುಟಗಳಲ್ಲಿ ಪ್ರತಿ ತಿಂಗಳೂ ಹೊರಡುತಿತ್ತು. ಅದು ದೇಶೀಯ ಅಧ್ಯಾಪಕರ ಸಂಪಾದಕತ್ವದಲ್ಲಿ ಉತ್ತಮವಾದ ಸಾಹಿತ್ಯ ಲೇಖನಗಳಿಂದ ತುಂಬಿದ್ದು ಜನಪ್ರಿಯವಾದ ಪತ್ರಿಕೆಯಾಗಿತ್ತು. ಅದೇ ವೇಳೆಗೆ "ಬೆಳಗಾವಿ ಸಮಾಚಾರ" ಎಂಬುದಾಗಿ ಒಂದು ಪತ್ರಿಕೆಯು ಹೊರಟಿತ್ತು. ಮುಂಬಾಯಿ ಸರಕಾರದ ವಿದ್ಯಾಖಾತೆಯು ಈ ಪತ್ರಿಕೆಯನ್ನು ಪ್ರೋತ್ಸಾಹಿಸಿತ್ತು; ಅಲ್ಲದೆ ಸ್ಥಳೀಯ ಐರೋಪ್ಯ ವಿದ್ವಾಂಸರೇ ಅದರ ಮೇಲ್ವಿಚಾರಕರಾಗಿದ್ದರು. ಅವುಗಳಲ್ಲಿ ಕೊಡಲ್ಪಟ್ಟ ಕೆಲವು ಸ ರ ಕಾ ರೀ ಜಾಹೀರಾತುಗಳು ಐತಿಹಾಸಿಕವಾಗಿ ಇಂದಿಗೂ ಹಲವು ಸ್ವಾರಸ್ಯ ವಿಚಾರಗಳನ್ನು ತಿಳಿಸುವಂತಿವೆ—

"ನೋಟಿಸು—ಧಾರವಾಡ ಜಿಲ್ಲೆಯೊಳಗಿನ ಯಾವತ್ತು ಸ್ಕೂಲ ಮಾಸ್ತರರಿಗೆ ತಿಳಿಸುವುದೇನೆಂದರೆ—ಬರುವ ಡಿಸೆಂಬರ್ ತಿಂಗಳಲ್ಲಿ ಖಾನೇಸುಮಾರಿಯಾಗುವದಿದೆ. ಆಗ ನೀವೆಲ್ಲರು ನಿಮ್ಮ ನಿಮ್ಮ ತಾಲ್ಲೂಕಿನ ಮಾಮಲೇದಾರರು ನಿಮಗೆ ಹುಕುಮು ಮಾಡುವಂತೆ ನಡೆಕೊಳ್ಳಬೇಕು ಮತ್ತು ಅವರಿಗೆ ನಿಮ್ಮಿಂದಾದಷ್ಟು ಆ ಕೆಲಸದಲ್ಲಿ ನೀವು ಸಹಾಯ ಮಾಡಬೇಕು. ಈ ಖಾನೇಸುಮಾರಿ ಬಹಳ ಮಾಡಿ ತಾರೀಖು 13 ನೇ ಡಿಸೆಂಬರ (1871) ದಿಂದ ತಾರೀಖು 17 ಅಥವಾ 18 ನೇ ಡಿಸೆಂಬರ ತನಕ ೫ ದಿವಸದ ತನಕ ಆಗುವದು. (ಸಹಿ) ಡಿಪ್ಯೂಟಿ ಇಜ್ಯುಕೇಶನಲ್ ಇನ್ಸ್ಪೆಕ್ಟರ: ಧಾರವಾಡ."

ಅದರ ಇನ್ನೊಂದು ಸಂಚಿಕೆಯಲ್ಲಿ ಈ ರೀತಿಯಾಗಿ ಇನ್ನೊಂದು ಪ್ರಕಟಣೆ ಇದ್ದಿತು—

"ನೋಟೀಸು—ದಕ್ಷಿಣ ಭಾಗದೊಳಗಿನ ಯಾವತ್ತು ಮಾಸ್ತರ ಜನರಿಗೆ ತಿಳಿಸುವದೇನೆಂದರೆ--ಯಾವ ಮಾಸ್ತರರಾದರೂ ತಮ್ಮ ವರಿಷ್ಠ ಅಧಿಕಾರಿಯ ಅಪ್ಪಣೆಯನ್ನು ತೆಗೆದುಕೊಳ್ಳದೆ ಶಾಲೆಯನ್ನು ಬಿಟ್ಟು ಹೋಗಬಾರದು. ಬಹು ಅವಶ್ಯ ಕೆಲಸ ಬಂದರೆ ಸಮೀಪದ ಆಪ್ತ ಮುಂತಾದವರು ಸತ್ತಿದ್ದರೆ ಡಿಪ್ಯೂಟಿ ಇನ್ಸ್ಪೆಕ್ಟರರಿಗೆ ಜಾಹಿರ ಆಗುವಂತೆ ರಿಪೋರ್ಟ ಮಾಡದ ಹೊರತು ಹೋಗ ಕೂಡದು...."

ಮುಂದುವರಿಯುತ್ತಾ ಇನ್ನೊಂದು ಪ್ರಕಟಣೆಯಲ್ಲಿ ಈ ಒಂದು ವಿಷಯವನ್ನು ಹೇಳ

ಲಾಗಿದೆ.—

"ನೋಟೀಸು—ಸೆಕಂಡ ಗ್ರೇಡ Anglo-Vernacular ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಸುತಿದ್ದ ಯಾವತ್ತು ಮಾಸ್ತರರೂ ಶಿಕ್ಷಕರೂ ನಮ್ಮ ನೆವುಕ್ಷ ಪರೀಕ್ಷೆಯ ಕೊಟ್ಟು ತಮ್ಮ ಕೆಲಸದ ಲಾಯಖೀ ಬಗ್ಗೆ ಸರಟಿಫಿಕೇಟುಗಳಿಲ್ಲದವರು ಅವಕಾಶ ಮಾಡದೆ ನಮಗೆ ಅರ್ಜಿಗಳನ್ನೂ ಕಳುಹಿಸ ತಕ್ಕದ್ದು........"

ಸಹಿ—W. A. Russell. ಡೆಪ್ಯುಟಿ ಇನ್ಸ್ಪೆಕ್ಟರರು.

ಈ ಎಲ್ಲಾ ಜಾಹೀರುನಾಮೆಗಳಲ್ಲಿ ಇಂಗ್ಲಿಷ್ ಶಬ್ದಗಳನ್ನು ತುಂಬಿದ್ದು ನೋಡುವಾಗ ಆ ಕಾಲದಲ್ಲಿ ಹೊಸ ಸನ್ನಿವೇಶಕ್ಕೆ ಬೇಕಾಗುವಂತೆ ಆಯಾ ಇಂಗ್ಲಿಷ್ ಶಬ್ದಗಳಿಗೆ ತಕ್ಕ ಕನ್ನಡ ಶಬ್ದಗಳು ಪ್ರಚಾರದಲ್ಲಿಲ್ಲದಿದ್ದುದೇ ಕಾರಣವೆಂದು ಹೇಳಬಹುದು. ಅವುಗಳಿಗೆಲ್ಲಾ ಯೋಗ್ಯ, ಕನ್ನಡ ಶಬ್ದಗಳನ್ನು ಕೇವಲ ಇತ್ತೀಚೆಗೆ ಪ್ರಯಾಸಪಟ್ಟು ಬಳಸಲುಪಕ್ರಮಿಸಿದೆಂದು ತಿಳಿಯಬಹುದಾಗಿದೆ.

## ೧೩. ಮಂಗಳೂರಿನ "ಸುಬೋಧಿನಿ" ಮತ್ತಿತರ ಪತ್ರಿಕೆಗಳು :—

ಕ್ರಿ. ಶ. 1868 ರಿಂದ 1871ರ ವರೆಗೆ ಮಂಗಳೂರಿನಲ್ಲಿ Casper Stalz ಇವನು "Periodical Publications" ಎಂಬುದಾಗಿ ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ವಾರ್ತಾಪತ್ರಿಕೆಗಳನ್ನು ನಡೆಸಿದನು. ಇದಕ್ಕೂ ಚಂದಾದಾರರು ಹೆಚ್ಚಾಗಿ ಆಂಗ್ಲೇಯರೇ ಇರುತಿದ್ದರು. ಅದೇ ವೇಳೆಗೆ ಅಲ್ಲಿ W. Barrow ಇವನು "Mangalore Month" ಎಂಬುದಾಗಿ ಒಂದು ಮಾಸ ಪತ್ರಿಕೆಯನ್ನೂ ನಡೆಸುತಿದ್ದನು. ಇದರಲ್ಲಿ ಹೆಚ್ಚಾಗಿ ವಿದ್ಯಾಭ್ಯಾಸಕ್ಕೆ ಸಂಬಂಧವಾದ ಲೇಖನಗಳು ಇರುತಿದ್ದುವು. ಈ ಪತ್ರಿಕೆಯು ಅನಂತರ Madras Educational Record ಎಂಬುದಾಗಿ ಮಾರ್ಪಟ್ಟು ಹಲವು ವರ್ಷಗಳ ವರೆಗೂ ಮುಂದುವರಿಯಿತು.

1871 ರಲ್ಲಿ ಮಂಗಳೂರಿನಿಂದ "ಸುಬೋಧಿನಿ" ಎಂಬ ಪಕ್ಷ ಪತ್ರಿಕೆಯೊಂದು ಹೊರಟಿತು. ಇದರ ಚಂದಾದಾರರು ಹೆಚ್ಚಾಗಿ ಆಂಗ್ಲೇಯರೇ ಇದ್ದರು. ಎಲ್. ರಾಮರಾವ್ ಎಂಬ ದೇಶೀಯನು ಇದರ ಸಂಪಾದಕನಾಗಿದ್ದನು. ಇದರಲ್ಲಿ ಹಲವು ಸ್ವಾರಸ್ಯವಾದ ವಾರ್ತೆಗಳೂ ಜಾಹೀರಾತುಗಳೂ ಲೇಖನಗಳೂ ಪ್ರಕಟವಾಗುತಿದ್ದುವು. ಇದರಲ್ಲಿ ಆಗ ಪ್ರಕಟವಾದ ಒಂದೆರಡು ವಾರ್ತೆಗಳನ್ನು ಅಂದಿನ ಭಾಷಾ ಶೈಲಿಗೂ ವಿಷಯ ಪ್ರತಿಪಾದನೆಯ ರೀತಿಗೂ ನಿದರ್ಶನವಾಗಿ ಇಲ್ಲಿ ಕೊಡಲಾಗಿದೆ.—

"ಕಳೆದ 1869–70 ನೇ ಇಸವಿಯ ಮೈಸೂರು ಸಂಸ್ಥಾನದ ಕಂದಾಯವು ಸುಮಾರು 92¾ ಲಕ್ಷ ರೂಪಾಯಿಗಳಷ್ಟು ಆಗಿತ್ತು. ಇದರಲ್ಲಿ ಶೇಕಡಾ 66 ರೂಪಾಯಿ ಭೂಮಿಗಳ ಕಂದಾಯವಾಗಿರುತ್ತದೆ. ತೆರಿಗೆ ಹೊರಿಸಿದವರು ಮಾಜಿ ಅರಸರ ದಿವಾನರಾದ ಪೂರ್ಣಯ್ಯನವರಾಗಿರುತ್ತಾರೆ. ಈಗ 1831–32ನೇ ಇಸವಿಯಿಂದ ಅಂದರೆ ಆ ಸಂಸ್ಥಾನದ ಪೂರಾ ಆಡಳಿತೆಯನ್ನು ನಮ್ಮ

ಸರ್ಕಾರದವರು ವಹಿಸಿಕೊಂಡಂದಿನಿಂದ ಕಂದಾಯವು ದುಬಾರಿ ಏರಿರುತ್ತದೆ. ಹಾಗೆಯೇ ಜನಸಂಖ್ಯೆಯು ಇನ್ನಷ್ಟು ದೊಡ್ಡದಾಗುತ್ತಾ ಬಂದಿರುತ್ತದೆ ....”

ಕ್ರಿ.ಶ. 1872ರ ‘ಸುಬೋಧಿನಿ’ ಪತ್ರಿಕೆಯಿಂದ ಹೀಗೊಂದು ವಾರ್ತೆಯನ್ನು ಎತ್ತಿ ಇಲ್ಲಿ ಕೊಡಲಾಗಿದೆ.

“ಶ್ರೀರಂಗಪಟ್ಟಣ ಕೋಟೆಯ ರಾಜದ್ವಾರದ ಸಮೀಪ ಮಹಜೀದಿಯ ಹತ್ತಿರವಿರುವ ಪೌಲಕಸನ್ ದಾಸದೌಲ ಎಂಬವರ ಮನೆಯಿಂದ ೬ ಲಕ್ಷ ಮೊಬಲಗಿನ ಮೊಹೊರು ಮಾಡಿಟ್ಟ ೨೦ ರೂ ೨೫ ಪೆಟ್ಟಿಗೆಗಳು ಚೋರಿಯಾಗಿ ಹೋದುವು. ಅಷ್ಟಗ್ರಾಮ ಸುಪರಿಂಟೆಂಡೆಂಟರು ಕೋರ್ಟಿನಲ್ಲಿ ಈ ದೌಲನ ನ್ಯಾಯವಾದ ಹಕ್ಕುದಾರನು ಏಳು ಲಕ್ಷ ರೂಪಾಯಿ ಬರುವದಕ್ಕೆ ವ್ಯಾಜ್ಯ ತಂದಿದ್ದಾನೆ........”

ಕ್ರಿ.ಶ. 1872 ರಿಂದ ಕೆಲವು ಕ್ರೈಸ್ತ ಪತ್ರಿಕೆಗಳಲ್ಲದೆ ಇತರ ಎಲ್ಲಾ ಕನ್ನಡ ಪತ್ರಿಕೆಗಳ ಸಂಪಾದಕರು ದೇಶೀಯರೇ ಆದರು. ಆದರೆ Recorder, Bangalore Times ಇತ್ಯಾದಿ ಇಂಗ್ಲಿಷ್ ಪತ್ರಿಕೆಗಳನ್ನು ಆಂಗ್ಲೇಯ ಸಂಪಾದಕರೇ ನಡೆಸುತಿದ್ದರು.

**೧೪. ಜಾನ್ ಮ್ಯಾಕ್ ಇವನ ಸಚಿತ್ರ ಕನ್ನಡ ಸಾಹಿತ್ಯ ಪತ್ರಿಕೆ:—**

ಕಳೆದ ಶತಮಾನದಲ್ಲಿ ವರ್ತಮಾನ ಪತ್ರಿಕೆಗಳು ಕ್ರಮೇಣ ಹೆಚ್ಚಾಗುತ್ತಾ ಬರುತಿದ್ದಾಗ ಸಾಹಿತ್ಯ ಪತ್ರಿಕೆಗಳು ಬರೇ ಒಂದೆರಡರಂತೆ ಮಾತ್ರ ಇದ್ದುವು? ಅವುಗಳಲ್ಲಿ “ಕರ್ಣಾಟಕ ವಾಗ್ವಿಧಾಯಿನಿ”ಯು ಅತೀ ಉತ್ತಮವಾದುದೆಂದು ಪ್ರಸಿದ್ಧಿಯಾಗಿತ್ತು. ಕ್ರಿ.ಶ. 1859ರಲ್ಲಿ ಮಂಗಳೂರಿನಲ್ಲಿದ್ದ Rev. John Mack ಇವನು “ಸಚಿತ್ರ ಕನ್ನಡ ಸಾಹಿತ್ಯ ಪತ್ರಿಕೆ” ಇದನ್ನು ಸ್ಥಾಪಿಸಿದ್ದು ಅದು 1863ರ ವರೆಗೂ ನಡೆಯಿತು. ಅವನಿಗೆ ಸಹಾಯಕನಾಗಿ Rev. F. Kittel ಇವನೂ ಇದ್ದನು. ಆ ಪತ್ರಿಕೆಯನ್ನು ಅವರು Bombay Canarese Vernacular Society ಇದರ ಆಶ್ರಯದಲ್ಲಿ ನಡೆಸುತಿದ್ದರೆಂದು ತಿಳಿಸಲಾಗಿತ್ತು; ಅಲ್ಲದೆ ಪ್ರತಿ ತಿಂಗಳು 10–12 foolscap ಪುಟಗಳಿಂದ ಬೈಬಲ್ ಮತ್ತು ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳಿಂದ. ಮತ್ತು ಹಲವು ಬಣ್ಣ ಚಿತ್ರಗಳಿಂದ ಕೂಡಿ ಸುಂದರವಾಗಿ ಪ್ರಕಟವಾಗುತಿತ್ತು.

The Illustrated Canarese Journal ಅಥವಾ “ವಿಚಿತ್ರ ವರ್ತಮಾನ ಸಂಗ್ರಹ” ಎಂಬುದಾಗಿಯೂ ಕರೆಯಲ್ಪಟ್ಟ ಈ ಪತ್ರಿಕೆಯ 1862ರ ಸಂಚಿಕೆಯಲ್ಲಿ John Mack ಮತ್ತು F. Kittel ಇವರು ಹೀಗೆ ಬರೆದಿರುತ್ತಾರೆ.

“ಕನ್ನಡ ವಿಚಿತ್ರ ವರ್ತಮಾನ ಸಂಗ್ರಹ” ಎಂಬ ಈ ಪತ್ರಿಕೆಯಲ್ಲಿ ಪರದೇಶಗಳಲ್ಲಿಯೂ ಇಂಡಿಯಾದಲ್ಲಿಯೂ ನಡೆದ ಮುಖ್ಯ ವರ್ತಮಾನವೂ ರಾಜಸಂಬಂಧವಾದ ಮತ್ತು ಸಾಧಾರಣವಾದ ಹಲಬಗೆಯ ಮುಖ್ಯವಾದ ಸಂಗತಿ

ಗಳ ವೃತ್ತಾಂತವೂ ನವಕೃತ ರಚಿಸುವಿಕೆಗಳೂ ಶೋಧನೆಗಳೂ ಬೋಧನೆಗಳೂ ತಿಳುವಿಕೆಗೆ ಯುಕ್ತವಾದ ನಾನಾ ತರದ ಸಂಗತಿಗಳೂ ಕತೆಗಳೂ ನೀತಿ ಕಥೆಗಳೂ ಪದ್ಯಗಳೂ ವಿದ್ಯೆ ವ್ಯಾಪಾರ ಇತ್ಯಾದಿಗಳ ವರ್ತಮಾನವೂ ವಾಡಿಕೆಯಾಗಿ ನಡಿಯುವ ಸ್ಥಿತಿಗಳ ಸಮಾಚಾರವೂ, ಗಣಿತ. ಚರಿತ್ರೆ. ಭೂಗೋಳ ಶಾಸ್ತ್ರ, ಸೃಷ್ಟಿ ವಸ್ತು ವರ್ಣನೆ, ಮನುಷ್ಯ ದೇಹಲಕ್ಷಣ, ಇತ್ಯಾದಿ ಶಾಲಾ ಪ್ರಯೋಜನಾರ್ಥವಾದ ಪುಸ್ತಕಗಳಿಂದ ಸಹ ಸ್ವಲ್ಪ ಸ್ವಲ್ಪವೂ ಪ್ರಖ್ಯಾತಿ ಪಟ್ಟವರು ಬರೆದ ಪುಸ್ತಕಗಳಿಂದ ತೆಗೆದ ಆರ್ೈಯವೂ ಶ್ರೇಷ್ಠರ ವೃತ್ತಾಂತವೂ, ಸಂಚಾರ, ಸಮುದ್ರ ಪಯಣ, ಯುದ್ಧ ಪ್ರಯಾಣ ಇತ್ಯಾದಿ ಸಂಗತಿಗಳೂ, ಎಲ್ಲಾ ಜನಾಂಗಗಳಲ್ಲಿಯೂ ಪೂರ್ವದಲ್ಲಿ ನಡದ ಅಪರೂಪ ಸಂಗತಿಗಳ ವಿಷಯವೂ..........."

ಹೀಗೆ ಹಲವು ಬಗೆಯ ಧ್ಯೇಯವನ್ನಿಟ್ಟು ಪ್ರಾರಂಭಿಸಿದ ಈ ಪತ್ರಿಕೆಯು ಕೆಲ ಕಾಲ ಸಾಕಷ್ಟು ಗಂಭೀರವಾಗಿ ನಡೆಯಿತು. ಇದು ಬಾಸೆಲ್ ಮಿಷನ್‌ನವರಿಂದ ಮುದ್ರಣವಾಗಿ ಪ್ರಚಾರವಾಗುತ್ತಿತ್ತು.

John Mack ಇವನು ಕನ್ನಡದಲ್ಲಿ 'ಕಾವ್ಯ ಪುಂಜ' ಎಂಬ ಸಂಕಲನವನ್ನು ತನ್ನ ಕೆಲವು ಬೈಬಲ್ ಕವನಗಳೊಡನೆ ಸಂಪಾದಿಸಿ 1862 ರಲ್ಲಿ ಪ್ರಕಟಿಸಿದನು.

### ೧೫. ರೇಮುಂಡ್ ವೆಸ್ಟ್ ಇವನು ಖಾನೂನು ಕಾಯಿದೆಗಳನ್ನು ಸಂಗ್ರಹಿಸಿದನು :—

ಬೊಂಬಾಯಿ ಆಧಿಪತ್ಯದಲ್ಲಿ ದುಡಿಯುತಿದ್ದ Raymond West ಇವನು ಆ ಪ್ರಾಂತದ ಪ್ರಧಾನ ನ್ಯಾಯಾಲಯದಲ್ಲಿ ನಿರ್ಣಯವಾದ ಖಾನೂನುಗಳನ್ನೆಲ್ಲಾ ಸಂಗ್ರಹಿಸಿ 1864 ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದನು. ಇದು 99 demy ಪುಟಗಳ ಗ್ರಂಥವಾಗಿ 1866 ರಲ್ಲಿ ಮಂಗಳೂರು ಬಾಸೆಲ್ ಮಿಷನ್ ಮುದ್ರಣಾಲಯದವರಿಂದ ಅಚ್ಚಾಗಿ ಪ್ರಕಟವಾಯಿತು. ಇಂಗ್ಲಿಷನ್ನು ತಿಳಿಯದ ಸಾಮಾನ್ಯ ಜನರಿಗೆ ಪ್ರಯೋಜನವಾಗುವಂತೆ ಮತ್ತು ಬ್ರಿಟಿಷ್ ಸರಕಾರವು ಎಷ್ಟು ನ್ಯಾಯಬದ್ಧವಾಗಿ ಆಡಳಿತೆಯನ್ನು ನಡೆಸುತ್ತದೆಂಬುದನ್ನು ಜನಕ್ಕೆ ತಿಳಿಸಲಿಕ್ಕೆ ಸಾಧಕವಾಗಿ ಇಂಥಾ ಪುಸ್ತಕಗಳನ್ನು ಸರಕಾರದ ಆಶ್ರಯದಿಂದಲೇ ಆಯಾ ಗ್ರಂಥಕರ್ತರು ಪ್ರಕಟಿಸುತಿದ್ದರು. ಇವರಿಂದ ಕೆಲವು ಭಾಗಗಳನ್ನು Raymond West ಇವನು ಹೇಗೆ ಬರೆದಿರುವನೆಂಬುದಕ್ಕೆ ನಿದರ್ಶನಾರ್ಥವಾಗಿ ಕೆಳಗೆ ಕೊಡಲಾಗಿದೆ—

"ಒಬ್ಬ ಸರಕಾರೀ ಉದ್ಯೋಗಸ್ತನು ನಡಿಸಿದ ಸರಕಾರಿ ಕೃತ್ಯಗಳ ಸಮ್ಮಂಧ ಆತನ ಮೇಲೆ ಬರುವಂಥಾ ವೆವಹಾರವು ವಿಚಾರಿಸಲಿಕ್ಕೆ ಮುನಸೀಫನಿಗೆ ಸ್ವತಂತ್ರ ಇರುವದಿಲ್ಲಾ. ಅಂಥಾ ವೆವಹಾರಗಳು ವಿಚಾರಿಸಲಿಕ್ಕೆ ಅಧಿಕಾರ ಇರುವ ಜುಡಿಶ್ಯಲ್ ಉದ್ಯೋಗಸ್ತರು ಯಾರೆಂದರೆ—ಆ ವೆವಹಾರವ ಹೇತು ಯಾವ ಜಿಲ್ಲೆಯಲ್ಲಿ ಉಂಟಾಗಿ ಅದೊ, ಆ ಜಿಲ್ಲೆಯ ಜಡ್ಜರು ಅಥವಾ ಅಸಿಸ್ಟಾಂಟ್ ಜಡ್ಜರು ಆಗಿರುತ್ತಾನೆ.

"ಸನ್ 1827 ನೇ ಇಸವಿ 16 ನೇ ಕಾ ನೂ ನು ೨೦ ನೇ ಕಲಮಿಗೆ ವಿರೋಧವಾದ ಪರಾಧಿನ; ಏಕಾಕಿಯಾದ ಒಬ್ಬ ಮೂಲಗಾರನು ಅನುಭವಿಸಿ ದಂಥಾ ಒಂದು ವತನಿನ ಪರಾಧೀನವು ಆತನ ಮರಣದ ತರುವಾಯ ಅವನ ವಾರಿಸ್ದಾರನು ಅಭ್ಯಂತರಿಸಬಹುದು.

"ವಿವಾಹವಾದ ಒಬ್ಬ ಹೆಂಗಸು ತನ್ನ ಪೂರಾ ಆಸ್ತಿಯು ತನ್ನ ಸಹೋದ ರನಿಗೆ ಗಂಡನ ಒಪ್ಪಿಗೆ ಹೊರ್ತು ದಾನವಾಗಿ ಕೊಟ್ಟಂಥಾದ್ದು ಮಹ್ಮದೀ ಶಾಸ್ತ್ರ ಪ್ರಕಾರ ಅಸಿಂಧು ಆಗಿರುತ್ತದೆ ಎಂತಾ ನಿರ್ಣೈಸಲಾಯಿತು...."

ಇಂಥಾ ಕಾನೂನುಗಳ ಸಂಗ್ರಹ ಗ್ರಂಥವು ಮದರಾಸು ಮತ್ತು ಮೈಸೂರು ರಾಜ್ಯ ಸರಕಾರದವರೂ ಕನ್ನಡದಲ್ಲಿ ಮತ್ತು ಇತರ ದೇಶೀಯ ಭಾಷೆಗಳಲ್ಲೂ ಆಂಗ್ಲ ವಿದ್ವಾಂಸ ರಿಂದಲೇ ಬರೆಯಿಸಿ ಪ್ರಕಟಿಸಿದ್ದರು.

## ೧೬. ರಾಬರ್ಟ್‌ಕೋಲ್ ಇವನ ಮುಸ್ಲಿಂ ಮತ್ತು ಕೊಡವ ಖಾನೂನು ಬರೆಹಗಳು :—

ಹಳೆ ಮೈಸೂರು ರಾಜ್ಯ ಮತ್ತು ಕೊಡಗಿನಲ್ಲಿ ಅಧಿಕಾರ ಸ್ಥಾನವನ್ನು ಪಡೆದಿದ್ದ Capt. Robert A. Gole ಇವನು ಈ ಎರಡು ರಾಜ್ಯಗಳಿಗೆ ಸಂಬಂಧಿಸಿದ ಶಾಸನಗಳ ಮತ್ತು ಐತಿಹಾಸಿಕ ಅನ್ವೇಷಣೆಯನ್ನು 1860 ರ ಕಾಲದಲ್ಲಿ ನಡೆಸಿ ಅವು ಗಳ ವಿಚಾರವಾಗಿ ಹಲವು ಲೇಖನಗಳನ್ನು ಬರೆದಿದ್ದನು. 1863 ರಲ್ಲಿ ಇವನು Muhammaden Civil Law ಇದನ್ನು ಸಂಗ್ರಹಿಸಿ 70 demy ಪುಟ ಗಳಷ್ಟು ಕನ್ನಡದಲ್ಲಿ ಬರೆದು ಪ್ರಕಟಿಸಿದನು. ಅದರೊಡನೆಯೇ ಕೊಡಗಿನ ಕೊಡವ ಜನಾಂಗದ ಸಾಮಾಜಿಕ ಮತ್ತು ಕೌಟುಂಬಿಕ ನೀತಿಯನ್ನು ಪ್ರತಿಪಾದಿಸುವ Coorg Law ಎಂಬ ಗ್ರಂಥವನ್ನೂ ಬರೆದು ಸ್ಥಳೀಯ ಜನರ ಪ್ರೀತಿ ಮನ್ನಣೆಗಳಿಗೆ ಪಾತ್ರ ನಾದನು. ಕೊಡಗಿನ ಒಂದು ಹಳ್ಳಿಗೆ ಅವನ ಸ್ಮಾರಕವಾಗಿ ಕೋಲುಪೇಟೆಯೆಂಬ ಹೆಸ ರನ್ನೂ ಹಾಕಲಾಯಿತು.

ಅದರೆ Robert A. Cole ಇವನ ಪ್ರಾಮುಖ್ಯ ಬರೆವಣಿಗೆಯೆಂದರೆ ಕೊಡವ ನುಡಿಯನ್ನು ಕುರಿತು ಬರೆದ ಅವನ ವ್ಯಾಕರಣವಾಗಿದೆ. 136 demy ಪುಟಗಳ ಈ ಪುಸ್ತಕವು 1867 ರಲ್ಲಿ ಬೆಂಗಳೂರು ವೆಸ್ಲಿಯನ್ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾಯಿತು. ಇದರಲ್ಲಿ ಅವನು ನಿಜವಾಗಿಯೂ ತನ್ನ ಭಾಷಾ ಜ್ಞಾನ ಮತ್ತು ವ್ಯಾಕರಣ ಗ್ರಂಥ ರಚನಾ ಸಾಮರ್ಥ್ಯಗಳೆರಡನ್ನೂ ತೋರಿಸಿದ್ದಾನೆ. ಕನ್ನಡದಲ್ಲಿ ವ್ಯಾಕರಣಗಳನ್ನು ಬರೆದ ಇತರ ಪಾಶ್ಚಾತ್ಯರಂತೆ ವಿವರಣೆಗಳೆಲ್ಲವನ್ನೂ ಇಂಗ್ಲಿಷ್ ನಲ್ಲಿಯೇ ಕೊಟ್ಟಿದ್ದಾನೆ ಅಂತ್ಯದಲ್ಲಿ ನಾಲ್ಕಾರು ಪುಟಗಳ ಶಬ್ದಕೋಶವನ್ನೂ ಪ್ರಾರಂಭದಲ್ಲಿ ಹನ್ನೆರಡು ಪುಟಗಳ ಇಂಗ್ಲಿಷ್ ಮುನ್ನುಡಿಯನ್ನೂ ಕೊಟ್ಟು ಸಮರ್ಪಕ ವಾದ ಒಂದು ವ್ಯಾಕರಣವನ್ನು ನಿರ್ಮಿಸಿದ್ದಾನೆ.

ಕೊಡಗನ್ನು ಶೈವಮತಕ್ಕೆ ಸೇರಿದ ರಾಜರು ಕೈವಶಪಡಿಸದೆ ಹೋಗಿದ್ದರೆ ಅಲ್ಲಿ 17 ನೇ ಶತಮಾನದಲ್ಲಿ ಕನ್ನಡ ಭಾಷೆಯು ಇರುತಿದ್ದಿತೋ ಏನೋ ಎಂದು ಸಂದೇಹ

ಪಡಬೇಕಾಗಿದೆ. ಅಲ್ಲಿ ಕೊಡವರು ತಮ್ಮದೇ ಆದ ಕೊಡವ ಭಾಷೆಯನ್ನು ಆಡುತಿದ್ದು ಕನ್ನಡವನ್ನು ತಿಳಿಯದೇ ಇದ್ದವರ ಸಂಖ್ಯೆಯೇ ಆಗ ಹೆಚ್ಚಿದ್ದಿತು. ಬ್ರಿಟಿಷರು ಬಂದ ನಂತರ ಶಾಲೆಗಳಲ್ಲಿ ಕನ್ನಡವನ್ನೇ ಕಲಿಸಲು ಆರಂಭಿಸಿದನಂತರ ಪರಿಸ್ಥಿತಿಯು ಅಲ್ಲಿ ಬದಲಾಯಿತು. Robert Cole ಇವನು ತನ್ನ ಕೊಡವ ವ್ಯಾಕರಣದ ಮುನ್ನುಡಿಯಲ್ಲಿ ಈ ರೀತಿಯಾಗಿ ಬರೆದಿದ್ದಾನೆ :—

"Nalkand, which lies along the verge of the Western Ghats........is the very strong-hold of the Coorgs (Kodavas), and I found that many of them could not speak Canarese, the official language, but only a dialect........I determined on trying to acquire it........Dr. Moegling, the celebrated German missionary, to whom the cause of Education in Coorg is so much indebted, had given up the attempt to learn the language, owing to the difficulty of conveying the exact pronunciation of the words. I have, however, made an attempt by giving the Canarese letters for the written portion this hitherto unknown dialect, and the Roman alphabet for the conveyance of the several peculiarities in the pronunciation........"

**೧೬. ವಯಸ್ಕರಿಗೆ ತಕ್ಕುದಾದ ವಿಚಾರಪೂರ್ಣ ಹೊತ್ತಗೆಗಳು :—**

ಗ್ರಾಮಾಂತರದ ಜನರಿಗೆ ಓದಲು ಅನುಕೂಲವಾಗುವಂತೆ ಮತ್ತು ಅವರಿಗೆ ವಿಚಾರಜ್ಞಾನವನ್ನೀಯಲು ಹಲವು ಪಾಶ್ಚಾತ್ಯಸಾಹಿತಿಗಳು Village Dialogues ಎಂಬ ಪ್ರಶ್ನೋತ್ತರ ಪುಸ್ತಕಗಳನ್ನು ಬರೆದಿದ್ದಾರೆ. ಅವರ ಪೈಕಿ Richard G. Hudson ಇವನು ಬರೆದ ೨೨೬ ಪುಟಗಳ ಗ್ರಂಥವು 1858 ರಲ್ಲಿ ಮೊದಲು ಪ್ರಕಟವಾಯಿತು. ಇದರ ರಚನೆಗೆ ಕನ್ನಡ ಪಂಡಿತನಾಗಿದ್ದ ಮತ್ತು "Unacquainted with English, but of long experience in teaching Europeans Canarese" ಎಂಬುದಾಗಿದ್ದ ಶ್ರೀನಿವಾಸಯ್ಯನು ಸಹಕರಿಸಿದನೆಂದು ಹೇಳಲ್ಪಟ್ಟಿದೆ. ಇದರ ಎರಡನೇ ಆವೃತಿಯು ಇಂಗ್ಲಿಷ್‌ನಲ್ಲಿ ಮತ್ತು ಕನ್ನಡದಲ್ಲಿ ಒಟ್ಟಾಗಿ ಒಂದೇ ಪುಸ್ತಕದಲ್ಲಿ 1865 ರಲ್ಲಾಯಿತು.

1867 ರಲ್ಲಿ John Huber ಇವನು ಜರ್ಮನ್ ಭಾಷೆಯಿಂದ Household Rules ಎಂಬ ಕೃತಿಯನ್ನು ಕನ್ನಡಕ್ಕೆ "ಗೃಹಕೃತ್ಯ ಮತ್ತು ಗೃಹನಿರ್ಮಾಣ" ಎಂಬುದಾಗಿ ಭಾಷಾಂತರಿಸಿದ ಚಿಕ್ಕ ಹೊತ್ತಗೆಯು ಸಹಸ್ರಾರು ಪ್ರತಿಗಳಂತೆ ಖರ್ಚಾದುವು. ಅದೇ ವರ್ಷ ಮಂಗಳೂರಿನಿಂದ "ಟಾಕು ವಿನಿಯೋಗಿಸುವ ವಿಧಾನವನ್ನು ಕುರಿತು ಪ್ರಸಂಗವು" ಎಂಬುದಾಗಿ Vaccination ಇದರ ಮೇಲೆ ಬರೆದ ಸೂಚನೆಗಳು ಮತ್ತು ಸಲಹೆಗಳನ್ನು ಬರೆದು ಮುದ್ರಿಸಿ ಜನರಿಗೆ ಹಂಚಲಾಯಿತು. ಇಂಥಾ

ವಿಷಯಗಳು ಅಂದಿನ ಜನತೆಗೆ ವಿಷಯಜ್ಞಾನ ಪ್ರಚೋದನೆಯನ್ನೀಯಲು ಸಹಾಯಕ ವಾಗಿದ್ದುವು.

Abijah Samuel ಇವನು Scudder's Bazaar Book ಇದನ್ನು ಕನ್ನಡಕ್ಕೆ ಭಾಷಾಂತರಿಸಿದನು. ಸಂತೆ ಲೆಕ್ಕ ವ್ಯವಹಾರಗಳನ್ನು ತಿಳಿಸುವ ಈ ಚಿಕ್ಕ ಪುಸ್ತಕವು 1870 ರಲ್ಲಿ ಪ್ರಕಟವಾಯಿತು. ಅದೇ ರೀತಿ ನೇತ್ರ ಚಿಕಿತ್ಸೆಯನ್ನು ಕುರಿತು "Blindness Cured" ಎಂಬ ಹೆಸರಿನಿಂದ ಚಿಕ್ಕ ಒಂದು ಕನ್ನಡ ಪುಸ್ತಕವು 1873 ರಲ್ಲಿ ಹೊರಬಂತು. ಇದನ್ನು ರಚಿಸಿದವನ ಹೆಸರು ಅದರಲ್ಲಿ ನಮೂದಿಸಿಲ್ಲ ವಾದರೂ ಅದು ಒಬ್ಬ ಪಾಶ್ಚಾತ್ಯ ವೈದ್ಯಕೀಯ ತಜ್ಞನಿಂದಲೇ ಬರೆಯಲ್ಪಟ್ಟಿದೆಂದು ನಿಶ್ಚಯವಾದ ವಿಚಾರವಾಗಿದೆ. ಕನ್ನಡದಲ್ಲಿ ಅದನ್ನು "ಅಂಧಕರಣ ಪರಮಾನಂದ ಕಾರಣ" ಎಂಬ ಶಿರೋನಾಮೆಯನ್ನು ಕೊಟ್ಟಿದ್ದು ಬಾಸೆಲ್ ಮಿಷನ್‌ನವರಿಂದ ಪ್ರಕಟಿಸಲಾಯಿತು.

T. Micha Walz ಇವನು 1877ರಲ್ಲಿ "A Practical Advice against a far-spread Disease" ಎಂಬುದಾಗಿ ಇಂಗ್ಲಿಷ್‌ನಲ್ಲಿ ರೋಗ ನಿವಾರಣೆಗಿರುವ ಸೂತ್ರವೆಂಬುದನ್ನು ಕುರಿತು ಬರೆದಿದ್ದ ಹೊತ್ತಗೆಯನ್ನು ಕನ್ನಡಕ್ಕೆ ಭಾಷಾಂತರಿಸಿದನು. ಇದೇ ವರ್ಗದ ಮತ್ತೊಂದು ಪ್ರಚಾರ ಹೊತ್ತಗೆಯು "ಫಲಾಹಾರ ಅಥವಾ ಲಕ್ಷ್ಯಕ್ಕೆ ತಕ್ಕವಾದ್ದು—" ಎಂಬುದಾಗಿ ಆರೋಗ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಕೃತಿಯು 1875 ರಲ್ಲಿ ಪ್ರಕಾಶವಾಯಿತು. ಹೀಗೆ ಇನ್ನೆಷ್ಟೋ ಬಗೆಯ ಬರವಣಿಗೆಗಳಿಂದ ಅವರು ಹಿರಿಯರಿಗೂ ಕಿರಿಯರಿಗೂ ಉದ್ಬೋಧಕವಾದ ವಿಚಾರಗಳನ್ನು ತಿಳಿಸಿ ಸಮಾಜಸೇವೆಯನ್ನೆಸಗಿದರು.

### ೧೮. ಸ್ಟ್ಯಾನ್ಲಿ ರೈಸ್ ಅವನು 'ಕಾವೇರಿ ಪುರಾಣ'ವನ್ನು ಬರೆದನು :—

ಹಿಂದೂಸ್ಥಾನದ ಹಾಗೂ ಕರ್ನಾಟಕದ ಬೇರೆ ಬೇರೆ ಸ್ಥಳಗಳನ್ನು, ಪುಣ್ಯಕ್ಷೇತ್ರಗಳನ್ನು, ಪ್ರೇಕ್ಷಣೀಯ ದೃಶ್ಯಗಳನ್ನು ಕುರಿತಾಗಿ ಅದೆಷ್ಟೋ ಪಾಶ್ಚಾತ್ಯರು ಇಂಗ್ಲಿಷ್‌ನಲ್ಲಿ ಬರೆದಿದ್ದಾರೆ. ಅದೇ ರೀತಿ Stanel P. Rice ಇವನು 1868 ರ ಕಾಲದಲ್ಲಿ The Legend of Kaveri ಇದನ್ನು ಬರೆದನು. ಇವನು ಸಂಸ್ಕೃತ ಮತ್ತು ಎಲ್ಲ ಪ್ರಮುಖ ದ್ರಾವಿಡಭಾಷೆಗಳನ್ನು ತಿಳಿದಿದ್ದನು. 'ಪಂ ಚ ತಂ ತ್ರ' ವ ನ್ನು ಇಂಗ್ಲಿಷ್‌ನಲ್ಲಿ ಬರೆದುದಲ್ಲದೆ Hindu Customs ಮತ್ತು Occasional Essays on Indian Life ಎಂಬುದಾಗಿಯೂ ಹಿಂದೂ ಸಂಸ್ಕೃತಿಯನ್ನು ಕುರಿತು ಗ್ರಂಥಗಳನ್ನು ಬರೆದಿದ್ದಾನೆ. ಕಾವೇರಿಪುರಾಣವನ್ನು ಇಂಗ್ಲಿಷ್‌ನಲ್ಲಿ ಅವನಿಗೂ ಯಾರೂ ಬರೆದಿರಲಿಲ್ಲ. ಇವನ ಬರವಣಿಗೆ ಶೈಲಿಯು ವಿವರಣಾತ್ಮಕವಾಗಿಯೂ ಮನೋಹರವಾಗಿಯೂ ಇದೆಯೆಂಬುದಕ್ಕೆ ಅವನ ಗ್ರಂಥದಿಂದ ಈ ಭಾಗವನ್ನು ಹೆಕ್ಕಿ ಇಲ್ಲಿ ಕೊಡಲಾಗಿದೆ :—

"What the Ganges is to the races of the north, that is the Kaveri to the South India...... Of all the natural pheno-

mena the Hindu loves the rivers best To him the river is life ; from it he obtains water for drinking and for the ordinary necessities of life ; by it is nourished the rice crop which gives him the bulk of his food...... The Kaveri legend has probably the an Aryan origin. The scenes of Kavera's penance of the childhood of Kaveri and of her marriage with Agastya, is laid in the Himalayas (in some versions)... We are told that Kaveri was 'blue-eyed, curly-haired and red-lipped.' These epithets are eminently characteristics of a nothern Aryan race ... ... "

Stanley P. Rice ಇವನು ಕಾವೇರಿ ಪುರಾಣದಿಂದ ಹಲವು ಶ್ಲೋಕಗಳನ್ನೂ ಕನ್ನಡ ಮತ್ತು ದಾಕ್ಷಿಣಾತ್ಯ ಭಾಷೆಗಳಿಂದ ಉತ್ತಮ ಪದಗಟ್ಟುಗಳನ್ನೂ ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾನೆ. ಇವನು ದಕ್ಷಿಣ ಹಿಂದೂಸ್ಥಾನದಲ್ಲಿ ಒರ್ವ ಪ್ರವಾಸಿಕನಾಗಿ ಸಂಚರಿಸಿ ಹಲವು ಸ್ಥಳಗಳನ್ನು ವರ್ಣಿಸಿದ್ದು ಮಾತ್ರವಲ್ಲದೆ ವಿವಿಧ ಬಗೆಯ ಜನಾಂಗಗಳ ನೀತಿ ಸಂಸ್ಕೃತಿಗಳ ಅನ್ವೇಷಣೆಯನ್ನು ನಡೆಸಿ ಅವುಗಳ ವರದಿಗಳನ್ನು ಗ್ರಂಥರೂಪದಲ್ಲಿ ಬರೆದಿದ್ದಾನೆ. ಇವನು ರಚಿಸಿದ Occasional Essays of Indian Life ಇದು ಆದರ್ಶಣೀಯವಾದ ಮತ್ತು ಉತ್ತಮವಾಗಿ ಬರೆಯಲ್ಪಟ್ಟ ಪ್ರವಾಸಗ್ರಂಥವಾಗಿದೆ. ನಾಡಿನ ಅಂದಿನ ಜನಜೀವನ ಮತ್ತು ಸಂಸ್ಕೃತಿಯನ್ನು ಬಹು ಆಳವಾಗಿ ಅಭ್ಯಸಿಸಿ ಚಿತ್ರಿಸಿದ್ದಾನೆ.

೧೯. ತುಳು, ತೋಡ ಮತ್ತು ಬಡಗ ಭಾಷೆಗಳಲ್ಲೂ 'ವ್ಯಾಕರಣ'ಗಳು :—

Robert A. Cole ಇವನು ಕೊಡುವ ಭಾಷೆಗೆ ಸಮರ್ಪಕವಾದ ಒಂದು ವ್ಯಾಕರಣವನ್ನು 1867 ರಲ್ಲಿ ಬರೆದನಂತರ ಅದೇ ರೀತಿಯಾಗಿ ಅದೇ ಗಾತ್ರದಲ್ಲಿ Rev. Jacob Brigel ಇವನು ತುಳು ಭಾಷೆಯ ವ್ಯಾಕರಣವನ್ನು 1872 ರಲ್ಲಿ ಬರೆದು ಪ್ರಕಟಿಸಿದನು. Dr. Moegling ಇವನ ನಂತರ ತುಳು ಭಾಷೆಯ ನಾಣ್ನುಡಿ, ಜನಪದ ಹಾಡುಗಳು ಕತೆಗಳು ಇತ್ಯಾದಿಗಳನ್ನು ಸಂಗ್ರಹಿಸಿ ಈ ಉಪಭಾಷೆಯ ಸಾಹಿತ್ಯದ ಬಗ್ಗೆ ದುಡಿದವರಲ್ಲಿ ಪ್ರಮುಖನು Rev. Brigel ಇವನು. ಬಾಸೆಲ್ ಮಿಷನ್‌ನವರಿಂದ ಮುದ್ರಣವಾದ ಈ ತುಳು ವ್ಯಾಕರಣ ಗ್ರಂಥವಲ್ಲಿ ವಿವರಣೆಗಳೆಲ್ಲವನ್ನೂ ಇಂಗ್ಲಿಷ್‌ನಲ್ಲಿಯೇ ಕೊಡಲಾಗಿದೆ.

ನೀಲಗಿರಿಯ ತೋಡ ಭಾಷೆಯಲ್ಲಿ ಬೈಬಲ್ ಕೃತಿಗಳನ್ನು ರಚಿಸಿದವರ ಹೆಸರುಗಳನ್ನು ಹಿಂದೆ ಹೇಳಲಾಗಿದೆ. Col. Marshall ಇವನು ಆ ಭಾಷೆಯಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ್ದನು. ಅವನು ಬರೆದ ತೋಡ ವ್ಯಾಕರಣವೂ ಮೇಲಿನ ವ್ಯಾಕರಣ ಗ್ರಂಥಗಳ ರೀತಿಯಲ್ಲಿಯೇ ಬರೆಯಲ್ಪಟ್ಟಿದ್ದು 1873 ರಲ್ಲಿ ಪ್ರಕಾಶವಾಯಿತು. ಈ ಎಲ್ಲಾ ವ್ಯಾಕರಣಗಾರರ ಉದ್ದೇಶವೇನಿತ್ತೆಂದರೆ ದೇಶೀಯ ಭಾಷೆಗಳನ್ನೂ ಉಪಭಾಷೆಗಳನ್ನೂ ಇತರ ಪಾಶ್ಚಾತ್ಯ ಸಾಹಿತಿಗಳಿಗೆ

ಬೋಧಿಸುವ ಅಥವಾ ಪರಿಚಯ ಮಾಡಿಸುವುದೇ ಆಗಿತ್ತು. ಇಂಗ್ಲಿಷ್‌ನಲ್ಲಿ ಅವರು ದೇಶೀಯ ಭಾಷಾ ವ್ಯಾಕರಣಗಳನ್ನು ಬರೆದುದರಿಂದ ಆಯಾ ಭಾಷೆಗಳು ತಮ್ಮ ಆವರಣದೊಳಗಡಗದೆ ವಿಶಾಲ ಪ್ರಪಂಚದಲ್ಲಿ ಹರಡುವ ಸನ್ನಿವೇಶವೂ ಒದಗಿತು.

ಬಡಗ ಭಾಷೆಯಲ್ಲಿ ಬೈಬಲ್ ಪ್ರಸಂಗಗಳನ್ನು ಬರೆದವರಲ್ಲದೆ ಕೆಲವು ಚಿಕ್ಕ ಸಾಹಿತ್ಯ ಗ್ರಂಥಗಳನ್ನೂ ರಚಿಸಿದವರು ಇದ್ದಾರೆ. ಈ ಭಾಷೆಯನ್ನು ಮೊತ್ತಮೊದ ಲಾಗಿ ಇತರರಿಗೆ ಪರಿಚಯ ಮಾಡಿಸಿದವನು ಅಖಿಲಭಾರತ ಖ್ಯಾತಿಯ ಭಾಷಾ ಶಾಸ್ತ್ರಜ್ಞನಾದ Dr. Brian H. Hodgson ಇವನು ಬಡಗ ಭಾಷೆಯನ್ನು ಶಾಸ್ತ್ರೀಯವಾಗಿ ಅನ್ವೇಷಿಸಿ ಇವನು 1840 ರ ಕಾಲದಲ್ಲಿ ಬರೆದ ಒಂದೆರಡು ಲೇಖನ ಗಳು 1880 ರಲ್ಲಿ Asiatic Society Journal ಪತ್ರಿಕೆಯಲ್ಲಿ ಪ್ರಕಟ ವಾದುವು. ಅವನ ನಂತರ ಈ ಭಾಷೆಯನ್ನು ಕುರಿತಾಗಿ ಮೂರು ಕಾಂಡಗಳ ಪ್ರಮಾಣ ದಲ್ಲಿ ಜರ್ಮನ್ ಭಾಷೆಯಲ್ಲಿ Rev. M. Buhler ಇವನು ಬರೆದದ್ದು ಸಮರ್ಪಕ ವಾದ ಬಡಗ ಭಾಷಾ ಸಾಹಿತ್ಯ ಗ್ರಂಥವಾಯಿತು. 1849 ರಲ್ಲಿ ರಚಿತವಾದ ಈ ಪುಸ್ತಕವು Ueber des volk und diesprache des Badaga ಎಂಬುದಾಗಿ ಕರೆಯಲ್ಪಟ್ಟಿತು. M. Buhler ಇವನು Geber uber einen Todten ಎಂಬುದಾಗಿ ಜರ್ಮನ್‌ನಲ್ಲಿಯೇ ಬಡಗ ಭಾಷೆಯ ವಿಷಯವಾಗಿ ಕೆಲವು ಲೇಖನಗಳನ್ನು 1851 ರ ಕಾಲದಲ್ಲಿ ಬರೆದದ್ದು ಪ್ರತ್ಯೇಕವಾಗಿ ಗ್ರಂಥರೂಪದಲ್ಲಿ ಹೊರಬಂತು.

---

"ಮುನ್ನ ಶತಕೋಟಿ ರಾಯರು ಆಳಿದಾ ನೆಲನ
ತನ್ನದೆಂದೆನುತ ಶಾಸನವ ಬರೆಸಿ
ಬಿನ್ನಣದ ಮನೆಗಟ್ಟಿ ಕೋಟಿ ಕೊತ್ತಳವಿಕ್ಕಿ
ಚೆನ್ನಿಗನು ಆಸುವಳಿಯೆ ಹೊರಕೆ ಹಾಕುವರು !

ಅನ್ಯರಲಿ ಜನಿಸಿರ್ದ ಅಂಗನೆಯ ಕರತಂದು
ತನ್ನ ಮನೆಗವಳ ಯಜಮಾನಿಯೆನಿಸಿ
ಭಿನ್ನವಿಲ್ಲದೆಯರ್ಧ ದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಮ್ಮಳು ಕಾಲವಶದಿ !

[ಪುರಂದರ]

"ಇದೇಕೆ ಅವರು ಇಷ್ಟೆಲ್ಲಾ ಕೆಲಸ ಮಾಡಿದರು? ಇದರಿಂದ ಅವರಿಗೇನು ಲಾಭವಾಯಿತು?" ಎಂಬುದಾಗಿ ಕೇಳುವ ದುರಭಿಮಾನಿಗಳು ಇಂದೂ ನಮ್ಮ ಸಮಾಜದಲ್ಲಿದ್ದಾರೆ. ಕೇವಲ ಲಾಭದ ಮೇಲೆ ಕಣ್ಣಿಟ್ಟ ವ್ಯಕ್ತಿಗೆ ಅಥವಾ ಸಮಾಜಕ್ಕೆ ಸ್ವಾರ್ಥವಾವುದು, ನಿಸ್ವಾರ್ಥವಾವುದು ಎಂದು ಸಮದೂಗಿ ನೋಡುವ ಜಾಣ್ಮೆ ಎಂದೂ ಇರುವುದಿಲ್ಲ. ಪಾಶ್ಚಾತ್ಯರು ನಮ್ಮ ಸಾಹಿತ್ಯ ಸಂಸ್ಕೃತಿಗಳ ಅನ್ವೇಷಣೆಯನ್ನೆಸಗಿದ್ದರಿಂದ ಅವರ ಲಾಭವೇನೂ ಇಲ್ಲ; ಪ್ರಯೋಜನವಾದರೂ ಇದೆಯೆ? ಅದೂ ಕಂಡು ಬರುವುದಿಲ್ಲ. ಹಾಗಾದರೆ ಅಂದಿನ ಗುಡ್ಡಗಾಡುಗಳಲ್ಲಿ ಸಂಚರಿಸಿ ಇಷ್ಟರವುಟ್ಟಿಗೆ ಓಲೆ ಕರಡುಗಳನ್ನು ಸಂಪಾದಿಸಿ, ಸಂಗ್ರಹಿಸಿ, ಪರಿಷ್ಕರಿಸಿ, ಟೀಕಿಸಿ, ಭಾಷಾಂತರಿಸಿ ಮತ್ತು ಮುದ್ರಿಸಿದುದರಿಂದ ಯಾರಿಗೆ ಲಾಭ? ಅವರಿಗೆ ಇಂಥಾ ಅದ್ಭುತ ಕಾರ್ಯವನ್ನೆಸಗಿದೆವು ಎಂಬ ತೃಪ್ತಿಯಾಯಿತು; ನಮಗೆ ನಮ್ಮ ಸಾಹಿತ್ಯ ಸಂಸ್ಕೃತಿಗಳನ್ನರಿಯುವ ಅವಕಾಶವುಂಟಾಯಿತು. ಅವರಿಗೆ ಈ ದೇಶದ ಜನಕ್ಕೆ ಮೆಚ್ಚಿಕೆಯಾದ ಕೆಲಸವನ್ನು ಮಾಡಿದೆವೆಂಬ ಸಂತೋಷವಾಯಿತು; ನಮಗೆ ಅವರ ಉದಾತ್ತವಾದ ಮತ್ತು ಅನುಕರಣೀಯವಾದ ಸಾಹಸವನ್ನು ನೋಡಿ ನಾವು ಅದಕ್ಕಿಂತ ಇಮ್ಮಡಿಯಷ್ಟು ದುಡಿಯಬೇಕೆಂಬ ಉತ್ಸಾಹಕ್ಕೆ ಮೂಲವಾಯಿತು. ಇದು ನಿಸ್ವಾರ್ಥವಾದ ಮತ್ತು ಆತ್ಮಾನಂದಕ್ಕಾಗಿ ಎಸಗಿದ ಸೇವೆಯಾದರಿಂದಲೇ ಇಡೀ ಪಾಶ್ಚಾತ್ಯ ಜನಾಂಗವು; ಹಲವಾರು ಸಾಹಿತ್ಯ ತಪಸ್ವಿಗಳು ತಮ್ಮ ಜೀವಮಾನವೆಲ್ಲವನ್ನೂ ಈ ದೇಶೀಯ ಸಾಹಿತ್ಯದ ಅನ್ವೇಷಣೆ ಮತ್ತು ಪರಿಷ್ಕರಣೆಯಲ್ಲಿ ಕಳೆದರು. ಜನ ಭೇದ ಅಥವಾ ಜನಾಂಗಭೇದ ಎಂಬುದಾವುದನ್ನೂ ಲೆಕ್ಕಿಸದೆ ಅವರೆಲ್ಲರೂ ಒಂದಾಗಿ ಉತ್ಸಾಹದಿಂದ ದುಡಿದರು.

**೨. ಡಾ. ಕಾಲ್ಡ್ವೆಲ್ ಇವನ 'ದ್ರಾವಿಡ ಭಾಷೆ'ಗಳ ಭಾಷಾಶಾಸ್ತ್ರ:—**

Fr. Robert Caldwell ಇವನ ವಿಷಯವಾಗಿ ಹಿಂದಿನ ಭಾಗದಲ್ಲಿ ಸಾಕಷ್ಟು ಪ್ರಸ್ತಾಪಿಸಲಾಗಿದೆ. ಅವನು ತನ್ನ ದ್ರಾವಿಡ ಭಾಷೆಗಳನ್ನು ಕುರಿತಾದ

ಭಾಷಾಶಾಸ್ತ್ರ ಗ್ರಂಥದಲ್ಲಿ ಕನ್ನಡವನ್ನು ಇತರ ದ್ರಾವಿಡ ಭಾಷೆಗಳಿಗೆ ಹೋಲಿಸಿ ಬರೆದ ಕ್ರಮವೆಂತೆಂದು ಮಾತ್ರ ಇಲ್ಲಿ ಹೇಳುವುದು ಉಚಿತವಾಗಿದೆ. Dr. Caldwell ಇವನೂ ಇತರ ಹಲವು ಐರೋಪ್ಯಾ ವಿದ್ವಾಂಸರಂತೆ ಹತ್ತಾರು ಭಾರತೀಯ ಭಾಷೆ ಗಳನ್ನು ಕಲಿತಿದ್ದನು. ಭಾಷಾಶಾಸ್ತ್ರ ಮತ್ತು ಇತಿಹಾಸ ಪರಿಶೋಧನೆಗಳ ತನ್ನ ವರದಿ ಯನ್ನು ಹಲವು ಲೇಖನಗಳ ಮೂಲಕ ಪ್ರಕಟಿಸಿದ್ದನು. ಅದೆಷ್ಟು ನಿಷ್ಠಾವಂತನಾದ ಕ್ರೈಸ್ತಮತ ಬೋಧಕನೋ ಅಷ್ಟೇ ಪ್ರಮಾಣದ ಪ್ರಬಲ ಭಾಷಾಶಾಸ್ತ್ರಜ್ಞನೂ ಆಗಿ ದ್ದನು.

ಹಿಂದೆಯೇ ಹೇಳಿದಂತೆ ಇವನ "Comparative Grammar of the Dravidian or South Indian family of languages" demy 528 ಪುಟಗಳ ಗ್ರಂಥದ ಪ್ರಥಮ ಮುದ್ರಣವು 1856 ರಲ್ಲಿ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ಇದರಲ್ಲಿ ಅವನು ದ್ರಾವಿಡ ಭಾಷಾ ಶಬ್ದಗಳನ್ನು ಇತರ ಹಲವು ಭಾಷೆಗಳಿಗೆ ಹೋಲಿಸಿ ಅವುಗಳೊಳಗಿರುವ ಸಂಬಂಧವನ್ನು ಹೇಳಲೆತ್ನಿಸಿದ್ದು ಸ್ವಾರಸ್ಯ ವಾಗಿದೆ. ಮಾತ್ರವಲ್ಲ, ದಕ್ಷಿಣ ಹಿಂದೂಸ್ಥಾನಕ್ಕೆ ಅವನ ಈ ಗ್ರಂಥವು ಮೊದಲನೇ ದಾಗಿದೆ. ದಿನನಿತ್ಯ ಉಪಯೋಗಿಸಲ್ಪಡುವ ಅಪ್ಪ. ಅವ್ವ, ಅಕ್ಕ, ಕೈ, ಕರು, ಕುಡಿ, ಕೇಳು, ಕೊಲ್ ಎಂಬೀ ಬಗೆಯ ನೂರಾರು ಶಬ್ದಗಳಿಗೆ ಇತರ ದ್ರಾವಿಡ ಭಾಷೆಗಳು ಮಾತ್ರವಲ್ಲ, ಏಷ್ಯಾಖಂಡದ ಮತ್ತು ಯೂರೋಪಿನ ಭಾಷೆಗಳಲ್ಲಿರುವ ಶಬ್ದಗಳೊಳಗೂ ಸಾಮ್ಯವನ್ನು ಕಲ್ಪಿಸಿದ್ದಾನೆ. ಮಳೆ. ಮಾರಿ, ಮನೆ, ಮರ. ಎಂಬೀ ಶಬ್ದಗಳು ದ್ರಾವಿಡ ಭಾಷೆಗಳೊಳಗೆ ಎಷ್ಟು ಸಾಮಿಪ್ಯವನ್ನು ಹೊಂದಿವೆಯೆಂಬುದಕ್ಕೆ ನಿದರ್ಶನ ಗಳನ್ನು ಕೊಡುತ್ತಾ ಈ ಎಲ್ಲಾ ಪದಗಳನ್ನು ಮರಾಠೀ, ಗುಜರಾಥೀ. ಒರಿಯಾ, ಪರ್ಷಿ ಯನ್, ಫಿನ್ನಿಸ್, ಲ್ಯಾಟಿನ್, ಹಂಗೇರಿಯನ್, ಮೊದಲಾದ ಭಾಷೆಗಳಲ್ಲಿ ಅದೇ ಅರ್ಥವನ್ನು ಹೋಲುವ ಪದಗಳೊಡನೆ ಹೋಲಿಸಿದ್ದಾನೆ. ಸಂಸ್ಕೃತ, ಲ್ಯಾಟಿನ್, ಗ್ರೀಕ್, ಅರೇಬಿಕ್, ಹೆಬ್ರ್ಯೂ, ಇತ್ಯಾದಿ ಭಾಷೆಗಳೊಳಗಿರುವ ಸಮೀಪ ಬಾಂಧವ್ಯಕ್ಕೆ ನೂರಾರು ನಿದರ್ಶನಗಳನ್ನು ಕೊಡುತ್ತಾ ದ್ರಾವಿಡ ಭಾಷೆಗಳೂ ಭಾಷಾಶಬ್ದಗಳೂ ಮೂಲತಃ ಇತರ ಭಾಷೆಗಳಿಗೆ ಸಂಬಂಧಿಸಿವೆಯೆಂದು ಸಾಧಿಸುತ್ತಾನೆ. ಕನ್ನಡ ಭಾಷೆಯು ಪಂಚದ್ರಾವಿಡ ಭಾಷೆಗಳಲ್ಲಿ ಒಂದೆಂದೂ ದಕ್ಷಿಣದ ಭಾಷೆಗಳು ಉತ್ತರದ ಭಾಷೆಗಳಿಂದ ಹಲವು ವಿಧದಲ್ಲಿ ಬೇರ್ಪಟ್ಟಿವೆಯೆಂದೂ ಸಾಧಿಸಿದ ಭಾಷಾಶಾಸ್ತ್ರಜ್ಞರಲ್ಲಿ Brian Hodgson ಇವನನಂತರ Dr. Caldwell ಇವನೇ ಪ್ರಮುಖನಾಗಿರುವನು. ಇವರ ಆದರ್ಶವನ್ನನುಸರಿಸಿ ಕ್ರಿ. ಶ. 1860 ರಿಂದ ಇನ್ನೂ ಹಲವು ಐರೋಪ್ಯಾ ವಿದ್ವಾಂಸರು ಕನ್ನಡ ಮತ್ತು ಇತರ ಭಾರತೀಯ ಭಾಷೆಗಳ ಶಾಸ್ತ್ರೀಯ ಹಾಗೂ ತುಲನಾತ್ಮಕ ಅನ್ವೇಷಣೆಗೆ ತೊಡಗಿದರು.

**೩. ಪ್ರತಿ ಶಬ್ದದ ಮೇಲೂ ವಿಚಾರಪೂರ್ಣ ವಿಮರ್ಶೆಯನ್ನು ನಡೆಸಿದನು :**

ಭಾಷಾ ಶಾಸ್ತ್ರವೆಂದರೆ ಮನಸ್ಸಿಗೆ ತೋರಿದಂತೆ ಬರೆಯುವ ನೀತಿಶಾಸ್ತ್ರ ದಂತಲ್ಲ; ಅದೊಂದು ವೈಜ್ಞಾನೀಕ ನಿರೀಕ್ಷಣೆ. ಹಲವು ಭಾಷೆಗಳಲ್ಲಿ ನುರಿತು ಆ

ಪಾಂಡಿತ್ಯದ ಬಲದಿಂದ ಎಸಗಬೇಕಾದ ಮಹಾ ಸಂಶೋಧನೆ! ಕ್ರಿ. ಶ. 1780ರಷ್ಟು ಹಿಂದೆಯೇ Nathaniel Halhed ಇವನನ್ನು ಮೊದಲ್ಗೊಂಡು ಹಲವು ಭಾಷಾ ಧುರೀಣರ ಪೀಳಿಗೆಯೊಂದು ಕಳೆದ ಶತಮಾನದಲ್ಲಿ ಸೃಷ್ಟಿಯಾಯಿತು. W Carey, F. Buchanan, F. Davies, B. Hodgson ಇವರಂಥಾ ಶ್ರೇಷ್ಠ ವಿದ್ವಾಂಸರ ಸಾಲಿನಲ್ಲಿ Dr. Caldwell ಇವನೂ ಸೇರಿ ಉದ್ದಾಮ ವ್ಯಾಸಂಗ ವನ್ನೆಸಗಿದನು. ಇವನ್ನನುಸರಿಸಿ Dr. John Beames ಇವನು ಉತ್ತರಾದಿ ಭಾಷೆಗಳನ್ನು ಕುರಿತ ಗ್ರಂಥವು 1862ರಲ್ಲಿ ಪ್ರಕಟವಾಯಿತು. ಅದೇ ವೇಳೆಗೆ Dr. W. Bleek ಇವನು ದಕ್ಷಿಣ ಆಫ್ರಿಕಾದ ಆರೆಂಟು ಭಾಷೆಗಳ ಮೇಲೆ ಅದೇ ರೀತಿ ತುಲನಾತ್ಮಕ ವ್ಯಾಖ್ಯಾನವನ್ನು ನಡೆಸಿದನು.

ಭಾಷೆಯನ್ನು ಇತರ ಸೋದರೀ ಭಾಷೆಗಳೊಂದಿಗೆ ಹೋಲಿಸಿ ಪ್ರತಿಯೊಂದು ಪದದ ಮೂಲ, ಚರಿತ್ರೆ ಇತ್ಯಾದಿಗಳನ್ನು ಕಂಡುಹಿಡಿಯುವುದಲ್ಲದೆ ಇತರ ಭಾಷೆಗಳಲ್ಲಿ ಅದೇ ಅರ್ಥದ ಪದಕ್ಕೆ ಅಥವಾ ಪದಗಳಿಗೆ ಇರುವ ಬಾಂಧವ್ಯವೆಲ್ಲವನ್ನೂ ಆಧಾರ ಪೂರ್ವಕವಾಗಿ ಸೃಷ್ಟಿಸಬೇಕಿದೆ. Dr. Gundart ಇವನು 'ಮೂರು' ಮತ್ತು 'ಮುಂಡ್ರು', 'ಕರು' ಮತ್ತು 'ಕಂಡ್ರು' ಇದರಲ್ಲಿ ಪ್ರಾಚೀನ ಶಬ್ದವಾವುದು ಎಂಬೀ ರೀತಿಯಲ್ಲಿ ಚರ್ಚಿಸಿದ್ದನು. Dr. Caldwell ಇವನು ಕನ್ನಡ, ತೆಲುಗು, ತಮಿಳು, ಮತ್ತು ಮಲೆಯಾಳ ಭಾಷಾ ಶಬ್ದಗಳನ್ನಲ್ಲದೆ ತುಳು, ತೋಡ, ಕೋಟ, ಕೊಡವ, ಗೊಂಡ, ಕೊಂಡ, ಮಲೇ, ಓರಾ, ಹೀಗೆ ಹನ್ನೆರಡು ದ್ರಾವಿಡ ಭಾಷೆ ಮತ್ತು ಉಪ ಭಾಷೆಗಳ ಶಬ್ದಗಳ ಬಗ್ಗೆ ಸಮನ್ವಯವನ್ನು ನಡೆಸಿದ್ದಾನೆ.

ತೊಂಭತ್ತು. ತೊನ್ನೂರು, ಒಂಬೈನೂರು.
ಸೊನ್ನಾ. ಸೊನ್, ತೊಮ್, ತೊನ್,
ಪನ್ನೆರಡು, ಪನ್ನೆರಂಡು, ಪಂದಿರೆಂಡು,

ಹೀಗೆ ನೂರಾರು ಶಬ್ದಗಳು ಈ ಎಲ್ಲಾ ಭಾಷೆಗಳಲ್ಲಿ ಒಂದಲ್ಲ ಒಂದು ಅಕ್ಷರವನ್ನು ಆಧರಿಸಿ ಬರುವುದಕ್ಕೆ ದೃಷ್ಟಾಂತಗಳನ್ನು ಮೇಲಿಂದ ಮೇಲೆ ಕೊಡುತ್ತಾನೆ. Dr. Caldwell ಇವನ ವಿವರಣೆಯು ಈ ರೀತಿಯಾಗಿ ಹರಿಯುತ್ತದೆ.

"Khatava"—a couch, a cot: assumed derivation 'Khatta', to screen. Compare the Tamil 'Katil' a cot, from 'kattu' to tie or bind, to build. The word 'kattu' is thoroughly and essentially Dravidian, and one which abounds with derivatives and related words.

"Kaaveri", saffron, also the river Cauveri (from its muddy colour). assumed root 'kaava' to colour. Greek name of the same river is 'Kaavoree'—possibly this word may be of true Sanskrit origin. I may suggest, however, the possibility of the origin of the name of the river

ಮುದ್ರಣವಾಗಿದೆ.* ಬೆಂಗಳೂರು ಕ್ಯಾಥೊಲಿಕ್ ಮಿಷನ್‌ನಿಂದ ಪ್ರಕಟವಾದ ಈ ಅಪೂರ್ವ ಕನ್ನಡ--ಲ್ಯಾಟಿನ್ ನಿಘಂಟಿನಿಂದ ಕೆಲವು ಶಬ್ದಗಳನ್ನು ನಿದರ್ಶನಾರ್ಥವಾಗಿ ಕೆಳಗೆ ಕೊಡಲಾಗಿದೆ.

" ನಾಡಿ—arteriae pulsus, culmus plantae alicujus—(ಹೀಗೆ ಆರೆಂಟು ಪಂಕ್ತಿಗಳಲ್ಲಿ ಅರ್ಥ ಹೇಳಲ್ಪಟ್ಟಿದೆ.)

ನಾಟ್ಯ—scientia vel ars scenica, saltio--(ಎಂದು ಈ ಪದದ ವಿವಿಧ ರೂಪಾಂತರಗಳನ್ನು ವಿವರಿಸಿದೆ.)

ನಾಗ—serpens, semi-deus, elephas, stannum—(ಹೀಗೆ ಒಟ್ಟಾಗಿ ಮೂವತ್ತು ಕನ್ನಡ—ಲ್ಯಾಟಿನ್ ಶಬ್ದಗಳ ಸಮೇತವಾಗಿ ಅರ್ಥ ಹೇಳಿದೆ.)

ಕ್ರಿ. ಶ. 1860ರಲ್ಲಿ Rev. Bouteloup ಇವನಿಂದ ಬರೆಯಲ್ಪಟ್ಟ ಇನ್ನೆರಡು ಕನ್ನಡ—ಲ್ಯಾಟಿನ್ ಗ್ರಂಥಗಳು ಪ್ರಕಟವಾದುವು. ಕನ್ನಡ ವ್ಯಾಕರಣ ಮತ್ತು ಛಂದೋ ಶಾಸ್ತ್ರಗಳನ್ನೂ ಲ್ಯಾಟಿನ್ ಭಾಷೆಯಲ್ಲಿ ಬರೆದದ್ದೂ ಬೆಂಗಳೂರಿನ ಮೇಲಿನ ಮುದ್ರಣಾಲಯದಲ್ಲಿಯೇ ಅಚ್ಚಾಯಿತು. ಇವನ ಕನ್ನಡ—ಲ್ಯಾಟಿನ್ ವ್ಯಾಕರಣವು ಇತರ ವಿದ್ವಾಂಸರು ಬರೆದ ಕನ್ನಡ—ಇಂಗ್ಲಿಷ್ ವ್ಯಾಕರಣ ಗ್ರಂಥಗಳಂತೆಯೇ ಇದೆ. ಅದನ್ನು ಅವನು Grammatica Canarico-Latina ad usum Scholarum ಎಂಬುದಾಗಿಯೂ, ಅವರೊಡನೆಯೇ ಪ್ರಕಟವಾದ ಕನ್ನಡ—ಲ್ಯಾಟಿನ್ ಛಂದೋಶಾಸ್ತ್ರದ ಗ್ರಂಥವನ್ನು Elementa Prosodiae Canarensis, Bangalorii, ಎಂಬುದಾಗಿ ಕರೆದಿದ್ದಾನೆ.

ಈ ಲಾಟಿನ್-ಕನ್ನಡ ವ್ಯಾಕರಣ ಮತ್ತು ಛಂದಸ್ಸು ಪುಸ್ತಕಗಳು 1869 ರಲ್ಲಿ ಎರಡನೇ ಬಾರಿಗೆ ಮುದ್ರಣವಾದುವು. ಇವನ್ನು ಈ ದೇಶದಲ್ಲಿ ಓದುವವರು ಯಾರು? ಆದರೆ ಅಂದಿನ ವಿದ್ವಾಂಸರು ಭಾರತೀಯ ಸಾಹಿತ್ಯವನ್ನು ಪಾಶ್ಚಾತ್ಯ ದೇಶಗಳಲ್ಲಿ ಪರಿಚಯಮಾಡಿಸುವ ಮಹತ್ತಾದ ಉದ್ದೇಶವನ್ನಿಟ್ಟು ಇಂಥಾ ಗ್ರಂಥಗಳನ್ನು ರಚಿಸಿದರೆಂಬುದನ್ನು ತಿಳಿಯಬೇಕಾಗಿದೆ. ತಮಿಳು, ಕನ್ನಡ, ಸಂಸ್ಕೃತ. ಪರ್ಷಿಯನ್ ಲ್ಯಾಟಿನ್ ಮತ್ತು ಜರ್ಮನ್ ಭಾಷೆಗಳಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿದ್ದ Rev. A Bouteloup ಇವನು ತನ್ನ ಈ ಮೇಲೆ ಹೇಳಿದ ಮೂರು ಕೃತಿಗಳ ಮೂಲಕ ಕನ್ನಡ ಸಾಹಿತ್ಯವನ್ನು ಲ್ಯಾಟಿನ್ ಭಾಷಾ ಪ್ರಪಂಚಕ್ಕೆ ಪರಿಚಯ ಮಾಡಿಕೊಟ್ಟು ಕೃತಾರ್ಥನಾದನು.

**೫. ಡೇನಿಯಲ್ ಸೇಂಡರ್ಸನ್ ಇವನಿಂದ ಪರಿಷ್ಕೃತ ಅರ್ಥಕೋಶ :—**

Rev. Daniel Sanderson ಇವನು 1840 ರಿಂದ ಮೊದಲ್ಗೊಂಡು ಹಲಕೆಲವು ಬೈಬಲ್ ಹೊತ್ತಗೆಗಳನ್ನು ಕನ್ನಡದಲ್ಲಿ ರಚಿಸಿದ್ದನು. ಆದರೆ 1855

* ಇದರ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಟ್ಟಿದೆ.

ರಿಂದಿತ್ತಲಾಗಿ ಅವನು ಪ್ರಚಂಡ ಕನ್ನಡ ಪಂಡಿತನಾಗಿ ತೋರ್ಪಡಿಸಿಕೊಂಡುದಲ್ಲದೆ ಹಲವು ಕನ್ನಡ ಗದ್ಯ ಮತ್ತು ಪದ್ಯ ಪಠ್ಯ ಪುಸ್ತಕಗಳನ್ನೂ ಇತರ ಸಾಹಿತ್ಯ ಗ್ರಂಥಗಳನ್ನೂ ಬರೆದನು. ಹೀಗೆ ಕೈಕೊಂಡ ಅವನ ಮೊದಲನೇ ಕೃತಿಯು ಕನ್ನಡ–ಇಂಗ್ಲಿಷ್ ಅರ್ಥಕೋಶವಾಗಿದೆ. ಇದು Rev. William Reeve ಇವನು 1830 ರಲ್ಲಿ ಸಂಪಾದಿಸಿದ ಅರ್ಥಕೋಶದ ಪರಿಷ್ಕೃತ ಮುದ್ರಣವಾಗಿದ್ದರೂ ಅದರಲ್ಲಿ Rev. Sanderson ಇವನು ಹಲವು ಬದಲಾವಣೆಗಳನ್ನು ಮಾಡಿದ್ದಾನೆ; ಹಲವೆಡೆ ತಿದ್ದಿದ್ದಾನೆ; ಹಲವು ಹೊಸ ಶಬ್ದಗಳನ್ನೂ ಸೇರಿಸಿದ್ದಾನೆ. ಇದು ಚಿಕ್ಕ ಮುದ್ರಣಾಕ್ಷರಗಳಲ್ಲಿ ಸುಂದರವಾಗಿ ಛಾಪಿಸಲ್ಪಟ್ಟ ಕೈಪಿಡಿಯಾಗಿ ಶಾಲೆಗಳಲ್ಲಿ ಉಪಯೋಗಿಸಲು ಅರ್ಹವಾದುದೆಂಬುದಾಗಿ ಅವನೇ ಹೇಳಿದ್ದಾನಲ್ಲದೆ ಈ ನಿಘಂಟು 1858 ರಲ್ಲಿ 700 demy ಪುಟಗಳಷ್ಟು ದೊಡ್ಡದಾಗಿ ಪ್ರಕಟವಾದುದು ಅನಂತರ ಹಲವು ಬಾರಿ ಪುನರ್ಮುದ್ರಣವಾಯಿತು. ಇದರಲ್ಲಿ ಕನ್ನಡ ಪದಗಳ ಅರ್ಥವು ಹೇಗೆ ಕೊಡಲ್ಪಟ್ಟಿದೆಯೆಂಬುದಕ್ಕೆ ಈ ಕೆಳಗಿನ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.—

> " ಕುಡಿಗಳ್—Kudigal, flashes, lightening.
>
> ಕರ್ಣಿಕ—Karnika ; ear-ring, pericarp of the lotus, the middle finger, the tip of the elephant's trunk.
>
> ಒಗರು—Woguru ; adj : as tringent, a tringent taste, infusion, extract etc.
>
> ಮುನಿಷಿ—Munshi ; Writer, Secretary, language teacher.

ಈ ಕನ್ನಡ–ಇಂಗ್ಲಿಷ್ ಅರ್ಥಕೋಶದ ಪ್ರಕಟಣೆಯೊಡನೆ Rev D. Sanderson ಇವನು 1858ರಲ್ಲಿ Village Dialogues in Canarese ಎಂಬ ಪುಸ್ತಕವನ್ನು ಬರೆದನು. ವಯಸ್ಕರಿಗೆ ಉಪಯುಕ್ತವಾದ 99 ಪುಟಗಳ ಈ ಕೃತಿಯಲ್ಲಿ ಹತ್ತು ವಿವಿಧ ವಿಚಾರಗಳ ಮೇಲೆ ಪ್ರಶ್ನೋತ್ತರ ರೂಪದಲ್ಲಿ ಬರೆದಿದ್ದಾನೆ. ಇದರ ಎರಡನೇ ಆವೃತ್ತಿಯು 1800ರಲ್ಲಿ ಬೆಂಗಳೂರಿನಲ್ಲಾಯಿತು. D. Sanderson ಇವನು ' ಕರ್ಣಾಟಕ ವಾರ್ತ್ತಿಕಾಯಿಸಿ ' ಪತ್ರಿಕೆಯಲ್ಲಿ ಹಲವು ವಿಚಾರಪೂರ್ಣವಾದ ಕನ್ನಡ ಲೇಖನಗಳನ್ನು ಬರೆದಿದ್ದಾನಲ್ಲದೆ ಅದೇ ಪತ್ರಿಕೆಯಲ್ಲಿ ಕನ್ನಡ ವ್ಯಾಕರಣವನ್ನು 155 demy ಪುಟಗಳಷ್ಟು ಧಾರಾವಾಹಿಯಾಗಿ ಪ್ರಕಟಿಸಲಿಕ್ಕೂ ಇವನು F. Kittel, John Garrett ಮೊದಲಾದವರೊಂದಿಗೆ ಸಹಕರಿಸಿದನು. ' ವೃತ್ತಾಂತ ಬೋಧಿನಿ ' ಪತ್ರಿಕೆಯಲ್ಲೂ ಅವನು ಲೇಖನಗಳನ್ನು ಬರೆದಿದ್ದನು.

**೬. ಡೇನಿಯಲ್ ಸೇಂಡರ್ಸನ್‌ನಿಂದ ಪೌರಾಣಿಕ ಕಥಾ ಸಂಗ್ರಹಗಳು :—**

Rev. Daniel Sanderson ಇವನು ತನ್ನ ' ಕಥಾ ಸಂಗ್ರಹ 'ವನ್ನು 1860ರ ಕಾಲದಲ್ಲಿ ಮೊದಲ ಬಾರಿಗೆ ಬರೆದು ಪ್ರಕಟಿಸಿದನು. ವಿವಿಧ ಪೌರಾಣಿಕ ಕತೆಗಳಿಂದ ಕೂಡಿದ ಈ ಹೊತ್ತಗೆಯು ಪುನಃ 1866ರಲ್ಲಿ ಹೊರಬಂತು. ಇದನ್ನು

ಅಂದಿನ ಎಲ್ಲಾ ಶಾಲೆಗಳಲ್ಲೂ ಪಠ್ಯಪುಸ್ತಕವಾಗಿಯೂ ಉಪಯೋಗಿಸಿದ್ದರು. ಅದೇ ಪುಸ್ತಕವು 1892ರಲ್ಲಿ ಪುನರ್ಮುದ್ರಣವಾದಾಗ 578 ಪುಟಗಳಷ್ಟು ದೊಡ್ಡದಾಯಿತು. ಅದರ ಕಡೇ ಮುದ್ರಣವು 1897 ರಲ್ಲಾದಾಗ ಅದು ಒಟ್ಟಾಗಿ 728 ಪುಟಗಳಾಯಿತು.

ಈ 'ಕಥಾ ಸಂಗ್ರಹ'ವು ಬೇರೆ ಬೇರೆ ಭಾಗಗಳಾಗಿ ಮತ್ತು ಕಾಂಡಗಳಾಗಿ ಪ್ರಕಟವಾಗಿವೆ. ಒಂದನೇ ಕಾಂಡದಲ್ಲಿ 'ಪಂಚತಂತ್ರ'ದ ಕತೆಗಳು. ಕೀರ್ತಿ ಕಥಾಮೃತನ ಕತೆ, ಧರ್ಮಕೇತನನ ಕತೆ. ತೆನಾಲಿ ರಾಮಕೃಷ್ಣನ ಕತೆ ಎಂದಿತ್ಯಾದಿಯಾಗಿ ಐವತ್ತು ಕತೆಗಳಿವೆ. ಅವನ ಭಾಷಾಶೈಲಿಯೂ ನಿರೂಪಣಾಕ್ರಮವೂ ಅತ್ಯುತ್ತಮವಾಗಿದೆ. ಇವರ ಎರಡನೇ ಭಾಗದಲ್ಲಿ ಶಿವಪುರಾಣದ ಕತೆಗಳು; ಶಿವ ಪೂಜೆಯ ಮಹತ್ವವನ್ನು ಕುರಿತಾದ ಕತೆಗಳು ಇತ್ಯಾದಿಯಾಗಿದ್ದು ಈ ಎರಡು ಭಾಗಗಳ ಕಥಾ ಸಂಕಲನವು ಪ್ರತ್ಯೇಕವಾಗಿ 377 ಪುಟಗಳ ಗ್ರಂಥವಾಗಿ ಮುದ್ರಣವಾಗಿದೆ.

ಈ 'ಕಥಾ ಸಂಗ್ರಹ'ದ ಮೂರನೇ ಕಾಂಡದಲ್ಲಿ ಮಹಾಭಾರತದ ಹತ್ತು ಕತೆಗಳು ಸವಿಸ್ತಾರವಾಗಿ ಹೇಳಲ್ಪಟ್ಟಿವೆ. ಅಮೃತಮಥನ ಹಿಡಿಂಬ ವಧೆ. ದುಷ್ಯಂತೋಪಾಖ್ಯಾನ ಮೊದಲಾದ ಕತೆಗಳೆಲ್ಲಾ ಅಂದಿನ ನಾಟಕ. ಯಕ್ಷಗಾನ ಆಟಗಳೊಂದಿಗೆ ಎಲ್ಲೆಲ್ಲೂ ಜನಪ್ರಿಯವಾಗಿದ್ದುವು. ಈ 'ಕಥಾ ಸಂಗ್ರಹ'ಗಳು ಹಲವು ಬಾರಿ ಪ್ರತ್ಯೇಕವಾಗಿ ಪುನರ್ಮುದ್ರಣವಾದುದೇ ಅದಕ್ಕೆ ಸಾಕ್ಷಿಯಾಗಿದೆ.

D. Sanderson ಇವನ 'ಕಥಾಸಂಗ್ರಹ'ದ ನಾಲ್ಕನೇ. ಐದನೇ ಮತ್ತು ಆರನೇ ಭಾಗಗಳು ಒಟ್ಟಾಗಿ 425 ಪುಟಗಳ ಗ್ರಂಥವಾಯಿತು. ನಾಲ್ಕನೇ ಭಾಗದಲ್ಲಿ ರಾಮಾಯಣದಿಂದ ಹತ್ತು ಕತೆಗಳನ್ನೂ. ಐದನೇ ಭಾಗದಲ್ಲಿ ದಶಾವತಾರದ ಕತೆಗಳನ್ನೂ ಕೊಟ್ಟಿದ್ದಾನೆ. ಆರನೇ ಭಾಗದಲ್ಲಿ ಪ್ರಸಿದ್ಧ ಕನ್ನಡ ಗಾದೆಗಳನ್ನು ಸಂಗ್ರಹಿಸಿದ್ದಾನೆ. ಹೀಗೆ ಈ ಕಥಾ ಸಂಗ್ರಹವು ಬಹು ಪರಿಪುಷ್ಟವಾದ ಕನ್ನಡ ಗದ್ಯ ಗ್ರಂಥವಾಗಿ ಕಳೆದ ಶತಮಾನದಲ್ಲಿ ಪ್ರಸಿದ್ಧವಾಗಿತ್ತು.

**೭. ಸೇಂಡರ್ಸನ್‌ನಿಂದ ಕನ್ನಡ ಜೈಮಿನಿ ಭಾರತದ ಭಾಷಾಂತರ:—**

ಕಳೆದ ಶತಮಾನದಲ್ಲಿ ಜನಪ್ರಿಯವಾಗಿದ್ದ ಹಿಂದಿನ ಕಾಲದ ಕನ್ನಡ ಕಾವ್ಯ ಗ್ರಂಥಗಳಲ್ಲಿ ಲಕ್ಷ್ಮೀಶನ ಜೈಮಿನಿ ಭಾರತವು ಪ್ರಮುಖವಾದುದಾಗಿದೆ. Daniel Sanderson ಇವನು ಈ ಕಾವ್ಯದ ಅತೀ ಉತ್ತಮ ಭಾಗಗಳನ್ನು ಇಂಗ್ಲಿಷ್‌ನಲ್ಲಿ ಗದ್ಯರೂಪದಲ್ಲಿ ಬರೆದನು. ಹಾಗೆ ಅನುವಾದವಾದ ಪ್ರತಿ ಪದ್ಯಭಾಗದ ಕೆಳಗೆ ಅಥವಾ ಆಯಾ ಪುಟದ ಕೆಳಗೆ ಟೀಕೆ. ಅರ್ಥ ಇತ್ಯಾದಿಗಳನ್ನೂ ಕೊಡಲಾಗಿವೆ. 217 demy ಪುಟಗಳ ಈ ಇಂಗ್ಲಿಷ್ ಜೈಮಿನಿ ಭಾರತವು ಕ್ರಿ.ಶ. 1852 ರಲ್ಲಿ ಬೆಂಗಳೂರು ವೆಸ್ಲೀಯನ್ ಮುದ್ರಣಾಲಯದವರಿಂದ ಛಾಪಿಸಲ್ಪಟ್ಟು ಪ್ರಕಟವಾಯಿತು. ಇದರಿಂದ ಒಂದೆರಡು ಪದ್ಯಗಳ ಭಾಷಾಂತರವನ್ನು ನಿದರ್ಶನಾರ್ಥವಾಗಿ ಎತ್ತಿ ಕೊಡಲಾಗಿದೆ:—

ಕೆನೆವಾಲಗಡೆದು ನವನೀತವಂ ತೆಗೆದು… …

………………………………………………

…. ಜಾಣರಿದನರಿದು ಮತ್ಸರವನುಳಿದಾಲಿಸುವುದು,"

ಈ ಪದ್ಯಭಾಗವು ಇಂಗ್ಲಿಷ್‌ಗೆ ಹೀಗೆ ಭಾಷಾಂತರವಾಗಿದೆ. ಯಾವ ಪದ್ಯಭಾಗದ ಭಾಷಾಂತರವನ್ನು ತೆಗೆದುಕೊಂಡರೂ ಅದು ಚೊಕ್ಕವಾಗಿ ಅನುವಾದವಾಗಿದೆಯೆಂದು ಓದುಗನಿಗೆ ತಿಳಿಯುತ್ತದೆ—

"If instead of churning the cream, taking the fresh butter, and enjoying it, one should put in vinegar and spoil the cream, is the cow to blame? So if instead of hearing the poem, examining, and fully understanding the meaning of it, one should find fault and revile it because modern, what fault is there in the poet? Let all wise men know this, lay aside envy and listen."

ಈ ಕೆಳಗಿನ ಪದ್ಯಭಾಗವು ಹೇಗೆ ಇಂಗ್ಲಿಷ್‌ನಲ್ಲಿ ಹೇಳಲ್ಪಟ್ಟಿದೆಯೆಂಬುದನ್ನೂ ನೋಡುವುದು ವಿಹಿತವಾಗಿದೆ—

"ವನರುಹ ಭವಾಂತರದೊಳಗೈವತ್ತು ಕೋಟಿಯೋ
ಜನದ ವಿಸ್ತೀರ್ಣದಿಳೆಯೆಸೆ ಸಪ್ತ ಶರನಿಧಿಗ
ಳನುವೇಷ್ಟಿಸಿರಲದರ ಮಧ್ಯದೊಳಿಹುದು ವಿನುತ
ಜಂಬೂದ್ವೀಪಮದರ ನಡುವೆ
ಅನವರತ ಸುರತಗೋಷ್ಠಿಗೆ ನೆರೆದ ನಿರ್ಜರಾಂ
ಗನೆಯರಂಗಛವಿಯ ಹಬ್ಬುಗೆಯೋ ಕಾರದಿಂ
ಚಿನ ಮಹಾರಾಶಿಯೋ ಪೇಳೆನಲ್ಕೆರವ ಕನಕಾಚಲಂ ಕಣ್ಗೆಸೆದುದೂ"

"Within the egg of Brahma is the earth, 500,000,000 Yojanas in extent, and encircled by the seven seas. In the centre (of the earth) is the celebrated Jambu Dwipa. In the midst of this the bright gold mountain glitters to the eye like the aggregate beauty of the celestial nymphs met for perpetual happy intercourse, or a mass of autumnal lightening."

ಹೀಗೆ ಭಾಷಾಂತರಿಸಿದಲ್ಲದೆ ಕೆಲವು ಪದಗಳ ಅರ್ಥವನ್ನು ಆಯಾ ಪುಟದ ಕೆಳಗೆ ಟೀಕೆ ಸಮೇತವಾಗಿ ಕೊಟ್ಟಿದ್ದಾನೆ—ಉದಾ:—

"**ಯೋಜನಾ:** 4,500,000,000 miles; **ಸಪ್ತಶರನಿಧಿ:** The seven great insular continents and the seven seas are supposed to form alternate concentric circles……**ಕನಕಾಚಲ**—Mount meru;

ಕಾರಮಿಂಚಿನ ಹಬ್ಬುಗೆ–Lightening of the wet season, more brilliant by contrast with the dark clouds.

### ೮. ಜಾರ್ಜ್ ವೂರ್ತ್ ಇವನಿಂದ ‘ಕರ್ನಾಟಕ ಕಾವ್ಯಮಾಲಿಕೆ’ಗಳು:—

ಕನ್ನಡ ಸಾಹಿತ್ಯದ ಹಳಗನ್ನಡ ಗ್ರಂಥಭಂಡಾರದಿಂದ ಹಲವು ಪ್ರಾಚೀನ ಕಾವ್ಯ ಗ್ರಂಥಗಳನ್ನು ಅವುಗಳ ಹಳನೆಯಿಂದ ಎತ್ತಿ ಹೊರತಂದು ತಿರುವಿಹಾಕಿದ ಇನ್ನೊರ್ವ ಪಾಶ್ಚಾತ್ಯ ಸಾಹಿತಿಯು Rev. George A. Wurth ಇವನು. ಪ್ರಾಚೀನ ಕಾವ್ಯಗಳಿಂದ ಉತ್ತಮವಾದ ಭಾಗಗಳನ್ನು ಆಯ್ದು ಸಂಗ್ರಹಿಸಿದ ಇವನ ಪುಸ್ತಕವು Canarese Poetical Anthology with Vocabulary and notes ಎಂಬ ಹೆಸರಿನಿಂದ 400 ಪುಟಗಳಷ್ಟು ದೊಡ್ಡದಾಗಿ 1868 ರಲ್ಲಿ ಪ್ರಕಟವಾಯಿತು. ಇದನ್ನು Rev. J. Garrett ಇವನು ಪರಿಷ್ಕರಿಸಿ ಅನಂತರ ಒಂದೆರಡು ಬಾರಿ ಪುನರ್ಮುದ್ರಿಸಿದನು.

ಕನ್ನಡದಲ್ಲಿ ಇದನ್ನು "ಪ್ರಾಕ್ಕಾವ್ಯ ಮಾಲಿಕೆ" ಎಂದು ಕರೆದಿದೆ. ಪ್ರಾಚೀನ ಕವಿಗಳ ಉತ್ತಮವಾದ ವೃತ್ತ, ಕಂದ, ಷಟ್ಪದಿಗಳಲ್ಲದೆ ಸರ್ವಜ್ಞನ ತ್ರಿಪದಿಗಳು ದಾಸರ ಪದಗಳು ಮತ್ತು ಕಳೆದ ಶತಮಾನದಲ್ಲಿದ್ದ ದೇಶೀಯ ಕವಿಗಳಿಂದ ರಚಿತವಾದ ಪದ್ಯಗಳೂ ಸೇರಿ ಅದೊಂದು ಸಮೃದ್ಧವಾದ ಸಾಹಿತ್ಯ ಕೈಗನ್ನಡಿಯಾಗಿದೆ. ಗ್ರಂಥದ ಕೊನೆಯಲ್ಲಿ ಕಠಿಣ ಶಬ್ದಗಳ ಅರ್ಥಕೋಶವನ್ನು ಕನ್ನಡದಲ್ಲೂ ಇಂಗ್ಲಿಷ್‌ನಲ್ಲೂ ಕೊಟ್ಟಿದ್ದಾನೆ. ಉದಾಹರಣೆಗೆ:—

ಅಂಧ— ಕತ್ತಲೆ, ಕುರುಡು, darkness, blind.
ಅಂಬರ—ಆಕಾಶ, ವಸ್ತ್ರ, sky, clothes.
ಅಜೇಯ—ಅಪಜಯವಿಲ್ಲದ, Invincible.
ಅಂಬಿಕೆ—ತಾಯಿ mother, Parvati.

Rev. G. A. Wurth ಇವನ ಈ ‘ಕಾವ್ಯಮಾಲಿಕೆ’ಯು 1865 ರಿಂದಲೇ ಶಾಲೆಗಳಲ್ಲಿ ಪಠ್ಯಪುಸ್ತಕವಾಗಿಯೂ ಉಪಯೋಗಿಸಲ್ಪಟ್ಟಿತ್ತು. 1875 ರಲ್ಲಿ ಇದರ ಎರಡನೇ ಮುದ್ರಣವಾದಾಗ ಇದು 577 ಪುಟಗಳ ಗ್ರಂಥವಾಯಿತು. ಸುಮಾರು ನಲ್ವತ್ತು ಪುಟಗಳಷ್ಟು ಶಬ್ದಕೋಶದೊಡನೆ ಎಲ್ಲಾ ಜೈನ ವೈಷ್ಣವ, ಶೈವ ಇತ್ಯಾದಿ ಕವಿಗಳ ಕಾವ್ಯಗಳಿಂದ ಬೋಧಪ್ರದವಾದ ಭಾಗಗಳನ್ನು ಇನ್ನೂ ಸೇರಿಸಲಾಗಿತ್ತು. ಪ್ರತಿ ಪದ್ಯಭಾಗದ ತಾತ್ಪರ್ಯವನ್ನೂ ಇಂಗ್ಲಿಷ್‌ನಲ್ಲಿ ಸೂಕ್ಷ್ಮವಾಗಿ ಕೊಡಲಾಗಿದೆ. ಉದಾಹರಣೆಗೆ ಈ ಕೆಲವು ಪದ್ಯಭಾಗಗಳನ್ನು ಕೊಡಲಾಗಿದೆ.

“ಮೇರುವಿಂಗೆಣೆ ಇಲ್ಲ, ಧಾರುಣಿಗೆ ಪಡಿಯಿಲ್ಲ;
ಕಾರಣಿಕರಪ್ಪ ಹಿರಿಯರ ಸಂಸರ್ಗ
ವಾರಿಂದಲಧಿಕ ಸರ್ವಜ್ಞ.

(Nothing is equal to the Meru; nothing like the Earth; nothing like union with elders.)

ಒಳ್ಳಿದರ ಒಡನಿರ್ದ ಕಳ್ಳ ಒಳ್ಳಿದನಕ್ಕು
ಒಳ್ಳಿದ ಕಳ್ಳನೊಡನಾಡೆ ಅವ ಶುದ್ಧ
ಕಳ್ಳನೆಯಕ್ಕು ಸರ್ವಜ್ಞ.

(A thief in the company of the good will become a good man, and vice versa.)

ಮಂಡೆ ಬೋಳಾದವರ ಕಂಡಿನ್ನು ನಂಬದಿರು,
ಖಂಡಿತವುಪ್ಪ ಪರಜ್ಞಾನ ವಿಷಯವನು
ಕಂಡು ನಂಬುವದು ಸರ್ವಜ್ಞ !

(Do not trust bald heads—meaning, ascetics.)

Rev. G. A. Wurth ಇವನು 1860 ರ ಕಾಲದಲ್ಲಿ ಬರೆದಿದ್ದ ೨೦೦ ಪುಟಗಳ "ಈಸೋಫನ ಕತೆಗಳು" ಇದು 1869ರಲ್ಲಿ ನಾಲ್ಕನೇ ಬಾರಿಗೆ ಮುದ್ರಣವಾಯಿತು. ಅಲ್ಲದೆ ಅವನ "ಕಥಾ ಸಂಗ್ರಹ" ಎಂಬ ಇನ್ನೊಂದು ೨೨೦ ಪುಟಗಳ ಪುಸ್ತಕವೂ ಅದರೊಡನೆಯೇ ಮೂರನೇ ಬಾರಿಗೆ ಬಾಸೆಲ್ ಮಿಷನ್‌ನವರಿಂದ ಮುದ್ರಣವಾಗಿ ಪ್ರಕಟವಾಯಿತು. ಇವೆಲ್ಲವೂ ಅಂದು ತುಂಬಾ ಪ್ರಚಾರವಿದ್ದ ಪಠ್ಯಪುಸ್ತಕಗಳಾಗಿದ್ದುವು.

### ೯. ಜಾರ್ಜ್ ವೂರ್ತ್ ಇವನ ಕನ್ನಡ ಛಂದೋಶಾಸ್ತ್ರ ಜ್ಞಾನ :—

Rev. Bouteloup ಇವನಂತೆ George Wurth ಇವನು ಕನ್ನಡ ಛಂದೋಶಾಸ್ತ್ರದ ಬಗ್ಗೆ ವ್ಯಾಸಂಗ ನಡೆಸಿದ ಐರೋಪ್ಯಾ ಸಾಹಿತಿಗಳಲ್ಲಿ ಮೊದಲನೆಯವನೆಂದು ಹೇಳಬಹುದು. ಸುಮಾರು 1690 ಕನ್ನಡ ವೃತ್ತ, ಕಂದ, ಷಟ್ಪದಿ, ಚೌಪದಿ ಮತ್ತಿತರ ಪದ್ಯ ಭಾಗಗಳನ್ನು ಕೊಟ್ಟು ಅವನ "ಪ್ರಾಕ್ಕಾವ್ಯ ಮಾಲಿಕೆ"ಯ ಕಡೇ ಭಾಗದಲ್ಲಿ ಛಂದೋ ವಿವರಗಳನ್ನೂ ಸಾಕಷ್ಟು ಕೊಟ್ಟಿದ್ದಾನೆ. ಉದಾಹರಣೆಗೆ ಅದರಿಂದ ಪ್ರಸ್ತರಿತ ಒಂದೆರಡು ಪದ್ಯಭಾಗಗಳನ್ನು ಇಲ್ಲಿ ಕೊಡಲಾಗಿದೆ—

ಇಲ್ಲಿ ನಮ್ಮ ಸುಖ ಕಷ್ಟ—U—U UUU—
ಇಲ್ಲಿ ನಮ್ಮ ಲಾಭ ನಷ್ಟ—U—U—U—U
ನಮ್ಮ ಕ್ಷೇಮ ತಾಪವು—U—U—U—
ನಮ್ಮ ನೀತಿ ಪಾಪವು—U—U—U—

ಹೀಗೆ ಕೊಟ್ಟು ಇದರ ಗಣ ಪ್ರಸ್ತಾರಗಳನ್ನು ಕುರಿತು ವಿವರಿಸಿದ್ದಾನೆ. ಇದೇ ರೀತಿ ಹಲವು ಪಂಕ್ತಿಗಳನ್ನು ಉದಾಹರಿಸಿ ಮತ್ತು ಪ್ರಸ್ತರಿಸಿ ಅವುಗಳ ನಿಯಮಗಳನ್ನು ವ್ಯಕ್ತಪಡಿಸಿದ್ದಾನೆ—

ಕ್ರಿಸ್ತನು ಕ್ರಿಯೆಕೆ ಕೊಂಡ ಜನಾಂಗಪಿದೇವೆ.
—UU —UU —UU —UU —U
ರಾಜನ ಚಿತ್ತಕೆ ಒಪ್ಪಲಿ ದಾಸರ ಸೇವೆ
—UU —UU —UU —UU —U

ಈ ರೀತಿಯಲ್ಲಿ ಬರೆವಣಿಗೆ ಮತ್ತು ವಿವರಣೆಗಳು ಅಂದಿನ ವಿದ್ಯಾರ್ಥಿಗಳಿಗೆ ಎಷ್ಟು ಮನದಟ್ಟಾಗುವಂತಿತ್ತು ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ. Rev. Wurth ಇವನು Native Christian Literature ಎಂಬುದಾಗಿ ಬರೆದ ಚಿಕ್ಕ ಪೀಠಿಕೆಯೊಂದರಲ್ಲಿ ಹೀಗಂದಿರುವನು—

"ಕರ್ಣಾಟಕ ದೇಶದಲ್ಲಿ ಕ್ರೈಸ್ತ ಧರ್ಮ ಹಿಡಿದವರು ಸ್ವಲ್ಪ ಜನ; ಯಾಕಂದರೆ ಈ ಧರ್ಮ ಕರ್ಣಾಟಕ ಜನರೊಳಗೆ ಇನ್ನು ಬಹಳ ಪ್ರಕಟವಾಗಿರುವುದಿಲ್ಲ. ಆದರೂ ಈ ಧರ್ಮಕ್ಕೆ ಸಂಬಂಧವಾದ ಕೆಲವು ಕೃತಿಗಳು ಅವೆ. ಅವುಗಳಲ್ಲಿ ಪ್ರಸಿದ್ಧಿಯಾಗಿರುವ 'ಗೀತ ಪುಸ್ತಕ' ಎಂಬ ಕೃತಿಯಿಂದ ಕೆಲವು ಗೀತಗಳನ್ನು ಆರಿಸಿಕೊಂಡಿದ್ದೇವೆ. ಅವು ಪೂರ್ವದಲ್ಲಿ ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಲ್ಲಿ ರಚನೆಯಾಗಿದ್ದವು. ಇತ್ತಲಾಗಿ ಕೆಲವರು ಅವನ್ನ ಅದೇ ಛಂದಸ್ಸಿನಿಂದ ಕನ್ನಡಿಸಿದರು. ಆ ಭಾಷೆಗಳ ಛಂದಸ್ಸಿನಲ್ಲಿಯೂ ಇವೇ ಗಣಗಳೆಲ್ಲ ಇವೆ. ಅಂತ್ಯಪ್ರಾಸ ಮಾತ್ರ ವರ್ತಿಸುವದು. ಆದರೆ ಇದಾದರೂ ಕೆಲವು ಕಾವ್ಯಗಳಲ್ಲಿ ಇಲ್ಲ. ಎಲ್ಲಾ ಕಾವ್ಯಗಳು ವಿಶೇಷವಾಗಿ ಗಣ ನಿಬಂಧನೆಯಿಂದ ಆಗುವವು. ಗುರು, ಲಘು ಬೇದದ ವಿಷಯದಲ್ಲಿ ಮಾತ್ರ ಆ ಭಾಷೆಗಳ ಛಂದಸ್ಸಿಗೂ ಕನ್ನಡ ಛಂದಸ್ಸಿಗೂ ಒಂದು ದೊಡ್ಡ ಹೆಚ್ಚು ಕಡಿಮೆಯಿದೆ."

ಹೀಗೆ ಬರೆಯುತ್ತಾ ಮುಂದುವರಿದು ಆ ವಿಷಯದಲ್ಲಿ ಹೀಗನ್ನುತ್ತಾನೆ—

"........ಸ್ವಾಭಾವಿಕವಾಗಿ ಒಂದು ಅಕ್ಷರ ಗುರುವಾದರೂ ಸ್ವರಿತ, ಉದಾತ್ತ, ಅನುದಾತ್ತ ಎಂಬೀ ಮೂರು ತರದ ಸ್ವರ ಭೇದಗಳಲ್ಲಿ ಒಂದನೇದು ಅಥವಾ ಯರಡನೇದು ಆ ಅಕ್ಷರಕ್ಕೆ ಬೀಳದ ಪಕ್ಷದಲ್ಲಿ ಅದು ಲಘುವೇ ಸರಿ. ಉದಾಹರಣೆ : ಓ ಕರ್ತ : ಇಲ್ಲಿ ಓ ಎಂಬ ನಿಪಾತಕ್ಕೆ ಸ್ವಾಭಾವಿಕವಾಗಿ ಗುರುತ್ವ ಇದ್ದುದರಿಂದ ಮತ್ತು ಸ್ವಂತ ಉದಾತ್ತಗಳು ಇಲ್ಲದ್ದರಿಂದ ಲಘುತ್ವ ಬರುವದು ......"

**೧೦. ಗಸ್ತಾವ್ ಕೀಸ್ ಇವನಿಂದ ವಿವಿಧ ಬಗೆಯ ಪಠ್ಯಪುಸ್ತಕಗಳು :—**

ಮದ್ರಾಸಿನಲ್ಲಿದ್ದ Rev. Gustav Kies ಇವನ ವಿಷಯವಾಗಿ ಹಿಂದಿನ ಭಾಗದಲ್ಲಿ ಹೇಳಲಾಗಿದೆ. ಇವನು ಬರೆದ ಕನ್ನಡ ಪಠ್ಯಪುಸ್ತಕಗಳ ಪೈಕಿ Short Stories in Canarese ಎಂಬ 133 ಪುಟಗಳ ಕಥಾಸಂಗ್ರಹವು 1859ರಲ್ಲಿ ಪ್ರಕಟವಾಯಿತು. ಅದರ ನಂತರ 1860 ರಲ್ಲಿ "ಭೂಗೋಳ ಹಿಂದೂಸ್ಥಾನ" ಎಂಬ 30 ಪುಟಗಳ ಚಿಕ್ಕ ಪಠ್ಯಪುಸ್ತಕವೂ 1863 ರಲ್ಲಿ "ಭೂಗೋಳ ವಿದ್ಯಾಸಾರ" ಎಂಬ 56 ಪುಟಗಳ ಪುಸ್ತಕವೂ ಹೊರಬಂದುವು. 1867 ರಲ್ಲಿ ಈ ಉಪಯುಕ್ತವಾದ "ಭೂಗೋಳ ವಿದ್ಯಾಸಾರ"ವು ಕರ್ಣಾಟಕದ ಎಲ್ಲಾ ಭಾಗಗಳಲ್ಲೂ ಪಠ್ಯಪುಸ್ತಕವಾಗಿ ಉಪಯೋಗಿಸಲ್ಪಟ್ಟಿತಲ್ಲದೆ ಅದರ ನಂತರ ಅದು ಒಂದೆರಡು ಬಾರಿ ಪುನರ್ಮುದ್ರಣವಾಯಿತು. ಅದೇ ವರ್ಷ ಅವನ "ಭೂಗೋಳ ಶಾಸ್ತ್ರಸಾರ" ಎಂಬ 58 ಪುಟಗಳ

ಪಠ್ಯಪುಸ್ತಕವು ಪ್ರಕಟವಾಯಿತು. ಇದು ಸಹ ಭೂಗೋಳ ಶಾಸ್ತ್ರವನ್ನು ಕುರಿತಾದ ಸಮರ್ಪಕವಾದ ಹೊತ್ತಗೆಯಾಗಿದ್ದು ಎಲ್ಲಾ ದರ್ಜೆಗಳಿಗೂ ಪಠ್ಯಪುಸ್ತಕವಾಗಿ ಬಹಳ ವರ್ಷಗಳ ವರೆಗೂ ಬಳಸಲ್ಪಟ್ಟಿತ್ತು.

Gustav Kies ಇವನು ಕನ್ನಡ ವ್ಯಾಕರಣಗಳನ್ನೂ ಬರೆದಿರುವನು. 1860 ರಲ್ಲಿ ಹೊರಬಂದ ಅವನ 64 ಪುಟಗಳ " ಕನ್ನಡ ಬಾಲವ್ಯಾಕರಣ "ವು ಎಲ್ಲಾ ಕನ್ನಡ ಪ್ರಾಂತಗಳ ವಿದ್ಯಾ ಇಲಾಖೆಯವರಿಂದ ಅಂಗೀಕರಿಸಲ್ಪಟ್ಟಿತ್ತು. 1863 ರಲ್ಲಿ ಅದೇ ಪುಸ್ತಕವು ಪುನರ್ಮುದ್ರಣವಾಯಿತಲ್ಲದೆ ಮತ್ತೊಂದು ಪ್ರಶ್ನೋತ್ತರ ಕನ್ನಡ ವ್ಯಾಕರಣವನ್ನೂ ಬರೆದನು. ಅವನ ಪುಸ್ತಕಗಳಲ್ಲಿ ಹಲವು ಬಳ್ಳಾರಿ ಮಿಷನ್ ಛಾಪಖಾನೆಯಲ್ಲಿಯೇ ಸುಂದರವಾಗಿ ಮುದ್ರಣವಾಗಿ ಪ್ರಕಟಿಸಲಾದುವು. Gustav Kies ಇವನು ಮದ್ರಾಸು ಆಧಿಪತ್ಯದಲ್ಲಿ ಅಂದಿದ್ದ ಪಾಶ್ಚಾತ್ಯ ವಿದ್ಯಾತಜ್ಞರಲ್ಲಿ ಒಬ್ಬನು. ನವೀನ ಪಾಠ ಕ್ರಮಕ್ಕನುವಾಗಿ ಕನ್ನಡ. ತಮಿಳು ಮತ್ತು ತೆಲುಗು ಭಾಷೆಗಳಲ್ಲೂ ಇಂಥಾ ಚೊಕ್ಕವಾದ ಮತ್ತು ಚಿಕ್ಕದಾದ ಹಲವು ಪಠ್ಯಪುಸ್ತಕಗಳನ್ನು ರಚಿಸಿರುವನು.

### ೧೧. ರೆ॥ ಕೇಮ್ಯರ್ ಇವನಿಂದ ಇಂಗ್ಲಿಷ್ ವ್ಯಾಕರಣ ಕನ್ನಡದಲ್ಲಿ!

Rev. C. F. Chamier ಇವನು ಗಣನೀಯ ಕನ್ನಡ ಸಾಹಿತಿಯಾಗಿರದಿದ್ದರೂ ಭಾಷಾಭೋಧೆಯ ದೃಷ್ಟಿಯಿಂದ ಇವನು ಬರೆದ ಒಂದೆರಡು ಪಠ್ಯಪುಸ್ತಕಗಳಲ್ಲಿ " Elements of English Grammar " ಇದನ್ನು ಕನ್ನಡದಲ್ಲಿ ಬರೆದದ್ದು ಆ ಕಾಲದಲ್ಲಿ ಪ್ರಸಿದ್ಧವಾಗಿತ್ತು. " ಕನ್ನಡ ಭಾಷೆಯಲ್ಲಿ ತರ್ಜುಮೆ ಮಾಡಲ್ಪಟ್ಟಂಥಾ ಇಂಗ್ಲಿಷ್ ವ್ಯಾಕರಣ " ಎಂಬ 137 ಪುಟಗಳ ಈ ಪಠ್ಯಪುಸ್ತಕವು ಬೆಂಗಳೂರು ಕೇಥೊಲಿಕ್ ಮಿಷನ್‌ನವರಿಂದ ಪ್ರಕಾಶಿಸಲಾಯಿತು. ಪ್ರಶ್ನೋತ್ತರ ಶೈಲಿಯಲ್ಲಿ ಬರೆದ ಈ ಇಂಗ್ಲಿಷ್—ಕನ್ನಡ ವ್ಯಾಕರಣದಿಂದ ನಿದರ್ಶನಾರ್ಥವಾಗಿ ಈ ಕೆಳಗಿನ ಭಾಗಗಳನ್ನು ಎತ್ತಿ ಹೇಳಲಾಗಿದೆ—

" What is number ?

" ವಚನವೆಂಬುದೇನು ?

" The distinction of one from many.

" ಏಕ ಮತ್ತು ಅನೇಕ ವಸ್ತುಗಳಿಗೆ ಇರುವ ಭೇದ.

" How many cases have nouns ?

" ನಾಮ ವಾಚಕಗಳಲ್ಲಿ ಎಷ್ಟು ವಿಭಕ್ತಿಗಳುಂಟು ?

" Three, namely the nominative, the possessive and the objective.

" ಮೂರು. ಯಾವುವೆಂದರೆ ಕರ್ತೃ ವಿಭಕ್ತಿ. ಸಂಬಂದ ವಿಭಕ್ತಿ ಮತ್ತು ಕರ್ಮ ವಿಭಕ್ತಿ.

" What is the first rule of the syntax ?

" ವಾಕ್ಯ ರಚನೆಯ ಮೊದಲನೆಯ ಸೂತ್ರ ಯಾವುದು ?

"A verb must agree with its subject in number and person, e.g I speak."

"ಕ್ರಿಯಾಪದವು ತನ್ನ ಆಖ್ಯೆಗೆ ವಚನದಲ್ಲಿ ಯಾ ಪುರುಷನಲ್ಲಿಯೂ ಹೊಂದಿಕೆಯಾಗಿರಬೇಕು. ಉದಾ: ನಾನು ಮಾತಾಡುತ್ತೇನೆ."
ಇಂಥಾ ಪುಸ್ತಕಗಳು ಇಂದು ಏಕೆ ಬರೆಯಲ್ಪಡುತ್ತಿಲ್ಲವೆಂದು ಕೇಳಬೇಕಾಗಿದೆ. ಎರಡು ಭಾಷೆಗಳನ್ನೂ ಒಂದೇ ಪುಸ್ತಕದ ಮೂಲಕ ಕಲಿಸುವ ಈ ಕ್ರಮವು ಆ ಕಾಲದಲ್ಲಿ ಎಷ್ಟು ಜನಪ್ರಿಯವಾಗಿ ಎಲ್ಲಾ ಶಾಲೆಗಳಲ್ಲಿ ಪಠಿಸುತಿದ್ದರೋ ಅದು ಈ ಕಾಲಕ್ಕೆ ಹೇಗೆ ಬೇಡವಾಯಿತೆಂಬುದನ್ನು ತಿಳಿಯಲಾರದೇ ಇದ್ದೇವೆ.

C. F. Chamier ಇವನು ಬರೆದ ರೀತಿಯಲ್ಲಿಯೇ ಮತ್ತು ಚಿಕ್ಕ ಮಕ್ಕಳಿಗೆ ಅನ್ವಯವಾಗುವ ಪ್ರಾಥಮಿಕ ಪಠ್ಯಪುಸ್ತಕಗಳನ್ನು ರಚಿಸಿದ ಹಲವರಲ್ಲಿ Liston Grathwaite ಇವನೊರ್ವನು. 1871ರಲ್ಲಿ ಇವನು "ಕನ್ನಡ ಪಾಠಗಳ ಮೊದಲನೇ ಪುಸ್ತಕವು" ಎಂಬ ಚಿಕ್ಕ ಪುಸ್ತಕವನ್ನೂ 1876 ರಲ್ಲಿ 'An English Primer' ಎಂಬ 62 ಪುಟಗಳ ಹೊತ್ತಗೆಯನ್ನು ಕನ್ನಡದಲ್ಲಿ ವಿವರಣೆ ಸಹಿತವಾಗಿಯೂ ಬರೆದನು. ಕೆಳ ದರ್ಜೆಗಳಿಗೆ ಉಪಯುಕ್ತವಾದ L. Grathwaite ಇವನ ಪಠ್ಯಪುಸ್ತಕಗಳಲ್ಲಿ ಮತ್ತೊಂದು 1877 ರಲ್ಲಿ ಮುದ್ರಣವಾದ "ಇಂಗ್ಲಿಷ್ ಮೊದಲನೇ ಪುಸ್ತಕವು" ಇವೆಲ್ಲಾ ಒಂದಲ್ಲ ಒಂದು ರೀತಿಯಲ್ಲಿ ಇಂದಿನ ಪುಸ್ತಕಗಳಿಗಿಂತಾ ಎಷ್ಟೋ ಉತ್ತಮಮಟ್ಟದಲ್ಲಿದ್ದುವೆಂಬಂತೆ ತೋರುತ್ತವೆ.

## ೧೨. ಸ್ಟಿವನ್‌ಸನ್ ಇವನ "ಮುದ್ರಾಮಂಜೂಷ" ಮತ್ತು 'ದಾಸರ ಹಾಡುಗಳು'—

Rev. John Stephenson ಇವನು ತುಮಕೂರಿನಲ್ಲಿ ಕ್ರೈಸ್ತ ಗುರುವಾಗಿದ್ದ ಇನ್ನೊರ್ವ ಕನ್ನಡ ಪಂಡಿತನು. ಕನ್ನಡ ಸಂಸ್ಕೃತ ತೆಲುಗು ಮತ್ತು ತಮಿಳು ಭಾಷೆಗಳಲ್ಲಿ ಏಕ ಸಮಾನವಾದ ಪಾಂಡಿತ್ಯವನ್ನು ಗಳಿಸಿದ್ದನು. ಇವನ ಗ್ರಂಥಗಳಲ್ಲಿ 'ಮುದ್ರಾ ಮಂಜೂಷ' ಸಂಸ್ಕೃತ ಕೃತಿಯು ಕನ್ನಡ ಭಾಷಾಂತರವು ಅತ್ಯುತ್ತಮವಾದುದಾಗಿದೆ. 396 demy ಪುಟಗಳ ಈ ಪುಸ್ತಕವು 1873 ರಲ್ಲಿ ಪ್ರಕಟವಾಗಲು ಅದು ವಿಶ್ವವಿದ್ಯಾಲಯದ ಎಲ್ಲಾ ದರ್ಜೆಗಳಿಗೂ ಪಠ್ಯಪುಸ್ತಕವಾಗಿ ಹಲವು ವರ್ಷಗಳ ಕಾಲ ಉಪಯೋಗಿಸಲ್ಪಟ್ಟಿತು. ಆ ಗ್ರಂಥದ ಪರಿಷ್ಕೃತ ಮುದ್ರಣವೂ 1895 ರಿಂದೀಚೆಗೆ ಆಯಿತು.

Rev. Stephenson ಇವನ ಭಾಷಾವಿಜ್ಞಾನ ಮತ್ತು ಅನುವಾದ ಕ್ರಮ ಇವೆರಡೂ ಉನ್ನತಮಟ್ಟದ್ದಾಗಿದೆಯೆಂದು ಎಲ್ಲಾ ವಿದ್ವಾಂಸರೂ ಪರಿಗಣಿಸಿದ್ದಾರೆ. ಉದಾಹರಣೆಗೆ ಆ ಗ್ರಂಥದಿಂದ ಒಂದು ಶ್ಲೋಕವನ್ನೂ ಅದರ ಭಾಷಾಂತರವನ್ನೂ ಕೆಳಗೆ ಕೊಡಲಾಗಿದೆ—

ಚಿಂತಾಯಶ್ಚ ಚಿತಾಯಾಶ್ಚ ಬಿಂದು ಮಾತ್ರಂ ವಿಶಿಷ್ಯತೆ।
ಚಿತಾ ದಹತಿ ನಿರ್ಜೀವಂ ಚಿಂತಾ ದಹತಿ ಜೀವಿನಂ॥

(ಚಿಂತೆಗೂ ಚಿತೆಗೂ ನಡುವೆ ಒಂದು ಸೊನ್ನೆ ಮಾತ್ರ ವಿಶೇಷವು; ಚಿತೆಯು ಜೀವವಿಲ್ಲದ ಶವವನ್ನು ದಹಿಸುವುದು; ಚಿಂತೆಯು ಜೀವವುಳ್ಳ ಪುರುಷನನ್ನೇ ದಹಿಸುವುದು ಎಂದು ನೀತಿಶಾಸ್ತ್ರವುಂಟು.)

John Stephenson ಇವನ ಕನ್ನಡ ಭಾಷಾಶೈಲಿಯು ಹೇಗೆ ಹರಿದಿದೆಯೆಂಬುದಕ್ಕೆ ಈ ಕೆಲವು ಪಂಕ್ತಿಗಳನ್ನು ಉದಾಹರಿಸಲಾಗಿದೆ.—

"ಆದಕಾರಣ ಬುದ್ಧಿವಂತನಾದ ಪುರುಷನು ವಿಪತ್ತು ಬಂದ ವೇಳೆಯಲ್ಲಿ ಧೈರ್ಯವನ್ನು ಅವಲಂಬಿಸಿಕೊಂಡು ಇರಬೇಕು ಹೊರತು ಚಿಂತೆಗೆ ಆಸ್ಪದವಂ ಕೊಡಕೂಡದು ಎಂದು ಚಂದ್ರಗುಪ್ತನಂ ಸಮಾಧಾನಂಗೊಳಿಸಿ,—'ಎಲೆ ಕುಮಾರನೆ, ಈ ಪರ್ವತೇಶ್ವರನು ಬಹು ಮ್ಲೇಚ್ಛ ದೇಶಾಧಿಪತಿಗಳಿಂದ ಕಪ್ಪಂಗಳಂ ಸ್ವೀಕರಿಸುತ್ತಾ ಅಸಂಖ್ಯಾತ ಸೇನಾಪರಿವೃತನಾಗಿರುವ ಶೂರನೆಂದು ಕೇಳಿ ಈತನಿಂದ ನಿನ್ನ ಕಾರ್ಯವು ಸಾಧ್ಯವಾದೀತೆಂದು ಇಲ್ಲಿಗೆ ಬಂದೆನೆಂಬುದಾಗಿ ಹೇಳುತ್ತಾ ಮುಂದೆ ತೆರಳುತ್ತಿರುವಲ್ಲಿ ದೂರದಿಂದಲೇ ಶಾಹುರೀ ನಗರವನ್ನು ನೋಡಿ ಈ ಪಟ್ಟಣವು ದೇವಾಸುರರಿಗೂ ಅಸಾಧ್ಯವೆಂದು ಹೇಳಲು, ಚಂದ್ರಗುಪ್ತನು. ..........."

Rev. Stephenson ಇವನು ದಾಸರ ಹಾಡುಗಳನ್ನು ಸಂಗ್ರಹಿಸಿದ ಹಲವು ಪಾಶ್ಚಾತ್ಯರಲ್ಲಿ ಇನ್ನೊಬ್ಬನು. ಕ್ರಿ. ಶ. 1870 ರಲ್ಲಿ ಸುಮಾರು 60 ಉತ್ತಮವಾದ ಪದಗಳನ್ನೂ 'ಸೋಮೇಶ್ವರ ಶತಕ'ದ ಪದ್ಯಗಳನ್ನೂ ಸಂಗ್ರಹಿಸಿ 51 ಪುಟಗಳ ಹೊತ್ತಗೆಯನ್ನು ಪ್ರಕಟಿಸಿದ್ದು ಸಹಸ್ರಾರು ಪ್ರತಿಗಳಂತೆ ಮಾರಾಟವಾದುವು. ಇದರ ಮೇಲ್ಪುಟದಲ್ಲಿ "ರಿ. ಜೆ. ಸ್ಟಿರ್ವಿಸನ್ ದೊರೆಯವರಿಂದ ಪರಿಷ್ಕರಿಸಲ್ಪಟ್ಟಿತು" ಎಂಬುದಾಗಿ ಬರೆದಿದೆ. ಈ ಕೃತಿಯ ಮೂಲಕವಾಗಿಯೇ ಸೋಮೇಶ್ವರ ಶತಕದ "ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳಿತಾಂ," ಎಂಬೀ ಪದ್ಯಗಳು ಗ್ರಾಮಾಂತರದ ಜನಕ್ಕೂ ತಿಳಿಯುವಂತಾದುವು.

## ೧೩. 'ಅರುಣೋದಯ' ಪತ್ರಿಕೆಯೂ ಕೆಲವು ಭಾಷಾಂತರಗಳೂ :—

ಕ್ರಿ. ಶ. 1850 ರಿಂದೀಚೆಗೆ ಈ ಪಾಶ್ಚಾತ್ಯ ವಿದ್ವಾಂಸರು ಸ್ಥಾಪಿಸಿದ್ದ ಹಲವು ಸಾಹಿತ್ಯ ಪತ್ರಿಕೆಗಳಲ್ಲಿ ಸಾಹಿತ್ಯ ವಿಚಾರ ಲೇಖನಗಳಲ್ಲದೆ ವಿಜ್ಞಾನ, ಚರಿತ್ರೆ, ಆರೋಗ್ಯ ಶಾಸ್ತ್ರ, ಮೊದಲಾದ ವಿಷಯಗಳ ಮೇಲೆ ಉದ್ಬೋಧಕವಾದ ಲೇಖನಗಳು ಪ್ರಕಟವಾಗುತ್ತಲೇ ಇದ್ದುವು. 1862 ರಲ್ಲಿ 'ಅರುಣೋದಯ' ಪತ್ರಿಕೆಯೊಂದೇ 348 demy ಪುಟಗಳಷ್ಟು ಉತ್ತಮವಾದ ಲೇಖನಗಳಿಂದ ಹೊರಬಂತು. ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ವಿವಿಧ ತರಹದ ಬರವಣಿಗೆಗಳಿಂದ ಈ ಪತ್ರಿಕೆಯು ಕರ್ಣಾಟಕದ ಹೊರ ಸೀಮೆಗಳಲ್ಲೂ ಪ್ರಚಾರವಿದ್ದಿತು. ಇತರ ಪಾಶ್ಚಾತ್ಯ ಲೇಖಕರ ಬರೆಹಗಳೂ ಆಯಾ ಪತ್ರಿಕೆಗಳಿಂದ ಎತ್ತಿ ಇದರಲ್ಲಿ ಪ್ರಕಟಿಸುತಿದ್ದರು. ಉದಾಹರಣೆಗೆ ಅಂದಿನ ಪ್ರಸಿದ್ಧ Cornhill Magazine ಇದರಲ್ಲಿ ಫ್ರೆಂಚ್ ಲೇಖಕನೊರ್ವನು ಬರೆ

ದಿದ್ದ ಲೇಖನವು "ಅರುಣೋದಯ" ದಲ್ಲಿ ಪ್ರಕಟವಾದುದರ ಕೆಲವು ಪಂಕ್ತಿಗಳನ್ನು ಕೆಳಗೆ ಕೊಡಲಾಗಿದೆ,—

"London is, among all the cities of the earth, the city which is like nothing but itself; being absolutely unique in its grandeur, and its profundity, its heights, and its depths ... ... ... ... What struck me most forcibly when I came to London, was the Thames .... ... ... "

ಹಳೆ ಮೈಸೂರು ರಾಜ್ಯದ ಅಭಿವೃದ್ಧಿಗೆ ಮತ್ತು ಕನ್ನಡ ಸಾಹಿತ್ಯದ ಪುನರೋದ್ಧಾರಕ್ಕೆ ವಿಶೇಷವಾಗಿ ಶ್ರಮಿಸಿದ Sir Mark Cubbon ಇವನ ಪ್ರತಿಮೆಯೊಂದನ್ನು ಬೆಂಗಳೂರಿನಲ್ಲಿ ನಿಲ್ಲಿಸಬೇಕೆಂಬುವರ ವಿಷಯವಾಗಿ ಪತ್ರಿಕೆಗಳಲ್ಲಿದ್ದ ಪ್ರಕಟಣೆಗಳು ಈ ರೀತಿಯಾಗಿದ್ದುವು.—

"ಅನೇಕ ವರುಷಗಳಿಂದ ಬಹು ಖ್ಯಾತಿಯಾಗಿ ಮೈಸೂರು ಶೀಮೆಯನ್ನು ಆಳಿದ ಕಬ್ಬನ್ ದೊರೆಯ ಹೆಸರಿಗೆ ಮಾನ ತೋರಿಸಬೇಕೆಂಬುವ ಅಭಿಪ್ರಾಯ ದಿಂದ ಅನೇಕ ಜನರು ಹಣ ಕೊಟ್ಟಿರುವುದರಿಂದ ಆ ಹಣದಿಂದ ಮಾಡತಕ್ಕ ದ್ದೇನೆಂದು ಆಲೋಚಿಸುವದಕ್ಕೆ ಆಗಸ್ಟು ತಿಂಗಳಿನ (1862) 16 ನೇ ತಾರೀಖಿನಲ್ಲಿ ದೊಡ್ಡ ಸಂಘವು ಬೆಂಗಳೂರಿನಲ್ಲಿ ಕೂಡಿ ಬಂತು. ಆಲೋಚನೆ ಮಾಡಿದ ಮೇಲೆ ಕಬ್ಬನ್ ದೊರೆಯ ರೂಪಕ್ಕೆ ಸರಿಯಾಗಿ ಶಾಶ್ವಿತವಾಗಿರತಕ್ಕ ಅಲಂಕಾರವಾದ ಪ್ರತಿಮೆಯನ್ನು ಶೀಮೆಯಿಂದ ತರಿಸಿ ಬೆಂಗಳೂರಿನಲ್ಲಿ ಈಗ ಕಟ್ಟುತ್ತಿರುವ ಹೊಸ ಖಚೇರಿಯ ಮುಂದೆ ಇರಿಸುವದಕ್ಕೆ ಎಲ್ಲರೂ ಒಪ್ಪಿ ಕೊಂಡರು."

ಇಂಥಾ ವಿಚಾರಗಳು ಚಾರಿತ್ರಿಕವಾಗಿ ಇಂದಿಗೂ ಉಪಯುಕ್ತವಾಗಿಯೂ ಸ್ವಾರಸ್ಯ ವಾಗಿಯೂ ಇವೆ. 'ಅರುಣೋದಯ' ದಲ್ಲಿ ದಾಸರ ಹಾಡುಗಳನ್ನು ಭಾಷಾಂತರಿಸಿ ಪ್ರಕಟವಾದ ಕೆಲವು ಲೇಖನಗಳು ಇನ್ನಷ್ಟು ಹಾರ್ದಿಕವಾಗಿವೆ.—

ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ.
ನಾರಿಯೊ ಧಾರುಣಿಯೋ ಬಲು ಧನದ ಸಿರಿಯೊ!

"Which please thee best of these three
Woman, or land or Laxmi with abundant wealth?"

ಅನ್ಯರಲಿ ಜನಿಸಿದ ಅಂಗನೆಯ ಕರತಂದು
ತನ್ನ ಮನೆಗವಳ ಯಜಮಾನಿಯನಿಸಿ
ಭಿನ್ನವಿಲ್ಲದೆಯರ್ಧ ದೇಹವೆನಿಸುವ ಸತಿಯು
ಕಣ್ಣಿನಲ್ಲಿ ನೋಡಲಮ್ಮಳು ಕಾಲವಶದಿ.

"A man brings a female born of strangers,
And makes her mistress of his house.
His undivided other half-his wife,

On the seductive influence of the age-
  One cannot bear to see it.

ಮುನ್ನ ಶತಕೋಟಿ ರಾಯರು ಆಳಿದಾ ನೆಲನ
ತನ್ನದೆಂದೆಣಿಸುತ ಶಾಸನವ ಬರಸಿ
ಬಿನ್ನಣದ ಮನೆಗಟ್ಟಿ ಕೋಟೆ ಕೊತ್ತಳವಿಕ್ಕಿ
ಚೆನ್ನಿಗನು ಅಸುವಳಿಯೆ ಹೊರಕೆ ಹಾಕುವರು.

"Land over which a hundred crore of kings formerly ruled,
He calls his own, gets the title deed and engraved,
Builds a splendid house, and erects a fort and bastions;
Then the fine fellow yields up his breath,
    And they cast him out!"

೧೪. ಇನ್ನೂ ಕೆಲವು ಸ್ವಾರಸ್ಯವಾದ ನುಡಿಗಟ್ಟುಗಳ ಭಾಷಾಂತರ :—

ಅಂದಿನ ಸಾಹಿತ್ಯ ಪತ್ರಿಕೆಗಳಲ್ಲಿ ಹಿಂದೆ ಹೇಳಿದಂತೆ ಉದ್ಬೋಧಕವಾದ ಮತ್ತು ವಿಚಾರ ಪೂರ್ಣವಾದ ಲೇಖನಗಳನ್ನು ಪ್ರಕಟಿಸುತಿದ್ದುದರ ಜತೆಗೆ ಕನ್ನಡ ಸಾಹಿತ್ಯದಲ್ಲಿ ಜನಪದ ಹಾಡುಗಳಲ್ಲಿ, ನಾಣ್ಣುಡಿಗಳಲ್ಲಿ ಮತ್ತು ಪಳವಾತುಗಳಲ್ಲಿ ಉತ್ತಮವಾದುದನ್ನೆಲ್ಲಾ ಅವರು ಆರಿಸಿ ಭಾಷಾಂತರಿಸಿ ಪ್ರಚಾರ ಪಡಿಸಿ ಉಪಕಾರಮಾಡಿದ್ದಾರೆಂಬುದಕ್ಕೆ ಈ ಕೆಳಗಿನ ಕೆಲವು ನುಡಿಗಟ್ಟುಗಳನ್ನೂ ಭಾಷಾಂತರಗಳನ್ನೂ ಅಂದಿನ ಬರೆವಣಿಗೆಗಳಿಂದ ಆರಿಸಿ ಇಲ್ಲಿ ಕೊಡಲಾಗಿದೆ. ಅವೆಲ್ಲಾ ಕಿರಿಯರಿಗೂ ಹಿರಿಯರಿಗೂ ಎಲ್ಲಾ ಕಾಲಕ್ಕೂ ಉಪಯುಕ್ತವಾದ ಪಾಠ್ಯನಗಳೂ, ಒಗಟೆಗಳೂ ಆಗಿವೆ.—

"ಕೈಯುಂಟು ಕಾಲಿಲ್ಲ, ಶಿರಹರಿದ ಮುಂಡ,
ಕೈಕಳಚಿ ಬಿದ್ದರೆ, ತಾ ಮುದುರಿಕೊಂಡ,
ಇದು ಹೇಳಬಲ್ಲ ಜಾಣರಿಗೆ ಅರಿದಿಲ್ಲ. [ಉತ್ತರ-ಅಂಗಿ.]

"It has arms but no legs, and is a headless trunk,
If you take it off the arm, it will shrink up;
Not difficult to the skilful who can solve it.
(Answer–Jacket)

ಗಗನದಲಿ ತಿರುಗುವದು ಅಡವಿ ಪಕ್ಷಿಯು ಅಲ್ಲ,
ಲಾಂಗೂಲ ವುಳ್ಳದ್ದು ಮೇಕೆ ತಾನಲ್ಲ,
ತನಗೆ ಪ್ರಾಣವು ಇಲ್ಲ, ಇತರ ಪ್ರಾಣಿಗೆ ಮೋಸ,
ಇದು ಹೇಳಬಲ್ಲ ಜಾಣರಿಗೆ ಅರಿದಿಲ್ಲ. [ಉತ್ತರ-ಗಾಳಿಪಟ]

"It moves about the sky, but is not a bird,
It has a tail, but is not a goat,

It has no life, but endangers the life of others,
Not difficult to the skilful who can solve it.

(Answer–A kite)

" ಒಂದು ಮರಹುಟ್ಟಿ ಹನ್ನೆರಡು ಕವಲಾಯಿತು.
ಕವಲು ಒಂದಕ್ಕೆ ಮೂವತ್ತು ಎಲೆಯಾಯಿತು,
ಅದರೊಳಗೆ ಹದಿನೈದು ಕರುಪು ಬಿಳುಪಾಯಿತು.

[ಉತ್ತರ-ವರ್ಷ, ತಿಂಗಳು, ದಿನಗಳು]

A tree sprung up with twelve branches,
In each branch thirty leaves
Fifteen of these black and fifteen white.

(Answer–Year, month and days.)

ಗಾದೆಗಳಲ್ಲಿ ಅಡಕವಾದ ತತ್ವಗಳನ್ನು ನೇರವಾಗಿ ಈ ರೀತಿ ಹೇಳಿದ್ದಾರೆ :—

" ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು,
" Take care of your character.
" ಅತ್ತೆಯೊಡೆದ ಪಾತ್ರೆಗೆ ಬೆಲೆ ಇಲ್ಲ.
" Mischief done by a superior is of no account.
" ಅಡ್ಡಗೋಡೆಯ ಮೇಲಣ ದೀಪದ ಹಾಗೆ, "
" A double-faced man or one who tries to please all. "

## ೧೫. ಚಾರ್ಲ್ಸ್ ಗವಾರನ ದಕ್ಷಿಣದ ಜನಪದ ಹಾಡುಗಳ ಸಂಗ್ರಹ :—

Dr. H. Moegling ಇವನಿಂದ ತೊಡಗಿ ಹಲವು ಪಾಶ್ಚಾತ್ಯರು ದಾಸರ ಹಾಡುಗಳನ್ನು ಸಂಗ್ರಹಿಸಿದ್ದಾರೆ ; ಹಲವನ್ನು ಐರೋಪ್ಯಾ ಭಾಷೆಗಳಿಗೆ ಭಾಷಾಂತರಿಸಿಯೂ ಇದ್ದಾರೆ. ಇವರಲ್ಲಿ ಮೇಲೆ ಹೇಳಿದ George Wurth, ಮತ್ತು J. Stephenson ಇವರಲ್ಲದೆ Rev. A. J. O. Lyle ಮತ್ತು S. Dalzell ಇವರೂ ಸೇರುತ್ತಾರೆ. ಅದೇ ರೀತಿ ದಕ್ಷಿಣ ಹಿಂದೂಸ್ಥಾನದ ಎಲ್ಲಾ ಭಾಷೆಗಳಲ್ಲಿ ಪ್ರಚಲಿತವಿದ್ದ ಅತ್ಯುತ್ತಮ ಹಾಡುಗಳನ್ನೂ ಜನಪದ ಹಾಡುಗಳನ್ನೂ ಕ್ರಿ. ಶ. 1865 ರ ಕಾಲದಲ್ಲಿ Charles E. Gover ಇವನು ಸಂಗ್ರಹಿಸಿ ಮತ್ತು ಭಾಷಾಂತರಿಸಿ ಅವುಗಳನ್ನು Asiatic Society Journal ಇದರಲ್ಲಿ ಹಲವು ಬಾರಿ ಪ್ರಕಟಿಸಿದ್ದನು. ಹಾಗೆ ಇಂಗ್ಲಿಷ್‌ಗೆ ಭಾಷಾಂತರವಾದ ಕನ್ನಡ ತೆಲುಗು, ತಮಿಳು, ಮಲೆಯಾಳ, ತುಳು; ಕುಡಾ. ಕೊಡವ ಇತ್ಯಾದಿ ಭಾಷೆ ಮತ್ತು ಉಪ ಭಾಷೆಗಳ ಕೆಲವು ಜನಪದ ಹಾಡುಗಳ ಸಂಕಲನವನ್ನು 296 demy ಪುಟಗಳ ಗ್ರಂಥವಾಗಿ 1872 ರಲ್ಲಿ ಹೊರತರಲಾಯಿತು. ಕನ್ನಡದ ಮಟ್ಟಿಗೆ ಮತ್ತು ಇತರ ಭಾಷೆಗಳ ಹಾಡುಗಳನ್ನೂ ಅಂದಿನ ಇತರ ಪಾಶ್ಚಾತ್ಯ ವಿದ್ವಾಂಸರು ಭಾಷಾಂತರಿಸಿ ದನ್ನೂ Charles Gover ಇವನು ತನ್ನ ಸಂಕಲನದಲ್ಲಿ ಸೇರಿಸಿದ್ದಾನೆ. ದಾಸರ ಹಾಡುಗಳಲ್ಲಿ ಹಲವೂ ಇದರಲ್ಲಿ ಅಡಕವಾಗಿವೆ. ಉದಾಹರಣೆಗೆ ಅವರಿಂದ ಈ ಕೆಲವು

ಪಂಕ್ತಿಗಳನ್ನು ಇಲ್ಲಿ ಕೊಡಲಾಗಿದೆ.—

"How many births are past, I cannot tell,
How many yet may be, no man may say,
But this alone I know, and know full well,
That pain and grief embitters all the way.

"If thou shouldst have a wife, Trouble is thine,
If none should bless thy life, Trouble is thine,
If neither wise nor witty, sorrow will come, ... ... ...
If children comcs to thee, Sorrow comes too,
But if no heir should be, Sorrow comes too,
With earning wealth and power, Pain fills the cup,
But when the wretched poor ... ... ... ... Pain fills the cup.

ಹೀಗೆ ಹಲವು ಕನ್ನಡ ಪದಗಳ ಭಾಷಾಂತರವು ಕೊಡಲ್ಪಟ್ಟವೆ. ಹಲವು ಇಂಗ್ಲಿಷ್ ಪದ್ಯಗಳನ್ನು ಆ ಕವನ ಸಂಕಲನದಲ್ಲಿ ಓದುವಾಗ ಅವು ಭಾಷಾಂತರವಾದುವುಗಳಲ್ಲ ವೆಂಬಷ್ಟು ಸ್ಪಷ್ಟವಾಗಿ ಅವುಗಳ ಭಾವಾರ್ಥಗಳು ಹರಿಯುತ್ತಿವೆ. ಅದರಿಂದ ಆ ವಿದ್ವಾಂಸರು ಈ ಉಭಯ ಭಾಷೆಗಳಲ್ಲೂ ಅದೆಷ್ಟರ ಮಟ್ಟಿಗೆ ಪಳಗಿದ್ದರೆಂಬುದನ್ನು ಓದುಗರು ಬೆರಗಾಂತು ಊಹಿಸಬೇಕಿದೆ.

## ೧೩. ಕೊಂಕಣಿ ಭಾಷಾ ಸಾಹಿತ್ಯದ ಮೇಲೂ ಹಲವರು ದುಡಿದಿದ್ದಾರೆ :—

ಗೋವಾ ಮತ್ತು ಪಶ್ಚಿಮ ಕರಾವಳೀ ಸೀಮೆಗಳಲ್ಲಿದ್ದ ಹಲವು ಪಾಶ್ಚಾತ್ಯರು ತಮ್ಮ ಧರ್ಮಬೋಧನೆಯ ಸಲುವಾಗಿ ಸ್ಥಳೀಯ ಉಪಭಾಷೆಯಾದ ಕೊಂಕಣಿಯಲ್ಲಿ ಹಲವು ಗ್ರಂಥಗಳನ್ನು ಕ್ರಿ. ಶ. 15ನೇ ಶತಮಾನದಿಂದಲೇ ಬರೆಯಲಾರಂಭಿಸಿದ್ದಾರೆ. ಕ್ರಿ. ಶ. 1649 ರಷ್ಟು ಹಿಂದೆಯೇ Estevao Thomas ಇವನು ಕೊಂಕಣಿ ವ್ಯಾಕರಣವೊಂದನ್ನು ಬರೆದಿದ್ದುದು ಬಹುಶಃ ಭಾರತೀಯ ಭಾಷೆಗಳಲ್ಲಿ ಪಾಶ್ಚಾತ್ಯರು ಬರೆದ ವ್ಯಾಕರಣ ಗ್ರಂಥಗಳಲ್ಲಿ ಮೊದಲನೆಯದೆಂದು ಹೇಳಬಹುದು. ಇದು "Arte da Lingua Camarisu Gramatica da Lingua Concani" ಎಂಬುದಾಗಿ ಪೋರ್ಚುಗೀಸ್ ಭಾಷೆಯಲ್ಲಿ ಕರೆಯಲ್ಪಟ್ಟದೆ. ಅಲ್ಲಿಂದ ನಂತರ ಮಂಗಳೂರು, ಕಾರವಾರ ಮೊದಲಾದೆಡೆಗಳಲ್ಲಿದ್ದ Jesuit ವರ್ಗದ ಕ್ರೈಸ್ತ ಗುರುಗಳು ಕೊಂಕಣಿಯಲ್ಲಿ ಬೈಬಲ್ ಹೊತ್ತಗೆಗಳನ್ನು ಅದೆಷ್ಟೋ ಬರೆದಿದ್ದಾರೆ. William Carey, Brian Hodgson, John Beames ಮೊದಲಾದ ಭಾಷಾ ಶಾಸ್ತ್ರಜ್ಞರು ಈ ಭಾಷೆಯನ್ನು ಮರಾಠಿಯ ಉಪ ಭಾಷೆಯೋ ಎಂಬುದಾಗಿ ಸಂದೇಹ ಪಟ್ಟದ್ದಾರೆ; ಅಲ್ಲದೆ ಈ ಭಾಷೆಯ ತುಲನಾತ್ಮಕ ಶಾಸ್ತ್ರೀಯ ಅನ್ವೇಷಣೆಯನ್ನೂ ನಡೆಸಿದ್ದಾರೆ.

ಕಳೆದ ಶತಮಾನದಲ್ಲಿ ಕೊಂಕಣೀ ಭಾಷೆಯಲ್ಲಿ ಇನ್ನೆಷ್ಟೋ ಗ್ರಂಥಗಳು ಪ್ರಕಟ

ವಾದುವು. ಗೋವಾದಲ್ಲಿದ್ದ Dr. Cunha Nivara ಇವನು ಮತ್ತು M. P. Homen ಇವನೂ ಕೊಂಕಣಿಯಲ್ಲಿ ಹಲವು ಸಾಹಿತ್ಯ ಗ್ರಂಥಗಳನ್ನು 1858 ರ ಕಾಲದಲ್ಲಿ ಬರೆದಿದ್ದಾರೆ. Dr. Arthur Burnell ಇವನು ಕೊಂಕಣಿ ಭಾಷೆ ಯನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ ಅದರಿಂದ ಉತ್ತಮವಾದ ಸಾಹಿತ್ಯವನ್ನು ತನ್ನ ಭಾಷೆ ಗಿಳಿಸಿದ್ದಾನೆ; ಹಲವು ಜನಪದ ಹಾಡುಗಳನ್ನೂ 1870 ರ ಕಾಲದಲ್ಲಿ ಅವನು ಸಂಗ್ರಹಿಸಿ ಭಾಷಾಂತರಿಸಿದನು.

ಕ್ರಿ. ಶ. 1866 ರಲ್ಲಿ ಗೋವಾದಲ್ಲಿದ್ದ M. V. D. Abreen ಇವನು Lyrical Poems in Konkani ಎಂಬುದಾಗಿ ಪದ್ಯ ಸಂಕಲನವನ್ನು ಪ್ರಕಟಿಸಿದನು. ಇತರ ಎಲ್ಲಾ ಭಾರತೀಯ ಭಾಷೆಗಳಲ್ಲಿ ಬರೆದ ರೀತಿಯಲ್ಲಿಯೇ ಕೊಂಕಣೀ ವ್ಯಾಕರಣ ಮತ್ತು ಶಬ್ದಕೋಶಗಳೂ ಅವರಿಂದ ಬರೆಯಲ್ಪಟ್ಟವೆ. ಕ್ರಿ. ಶ. 18 ನೇ ಶತಮಾನಕ್ಕೂ ಹಿಂದಿನ ಕೊಂಕಣಿಯು ದೇವನಾಗರೀ ಲಿಪಿಯಲ್ಲಿ ಬರೆ ಯಲ್ಪಟ್ಟಿತ್ತು. ಇತ್ತೀಚಿಗಿನ ಪಾಶ್ಚಾತ್ಯ ವಿದ್ವಾಂಸರು ಆ ಕ್ರಮವನ್ನು ಬದಲಾ ಯಿಸಿದರು. ಗೋವಾ ಮತ್ತು ಕರಾವಳೀ ಸೀಮೆಗಳಲ್ಲಿ ಅವರು ಕಳೆದ ನಾನೂರು ವರ್ಷಗಳ ಕಾಲ ನೆಲೆಸದೇ ಹೋಗಿದ್ದರೆ ಕೊಂಕಣಿಯು ಕೇವಲ ತುಳು ಯಾ ತೋಡ ಭಾಷೆಯಂತೆ ಹಿಂದುಳಿದಿರುತಿದ್ದಿತು. ಈ ಭಾಷೆಯ ಪುನರೋದ್ಧಾರಕ್ಕೆ ಮತ್ತು ಪ್ರಚಾರಕ್ಕೆ ಹೆಚ್ಚಾಗಿ ಪೋರ್ಚುಗೀಸ್ ಸಾಹಿತಿಗಳು ಮತ್ತು ಮತ ಪ್ರಚಾರಕರು ಕಾರಣರಾಗಿದ್ದಾರೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

## ೧೭. ಮ್ಯಾನರ್ ಮತ್ತು ಬರ್ನೆಲ್ಲ್ ಇವರು ತುಳು ಭಾಷೆಯನ್ನು ಮೇಲೆತ್ತಿದರು:—

Rev. August Manner ಇವನು ತುಳು ಭಾಷಾ ನಿಘಂಟನ್ನು ರಚಿ ಸಿದ ವಿಷಯವಾಗಿ ಹಿಂದೆ ಹೇಳಲಾಗಿದೆ. ತುಳು ಭಾಷೆಯಲ್ಲಿ ಹಲವು ಬೈಬಲ್ ಕೃತಿ ಗಳನ್ನೂ ರಚಿಸಿದ ಇವನು ತೌಳವ ಸಂಸ್ಕೃತಿಯನ್ನು ಅನ್ವೇಷಿಸಿದವರಲ್ಲಿ ಪ್ರಮುಖನಾಗಿ ರುವನು. 1863ರಲ್ಲಿ Rev. A. Manner ಇವನು "ಭೂತ ವಿದ್ಯೆ" ಎಂದು ತುಳುನಾಡಿನಲ್ಲಿ ಪ್ರಚಾರವಿರುವ ಭೂತ ಪಿಶಾಚಿಗಳ ಪೂಜೆಯನ್ನು ಕುರಿತು ಬರೆದ 117 ಪುಟಗಳ ಪುಸ್ತಕವು ಬಾಸೆಲ್ ಮಿಷನ್‌ನವರಿಂದ ಪ್ರಕಟಿಸಲಾಯಿತು. ಹಲವು ತುಳು ಹಾಡುಗಳನ್ನೂ ಸಂಗ್ರಹಿಸಿ ಭಾಷಾಂತರಿಸಿದನು. ಇವನೊಡನೆಯೆ F. Kittel, Jacob Brigel, C. Grenier ಮೊದಲಾದವರೂ ತುಳು ಸಾಹಿತ್ಯದ ಸೃಷ್ಟಿಗೆ ಕಾರಣರಾಗಿದ್ದಾರೆ. ಇವರೆಲ್ಲರಿಗೂ ಹಿರಿದಾಗಿ ಮತ್ತು ಮೂಲಪುರುಷನಾಗಿ Dr. H. Moegling ಇವನು ತುಳು ಭಾಷೆಗೆ ಜೀವಕಳೆಯನ್ನು ಮೊದಲಾಗಿ ಇತ್ತನೆಂಬು ದನ್ನೂ ಹಿಂದಿನ ಪುಟಗಳಲ್ಲಿ ಹೇಳಲಾಗಿದೆ.

Dr. Arthur Burnell ಇವನು ಹೆಚ್ಚಾಗಿ ತಮಿಳು ಮತ್ತು ಕನ್ನಡ ಭಾಷಾ ಸಾಹಿತ್ಯಕ್ಕೆ ತನ್ನ ವೇಳೆಯನ್ನು ವಿನಿಯೋಗಿಸಿದರೂ ತುಳು ಭಾಷೆಯಲ್ಲೂ ಸಾಕಷ್ಟು ಸಂಶೋಧನೆಯನ್ನು ನಡೆಸಿದ್ದಾನೆ. Dr. Moegling ಇವನು ಹಿಂದೆಯೇ



ಸಂಪಾದಿಸಿದ 'ಕೋಟಿ ಚೆನ್ನಯ' ತುಳು ಹಾಡನ್ನು ೨೨ folio ಪುಟಗಳಷ್ಟು ಇಂಗ್ಲಿಷ್ ಲಿಪಿಯಲ್ಲಿ ಬರೆದು ಮುದ್ರಿಸಿ ಪ್ರಕಾಶಪಡಿಸಿದನು. ತೌಳವ ಸಂಸ್ಕೃತಿಯನ್ನು ಕುರಿತು 150 folio ಪುಟಗಳಷ್ಟು ಇಂಗ್ಲಿಷ್‌ನಲ್ಲಿ ಬರೆದನು. ತುಳುನಾಡ ಜನಜೀವನ, ಆಚಾರ ವಿಚಾರ, ಜನಪದ ಸಾಹಿತ್ಯ ಇತ್ಯಾದಿಗಳನ್ನು ಕುರಿತಾಗಿ ಅವನು ಬರೆದ ಸಾಹಿತ್ಯವು ಒಟ್ಟಾಗಿ 650 quarto ಪುಟಗಳಷ್ಟು ಆಗಿವೆಯೆಂದರೆ ಅದು ಸಾಮಾನ್ಯ ವಿಚಾರವೇನೂ ಅಲ್ಲ. ಅವನು ಸಂಪಾದಿಸಿದ Specimen of Indian Dialects ಎಂಬ 1874ರ ಗ್ರಂಥದಲ್ಲೂ ತುಳು ಭಾಷೆಯಿಂದಲೂ ಕೆಲವು ನುಡಿಗಟ್ಟುಗಳನ್ನು ಆರಿಸಿ ಕೊಟ್ಟಿದ್ದಾನೆ.

ಇಂದೀಗ August Manner ಇವನು ಬರೆದ ತುಳು ಭಾಷಾ ವ್ಯಾಕರಣ ಮತ್ತು ನಿಘಂಟುಗಳು ಮತ್ತು Brigel, Burnell, Moegling ಇವರು ಮೊದಲಾದವರು ಬರೆದ ಕೃತಿಗಳನ್ನೆಲ್ಲಾ ಪುನರ್ಮುದ್ರಿಸಿ ಅದೇ ಧಾಟಿಯಲ್ಲಿ ಇಂದಿನ ದೇಶೀಯ ವಿದ್ವಾಂಸರು ತುಳು ಭಾಷಾ ಗ್ರಂಥಗಳನ್ನು ರಚಿಸಿದ್ದಾದರೆ ಅಂಥಾ ಒಂದು ಉಪ ಭಾಷೆಗೂ ಉತ್ತಮ ಭವಿಷ್ಯವಿದೆಯೆಂದು ಹೇಳಬಹುದು.

**೧೪. ಕೊಡವ ನುಡಿಯಿಂದಲೂ ಜನಪದ ಹಾಡುಗಳನ್ನು ಸಂಗ್ರಹಿಸಿದರು :-**

Capt. Mohoney ಇವನ 1798 ರ Coorg History ; Lieut. Connor ಇವನ 1817ರ Coorg Survey ; Rev. Moegling ಇವನ 1854 ರ Coorg Memoirs ; Capt. Robert Cole ಇವನ 1864 ರ Coorg Law ಮತ್ತು 1867 ರ Coorg Grammar, Rev. A. Garrett ಇವನ 1868 ರ Coorg Ballads ಮತ್ತು Rev. Richtor ಇವನ 1872 Coorg Manual ಇವಿಷ್ಟು ಬರೆವಣಿಗೆಗಳು ಕೊಡಗಿನ ಪೂರ್ವೋತ್ತರಗಳೆಲ್ಲವನ್ನೂ ಸಂಪೂರ್ಣವಾಗಿ ತಿಳಿಸುತ್ತವೆ. Rev. Graetor ಇವನು ಭಾಷಾಂತರಿಸಿದ ಕೊಡವ ಜನಪದ ಹಾಡುಗಳು 1872 ರಲ್ಲಿ ಎರಡನೇ ಬಾರಿಗೆ ಮುದ್ರಣವಾಯಿತು. ಅದರಿಂದಲೆ Rev. Richtor ಮತ್ತು Charles Gover ಇವರೂ ಉತ್ತಮವಾದ ಭಾಗಗಳನ್ನು ಹೆಕ್ಕಿ ತಮ್ಮ ಗ್ರಂಥಗಳಲ್ಲಿ ಸೇರಿಸಿದರು. F. Kittel ಇವನು ಕೊಡಗಿನಲ್ಲಿದ್ದಾಗ ಆ ಜಿಲ್ಲೆಯನ್ನು ಕುರಿತು ಹಲವು ಚಾರಿತ್ರಿಕ ಲೇಖನಗಳನ್ನು ಪ್ರಕಟಿಸಿದ್ದನು. Arthur Burnell ಇವನು ಬರೆದ Specimen of Indian Dialects ಇದರಲ್ಲಿ ಮತ್ತು Robert Caldwell ಇವನ ದ್ರಾವಿಡ ಭಾಷಾಶಾಸ್ತ್ರ ಗ್ರಂಥದಲ್ಲೂ ಕೊಡವನುಡಿಯನ್ನು ಕುರಿತು ಸಾಕಷ್ಟು ಪ್ರಸ್ತಾಪಿಸಿವೆ. 1886 ರ Veil J. Fredrich ಇವನು ಕೊಡವ ಭಾಷಾ ಗಾದೆಗಳನ್ನೆಲ್ಲಾ ಸಂಗ್ರಹಿಸಿ ಚಿಕ್ಕ ಒಂದು ಪುಸ್ತಕದ ರೂಪದಲ್ಲಿ ಪ್ರಕಟಿಸಿದನು. 32 ಪುಟಗಳ ಈ ಹೊತ್ತಗೆಯು ಅವನಿಗಿಂತ ಹಿಂದೆ F. Kittel ಇವನು "ಸಹಸ್ರ ಗಾಥಾಮೃತ ಕಲಶ" ಎಂಬುದಾಗಿ ಕನ್ನಡದಲ್ಲಿ ಪ್ರಕಟಿಸಿದ ಗಾದೆಗಳ ಸಂಕಲನದಂತೆಯೇ ಇದೆ. Rev. Graetor ಇವನು ಕೊಡವ ಹಾಡಿನ ಮಟ್ಟದಲ್ಲಿ ತಾನಾಗಿ ಬರೆದ

ಒಂದು ಹಾಡು ಹೀಗಿದೆ :—

" ಕೊಡಗು ಸ್ವದೇಶವು
ಎಷ್ಟೊ ಚಂದವಾದುದು,
ಬೆಟ್ಟ ಗುಡ್ಡ ತುದಿಯೊ,
ಮಲೆನಾಡು ತೀರವೊ
ನೀಲಬಣ್ಣ ಕಡಲು
ಸುತ್ತು ಸುತ್ತು ಕಾಣ್ಬುದು.

ಬೆಳ್ಳಿಧಾರೆ ಜಲವು
ಬೆಟ್ಟದಿಂದಲಿಳಿದು,
ಕಾಡು ತೋಟ ಗದ್ದೆಯ
ಊರು ಗ್ರಾಮ ದಾಟುವ
ಮೀನು ತುಂಬ ನದಿಯು
ಕಡಲಲ್ಲಿ ಸೇರೋದು...."

ಈ ಲಾವಣಿ ಹೀಗೆ ಮುಂದುವರಿಯುತ್ತದೆ. ಪ್ರತಿ ಪಂಕ್ತಿಯಲ್ಲೂ ಏಳು ಅಕ್ಷರಗಳು ಮಾತ್ರವಿದ್ದು ತನ್ನದೇ ಆದ ಧಾಟಿಯಲ್ಲಿ ಹಾಡಲ್ಪಡುವ ಈ 'ಬಾಳೊ ಹಾಡು' ಇದರಂತೆ ಕೊಡವ ನುಡಿಯಲ್ಲೇ A. Graetor ಇವನು ತನ್ನ ದೇಶದ ರಾಣಿಯನ್ನು ಕುರಿತು ಬರೆದ ಹಾಡೊಂದು ಹೀಗಿದೆ :—

" ದೇವಡ ದಯಂಗೊಂಡ್
ಏಳ್ ನೆಲೆ ವಿಲಾಯಿತಿ
ಅಲ್ಲಿ ಪಟ್ಟ ಬಾವದೊ
ಪೊಮ್ಮುತ್ತ್ ಚರಂಪೋಲೆ,
ಮುಲ್ಲೆ ಫೂವ್‌ಪೊಂಗಳೊ
ರಾಣಿ ಪಟ್ಟ ಬಾವಕ್ಕ

ಏರ ದಂಡ್ ಕಟ್ಟ್‌ನ
ಅಂಗ್ರೇಜಿಯ ಫಾದರ
ಪೊಂದೊಪ್ಪಿ ಚರದಾರ
ಲಾರ್ಡ್‌ಸಾಬ್ ಬೈಂಬನ್
ಚತ್ತ್‌ರನಡಕಿತ್ತ್
ಗೆದ್ದ ಗೆದ್ದ ಸೀಮೆಲ್...."

ಇದು ಸಹ ಮೇಲಿನ ಪದದಂತೆ ಇನ್ನೂ ಹಲವು ಪಂಕ್ತಿಗಳಲ್ಲಿ ಬರೆಯಲ್ಪಟ್ಟಿದೆ. ಈ ಐರೋಪ್ಯಾ ಉತ್ಸಾಹಿಗಳು ಕೊಡಗಿನ ಇತರ ಜನಪದ ಹಾಡುಗಳನ್ನು ಭಾಷಾಂತರಿಸಿದ್ದು

ಹಲವರಿಂದ ಇತ್ತೀಚೆಗೆ ಉದಾಹರಿಸಲ್ಪಟ್ಟವೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಹುತ್ತರಿ ಹಬ್ಬದ ಒಂದು ಹಾಡು ಹೀಗೆ ಹರಿಯುತ್ತದೆ—

"Sun and moon the seasons make
Rule o'er all the sky they take,
God is Lord of heaven and earth.
All the joyous earnest toil
Happy ryots give the soil,
Our rich land is fully worth.

ಹಿರಿಯನೊರ್ವನು ಮೃತನಾದಾಗ ಹಾಡುವ ಲಾವಣಿಯ ಕೆಲವು ಪಂಕ್ತಿಗಳು ಹೀಗೆ ಅನುವಾದವಾಗಿದೆ—

"Onward onward roll the years;
Swift as eagle's flight in air;
So brief was thy career on earth!
Woe! the string of choicest pearls
Is for ever burst and scattered.
.................. ........................... ...........
In the sultry days of summer
Like the grass that burns of heat
Or as the raging storms of June
Break the fruitful plantain trees
Thou wast thou cut off, Oh father."

**೧೯. ಬಡಗ ಭಾಷೆಯಿಂದ ಇನ್ನೆಷ್ಟೋ ಹಾಡುಗಳನ್ನು ಸಂಗ್ರಹಿಸಿದ್ದಾರೆ :—**

ಬಡಗ ಭಾಷೆಯಲ್ಲಿ ಬೈಬಲ್ ಕೃತಿಗಳನ್ನು ರಚಿಸಿದ ಮತ್ತು ಹಿಂದಿನ ಭಾಗದಲ್ಲಿ ಹೆಸರಿಸಿದ ಸಾಹಿತಿಗಳೇ ಬಡಗ ಜನಪದ ಸಾಹಿತ್ಯವನ್ನೂ ಸಂಗ್ರಹಿಸಿ ಭಾಷಾಂತರಿಸಿದ್ದಾರೆ. Rev. F. Metz ಇವನು ಮೈಸೂರು ಮತ್ತು 'ನೀಲಗಿರಿ ಜಿಲ್ಲೆಗಳಲ್ಲಿ ಪ್ರಚಾರವಿದ್ದ ಹಾಡುಗಳನ್ನು ಭಾಷಾಂತರಿಸಿದ್ದಾನೆ. ಬಳ್ಳಾರಿ, ಚಿತ್ರದುರ್ಗ, ಗುಲ್ಬರ್ಗಾ ಮತ್ತಿತರ ಜಿಲ್ಲೆಗಳಲ್ಲಿ ಪ್ರಚಾರವಿರುವ ಕೆಲವು ಹಾಡುಗಳೂ ಅಂದಿನ ಐರೋಪ್ಯಾಸಾಹಿತಿಗಳ ಭಾಷಾಂತರ ಸಂಕಲನದೊಳಕ್ಕೆ ಬಿದ್ದಿವೆ.ಅವುಗಳಲ್ಲೂ ಉತ್ತಮವಾದುವನ್ನು ಸಂಗ್ರಹಿಸಿ Charles E. Gover ಇವನು ತನ್ನ ಇಂಗ್ಲಿಷ್ ಹಾಡು ಸಂಕಲನದಲ್ಲಿ ಸೇರಿಸಿದ್ದಾನೆ. ಆದರಿಂದ ಒಂದೆರಡು ಬಡಗ ಹಾಡುಗಳ ಕೆಲವು ಪಂಕ್ತಿಗಳನ್ನು ಕೆಳಗೆ ಉದಾಹರಿಸಲಾಗಿದೆ. ಬೇರೊಂದು ಲೋಕವು ಈ ಲೋಕಕ್ಕಿಂತ ಉತ್ತಮವಾದುದು ಎಂದು ಹೇಳುವ ಹಾಡು ಹೀಗಿದೆ—

"Oh brother, how I wish to reach that blessful shore!
Why did I ever come to see such fearful things!
If when at last I die, a solemn gathering mourns
And fire devours my corpse—if toll be paid to him

Who guards tne heavenly gates, Can I obtain that bliss?
Or must I sink to hell? "Alas, my dear sister,
I know not of that."

ಇನ್ನೊಂದು ಬಡಗ ಹಾಡು ಹೀಗೆ ಅನುವಾದಿಸಲ್ಪಟ್ಟದೆ. ಅದರ ಪ್ರಾರಂಭದ ಕೆಲವು ಪಂಕ್ತಿಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ—

"The dead has sinned a thousand times
E'en all the thirteen thousand sins
That can be done by mortal men
May stain the soul that fled today
Stay not their flight to God's pure feet."

ಜನಪದ ಹಾಡುಗಳ ಸಂಗ್ರಹಣಾ ಕಾರ್ಯವೂ ಪಾಶ್ಚಾತ್ಯರ ಇತರ ಎಲ್ಲಾ ಕಾರ್ಯಭಾರಗಳಂತೆ ಕಳೆದ ಶತಮಾನದಲ್ಲಿ ಹಲವು ಬಗೆಯಲ್ಲಿ ವಿವಿಧ ದಿಶೆಯಲ್ಲಿ ನಡೆದಿವೆ. ಆದರೆ ಅವೆಲ್ಲವೂ ಇಂದು ಚೆಲ್ಲಾಪಿಲ್ಲಿಯಾಗಿ ಎಲ್ಲೆಲ್ಲೋ ಹರಡಿ ಹೋಗಿವೆ. ಅವುಗಳ ಇಂಗ್ಲಿಷ್ ಭಾಷಾಂತರವೂ ಅದೇ ರೀತಿ ವ್ಯಾಪಕವಾಗಿ ಹರಿದಿವೆ. ಸಾಹಿತ್ಯವು ಜನಜೀವನವನ್ನು ಪ್ರತಿಬಿಂಬಿಸುತ್ತದೆ ಎಂಬುದು ನಿಜವಾದರೆ ಅಂದಿನ ಹಳ್ಳಿಗರ ಪರಿಪುಷ್ಟವಾದ ಮತ್ತು ಭಾವಗರ್ಭಿತವಾದ ಈ ಹಾಡುಗಳನ್ನು ಆ ವಿದೇಶೀಯರು ಅಂದು ಮೆಚ್ಚಿದ್ದರು. ಆದ್ದರಿಂದ ಅವನ್ನು ತಾವು ಸಂಗ್ರಹಿಸಿದ್ದು ಮಾತ್ರವಲ್ಲ; ಅವುಗಳನ್ನೆಲ್ಲಾ ಸಾಧ್ಯವಾದಷ್ಟು ಭಾಷಾಂತರಿಸಿ ವಿದೇಶಗಳಿಗೂ ಒಯ್ದರು. ಅವರ ಈ ಕಾರ್ಯದಲ್ಲಿ ಅವರದೇ ಉತ್ತಮ; ಅವರ ಸಾಹಿತ್ಯ, ಅವರ ಭಾಷೆಗಳೇ ಮೇಲು, ಇತರರವು ಕೀಳು ಯೆಂಬ ಅಲ್ಪ ಭಾವನೆಯು ಆ ವಿದ್ವಾಂಸರಲ್ಲಿ ಎಂದೂ ಕಂಡುಬಂದದ್ದೇ ತೋರುವುದಿಲ್ಲ: ಲೋಕವೂ ಒಂದು, ಜನವೂ ಒಂದು, ಸಾಹಿತ್ಯವೂ ಒಂದು; ಎಂಬ ಉನ್ನತ ಧ್ಯೇಯವನ್ನಿಟ್ಟು ಅವರು ಶ್ರಮಿಸಿದರೆಂದೇ ಅನಿಸುತ್ತದೆ. ಸೋಮೇಶ್ವರ ಶತಕದ "ಕೆಲವಂ ಬಲ್ಲವರಿಂದ ಕಲ್ತು" ಎಂಬ ಹೇಳಿಕೆಯು ನಮಗೆ ಎಷ್ಟು ಪ್ರಿಯವಾಗಿದೆಯೋ ಅಷ್ಟೇ ಅವರಿಗೂ ಇತ್ತು ಎಂಬುದಕ್ಕೆ ಕಡೇದಾಗಿ ಆ ಪದ್ಯಭಾಗದ ಭಾಷಾಂತರವನ್ನು ಕೆಳಗೆ ಕೊಡಲಾಗಿದೆ!

"Some facts from professors are learnt,
And some by the Shastras are taught;
Some gain is the fruit of observing
And some is arrived at by thought;
And converse with wise men gives insight,
And thus to ripe knowledge one's brought
Many drops coalescing make rivers,
From rivers the ocean is wrought,
Be Hara, great Hara, adored—
Someshwara, glourious Lord."

---

" ನವಿತೊದಲ ತೊಂಡಿನಲಿ ಕಿವಿಬಂಡ ಸುರಿಸುತಿಹ
ನಮ್ಮ ಕನ್ನಡ ಹಕ್ಕಿ ಯಾವ ಕಾಲದ ಕವಿಯೊ ?
ಕೊರಲದನಿ ಬುಗ್ಗೆಯಲಿ ನಮ್ಮೆದೆಯ ತೊಳೆವ ಪಿಕ
ಅವ ಜನ್ಮದಲ್ಲಿ ಭಾಷೆಯ ಮರೆತ ಗಮಕಿಯೊ ?

........................................................

ಕೆಡೆ ನುಡಿಯಿಲೆ ಕವಿ ! ಅಲಂಕಾರಗಳ ಹೊಸೆದು
ನುಡಿಯೆ ನೋಹಕೆ ನಿಜವ ಮರಸು ಮಾಸು !
ಜರೆಯಿಲೆ ತಾರ್ಕಿಕನೆ ! ವೋದಗಳ ಮೇಲೇರಿ
ಜಡತೆಯಲಿ ಬೀಳ್ನುಡಿಯ ಮಳೆಗರೆಯಿಸು "

[ಕೆ. ಶಂಕರಭಟ್ಟ]

ಕನ್ನಡ ಸಾಹಿತ್ಯಕ್ಕಾಗಿ ದುಡಿದ ಮತ್ತು ಕನ್ನಡದಲ್ಲಿ ಹಲವು ಕೃತಿಗಳನ್ನು ರಚಿಸಿದ ಐರೋಪ್ಯಾ ವಿದ್ವಾಂಸರಲ್ಲಿ ಹಲವರು ಜರ್ಮನ್ನರಾಗಿದ್ದಾರೆ. Moegling, Garrett, Bouteloupe, Buhler, Zeigler, Burnell. Huber, Graetor, Kittel ಹೀಗೆ ಹಲವರು ಜರ್ಮನ್ ದೇಶದವರು. ಅವರ ಪೈಕಿ Buhler,Burnell,Zeigler,Huber ಮೊದಲಾದವರು ಪ್ರಸಿದ್ಧ ಯೇಹೂದ್ಯ ಜನಾಂಗದವರು. ಇಂಥ ಮೇಧಾವಿಗಳ ಸಂಖ್ಯೆಯು ಅಂದಿನ ಭಾರತದಲ್ಲಿ ಇನ್ನೆಷ್ಟೋ ಇತ್ತು. ಹಲವು ಅಸಾಧ್ಯ ಕೆಲಸಗಳನ್ನೂ ಸಂಶೋಧನೆಗಳನ್ನೂ ಈ ದೇಶದಲ್ಲಿ ನಡೆಸಿದವರು ಜರ್ಮನಿ ದೇಶದ ಯೇಹೂದ್ಯರು. ಈ ಜನಾಂಗವು ನಡೆಸಿದ ಸೇವೆಯು ಅದೊಂದು ಬಗೆಯ ಲೋಕಸೇವೆ ! ಅವರಿಗೆ ಭಾಷಾ ಭೇದ, ಪ್ರಾಂತ ಭೇದ, ಜನಭೇದ ಎಂಬುದಾವುದೂ ಇಲ್ಲ. ಲೋಕವೆಲ್ಲಾ ಹಬ್ಬಿರುವ ಈ ಯೇಹೂದ್ಯ ಜನಾಂಗದ ಕರ್ತವ್ಯ ನಿಷ್ಠೆ, ಮೇಧಾಶಕ್ತಿ ಮೊದಲಾದುವು ಜಗತ್ಪ್ರಸಿದ್ಧವಾಗಿವೆ. ಕನ್ನಡನಾಡಿನಲ್ಲೂ ಅಂಥಾ ಹಲವು ಐರೋಪ್ಯಾ ಜನಾಂಗಕ್ಕೆ ಸೇರಿದ ಯೇಹೂದ್ಯರೂ ಕಳೆದ ಶತಮಾನದಲ್ಲಿದ್ದು ಭಾಷಾ ಸೇವೆಯನ್ನು ಮಾತ್ರವಲ್ಲ ; ಆಡಳಿತೆ, ಅನ್ವೇಷಣೆ, ವ್ಯವಸಾಯ, ಇತ್ಯಾದಿ ಕ್ಷೇತ್ರಗಳಲ್ಲೂ ಅಮೋಘವಾಗಿ ದುಡಿದಿದ್ದಾರೆ. ಪ್ರತಿಯೊಂದು ಜಿಲ್ಲೆಯಲ್ಲಿದ್ದ ಐರೋಪ್ಯಾ ಜನರ ಪೈಕಿ ಶೇಕಡ ಹತ್ತರಷ್ಟು ಜನರು ಆ ಬಿಳಿ ಯೇಹೂದ್ಯರಾಗಿದ್ದರು. ಈ ದೇಶದಲ್ಲಿ ಅಂದು ಬಹು ದೊಡ್ಡ ಕಟ್ಟೋಣಗಳನ್ನು ಕಟ್ಟಿದವರೂ, ಭೂಶೋಧನೆ ಮತ್ತು ಭೂಮಿಯ ಪಾಯಮಾನಸಿಕ (Survey) ಅಳತೆಯನ್ನು ಕಂಡುಹಿಡಿದವರೂ, ಬಹು ದೊಡ್ಡ ಯೋಜನೆಗಳಿಗೆ ತಳಹದಿಯನ್ನು ಹಾಕಿ ಅವುಗಳನ್ನು ಮೇಲೇರಿಸಿದವರೆಲ್ಲರೂ ಆ ಬಿಳಿ ಯೇಹೂದ್ಯರೆಂಬ ಕರ್ಮಕುಶಲರೆಂದು ತಿಳಿದುಬಂದಿದೆ. ಈ ಜನಾಂಗದಿಂದ ಜಗತ್ತಿನ ವೈಜ್ಞಾನಿಕ ಕ್ಷೇತ್ರದಲ್ಲಿ ಅದೆಷ್ಟು ಸಾಧಿಸಲ್ಪಟ್ಟಿದೆಯೆಂದು ಸರ್ವ ವಿದಿತವಾದ ವಿಚಾರವಾಗಿದೆ. ಇತ್ತೀಚೆಗೆ ನಿರ್ಮಿಸಲ್ಪಟ್ಟ ಇಸ್ರೆಲ್ ರಾಜ್ಯವು ವಿಸ್ತೀರ್ಣ

ಅಯ್ಯನವರಿಂದ ಬರೆಯಲ್ಪಟ್ಟನು" ಎಂದು ಇದೆ. ಈ ಪುಸ್ತಕವು ಕ್ರಮೇಣ ೨೦
ಪುಟಗಳಷ್ಟು ದೊಡ್ಡದಾಗಿ 1858 ರ ಕಾಲಕ್ಕೆ ಅದರ ನಾಲ್ಕನೇ ಆವೃತ್ತಿಯು ಪ್ರಕ
ವಾಯಿತು. 1855 ರಲ್ಲಿ ಅವನು "ಚಿಕ್ಕವರಿಗೆ ತಕ್ಕ ಪಾಠಗಳು" ಎಂಬುದಾಗಿ ಲೋ
ವಿಚಾರಗಳನ್ನೊಳಗೊಂಡ ಚಿಕ್ಕ ಪುಸ್ತಕವನ್ನು ಬರೆದನು. ಇದು ಉತ್ತಮ ಮಟ್ಟ
ಪಠ್ಯಪುಸ್ತಕವೆಂದು ಎಲ್ಲೆಲ್ಲೂ ಪರಿಗಣಿಸಲಾಗಿತ್ತು.

**೪. ರೈಸ್ 'ಅಯ್ಯನವರಿಂದ' ಬರೆಯಲ್ಪಟ್ಟ 'ಭೂಗೋಳಶಾಸ್ತ್ರಸಾರ' :—**

Benjamin Lewis Rice ಇವನು ಬರೆದ ಪಠ್ಯ ಪುಸ್ತಕಗಳ
"ಭೂಗೋಳಶಾಸ್ತ್ರಸಾರ' ಎಂಬುದು 130 ವರ್ಷಗಳಿಗೆ ಹಿಂದಿನ ಪಾಠಶಾಲೆಗಳ
ವಿಶೇಷ ಪ್ರಚಾರವಿತ್ತು. 168 ಪುಟಗಳ ಈ ಪುಸ್ತಕದ ಪ್ರಥಮ ಮುದ್ರಣವು 1848
ಲ್ಲಾಯಿತಲ್ಲದೆ ಅದರ ನಂತರ ಹತ್ತುವರ್ಷಗಳಲ್ಲಿ ಅದು ನಾಲ್ಕು ಬಾರಿ ಪುನರ್ಮುದ್ರ
ವಾಯಿತು. ಈ ಪುಸ್ತಕವು ಪ್ರಾಥಮಿಕ ಶಾಲೆಗಳಲ್ಲಿ ಉಪಯೋಗಿಸಲ್ಪಟ್ಟಿತ್ತಾಗಿದ್ದರ
ಅದರಲ್ಲಿ ಇದ್ದ ವಿಷಯಗಳು ಇಂದಿನ ಕಾಲದ ಬಹು ಮೇಲ್ತರಗತಿಯ ವಿದ್ಯಾರ್ಥಿಗಳ
ಮಾತ್ರ ಪಠಿಸುವಂಥಾವುಗಳಾಗಿದ್ದುವು. ಈ ಭೂಗೋಳಶಾಸ್ತ್ರದಿಂದ ದಿಗ್ದರ್ಶನಾರ್ಥ
ವಾಗಿ ಕೆಳಗಿನ ಭಾಗವನ್ನು ಹೆಕ್ಕಿ ಕೊಡಲ್ಪಟ್ಟಿದೆ—

> "ಮನುಷ್ಯರಲ್ಲಿ ಪ್ರಯೋಗಿಸಲ್ಪಡುವ ಭಾಷೆಗಳು ಎಷ್ಟೆಂದರೆ ಏಷ್ಯಾ
> ಖಂಡದಲ್ಲಿ 987, ಯೂರೋಪು 582, ಆಫ್ರಿಕಾ 276 ಮತ್ತು ಅಮೇರಿಕಾ
> 1214...."

ಎಂಬುದಾಗಿ ಹೇಳಿದ್ದಾನೆ. ಆದರೆ ಇದು ಅಂದಿನ ಜ್ಞಾನಪರಿಮಿತಿಯೊಳಗಡಗಿ
ಅಂಕೆ ಸಂಖ್ಯೆಗಳು ಎಂದು ತಿಳಿದುಕೊಳ್ಳಬೇಕಾಗಿದೆ. ಆಫ್ರಿಕಾ ಖಂಡವನ್ನು ಕುರಿತ
ಹೇಳುವಾಗ ಅದನ್ನು ಈ ರೀತಿ ಒಂಭತ್ತು ಭಾಗಗಳಾಗಿ ವಿಭಾಗಿಸಿದ್ದಾನೆ :—

> "ಆಫ್ರಿಕಾ ಖಂಡವು ಈಜಿಪ್ಟ್, ನೂಬಿಯಾ, ಅಬಿಸಿನಿಯಾ, ಬಾರ್ಬೆರಿ,
> ಪಶ್ಚಿಮ ಆಫ್ರಿಕಾ, ಮಧ್ಯ ಆಫ್ರಿಕಾ, ದಕ್ಷಿಣ ಆಫ್ರಿಕಾ, ಪೂರ್ವ ಆಫ್ರಿಕಾ,
> ಮತ್ತು ಸುತ್ತುಮುತ್ತಣ ದ್ವೀಪಗಳಾಗಿ ವಿಭಾಗಿಸಿದೆ...."

ಇತರ ಭೂಖಂಡಗಳ ವಿಚಾರದಲ್ಲೂ ಅಂದಿನ ಕಾಲಕ್ಕೆ ತಕ್ಕಂತೆ ಇದ್ದ ವಿಷಯ ಜ್ಞಾ
ವನ್ನು ಅಂತೆಯೇ ಕೊಟ್ಟಿದ್ದಾನೆ. ಅನಾಗರಿಕರು ಯಾರು, ಎಲ್ಲಿದ್ದಾರೆ. ಎಂಬುದನ್
ಕುರಿತು ಹೀಗನ್ನುತ್ತಾನೆ—

> "ಕೆಲವರು ಊರುಗಳಲ್ಲಿ ಯಾವಾಗಲೂ ವಾಸಮಾಡದೆ ಅಲ್ಲಲ್ಲಿ ತಿರುಗಿ
> ಕೊಂಡು ಕುರಿ, ದನ, ಮೇಯಿಸುವುದರಿಂದ ಬದುಕುತ್ತಾರೆ. ಇಂಥಾವರಲ್ಲಿ
> ಕಿರಾತರಲ್ಲಿ ಇರುವುದಕ್ಕಿಂತ ಹೆಚ್ಚು ಬುದ್ಧಿವುಂಟು. ಆದರೆ ಇವರಲ್ಲಿಯೂ ಕ್ರೂರ
> ವಾದ ಮರ್ಯಾದೆಗಳು ಇರುವುವು. ಇಂಥಾವರು ಆಫ್ರಿಕ ಖಂಡದಲ್ಲಿಯೂ ಏಷ್ಯಾ
> ಖಂಡಕ್ಕೆ ಸೇರಿದ ಅರಬಿಯದಲ್ಲಿಯೂ ಕೆಲವು ದ್ವೀಪಗಳಲ್ಲಿಯೂ ಇದ್ದಾರೆ.
> ಇವರಿಗೆ ತಿದ್ದುಪಾಟಿಲ್ಲದವರೆಂದು ಹೇಳಬಹುದು........"

ಈ ಎಲ್ಲಾ ವಿಷಯಗಳ ಮೇಲೂ 'Civilized, half-civilized, barbarians' ಎಂದು ಮೊದಲಾಗಿ ಇಂಗ್ಲಿಷ್‌ನಲ್ಲಿ ಶಿರೋನಾಮೆಯನ್ನು ಕೊಟ್ಟು ಅಲ್ಲಲ್ಲಿ ವಿವರಿಸಿದ್ದಾನೆ.

1860ರಲ್ಲಿ B. L. Rice ಇವನು ಕನ್ನಡ ಎರಡನೇ ಮತ್ತು ಮೂರನೇ ಪಠ್ಯಪುಸ್ತಕಗಳನ್ನು ರಚಿಸಿದನು. ಅತೀ ಉತ್ತಮ ವರ್ಗದ ಪುಸ್ತಕಗಳಾಗಿದ್ದುವು. ಅಂದಿನ ಕಾಲಕ್ಕೆ ಅವೆಲ್ಲಾ ಮೇಲ್ತರಗತಿಯ ವಿದ್ಯಾರ್ಥಿಗಳಿಂದ ಮಾತ್ರ ಪಠಿಸಲ್ಪಡ ಬೇಕಾಗಿವೆ. ಅವನ ಪುಸ್ತಕಗಳೆಲ್ಲವೂ ಬೆಂಗಳೂರು ವೆಸ್ಲೀ ಮುದ್ರಣಾಲಯದಲ್ಲಿಯೇ ಅಚ್ಚಾಗಿ ಹೊರಬಂದುವು.

ಅ. ರೈಸ್ ಇವನಿಂದ ಪಠ್ಯಪುಸ್ತಕ, ಕತೆ ಪುಸ್ತಕ ಮತ್ತು ಕಾದಂಬರಿಗಳು :-

ಕ್ರಿ.ಶ. 1870ರ ಒಳಗಾಗಿ B. L. Rice ಇವನು ಇನ್ನೂ ಹಲವು ಪಠ್ಯ ಪುಸ್ತಕಗಳನ್ನು ರಚಿಸಿದನು. ಆ ಪುಸ್ತಕಗಳೆಲ್ಲಾ ಬೋಧಪ್ರದವಾದ ಪ್ರಬಂಧಗಳು, ಪ್ರಾಚೀನ ಕವಿಗಳ ಕೃತಿಗಳು, ದಾಸರ ಹಾಡುಗಳು, ನಾಡಿನ ಚರಿತ್ರೆ ಮತ್ತು ಸಂಸ್ಕೃತಿ ಯನ್ನು ಕುರಿತಾದ ಪಾಠಗಳೆಲ್ಲವೂ ವಿದ್ವತ್ಪೂರ್ಣಕವಾಗಿದ್ದುವು. ಅವನ ಮೊದಲನೇ ಮತ್ತು ಎರಡನೇ ಪ್ರಶ್ನೋತ್ತರ ಬೋಧೆಯೆಂಬ ಪುಸ್ತಕಗಳು ನಾಲ್ಕಾರು ಬಾರಿ ಪುನ ರ್ಮುದ್ರಣವಾದುವು. ಇಂಗ್ಲಿಷ್ ಮತ್ತು ಗಣಿತ ಪಠ್ಯಪುಸ್ತಕಗಳನ್ನೂ ನವೀನ ಶಿಕ್ಷಣ ಕ್ರಮಕ್ಕನುಗುಣವಾಗಿ ರಚಿಸಿದನು. ಮೈಸೂರಿನ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿ ಯಾಗಿದ್ದ ಇವನು ತನ್ನ ಪಠ್ಯಪುಸ್ತಕಗಳನ್ನು ನಾಡೆಲ್ಲಾ ಚಲಾಯಿಸಿದನು. ಆದರೆ ಆ ಪುಸ್ತಕಗಳೆಲ್ಲವೂ ಅಲ್ಪವಾದುದಾಗಿರಲಿಲ್ಲ. ಘನವಾಗಿ, ಗಂಭೀರವಾಗಿ ಮತ್ತು ಪರಿಪುಷ್ಟವಾದ ವಿಚಾರಗಳಿಂದ ತುಂಬಿ ಜನತೆಯ ವಿದ್ಯಾಮಟ್ಟವನ್ನು ಮೇಲೇರಿಸಲು ಸಹಾಯಕವಾಗಿದ್ದುವು. ಇಷ್ಟರಲ್ಲಿ B. L. Rice ಇವನ ಕನ್ನಡ ಬರೆವಣಿಗೆ ಶೈಲಿ ಮತ್ತು ಪಾಂಡಿತ್ಯವು ಎಷ್ಟೋ ಮೇಲೇರಿತು. ದೇಶೀಯ ಪಂಡಿತರಿಗೂ ಮೇಲೆನಿಸಿ ಅವ ರಿಗೂ ಕನ್ನಡದಲ್ಲಿ ತಾನೇ ಶಿಕ್ಷಕನಾಗಿ ನಿಂತನು.

Benjamin Rice ಇವನು ರಚಿಸಿದ ಹಲವಾರು ಕನ್ನಡ, ಗಣಿತ, ಭೂಗೋಳ, ಚರಿತ್ರೆ ಮತ್ತು ವ್ಯಾಕರಣ ಪಠ್ಯಪುಸ್ತಕಗಳಲ್ಲಿ 1868ರಲ್ಲಿ ಇವನು ಬರೆದ 'ಕಥಾಸಪ್ತತಿ' ಎಂಬ 102 ಪುಟಗಳ ಚಿಕ್ಕ ಪುಸ್ತಕವೂ ಅಂದಿನ ಇನ್ನೊಂದು 'ನೀತಿ ಚಿಂತಾಮಣಿ' ಯಂತಿತ್ತು. ಆದರಿಂದ ಈ ಒಂದು ಕಥೆಯನ್ನು ಅವನ ನಿರೂ ಪಣಾ ಕ್ರಮಕ್ಕೆ ಉದಾಹರಣೆಯಾಗಿ ಇಲ್ಲಿ ಕೊಡಲಾಗಿದೆ—

"ಕಾಗೆಯನ್ನೂ ಹಂಸೆಯನ್ನೂ ಕುರಿತದ್ದು—ನರ್ಮದಾ ತೀರದಲ್ಲಿ ಒಂದು ಆಲದ ಮರದ ಮೇಲೆ ಒಂದು ಕಾಗೆ ಇತ್ತು. ಆ ಮಾರ್ಗದಲ್ಲಿ ಒಂದು ಹಂಸೆ ಹೋಗುತ್ತಾ ಇರಲು, ಕಾಗೆ ನೋಡಿ, 'ನೀನು ಎಲ್ಲಿಗೆ ಹೋಗುತ್ತೀ' ಎಂದು ಅಂತಃಕರಣದಿಂದ ಕೇಳಿತು. 'ನಾನು ಮಾನಸ ಸರೋವರಕ್ಕೆ ಹೋಗು ತ್ತೇನೆಂ'ದು ಹೇಳಿತು. 'ಆದರೆ ನಾನು ಅಲ್ಲಿಗೆ ಬರುತ್ತೇನೆ. ನಿನ್ನ ಸಂಗಡ

ಕರೆದುಕೊಂಡು ಹೋಗುತ್ತೀಯಾ' ಎಂದು ಕಾಗಿ ಕೇಳಿತು. ಆ ಮಾತುಗಳನ್ನು ಹಂಸೆ ಕೇಳಿ, 'ಎಲೋ ಕಾಗಿ. ಮಾನಸ ಸರೋವರ ಎಲ್ಲಿ? ನೀನು ಎಲ್ಲಿ? ಅಷ್ಟು ದೂರ ನೀನು ಬರಲಾರೆ'. ಎಂದು ಹೇಳಲಾಗಿ ಕಾಗಿಗೆ ಬಹಳ ಕೋಪ ಬಂದು. 'ಎಲೋ ಹಂಸೆ. ನೀನು ಗರ್ವದಿಂದ ಶರೀರವು ತಿಳಿಯದೆ ಮಾತಾಡುತ್ತಿ. ನಿಶ್ಚಯ ವಿಚಾರಿಸಿದರೆ ನಾನೇ ನಿನಗಿಂತ ಬಹು ತ್ವರೆಯಾಗಿ ಹಾರುತ್ತೇನೆ: ಇದಕ್ಕೆ ದೃಷ್ಟಾಂತರ ಈಗಲೇ ತೋರಿಸುತ್ತೇನೆ ನನ್ನ ಸಂಗಡ ಹೊರಟು ಬಾ' ಎಂದು ಆಕಾಶಮಾರ್ಗಕ್ಕೆ ನೆಗೆದು ಸಮುದ್ರದ ಮೇಲೆ ಸ್ವಲ್ಪ ದೂರ ಹಂಸೆಯೊಡನೆ ಹೋಗಿ ಆ ಮೇಲೆ ತಾನು ಅದಕ್ಕಿಂತಲೂ ಮುಂಚಿತವಾಗಿ ಹತ್ತುನೂರು ದೂರ ನೆಗೆದು ಹಿಂದಕ್ಕೆ ಹಂಸೆಯ ಬಳಿಗೆ ಬಂದನು...."

ಕಲ್ಕತ್ತಾದಲ್ಲಿದ್ದ Mrs. B. Mullins ಇವಳು ಬರೆದ ಇಂಗ್ಲಿಷ್ ಕಾದಂಬರಿಯೊಂದನ್ನು B.L. Rice ಇವನು 1859 ರಲ್ಲಿ "ಪರಂಜ್ಯೋತಿಯೂ ಕೃಪೆಯೂ" ಎಂಬುದಾಗಿ ಕನ್ನಡಕ್ಕೆ ಭಾಷಾಂತರಿಸಿದನು. ಸುಮಾರು ೨೦೦ ಪುಟಗಳ ಈ ಪುಸ್ತಕವನ್ನು Christian School Book Society ಇವರು ಪ್ರಕಟಿಸಿದರು. ಪರಂಜ್ಯೋತಿ ಮತ್ತು ಕೃಪಾಯೆಂಬ ಇರ್ವರು ತರುಣಿಯರನ್ನು ಕುರಿತಾದ ಈ ಕಾದಂಬರಿಯು ಉತ್ತಮವಾಗಿ ಕನ್ನಡಿಸಲ್ಪಟ್ಟಿದೆ. ಅದರ ಕೆಲವು ಪಂಕ್ತಿಗಳು ಹೀಗಿವೆ—

"...ಅವಳ ನಡತೆಗಳೂ ಗುಣಗಳೂ ಯಾವ ಪುರುಷನಿಗೂ ಸಂತೋಷ ಕೊಡತಕ್ಕವಾಗಿರುವವು. ಇದರ ತರುವಾಯ ಆ ಯೌವನಸ್ಥನು ಜೀವರತ್ನಳ ಬಳಿಯ ಮದುವೆ ಸಮ್ಬಂಧ ಮಾತಾಡಿಕೊಂಡು ಅವಳನ್ನು ಕುರಿತು ತೃಪ್ತಿ ಹೊಂದಿದ ಕಾರ್ಯವನ್ನೂ ಅವಳು ಆಮೇಲೆ ತನ್ನ ಅತ್ತೆಯ ನಿರ್ಭಾಗ್ಯ ಒಕ್ಕ ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋಗಬಹುದೆಂದು ಸಂತೋಷಪಟ್ಟ ಕಾರ್ಯವನ್ನೂ, ನಾನು ಇಲ್ಲಿ ವಿವರವಾಗಿ ತೋರಿಸ ಅಗತ್ಯವಿಲ್ಲ...."

೬. ಬೆಂಜಾಮಿನ್ ರೈಸ್ ಇವನಿಂದ ಹಲವು ಸಂಶೋಧನಾ ಲೇಖನಗಳು :—

Benjamin Lewis Rice ಇವನು 1870 ರ ಕಾಲದಲ್ಲಿ ಬಹು ದೊಡ್ಡ ಸಂಶೋಧಕನೆಂಬ ಹೆಸರನ್ನು ಗಳಿಸಿದನು. ಕನ್ನಡ ನಾಡನ್ನು ಕುರಿತಾದ ಅನೇಕ ಐತಿಹಾಸಿಕ ಲೇಖನಗಳು Asiatic Society Journal, Indian Evengelical Magazine, Madras Literary Journal ಮತ್ತು Indian Antiquary ಪತ್ರಿಕೆಗಳಲ್ಲಿ ಪ್ರಕಟವಾದವು. ಕರ್ನಾಟಕ ವಾಸ್ತುಶಿಲ್ಪ ಮತ್ತು ಪ್ರಾಕೃತ ವಿಚಾರಗಳಿಗೆ ಸಂಬಂಧಿಸಿದ ಅವನ ಇಂಗ್ಲಿಷ್ ಲೇಖನಗಳು ಸುಮಾರು ಒಂದು ಸಾವಿರ folio ಪುಟಗಳಿಗೂ ಮಿಕ್ಕಿ ಇವೆ. ಶಾಲೆಗಳ ಮುಖ್ಯಾಧಿಕಾರಿಯಾಗಿ ಪ್ರಾಂತದ ಎಲ್ಲಾ ಭಾಗಗಳನ್ನು ಸಂಚರಿಸುತ್ತಾ ಅಲ್ಲಲ್ಲಿ ಇದ್ದ ಪುರಾತನ ಶಾಸನ, ದೇಗುಲ, ತಾಳೆಓಲೆ ಮುಂತಾದವುಗಳ ಸಂಶೋಧನೆಯನ್ನು

ಗುತ್ತಾ ಅವನು ಅಗಾಧ ಕಾರ್ಯವನ್ನು ಸಾಧಿಸಿದನು.

1872 ರಲ್ಲಿ B. L. Rice ಇವನು Transliteration and Translation ಎಂಬುದಾಗಿ ಅರ್ಥಗರ್ಭಿತವಾದ ಲೇಖನವನ್ನು ಬರೆದನು. ಅದೇ ವರ್ಷ ಚೇರ ಮತ್ತು ಗಂಗರಾಜ ವಂಶದವರ ಕಾಲದ ಶಾಸನಗಳು ಮತ್ತು ಶಿಲಾಲಿಪಿಗಳನ್ನು ಕುರಿತು ಹನ್ನೆರಡು folio ಪುಟಗಳ ಲೇಖನವನ್ನು ಚಿತ್ರಸಹಿತವಾಗಿ ಪ್ರಕಟಿಸಿದನು. 1873ರಲ್ಲಿ ನೆಲಮಂಗಲದ ತಾಮ್ರಶಾಸನಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಉತ್ತಮವಾದೊಂದು ಐತಿಹಾಸಿಕ ವಿವರಣೆಯನ್ನು ಕೊಟ್ಟನು. 1874 ರಲ್ಲಿ ಶ್ರವಣಬೆಳ್ಗೊಳದ ಭದ್ರಬಾಹು ಮತ್ತು ಆ ವಿಷಯಕ್ಕೆ ಸಂಬಂಧವಾದ ಶಾಸನಗಳನ್ನು ಪರಿಶೀಲಿಸಿ ಬರೆದುದಲ್ಲದೆ 1876 ರಲ್ಲಿ "ಎರಡು ಕೊಂಗು ಅಥವಾ ಚೇರ ನಿರೂಪಗಳು" ಎಂಬುದಾಗಿ ಕ್ರಿ.ಶ. 513 ರ ಕಾಲದ ಶಾಸನಗಳನ್ನು ವಿವರಿಸಿ ಬರೆದನು.

ಕ್ರಿ. ಶ. 1879 ರಲ್ಲಿ "Two New Chalukya grants of 444 A. D.". ಈ ವಿಷಯವಾಗಿ ವಿಚಾರಗರ್ಭಿತವಾದ ಲೇಖನಗಳನ್ನು ಬರೆದು ಕರ್ನಾಟಕದ ಐತಿಹ್ಯವನ್ನು ಇತರ ಪಾಶ್ಚಾತ್ಯ ವಿದ್ವಾಂಸರ ಮುಂದಿಟ್ಟನು. 1883 ರಲ್ಲಿ ರಾಷ್ಟ್ರಕೂಟರ ಕಾಲದ ನಿರೂಪಗಳೆಂದೂ, 1886ರಲ್ಲಿ "Mud anur Grants of Bana Kings", ಎಂಬುದಾಗಿ ಕೋಲಾರ, ಮುಳುಬಾಗಿಲು ಮೊದಲಾದ ಸ್ಥಳಗಳ ಶಾಸನಗಳನ್ನು ಕುರಿತಾಗಿಯೂ ಬರೆದನು. ಅವನ ಈ ಹಲವು ಲೇಖನಗಳು Indian Antiquary ಮತ್ತಿತರ ಪತ್ರಿಕೆಗಳಲ್ಲಿ ಆಗಿಂದಾಗ್ಗೆ ಪ್ರಕಟವಾದಾಗ ಈ 'ರೈಸ್ ಅಧ್ಯಯನವು' ಮಾತ್ರವಲ್ಲ; ಕರ್ನಾಟಕದ ಚರಿತ್ರೆಯೇ ಇಡೀ ಭಾರತಕ್ಕೆ ಪರಿಚಿತವಾದಂತೆ ಆಯಿತು. ಅವನ ಲೇಖನಗಳು ಪ್ರಖ್ಯಾತ ವಿದ್ವಾಂಸರಾದ Dr. John Fleet. Rev. George Pope, Dr. Arthur Burnell ಮೊದಲಾದವರ ಪ್ರಶಂಸೆಗೂ ಪಾತ್ರವಾಯಿತು.

### ೨. ಬೆಂಜಾಮಿನ್ ರೈಸ್ ಇವನಿಂದ ಇನ್ನೂ ಹಲವು ಚಾರಿತ್ರಿಕ ಲೇಖನಗಳು :—

Rev. Benjamin Rice ಇವನಿಂದ ಹಲವು ಸಂಶೋಧನಾ ಲೇಖನಗಳು ಒಂದರ ನಂತರ ಒಂದಾಗಿ ಹೊರಟಾಗ ಅವು ಇತರ ಪಾಶ್ಚಾತ್ಯ ವಿದ್ವಾಂಸರ ಕುತೂಹಲವನ್ನು ಕೆರಳಿಸಿದುವು. 1868 ರಷ್ಟು ಹಿಂದೆಯೇ ಅವನು "On Mercara Plates" ಎಂಬುದಾಗಿ ಗಂಗರ ಕಾಲದ ಶಾಸನಗಳನ್ನು ಮೊದಲ ಬಾರಿಗೆ ವಿವರಿಸಿದನು. ಅದರೊಡನೆಯೇ Mahavali Dynasty, the Jaina and Vaishnava Compact, Bana king Nandivarma ಎಂದು ಮೊದಲಾಗಿ ಪ್ರತ್ಯೇಕ ಲೇಖನಗಳನ್ನು ತಾನಾಗಿ ಶೋಧಿಸಿದ ಶಾಸನಗಳ ಆಧಾರದಿಂದ ಬರೆದನು.

ಇಷ್ಟರಲ್ಲಿ B. L Rice ಇವನು ಮೈಸೂರು ಸರಕಾರದ Director of Archaeological Researches ಸ್ಥಾನಕ್ಕೆ ಏರಿಸಲ್ಪಟ್ಟನು. ಅವನ ಪರಿ

ಶೋಧನೆಗಳು ಭಾರತ ಸರಕಾರದ ಅವಗಾಹನೆಗೆ ಬಂದುವು. Asoka Edicts of Siddapur ಎಂಬುದರ ಮೇಲೆ ಮತ್ತು ಅಲ್ಲಿ ದೊರಕಿದ ಇನ್ನೂ ಹಲವು ಪುರಾತನ ಶಿಲಾಶಾಸನಗಳ ಮೇಲೆ ವರದಿಗಳನ್ನು ತಯಾರಿಸಿದನು. ಪಲ್ಲವರು, ಬಾಣರು ಮತ್ತು ಮೌರ್ಯವಂಶದ ಗುಪ್ತರ ಕಾಲದ ಶಾಸನಗಳಲ್ಲಿ ಸಂಸ್ಕೃತ, ಪಾಲಿ ಮತ್ತು ಕನ್ನಡ ಬರೆಹಗಳನ್ನೆಲ್ಲಾ ಆಧುನಿಕ ಭಾಷೆಗೆ decipher ಮಾಡಿ ಇಳಿಸಿದನು. ಕದಂಬರ ಕಾಲ, ಸಮುದ್ರಗುಪ್ತನ ಕಾಲ ಮತ್ತು ಕಾಕುತ್ಸವರ್ಮನ ಕಾಲದ ಶಾಸನಗಳನ್ನೂ ಅವನು ತಿರುವಿ ಹಾಕಿದಾಗ ದಕ್ಷಿಣ ಭಾರತದ ಚರಿತ್ರೆಯು ಆಳವೆಷ್ಟೆಂದು ತಿಳಿಯಲಾಯಿತು. ಉತ್ತರ ಕರ್ಣಾಟಕದ ಕೆಲವೆಡೆಗಳಲ್ಲಿದ್ದ ಬೌದ್ಧ ವಿಹಾರಗಳ ಸಂಶೋಧನೆಯನ್ನೆಸಗಿ ಅಲ್ಲಿದ್ದ ಪಾಲೀ ಶಾಸನಗಳನ್ನು ಬಯಲಿಗೆಳೆದು ನಾಡಿನ ಇತಿಹಾಸದ ಮೇಲೆ ಹೊಸ ಬೆಳಕನ್ನು ಹಾಯಿಸಿದನು. B. L. Rice ಇವನು ಲೇಖನಗಳಲ್ಲಿ ತನ್ನ ಸಂಶೋಧನೆಯನ್ನು ಹೇಗೆ ಪ್ರತಿಪಾದಿಸುತ್ತಾನೆಂಬುದಕ್ಕೆ ಅವನು ನಾಗಮಂಗಲದ ತಾಮ್ರ ಶಾಸನದ ಮೇಲೆ ಬರೆದುದರ ಒಂದು ಅಂಶವನ್ನು ಇಲ್ಲಿ ಉದಾಹರಿಸಲಾಗಿದೆ—

"The inscription begins with an account of the Kongu or Chera kings, almost identical with that given in the Mercara plates of ... 466 A. D. The name of the first king, who is here called Kodgini Varma........while the sixth king is called Kogani Mahadiraja ...... The form Kongani occurs but once.... .. This was a stone inscription in Coorg containing a grant by Satyavakya Kodgini Varma ...whom I take to be the third in succession .......and of 840 A. D. If from the similarity in the names Kongu and Kongani we may infer that the former was sometimes written Kodgu, we have a very near approach to Kodagu ......."

ಪ್ರತಿಯೊಂದು ಶಾಸನದ ಮೇಲೂ ಅವನ ವಿವರಣೆಯು ಸ್ಪಷ್ಟವಾಗಿ ಇದೆ. ಉದಾಹರಣೆಗೆ ಚೋಳರ ಕಾಲದ ಮತ್ತು ಮಾಲಂಬಿ ಗುಡ್ಡದ ಬಳಿ ದೊರೆತ ಶಾಸನವನ್ನು ಹೇಗೆ ವಿವರಿಸಿದನೆಂಬುದಕ್ಕೆ ಇದನ್ನು ಈ ಕೆಳಗೆ ಕೊಡಲಾಗಿದೆ :—

"Mullur–the equivalent of which in English would be Thorn–ton, is the name of a village in the north of Coorg. It was the chief place of the Kongalva kingdom which was founded by the Chola king Rajaraja...... of 1004 A. D., and it arose out of the conquest by the Cholas of the Chengalvas who were the rulers of east and north of Coorg and Hunsur. These were defeated at Panasoge by a Chola Army commanded by Panchavana Maharya ...... but the victory was mainly due to an officer Manija who gained

his reward in being installed in Yelusavirasime with the title of Kshatriya Shikhamani Kongalva, and Malavi was given him as a personal estate. This is a beautiful mountain called Malambi whose needle-peak rising to about 4500 feet.......".

## ೮. ರೈಸ್ ಇವನಿಂದ ಮೈಸೂರು ಎಫಿಗ್ರಾಫಿಯಾ ಕರ್ಣಾಟಕದ ಮೊದಲ ಭಾಗ :—

ಕ್ರಿ. ಶ. 1871 ರಲ್ಲಿ ಹಳೇ ಮೈಸೂರು ರಾಜ್ಯ ಸರಕಾರವು Benjamin Rice ಇವನನ್ನು ಆ ರಾಜ್ಯದ Gazetteers ಇದನ್ನು ತಯಾರಿಸಲು ನೇಮಿಸಿತು. ತನ್ನ ಶಾಲಾ ಅಧಿಕಾರ ಸ್ಥಾನದಿಂದ ಪ್ರಾಕ್ತನ ಪರಿಶೋಧನಾ ಇಲಾಖೆಯ ಅಧಿಕಾರವನ್ನು ಅಲ್ಲಿಂದನಂತರ ಆವನು ಪಡೆದನು. ಆ ಇಲಾಖೆಯ ಸ್ಥಾಪನೆಗೆ ಕಾರಣಕರ್ತನಾಗಿ ತನ್ನ ಹೊಸ ಕಾರ್ಯಭಾರವನ್ನು ಉತ್ಸಾಹದಿಂದ ಕೈಗೊಂಡನು. ಅಲ್ಲದೆ ತನ್ನ ಕಾರ್ಯಕ್ರಮವನ್ನು "he made peculiarly his own as Director of Archaeological Researches" ಎಂಬಂತೆ ನಡೆಸಿದನೆಂದು ಅನಂತರ ಶ್ಲಾಘಿಸಲಾಯಿತು.

ಮದ್ರಾಸಿನಲ್ಲಿ Epigraphia Carnatica ಇದನ್ನು ತಯಾರಿಸುವ ಯೋಜನೆಯೊಂದನ್ನು John Fleet, George Pope, Robert Sewell ಮೊದಲಾದವರು ಸೇರಿ ನಡೆಸಿದ್ದು ಸುಮಾರು 3000 folio ಪುಟಗಳಷ್ಟು ದೊಡ್ಡದಾದ ಗ್ರಂಥವನ್ನು ಸುಮಾರು ಹದಿನಾಲ್ಕು ಕಾಂಡಗಳಲ್ಲಿ ಮತ್ತು ಸಚಿತ್ರವಾಗಿ ಅವರು 1890 ರ ಕಾಲಕ್ಕೆ ಪ್ರಕಟಿಸಿದ್ದರು. ಮೈಸೂರು ರಾಜ್ಯವನ್ನು ಕುರಿತಾಗಿ ಗಜೆಟಿಯರುಗಳನ್ನು ಬರೆಯಲು ಆರಂಭಿಸಿದ್ದ B. Lewis Rice ಇವನು Dr. Buehler, Edward P. Rice, E. Hultzsch, F. Kittel ಮೊದಲಾದವರ ಸಹಾಯದಿಂದ ಮೈಸೂರಿನ Epigraphia Carnatica ಗ್ರಂಥ ಕಾಂಡಗಳ ಬರೆವಣಿಗೆಗೆ ತೊಡಗಿದನು. ದೇಶೀಯರ ಪೈಕಿ ಆವನಿಗೆ ಎಸ್. ಜಿ. ನರಸಿಂಹಾಚಾರ್ಯ ಮತ್ತು ಆರ್. ನರಸಿಂಹಾಚಾರ್ಯರೂ ಸಹಕರಿಸಿದರು. Indian Antiquary ಮತ್ತಿತರ ಇಂಗ್ಲಿಷ್ ಪತ್ರಿಕೆಗಳಲ್ಲಿ ಆಗ ಲೇಖನಗಳನ್ನು ಬರೆಯುತ್ತಿದ್ದ ನಟೇಶ ಶಾಸ್ತ್ರಿ, ಕೆ. ಬಿ. ಪಥಕ್. ಆರ್. ದೀಕ್ಷಿತ್, ಹರಬಿಲಾಸ್ ಶರ್ದಾ ಮೊದಲಾದವರ ಪರಿಶೋಧನಾ ವಿವರಗಳ ನೆರವೂ ಈ ಗಂಥ್ರಕಾಂಡಗಳ ಸಂಪಾದನೆಗೆ ದೊರೆತುವು

ರಾಜ್ಯದ ಗಜೆಟಿಯರುಗಳನ್ನು ಬರೆದು ಮುಗಿಸಿದ ನಂತರವೇ 1875 ರಿಂದ 1880 ರ ವರೆಗೆ B. Lewis Rice ಇವನು ಕೇಂದ್ರ ಸರಕಾರದ ಪ್ರಾಕ್ತನ ಪರಿಶೋಧನಾ ಇಲಾಖೆಯ ಆದೇಶದಂತೆ Epigraphia Carnatica ಇದರ ಮೊದಲನೇ ಭಾಗವನ್ನು ಪೂರ್ತಿಗೊಳಿಸಿದನು. ಮದ್ರಾಸಿನಲ್ಲಿ ಅಂಥಾ ಒಂದು

ಬೃಹದ್ಗ್ರಂಥವು ದಕ್ಷಿಣ ಹಿಂದೂಸ್ಥಾನದ ಮತ್ತು ಕರ್ಣಾಟಕದ ಚರಿತ್ರೆಗೆ ಹೇಗೆ ಕೈಗನ್ನಡಿಯಂತಾಯಿತೋ ಅದೇ ರೀತಿಯಲ್ಲಿ ಮೈಸೂರಿನ ಈ ಐತಿಹಾಸಿಕ ಗ್ರಂಥ ವನ್ನೂ ಪರಿಪುಷ್ಟವಾಗಿ ಸಂಪಾದಿಸಿ ಪ್ರಕಟಿಸಿದನು.

## ೯. ಒಟ್ಟಾಗಿ 3722 ಪ್ರಾಚೀನ ಶಾಸನಗಳ ಸಂಗ್ರಹದ ಸಂಶೋಧನಾ ಗ್ರಂಥ :—

ಮುದ್ರಾಸಿನ Epigrphia Carnatica ಈ ಗ್ರಂಥ ಸಂಪುಟಗಳಿಗೆ ಸೇರಿಸಲಾದ 'Mysore and Coorg' ಈ ಎರಡು ಪ್ರಾಂತಗಳನ್ನು ಕುರಿತು Benjamin L. Rice ಇವನು ಬರೆದ ಮೂರು ಕಾಂಡಗಳ ಗ್ರಂಥವು 1879 ರಲ್ಲಿ ಪ್ರಕಟವಾಯಿತು. ಇದರ ಮೊದಲನೇ ಕಾಂಡವು 400 Demy ಪುಟಗಳಿಂದ ಕೂಡಿದ್ದಿತು. ಅದರಲ್ಲಿ Major H. Dixon ಇವನು 1865 ರಲ್ಲಿ ಸರಕಾರದ ನೆರವಿನಿಂದ ತೆಗೆದ ಸುಮಾರು 175 ಶಿಲಾ ಮತ್ತು ತಾಮ್ರ ಶಾಸನಗಳ ಭಾವ ಚಿತ್ರಗಳು ಸೇರಿಸಲ್ಪಟ್ಟು ಆ ಗ್ರಂಥದ ಮುದ್ರಣವು ಆಕರ್ಷಕವಾಗಿದ್ದಿತು. ಆ ಗ್ರಂಥಕ್ಕೆ 70 ಪುಟಗಳ ಮುನ್ನುಡಿಯನ್ನು ಬರೆಯುತ್ತಾ B. L. Rice ಇವನು ಹೀಗೆ ಹೇಳಿರುವನು :—

> " The present inscriptions cover a period embracing the whole of the Christian era. Some profess to go back much further, but their claims to such antiquity will be considered in their proper places".

ತಾನು ಸ್ವತಃ ಆ ಕೆಲಸದಲ್ಲಿ ಎಷ್ಟು ಶ್ರಮಪಡಬೇಕಾಯಿತೆಂದೂ, ಪ್ರಾಚೀನಕಾಲದ ಶಾಸನ ಲಿಪಿಗಳನ್ನು ಅದೆಷ್ಟು ಪ್ರಯಾಸದಿಂದ ಓದಿ ನವೀನ ರೀತಿಗೆ ತರಬೇಕಾಯಿತೆಂದೂ ಈ ರೀತಿ ಹೇಳಿದ್ದಾನೆ :—

> "...Gradually setting to work, after many repeated attempts, I had at length the satisfaction of deciphering the whole of the obsolete characters, and the continued practice not only gave me facility in reading inscriptions but familiarised me with their general style and method of arrangement...."

ಇದರಿಂದ ಅವನ ಪಾಂಡಿತ್ಯವೂ ಆ ಕೆಲಸದಲ್ಲಿ ಅವನು ಇಟ್ಟಿದ್ದ ಶ್ರದ್ಧೆಯೂ ಎಷ್ಟೆಂಬುದು ವ್ಯಕ್ತವಾಗುತ್ತದೆ. ಅವರೆವಿಗೂ ಇತರರಾರೂ ಆ ಶಾಸನಗಳ ಗೂಢಲಿಪಿಗಳನ್ನು ಇಂದಿನ ಕಾಲಕ್ಕೆ ಅರ್ಥವಾಗುವಂತೆ ಬರೆಯದೇ ಇದ್ದಾಗ ಉತ್ತರ ಭಾರತದಲ್ಲಿ James Prinsep ಇವನು ಅಶೋಕನ ಕಾಲದ ಶಾಸನಗಳನ್ನೆಲ್ಲಾ ಪಾಲೀ ಭಾಷೆಯಿಂದ ಹೇಗೆ ನವೀನ ಲಿಪಿಗಳಿಗಿಳಿಸಿದನೋ ಅದೇ ಕೆಲಸವನ್ನು B. Lewis Rice ಇವನೂ ಕನ್ನಡಕ್ಕಿಳಿಸಿ ಇತ್ತೀಚೆಗಿನ ಸಂಶೋಧಕರ ಕೃತಜ್ಞತೆಗೆ ಪಾತ್ರನಾಗಿದ್ದಾನೆ.

ಈ ಗ್ರಂಥದಲ್ಲಿ ಒಟ್ಟಾಗಿ 3722 ಪ್ರಾಚೀನಕಾಲದ ಶಾಸನಗಳು ಮತ್ತಿತರ ಲಿಖಾವಟ್ಟು ಗಳನ್ನೆಲ್ಲಾ ಮೈಸೂರು ಮತ್ತು ಕೊಡಗು ಪ್ರಾಂತಗಳಿಂದ ಅಂದು ಸಂಪಾದಿಸಿದ್ದು ಚೊಕ್ಕವಾಗಿ ಇಂಗ್ಲಿಷ್ ಲಿಪಿಯಲ್ಲಿ ಮುದ್ರಣವಾಗಿವೆ. ಹಲವು ಶಾಸನ ಬರೆಹಗಳ ಕಲ್ಲುಗಳ ಮತ್ತು ಓಲೆಗಳ ಚಿತ್ರಗಳನ್ನೂ ಕೊಟ್ಟದ್ದು ಆ ಗ್ರಂಥವು ಸಮರ್ಪಕವಾಗಿದೆ. ಅದರಲ್ಲಿ ನಾಡಿನ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಯೆಲ್ಲವನ್ನೂ ಕ್ರೋಢೀಕರಿಸಿ ಕೊಟ್ಟ ರೀತಿಯಲ್ಲಿ ಆಧಾರ ಬರೆಹಗಳು ಅವುಗಳ ಮೂಲ ಮತ್ತು ವಿವರಣೆಗಳಿಂದ ಅದರ ಸಂಪಾದಕನ ಸಂಶೋಧನಾ ಜ್ಞಾನವನ್ನು ಪ್ರತಿಬಿಂಬಿಸಿವೆ !

**೧೦. ಹಳೆ ಮೈಸೂರು ರಾಜ್ಯದ ಚರಿತ್ರೆಗೆ ಆಧಾರಗಳ ಸಂಗ್ರಹ :—**

ಮೇಲೆ ಹೇಳಿದ Epigraphia Carnatica ಇದರ ಮೈಸೂರು ಸಂಪುಟಗಳ ಎರಡನೇ ಕಾಂಡವು ಶ್ರವಣಬೆಳ್ಗೊಳದ ಶಾಸನಗಳನ್ನು ಕುರಿತಾಗಿ ಮಾತ್ರ ಇದ್ದಿತಾದರೂ ಅದು ಇನ್ನೆಷ್ಟು ದೊಡ್ಡ ಪ್ರಮಾಣದ ಗ್ರಂಥವಾಯಿತು. ಪುರಾತನ ಜೈನ ಮತ್ತಿತರ ಶಾಸನಗಳೆಲ್ಲವನ್ನೂ ಸಂಪಾದಿಸಿ Benjamin Rice ಇವನು 530 folio ಪುಟಗಳಲ್ಲಿ ಆ ಗ್ರಂಥವನ್ನು 1889 ರಲ್ಲಿ ಹೊರತಂದನು. ಆ ಎಲ್ಲಾ ಶಾಸನಗಳನ್ನು ಮೂಲದಲ್ಲಿದ್ದಂತೆಯೇ ಇಂಗ್ಲಿಷ್ ಲಿಪಿಯಲ್ಲೂ ಕನ್ನಡದಲ್ಲೂ ಬೇರೆ ಬೇರೆ ಕೊಟ್ಟದ್ದಾನೆ. ಗಂಗ, ರಾಷ್ಟ್ರಕೂಟ, ರಟ್ಟ ಇತ್ಯಾದಿ ರಾಜವಂಶಗಳ ಕಾಲದ ಚರಿತ್ರೆಯನ್ನು ಶಾಸನಗಳ ಆಧಾರದಿಂದ ಅಲ್ಲಲ್ಲಿ ವಿವರಿಸಿದ್ದಾನೆ, Dr. John Fleet ಇವನು ಆ ಶಾಸನಗಳ ಆಧಾರದಿಂದ ಅಲ್ಲಲ್ಲಿ ವಿವರಿಸಿದ್ದಾನೆ, Dr. John Fleet ಇವನು ಆ ಶಾಸನಗಳ ಬಗ್ಗೆ ಕೊಟ್ಟ ಅಭಿಪ್ರಾಯಗಳನ್ನು ಅಲ್ಲಲ್ಲಿ ಸಮರ್ಥಿಸಿದ್ದಾನಲ್ಲದೆ ಈ ಕೆಲಸದಲ್ಲಿ ಅವನಿಗೆ H. Colebrooke, Horace Wilson, Prof. Kern, W. W. Hunter ಮೊದಲಾದ ಅಖಿಲ ಭಾರತ ಖ್ಯಾತಿಯ ವಿದ್ವಾಂಸರ ಬರೆಹಗಳೂ ಸಾಹಾಯಕವಾದುವು ಎಂದು ತಿಳಿಸಿದ್ದಾನೆ. ಇದಕ್ಕೂ ಅವನು ಪ್ರಾಚೀನ ಶಿಲಾ ಮತ್ತು ತಾಮ್ರಶಾಸನಗಳ ಗೂಢಲಿಪಿಗಳನ್ನು ಓದಿ ಅರ್ಥ ಮಾಡುವುದರಲ್ಲಿ ಅದೆಷ್ಟು ಕುಶಲನಾಗಿದ್ದಾನೆಂದು ಅವನು ಆ ಗ್ರಂಥದ ಮುನ್ನುಡಿಯಲ್ಲಿ ಹೇಳಿದ ಮಾತುಗಳಿಂದ ವ್ಯಕ್ತವಾಗುತ್ತದೆ:—

> "Before these inscriptions were deciphered by me, no one had succeeded in reading them nor was even the object with which they were engraved known so completely had all of the ancient alphabets been lost, although the Jains to this day write in what would be called an old form of character...".

ಈ ಗ್ರಂಥದ ನಂತರ Benjamin Rice ಇವನು ಹಳೆ ಮೈಸೂರು ರಾಜ್ಯಕ್ಕೆ ಸಂಬಂಧಿಸಿದ Epigraphia Carnatica ಇದರ ಮೂರನೇ ಕಾಂಡವನ್ನು 650 folio ಪುಟಗಳಲ್ಲಿ ಸಂಪಾದಿಸಿ ಬರೆದು ಪ್ರಕಟಿಸಿದನು. ಇದರಲ್ಲಿ ಮೈಸೂರು

ಜಿಲ್ಲೆಯನ್ನು ಮಾತ್ರ ಕುರಿತು ಸವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ಆ ಜಿಲ್ಲೆಗೆ ಸೇರಿದ್ದ ಶ್ರೀರಂಗಪಟ್ಣ ತಾಲೂಕಿನಿಂದ 150 ಶಾಸನಗಳು. ಮಂಡ್ಯ ಮತ್ತು ಮದ್ದೂರು ತಾಲೂಕುಗಳಿಂದ 124, ಮಳವಳ್ಳಿಯಿಂದ 122, ಮೈಸೂರಿನಿಂದ 60, ತಿರುಮಕೂಡ್ಲು—ನರಸೀಪುರದಿಂದ 140 ಮತ್ತು ನಂಜನಗೂಡಿನಿಂದ 199. ಹೀಗೆ ಶಾಸನಗಳು ಸಂಗ್ರಹಿಸಲ್ಪಟ್ಟುವಲ್ಲದೆ ಅವುಗಳ ಐತಿಹಾಸಿಕ ವಿವರವನ್ನು ಈ ಗ್ರಂಥಕಾಂಡದಲ್ಲಿ ಕೊಡಲಾಗಿದೆ. ಇವುಗಳ ಪೈಕಿ ಹೈದರ ಮತ್ತು ಟಿಪ್ಪುಸುಲ್ತಾನರ ಕಾಲದ ರಾಜಧಾನಿಯಾಗಿದ್ದ ಶ್ರೀರಂಗಪಟ್ಣದ ಹಲವು ಶಾಸನಗಳು ತಮಿಳು ಮತ್ತು ಪರ್ಷಿಯನ್ ಭಾಷೆಗಳಲ್ಲಿವೆ. ಈ ಎಲ್ಲಾ ಶಾಸನಗಳನ್ನು ಕನ್ನಡ, ಇಂಗ್ಲಿಷ್, ತಮಿಳು ಮತ್ತು ಪರ್ಷಿಯನ್ ಲಿಪಿಗಳಲ್ಲಿಯೇ ಮುದ್ರಿಸಿ ಅವುಗಳ ವಿವರಣೆಯನ್ನು ಇಂಗ್ಲಿಷ್‌ನಲ್ಲಿ ಕೊಡಲಾಗಿದೆ. ಇದರಲ್ಲೂ John Fleet ಇವನ ಸಂಶೋಧನಾನುಭವದ ಛಾಯೆ ಬಿದ್ದಿದೆಯೆಂದು B. L. Rice ಇವನು ಹೇಳುತ್ತಾನೆ. ಈ ಶ್ರೇಷ್ಠ ವಿದ್ವಾಂಸನು ಕಳೆದ ಶತಮಾನದಲ್ಲಿ ತನ್ನ ಐವತ್ತು ವರ್ಷಗಳ ಕಾಲದ ಕನ್ನಡ ಸೇವೆಯ ಅವಧಿಯಲ್ಲಿ ಕಡೇ ಬಾರಿಗೆ ನಡೆಸಿದ ಮಹತ್ಕಾರ್ಯದ ಪರಿಣಾಮವೇ ಈ Epigraphia Carnatica ಇದರ ಮೈಸೂರು ಸಂಪುಟದ ಮೂರನೇ ಕಾಂಡವಾಗಿದೆ. ಆ ಗ್ರಂಥದ ಮುನ್ನುಡಿಯಲ್ಲಿ ಈ ಅವಿಶ್ರಾಂತ ಸಾಹಿತಿ ಮತ್ತು ಸಂಶೋಧಕ Benjamin Rice ಇವನು ಈ ರೀತಿಯಾಗಿ ಹೇಳಿದ್ದಾನೆ:—

> "I trust that the almost herculean task of the outcome of which this is an instalment, may result in elucidating the till lately little known history of a country that has had an eventful past and for which there is doubtless in store a great future."

**೧೧. ಬೆಂಜಾಮಿನ್ ರೈಸ್ ಇವನ ಪರಿಶ್ರಮಕ್ಕೆ ತಕ್ಕ ಪ್ರಶಂಸೆ:—**

ಮೇಲಿನ Epigraphia Carnatica ಈ ಗ್ರಂಥಕಾಂಡಗಳಲ್ಲಿ ಹಳೆ ಮೈಸೂರು ರಾಜ್ಯದ ಐತಿಹಾಸಿಕ ವಿವರಗಳಿಗೆ ತಕ್ಕ ಆಧಾರಗಳನ್ನು Benjamin Rice ಇವನು ತುಂಬಿದ ವೇಳೆಯಲ್ಲಿ ಅವನು ಹಿಂದೆಯೇ ರಚಿಸಿದ ಮೂರು ಕಾಂಡಗಳ "Mysore and Coorg" ಆ ರಾಜ್ಯದ ರಾಜಕೀಯ, ಆರ್ಥಿಕ, ಸಾಮಾಜಿಕ ಇತ್ಯಾದಿ ವಿಷಯಗಳನ್ನು ಸವಿಸ್ತಾರವಾಗಿ ಹೇಳುವ ಉತ್ತಮ ಗಜಿಟಿಯರುಗಳಾಗಿ ಮತ್ತು ಜನಪ್ರಿಯವಾದ ಹೊತ್ತಗೆಗಳಾಗಿ ಪ್ರಚಾರವಾದುವು. ಆ ಎರಡು ಪ್ರಾಂತಗಳ ಭೂಗೋಳ ವಿವರ, ಜನಜೀವನ ಮೊದಲಾದುವುಗಳನ್ನು ಕುರಿತ ವಿವರಗಳಿಗೆ Colin Mackenzie, Benjamin Heyne, Col. Mark Wilks ಮೊದಲಾದವರು ಅವನಿಗಿಂತ ಐವತ್ತು ವರ್ಷಗಳಿಗೆ ಹಿಂದೆ ಬರೆದಿಟ್ಟ ವರದಿಗಳು ಸಹಾಯಕವಾದುವು ಎಂದು ಹೇಳಿದ್ದಾನೆ. ಆದರೆ ಅವೆಲ್ಲಕ್ಕೂ ಮೇಲಾಗಿ B. L. Rice ಇವನ ಸ್ವಂತ ಪರಿಶ್ರಮವು ಪುಟದಿಂದ ಪುಟಕ್ಕೂ ತೋರುತ್ತದೆ. ಗ್ರಂಥದ ಅಂತ್ಯದಲ್ಲಿ ಅಮೂಲ್ಯವಾದ ಒಂದು ಶಬ್ದಕೋಶವೂ ಇದ್ದು

ಆ 680 demy ಪುಟಗಳ ಹೊತ್ತಗೆಯು ಆ ಗ್ರಂಥಕರ್ತನ ಮತ್ತು ಸಂಪಾದಕನ ಸಾಹಸಕ್ಕೆ ಕಳಶವಿಟ್ಟಂತಾಗಿದೆ.

ಈ ಗಜೆಟಿಯರಿನ ಎರಡನೇ ಕಾಂಡವು ಕೋಲಾರ, ತುಮಕೂರು, ಚಿತ್ರದುರ್ಗ ಶಿವಮೊಗ್ಗ, ಹಾಸನ, ಕಡೂರು, ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳ ಪೂರ್ಣ ಪರಿಚಯವನ್ನು ಕೊಡುತ್ತದೆ. 1878 ರಲ್ಲಿ ಪ್ರಕಟವಾದ ಅದರ ಮೂರನೇ ಕಾಂಡ ದಲ್ಲಿ ಆಗ ಪ್ರತ್ಯೇಕ ಪ್ರಾಂತವಾಗಿದ್ದ ಕೊಡಗು ಜಿಲ್ಲೆಯ ಚರಿತ್ರೆ, ಜನ, ಜನರ ಆಚಾರ ವಿಚಾರ, ವಿವಿಧ ಇಲಾಖೆಗಳು, ರಾಜ್ಯಭಾರ ಕ್ರಮ, ಇತ್ಯಾದಿಗಳನ್ನು ಕುರಿತು 450 demy ಪುಟಗಳಷ್ಟು ಹೇಳಲಾಗಿದೆ. ಚಾರಿತ್ರಿಕವಾಗಿ ಮತ್ತು ವ್ಯಾವಹಾರಿಕ ವಾಗಿ ಆ ಕಾಲದಲ್ಲಿ ಮೈಸೂರು ಮತ್ತು ಕೊಡಗು ಪ್ರಾಂತಗಳು ಆ ಕಾಲದಲ್ಲಿ ಬಹು ಸಮೀಪವಾಗಿದ್ದುವು. ಹಳೆ ಮೈಸೂರು ರಾಜ್ಯದ ಬ್ರಿಟಿಷ್ ಅಧಿಕಾರಿಯೇ ಕೊಡಗಿನ ಮೇಲಧಿಕಾರಿಯೂ ಆಗಿದ್ದನು. ಕೆಲಕಾಲ ಅಷ್ಟಾಗ್ರಾಮದ ನ್ಯಾಯಾಧಿಕಾರಿಯೇ ಕೊಡಗಿನ ನ್ಯಾಯ ಇಲಾಖೆಯ ಅಧಿಕಾರಿಯೂ ಆಗಿದ್ದನು. ಆ ಕಾರಣದಿಂದಲೇ ಆ ಎರಡು ಪ್ರಾಂತಗಳ ಗಜೆಟಿಯರುಗಳನ್ನು ಒಂದೇ ಸಂಪುಟದೊಳಗೆ ಅಡಗಿಸ ಲಾಗಿತ್ತು. ಅದಕ್ಕೆ ವಿವರಣೆಯಾಗಿ B. Lewis Rice ಇವನು "What Wales is to England-Coorg to Mysore" ಎಂಬುದಾಗಿ ನ್ಯಾಯ ವಾಗಿಯೇ ಹೇಳಿದನು.

ಹೇಗೂ Benjamin Rice ಇವನು ತನ್ನ ಈ ಸಂಶೋಧನಾ ಗ್ರಂಥಗಳಿಂದ ಓರ್ವ ಗಣ್ಯ ವಿದ್ವಾಂಸನೆಂದು ಪರಿಗಣಿಸಲ್ಪಟ್ಟನು. ಭಾರತ ಸರಕಾರದ ಪ್ರಾಕ್ತನ ಪರಿಶೋಧನಾ ಇಲಾಖೆಯ ಅಧಿಕಾರಿ Dr. W W. Hunter ಇವನು 1876 ರಲ್ಲಿ ಬೆಂಗಳೂರಿಗೆ ಬಂದಿದ್ದಾಗ ಈ ಸಂಶೋಧಕನ ಅವಿಶ್ರಾಂತ ದುಡಿಮೆಯನ್ನು ಕಂಡು ಸಂತೋಷವನ್ನು ವ್ಯಕ್ತಪಡಿಸಿದನಲ್ಲದೆ ಮೈಸೂರು ರಾಜ್ಯವು ಪ್ರಾಕ್ತನ ಪರಿಶೋಧನೆ ಯಲ್ಲಿ ತುಂಬಾ ಮುಂದುವರಿದಿದೆಯೆಂದೂ ಪ್ರಶಂಸಿಸಿದನು. ಅಷ್ಟೇ ಅಲ್ಲ ಬ್ರಿಟಿಷ್ ಸರಕಾರವು ಈ ಅಪೂರ್ವ ಸಂಶೋಧಕ Benjamin Rice ಇವನಿಗೆ Companion of Indian Empire ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿತು.

### ೧೨. ಬೆಂಜಾಮಿನ್ ರೈಸ್ ಇವನ 'ಸಂಸ್ಕೃತ—ಕನ್ನಡ' ಸಾಹಿತ್ಯಸೇವೆ :—

Rev. Benjamin Rice ಇವನ ಸಾಹಿತ್ಯ ಮತ್ತು ಐತಿಹಾಸಿಕ ವ್ಯಾಸಂಗವು ಈ ವರೆಗೆ ಹೇಳಿದಷ್ಟರಿಂದಲೇ ಮುಗಿಯಲಿಲ್ಲ. ಅವನ ಸಾಹಿತ್ಯ ಪ್ರಪಂಚವು ತುಂಬಾ ವ್ಯಾಪಕವಾದುದಾಗಿತ್ತು. ಅವನ ಸಾಹಸವು ಅವರ್ಣನೀಯವಾಗಿತ್ತು. ಅವನ ಪಾಂಡಿತ್ಯವು ಅಪಾರವಾಗಿತ್ತು. ಬೈಬಲ್ ಕೃತಿಗಳು, ಪದ್ಯ ಪುಸ್ತಕಗಳು, ಪತ್ರಿಕಾ ವ್ಯವಸಾಯ, ಕವನ ಸಂಕಲನ ಮತ್ತು ಇತಿಹಾಸ ಸಂಶೋಧನೆಗಳೇ ಅಲ್ಲದೆ ಅವನು ಪ್ರಾಚೀನ ಕನ್ನಡ ಶಾಸ್ತ್ರ ಗ್ರಂಥಗಳನ್ನೂ ಸಂಪಾದಿಸಿದ ಮಹಾ ಪಂಡಿತನಾಗಿದ್ದನು.

ಕ್ರಿ. ಶ. 1868 ರಲ್ಲಿ B. Lewis Rice ಇವನು 'ಸಂಸ್ಕೃತ ಪ್ರದರ್ಶಿನಿ'

ಯೆಂಬ 74 Demv ಪುಟಗಳ ಅಮೂಲ್ಯವಾದ ಒಂದು ಗ್ರಂಥವನ್ನು ಬರೆದನು.* ಆ ಕೃತಿಯ ಉದ್ದೇಶವೇನೆಂಬುದನ್ನು ಅವನು ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾನೆ:–

> " Anyone one knows either English or Canarese may, it is believed, with the aid of this book and a grammar, obtain, such a Preliminary knowledge of the Sanskrit language, and familiarity with the Devanagari character, as will qualify him for entering upon the study of the post-Vedic literature. There is no other work similarly adopted to the use of Kannada people."
>
> " This 'Introduction to Sanskrit' is useful to learn Sanskrit with its elementary grammarand with its parallel transliterations grammatical analysis, vocabulary etc."

ಈ "ಸಂಸ್ಕೃತ ಪ್ರದರ್ಶಿನಿ"ಯನ್ನು ಬರೆದ ಕ್ರಮವು ಎಂತಿದೆಯೆಂಬುದಕ್ಕೆ ಅದರಿಂದ ಈ ಕೆಳಗಿನ ಕೆಲವು ಪಂಕ್ತಿಗಳನ್ನು ಉದಾಹರಿಸಲಾಗಿದೆ :—

"ತತೋಽಭರತ ಶತ್ರುಘ್ನೌ ತಾತಾದೇಶೇನ ಜಗ್ಮತುಃ (ದೇವನಾಗರೀ ಲಿಪಿಯಲ್ಲಿ)
ತತಸ್ ಭರತ ಶತ್ರುಘ್ನೌ ತಾತ ಆದೇಶೇನ ಜಗ್ಮತುಃ (ಕನ್ನಡ ಲಿಪಿಯಲ್ಲಿ)
tatas Bharata Shatrughnau tataa Aadeshena jagmatus.
adv. Dva-am. N. d. T..-am. I.s gam 3d. 2 pret.
ಕ್ರಿ. ವಿ. ಷ. ಅ. ಪು. ೧ ದ್ವಿ. ಅ. ಪು. ೩-ಏ ಗಮ್ ಪ್ರ. ದ್ವಿ. ಭೂ. (ಕ.ಲಿ.)
"ಯುಧಾಜಿಧಾಭಿಧಾನಸ್ಯ ಮಾತುಲಸ್ಯ ಪುರಂ ಪ್ರತಿ. (ದೇವನಾಗರಿ ಲಿಪಿ)
"ಯುಧಾಜಿತ್ ಅಭಿಧಾನಸ್ಯ ಮಾತುಲಸ್ಯ ಪುರಂ ಪ್ರತಿ. (ಕನ್ನಡ ಲಿಪಿ)
Yudhajit abhidhaanasya matulasya puram prati.
B-an. G. s — am. G. s. — an. Ac. s. prep. (ಕ.ಲಿ.)
ಬ—ಅ,ನ, ೬ ಏ ಅ,ಪು. ೬ ಏ. ಅ. ನ. ೨ ಏ ಅ. "

ಸಂಸ್ಕೃತವನ್ನು ಪ್ರಾರಂಭದಲ್ಲಿ ಓದಲಿಕ್ಕೆ ಮತ್ತು ವ್ಯಾಕರಣವನ್ನು ಅಭ್ಯಸಿಸಲಿಕ್ಕೆ ಈ ಗ್ರಂಥವು ತುಂಬಾ ಉಪಯುಕ್ತವಾದುದಾಗಿದೆ. ಇದರ ಅಂತ್ಯದಲ್ಲಿ ಒಂದು ಶಬ್ದಕೋಶವೂ ಕೊಡಲ್ಪಟ್ಟಿದೆ. ಭಾಷಾ ವ್ಯಾಸಂಗಕ್ಕೆ ಇದೊಂದು ಅಮೂಲ್ಯವಾದ ಕೈಪಿಡಿಯೆಂದು ನಿಸ್ಸಂದೇಹವಾಗಿ ಹೇಳಬಹುದು.

### ೧೩. ರೈಸ್ ಇವನು ತಯಾರಿಸಿದ ಸಂಸ್ಕೃತ ಓಲೆಗಳ ಪಟ್ಟಿ :—

Rev. Benjamin Rice ಇವನು ತನ್ನ ವಿವಿಧ ಚಟುವಟಿಕೆಗಳ ಮಧ್ಯೆ ಹಳೆ ಮೈಸೂರು ಮತ್ತು ಕೊಡಗು ಪ್ರಾಂತಗಳಿಂದ ಅಂದಿನ ವರೆಗೆ ಸಂಪಾದಿಸಿದ್ದ ಎಲ್ಲಾ ಸಂಸ್ಕೃತ ಗ್ರಂಥಗಳ ತಾಳೆ ಓಲೆಗಳ, ತಾಮ್ರ ಮತ್ತು ಶಿಲಾಶಾಸನಗಳ ಒಂದು Catalogue of Sanskrit Inseriptions ಎಂಬ ಒಂದು ಪಟ್ಟಿಯನ್ನು

---

* ಇದರ ಒಂದೆರಡು ಪುಟಗಳ ಚಿತ್ರವನ್ನು ಬೇರೆಡೆ ಕೊಟ್ಟಿದೆ.

ತಯಾರಿಸಿದನು. ಇದು 1884 ರಲ್ಲಿ ಅವನಿಂದ. ಸಿದ್ಧಪಡಿಸಲಾಯಿತು. 327 demy ಪುಟಗಳ ಈ ಪುಸ್ತಕದಲ್ಲಿ 2944 ಸಂಸ್ಕೃತ ಓಲೆಗಳ. ಶಾಸನಗಳ ಮತ್ತಿತರ ಲಿಖಾವಟ್ಟುಗಳ ಪಟ್ಟಿಯನ್ನು ಕೊಡಲಾಗಿದೆ. ಅದರಲ್ಲಿ ತಾನು ಸಂಪಾದಿಸಿದಲ್ಲದೆ ಎಡಿನ್‌ಬರೋದಲ್ಲಿದ್ದ ಸಂಸ್ಕೃತ ವಿದ್ವಾಂಸ Dr F. Eggling ಇವನಲ್ಲಿದ್ದ ಮೈಸೂರಿನ ಕೆಲವು ಸಂಸ್ಕೃತ ಓಲೆಗಳು ಹೆಸರನ್ನೂ ಸೇರಿಸಲಾಗಿದೆಯೆಂದು B. L. Rice ಇವನು ತಿಳಿಸಿದ್ದಾನೆ. ಈ ಕೆಲಸವನ್ನು ಸಾಧಿಸಲು ಕಾರಣವೇನೆಂದು ತನ್ನ ಮುನ್ನುಡಿಯಲ್ಲಿ ಅವನು ಹೀಗೆ ಬರೆದಿದ್ದಾನೆ :—

> "The present work had its origin in the scheme sanctioned by the Government of India in November 1868, for the discovery and preservation of the records of ancient Sanskrit literature of India."

ಈ ಓಲೆಗಳ ಪಟ್ಟಿಯನ್ನೂ ಪ್ರತಿಯೊಂದು ಲಿಖಾವಟ್ಟಿನ ವಿವರವನ್ನೂ ಆ ಗ್ರಂಥದಲ್ಲಿ ಈ ರೀತಿ ಕೊಡಲಾಗಿದೆ :— (ಮುಂದಿನ ೪೯೦ ನೇ ಪುಟದಲ್ಲಿ ಕೊಡಲಾಗಿದೆ.)

ಕಳೆದ ಶತಮಾನದಲ್ಲಿ ಬ್ರಿಟಿಷ್ ಸರಕಾರವು ನಮ್ಮ ದೇಶದ ಪ್ರಾಚೀನ ಸಾಹಿತ್ಯ ರಾಶಿಯು ಕೆಡದಂತೆ ಉಳಿಸಲು ಕೈಗೊಂಡ ಪ್ರಯತ್ನ. ಮತ್ತು ಆ ಮಹೋದ್ದೇಶಕ್ಕನುಗುಣವಾಗಿ ಅದನ್ನು ಕಾರ್ಯತಃ ನಿಷ್ಠೆಯಿಂದ ನಡೆಸಲು ಅವರಿಗೆ Benjamin Lewis Rice ಇವನಂಥಾ ವಿದ್ವಾಂಸರ ದಕ್ಷತೆ ಅಂದು ದೊರಕಿದ್ದು ನಾಡಿನ ಮತ್ತು ಈ ದೇಶದ ಸುದೈವವೆಂದು ಇನ್ನೊಮ್ಮೆ ಹೇಳದೆ ನಿರ್ವಾಹವಿಲ್ಲ.

## ೧೪. ರೈಸ್ ಇವನು 'ಕವಿರಾಜ ಮಾರ್ಗ' ಮತ್ತು 'ಭಾಷ ಭೂಷಣ'ವನ್ನು ಸಂಪಾದಿಸಿದನು :—

ಈಗ ಪ್ರಚಲಿತವಿರುವ ಮತ್ತು ದೊರಕಿರುವ ಪ್ರಾಚೀನ ಗ್ರಂಥಗಳ ಪೈಕಿ ಮೊದಲನೆಯದಾದ ಮತ್ತು ಹಿರಿದಾದ "ಕವಿರಾಜ ಮಾರ್ಗ" ವೆಂಬ ಕನ್ನಡ ಸಾಹಿತ್ಯ ಶಾಸ್ತ್ರೀಯ ಗ್ರಂಥವು ಕಳೆದ ಶತಮಾನದ ಮಧ್ಯಕಾಲದ ವರೆಗೂ ಬೆಳಕಿಗೆ ಬಂದಿರಲಿಲ್ಲ. ಇದರ ಸಂಶೋಧನೆ ಮತ್ತು ಸಂಪಾದನೆಗೆ Benjamin Lewis Rice ಇವನೇ ಕಾರಣನಾಗಿದ್ದಾನೆ. ಅಂಥಾ ಒಂದು ಗ್ರಂಥವು ಇದೆಯೆಂದು ಇತರ ಪುಸ್ತಕಗಳ ಮೂಲಕವಾಗಿ ದೇಶೀಯರು ತಿಳಿದಿದ್ದರಲ್ಲದೆ ಯಾರೂ ಅದನ್ನು ಆವರೆಗೂ ನೋಡಿರಲಿಲ್ಲ. ಹಾಗಿದ್ದಾಗ 1883 ರಲ್ಲಿ B. L. Rice ಇವನು ಆ ಅಪೂರ್ವ ಗ್ರಂಥದ ವಿಷಯವಾಗಿ ಒಂದು ಲೇಖನವನ್ನು Asiatic Society Journal ಇದರಲ್ಲಿ ಬರೆದಾಗ ಕನ್ನಡ ಸಾಹಿತ್ಯದ ಹಿರಿಮೆಯು ಇಡೀ ಭಾರತಕ್ಕೆ ಪರಿಚಿತವಾಯಿತು. ಅದರ ನಂತರ ತನ್ನ ಇತರ ಬರವಣಿಗೆಗಳ ಮೂಲಕ ಅದರ ವಿಚಾರವಾಗಿ ಕನ್ನಡಿಗರಿಗೂ ತಿಳಿಸಿದನು. 'ಕವಿರಾಜ ಮಾರ್ಗ' ವನ್ನು Lewis Rice ಇವನ ಸಹಾಯದಿಂದಲೇ ಪರಿಷ್ಕರಿಸಿ 1898 ರಲ್ಲಿ ಪ್ರಕಟಿಸಿದ ದೇಶೀಯ ಸಂಶೋಧಕ ಕಾಶೀನಾಥ ಪಥಕ್ ಇವನು ಅದರಲ್ಲಿ 21 ಪುಟಗಳ ಮುನ್ನುಡಿಯನ್ನು

| ನಂ. | ಹೆಸರು (ದೇವನಾಗರಿ ಲಿಪಿ | ಲೇಖಕ | ವಿಷಯ | ಗ್ರಂಥ ಸಂಖ್ಯೆ | ಬರೆಯಲ್ಪಟ್ಟ ಲಿಪಿ | ಯಾವುದರಲ್ಲಿ ? | ಯಾರಲ್ಲಿ ಇದೆ ? | ಇತ್ಯಾದಿ |
|---|---|---|---|---|---|---|---|---|
| 1 | ಋಗ್ವೇದ | — | ವೇದ | 8000 | ದೇವನಾಗರಿ | ತಾಳೆ ಓಲೆಯಲ್ಲಿ | ರಾಮಸ್ವಾಮಿ, ಚಿಕ್ಕನಾಯಕನಹಳ್ಳಿ | ಓಲೆಗಳು ಚೆನ್ನಾಗಿವೆ |
| 957 | ಗೋಪೀನಾಥ ಮಿಶ್ರೀಯ | ಗೋಪೀನಾಥ ಮಿಶ್ರೀ | ತರ್ಕ | 4000 | ತೆಲುಗು | ತಾಳೆವೋಲೆಯಲ್ಲಿ | ಸರಸ್ವತೀಮಠ, ನರಸೀಪುರ | ಚೆನ್ನಾಗಿವೆ |
| 1265 | ಆತ್ಮಬೋಧ | — | ವೇದಾಂತ | — | ನಾಗರ | ಶ್ರೀತಾಳೆಯಲಿ | ಶೃಂಗೇರಿ ಮಠ | 18 ಅಧ್ಯಾಯಗಳು |
| 1530 | ಮೀಮಾಂಸ | ವ್ಯಾಸ | ವೇದಾಂತ | — | ದೇವನಾಗರಿ | ಕಾಗದದಲ್ಲಿ | ಅಣ್ಣಯ್ಯಚಾರ್ಯ, ಸರ್ಜಾಪುರ | ಸ್ವಲ್ಪ ಕೆಟ್ಟಿದೆ |
| 1784 | ಕರ್ಮವಿಪಾಕ | ಕಮಲಾಕರ ಭಟ್ಟ | ಧರ್ಮಶಾಸ್ತ್ರ | 4000 | ದೇವನಾಗರಿ | ಕಾಗದದಲ್ಲಿ | ಬೊಮ್ಮರಸಾಯನ, ಅಗ್ರಹಾರ | — |

ಬರೆಯುತ್ತಾ 'ಹೀಗಂದಿರುವನು'—

"The 'Kaviraja Marga' is the oldest Kannada work that has yet been discoverd. It was little known to the public before it was first introduced to Oriental scholars by Mr. Rice in a paper to Asiatic Society Journal in July 1883."

ಕ್ರಿ. ಶ. 1834 ರಲ್ಲಿ Benjamin Rice ಇವನು ನಾಗವರ್ಮನ "ಕರ್ಣಾಟಕ ಭಾಷಾ ಭೂಷಣ" ವನ್ನು ಸಂಪಾದಿಸಿ ಹೊರತಂದನು. ಇದು ಮೈಸೂರು ಸರಕಾರೀ ಮುದ್ರಣಾಲಯದಲ್ಲಿ ಅಚ್ಚಾಗಿ ಹೊರಬಂತು. ಪ್ರತಿಯೊಂದು ಸೂತ್ರದ ಮೇಲೆ ತಕ್ಕ ವಿವರಣೆಯು ಸೂಕ್ಷ್ಮವಾಗಿ ಕೊಡಲ್ಪಟ್ಟಿದೆ. ಪುಟದ ಮೇಲಿನ ಅರ್ಧ ಭಾಗದಲ್ಲಿ ಶ್ಲೋಕ, ವೃತ್ತಿ, ಪ್ರಯೋಗಗಳನ್ನು ಇಂಗ್ಲಿಷ್ ಲಿಪಿಯಲ್ಲಿಯೇ ಬರೆದು ಅದನ್ನೆ ಕೆಳಗಿನ ಅರ್ಧಭಾಗದಲ್ಲಿ ಕನ್ನಡ ಲಿಪಿಯಲ್ಲೂ ಕೊಟ್ಟಿದ್ದಾನೆ. ಇಂಗ್ಲಿಷ್‌ನಲ್ಲಿ ಬರೆದ ಶ್ಲೋಕಗಳು ಹೀಗಿವೆ—

SUTRA 102—Adu-idu-udunam ante va-tau pumsi.
,, 103—Val-ke-cha Striyam
,, 104—Dirgah ka-tayoh

ಇವುಗಳ ಇಂಗ್ಲಿಷ್ ಅನುವಾದವು ಹೀಗೆ ಕೊಡಲ್ಪಟ್ಟಿವೆ—

"The roots of adu, du, udu on taking the masculine terminations of all the cases change their last syllable to va and ta.

"For the feminine of all the cases to val and ke.

"The vowel is lengthened before k and t."

ಪ್ರಾರಂಭದಲ್ಲಿ 37 demy ಪುಟಗಳಷ್ಟು ಮುನ್ನುಡಿಯನ್ನು ಈ ಗ್ರಂಥದ ವಿಷಯ ವಾಗಿ ಮತ್ತು ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತು ಬರೆದಿದ್ದಾನೆ. ಗ್ರಂಥದ ಕೊನೆಯಲ್ಲಿ ಒಂದು ವಿಷಯ ಸೂಚೀ ಪಟ್ಟಿಯನ್ನು (Index) ಕೊಟ್ಟಿದ್ದಾನೆ. ನಾಗವರ್ಮನನ್ನು ಕುರಿತು B. L. Rice ಇವನು "the oldest grammarian of the Kannada language" ಎಂದು ಹೇಳಿದ್ದಾನೆ.

### ೧೫. ಬೆಂಜಾಮಿನ್ ರೈಸ್ ಸಂಪಾದಿಸಿದ "ಕರ್ಣಾಟಕ ಶಬ್ದಾನುಶಾಸನ":—

"ಕರ್ಣಾಟಕ ಭಾಷಾ ಭೂಷಣ" ವನ್ನು Benjamin Rice ಇವನು ಮೊದಲು ಬಾರಿಗೆ ತಾಳೆ ಓಲೆಯಿಂದ ಕಾಗದಕ್ಕೆ ಇಳಿಸಿದನಂತರ ಶ್ರೇಷ್ಠ ಕನ್ನಡ ವೈಯ್ಯಾಕರಣಿ ಭಟ್ಟಾಕಳಂಕನ "ಕರ್ಣಾಟಕ ಶಬ್ದಾನುಶಾಸನ" ವನ್ನು ಸಂಪಾದಿಸಿ 1890 ರಲ್ಲಿ ಪ್ರಕಟಿಸಿದನು. ಸಂಸ್ಕೃತದಲ್ಲಿ ಬರೆಯಲ್ಪಟ್ಟ ಈ ಕನ್ನಡ ವ್ಯಾಕರಣ ವನ್ನು ಕನ್ನಡ ಲಿಪಿ ಮತ್ತು ಇಂಗ್ಲಿಷ್ ಲಿಪಿಯಲ್ಲಿ "ಕರ್ಣಾಟಕ ಭಾಷಾ ಭೂಷಣ"

ವನ್ನು ಮುದ್ರಿಸಿದಂತೆ ಬಹು ಸೊಗಸಾಗಿ 700 folio ಪುಟಗಳಲ್ಲಿ ಮುದ್ರಣವಾಗಿದೆ. ಕನ್ನಡ ಸಾಹಿತ್ಯಚರಿತ್ರೆ, ವ್ಯಾಕರಣ ಶಾಸ್ತ್ರ ಇತ್ಯಾದಿಗಳನ್ನು ಕುರಿತು 51 folio ಪುಟಗಳ ಉದ್ಬೋಧಕವಾದ ಮುನ್ನುಡಿಯನ್ನು ಇಂಗ್ಲಿಷ್‌ನಲ್ಲಿಯೇ ಬರೆದಿದ್ದಾನೆ. ಎಲ್ಲಾ 592 ಸೂತ್ರಗಳು, ಅವುಗಳ ವೃತ್ತಿ ವ್ಯಾಖ್ಯಾನಗಳು ಮೊದಲಾಗಿ ಕನ್ನಡ ಲಿಪಿಯಲ್ಲಿ 268 folio ಪುಟಗಳನ್ನು ಆಗಿವೆ. ಅದನ್ನೇ ಪುನಃ ಇಂಗ್ಲಿಷ್ ಲಿಪಿಯಲ್ಲಿ ಮುದ್ರಿಸಲ್ಪಟ್ಟುದು 300 ಪುಟಗಳನ್ನು ದೀರ್ಘವಾಗಿದ್ದು. ಗ್ರಂಥದ ಕೊನೆಯಲ್ಲಿ 82 ಪುಟಗಳ ಶಬ್ದಕೋಶವನ್ನೂ ಕೊಡಲಾಗಿದೆ. ಸೂತ್ರಗಳನ್ನು ಕುರಿತಾದ ಸೂಚೀ ಪಟ್ಟಿಯು Index 19 ಪುಟಗಳನ್ನು ಪ್ರತ್ಯೇಕವಾಗಿ ಇದೆ. ಈ ಅಮೂಲ್ಯ ಸಂಪಾದನಾ ಗ್ರಂಥವನ್ನು ಮೈಸೂರಿನ ಅಂದಿನ ಅರಸನಾಗಿದ್ದ ಚಾಮರಾಜನಿಗೆ 'ಅರ್ಪಣೆ' ಮಾಡಲಾಗಿದೆ.

ಆ ವರೆಗೂ ತಾಳೆವೋಲೆಗಳಲ್ಲಿಯೇ ಹುದುಗಿದ್ದ ಈ ಬರೆವಣಿಗೆಯ ಮೂಲಪ್ರತಿಗಳು ಶ್ರವಣಬೆಳ್ಗೊಳದ ಒಬ್ಬ ಶಾಸ್ತ್ರಿ, ಚಾಮರಾಜನಗರದ ಒಬ್ಬ ಪಂಡಿತ, ಮೈಸೂರಿನ ಇನ್ನೊಬ್ಬ ಗುಮಾಸ್ತ, ಹೀಗೆ ಕೆಲವರಿಂದ ದೊರೆಯಿತೆಂದು Benjamin Rice ಇವನು ಹೇಳಿದ್ದಾನೆ. ಸೂತ್ರ, ವೃತ್ತಿಗಳನ್ನೆಲ್ಲಾ ಓದಿ ಪರಿಷ್ಕರಿಸಿ ಕಾಗದಕ್ಕೆ ಇಳಿಸುವುದರಲ್ಲಿ Fernandiz Kittel ಮತ್ತು ಕೆಲವು ದೇಶೀಯ ಪಂಡಿತರು ಸಹಕರಿಸಿದರೆಂದು ಹೇಳಿದ್ದಾನೆ. ಅದರ ಮುನ್ನುಡಿಯಲ್ಲಿ ಅವನು ಈ ರೀತಿ ಹೇಳಿದ್ದ ಮಾತುಗಳು ಅಕ್ಷರಶಃ ನಿಜವೆಂದು ಆ ಬೃಹದ್ಗ್ರಂಥವನ್ನು ನೋಡಿದ ಯಾರೊಬ್ಬನೂ ಒಪ್ಪಲೇ ಬೇಕಾಗಿದೆ.

"This standard work, now offered to the public, has never before been printed. The collection of manuscripts, with a view to its publication, was commenced by me nearly twenty years ago, but multifarious changes and duties have prevented the design from being brought sooner to completion. Moreover, it was a laborious and difficult undertaking, and the printing alone has occupied several years."

"ಕರ್ನಾಟಕ ಭಾಷಾ ಭೂಷಣ" ಇದರ ಮುನ್ನುಡಿಯಲ್ಲಿ ಕೊಟ್ಟಂತೆಯೇ ಈ "ಶಬ್ದಾನುಶಾಸನ"ದಲ್ಲೂ ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿವರವಾಗಿ ಕೊಟ್ಟಿದ್ದಾನೆ. ಇಂಗ್ಲಿಷ್ ಲಿಪಿಯಲ್ಲಿಯೇ ಸಮಗ್ರ ಕನ್ನಡ ಸಾಹಿತ್ಯಾವಲೋಕನವನ್ನು ನಡೆಸಿದ B. L. Rice ಇವನ ಸಾಹಸವು ಅವರ್ಣನೀಯವಾಗಿದೆ. ತಾನು ಕನ್ನಡದಲ್ಲಿ ಹೇಳತಕ್ಕಂಥದ್ದೆಲ್ಲವನ್ನೂ ಇಂಗ್ಲಿಷ್ ಲಿಪಿಯಲ್ಲಿ ಅಂತೆಯೇ ಬರೆದಿದ್ದಾನೆ. ಉದಾಹರಣೆಗೆ ಈ ಒಂದು ಕಂದಪದ್ಯವನ್ನು ಅದರಿಂದ ಎತ್ತಿ ಕೊಡಲಾಗಿದೆ :—

**"Kaaveriyendamaa Go—**
**daavari varam irdda nad adaa Kannadadol**
**Bhavisida janapadam vasu—**
**dhaa valaya vilina vishada vishaya vishesham."**

**೧೩. 'ಪಂಪ ರಾಮಾಯಣ' ಮತ್ತು 'ಅಮರಕೋಶ' ಇವುಗಳ ಪ್ರಕಟಣೆ:—**

ವಾಲ್ಮೀಕಿ ರಾಮಾಯಣದಿಂದ ಸ್ವಲ್ಪಮಟ್ಟಿಗೆ ಬೇರ್ಪಟ್ಟಿರುವ "ರಾಮಚಂದ್ರ ಚರಿತ ಪುರಾಣ" ಅಥವಾ "ಪಂಪ ರಾಮಾಯಣ"ವು ನಾಗಚಂದ್ರ ಕವಿಯಿಂದ ರಚಿತವಾದುದು. ಈ ಗ್ರಂಥದ ಹಲವು ಓಲೆ ಪ್ರತಿಗಳನ್ನು Dr. A. Weber ಮತ್ತು Dr. A. C Burnell ಇವರು ಸಂಪಾದಿಸಿ ಮತ್ತು ಪರಿಶೀಲಿಸಿ ಅದರ ಬಗ್ಗೆ ಸಾಕಷ್ಟು ಸಂಶೋಧನಾ ಕೆಲಸವನ್ನು 1870ರ ಕಾಲದಲ್ಲಿ ಕೈಗೊಂಡಿದ್ದರು. ಅದನ್ನೇ ಮುಂದುವರಿಸಿ Rev. Benjamin L. Rice ಇವನು ಆ 'ಪಂಪರಾಮಾಯಣ'ದ ಮೊದಲಿನ ಐದು ಆಶ್ವಾಸಗಳನ್ನು ಮೂಲದಿಂದ ಅಂತೆಯೇ ತೆಗೆದು 1874ರಲ್ಲಿ ಮುದ್ರಿಸಿ ಹೊರತಂದನು. ಅದರಲ್ಲಿ ಆ ಗ್ರಂಥದ ವಿಷಯವಾಗಿ ಐದು ಪುಟಗಳ ಮುನ್ನುಡಿಯನ್ನು ಇಂಗ್ಲಿಷ್‌ನಲ್ಲಿ ಬರೆದನು. ಅಲ್ಲದೆ, ಅದನ್ನು ಮದ್ರಾಸು ವಿಶ್ವವಿದ್ಯಾಲಯದ ಮೇಲ್ತರಗತಿಗಳಿಗೆ ಪಠ್ಯಪುಸ್ತಕವಾಗಿಯೂ ಆರಿಸಲಾಯಿತು.

ಆ ಗ್ರಂಥದ ಉಳಿದ ಭಾಗವನ್ನು ಸಂಪಾದಿಸಲು B. L. Rice ಇವನು ಹಲವೆಡೆಗಳಿಂದ ತಾಳೆವೋಲೆಗಳನ್ನು ಸಂಗ್ರಹಿಸುತ್ತಲೇ ಇದ್ದನು. Rev. F. Kittel ಇವನ ಬಳಿಯಲ್ಲಿದ್ದ ಆ ಗ್ರಂಥದ ಮೂರು ಬೇರೆ ಬೇರೆ ತಾಳೆವೋಲೆಗಳನ್ನು ತರಿಸಿ ಅವನ್ನು ತುಲನಾತ್ಮಕವಾಗಿ ಪರೀಕ್ಷಿಸಿ ಮತ್ತು ಪರಿಶೀಲಿಸಿ 1892ರಲ್ಲಿ ಇಡೀ ಗ್ರಂಥವನ್ನು ಅಚ್ಚು ಹಾಕಿಸಿದನು. ಇದರಲ್ಲಿ ಅವನು 96 ಪುಟಗಳ ದೀರ್ಘ ಮುನ್ನುಡಿಯನ್ನು ಬರೆಯುತ್ತಾ 'ರಾಮಚಂದ್ರಚರಿತ ಪುರಾಣ'ದ ಸಮಗ್ರ ಕತೆಯನ್ನು ನಿರೂಪಿಸಿದನಲ್ಲದೆ ಆ ಕಾವ್ಯವನ್ನು ಕುರಿತು ವಿಚಾರಪೂರ್ಣ ವಿಮರ್ಶೆಯನ್ನೂ ನಡೆಸಿದನು. ಆ ಗ್ರಂಥವನ್ನು ಅವನ Bibliotheca Carnataca ಎಂಬುದಾಗಿ ತಾನು ಸಂಪಾದಿಸಿ ಪ್ರಕಟಿಸುತ್ತಿದ್ದ ಗ್ರಂಥ ಸಂಚಿಕೆಗಳ ಒಂದು ಭಾಗವಾಗಿ ಪ್ರಕಟಿಸಿದನು.

ಇಷ್ಟರಲ್ಲಿ Rev. Rice ಇವನು ಹಿಂದೆಯೇ ಎಂದರೆ 1883ರಲ್ಲಿ ಸಂಪಾದಿಸಿ ಪ್ರಕಟಿಸಿದ್ದ "ಅಮರಕೋಶ"ವು ಎರಡನೇ ಬಾರಿಗೆ ಮುದ್ರಣವಾಯಿತು. ಈ 'ಅಮರಕೋಶ'ವನ್ನು ಭಾರತದಲ್ಲಿ ಅಂದಿನ ನೂರಾರು ಪಾಶ್ಚಾತ್ಯ ವಿದ್ವಾಂಸರು ಪ್ರಕಟಿಸಿದ್ದರಾದರೂ Rev. Rice ಇವನ ವ್ಯಾಖ್ಯಾನವೇ ಬೇರೊಂದು ಬಗೆಯಲ್ಲಿ ಇತ್ತು. ಪ್ರತಿಯೊಂದು ಶ್ಲೋಕದ ಅರ್ಥವನ್ನು ಇಂಗ್ಲಿಷ್‌ನಲ್ಲೂ ಕನ್ನಡದಲ್ಲೂ ಬೇರೆ ಬೇರೆ ಕೊಟ್ಟು, ಅಲ್ಲಲ್ಲಿ ವಿವರಿಸಿ ಯಾರಿಗೂ ಸ್ವತಃ ಮತ್ತು ಇತರರ ಸಹಾಯವಿಲ್ಲದೆಯೇ ಕಲಿಯಬಹುದಾದ ಸಮರ್ಪಕ ಹೊತ್ತಿಗೆಯಾಗಿ ಸಂಪಾದಿಸಿ ಹೊರತಂದನು. ಅಂತ್ಯದಲ್ಲಿ ಒಂದು ಸುಂದರವಾದ ಶಬ್ದಕೋಶವನ್ನು ಕೊಟ್ಟಿದ್ದಾನೆ. 1895ರಲ್ಲಿ ಈ "ಅಮರಕೋಶ"ವು ಮೂರನೇ ಬಾರಿಗೆ ಮುದ್ರಣವಾಯಿತು.

**೧೪. ರೈಸ್ ಇವನು ನಾಡಿನ ಮತ್ತು ಸಾಹಿತ್ಯದ ಚರಿತ್ರೆಗೆ ರೂಪವನ್ನು ಕೊಟ್ಟನು :—**

Benjamin Rice ಇವನು ಕನ್ನಡ ನಾಡಿನ ಚರಿತ್ರೆಯನ್ನು ಮತ್ತು ಕನ್ನಡ ಸಾಹಿತ್ಯ ಚರಿತ್ರೆಯನ್ನು ಒಡಗೂಡಿ ಸಂಶೋಧಿಸಿ ಅವಕ್ಕೆ ತಕ್ಕ ರೂಪವನ್ನು

ಕೊಟ್ಟನು. 1879 ರಲ್ಲಿ ಅವನು ಹಳೆ ಮೈಸೂರು ರಾಜ್ಯದಿಂದ ಸಂಗ್ರಹಿಸಿದ್ದ ಎಲ್ಲಾ ಶಾಸನಗಳನ್ನು 336 folio ಪುಟಗಳಲ್ಲಿ ಅಡಗಿಸಿ ಸಚಿತ್ರವಾಗಿ ಪ್ರಕಟಿಸಿದನು. ಕನ್ನಡ ನಾಡು ಅಷ್ಟು ಐತಿಹಾಸಿಕ ಸಮೃದ್ಧಿಯಿಂದ ಕೂಡಿದ್ದಿತೆಂಬುದು ಜಗತ್ತಿಗೆ ತಿಳಿದು B. L. Rice ಇವನ 'Mysore Inscriptions' ಈ ಗ್ರಂಥವು ಪ್ರಕಾ ವಾದಾಗಲೇ ಆಗಿದೆ. ಅದರನಂತರ 1833 ರಂದ Easy Kannada Writers ಎಂಬುದಾಗಿ Asiatic Society Journal ಇದರಲ್ಲಿ ಕನ್ನಡ ಸಾಹಿತ್ಯ ಚರಿತ್ರೆ ಯನ್ನು ಕುರಿತು ಹಲವು ಲೇಖನಗಳನ್ನು ಬರೆದನು. ತಾನು ಯಾವುದೇ ಗ್ರಂಥವನ್ನು ಸಂಪಾದಿಸಿ ಮುದ್ರಿಸಿದರೂ ಅವುಗಳಲ್ಲೆಲ್ಲಾ ಕನ್ನಡನಾಡಿನ ಮತ್ತು ಕನ್ನಡ ಸಾಹಿತ್ಯದ ಚರಿತ್ರೆಯನ್ನು ವಿವಿಧ ರೀತಿಯಲ್ಲಿ ಮುನ್ನುಡಿಗಳ ರೂಪದಲ್ಲಿ ಬರೆಯುವುದೇ Rev. Rice ಇವನ ಪರಿಪಾಟವಾಗಿತ್ತು. ಹೀಗಾಗಿ ಅವನ ಐತಿಹಾಸಿಕ ಬರೆವಣಿಗೆಗಳೆಲ್ಲವೂ ಹಲವಾರು ಲೇಖನಗಳಲ್ಲಿ ಮತ್ತು ಗ್ರಂಥಗಳ ಮುನ್ನುಡಿಗಳಲ್ಲಿ ಹರಡಿಹೋಗಿವೆ. ಹಾಗೆ ಅವನು ಬರೆದು ಪ್ರಕಟಿಸಿದ ಕಡೇ ಗ್ರಂಥವು 'ಪಂಪ ಭಾರತ' ಅಥವಾ 'ವಿಕ್ರಮಾರ್ಜುನ ವಿಜಯ' ಇದಾಗಿದೆ. ಇದರ ಸಂಪಾದನಾ ಕಾರ್ಯವನ್ನು ಅವನು ಕೆಲವು ವರ್ಷಗಳಿಗೆ ಹಿಂದೆಯೇ ಅವನು ಆರಂಭಿಸಿದ್ದರೂ ಅದು 1898ರ ಕಾಲದಲ್ಲಿ ಮುದ್ರಣವಾಗಿ ಹೊರ ಬಂತು. ಇದರಲ್ಲೂ B. L. Rice ಇವನು ಪಂಪಕವಿಯನ್ನು ಕುರಿತು ಮತ್ತು ಅವನಿಗೆ ಪ್ರೋತ್ಸಾಹವಿತ್ತ ಚಾಳುಕ್ಯರಾಜ ಮತ್ತು ರಾಜವಂಶವನ್ನು ಕುರಿತು ಸುಮಾರು 30 folio ಪುಟಗಳ ಉದ್ಬೋಧಕವಾದ ಮುನ್ನುಡಿಯನ್ನು ಇಂಗ್ಲಿಷ್‌ನಲ್ಲಿ ಬರೆ ದ್ದಾನೆ.

ಅವನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿದ ಆ ಹತ್ತಿಪ್ಪತ್ತು ಪ್ರಾಮುಖ್ಯ ಚರಿತ್ರೆ, ಶಾಸನ ಮತ್ತು ಸಾಹಿತ್ಯ ಗ್ರಂಥಗಳ ಮುನ್ನುಡಿಗಳನ್ನೇ ತೆಗೆದು ಪ್ರತ್ಯೇಕ ಗ್ರಂಥವಾಗಿ ಪ್ರಕಟಿಸಿದರೆ ಅವು ಒಂದು ಉತ್ತಮವಾದ ಮತ್ತು ಆಧಾರಪೂರ್ಣವಾದ ವರದಿಯಾಗುತ್ತದೆ. Benjamin Rice ಇವನ ಪ್ರತಿಯೊಂದು ಮಾತಿಗೂ ತೂಕವಿದೆ, ಆಧಾರವಿದೆ, ಪಾಂಡಿತ್ಯವಿದೆ ಮತ್ತು ಪ್ರಭಾವವಿದೆ. ಪ್ರಾಚೀನ ಇತಿಹಾಸ ಮತ್ತು ಸಾಹಿತ್ಯವೆಲ್ಲವನ್ನೂ ಅವನು ಸ್ವತಃ ಪರಿಶೀಲಿಸಿ ಕರತಲಾಮಲಕವಾಗಿಸಿ ಕೊಂಡ ಮಹಾ ಪಂಡಿತನಾಗಿದ್ದನು. ಅವನ ನಿರೂಪಣೆಯು ಹೇಗೆ ಹರಿಯುತ್ತದೆ ಯೆಂಬುದಕ್ಕೆ "ಶಬ್ದಾನುಶಾಸನ"ದ ಅವನ ಪ್ರಕಟಣೆಗೆ ಬರೆದ ಮುನ್ನುಡಿಯಿಂದ ಈ ಕೆಳಗಿನ ಅಂಶವನ್ನು ಕೊಡಲಾಗಿದೆ :—

"In treating of the literature of Karnataka, it must be borne in mind that a considerable proportion of the works composed in the country were in Sanskrit, the language of the learned, and that proficiency in both Kannada and Sakkada, as Sanskrit was called, and ability to compose in either were indispensable for any one laying claim to be considred a scholar. The region in which the Kannada language is now spoken comprises the west of the Nazam's

dominions, parts of the Central Province and Berar, the southern districts of Bombay presidency, the whole of Mysore and Coorg, and the Madras districts bordering these two countries on the north, west and south. Regarding the range and principal seats of the language a thousand years ago, we have the interesting testimony given by Nripatunga in his work, already quoted."

೧೮. ರೈಸ್—ಇವನಂಥಾ ತಪಸ್ವಿಗಳಿಂದ ಈ ನಾಡು ಪುನೀತಗೊಂಡಿದೆ :—

Benjamin Lewis Rice ಇವನನ್ನು ಕರ್ಣಾಟಕದ Fredrich Max Mueller ಇವನೆಂದೆನ್ನಬಹುದು. Max Mueller ಇವನು ಬ್ರಿಟಿಷ್ ಸರಕಾರದ ಆಶ್ರಯವನ್ನು ಪಡೆದು ಭಾರತದ ಆರ್ಶೀಯ ಸಂಸ್ಕೃತಿಯನ್ನು ಕುರಿತಾಗಿ ಓಕ್ಸ್‌ಫರ್ಡಿನಲ್ಲಿ ಸಂಶೋಧನೆಯನ್ನೆಸಗುತ್ತಾ ವೇದಗಳ ಮೇಲೆ ವ್ಯಾಖ್ಯಾನವನ್ನು ಬರೆಯುತ್ತಾ ಇದ್ದ ಆ ವೇಳೆಯಲ್ಲಿಯೇ B. L. Rice ಇವನು ಬೆಂಗಳೂರಿನಲ್ಲಿ ಕನ್ನಡ ನಾಡು ಮತ್ತು ಸಾಹಿತ್ಯ ಚರಿತ್ರೆಗಳನ್ನು ನಿಷ್ಠೆಯಿಂದ ಸಂಶೋಧಿಸಿದನು. ಪ್ರಾರಂಭದ ಹತ್ತಿಪ್ಪತ್ತು ವರ್ಷಗಳ ಕಾಲ ಬೈಬಲ್ ಕೃತಿಗಳನ್ನೂ ಪಠ್ಯಪುಸ್ತಕಗಳನ್ನೂ 'ಅರುಣೋದಯ'ವೇ ಮೊದಲಾದ ಪತ್ರಿಕೆಗಳನ್ನೂ ನಡೆಸುತ್ತಾ ಬರೆಯುತ್ತಾ ಇದ್ದು ಕಡೆಗೆ 1870 ರ ಕಾಲಕ್ಕೆ ಪ್ರಬುದ್ಧ ಪಂಡಿತನೂ ಸಾಹಿತಿಯೂ ಆಗಿ ಶೋಭಿಸಿದನು. ಆದರೊಡನೆಯೇ ಅವನಿಗೆ ಸರಕಾರದಿಂದ ಉಚ್ಚ ಅಧಿಕಾರ ಸ್ಥಾನಗಳೂ ಅವನ ಪ್ರಯತ್ನಕ್ಕೆ ತಕ್ಕ ಪ್ರಶಸ್ತಿಗಳೂ ಮೇಲಿಂದ ಮೇಲೆ ದೊರೆತುವು. Rice ಇವನು ತಾನಾಗಿ ಬರೆದ ಬೈಬಲ್ ಪುಸ್ತಕಗಳು, ತಾನು ಇತರರೊಡನೆ ಸೇರಿ ಮತ್ತು ಸ್ವತಃ ಬರೆದ ಪಠ್ಯಪುಸ್ತಕ, ವ್ಯಾಕರಣ, ಕಾವ್ಯಮಾಲಿಕೆ, ಭೂಗೋಳಶಾಸ್ತ್ರ ಇತ್ಯಾದಿಗಳ ಜತೆಗೆ ಅವನ ಸಂಶೋಧನಾ ಗ್ರಂಥಗಳೆಲ್ಲಾ ಒಟ್ಟಾಗಿ ಒಂದುನೂರರಷ್ಟು ಆಗಿವೆ. ಕನ್ನಡ ನಾಡಿನ ಮತ್ತು ಸಾಹಿತ್ಯದ ಐತಿಹಾಸಿಕ ಆಧಾರಕ್ಕೆ ಅವನ ಉಲ್ಲೇಖಗಳ ನೆರವನ್ನೇ ಅವಲಂಬಿತ್ತಲಾಗಿ ಬರೆದ ವಿದ್ವಾಂಸರು ಪಡೆದಿದ್ದಾರೆ ಮತ್ತು ಪಡೆಯಲೇ ಬೇಕಾಗಿದೆ. ದೇಶೀಯ ಕವಿಚರಿತ್ರಾಕಾರರೂ ವಾಸ್ತುವಿದ್ಯಾ ವಿಶಾರದರೂ ಬರೆದುದೆಲ್ಲವೂ B. L Rice ಇವನ ಬರವಣಿಗೆಯ ಛಾಯಾನುವಾದಗಳೇ ಆಗಿವೆ. ಹಾಗಿದ್ದರೂ ಕೆಲವರು ಅವನ ಆಧಾರಗಳನ್ನುಪಯೋಗಿಸಿ ಕಡೆಗೆ ಅವನ ಹೆಸರನ್ನೆತ್ತದೆ ತಾವೇ ಶಾಸನಗಳೆಲ್ಲವನ್ನೂ ನೋಡಿ ಬರೆದವರಂತೆ ಕೃತಘ್ನತೆಯನ್ನು ತೋರಿದ್ದೂ ಕಂಡುಬರುತ್ತದೆ.

ಈ ಅವಿಶ್ರಾಂತ ಸಾಹಿತಿ ಮತ್ತು ಸಂಶೋಧಕನ ಅದ್ಭುತ ಪರಿಶೋಧನಾ ಪ್ರಕಟಣೆಗಳು ಸರ್ವರ ಅವಗಾಹನೆಗೆ ಬಂದ ಆ ಕಾಲದಲ್ಲಿ ಅವುಗಳನ್ನು ನೋಡಿ ಮೆಚ್ಚಿ ಸಂತೋಷವನ್ನು ವ್ಯಕ್ತಪಡಿಸಿದ ಪಾಶ್ಚಾತ್ಯ ವಿದ್ವಾಂಸರು ಹಲವರು ಇದ್ದಾರೆ. ಆಗ ವೀಯೆನ್ನಾದಲ್ಲಿದ್ದ ಪ್ರಸಿದ್ಧ ಸಂಸ್ಕೃತ ವಿದ್ವಾಂಸ Dr. J. G. Buehler ಇವನು 1895 ರ ಸೆಪ್ಟಂಬರ್ 3ನೇ ದಿನ ಬರೆದ ಒಂದು ಲೇಖನದಲ್ಲಿ Rice ಇವನಿಗೆ ತನ್ನ

ಮನಃಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸಿದನು—

"The numerous and various points of interest which the epigraphic discoveries in Mysore offer, entitles Mr. Rice to the heart congratulations of all Sanskritists and to their warm thanks for the ability and indefatigable zeal with which he continued his archaeological explorations in the Province confided to his care."

ಕಳೆದ ಶತಮಾನದಲ್ಲಿ ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಕ್ರಾಂತಿಕಾರಕವಾಗಿ ಎಂಬಂತೆ ಅಪಾರವಾಗಿ ದುಡಿದ ಪಾಶ್ಚಾತ್ಯ ಸೇವಾ ಧುರೀಣರಲ್ಲಿ ಈ Benjamin Lewis Rice ಇವನೂ ಉನ್ನತ ಸ್ಥಾನವನ್ನು ಪಡೆದಿದ್ದಾನೆ. ಇಂಥಾ ತಪಸ್ವಿಗಳಿಂದ ನಾಡು ಬೆಳಗುತ್ತದೆ; ಸಾಹಿತ್ಯ ವೃಕ್ಷವು ಪ್ರಫುಲ್ಲಿತವಾಗಿ ಚಿಗುರುತ್ತದೆ; ಸಂಸ್ಕೃತಿಯು ಪ್ರವೃದ್ಧಮಾನವಾಗಿ ವ್ಯಾಪಿಸುತ್ತದೆ; ತನ್ನ "ಕರ್ಣಾಟಕ ಭಾಷಾ ಭೂಷಣ"ದ ಮುನ್ನುಡಿಯಲ್ಲಿ B. L. Rice ಇವನು ಹೇಳಿದ ಮಾತುಗಳು ಅವನ ಮನೋನಿರ್ಧಾರದ ಪ್ರತೀಕವಾಗಿದೆ. ಪರದೇಶದಲ್ಲಿ ಪರಭಾಷಾ ಸೇವೆಯನ್ನು ತನ್ನ ಭಾಷೆಯೆಂದೇ ಬಗೆದು ಐವತ್ತು ವರ್ಷಗಳ ಕಾಲ ಉತ್ಸಾಹದಿಂದ ದುಡಿದ ಈ ರಸ ಋಷಿಯು ಈ ರೀತಿ ನಿವೇದಿಸಿದ್ದಾನೆ:—

"......Here, this review of Kannada literature from the earliest times, may fitly be brought to a conclusion. No such complete statement has ever before been made public.... The State of Mysore.......has a speeial mission to discharge, in relation to the learned world of Orientalists in general, and to Karnataka and South India in particular, in vindicating the claims and promoting a revival of the culture of its sonorous and expressive language."

---

"ಪಡುವ ಕಡಲ ಹೊನ್ನಹೆಣ್ಣು, ನನ್ನ ಜೀವದುಸಿರು ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ—ಕುಣಿಸುತಿರುವಳು;
ಒಮ್ಮೆ ಇವಳು, ಒಮ್ಮೆ ಅವಳು ಕುಣಿಸುತಿರುವಳು.

ಹೀಗೆ ನನಗೆ ಹಬ್ಬವಾಗಿ, ಇನಿಯರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು—ನೋಡ ಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿದೆ.

[ಬಿ. ಎಂ. ಶ್ರೀಕಂಠಯ್ಯ]

Rev. Benjamin Lewis Rice ಇವನು ಬೆಂಗಳೂರಿನಿಂದ ತನ್ನ ಪರಿಶೋಧನಾ ಪ್ರಕಟಣೆಗಳನ್ನು ಹೊರಡಿಸುತಿದ್ದಾಗ ಕೇಂದ್ರ ಸರಕಾರದಲ್ಲಿ John Faithful Fleet ಇವನೂ, ಬೊಂಬಾಯಿ ಆಧಿಪತ್ಯದಲ್ಲಿ Dr. James Burgess ಇವನೂ, ಮದ್ರಾಸು ಆಧಿಪತ್ಯದಲ್ಲಿ Dr. E. Hultzsch ಇವನೂ, ಅದೇ ದಿಶೆಯಲ್ಲಿ ದುಡಿಯುತ್ತಿದ್ದರು. ಇವರೆಲ್ಲರಿಗೂ ಸಹಾಯಕರಾಗಿ ಇತರ ನೂರಾರು ಅತಿರಥರು ಮತ್ತು ಮಹಾರಥರಾದ ವಿದ್ವಾಂಸರು ಇತರ ಸ್ಥಳಗಳಲ್ಲಿರಿತು ತಮ್ಮ ಐತಿಹಾಸಿಕ ಸಂಶೋಧನೆಯಲ್ಲಿ ಮಗ್ನರಾಗಿದ್ದರು. ಇವರಲ್ಲಿ ಕೆಲವರ ಹೆಸರುಗಳನ್ನಷ್ಟೇ ಈ ಭಾಗದಲ್ಲಿ ಸೂಚಿಸಲಾಗಿದೆ.

ಇವರೆಲ್ಲರ ಈ ಅನ್ವೇಷಣೆಯ ಪರಿಣಾಮವಾಗಿ ಕನ್ನಡ ನಾಡಿನ ಯಾವೊಂದು ಪುರಾತನ ಶಾಸನವೂ ಅವರ ದೃಷ್ಟಿಯಿಂದ ಪಾರಾಗಲಿಲ್ಲ. ಪ್ರತಿಯೊಂದು ಪ್ರಾಚೀನ ತುಂಡು ಕಲ್ಲನ್ನೂ 'ಅವರು ಉರುಳಿಸಿ ನೋಡಿ ಪರಾಮರ್ಶಿಸಿದ್ದಾರೆ. ತಾಳೆವೋಲೆಗಳ ಮತ್ತು ತಾಮ್ರದ ತಗಡುಗಳ ಕಡತಗಳನ್ನೆಲ್ಲಾ ತಿರುವಿ ಹಾಕಿದ್ದಾರೆ. ಇಂದಿನ ಇತಿಹಾಸಕಾರನು ಪಾಶ್ಚಾತ್ಯರು ಅಂದು ನೋಡದೇ ಇದ್ದ ಯಾವೊಂದೂ ಶಾಸನವನ್ನು ಕಾಲ ಗರ್ಭದಿಂದ ಈಗ ಎತ್ತಿ ತರುವಂತಿಲ್ಲ; ಎಲ್ಲವೂ ಅವರ ದೃಷ್ಟಿಗೆ ಬಿದ್ದು ವಿಮರ್ಶಿಸಲ್ಪಟ್ಟವೆ. ಪೂರ್ವಕಾಲದ ಎಲ್ಲಾ ಬರೆವಣಿಗೆಗಳೂ ಅವರಿಂದ ಮುದ್ರಣ ಯಂತ್ರಗಳೊಳಗೆ ಹೊರಳಿಸಲ್ಪಟ್ಟವೆ. ಕನ್ನಡ ನಾಡಿನ ಪ್ರಾಚೀನ ವೈಭವವನ್ನು ಜನರೆದುರಿಗೆ ಬಿಚ್ಚಿಟ್ಟು ಅಂತೆಯೇ ತೆರಳಿದ್ದಾರೆ. ಉದಾಹರಣೆಗೆ ನೇಪಾಳದ ಚರಿತ್ರೆಯನ್ನು ಬರೆಯುವಾಗ ಆ ರಾಜ್ಯವನ್ನು ಕನ್ನಡನಾಡಿನ ರಾಜವಂಶದವರೂ ಆಳಿದ್ದಾರೆಂಬುದನ್ನು Dr. Wright ಮತ್ತು Kirpatrick ಇವರು ಮೊದಲ ಬಾರಿಗೆ ತಿಳಿಸಿದರು. ನೇಪಾಳವನ್ನು ಪೂರ್ವ ಕಾಲದಲ್ಲಿ ಥಾಕೂರು ರಾಜವಂಶ, ಕಿರಾತವಂಶ, ಸೋಮವಂಶ, ಸೂರ್ಯವಂಶ ಕರ್ಣಾಟವಂಶ ಇತ್ಯಾದಿಗಳ ಅರಸರೂ ಆಳಿದ್ದಾರೆ ಯೆಂಬುದನ್ನು ಆಧಾರಪೂರ್ವಕವಾಗಿ ಪ್ರತಿಪಾದಿಸಿದರು. ಕರ್ಣಾಟಕ ರಾಜವಂಶದವರು ಗೋಕರ್ಣದಿಂದ ಹೋಗಿ ಇಡೀ ನೇಪಾಳವನ್ನು ಗೆದ್ದು ಆಳಿದ

ರೆಂದೂ, ಗಂಗದೇವ ನರಸಿಂಹದೇವ ಎಂಬೀ ಪ್ರಸಿದ್ಧ ಕರ್ಣಾಟಕ ವಂಶದ ರಾಜನು ಆ ಹಿಮಾಲಯ ಪ್ರಾಂತದಲ್ಲಿ ಪ್ರಭುತ್ವವನ್ನು ನಡೆಸಿದರೆಂದೂ ತಿಳಿಸಿದ್ದಾರೆ ಕರ್ಣಾಟಕ ಸೇನಾಪತಿಗಳು ಬಂಗಾಳ ಮತ್ತು ಅಸ್ಸಾಮಿನ ವರೆಗೂ ಒಂದು ಕಾಲದಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದರೆಂಬುದೂ ಕಳೆದ ಶತಮಾನದ ಅನ್ವೇಷಣೆಯ ಪರಿಣಾಮವಾಗಿ ಮೊದಲ ಬಾರಿಗೆ ತಿಳಿದುಬಂತು!

೨. ನಾಡಿನ ಇತಿಹಾಸವನ್ನು ಕುರಿತು ಉದ್ಬೋಧಕ ಲೇಖನಗಳು :—

Colin Mackenzie ಇವನು ಹಿಂದೆಯೇ ಸಂಗ್ರಹಿಸಿ ಸಂಪಾದಿಸಿದ ಚೇರ ಮತ್ತು ಗಂಗವಂಶದ ರಾಜರ ವಂಶಾವಳಿಯನ್ನು ಕೊಡುವ ತಾಮ್ರ ಶಾಸನಗಳ ಮೇಲೆ Prof. Dowson ಇವನು ಒಂದೆರಡು ಲೇಖನಗಳನ್ನು ಬರೆದನು. Dr. F. Buchanan ಇವನ Ruins of Buddha Gaya ಎಂಬ 15 folio ಪುಟಗಳ ಲೇಖನ ಮತ್ತು Col. James Tod ಇವನು ರಾಜಸ್ಥಾನದ ಇತಿಹಾಸದ ಬಗ್ಗೆ ಬರೆದ ಲೇಖನಗಳಲ್ಲೆಲ್ಲಾ ದಕ್ಷಿಣದ ಹಾಗೂ ಕರ್ಣಾಟಕಕ್ಕೆ ಸಂಬಂಧವಾದ ಹಲ ಕೆಲವು ವಿಷಯಗಳನ್ನು ಸಾಕಷ್ಟು ಪ್ರಸ್ತಾಪಿಸಿದ್ದಾರೆ.

ಕಳೆದ ಶತಮಾನದ ಅಂತ್ಯದೊಳಗಾಗಿ ಸಮಗ್ರ ಕರ್ಣಾಟಕದ ಭೂವಿವರಣೆ ಚರಿತ್ರೆ, ಜನ ಜೀವನ ಇತ್ಯಾದಿಗಳನ್ನು ಕುರಿತಾದ ಜಿಲ್ಲಾ ಚರಿತ್ರೆಗಳು ಆಯಾ ಸರಕಾರದ ಮೂಲಕವಾಗಿಯೇ ಪ್ರಕಟವಾದುವು. Dr. Pigou ಮತ್ತು Col. Biggs ಇವರು ಉತ್ತರ ಕರ್ಣಾಟಕದಿಂದ 68 ತಾಮ್ರಶಾಸನ ಮತ್ತು 57 ಶಿಲಾ ಶಾಸನಗಳನ್ನು ಸಂಪಾದಿಸಿ ಅವುಗಳ ಭಾವಚಿತ್ರ ಸಮೇತವಾಗಿ Architectural Antiquities of Western India ಎಂದು ಬೊಂಬಾಯಿ ಸರಕಾರದ ಪರಿಶೋಧನಾ ಇಲಾಖೆಯ ಪತ್ರಗಳಲ್ಲಿ ಪ್ರಕಟಿಸಿದರು. Capt. Robert Cole ಇವನು ಮೈಸೂರು ಜಿಲ್ಲೆಗೆ ಸಂಬಂಧಿಸಿದ ಕೆಲವು ತಾಮ್ರ ಶಾಸನಗಳನ್ನು ಸಂಗ್ರಹಿಸಿ ತನ್ನ ವಿವರಣಾತ್ಮಕವಾದ ಟೀಕೆಯೊಡನೆ Indian Antiquary ಪತ್ರಿಕೆಯಲ್ಲಿ ಪ್ರಕಟಿಸಿದನು. Col. B. R. Brainfall ಇವನು ಸೇವಣದುರ್ಗದ ಸ್ಮಾರಕ ಶಿಲಾ ಬರೆವಣಿಗೆಗಳೊಡನೆ ಬಳ್ಳಾರಿ, ಚಿತ್ರದುರ್ಗ, ಕೋಲಾರ ಮೊದಲಾದೆಡೆಗಳಿಂದ ದೊರಕಿದ ಶಾಸನಗಳನ್ನೂ ಪರಿಶೀಲಿಸಿ 1881 ರಲ್ಲಿ ಬಹು ವಿದ್ವತ್ಪೂರ್ಣವಾದ ಲೇಖನಗಳನ್ನು ಬರೆದನು.

ಜರ್ಮನ್ ವಿದ್ವಾಂಸನಾದ Dr. John Muir ಇವನು ಬೊಂಬಾಯಿಯಿಂದ ಹಲವು ಲೇಖನಗಳನ್ನು ಬರೆದನು. 1878 ರಲ್ಲಿ ಮಹಾಭಾರತವನ್ನು ಅದರ ಛಂದೋಲಕ್ಷಣ, ಟೀಕೆ ಮತ್ತು ವಿವರಣೆ ಸಮೇತವಾಗಿ ಬರೆದ ಈ ಮಹಾ ಪಂಡಿತನು ಕನ್ನಡ, ತೆಲಗು, ತಮಿಳು, ಇತ್ಯಾದಿ ಭಾಷೆಗಳ ಮೇಲೆ ಶಾಸ್ತ್ರೀಯ ಅನ್ವೇಷಣೆಯನ್ನು ನಡೆಸಿದನು. ಈ ದೇಶದ ಜನಜೀವನ ಮತ್ತು ಸಾಮಾಜಿಕ ಪರಿಸ್ಥಿತಿಯನ್ನೂ ಆಳವಾಗಿ ಪರಿಶೀಲಿಸಿ ಅವನು 1877 ರಲ್ಲಿ ಬರೆದ ಒಂದು ಗ್ರಂಥದ ಹಲವು ಭಾಗಗಳನ್ನು ಜರ್ಮನ್ ಭಾಷೆಗಿಳಿಸಿದನು. ದ್ರಾವಿಡ ಭಾಷೆಗಳು

"Originally and fundamentally quite distinct from and independent of Sanskrit" ಎಂದು ಅಭಿಪ್ರಾಯಪಟ್ಟು ಭಾರತೀಯ ಭಾಷಾಶಾಸ್ತ್ರದ ಬಗ್ಗೆ ಜರ್ಮನಿಯಿಂದಲೇ ನೂರಾರು ಲೇಖನಗಳನ್ನು ಬರೆದನು.

**೩. ಯೂರೋಪಿನಿಂದಲೂ ಲೇಖನಗಳನ್ನು ಬರೆದು ಕಳುಹಿಸಿದರು :—**

ಹೀಗೆ ಯೂರೋಪಿನಿಂದ ಲೇಖನಗಳನ್ನು ಬರೆದು ಭಾರತೀಯ ಪತ್ರಿಕೆಗಳಲ್ಲಿ ಪ್ರಕಟಿಸಿದ್ದವರು Dr. John Muir ಇವನೊಬ್ಬನೇ ಅಲ್ಲ. Dr. H. Oldenburg ಇವನು ಸ್ವದೇಶಕ್ಕೆ ಹಿಂದಿರುಗಿದನಂತರ ಬರ್ಲಿನ್ನಿನಿಂದ 1881 ರಲ್ಲಿ ಕರ್ಣಾಟಕವನ್ನೊಳಗೊಂಡ ಪ್ರಾಚೀನ ಭಾರತದ ಶಾಸನಗಳ ಮತ್ತು ನಾಣ್ಯಗಳ ವಿಷಯವಾಗಿ ಗೌತಮ ಬುದ್ಧನ ಕಾಲದಿಂದಲೇ ಪ್ರಸ್ತಾಪಿಸಿ ಸುಮಾರು ೨೦೦ folio ಪುಟಗಳಷ್ಟು ದೀರ್ಘವಾದ ಲೇಖನಗಳನ್ನು ಬರೆದನು.

Prof. F. Kielhorn ಇವನು ಜರ್ಮನಿಯಿಂದ ಕಾತ್ಯಾಯನ ಮತ್ತು ಪತಂಜಲೀ ಇವರನ್ನು ಆಳವಾಗಿ ಅಭ್ಯಸಿಸಿ ಬರೆದ ಲೇಖನಗಳಲ್ಲದೆ ಖಗೋಳ ಶಾಸ್ತ್ರವನ್ನೂ ಕನ್ನಡನಾಡಿನ ಹಲವು ಶಾಸನಗಳನ್ನೂ ವಿವರಿಸಿ ನಾಲ್ಕಾರು ಸುದೀರ್ಘವಾದ ಲೇಖನಗಳನ್ನು 1890ರ ಕಾಲದಲ್ಲಿ ಬರೆದನು. ಇದೇ ರೀತಿ Dr. E. Hultzsch, Dr. George Buehler ಮತ್ತು Dr. James Burgess ಇವರೂ ತಮ್ಮ ಸ್ವದೇಶಗಳಿಗೆ ಹಿಂದಿರುಗಿದನಂತರ ಹಲವು ಚಾರಿತ್ರಿಕ ಲೇಖನಗಳನ್ನು ಬರೆದಿದ್ದಾರೆ. ಹೀಗೆ ಬರೆದುವುಗಳಲ್ಲಿ ಭಾರತದ ಭೂಗೋಳ ವಿವರಣೆ, ಜೈನಪುರಾಣ ಕತೆಗಳು ಮತ್ತು ಭಾಷಾಶಾಸ್ತ್ರವನ್ನು ಕುರಿತುದಲ್ಲದೆ. ಬಳ್ಳಾರಿ ಸಿಂದವಾಡಿ ಶಿವನೂರು, ಕಿಸುಕಾಡು. ಕಿಸುವೊಳಲು, ಪಟ್ಟದಕಲ್ಲು ಎಂಬೀ ಹಲವು ಚಾರಿತ್ರಿಕ ಸ್ಥಳಗಳ ಐತಿಹ್ಯವನ್ನೂ ತಮ್ಮ ಲೇಖನಗಳಲ್ಲಿ ವಿವರಿಸಿದರು. ಆ ರೀತಿ ಅಂದು ಅವರು ಪರಿಶ್ರಮಿಸಿ ಕೊಟ್ಟ ಆಧಾರಗಳೇ ಅನಂತರದ ಲೇಖಕರಿಗೆ 'ಆಹಾರ'ವಾಯಿತು ಎಂಬುದು ಸರ್ವವಿದಿತವಾಗಿದೆ.

ಹೀಗೆ ಭಾರತರದ ಬೇರೆ ಬೇರೆ ಭಾಗಗಳಲ್ಲಿದ್ದ ವಿದ್ವಾಂಸರೂ ತಮ್ಮ ಸ್ವದೇಶಗಳಿಗೆ ಹಿಂದಿರುಗಿದಾಗ ಈ ದೇಶದ ಐತಿಹ್ಯಕ್ಕೆ ಸಂಬಂಧಿಸಿದ ಹಲವು ಓಲೆಗಳನ್ನು ಹೊತ್ತುಕೊಂಡು ಹೋಗಿ ಅಲ್ಲಿಂದಲೇ ತಮ್ಮ ಸಂಶೋಧನಾ ಕಾರ್ಯವನ್ನು ಮುಂದುವರಿಸಿದರು. ಹೀಗೆ ಅವರು ಲೇಖನಗಳನ್ನು ಬರೆದಾಗ ಸಮಗ್ರ ಭಾರತವನ್ನು ಒಂದೇ ಒಂದು ಘಟಕವಾಗಿ ಭಾವಿಸಿದ್ದರೆಂದೂ ಐತಿಹಾಸಿಕ ವಿಚಾರಗಳನ್ನು ಕರ್ಣಾಟಕ. ಮಹಾರಾಷ್ಟ್ರ. ವಿದರ್ಭ ಎಂಬೀ ರೀತಿಯಲ್ಲಿ ಪ್ರಾಂತೀಯ ಆವರಣದೊಳಗಡಗಿಸಿ ಬರೆಯಲಿಲ್ಲವೆಂದೂ ಹಿಂದೆಯೇ ಹೇಳಲಾಗಿದೆ. ನಾಡಿನ ಯಾವ ಭಾಗದ ವಿಚಾರವೇ ಆಗಲಿ, ಅವೆಲ್ಲಾ ಭಾರತದ ಚರಿತ್ರೆಯೆಂದೇ ಅವರು ಭಾವಿಸಿದ್ದರಲ್ಲದೆ ಪ್ರಾಂತೀಯವಾಗಿ ಅವರು ಯಾವುದನ್ನೂ ಗಣಿಸಿರಲಿಲ್ಲ. ಭಾಷೆಗಳಿಗೆ ಸಾಂಸ್ಕೃತಿಕ ಪ್ರಾಧಾನ್ಯತೆಯನ್ನು ಅವರು ಕೊಟ್ಟಿದ್ದರಲ್ಲದೆ ರಾಜಕೀಯವಾಗಿ ಅದಕ್ಕೆ ಸ್ಥಾನಮಾನಗಳನ್ನು

ಕೊಡಲಿಲ್ಲ. ಹಾಗೆ ಕೊಟ್ಟಿದ್ದರೆ ಅಂದೇ ದೇಶವು ಭಾಷಾವಾರು ಪ್ರಾಂತಗಳ ಸಂಕೀರ್ಣ ಧೋರಣೆಗೊಳಗಾಗಿ ದೇಶವು ದಿಗ್ಗೆಟ್ಟು ಹೋಗುತಿದ್ದಿತು; ಹೇಗೂ ಅಂದು ಸಂಭವಿಸ ದಿದ್ದ ದುಃಸ್ಥಿತಿಯು ದೇಶಕ್ಕೆ ಇಂದೀಗ ಸಂಭವಿಸಿದಂತಿದೆ.

### ೪. ಬರ್ಜೆಸ್ ಮತ್ತು ಬ್ಯೂಲರ್ ಇವರು ಕರ್ಣಾಟಕದಲ್ಲಿ:—

ಈ ಇರ್ವರು ಮಹಾಪಂಡಿತರ ವಿಷಯವಾಗಿ ಹಿಂದಿನ ಭಾಗಗಳಲ್ಲಿ ಸಾಕಷ್ಟು ಹೇಳಲಾಗಿದೆ. Dr. James Burgess ಇವನು ಅಖಿಲ ಭಾರತ ಮಟ್ಟದಲ್ಲಿ ಧೀಮಂತ ಸಂಶೋಧಕನಾಗಿ ದುಡಿಯುತಿದ್ದಾಗ ಅವನ ಸೇವೆಯು ಕರ್ಣಾಟಕಕ್ಕೆ ಬಹುಮುಖವಾಗಿ ಲಭಿಸಿತು. ಎಲ್ಲೋರದಿಂದ ಬೇಲೂರು ವರೆಗಿನ ದೇವಾಲಯಗಳನ್ನೂ ಕಟ್ಟೋಣಗಳನ್ನೂ ಶಾಸನಗಳನ್ನೂ ಗ್ರಂಥಗಳನ್ನೂ ಅವನು ಅನ್ವೇಷಿಸಿ ಅಪಾರ ಸಂಶೋಧನಾ ವರದಿಗಳನ್ನು ಪ್ರಕಟಿಸಿದನು. ಪಶ್ಚಿಮ ಹಿಂದೂಸ್ಥಾನದ ವಾಸ್ತುಶಿಲ್ಪ ಪರಿಶೋಧನೆಗೆ ಅವನೇ ಆಧಾರಸ್ತಂಭದಂತಿದ್ದನು. ಅವನ List of Architectural Remains ಇದು ಅವನು ಆ ದಿಶೆಯಲ್ಲಿ ಪ್ರಕಟಿಸಿದ ಕಡೇ ಹೊತ್ತಗೆಯಾಗಿದೆ. ತನ್ನ ಸ್ವದೇಶಕ್ಕೆ ಹಿಂದಿರುಗಿದನಂತರವೂ ಇವನು ಉತ್ತರ ಕರ್ಣಾಟಕ ಹಲವು ಸ್ಥಳಗಳನ್ನು ಕುರಿತು ವಿಚಾರಪೂರ್ಣವಾದ ಲೇಖನಗಳನ್ನು ತಾನು ಬೊಂಬಾಯಿಯಲ್ಲಿ ಸ್ಥಾಪಿಸಿದ್ದ Indian Antiquary ಪತ್ರಿಕೆಗೆ ಕಳುಹಿಸುತ್ತಲೇ ಇದ್ದನು. ಮೈಸೂರು ರಾಜ್ಯಕ್ಕೆ Benjamin Rice ಹೇಗೋ ಹಾಗೆಯೇ ಪಶ್ಚಿಮ ಹಿಂದೂಸ್ಥಾನಕ್ಕೆ James Burgess ಇವನು ಇದ್ದನು.

ಬೊಂಬಾಯಿಯಲ್ಲೇ ಇದ್ದ ಮತ್ತೊರ್ವ ಅದ್ವಿತೀಯ ಪಂಡಿತ Dr. G. Buehler ಇವನ ಬಹುಮುಖವಾದ ಸಂಶೋಧನಾ ಕಾರ್ಯವು ಕರ್ಣಾಟಕವನ್ನೂ ವ್ಯಾಪಿಸಿದೆ. ಜುಲೈ 1837ರಲ್ಲಿ ಹ್ಯಾನೊವರಿನಲ್ಲಿ ಜನಿಸಿದ್ದ ಇವನು ಏಪ್ರಿಲ್ 1898 ರಲ್ಲಿ ಈಜುವಾಗ ವಿಯೆನ್ನಾದಲ್ಲಿ ಆಕಸ್ಮಿಕ ಮರಣಕ್ಕೊಳಗಾದನೆಂದು ಹಿಂದಿನ ಭಾಗದಲ್ಲಿ ತಿಳಿಸಲಾಗಿದೆ. ವೇದ, ಪುರಾಣ, ಭಾಷಾಶಾಸ್ತ್ರ, ವಾಸ್ತುಶಿಲ್ಪ, ಪ್ರಾಕ್ತನ ವಿಚಾರ ಇತ್ಯಾದಿಗಳಲ್ಲೆಲ್ಲಾ ಇವನು ಅದ್ಭುತ ಜ್ಞಾನವನ್ನು ಹೊಂದಿದ್ದನು. Theodre Benfey ಇವನಂಥಾ ಮಹೋಪಾಧ್ಯಾಯನ ಶಿಷ್ಯನಾಗಿ ಓಕ್ಸ್‌ಫರ್ಡ್‌ನಲ್ಲಿ Fredrich Max Mueller ಇವನ ಸಹೋದ್ಯೋಗಿಯಾಗಿ ಇದ್ದ ಈ ಮೇಧಾವಿಯು ವಿಯೆನ್ನಾ ವಿಶ್ವವಿದ್ಯಾಲಯದಲ್ಲಿ Oriental Institute ಇದನ್ನು ಸ್ಥಾಪಿಸಿದ್ದನು. ಇಲ್ಲಿ ಅವನು ಸ್ಥಾಪಿಸಿದ್ದ ಗ್ರಂಥಭಂಡಾರಕ್ಕೆ ತನ್ನದೇ ಆದ ಸಹಸ್ರಾರು ಭಾರತೀಯ ಗ್ರಂಥ ಓಲೆಗಳನ್ನು ಕೊಟ್ಟನಲ್ಲದೆ ಅವುಗಳಿಗೆ ಕರ್ಣಾಟಕ ಮತ್ತು ಮಹಾರಾಷ್ಟ್ರ ಭಾಗಗಳಿಗೆ ಸಂಬಂಧಿಸಿದ ನೂರಾರು ಓಲೆ ಗ್ರಂಥಗಳನ್ನು ಸಂಗ್ರಹಿಸಿದನು. ಇವನಿಂದ ಪೂನಾದ ಡೆಕ್ಕನ್ ಕಾಲೇಜು ಪುಸ್ತಕಭಂಡಾರವು 2363 ತಾಳೆವೋಲೆಗಳನ್ನು ಬರ್ಲಿನ್ ವಿಶ್ವವಿದ್ಯಾಲಯವು ಸುಮಾರು ೨೦೦೦ ಓಲೆಗಳನ್ನೂ ಪಡೆದುವೆಂದರೆ ಅವನ ಅನ್ವೇಷಣೆಯ ಪ್ರಮಾಣವನ್ನು ಊಹಿಸುವುದೇ ಅಸಾಧ್ಯವಾಗಿದೆ.

Dr. Johann G. Buehler ಇವನು Daniel Wright Rask, Hodgson ಈ ಮೊದಲಾದವರಿಗೆ ಸಮಾನನಾದ ವಿದ್ವಾಂಸನಾಗಿದ್ದನು. ಯೇಹೂದ್ಯ ಜನಾಂಗದವನಾದ ಇವನು ಪ್ರಬಲ ಭಾಷಾಶಾಸ್ತ್ರಜ್ಞನೂ ಮೇಧಾವಿಯೂ ಆಗಿದ್ದನು. ಇವನನ್ನು ಕುರಿತು James Burgess ಇವನು a great Jain scholar and philologist ಎಂಬುದಾಗಿ ಹೇಳಿದ್ದನು. Burgess ಇವನೊಡನೆ Indian Antiquary ಪತ್ರಿಕೆಯನ್ನು ಸ್ಥಾಪಿಸಲು John Beams, T. W. Rhys Davids ಮತ್ತು Dr. Burnell ಇವರೊಡನೆ Dr. J. G. Buehler ಇವನೂ ಸೇರಿದ್ದನು.

Dr. Buehler ಇವನು ಕಡೇದಾಗಿ ಬರೆದ 96 demy ಪುಟಗಳ Indische Palaeographie ಎಂಬ ಭಾರತೀಯ ಶಿಲಾಲಿಪಿ ಶಾಸ್ತ್ರಕ್ಕೆ ಸಬಂಧಿಸಿದ ಗ್ರಂಥವು ಸ್ಟ್ರಾಸ್‌ಬರ್ಗ್‌ನಲ್ಲಿ ಪ್ರಕಟವಾಯಿತು. ಅವನ ಯಾವೊಂದು ಕೃತಿಯಲ್ಲೂ ಕನ್ನಡ ಭಾಷೆ, ಚರಿತ್ರೆ, ಪ್ರಾಕ್ತನ ವಿಚಾರ, ವಾಸ್ತುಶಿಲ್ಪ ಇತ್ಯಾದಿಗಳನ್ನು ಕುರಿತು ಪ್ರಸ್ತಾಪವಾಗಿವೆ. ಅವನ Indische Palaeographie ಇದರಲ್ಲಿ ಕರ್ಣಾಟಕದ ಶಿಲಾಲೇಖಗಳಲ್ಲಿ ಅವನಿಗಿದ್ದ ಜ್ಞಾನವೆಷ್ಟೆಂಬುದು ವ್ಯಕ್ತವಾಗುತ್ತದೆ. ಜರ್ಮನ್ ಭಾಷೆಯಲ್ಲಿ ಅವನು Philologie und Altertum-skunde ಹೀಗೆ ಕೆಲವು ಗ್ರಂಥಗಳನ್ನು ಬರೆದಾಗ ಅವನ ಭಾಷಾಶಾಸ್ತ್ರ ಜ್ಞಾನವನ್ನು ಪ್ರಶಂಸಿಸಿ John Fleet ಇವನು ಈ ರೀತಿಯಾಗಿ ಹೇಳಿದನು :—

"Prof. Johann George-Buehler...... has brought to a climax ........the palaeographic line of Indian research."

೫. ಜರ್ಮನಿಯ ಮತ್ತೊರ್ವ ಶಿಲಾಲೇಖ ತಜ್ಞ–ಡಾ. ಹಲ್ಟ್ಸ್‌ಸೆಜ್ :—

ಮದ್ರಾಸು ಸರಕಾರದಲ್ಲಿ. ಅನಂತರ ಕೇಂದ್ರ ಸರಕಾರದಲ್ಲಿ ಬಹುಕಾಲ Epi-graphist ಆಗಿದ್ದು ಪ್ರಾಕ್ತನ ವಿಚಾರ ಇಲಾಖೆಯ ಮುಖ್ಯಾಧಿಕಾರಿಯೂ ಆಗಿದ್ದ Dr. Edward Hultzsch ಇವನು ಇನ್ನೊರ್ವ ಪ್ರಬಲ ಶಿಲಾಲೇಖ ತಜ್ಞನೂ ಸಂಶೋಧಕನೂ ಆಗಿದ್ದನು. 1860 ರ ಕಾಲದಲ್ಲಿ ಭಾರತಕ್ಕೆ ಬಂದು ಸುಮಾರು ಮೂವತ್ತು ವರ್ಷಗಳ ಕಾಲ ಪ್ರಾಚೀನ ಶಾಸನಗಳನ್ನು ಓದಿ ಆ ಲಿಪಿಗಳನ್ನು ನವೀನ ಲಿಪಿಗಳಿಗೆ ಪರಿವರ್ತಿಸುವ ವಿದ್ಯೆಯಲ್ಲಿ ಕುಶಲನಾಗಿದ್ದು ಅದರ ಬಗ್ಗೆ ಅವಿರತವಾಗಿ ದುಡಿದನು. ಜರ್ಮನಿ ದೇಶದವನಾದ ಇವನು Sir Hunter, Dr. Buehler, Jos Burgess, G. U. Pope, Rev. Caldwell, Dr Fleet ಮತ್ತು B. L. Rice ಇವರೊಡನೆ ಒಂದಲ್ಲ ಒಂದು ರೀತಿಯಲ್ಲಿ ದುಡಿದು ಅವರ ಸಂಶೋಧನಾ ಕಾರ್ಯಭಾರದಲ್ಲಿ ಅವರಿಗೆ ನೆರವಾದನು.

Dr. Hultzsch ಇವನು ಕಲ್ಕತ್ತಾ, ಮದ್ರಾಸು ಬೆಂಗಳೂರು ಮತ್ತು ಬೊಂಬಾಯಿಯಲ್ಲಿ ಆಯಾ ಪ್ರಾಂತಗಳಿಗೆ ಸಂಬಂಧಿಸಿದ ಶಾಸನಗಳ ಅನ್ವೇಷಣೆಯಲ್ಲಿಯೇ ತನ್ನ ಕಾಲವನ್ನು ಕಳೆದನು. ಅವನು Indian Antiquary,

Asiatic Journal, Literary Review ಇತ್ಯಾದಿ ಪತ್ರಿಕೆಗಳಲ್ಲಿ ಬರೆದ ಸಂಶೋಧನಾ ಲೇಖನಗಳು ೨೫೦೦ folio ಪುಟಗಳಿಗೂ ಮೀರಿ ಇವೆ. ಸಂಸ್ಕೃತ, ಕನ್ನಡ, ತಮಿಳು, ಬಂಗಾಳೀ, ಪಾಲೀ, ತೆಲುಗು, ಮರಾಠಿ, ಪರ್ಷಿಯನ್ ಹೀಗೆ ಹಲವು ಭಾಷೆಗಳಲ್ಲೂ ಪಾಂಡಿತ್ಯವನ್ನು ಪಡೆದು ಈ ಭಾಷೆಗಳಲ್ಲಿದ್ದ ಪ್ರಾಚೀನ ಶಿಲಾ ಮತ್ತು ತಾಮ್ರ ಬರೆಹಗಳನ್ನು ಓದಿ ಅರ್ಥಮಾಡಿ ಆಧುನಿಕವಾಗಿ ಬರೆದ ಸಾಹಸವು ಅವನದಾಗಿದೆ. Epigraphia Carnatica ಈ ಗ್ರಂಥ ಸಂಪುಟಗಳ ಸಂಪಾದನಾ ಕಾರ್ಯದಲ್ಲಿ Prof. Hultzsch ಇವನು ಪ್ರಧಾನ ಪಾತ್ರವನ್ನು ವಹಿಸಿದ್ದನು. ಅದೇ ರೀತಿ ಮೈಸೂರು ರಾಜ್ಯದ ಗೆಜೆಟಿಯರುಗಳು ಸಂಪಾದನಾ ಕಾರ್ಯದಲ್ಲೂ ಅವನು Benjamin Rice ಇವನಿಗೆ ಸಹಕರಿಸಿದನು. ಕರ್ಣಾಟಕದ ಎಲ್ಲಾ ಶಿಲಾಲೇಖಗಳೂ ಅವನ ಪರಿಷ್ಕರಣೆಗೊಳಗಾಗಿವೆ. ಮದ್ರಾಸಿನಲ್ಲಿದ್ದಾಗ John Fleet, Robert Sewell ಮತ್ತು G. U. Pope ಇವರೊಡನೆ ಸೇರಿ ವಿಜಯನಗರ ರಾಜ್ಯಕ್ಕೆ ಸಂಬಂಧಿಸಿದ ನೂರಾರು ಶಾಸನಗಳನ್ನು ಬಯಲಿಗೆಳೆದು ಅನ್ವೇಷಿಸಿದನು. 1889 ರಲ್ಲಿ ಬೆಂಗಳೂರಿನಲ್ಲಿದ್ದಾಗ ಕಲ್ಹಣನ ರಾಜತರಂಗಿಣಿಯ ಬಗ್ಗೆ ವಿಮರ್ಶೆಯನ್ನು ಕೈಗೊಂಡು ಅದನ್ನು ಕುರಿತು ಹೊಸ ವಿಚಾರಗಳನ್ನು ಬೆಳಕಿಗೆ ತಂದನು.

Dr. Hultzsch ಇವನು ಬರೆದ ಲೇಖನಗಳಲ್ಲಿ ರಾಷ್ಟ್ರಕೂಟರ ಕಾಲದ ಶಾಸನಗಳು, ಸುಂಗವಂಶದ ಅರಸರ ಶಾಸನಗಳು, ವಿಜಯನಗರದ ಅರಸರ ವಂಶಾವಳಿಗೆ ಸಂಬಂಧಿಸಿದ ವಿವರಗಳು ಮೊದಲಾದುವು ಪ್ರಧಾನವಾದುದಾಗಿವೆ. ದಕ್ಷಿಣ ಹಿಂದೂಸ್ಥಾನದ ಪ್ರಾಚೀನ ನಾಣ್ಯಗಳ ವಿಷಯವಾಗಿ ಉದ್ಬೋಧಕವಾದ ಪ್ರಬಂಧವನ್ನು ಬರೆದನು. ತಮಿಳು ಸಾಹಿತ್ಯಕ್ಕೆ ಮತ್ತು ಚರಿತ್ರೆಗೆ ಇವನಿಂದ ವಿಶೇಷ ಸೇವೆಯು ಸಲ್ಲಿಸಲ್ಪಟ್ಟಿದೆ. ಹೇಗೂ ಆ ವರೆಗೆ ಭಾರತದಲ್ಲಿದ್ದ ಕೆಲವೇ ಶಿಲಾಲೇಖ ಅನ್ವೇಷಣಾ ತಜ್ಞರಲ್ಲಿ ಇವನು ಪ್ರಬಲನೆಂದು ವಿಖ್ಯಾತನಾಗಿದ್ದನು.

**೬. ಡಾ. ಹಲ್ಟ್ಸ್‌ಸೆಜ್ ಇವನ ‘ಪ್ರಾಚೀನ ಶಾಸನ’ಗಳ ಪ್ರಕಟಣೆಗಳು :–**

Dr. Edward Hultzsch ಇವನು Epigraphia Carnatica ಗ್ರಂಥ ಸಂಚಿಕೆಗಳ ಸಂಪಾದನೆಯ ಕಾರ್ಯದಲ್ಲಿ ತನ್ನ ಪಾಲಿನ ಕೆಲಸವನ್ನು ಮುಗಿಸಿದ ಮೇಲೆ South Indian Inscriptions ಎಂಬುದಾಗಿ ಮೂರು ಕಾಂಡಗಳ ಸಚಿತ್ರ ಗ್ರಂಥವನ್ನು folio ಪುಟಗಳಲ್ಲಿ ಉತ್ತಮವಾದ ಕಾಗದದಲ್ಲಿ ಮುದ್ರಿಸಿ ಹೊರ ತಂದನು. ಇದರಲ್ಲಿ ಕರ್ಣಾಟಕಕ್ಕೆ ಸಂಬಂಧಿಸಿದ ಮತ್ತು ಆ ವರೆಗೂ ವಿದ್ವಾಂಸರ ಅವಗಾಹನೆಗೆ ಬಾರದೇ ಇದ್ದ ನೂರಾರು ಶಾಸನಗಳು ಬೆಳಕಿಗೆ ಬಂದಿವೆ. ಇದನ್ನು ಕುರಿತು John F. Fleet ಇವನು ವಿಮರ್ಶಿಸುತ್ತಾ ಈ ರೀತಿಯಾಗಿ ಹೇಳಿದನು :–

"In Dr. Hultzsch's "South Indian Inscriptions" Vol. I to III, we have a number of carefully edited versions, a study of which go far towards removing any difficulties in the grappling of with the Epigraphical peculiarities....".

Dr. Haltzsch ಇವನು ತನ್ನ ಹುದ್ದೆಯಿಂದ ನಿವೃತ್ತನಾದನಂತರ ಬೊಂಬಾಯಿಯಲ್ಲಿ A. Fuhrer ಇವನೊಡನೆ ಸೇರಿ 'Epigraphia Indica' ಎಂಬುದಾಗಿ ಪತ್ರಿಕೆಯ ರೂಪದಲ್ಲಿ ಗ್ರಂಥ ಸಂಪುಟಗಳನ್ನು ಎರಡು ವರ್ಷಗಳ ಕಾಲ ಪ್ರಕಟಿಸಿದನು. ಇವರಿಗೆ ಅದರಲ್ಲಿ ಸಹಾಯಕರಾಗಿ Prof. H. Jacobi ಮತ್ತು Indian Antiquary ಪತ್ರಿಕೆಯ ಸಂಪಾದಕ Richard C. Temple ಇವರು ಇದ್ದರು. 1897 ರಲ್ಲಿ Hultzsch ಇವನು Dr. Buehler ಇವನ Palaeography ಅಥವಾ ಭಾರತೀಯ ಶಿಲಾಲೇಖಗಳನ್ನು ಕುರಿತು ಬರೆದ ಇಂಗ್ಲಿಷ್ ಮತ್ತು ಜರ್ಮನ್ ಗ್ರಂಥದ ಮೇಲೆ 96 demy ಪುಟಗಳ ವಿಮರ್ಶೆಯನ್ನು ಬರೆದನು. ತಾನು ಮದ್ರಾಸು ಮತ್ತು ಕೇಂದ್ರ ಸರಕಾರದ ಶಿಲಾಲಿಪಿಗಳ ಪರಿಷ್ಕರಣಾಧಿಕಾರಿಯಾಗಿದ್ದಾಗ ಸಂಗ್ರಹಿಸಿದ ಇನ್ನೂ ಹಲವು ಪ್ರಾಚೀನ ಶಾಸನಗಳೂ ಅವನಿಂದ ಆ ಮೇಲೆ ಗ್ರಂಥರೂಪದಲ್ಲಿ ಪ್ರಕಟವಾದುವು.

Dr. Hultzsch ಇವನು ತನ್ನ ಸ್ವದೇಶಕ್ಕೆ ಹಿಂದಿರುಗಿದನಂತರ ಕರ್ಣಾಟಕ ಮತ್ತು ದಕ್ಷಿಣ ಹಿಂದೂಸ್ಥಾನದ ಪ್ರಾಚೀನ ಚರಿತ್ರೆಗೆ ಸಂಬಂಧಿಸಿ ಹಲವು ಲೇಖನಗಳನ್ನು ಇಂಗ್ಲಿಷ್‌ನಲ್ಲೂ ಜರ್ಮನ್‌ನಲ್ಲೂ ಬರೆದನು. 1898 ರಲ್ಲಿ ವಿಯೆನ್ನಾದಿಂದ "Karnataka Grants of 1636" ಎಂಬುದರ ಮೇಲೆ ಮತ್ತು ಚಾಳುಕ್ಯ ಮತ್ತು ರಾಷ್ಟ್ರಕೂಟರ ಕಾಲದ ಶಾಸನಗಳ ಮೇಲೆ ಲೇಖನಗಳನ್ನು ಭಾರತೀಯ ಪತ್ರಿಕೆಗಳಲ್ಲಿ ಬರೆದನು. Rev. Kittel, Dr. Fleet, Richard Temple ಮೊದಲಾದವರು ಬರೆದ ಗ್ರಂಥಗಳ ಮೇಲೂ ವಿದ್ವತ್ಪೂರ್ಣವಾದ ವಿಮರ್ಶೆಗಳನ್ನೂ ಬರೆದು ಕಳುಹಿಸುತಿದ್ದನು. ಅವನ ಜರ್ಮನ್ ಗ್ರಂಥಗಳಲ್ಲಿ Zum Papyrus.... Hermes ಇದು ಪ್ರಾಮುಖ್ಯವಾದುದಾಗಿದೆ. 307 ಪುಟಗಳ ಈ ಗ್ರಂಥಕಾಂಡವು ಅವನ ಭಾರತೀಯ ಇತಿಹಾಸ ಜ್ಞಾನಕ್ಕೆ ತಕ್ಕ ಸಾಕ್ಷ್ಯವೆಂಬುದಾಗಿ ಸರ್ವರ ಪ್ರಶಂಸೆಗೆ ಒಳಗಾಯಿತು.

**೭. ಆರ್ಥರ್ ಬರ್ನೆಲ್ ಮತ್ತು ಇತರ ಹಲವು ಲೇಖಕರು :—**

ಮದ್ರಾಸು ಮತ್ತು ತಂಜಾವೂರಿನಲ್ಲಿಯೇ ಬಹುಕಾಲವಿದ್ದು ಮತ್ತು ವೇದ, ಪುರಾಣ ಮತ್ತು ಮಹಾಭಾರತ ಗ್ರಂಥಗಳ ಓಲೆಗಳನ್ನು ನೂರಾರು ಸಂಪಾದಿಸಿ ಅವುಗಳ ಮೇಲೆಲ್ಲಾ ಹೊಸ ಬೆಳಕನ್ನು ಚೆಲ್ಲಿದ Dr. Arthur Coke Burnell ಇವನ ವಿಷಯವಾಗಿ ಹಿಂದೆ ಹಲವು ಬಾರಿ ಪ್ರಸ್ತಾಪಿಸಲಾಗಿದೆ. ಕರ್ಣಾಟಕ ಮತ್ತು ಕನ್ನಡ ಸಾಹಿತ್ಯಕ್ಕೆ ಇವನು ನೇರವಾಗಿ ಹೆಚ್ಚೇನೂ ಸಾಧಿಸದಿದ್ದರೂ ಕನ್ನಡನಾಡು, ನುಡಿ ಮತ್ತು ಸಂಸ್ಕೃತಿಯ ಮಟ್ಟಿಗೆ ವಿಶೇಷ ಅನ್ವೇಷಣೆಯನ್ನು ನಡೆಸಿದ್ದಾನೆ. ಕೊಂಕಣಿ ಮತ್ತು ತುಳು ಸಾಹಿತ್ಯಕ್ಕೆ ಜೀವಕಳೆಯನ್ನೊದಗಿಸಿದ ಪ್ರಮುಖರಲ್ಲಿ ಇವನೊರ್ವನು. Dr. Buehler ಇವನೊಡನೆ ಸೇರಿ Indische Palaeograpie ಇದನ್ನು ಸಂಪಾದಿಸಿದನು. 1873 ರಲ್ಲಿ South Indian Dialects ಇದರಲ್ಲಿ ನಾಡಿನ ಎಲ್ಲಾ ಉಪಭಾಷೆಗಳನ್ನು ಅವುಗಳ ನುಡಿಗಟ್ಟುಗಳನ್ನು ಸಂಗ್ರಹಿಸಿ

ದನು. ತಮಿಳು, ತೆಲುಗು ಇತ್ಯಾದಿ ಭಾಷೆಗಳಲ್ಲಿ ನಿಷ್ಣಾತನಾದ ಇವನು "Andhra School of Sanskrit Grammarians" ಎಂದು ಬರೆದ ಅವನ ಭಾಷಾ ಶಾಸ್ತ್ರ ಗ್ರಂಥವು ಪ್ರಸಿದ್ಧವಾದುದಾಗಿದೆ. ಮದ್ರಾಸು, ಬೆಂಗಳೂರು ಮತ್ತು ಮಂಗಳೂರು — ಈ ಪ್ರಧಾನ ಸ್ಥಳಗಳಲ್ಲಿದ್ದ ವಿವಿಧ ಭಾಷೆಗಳ ಮೇಲೆ ಚಾರಿತ್ರಿಕ ಅನ್ವೇಷಣೆಯನ್ನು ನಡೆಸಿದ್ದಾನೆ. ಕೊಂಕಣಿಯನ್ನು ಕುರಿತು "it has claims to be considered as a district neo-Aryan language" ಎಂಬುದಾಗಿ Dr. A. C. Burnell ಇವನು ಪ್ರತಿಪಾದಿಸಿದನು.

Arthur Burnell ಇವನು ದಕ್ಷಿಣ ಹಿಂದೂಸ್ಥಾನದ ವಾಸ್ತುಶಿಲ್ಪ ಮತ್ತು ಶಿಲಾಲೇಖಗಳನ್ನು ಕುರಿತು ಹಲವು ಲೇಖನಗಳನ್ನೂ ಪತ್ರಿಕೆಗಳಲ್ಲಿ ಬರೆದನು. ಸಂಸ್ಕೃತದಲ್ಲಿ ವಿಶೇಷ ಪಂಡಿತನಾಗಿದ್ದ ಇವನು ನೂರಾರು ಸಂಸ್ಕೃತ ಓಲೆಗಳನ್ನು ಸಂಗ್ರಹಿಸಿ ಅವುಗಳ ವಿಚಾರವಾಗಿ ಇತರ ವಿದ್ವಾಂಸರೊಡನೆ ವಿನಿಮಯ ನಡೆಸಿ ವಿದ್ವತ್ಪೂರ್ಣವಾದ ಗ್ರಂಥಗಳನ್ನೂ ಲೇಖನಗಳನ್ನೂ ಬರೆದನು. ಇವನ ಬರೆವಣಿಗೆಗಳೂ ತಮಿಳುನಾಡು ಮತ್ತು ಕರ್ಣಾಟಕದ ಅಂದಿನ ವಿವಿಧ ಪ್ರಕಟಣೆಗಳೊಳಗೆ ಚದರಿಹೋಗಿವೆ.

1885 ರ ಕಾಲದಲ್ಲಿ ಬೆಂಗಳೂರಿನಲ್ಲಿದ್ದ Thomas Foulkes ಇವನು ವಾಸ್ತುಶಿಲ್ಪ ಕಲೆಯನ್ನು ಕುರಿತಾಗಿಯೂ ಲೇಖನಗಳನ್ನು ಬರೆದನು. ೨ನೇ ವಿಕ್ರಮಾದಿತ್ಯ ಮತ್ತು ಪಲ್ಲವ ನಂದಿವರ್ಮನನ್ನು ಕುರಿತಾದ ಶಾಸನಗಳನ್ನು ಉಲ್ಲೇಖಿಸಿ ಸಮರ್ಥನೀಯವಾದ ಕೆಲವು ಲೇಖನಗಳನ್ನು 1888 ರ ಕಾಲದಲ್ಲಿ ಬರೆದನು. ಬುದ್ಧನ ಕಾಲದಲ್ಲಿ ದಕ್ಷಿಣ ಹಿಂದೂಸ್ಥಾನವೆಂತಿದ್ದಿತೆಂಬುದರ ಬಗ್ಗೆಯೂ ಪರಾಮರ್ಶೆ ಮಾಡಿದ್ದಾನೆ. ಅದೇ ವೇಳೆಗೆ ಕರ್ಣಾಟಕದ ಮತ್ತೊರ್ವ ವಾಸ್ತುಶಿಲ್ಪ ಕಲಾ ಸಂಶೋಧಕ W. F. Sinclair ಇವನು ಬಿಜಾಪುರದ ಜೈನ ವಸತಿಗಳ, ಪೂನಾ ಮತ್ತು ಎಲಿಫೆಂಟಾ ಗುಹೆಗಳ ಪ್ರಾಚೀನ ಕನ್ನಡ ಶಿಲಾಶಾಸನಗಳನ್ನು ಅನ್ವೇಷಿಸಿ ಅವುಗಳ ವಿಷಯವಾಗಿ ಉದ್ಬೋಧಕವಾದ ಲೇಖನಗಳನ್ನು 1878 ರ ಕಾಲದಲ್ಲಿ ಬರೆದನು. ಭಾಷಾ ಶಾಸ್ತ್ರಜ್ಞ Bishop R. Caldwell ಇವನು ಪ್ರಾಚೀನ ದಖ್ಖಣದ ಸ್ಮಾರಕ ಶಿಲೆ ಮತ್ತು ಮಣ್ಣುಪಾತ್ರೆಗಳ ಐತಿಹ್ಯವನ್ನು ಕುರಿತು ಹೊಸ ವಿಚಾರಗಳನ್ನು ಪ್ರತಿಪಾದಿಸಿದನು. 1893 ರಲ್ಲಿ James Doughlas ಇವನು Bombay and Western India ಎಂಬುದಾಗಿ ಬರೆದ ಗ್ರಂಥದಲ್ಲಿ ಕರ್ಣಾಟಕದ ಚರಿತ್ರೆಗೆ ಸಂಬಂಧಿಸಿದ ಹಲವು ವಿಚಾರರ್ಹವಾದ ವಿಷಯಗಳನ್ನು ಶಾಸನಗಳ ಆಧಾರದಿಂದ ನಿರೂಪಿಸಿದನು.

**೮. ನಾಡು ಮತ್ತು ನುಡಿಯನ್ನು ಕುರಿತು ಕೇಪ್ಟನ್ ಮೇಕೆನ್ಜೀ ಮತ್ತಿತರರು :—**

Captain J. Mackenzie ಇವನು ಹಳೆ ಮೈಸೂರು ರಾಜ್ಯದಲ್ಲಿ ಓರ್ವ ಸೇನಾ ಅಧಿಕಾರಿಯಾಗಿದ್ದನು. ಇವನು Indian Antiquary ಪತ್ರಿಕೆಯಲ್ಲಿ ಬರೆದ ಲೇಖನಗಳು ಒಟ್ಟಾಗಿ ಸುಮಾರು 500 folio ಪುಟಗಳಷ್ಟಾಗಿವೆ.

"ನರ ಮತ್ತು ಸರ್ಪಪೂಜೆ" ಎಂಬ ವಿಷಯವಾಗಿ 1875 ರಲ್ಲಿ ಅವನು ಬರೆದ ಲೇಖನವು ಚಾರಿತ್ರಿಕವಾಗಿ ಸ್ವಾರಸ್ಯವಾಗಿದೆ. ಹಾಸನ ಜಿಲ್ಲೆಯ ಕುಳುವಡಿಗಳನ್ನು ಕುರಿತು "Village Postmen" ಅಥವಾ "Village Police" ಎಂದೂ ಹಾಸನದ ಸ್ಮಾರಕ ಕಲ್ಲುಗಳು ಮತ್ತು ಶಿಲಾಶಾಸನಗಳನ್ನು ಕುರಿತಾಗಿಯೂ ಲೇಖನಗಳನ್ನು ಬರೆದನು.

Capt. Mackenzie ಒರ್ವ ಸೈನಿಕನಾಗಿದ್ದರೂ ಅವನು ವಿವಿಧ ವಿಷಯಗಳಲ್ಲಿ ಅಭಿರುಚಿಯನ್ನು ತೋರಿಸಿದ್ದಾನೆ. ಹಳೇಬೀಡು, ಶ್ರವಣಬೆಳ್ಗೊಳ, ನಾಗಪೂಜೆ, ಜಾತಿಭೇದ ಹೀಗೆ ಹಲವು ವಿಚಾರಗಳ ಮೇಲೆ ಬರೆದಿದ್ದು ಅಲ್ಲದೆ "The rule which govern the Kannada Poetry" ಎಂದು ಕನ್ನಡ ಛಂದೋ ಲಕ್ಷಣವನ್ನು ಕುರಿತು ಬರೆದ ಲೇಖನದಲ್ಲಿ ಮಾತ್ರೆ, ಗಣ, ಪ್ರಾಸ, ವೃತ್ತ, ಕಂದ, ತ್ರಿಪದಿ ಇತ್ಯಾದಿಗಳನ್ನೂ ವಿವರಿಸಿ ಹೇಳಿದ ಅವನ ಬರೆವಣಿಗೆಗಳು ಆಶಾದಾಯಕವಾಗಿವೆ. ಹಲವು ಪದ್ಯ ಭಾಗಗಳನ್ನು ಉದಾಹರಿಸಿ ಮತ್ತು ಪ್ರಸ್ತರಿಸಿ ಬರೆದ ಈ ಹತ್ತಾರು folio ಪುಟಗಳ ಈ ಲೇಖನವು ಬಹು ಚೆಲೋದಾಗಿದೆ. ಪ್ರಾಸದ ವಿಷಯವಾಗಿ ಹೇಳುವಾಗ Capt. Mackenzie ಇವನು ಹೀಗನ್ನುತ್ತಾನೆ:—

"The difficulty of always finding a suitable word with the second consonant.........the same has been given rise to poetical license by which certain consonants are allowed to stand for one another. This is called Mithra Prasa."

ತೆಲುಗು ಭಾಷಾ ಪಂಡಿತ Charles P. Brown ಇವನು ಸಂಪಾದಿಸಿದ Carnatic Chronology ಎಂದು ಪೂರ್ವಕಾಲದ ವಿವಿಧ ರಾಜವಂಶಗಳನ್ನು ಕುರಿತಾಗಿ ಕೊಟ್ಟ ವಿವರಣೆಯು ಪರಿಪುಷ್ಟವಾದುದಾಗಿದೆ. Dr. George Buehler ಇವನು ರಾಷ್ಟ್ರಕೂಟರ ಶಾಸನಗಳ ಆಧಾರದಿಂದ 1883 ರಲ್ಲಿ ಬರೆದ ಚಾರಿತ್ರಿಕ ವರದಿಯು ಇತರ ಪಾಶ್ಚಾತ್ಯ ಸಂಶೋಧಕರ ಪ್ರಶಂಸೆಗೆ ಪಾತ್ರವಾಯಿತು. ಮೈಸೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಕಂಡುಬಂದ ಪ್ರಾಕ್ತನ ಅವಶೇಷಗಳು ಮತ್ತು ಮಣ್ಣು ಪಾತ್ರೆಗಳ ಐತಿಹ್ಯವನ್ನಲ್ಲದೆ ಪೂರ್ವ ಕರಾವಳಿಯಲ್ಲೂ ಇರುವ ಅದೇ ಬಗೆಯ ಅವಶೇಷಗಳನ್ನು ಸಮನ್ವಯಗೊಳಿಸಿ J. H. Garstin ಇವನು ಒಂದೆರಡು ಉತ್ತಮ ಲೇಖನಗಳನ್ನು ಬರೆದನು.

Donald Fergusson ಇವನು ವಿಜಯನಗರ ರಾಜ್ಯದ ಕಾಲದ ಕನ್ನಡ ಮತ್ತು ತೆಲುಗು ಶಿಲಾಶಾಸನಗಳ ಆಧಾರದಿಂದ ಬರೆದ ಲೇಖನಗಳೂ ಇತರ ಇತಿಹಾಸಕಾರರಿಗೆ ತುಂಬಾ ಪ್ರಯೋಜನವಾದುವು. Sir George Campbell ಇವನು "Specimens of Langauges of India" ಎಂಬುದಾಗಿ 45 ಪುಟಗಳ ಲೇಖನದಲ್ಲಿ ಭಾರತೀಯ ಭಾಷೆಗಳ ವಿವಿಧ ನುಡಿಗಟ್ಟುಗಳ ಸಿಂಹಾವಲೋಕನವನ್ನು ಮಾಡಿದ್ದಾನೆ. ದಕ್ಷಿಣ ಹಿಂದೂಸ್ಥಾನದ ವಿವಿಧ Tribes and Castes ಎಂಬುದರ ಮೇಲೆ ಎರಡು ಕಾಂಡಗಳ ಅನ್ವೇಷಣಾ ಗ್ರಂಥವನ್ನು ರಚಿಸಿ ಪ್ರಸಿದ್ಧನಾದ

E. Thurston ಇವನು Coins and Catalogues of Mysore ಎಂಬುದಾಗಿ ಮತ್ತೊಂದು ವಿಚಾರಪೂರ್ಣವಾದ ಐತಿಹಾಸಿಕ ಹೊತ್ತಗೆಯನ್ನು ಪ್ರಕಟಿಸಿದನು.

೯. ಹಂಪಿಯು ಅಂದಿನ ಇತಿಹಾಸಕಾರರ ಯಾತ್ರಾಸ್ಥಳವಾಯಿತು :—

ದಕ್ಷಿಣ ಹಿಂದೂಸ್ಥಾನದ ಮತ್ತು ಕರ್ಣಾಟಕದ ಎಲ್ಲಾ ಸ್ಥಳಗಳಲ್ಲಿ ಅಲೆದಾಡುತ್ತಾ ಇದ್ದ ಅಂದಿನ ಪಾಶ್ಚಾತ್ಯ ಅನ್ವೇಷಕರಿಗೆ ವಿಜಯನಗರದ ಪಾಳು ಬಿದ್ದ ಹಂಪಿಯು ಒಂದು ಚಿನ್ನದ ಗಣಿಗೆ ಸಮಾನವಾಗಿ ತೋರಿತು. ನೂರಾರು ಸಂಶೋಧಕರು ಕಳೆದ ಶತಮಾನದ ಆರಂಭದ ವರೆಗೂ ಕೇವಲ ನಿರ್ಜನವಾದ ಆ ಸ್ಥಳಕ್ಕೆ ಬಹು ಪ್ರಯಾಸಪಟ್ಟು ಹೋಗುವ ಯಾತ್ರಾರ್ಥಿಗಳಾಗಿ ಹೋದರು. ಅಲ್ಲಿ ಹರಡಿ ಚಲ್ಲಾಪಿಲ್ಲಿಯಾಗಿ ಬಿದ್ದ ವಾಸ್ತುಶಿಲ್ಪವು ಅವರಿಗೆ ಆಶ್ಚರ್ಯವನ್ನುಂಟುಮಾಡಿತು. ಕ್ರಿ. ಶ. 1840 ರ ಕಾಲದಲ್ಲಿ ಆ ಸ್ಥಳವನ್ನು ಸಂದರ್ಶಿಸಿದ್ದ Capt. Newbold ಇವನು ಮದ್ರಾಸಿನ Literary Journal ಇದರಲ್ಲಿ ಒಂದು ಲೇಖನವನ್ನು ಬರೆಯುತ್ತಾ ಬಳ್ಳಾರಿಯಿಂದ ಹದಿನೆಂಟು ಮೈಲು ದೂರದ ಈ ಸ್ಥಳವು ಇತಿಹಾಸಕಾರರಿಗೆ ಪ್ರೇಕ್ಷಣೀಯವಾಗಿದೆಯೆಂಬುದಾಗಿ ಹೇಳಿ ಅಂದಿನ ಸಂಶೋಧಕರ ಕುತೂಹಲವನ್ನು ಕೆರಳಿಸಿದನು. ಅಲ್ಲಿಂದ ನಂತರ Robert Sewell ಇವನು The Forgotton Empire ಇದನ್ನು ಬರೆಯುವವರೆಗೂ ನೂರಾರು ಆಂಗ್ಲ ವಿದ್ವಾಂಸರು ಕೇಂದ್ರ ಸರಕಾರದ ಪ್ರಾಕ್ತನ ವಿಚಾರ ಇಲಾಖೆಯವರೂ ಹಂಪಿಯನ್ನು ಸಂದರ್ಶಿಸಿದರು.

Capt. Ravenshaw ಇವನು ಹಂಪಿಯ ಮತ್ತು ಬಳ್ಳಾರಿಯ ಹಲವು ಹಳಗನ್ನಡ ಶಿಲಾಶಾಸನಗಳನ್ನೂ ಶಿಲಾಲೇಖನಗಳನ್ನೂ ಸಂಗ್ರಹಿಸಿದ್ದಲ್ಲದೆ ರಾಯದುರ್ಗ, ಹರಪನಹಳ್ಳಿ, ಗುಟ್ಟಿ, ಪೆನುಕೊಂಡ ಇತ್ಯಾದಿ ಸ್ಥಳಗಳಲ್ಲಿದ್ದ ವಿಜಯನಗರದ ಕಾಲದ ಶಾಸನಗಳ ಮೇಲೆ ತಕ್ಕ ವರದಿಯನ್ನು ತಯಾರಿಸಿದ್ದು Dr. Hultzsch, Robert Sewell, John Fleet ಮೊದಲಾದವರಿಗೆ ವಿಶೇಷ ಸಹಾಯಕವಾಯಿತು. 1873 ರಲ್ಲಿ Archaeology of Bellary ಎಂಬ ವಿಷಯವಾಗಿ ಬರೆಯುತ್ತಾ John Kelsal ಇವನು ಈ ರೀತಿಯಾಗಿ ಆ ಸ್ಥಳವನ್ನು ಕುರಿತು ಹೇಳಿದನು :—

> " The finest specimens of native architecture are to be seen at Hampi........These ruins are on the south bank of Tungabhadra river, about 36 miles from Bellary, and cover a space of nearly nine square miles. At Kamalapur, two miles from Hampi, an old temple has been converted into a bungalow......".

ಹಂಪಿ ಮತ್ತು ಅದರ ಸುತ್ತಮುತ್ತಣ ಸ್ಥಳಗಳಿಂದ ದೊರೆತ ನೂರಾರು ಶಾಸನಗಳ ಮತ್ತು ಓಲೆಗಳ ವಿವರಗಳನ್ನು Epigraphia Carnatica ಇದರಲ್ಲಿ ಕೊಡ

ಲಾಗಿದೆ. ಇವರಲ್ಲಿ ಹೆಚ್ಚಿನ ಶ್ರಮವನ್ನು ವಹಿಸಿದವರು Dr Hultzsch, Robert Sewell ಮತ್ತು George U Pope ಇವರೆಂದೆನ್ನಬಹುದು. ಮೈಸೂರು ರಾಜ್ಯದ ಶ್ರೇಷ್ಠ ಸಂಶೋಧಕ Benjamin Rice ಇವನು ಹಂಪಿಗೆ ಭೇಟಿ ಕೊಟ್ಟುದರ ವರದಿಯಾಗಲಿಲ್ಲ; ಬಹುಶಃ ಬಳ್ಳಾರಿಯು ಆಗ ಮದ್ರಾಸಿಗೆ ಸೇರಿದ್ದ ಕಾರಣದಿಂದ ಅವನು ಆ ಸ್ಥಳವನ್ನು ಸಂದರ್ಶಿಸದೇ ಬಿಟ್ಟನು. ಆದರೆ ಶ್ರವಣಬೆಳ್ಗೊಳದ ಶಾಸನಗಳ ಮೇಲೆ ಅಪೂರ್ವ ಬೃಹದ್ಗ್ರಂಥವನ್ನು ತಯಾರಿಸಿದ ಈ B. L. Rice ಇವನು ಹಂಪಿಯನ್ನು ನೋಡಿದ್ದರೆ ಅವನು ಅಂಥಾ ನಾಲ್ಕಾರು ಗ್ರಂಥಗಳನ್ನು ಸಂಪಾದಿಸುತಿದ್ದನೆಂದು ಹೇಳಬಹುದಾಗಿದೆ.

**೧೦. ಡಾ. ಜಾನ್ ಫ್ಲೀಟ್—ಇವನ ಜೀವನದ ಸೂಕ್ಷ್ಮ ಪರಿಚಯ:—**

John Faithful Fleet * ಇವನು ಇಂಗ್ಲೆಂಡಿನ ಚಿಸ್ವಿಕ್ (Chiswick) ಜಿಲ್ಲೆಯಲ್ಲಿ 1847 ನೇ ವರ್ಷದಲ್ಲಿ ಜನಿಸಿದನು. ಲಂಡನ್ ವಿಶ್ವವಿದ್ಯಾಲಯದಲ್ಲಿ ಉಚ್ಚ ತರಗತಿಯ ಪದವೀಧರನಾಗಿ ತನ್ನ ವಿದ್ಯೆಯನ್ನು ಮುಗಿಸಿ Indian Civil Service ಪರೀಕ್ಷೆಯಲ್ಲೂ ತೇರ್ಗಡೆಯಾದನು. ಸಂಸ್ಕೃತವನ್ನು ಐಚ್ಛಿಕ ಭಾಷೆಯಾಗಿ ತೆಗೆದುಕೊಂಡಿದ್ದ ಇವನು ತನ್ನ ವ್ಯಾಸಂಗದವಧಿಯಲ್ಲಿ ವಿಶೇಷ ಪ್ರೌಢತೆಯನ್ನು ಪ್ರದರ್ಶಿಸಿದನು. ಕ್ರಿ.ಶ. 1867 ರಲ್ಲಿ ಹಿಂದೂಸ್ಥಾನಕ್ಕೆ ಬಂದು John F. Fleet ಇವನು ಬೊಂಬಾಯಿ ಆಧಿಪತ್ಯದಲ್ಲಿ ಒಂದು ನೌಕರಿಯನ್ನು ಪಡೆದು 1872 ರಿಂದ ಜಿಲ್ಲಾಧಿಕಾರಿಯಾಗಿಯೂ ನ್ಯಾಯಾಧೀಶನಾಗಿಯೂ, ಶಾಲೆಗಳ ಅಧಿಕಾರಿಯಾಗಿಯೂ, ಕೋಲಾಪುರದಲ್ಲಿ ಕುಂಪೆನೀ ಸರಕಾರದ ಸ್ಥಾನೀಕ ಅಧಿಕಾರಿಯಾಗಿಯೂ (Resident) ಬೇರೆ ಬೇರೆ ಸ್ಥಳಗಳಲ್ಲಿ ದುಡಿದನು. ಸಂಸ್ಕೃತ ಮತ್ತು ನಾಲ್ಕಾರು ಭಾರತೀಯ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿದ ಇವನನ್ನು ಭಾರತ ಸರಕಾರವು 1875 ರಿಂದ ಸರಕಾರದ ಸ್ಮಾರಕ ಲಿಪಿ ಮತ್ತು ಶಿಲಾ ಶಾಸನಗಳ ಅನ್ವೇಷಣಾ ಅಧಿಕಾರಿ (Epigraphist)ಯಾಗಿಯೂ ಅನಂತರ All India Surveyor ಆಗಿಯೂ ನೇಮಕಮಾಡಿತು.

John Faithful Fleet ಇವನು ಈ ವಿವಿಧ ಅಧಿಕಾರ ಸ್ಥಾನಗಳನ್ನು ಹೊತ್ತಿದ್ದಾಗ ಅವನು ಸಂಗ್ರಹಿಸಿದ ಮತ್ತು ಸಂಪಾದಿಸಿದ ಐತಿಹಾಸಿಕ ವರದಿಗಳು ಹಲವು ಪ್ರಾಂತ ಸರಕಾರಗಳ ಖಚೇರಿಗಳಲ್ಲಿ ಹರಡಿಹೋಗಿವೆ. ಅವನ ಮುಖ್ಯವಾದ ಬರೆವಣಿಗೆಗಳಲ್ಲಿ Conquests of Samudrgupta; Date of Buddha's death; Asoka and Buddhism; Inscriptions of Mathura; Last Edict of Asoka ಇತ್ಯಾದಿಯಾಗಿ ನೂರಾರು ಇವೆ. ಬೊಂಬಾಯಿಯ Asiatic Journal ಮತ್ತು Indian Antiquary ಪತ್ರಿಕೆಗಳಲ್ಲಿ John F. Fleet ಇವನು ಸುಮಾರು ೨೫೦ ಚಾರಿತ್ರಿಕ ಲೇಖನಗಳನ್ನು ಬರೆದಿದ್ದು ಅವೆಲ್ಲಾ ಒಟ್ಟಾಗಿ 3500 folio ಪುಟಗಳಷ್ಟು ಆಗುತ್ತವೆಂದರೆ

* ಇವನ ಭಾವಚಿತ್ರವನ್ನು ಬೇರೆಡೆ ಕೊಡಲಾಗಿದೆ.

ಇವನ ಸಂಶೋಧನೆಯ ಪರಿಮಿತಿಯೆಷ್ಟೆಂಬುದು ವ್ಯಕ್ತವಾಗುತ್ತದೆ. ಹಲವು ಪ್ರಾಂತಗಳ ಗಜೆಟಿಯರುಗಳನ್ನು ತಯಾರಿಸುವುದರಲ್ಲೂ ಮದ್ರಾಸು ಮತ್ತು ಮೈಸೂರು ಸರಕಾರಗಳ Epigraphia Carnatica ಈ ಗ್ರಂಥಕಾಂಡಗಳ ಪ್ರಕಟಣೆಯಲ್ಲೂ ಅವನು ಪ್ರಮುಖ ಪಾತ್ರವನ್ನು ವಹಿಸಿದ್ದನು. ಸಹಸ್ರಾರು ಪ್ರಾಚೀನ ಶಾಸನಗಳ ಗೂಢಲಿಪಿಗಳನ್ನು ಓದಿ ಅರ್ಥಮಾಡಿ ವ್ಯಾಖ್ಯೆಯನ್ನು ಬರೆದ ಅವನ ಸಾಹಸವು ಅವನ ಸಮಕಾಲೀನ ಪಾಶ್ಚಾತ್ಯ ವಿದ್ವಾಂಸರಿಗೆ ಆಧಾರಪ್ರಾಯವಾಗಿದ್ದಿತು.

John Fleet ಇವನು ತನ್ನ ಸ್ವದೇಶಕ್ಕೆ ಹಿಂದಿರುಗಿದ ನಂತರವೂ ತನ್ನ ಸಂಶೋಧನೆಯನ್ನು ಮುಂದುವರಿಸಿದ್ದನು. ತಾನು ನಿವೃತ್ತನಾದಾಗ ಇಂಗ್ಲೆಂಡ್ ಮತ್ತು ಐರ್ಲೆಂಡಿನ Royal Asiatic Society ಇದರ ಕಾರ್ಯದರ್ಶಿಯಾಗಿಯೂ 1907 ರಿಂದ ದುಡಿಯಲು ಪ್ರಾರಂಭಿಸಿದನು. ತನ್ನ ಅಮೂಲ್ಯ ಜೀವನದ ಕಡೇ ದಿನಗಳ ವರೆಗೂ ಅವನು ಭಾರತೀಯ ಸಾಹಿತ್ಯ ಸೇವೆಯಲ್ಲಿಯೇ ತಲ್ಲೀನನಾಗಿದ್ದು ಕಡೆಗೆ ತನ್ನ 71 ನೇ ವರ್ಷ ಪ್ರಾಯದಲ್ಲಿ, ಎಂದರೆ 1917 ರ ಫೆಬ್ರವರೀ ೨೧ನೇ ದಿನ ಈ ಅವಿಶ್ರಾಂತ ಕಾರ್ಯತತ್ಪರನು ಕಣ್ಮರೆಯಾದನು.

**೧೧. ಕರ್ಣಾಟಕ ಮತ್ತು ಕನ್ನಡ ಭಾಷೆಗೆ ಜಾನ್‌ಫ್ಲೀಟ್ ಇವನ ಅಪಾರ ಸೇವೆ :—**

"........Often in his letters he used to speak with tenderness and admiration of his old friends—the Kannada peasantry, and recall the days that he had spent among them, listening after office hours to their tales and recording their ballads. A capable and wise administrator, as well as a profound and successful investigator of scientific truth....".

ಎಂಬುದಾಗಿ John Fleet ಇವನ ವಿಷಯವಾಗಿ L. D. Barnett ಇವನು ಬರೆದಿದ್ದನು. ತನ್ನ ಅಧಿಕಾರ ಅವಧಿಯಲ್ಲಿ ೨೦ ವರ್ಷಗಳಿಗಿಂತಲೂ ಹೆಚ್ಚು ಕಾಲವನ್ನು John Faithful Fleet ಇವನು ಬೊಂಬಾಯಿ ಆಧಿಪತ್ಯದಲ್ಲಿಯೇ ಕಳೆದನು. ಕೋಲಾಪುರ, ಬಿಜಾಪುರ ಮತ್ತಿತರ ಕನ್ನಡ ಜಿಲ್ಲೆಗಳ ಉದ್ದಗಲಕ್ಕೂ ತನ್ನ ಕಾರ್ಯಾರ್ಥವಾಗಿ ಸಂಚರಿಸಿದ್ದನು. ಬೊಂಬಾಯಿ ಆಧಿಪತ್ಯ ಮತ್ತು ದಕ್ಷಿಣ ಹಿಂದೂಸ್ಥಾನದ ಪ್ರಾಚೀನ ಶಿಲಾ ಮತ್ತು ತಾಮ್ರಶಾಸನಗಳೆಲ್ಲವನ್ನೂ ಸಚಿತ್ರವಾಗಿ ಹಲವು ಗ್ರಂಥಕಾಂಡಗಳಲ್ಲಿ ಸಂಪಾದಿಸಿದನು. 1872 ರಿಂದ ಸುಮಾರು ಹದಿನೈದು ವರ್ಷಗಳ ಕಾಲ "Pali, Sanskrit and old Kannada Inscriptions" ಎಂಬುದರ ವಿಷಯವಾಗಿ Indian Antiquary ಪತ್ರಿಕೆಯಲ್ಲಿ ಲೇಖನಗಳನ್ನು ಧಾರಾವಾಹಿಯಾಗಿ ಪ್ರಕಟಿಸಿದ್ದು ಸುಮಾರು 1500 folio ಪುಟಗಳಷ್ಟಾದುವು; ಅದರೊಡನೆಯೇ ಸುಮಾರು 250 ಪ್ರಾಮುಖ್ಯ ಶಿಲಾ ಮತ್ತು ತಾಮ್ರ ಶಾಸನಗಳ ಚಿತ್ರಗಳೂ ಮುದ್ರಣವಾದುವು. ಈ ಶಿಲಾಲಿಪಿಗಳನ್ನು ಭಾವಚಿತ್ರಗಳಿಗಿಳಿಸಿ ಸಂಗ್ರಹಿಸಿದ

ಸಾಹಸವು Major H. Dixon ಇವನದಾಗಿದೆ. ಪ್ರಾಚೀನ ಕದಂಬ, ಗಂಗ, ರಟ್ಟ, ರಾಷ್ಟ್ರಕೂಟ, ಬಾಣ, ಚಾಳುಕ್ಯ, ಇತ್ಯಾದಿ ರಾಜವಂಶಗಳ ಕಾಲವನ್ನು ಆವರಿಸಿ ಉದ್ಬೋಧಕವಾದ ಮತ್ತು ಪರಿಪೂರ್ಣವಾದ ಗ್ರಂಥಗಳನ್ನು J. F. Fleet ಇವನು ಸಿದ್ಧಪಡಿಸಿದನು.

Dr Fleet ಇವನು ಬೇಲಗಾವಿಯ ಕದಂಬರ ಮತ್ತು ಬೈಲ ಹಾನಗಲ್ಲು ರಟ್ಟ ಯಾ ರಾಷ್ಟ್ರಕೂಟರ ಕಾಲವನ್ನು ಮಾತ್ರವಲ್ಲದೆ ಕಾರ್ತವೀರ್ಯ ರಾಜನನ್ನು ಕುರಿತ ಕ್ರಿ. ಶ. 1164 ರ ಶಾಸನಗಳನ್ನೆಲ್ಲಾ ತಿರುವಿಹಾಕಿದನು. ಕೊನ್ನೂರು ಮತ್ತು ಐಹೊಳೆಗಳ ಸ್ಮಾರಕಶಿಲೆ ಮತ್ತು ಮಣ್ಣು ಪಾತ್ರೆಗಳ ಐತಿಹ್ಯವನ್ನು ಸವಿಸ್ತಾರವಾಗಿ ಬರೆದನು. Walter Elliot ಇವನೊಡನೆ ಸೇರಿ ಗೋವಾ ಮತ್ತು ಪಶ್ಚಿಮ ಕರಾವಳಿಯ ಶಾಸನಗಳನ್ನೂ ಅನ್ವೇಷಿಸಿ ಪರಿಶೀಲಿಸಿದನು. ಬಾದಾಮಿಯ ಗುಹೆ ದೇವಾಲಯಗಳನ್ನು ಕುರಿತು ಯಾವುದೊಂದೂ ಅವನ ದೃಷ್ಟಿಯಿಂದ ಪಾರಾಗಲಿಲ್ಲ. ದಂತಿದುರ್ಗ, ಪ್ರಭಾಚಂದ್ರ, ನೃಪತುಂಗ ಮೊದಲಾದ ಪೂರ್ವಕವಿಗಳನ್ನು ಕುರಿತು 'ಕವಿರಾಜ ಮಾರ್ಗ'ದ ಮೂಲಕವಾಗಿ ವಿಮರ್ಶಿಸಿದನು. ಮದ್ರಾಸಿನಲ್ಲಿ George Pope, Dr. Burnell ಮತ್ತಿತರರೊಡನೆ ಸೇರಿ ತನ್ನ ಸಂಶೋಧನಾ ಕ್ಷೇತ್ರವನ್ನು ವಿಸ್ತರಿಸಿದನು.

1888 ರಲ್ಲಿ ಪ್ರಕಟವಾದ "Inscriptions of the Early Gupta Kings" ಇದು ಅವನ ಹಿಂದಿನ ಪರಿಶೋಧನಾ ಬರೆವಣಿಗೆ ಪ್ರಮಾಣಗಳೆಲ್ಲವನ್ನೂ ಮೀರಿಸಿತು. Dynasties of the Kannada Districts of Bombay Presidency ಇದು John Fleet ಇವನು ಕರ್ಣಾಟಕದ ಇತಿಹಾಸಕ್ಕೆ ಕಳಶಪ್ರಾಯವಾಗಿ ಒಪ್ಪಿಸಿದ ಅಮೋಘ ಸಂಶೋಧನಾ ಬರೆಹವಾಗಿದೆ. ತನ್ನ ಮಿತ್ರನೊರ್ವನು ಸಂಪಾದಿಸಿದ "ಕವಿರಾಜ ಮಾರ್ಗ"ಕ್ಕೆ 24 folio ಪುಟಗಳ ಮುನ್ನುಡಿಯನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಅವನಿಗಿದ್ದ ನಿಕಟ ಪರಿಚಯವನ್ನು ವ್ಯಕ್ತಗೊಳಿಸಿದ್ದಾನೆ. ಇವುಗಳಲ್ಲಿ ಹಲವನ್ನು ಅವನು ನಿವೃತ್ತನಾಗಿ ಸ್ವದೇಶಕ್ಕೆ ಹಿಂದಿರುಗಿದ ಮೇಲೆ ಬರೆದನು.

**೧೨. ಕನ್ನಡ ಭಾಷೆಯ ಬಗ್ಗೆ ಡಾ. ಜಾನ್ ಫ್ಲೀಟ್ ಇವನ ಪ್ರಶಂಸೆ:—**

ಸಂಸ್ಕೃತ, ತಮಿಳು, ಮರಾಠಿ, ಕನ್ನಡ, ತೆಲುಗು, ಒರಿಯಾ, ಪರ್ಷಿಯನ್, ಬಂಗಾಳೀ, ಗ್ರೀಕ್, ಲ್ಯಾಟಿನ್, ಜರ್ಮನ್ ಮತ್ತು ಇಂಗ್ಲಿಷ್ ಭಾಷೆಗಳನ್ನು ಕಲಿತು ಅರಗಿಸಿಕೊಂಡಿದ್ದ ಈ ಮಹಾ ಪಂಡಿತನಾದ Dr. John F. Fleet ಇವನು ಸಮಗ್ರ ಭಾರತದಲ್ಲಿಯೇ ವಿಖ್ಯಾತನಾದ ಸಾಹಿತಿಯೂ ಸಂಶೋಧಕನೂ ರಾಜಕಾರಿಣಿಯೂ ಆಗಿದ್ದನು. ಕನ್ನಡ ಸಾಹಿತ್ಯದ ಬಗ್ಗೆ ಅವನು ವಿಶೇಷ ಅಭಿಮಾನವನ್ನು ತಾಳಿದ್ದನು. ಭಾರತದ ಇತರ ಪ್ರಾಂತಗಳಲ್ಲಿ ಅವನು ಸಾಧಿಸಿದ ಅನ್ವೇಷಣೆಗಿಂತ ಎಷ್ಟೋ ಮಿಗಿಲಾಗಿ ಕರ್ಣಾಟಕದ ಬಗ್ಗೆ ದುಡಿದನೆಂಬುದಕ್ಕೆ ಅವನ Epigraphia Carnatica ಮತ್ತಿತರ ಗ್ರಂಥಗಳೇ ಸಾಕ್ಷಿಯಾಗಿವೆ. ಕನ್ನಡ ನಾಡು, ಮತ್ತು

ಕನ್ನಡ ಸಾಹಿತ್ಯದ ವಿಷಯವಾಗಿ ಹೇಳಿದ ಅವನ ಮಾತುಗಳು ಮನನೀಯವಾಗಿವೆ. Rev. F. Kittel ಇವನು ರಚಿಸಿದ ಅರ್ಥಕೋಶವನ್ನು ವಿಮರ್ಶಿಸುತ್ತಾ 1901ರ ಜನವರಿ ತಿಂಗಳ Indian Antiquary ಪತ್ರಿಕೆಯಲ್ಲಿ Dr. J. F. Fleet ಇವನು ಹೀಗೆ ಹೇಳಿದ್ದನು :—

"The Kannada language—the original true vernacular, and still mostly the actual vernacular, of the territory in which lie the districts of Belgaum, Bijapur, Dharwar and Karwar of Bombay presidency, the Kolhapur and other native states of the so-called south Mahratta country, the Bellary district and South Kanara of the Madras presidency, Mysore and the southern portions of the Nizam's dominions ................has hardly received from European scholars the attention which it deserves. It is the most mellifluous of all the Indian vernaculars and the richest in capability and force of expression. It probably surpasses all the others in bulk and value of original composition. And, it has an antiquity to which apparently, none of them can make any pretensions in forms approximating to those which they have..........."

John Fleet ಇವನು ಬೊಂಬಾಯಿಯಲ್ಲಿಯೇ ಬಹುಕಾಲವಿದ್ದ ಕಾರಣದಿಂದ ಅವನು ಅಂದಿನ ಆ ಆಧಿಪತ್ಯದಲ್ಲಿ ಕನ್ನಡವನ್ನು ಆಡುವ ಸೀಮೆಗಳೆಂದು ಹೇಳುವ ಭೂಭಾಗವನ್ನು ಗುರ್ತಿಸಿಕೊಳ್ಳುವ ಅವಶ್ಯಕತೆಯಿದೆ. ಬೆಳಗಾವಿ. ಕಾರವಾರ ಇತ್ಯಾದಿಗಳಲ್ಲದೆ ಕೋಲಾಪುರ ಮತ್ತು ಸುತ್ತುಮುತ್ತಲಿನ ದಕ್ಷಿಣ ಮಹಾರಾಷ್ಟ್ರದ ಪ್ರಾಂತಗಳೂ ಕನ್ನಡ ಸೀಮೆಗಳೆಂದು ಅವನು ಸ್ಪಷ್ಟವಾಗಿ ಹೇಳುತ್ತಾನೆ.

ಕನ್ನಡ ನಾಡಿನ ಮತ್ತು ದಖ್ಖಣದ ಬಗ್ಗೆ Dr. Fleet ಇವನ ಸಾಹಿತ್ಯ ಮತ್ತು ಐತಿಹಾಸಿಕ ಸಂಶೋಧನೆಯು 1888 ರ ಕಾಲಕ್ಕೆ ಮುಗಿದಿತ್ತು. ಅವನ ಪರಿಶೋಧನೆಯ ಅಪಾರ ಬರೆವಣಿಗೆಯು ಸುಮಾರು 6000 folio ಪುಟಗಳಿಗೂ ಮಿಕ್ಕಿದ್ದು ಅವೆಲ್ಲಾ ಭಾರತದಾದ್ಯಂತಕ್ಕೂ ಬಿತ್ತರಿಸಲ್ಪಟ್ಟಿತು. James Burgess, Dr. E. Hultzsch, Dr. Pope, George Buehler ಇಂಥಾ ಹಲವರ ಸಹೋದ್ಯೋಗಿಯಾಗಿದ್ದ ಈ ವಿದ್ವಾಂಸನು Indian Antiquary ಪತ್ರಿಕೆಯ ಸಂಪಾದಕನಾಗಿಯೂ 1893 ರ ಕಾಲದಲ್ಲಿ ಒಂದೆರಡು ವರ್ಷ ದುಡಿದನು. ಅನಂತರ ಅವನು 1895 ರಲ್ಲಿ ತನ್ನ ಸ್ವದೇಶಕ್ಕೆ ಹಿಂದೆರಳಿ ಅಲ್ಲಿಂದಲೇ ಅವನ ಬರೆವಣಿಗೆಗಳ ಪುನರ್ಮುದ್ರಣಕ್ಕೆ ತನ್ನ ಹೊಸ ಪರಿಶೋಧನೆಗಳ ಸಹಿತವಾಗಿ ಸಿದ್ಧಪಡಿಸಿದನು.

### ೧೩. ಜಾನ್‌ಫ್ಲೀಟ್ ಇವನಿಂದ ಜನಪದ ಗೀತೆಗಳ ಭಾಷಾಂತರ:—

Dr. John Faithful Fleet ಇವನು ನಿಷ್ಕಲ್ಮಷ ಮನಸ್ಸಿನ ಒರ್ವ ಮಹಾ ಸಾಹಿತಿ ಮಾತ್ರವಲ್ಲ. ಒರ್ವ ಋಷಿ! ಹಲವು ಬಗೆಯ ಅಧಿಕಾರಸ್ಥಾನಗಳನ್ನು ಹೊತ್ತು ದುಡಿದ ಆ ತೇಜಸ್ವೀ ವಿದ್ವಾಂಸನು ಬಡವ ಬಲ್ಲಿದರೊಡನೆ ಏಕಸಮಾನವಾಗಿ ಬೆರೆತು ತನ್ನ ಪಾಂಡಿತ್ಯವನ್ನು ಸ್ವಲ್ಪವೂ ಪ್ರದರ್ಶಿಸದೆ ನಾಡಿನ ಸೇವೆಯನ್ನು ಬಹು ದಕ್ಷತೆಯಿಂದ ಒಂದು ದೀಕ್ಷೆಯಂತೆ ಕೈಗೊಂಡನು. ಸಂಸ್ಕೃತ, ಪಾಲೀ, ಹಳಗನ್ನಡ, ತಮಿಳು. ಮರಾಠಿ. ಇತ್ಯಾದಿ ಭಾಷೆಗಳ ಮತ್ತು ಪ್ರಾಚೀನ ಇತಿಹಾಸದ ಅನ್ವೇಷಣೆಯಲ್ಲಿಯೇ ತನ್ನ ಜೀವನವನ್ನು ಸವೆದ ಈ ರಸಿಕನು ಜನಪದ ಹಾಡುಗಳಲ್ಲೂ ಅಷ್ಟೇ ಆಸಕ್ತಿಯನ್ನು ವಹಿಸಿದ್ದು ಇವನ ಅಪಾರ ಪಾಂಡಿತ್ಯಕ್ಕೆ ದ್ಯೋತಕವಾದ ವಿಶಿಷ್ಟತೆಯಾಗಿದೆ. ಬೊಂಬಾಯಿ ಆಧಿಪತ್ಯದ ಕನ್ನಡ ಜಿಲ್ಲೆಗಳಲ್ಲಿ ಇವನು ಹಲವು ವರ್ಷಗಳಿದ್ದ ಕಾರಣದಿಂದ ಆ ಭಾಗದ ಜನಪದ ಗೀತೆಗಳನ್ನು ಬಹುಸಂಖ್ಯೆಯಲ್ಲಿ ಸಂಗ್ರಹಿಸಿ ಭಾಷಾಂತರಿಸಿದನು.

ನವಂಬರ್ 1885 ರ Indian Antiquary ಪತ್ರಿಕೆಯಲ್ಲಿ 'Prosodical Metres on folk-song of Rayanna of Sangolli', ಎಂಬ ವಿಷಯವಾಗಿ John F. Fleet ಇವನು ಸ್ವಾರಸ್ಯವಾದ ಲೇಖನವನ್ನು ಬರೆಯುತ್ತಾ ಲಾವಣಿಗಳ ರಚನೆಯನ್ನು ಕುರಿತು ಹೀಗೆ ಹೇಳಿದ್ದಾನೆ:—

"... ....These popular ballads have no literary pretensions; in fact, no greater contrast can be imagined than between them and the artificial compositions, whether ancient, mediaval or modern, from which our knowledge of the vernacular languages of the country is chiefly drawn. Their linguistic value lies in the fact that, being composed by uneducated rustics, they give us what can be obtained from no written source that I know of–the vernacular is actually spoken with all its intermixture of provincialisms and borrowed words, by the men who compose and sing them....".

John Fleet ಇವನು ಕಿತ್ತೂರು ಮತ್ತು ಸಂಗೊಳ್ಳಿಯಲ್ಲಿ ಆಗ ಪ್ರಚಾರವಿದ್ದ ಕೆಲವು ಲಾವಣಿಗಳನ್ನು ಸಂಗ್ರಹಿಸಿ ಅವುಗಳ ವಿಷಯವಾಗಿ 12 folio ಪುಟಗಳಷ್ಟು ಬರೆದಿದ್ದಾನೆ. ಮೂಲವನ್ನೂ ಅದರ ಭಾಷಾಂತರದೊಡನೆ ಇಂಗ್ಲಿಷ್ ಲಿಪಿಯಲ್ಲಿಯೇ ಬರೆದಿದ್ದಾನೆ. ಕಿತ್ತೂರು ಚೆನ್ನಮ್ಮನನ್ನು ಕುರಿತಾಗಿ ಇರುವ ಲಾವಣಿಗಳಲ್ಲೊಂದು ಈ ರೀತಿ ಪ್ರಾರಂಭವಾಗುತ್ತದೆ.

" ಕಿತ್ತೂರು ಚೆನ್ನವ್ವನ ಸೊಸಿ ಹೊನ್‌ಗಲ ಬಿಟ್ಟು ಹೋಗುವಾಗ
ಮಾಡುತಿದ್ದಳಣ್ಣಾ ಮಹ ದುಃಖಾ,
ಮತ್ತ ನಮ್ಮ ಮಲ್ಲಸರ್ಜ ಸತ್ತುಹೋಗದಿದ್ದಾರ
ಹೊತ್ತು ಹೋಗುದ್ಯಾಕಾ ನಮ್ಮ ಬದಕಾ!"

**೧೪. ತನ್ನ ಜನಾಂಗವನ್ನೇ ತೆಗಳಿದರೂ, " ಕಲೆಯು ಕಲೆಗಾಗಿ "—**

**ಜಾನ್‌ಫ್ಲೀಟ್ :—**

Dr J. F. Fleet ಇವನು ಬೆಳಗಾವಿಯಲ್ಲಿ ಪ್ರಚಾರವಿದ್ದ ಇನ್ನೊಂದು ಜನಪದ ಗೀತೆಯನ್ನು ಕೊಡುತ್ತಾ ಬ್ರಿಟಿಷರು ತಮ್ಮ ಕಠಿಣವಾದ ಕಾನೂನು ಕಾಯಿದೆಗಳಿಂದ ಜನರನ್ನು ಗೋಳೆಬ್ಬಿಸಿದರೆಂಬುದಾಗಿ ಅದರ ತಾತ್ಪರ್ಯವನ್ನು ಇಂಗ್ಲಿಷ್‌ನಲ್ಲಿಯೇ ಕೊಡುತ್ತಾನೆ. ಹಾಗೆ ಬರೆಯುವಾಗ ತಮ್ಮ ಜನವನ್ನೇ ತೆಗಳುತ್ತಾ ಹಾಡುವ ನುಡಿಗಳನ್ನು ಯಾವ ಸಂಕೋಚವಿಲ್ಲದೆಯೇ ಹೇಳುತ್ತಾನೆ " Very strict are English laws ; no one can play any tricks under them...." ಎಂದಿತ್ಯಾದಿಯಾಗಿ ಹೇಳಲ್ಪಟ್ಟದೆ. 1863 ರಲ್ಲಿ ಹಾನಗಲ್ಲಿನಲ್ಲಿ ನಡೆದ ಪ್ರಸಂಗವೊಂದನ್ನು ಈ ರೀತಿ ಹಾಡಲಾಗಿದೆ.—

" ಬಡತನ ಅಂಬುದು ಬಾಳ ಕೆಟ್ಟ
ಬಡವಗೆ ಬಂತೊ ಬಹು ಶಿಟ್ಟಾ,
ಸಾವಕಾರ ಸಾಲ ಕೊಡಬೇಕಾದರ
ಸಂಗಯಗಾ ಆದಿತೊ ಸಂಕಷ್ಟಾ !"

ಇದು ಹೀಗೆ ಭಾಷಾಂತರವಾಗಿದೆ.—

" A very bad thing is poverty ; The poor man felt much wrath ;
When he had to pay his debt to money-lender,
Great distress came upon Sangayya."

ಈ ಲಾವಣಿಯನ್ನು ಮೂರು folio ಪುಟಗಳಷ್ಟು ಸಂಪೂರ್ಣವಾಗಿ ಇಂಗ್ಲಿಷ್ ಲಿಪಿಯಲ್ಲಿಯೇ ಬರೆದು ಅನಂತರ ಅದರ ಭಾಷಾಂತರವನ್ನು ಕೊಡಲಾಗಿದೆ. 1887 ರಲ್ಲಿ ಹಲಗಲಿಯ ಬೇಡರು ಬ್ರಿಟಿಷ್ ಸೇನೆಯೊಡನೆ ಕಾದಾಡಿದಾಗ ಅದರ ವಿಷಯವಾಗಿ ಹಾಡಲ್ಪಟ್ಟ ಲಾವಣಿಯನ್ನು ಕುರಿತು Dr. J. F. Fleet ಇವನು ದೀರ್ಘವಾದ ಲೇಖನವನ್ನು ಬರೆದಿದ್ದಾನೆ. ಆ ಹಾಡಿನ ಕೆಲವು ಗೆರೆಗಳು ಹೀಗೆ ಭಾಷಾಂತರವಾಗಿವೆ.—

" See now, hard times have come on those who carry arms ;
Even the heroes of Halagali, high-spirited men.
Though they are, failed to attain their ends."

ವೀರರಾದ ಬೇಡರ ಆಯುಧಗಳೆಲ್ಲವನ್ನೂ ಬ್ರಿಟಿಷರು ಸೆಳೆದುಕೊಂಡರೆಂಬುದನ್ನು ಹೇಳುತ್ತಾ, ಮುಂದುವರಿದು.—

" ಹೊತ್ತು ಬಂದಿತು ಮತ್ತನೋ ದಾರಿ ಕಟ್ಟ ಹಿಡುವ ಜನಕಾ
ಸಿಟ್ಟಿನ ಮಂದಿ ಬಂತಾರ ಹಲಗಲಿ ಮುಟ್ಟಲಿಲ್ಲ ದಕಾ

ವಿಲಾಯಿತಿಂದ ಹುಕುಮ ಕಳವಿದಾರ ಕುಂಪನಿ ಸರಕಾರ
ಎಲ್ಲಾ ಜನರನಾ ತರಿಸಿ ಜೋರಿಮಾಡಿ ತರಬೇರ ಹತಾರ "

"From Europe the Company's Government sent orders, "Call together all the people, and by force take away their weapons...." ಕತ್ತಿ, ಕಠಾರಿ, ಕೈ ಚೂರಿ, ಬಕಾತ ಪಿಸ್ತೂಲ, ಕರುಳಿ, ತೇಗ—the straight swords, daggers, hand-knives, crooked swords, pistols, short–broad swords, lances... ಎಂದಿತ್ಯಾದಿಯಾಗಿ ಇಡೀ ಪದ್ಯವನ್ನು ಇಂಗ್ಲಿಷ್ ಲಿಪಿಯಲ್ಲಿ ಬರೆದು ಅಂತೆಯೇ ಅದರ ಭಾಷಾಂತರವನ್ನೂ ಕೊಡಲಾಗಿದೆ.

"Then they (British) made a proclamation by beat of drums, to the effect that these orders had come. The brave soldiers, knew it, and weeping, with eyes full of tears...That fire brand Kerr (Lt. W. Alex. Karr) himsef gave orders to loot the village, and joyfully the soldiers fired, the bullets fell in showers like falling rain...... the grain and cattle were destroyed... burning Halagali ... they reduced it to ashes.... It was destroyed so as to disappear from sight."

೧೫. ಮತ್ತೊಂದು ಸ್ವಾರಸ್ಯವಾದ ಲಾವಣಿಯನ್ನೂ ಭಾಷಾಂತರಿಸಿದನು :—

Dr. J. F. Fleet ಇವನು ಬಿಜಾಪುರ ಮತ್ತು ಬೆಳಗಾವಿ ಜಿಲ್ಲೆಗಳಿಂದ ದೊರಕಿದ ಲಾವಣಿಗಳನ್ನು ಕುರಿತು ಪ್ರತ್ಯೇಕವಾಗಿ ಒಂದು ಲೇಖನವನ್ನು ಬರೆದಿದ್ದಾನೆ. ಇದು ಬ್ರಿಟಿಷ್ ಸರಕಾರವು ಜನರಿಂದ ಬಲಾತ್ಕಾರದಿಂದ ತೆರಿಗೆಯನ್ನು ವಸೂಲು ಮಾಡುತಿದ್ದುದನ್ನು ಕುರಿತು ವಿವರಿಸಿದೆ. ಜನರಿಗೆ ಇದರಿಂದ ಉಂಟಾದ ಕಷ್ಟ ನಷ್ಟಗಳನ್ನು ಈ ಹಾಡಿನಿಂದ ಇವರು ಪರಿಹರಿಸಿಕೊಂಡಂತೆ ತೋರುತ್ತದೆ. ಅದರ ಭಾವಾರ್ಥವು ಈ ರೀತಿಯಾಗಿ ಭಾಷಾಂತರವಾಗಿದೆ.—

"How shall I describe the distress of our lives? The oppression of the English has become very great; poor people are weeping, and their tears stream down their cheeks and are in great anxiety."

ಇಂತಿಷ್ಟು ಆ ಹಾಡಿನ ಪಲ್ಲವಿಯಾಗಿದೆ. ಜನರು ತಮ್ಮ ಕಷ್ಟವನ್ನು ಎಷ್ಟು ಹೇಳಿಕೊಂಡರೂ ಸರಕಾರೀ ನೌಕರರು ಕೇಳಲೊಲ್ಲರು : ಅಷ್ಟರಲ್ಲಿ.—

"There came the noble man, Mr. Gordon, who sat down and contrived a scheme—a devise for extracting money. Mr. Gordon put forward the pretense of saying, "I am going to put the roads and paths in good repair ; what

is your opinion ?........Listen !" Then they imposed a grievous tax ; it became difficult for poor people to fill their bellies ; they had to sell their spinning wheels ; the Government was greedy after money......".

ಇಂಥಾ ಹಲವು ವಿಚಾರಗಳನ್ನು ಲಾವಣಿಯಲ್ಲಿ ಉದ್ದಕ್ಕೂ ಪ್ರಸ್ತಾಪಿಸಲಾಗಿದೆ, ಮುಂದುವರಿಯುತ್ತಾ.—

"The Collector came.........and all the people went and besieged him as if the god Siva had come down upon the earth........"

ಆದರೆ ಮುಹ್ಮದೀಯರು ಮಾತ್ರ ಕರಕಂದಾಯವನ್ನೇನೂ ಸಲ್ಲಿಸದೆ ಅವರೆಲ್ಲರೂ ಒಟ್ಟು ಸೇರಿ.—

"Gather in the mosque... ....Where is the stick ? Search and bring it here Oh, Allaha, it is a year since we have eaten wheat and rice... ... What can we give....... ?".

" ಏನ ಹೇಳಲಿ ಜನ್ಮದ ಗೋಳ
ಇಂಗ್ರೇಜಿ ಉಪದ್ರಾದಿತ ಬಾಳ
ಬಡವರ ಅಳತಾರೋ ಗಳಗಳಾ
ಮದಾತಾರ ಚಿಂತೀ "

ಹೀಗೆ ಅವರು ಮೊರೆಯುತ್ತಿರುವಲ್ಲಿ.—

"Then came the noble gentleman, Mr. Elphinstone, very full of affection for poor people, he set himself down, and made enquiries........".

ಈ ರೀತಿ ಪಾಶ್ಚಾತ್ಯ ಸರಕಾರವು ನಡೆಸಿದ " ಉಪದ್ರಾದಿತ ಬಾಳ "ನ್ನು ಕುರಿತಾಗಿರುವ ಜನಪದ ಹಾಡುಗಳನ್ನು ಪಾಶ್ಚಾತ್ಯ ವಿದ್ವಾಂಸನೊರ್ವನಿಂದಲೇ ಸಂಗ್ರಹಿಸಿ ಸಂಪಾದಿಸಿ ಭಾಷಾಂತರಿಸಿ ಪ್ರಕಟಿಸಿದ್ದು ಇನ್ನಷ್ಟು ಮನಮೋಹಕವಾದ ವಿಚಾರವಾಗಿದೆ. ಇದು ಆ ಜನಾಂಗದ ಅತ್ಯುನ್ನತ ನೈತಿಕ ಪ್ರಭಾವಕ್ಕೆ ಒಂದು ನಿದರ್ಶನವಾಗಿದೆ. ಇತರ ಹಲವು ವಿದ್ವಾಂಸರು ಹಿಂದೂಸ್ಥಾನದ ಇತರ ಕಡೆಗಳಲ್ಲಿ ಪ್ರಚಾರವಿದ್ದ ಜನಪದ ಹಾಡುಗಳನ್ನು ಇದೇ ರೀತಿ ಭಾಷಾಂತರಿಸಿದ್ದಾರೆ.

1883 ರಿಂದ ಮೂರು ವರ್ಷಗಳ ಬೊಂಬಾಯಿಯಲ್ಲಿ ಶಿಲಾಶಾಸನ ಪರಿಶೋಧನಾಧಿಕಾರಿಯಾಗಿದ್ದ John Fleet ಇವನನ್ನು ರೆವಿನ್ಯೂ ಇಲಾಖೆಗೆ ವರ್ಗಾಯಿಸಿದನಂತರ ಪುನಃ 1889 ರಲ್ಲಿ ಅವನು ಕೇಂದ್ರ ಸರಕಾರದಲ್ಲಿ ಸಂಶೋಧನಾಧಿಕಾರಿಯಾಗಿ ನೇಮಿಸಲ್ಪಟ್ಟನು. ಈ ಅವಧಿಯಲ್ಲಿ Dr. E. Hultzsch ಇವನೊಡನೆ ಸೇರಿ ಮದ್ರಾಸು ಮತ್ತು ಮೈಸೂರು ರಾಜ್ಯಗಳ Epigraphia Carnatica ಗ್ರಂಥ ಸಂಪುಟಗಳ ಸಂಪಾದನಾ ಕಾರ್ಯದಲ್ಲಿ ಪ್ರಧಾನ ಪಾತ್ರವನ್ನು

ವಹಿಸಿದ್ದನು. ಅದರ ನಂತರ ಅವನು ಸಂಪಾದಿಸಿದ್ದ ಗ್ರಂಥಗಳ ಪೈಕಿ Dr. Buehler ಇವನ Indosche Palaeography ಇದು ಮುಖ್ಯವಾದುದಾಗಿದೆ. ದ್ರಾವಿಡ ಭಾಷಾ ಶಾಸನಗಳನ್ನು ಕುರಿತು ಪ್ರತಿಪಾದಿಸಲಾದ ಈ ಜರ್ಮನ್ ಹೊತ್ತಗೆಯನ್ನು "a scholarly treatise" ಎಂದು ಹೇಳಿದ್ದನು.

**೧೬. ಮದ್ರಾಸು ಸರಕಾರವು ಹೊರಡಿಸಿದ ಒಂದು ಉದ್ದಾಮ ಗ್ರಂಥ :—**

ಮೈಸೂರು ರಾಜ್ಯ ಸರಕಾರ ಮತ್ತು ಅದರಂತೆ ಇತರ ರಾಜ್ಯ ಸರಕಾರಗಳೂ ಗಜೆಟಿಯರುಗಳನ್ನು ಕಳೆದ ಶತಮಾನದಲ್ಲಿ ಪ್ರಕಟಿಸಿದಾಗ ಅವುಗಳನ್ನನುಸರಿಸಿ ಇನ್ನೂ ಕೆಲವು ಉಪಯೋಗಕರವಾದ ಗ್ರಂಥ ಸಂಪುಟಗಳನ್ನು ವಿವಿಧ ರಾಜ್ಯ ಸರಕಾರಗಳು ಪ್ರಕಟಿಸಿದುವು. ಹಾಗೆ ಬರೆಯಿಸಲಾದ Epigraphia Carnatica ಮತ್ತು Epigraphia Indica ಇವುಗಳು ಚಾರಿತ್ರಿಕ ವಿಚಾರ ಕೋಶಗಳಾಗಿ ವಿದ್ವಾಂಸರಿಗೆ ವಿಶೇಷ ಸಹಾಯಕವಾದುವು. ಅದೇ ರೀತಿ ಆಯಾ ಪ್ರಾಂತಗಳ ಭೌಗೋಲಿಕ, ರಾಜಕೀಯ, ಆರ್ಥಿಕ, ಸಾಹಿತ್ಯ ಇತ್ಯಾದಿ ವಿಷಯಗಳನ್ನೊಳಗೊಂಡ ಉದ್ದಾಮ ಗ್ರಂಥಗಳನ್ನೂ ಸರಕಾರಗಳು ವಿವಿಧ ಆಂಗ್ಲ ವಿದ್ವಾಂಸರಿಂದಲೇ ಬರೆಯಿಸಿದುವು. ಅಂಥಾ ಗ್ರಂಥಗಳ ಪೈಕಿ ಮದ್ರಾಸು ಸರಕಾರವು ಪ್ರಕಟಿಸಿದ Madras Manual ಎಂಬ ೨೮೦೦ foolscap ಪುಟಗಳ ಮೂರು ಕಾಂಡಗಳಿಂದ ಕೂಡಿದ ಗ್ರಂಥದಲ್ಲಿ ಇಡೀ ದಕ್ಷಿಣ ಹಿಂದೂಸ್ಥಾನದ ಸಮಗ್ರ ವಿಷಯವನ್ನೂ ವಿವಿಧ ಭಾಷೆಗಳಲ್ಲಿ ಪ್ರಸ್ತಾಪಿಸಿ ವಿವರಿಸಲಾಗಿದೆ. ಅದರ ಮೂರನೇ ಕಾಂಡವು 1180 foolscap ಪುಟಗಳಷ್ಟು ದೊಡ್ಡದಿದ್ದು ಕನ್ನಡ ನಾಡಿನ ಮತ್ತು ಕನ್ನಡ ಭಾಷೆಯನ್ನು ಕುರಿತು ಹಲವು ವಿಷಯಗಳನ್ನು ಹೇಳಲಾಗಿದೆ. ಈ ಗ್ರಂಥಕಾಂಡದ ಉದ್ದೇಶವೇನೆಂಬುದಾಗಿ ಈ ರೀತಿ ಅದರಲ್ಲಿ ಹೇಳಿದೆ :—

"The first object of this volume is to establish the necessary connection between the English and the vernacular languages in matters where this can be suitably done by a publication made with Government resources. In considering that connection, it will be found that there are always three difficulties present; uncertain geography, imperfect correllation between the languages and multiplicity of synonyms even after correllation is established. It is the object of this volume to supply a definition in each of these cases of ambiguity.........Etymologies of all the principal Anglo-Indian and vernacular terms will be found in this work...... The second object of this volume is in conjunction with the glossary titles to bring forward such general information on the different heads as either is avilable from indigenous and local sources alone.........."

ಹೀಗೆ ಇದು ದಕ್ಷಿಣ ಹಿಂದೂಸ್ಥಾನದ ಭಾಷಾ ಪದಗಳ Grand glossary ಎಂದು ಹೇಳಬಹುದಾಗಿದೆ. ಅಷ್ಟೇ ಅಲ್ಲ, ಅದೇ ಪ್ರಮಾಣದಲ್ಲಿ ಪ್ರತಿಯೊಂದು ಪ್ರಾಂತದ ಮತ್ತು ಜಿಲ್ಲೆಯ ಚರಿತ್ರೆ, ಭೂ ವಿವರಣೆ, ಜನಜೀವನ, ಕಲೆ, ಕೈಗಾರಿಕೆ, ವ್ಯವಸಾಯ ಇತ್ಯಾದಿಗಳ ಬಗ್ಗೆಗೂ ಬಹು ಶ್ರಮವಹಿಸಿ ವಿಚಾರಗಳನ್ನು ಸಂಗ್ರಹಿಸಿ ಅದೊಂದು ಬಗೆಯ Encyclopaedia ಅಥವಾ ಬೃಹದರ್ಥಕೋಶದ ರೂಪವನ್ನು ಹೊಂದಿದೆ.

**೧೭. ಅರ್ಥಕೋಶ ಮತ್ತೆ ವಸ್ತುಕೋಶ–ಶಬ್ದಗಳ ವಿವರಣೆಗಳು :—**

ಅದೊಂದು ಬಗೆಯ ಉದ್ಧಾಮ ಅರ್ಥಕೋಶ ಮತ್ತು ವಸ್ತುಕೋಶವೆಂದೆನ್ನ ಬಹುದಾದ ಈ Madras Manual ಇದರಿಂದ ಅಂದಿನ ಸಂಪಾದಕ ವರ್ಗದವ ರಾದ ಆಂಗ್ಲ ಭಾಷಾತಜ್ಞರು ವಿಷಯಗಳನ್ನು ನಿರೂಪಿಸಿದ ಕ್ರಮವು ಎಂತೆಂದು ತಿಳು ಹಿಸಲಿಕ್ಕೋಸ್ಕರವಾಗಿ ಈ ಭಾಗವನ್ನು ಅದರಿಂದೆತ್ತಿ ಉದಾಹರಿಸಲಾಗಿದೆ :—

Jackal–ಶೃಗಾಲ ;–ಹೀಗೆ ಅರ್ಥವನ್ನು ಕೊಟ್ಟು ಈ 'ಶೃಗಾಲ'ವನ್ನು ಇಂಗ್ಲಿಷ್‌ನಲ್ಲಿೂ ತಮಿಳಿನಲ್ಲೂ ವಿವರಿಸಿದೆ. ಹಲವು ಶಬ್ದಗಳು ತೆಲುಗು, ಕನ್ನಡ, ಮಲೆಯಾಳ ಹೀಗೆ ಇತರ ಭಾಷೆಗಳಿಗೂ ಅನ್ವಯಿಸುವುದಾದರೆ ಮತ್ತು ಅದರಂತೆ ಹಲವು ಸ್ಥಳಗಳ ಹೆಸರುಗಳು ಇತರ ಭಾಷಾ ಪ್ರಾಂತಗಳಿಗೆ ಒಳಪಡುವುದಾದರೆ, ಅಂಥಾ ಸಂದರ್ಭಗಳಲ್ಲಿ ಆಯಾ ಪ್ರಾಂತೀಯ ಭಾಷೆಗಳಲ್ಲಿಯೇ ವಿವರಿಸಿದ್ದಾರೆ.

'ಕುಮಾರಧಾರಾ'–name of a river–ಕುಮಾರ–god of war, ಹೀಗೆ ಹೇಳಿ ಆ ಹೊಳೆಗೆ ಆ ಹೆಸರು ಹೇಗೆ ಅನ್ವಯಿಸಿತೆಂಬುದನ್ನು ಕನ್ನಡದಲ್ಲೂ ಇಂಗ್ಲಿಷ್‌ನಲ್ಲೂ ವಿವರಿಸಿದ್ದಾರೆ. ಆ ಹೊಳೆಯ ಉಗಮಸ್ಥಾನದ ಸಮೀಪದಲ್ಲಿರುವ ಸುಬ್ರಹ್ಮಣ್ಯ ದೇವಾಲಯದ ವಿಷಯವಾಗಿಯೂ ಹೇಳಿದ್ದಾರೆ.

'ಮೈಸೂರು'–ಮಹಿಷ ಊರು ; ಹೀಗಂದು ಅನಂತರ ಆ ಸ್ಥಳಕ್ಕೆ ಆ ಹೆಸರು ಹೇಗೆ ಉಂಟಾಯಿತೆಂಬುದನ್ನು ಇಂಗ್ಲಿಷ್, ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ವಿವರಿಸಿದ್ದಾರೆ. ಒಮ್ಮೊಮ್ಮೆ ಒಂದೊಂದು ಇತಿಹಾಸ ಪ್ರಧಾನವಾದ ಸ್ಥಳಗಳ ಮತ್ತು ಜಿಲ್ಲೆಗಳ ವಿಷಯವಾಗಿ ಹೇಳುವಾಗ ವಿವರಣೆಯು ಬಹು ದೀರ್ಘವಾಗಿದ್ದು ಎಲ್ಲಾ ವಿಚಾರಗಳನ್ನು ಆಧಾರ ಸಮೇತವಾಗಿ ಪ್ರಸ್ತಾಪಿಸಿದ್ದಾರೆ.

'ಭಗ'–Bhagam–fortune–ಭಗವಂತ ; ಹೀಗೆ ಅರ್ಥವನ್ನು ಕೊಡ ಲಾಗಿದೆ. ಭಗವದ್ಗೀತೆಯ ಪ್ರಧಾನಾಂಶವೇನೆಂಬುದನ್ನು ಈ ಕೆಳಗಿನಂತೆ ಹೇಳಿದೆ. ಇಲ್ಲಿ ತೋರುವ ಕನ್ನಡವು ಸುಮಾರು ತೊಂಭತ್ತು ವರ್ಷಗಳ ಹಿಂದಿನ ಪಾಶ್ಚಾತ್ಯ ವಿದ್ವಾಂಸರು ಬರೆದುದೆಂದು ನೆನಪಿಡಬೇಕಾಗಿದೆ. ಅವರ ಈ ಬಹುಭಾಷಾ ಬರವಣಿ ಗೆಯ ರೀತಿಯಿಂದ ಅವರು ಅಂದು ದೇಶೀಯ ಭಾಷಾ ಬೆಳವಣಿಗೆಯೊಡನೆ ರಾಷ್ಟ್ರೀಯ ಸಂಘಟನೆಯನ್ನೂ ಸಾಧಿಸಿದರೆಂದು ಹೇಳಬಹುದಾಗಿದೆ. ಗೀತೆಯ ಬಗ್ಗೆ ಅವರು ಹೀಗೆ ಹೇಳಿದರು :—

" ಯೆಲಾ ಕರ್ಮಗಳನ್ನು ಮನಸ್ಸಿನಿಂದ ಬಿಟ್ಟಂಥಾವನಾಗಿ ತಾನು

ಮಾಡಿಸದೇ ವೊಂಬತ್ತು ಬಾಗಿಲುಗಳುಳ್ಳ ಈ ಶರೀರವೆಂಬ ಪಟ್ಟಣದಲ್ಲಿ ಜೀವನು ಇಂದ್ರಿಯಂಗಳನ್ನು ಸ್ವಾಧೀನಮಾಡಿಕೊಂಡು ಸುಖವಾಗಿ ಇರುವನು. ಸಮರ್ಥನಾದ ದೇವರು ಲೋಕಕ್ಕೆ ಕರ್ತತ್ವವನ್ನು ಕರ್ಮಗಳನ್ನು ಕರ್ಮದ ಫಲದಿಂದ ಕೊಡುವಿಕೆಯನ್ನು ವುಂಟುಮಾಡುವುದೆಲ್ಲವು ಸ್ವಭಾವಿಕವಾಗಿಯೇ ಪ್ರವರ್ತಿಸುವದು. ಅರಸಾದ ದೇವರು ಪುಣ್ಯಪಾಪಗಳಿಂದ ಬರುವ ಸುಖದುಖ್ಖಗಳನ್ನು ಹೊಂದುವದಿಲ್ಲ. ಆದರೆ ಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿದೆ. ಆದರಿಂದ ಈ ಜೀವ ಜಂತುಗಳು ತಪ್ಪಿ ನಡಿಯುತ್ತವೆ. ಯಾರಿಗೆ ಅಂಥಾ ಅಜ್ಞಾನವು ಜ್ಞಾನದಿಂದ ನಾಶವಾಗಿ ಹೋಗುವುದೋ ಅವರಿಗೆ ಸೂರ್ಯನ ಹಾಗೆ ಆತ್ಮ ಜ್ಞಾನವು ಆ ಮೇಲೆ ಪ್ರಕಾಶಿಸುವದು. ಆ ಭಗವಂತನಲ್ಲಿಯೇ ಬುದ್ಧಿಯು ನೆಲೆಗೊಂಡಿರುವವರು ಮತ್ತು ಆತನಲ್ಲಿ ನಂಬಿಕೆಯುಂಟಾದವರು ಜ್ಞಾನದಿಂದ ತೊಳೆಯಲ್ಪಟ್ಟ ಪಾಪಗಳುಳ್ಳವರಾಗಿ ಯೆಂದೆಂದಿಂಗೂ ತಿರುಗದ ಸ್ಥಳವನ್ನು ಸೇರುವರು....".

## ೧೮. ಕನ್ನಡವೇ ದಖ್ಖಣದ ಭಾಷೆಗಳಲ್ಲಿ ಪ್ರಾಚೀನವಾದುದೆಂದು ಹೇಳಿದರು :—

ಕನ್ನಡ ನಾಡು ಮತ್ತು ನುಡಿಗಳ ಪ್ರಾಚೀನತೆಯನ್ನು ಶೋಧಿಸಲು ಇಳಿದ ಪಾಶ್ಚಾತ್ಯ ವಿದ್ವಾಂಸರು ಒಬ್ಬಿಬ್ಬರಲ್ಲ; ಇಡೀ ಭಾರತದ ಐತಿಹಾಸಿಕ ಅಪಾರತೆಯನ್ನು ಕಂಡುಹಿಡಿಯಲು ಅವರು ಕ್ರಿ.ಶ. 1780 ರಿಂದಲೇ ಪ್ರಾರಂಭಿಸಿದ್ದರೆಂದು ಹಿಂದೆಯೇ ಹಲವು ಪುಟಗಳಲ್ಲಿ ಹೇಳಲಾಗಿದೆ. ಹಾಗೆ ಅವರು ಅನ್ವೇಷಿಸಿದ ವೇಳೆಗೆ ಕರ್ಣಾಟಕದ ವಿಚಾರವಾಗಿಯೂ ನೂರಾರು ಪ್ರಾಚೀನ ಐತಿಹ್ಯಗಳೂ ಅವರಿಗೆ ದೊರೆತುವು. Col. Mackenzie, Dr. F. Buchanan, Rev. Dawson, J. Prinsep, Alex. Cunningham ಮೊದಲಾದವರು ಅಂದಿನ Asiatic Journal ಪತ್ರಿಕೆಯಲ್ಲಿ ಬರೆದ ಹಲವು ಲೇಖನಗಳಲ್ಲಿ ಕನ್ನಡ ನಾಡಿನ ಮತ್ತು ನುಡಿಯ ಐತಿಹ್ಯವೇನೆಂದೂ ಪ್ರಸ್ತಾಪಿಸಿದ್ದಾರೆ. ಉದಾಹರಣೆ 'ಕೊಂಗ, ಕೊಂಗು, ಕೋಮು' ಇತ್ಯಾದಿ ಪದಗಳು Mackenzie Collections ಎಂಬ ಅಪಾರ ಚಾರಿತ್ರಿಕ ವರದಿಗಳಲ್ಲಿ ಪ್ರಸ್ತಾಪಿಸಲ್ಪಡಲಾಗಿವೆ. ಕ್ರಿಸ್ತಪೂರ್ವ ಯುಗದ ವ್ಯಕ್ತಿಗಳು ದಖ್ಖಣದಲ್ಲಿ ಬೆಳೆಸಿದ್ದ ಸಂಪರ್ಕವನ್ನೂ ಪಾಶ್ಚಾತ್ಯರೇ ಮೊದಲ ಬಾರಿಗೆ ತಿಳಿಸಿದರು. ಅನಂತರ ಕ್ರಿಸ್ತಪೂರ್ವ ಕಾಲದ ಹಳೆಗನ್ನಡ ಮತ್ತು ಪಾಲೀ ಶಾಸನಗಳನ್ನೂ ಅಶೋಕ, ಚಂದ್ರಗುಪ್ತ, ಬಾಹುಬಲಿ ಮೊದಲಾದವರಿಗೆ ಸಂಬಂಧಿಸಿದ ಅಂದಿನ ಬರೆವಣಿಗೆಗಳನ್ನೆಲ್ಲಾ ಅವರೇ ಬೆಳಕಿಗೆ ತಂದರು.

ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಾಂತಾವಾರು ಐತಿಹಾಸಿಕ ಸಂಶೋಧನೆಯನ್ನು ಸುಮಾರು 1865 ರಿಂದ ನಡೆಸಿದಾಗ George Pope, Arthur Burnell, Edward Hultzsch; John Fleet ಈ ಮೊದಲಾದ ಸಂಶೋಧಕರಿಗೆ ಇನ್ನೂ ಹಲವು ಹೊಸ ವಿಷಯಗಳು ತಿಳಿದುಬಂದುವು. ಅವೆಲ್ಲವನ್ನೂ ಅವರು ಮತ್ತು

Prof. Weber, Prof. Kielhorn, Dr. Burgess, Rev. Rice ಮೊದಲಾದವರು ಆಗಿಂದಾಗ್ಗೆ ತಮ್ಮ ಲೇಖನಗಳಲ್ಲಿ ಸ್ಪಷ್ಟಪಡಿಸಿದ್ದಾರೆ.

ದಕ್ಷಿಣ ಹಿಂದೂಸ್ಥಾನದ ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ ಹಿರಿದಾದುದು ಅಥವಾ ಪುರಾತನವಾದುದು ಯಾವುದು ಎಂದು ಅವರಾರು ಚರ್ಚಿಸುವ ತೊಂದರೆಯನ್ನು ತೆಗೆದುಕೊಳ್ಳಲಿಲ್ಲ. Pope, Caldwell, Hultzsch, Sewell ಹೀಗೆ ಕೆಲವರು ತಮಿಳು ಪಕ್ಷಪಾತಿಗಳು; ಆದರೂ ಅವರು ತಮಿಳೇ ಪುರಾತನವಾದುದೆಂದು ಹೇಳಿದ್ದು ತೋರುವುದಿಲ್ಲ. ಇಂದಿನ ತಮಿಳರು ತಮ್ಮ ಸ್ವಯಂ ಪ್ರತಿಷ್ಠೆಗೆ ಏನು ಹೇಳಿಕೊಂಡರೂ ಪುರಾತನ ತಮಿಳು ಶಾಸನಗಳ ಜತೆಯಲ್ಲಿಯೇ ಹಲವು ಕನ್ನಡ ಶಾಸನಗಳು ದೊರಕಿವೆ. ಕನ್ನಡವು 'ಕಾವೇರಿಯಿಂದ ಗೋದಾವರಿ ವರೆಗೆ' ಮಾತ್ರವಲ್ಲ, ನರ್ಮದೆಯವರೆಗೂ ತನ್ನ ಪ್ರಭಾವವನ್ನು ಬೀರಿದೆ. ಕಳೆದ ಶತಮಾನದ ಪ್ರಾರಂಭದ ವರೆಗೂ ಮಧುರೆಯಿಂದ ಉತ್ತರಕ್ಕೆ ಕನ್ನಡ ನಾಡಿನ ಮೇರೆಯನ್ನು ಮೀರಿ ಬೊಂಬಾಯಿ ಮತ್ತುಅದರ ಆಚೆಗೂ ಕನ್ನಡದ ಪ್ರತಿಷ್ಠೆ ಹಬ್ಬಿತ್ತೆಂದು ಐತಿಹಾಸಿಕವಾಗಿ ನಿಜವಾದ ವಿಚಾರವಾಗಿದೆ. ಪಶ್ಚಿಮ ಭಾರತದ ಎಲಿಫೆಂಟಾ, ಎಲ್ಲೋರ, ಕೈಲಾಸ, ಇತ್ಯಾದಿ ಕಟ್ಟೋಣಗಳಲ್ಲೆಲ್ಲಾ ಕನ್ನಡದ ಕುರುಹುಗಳು ಅಂತೇ ತೋರಿವೆ. ಬೊಂಬಾಯಿಯಲ್ಲಿ ಇತ್ತೀಚೆಗಿನ ವರೆಗೂ ಕನ್ನಡವು ಪ್ರಧಾನ ಭಾಷೆಯಾಗಿತ್ತು.

'ಹಳೆಗನ್ನಡ, ಪಾಲೀ ಮತ್ತು ಸಂಸ್ಕೃತ' ಶಾಸನಗಳ ಮೇಲೆ ಸುಮಾರು 1500 folio ಪುಟಗಳಷ್ಟು ಬರೆದ John Fleet ಇವನು ಈ ವಿಷಯವಾಗಿ ಬಹು ವಿಷದವಾಗಿ ಪ್ರಸ್ತಾಪಿಸಿದ್ದಾನೆ. ಕರ್ಣಾಟಕ ಕವಿಚರಿತ್ರೆಯ ಮೇಲೆ ವಿಮರ್ಶೆಯನ್ನು ಬರೆಯುತ್ತಾ ಅವನು ಈ ರೀತಿ ಹೇಳಿದನು.—

> "That the Kannada language was cultivated from a decidedly early date, is shown by the fact that it is found in a short inscription, outside the Vaishnava Cave at Badami......of the time of Chalukya king Mangalesha-597-608 A. D. *Kannada is in fact, the earliest vernacular of South India, apart form Prakrit,* that is met with in the inscriptional records. Its literary history, however, has not been traced back so far; the earliest recovered work is a treatise on poetics, entitled 'Kaviraja Marga'....That work, is indeed, mentions previous writers-Vimala, Udaya, Nagarjuna, Jayabandhu, Durvanita and Srivijaya ".

**೧೯. ಭಾಷಾಶಾಸ್ತ್ರದಲ್ಲಿ ವಿಶೇಷ ಪಾಂಡಿತ್ಯವನ್ನು ಪ್ರದರ್ಶಿಸಿದರು :—**

ಪಾಶ್ಚಾತ್ಯ ವಿದ್ವಾಂಸರು ಭಾಷಾಶಾಸ್ತ್ರದ ಕಡೆಗೆ ಗಮನವಿಟ್ಟಷ್ಟು ಬೇರಾವುದರ ಕಡೆಗೂ ಇಡಲಿಲ್ಲವೆಂಬುದು ನಿಸ್ಸಂದೇಹವಾದ ವಿಷಯವಾಗಿದೆ. ಭಾಷಾಶಾಸ್ತ್ರ (Philology) ಅವರ ಸಾಹಿತ್ಯ ವ್ಯಾಸಂಗದಲ್ಲಿ ಪ್ರಧಾನವಾದ ಅಂಶವಾಗಿದೆ.

ಯುರೋಪು ಖಂಡದ ನೂರಾರು ಭಾಷೆಗಳ ಸಹಸ್ರಾರು ಭಾಷಾಶಾಸ್ತ್ರ ಗ್ರಂಥಗಳನ್ನು ಅವರು ಅಂದೇ ರಚಿಸಿದ್ದಾರೆ. ನಿಜಕ್ಕೂ ಅದೊಂದು ಸ್ವಾರಸ್ಯವಾದ ವಿಚಾರವಾಗಿದೆ. ಉದಾಹರಣೆಗೆ ಅವರು ವಿವಿಧ ಭಾಷಾಶಬ್ದಗಳನ್ನು ತುಲನಾತ್ಮಕವಾಗಿ ಹೇಗೆ ಅಭ್ಯಸಿಸುತ್ತಾರೆ ಎಂಬುದಕ್ಕೆ ಈ ಕೆಳಗಿನ ಪದಗಳನ್ನು ಹೀಗೆ ಕೊಡಲಾಗಿದೆ:—

| *English* | *Sanskrit* | *Latin* | *German* |
|---|---|---|---|
| Mother | Maataa | Mater | Mutter |
| Father | Pitaa | Pater | Vater |
| Daughter | Duhitaa | Filia | Tochter |
| Is | Asti | Est | Ist |
| Eight | Ashta | Octo | Acht. |

ಕ್ರಿ. ಶ. 1770 ರಿಂದ ಮೊದಲ್ಗೊಂಡು ಮತ್ತು ಅದಕ್ಕೂ ಹಿಂದೆ ಭಾರತೀಯ ಭಾಷೆಗಳಲ್ಲಿ ನಿಘಂಟುಗಳನ್ನೂ ವ್ಯಾಕರಣಗಳನ್ನೂ ಭಾಷಾಂತರಗಳನ್ನೂ ಬರೆಯಲಾರಂಭಿಸಿದ ಪಾಶ್ಚಾತ್ಯರು ಭಾಷಾಶಾಸ್ತ್ರದಲ್ಲಿ ನಿಷ್ಣಾತರೆನಿಸಿದ್ದರು. ಅಂದಿನ ಪ್ರತಿಯೊರ್ವ ವಿದ್ವಾಂಸನೂ ಭಾರತದ ಮತ್ತು ಏಷ್ಯಾಖಂಡದ ಹಲಕೆಲವು ಭಾಷೆಗಳಲ್ಲಿ ಪ್ರೌಢ ಜ್ಞಾನವನ್ನು ಗಳಿಸಿಯೇ ಇದ್ದನು. Halhed, Wilkins, Jones, Colebrooke, Wilson ಇವರೆಲ್ಲರೂ ಹತ್ತಿಪ್ಪತ್ತು ಭಾಷೆಗಳಲ್ಲಿ ಪಂಡಿತರು. Jones ಇವನಿಗೆ ೨೨ ಭಾಷೆಗಳು, Carey ಇವನಿಗೆ 33, Hodgson ಇವನಿಗೆ 45 Robert Leech ಇವನಿಗೆ ೨೪, Elliott ಇವನಿಗೆ ೨೮, Buchanan ೬೧, Caldwell 38, Beames 30, ಮತ್ತು Buehler ೨೨ ಭಾಷೆಗಳಲ್ಲಿ ಪರಿಣತಿಯನ್ನು ಸಂಪಾದಿಸಿದ್ದರು. ತಾವು ಕೈಗೊಂಡ ಯಾವುದೇ ಗ್ರಂಥರಚನೆಗೆ, ಸಂಶೋಧನೆಗೆ ಮತ್ತು ಐತಿಹಾಸಿಕ ಅನ್ವೇಷಣೆಗೆ ಮತ್ತು ವ್ಯಾಕರಣ ನಿಘಂಟುಗಳ ರಚನೆಗೆ ಈ ಎಲ್ಲಾ ವಿದ್ವಾಂಸರು ತಮ್ಮ ಭಾಷಾಶಾಸ್ತ್ರ ಜ್ಞಾನದ ಮುದ್ರೆಯನ್ನೊತ್ತಿದ್ದರು. ಅಂತೆಯೇ ಉದ್ದಾಮ ಕೃತಿಗಳನ್ನು ರಚಿಸಿದರು. ಭಾಷಾಶಾಸ್ತ್ರ ಗ್ರಂಥಗಳನ್ನು ಬರೆದ Hodgson, Carey, Leech, Caldwell, Beames ಮತ್ತು Grierson ಇವರು ಏಷ್ಯಾ ಮತ್ತು ಯೂರೋಪು ಖಂಡದ ಹಲವು ಭಾಷೆಗಳಲ್ಲಿ ತಜ್ಞರೆಂದೆನಿಸಿದ್ದರು. ತಮ್ಮ ಪರಿಶೋಧನೆಗೆ ಭಾಷಾಜ್ಞಾನವನ್ನು ಆವರು ಹೇಗೆ ಉಪಯೋಗಿಸಿದ್ದರೆಂಬುದಕ್ಕೆ ಕನ್ನಡ ಮತ್ತು ತೆಲುಗು ಪ್ರಾಚೀನ ಲಿಪಿಗಳ ಮೇಲೆ Johann G Buehler ಇವನು ಹೇಳಿದ ಕ್ರಮವನ್ನು ಇಲ್ಲಿ ಉದಾಹರಿಸಲಾಗಿದೆ:—

"The Kannada and Telugu alphabets-the archaic variety up to 950 A.D. (as seen in inscriptions). From 950 A. D. the middle variety. The third variety which Burnell calls Transitional, and this is the last where he says that old Kannada does not differ much from the modern Kannada

and Telugu scripts. The Anusvara must be a later innovation intended to make the lines more equal...

ಅರ್ಥಕೋಶ ಮತ್ತು ವ್ಯಾಕರಣ ಗ್ರಂಥಗಳನ್ನು ಬೃಹತ್ಪ್ರಮಾಣದಲ್ಲಿ ಬರೆದು ತಮ್ಮ ಹೆಸರನ್ನು ಅಜರಾಮರವಾಗಿರಿಸಿದ ಈ ವಿದ್ವಾಂಸರು ಭಾಷಾ ಶಾಸ್ತ್ರವನ್ನು ಕರತಲಾ ಮಲಕವಾಗಿರಿಸಿಕೊಂಡಿದ್ದರು. Prof. Hultzsch ಇವನು Rev. F. Kittel ಇವನ ಕನ್ನಡ ವ್ಯಾಕರಣ ಗ್ರಂಥವನ್ನು ವಿಮರ್ಶಿಸುತ್ತಾ ಅವನು ಅನುಸರಿಸಿದ ಕ್ರಮ ವೆಂತೆಂಬುದನ್ನು ಹೀಗೆ ಹೇಳುತ್ತಾನೆ :—

"Dr. Kittel has not only arranged and explained Kesava's rules but supplemented them with the help of existing literature in old Kannada and of epigraphical records of the same language ..... Following the footsteps of Dr. Caldwell, he tries to ascertain the pre-historic growth of roots and inflexional forms by subjecting them to an analytical treatment............"

೨೦. ತಾಯ್ನುಡಿಗಳ ಮೇಲ್ಮೆಯನ್ನು ಪಾಶ್ಚಾತ್ಯರು ಜನಕ್ಕೆ ತಿಳಿಸಿದರು :—

"The extent and range of this body of writings will doubtless excite surprise, so virtually unexplored has the field and so little acquaintance is there with the resources of the language........But interest is even now awakening in the mother-tongue of the Kannadigas........"

ಎಂಬುದಾಗಿ Benjamin L. Rice ಇವನು ಕಳೆದ ಶತಮಾನದಲ್ಲಿ ಬೆಳಕಿಗೆ ಬಂದ ಕನ್ನಡ ಸಾಹಿತ್ಯದ ಆಧಿಕ್ಯವನ್ನು ಕುರಿತು ಬೆರಗಾಂತು ಹೇಳಿದನು. ಆದರೆ ಅವನು ಹೇಳಿದ ಈ ಮಾತು ಕನ್ನಡ ಸಾಹಿತ್ಯಕ್ಕೆ ಹೇಗೋ ಹಾಗೆಯೇ ಹಿಂದೂಸ್ಥಾನದ ಎಲ್ಲಾ ಭಾಷಾ ಸಾಹಿತ್ಯಕ್ಕೂ ಸಂಬಂಧಿಸಿದೆ. ಯಾವುದೋ ಒಂದು ಕಾಲವಲ್ಲಿ ಸಂಪತ್ಸಮೃದ್ಧಿಯಿಂದ ಮತ್ತು ಸಾಂಸ್ಕೃತಿಕ ವೈಭವದಿಂದ ತುಂಬಿ ತುಳುಕುತಿದ್ದ ಈ ದೇಶವನ್ನು ಏನು ಎಂತು ಎಂಬುದಾಗಿ ಅನ್ವೇಷಿಸಿ ತಿಳಿಸಲು ಈ ಪಾಶ್ಚಾತ್ಯರು ಕಳೆದ ಒಂದೆರಡು ಶತಮಾನಗಳಲ್ಲಿ ಯಾತ್ರಾರ್ಥಿಗಳಾಗಿ ಇಲ್ಲಿಗೆ ಬಂದರೆಂದು ಅನಿಸುತ್ತದೆ. ಅವರ ಪೈಕಿ ರಾಜಕಾರಿಣಿಗಳೂ, ಸೇನಾನಿಗಳೂ, ವ್ಯಾಪಾರಿಗಳೂ, ಕ್ರೈಸ್ತಗುರುಗಳೂ ಒಟ್ಟಾಗಿ ಸೇರಿ ತಮ್ಮೊಳಗಿನ ಜನಭೇದ. ಜನಾಂಗ ಭೇದಗಳಾಗುವುದನ್ನೂ ಎಣಿಸದೆ ಅವರು ಇಂಥಾ ಒಂದು ಸಾಹಸವನ್ನು ನಿಷ್ಠೆಯಿಂದ ಕೈಗೊಂಡರು. ಅವರ ಉತ್ಸಾಹ ಸಾಹಸ ಮತ್ತು ಸೇವಾಗುಣಗಳಿಗೆ ಬ್ರಿಟಿಷ್ ಸರಕಾರವು ಅಷ್ಟೇ ಉತ್ಸಾಹದಿಂದ ಪ್ರೋತ್ಸಾಹಿಸಿದ್ದು ಇನ್ನಷ್ಟು ಆಶಾದಾಯಕವಾದ ವಿಚಾರವಾಗಿದೆ. ವ್ಯಾಪಾರ ಮತ್ತು ಅಧಿಕಾರಕ್ಕಾಗಿ ಪೋರ್ಚುಗೀಸರು, ಫ್ರೆಂಚರು ಮತ್ತು ಬ್ರಿಟಿಷರು ಇಲ್ಲಿ ಕಾದಾಡುತ್ತಾ ಇದ್ದರಾದರೂ ಸಾಹಿತ್ಯ ಮತ್ತು ಸಮಾಜಸೇವಾ ಕ್ಷೇತ್ರಗಳಲ್ಲಿ ಅವರು ಒಂದಾಗಿ

ದುಡಿಮುದು ಸ್ತುತ್ಯಾರ್ಹವಾದ ವಿಷಯವಾಗಿದೆ.

ಪಾಶ್ಚಾತ್ಯರು ತಮ್ಮ ರಾಜ್ಯಾಡಳಿತೆ ಸೌಕರ್ಯಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಈ ದೇಶದಲ್ಲಿ ಸಂಪರ್ಕ ಭಾಷೆಯನ್ನಾಗಿ ಇಟ್ಟು ವಿವಿಧ ಭಾಷಾ ಕ್ಷೇತ್ರಗಳನ್ನು ಮತ್ತು ಪ್ರಾಂತಗಳನ್ನು ಒಂದೇ ಆಡಳಿತದಡಿಯಲ್ಲಿ ಇಟ್ಟರಾದರೂ ಸ್ವಭಾಷೆ ಮತ್ತು ತಾಯ್ನುಡಿ ಯೆಂಬುದು ಎಷ್ಟು ಮಹತ್ವವಾದುದೆಂದು ಅವರಿಗೆ ತಿಳಿದೇ ತಿಳಿದಿತ್ತು. ಆ ಕಾರಣ ದಿಂದಲೇ ಅವರು ಈ ದೇಶದ ಎಲ್ಲಾ ಭಾಷೆಗಳನ್ನು ಅನ್ವೇಷಿಸಿ ಜನರಿಗೆ ಅದರ ಪರಿ ಚಯ ಮಾಡಿಸುವ ಸಲುವಾಗಿ ನಿರಂತರ ದುಡಿದರು. Lord Curzon ಇವನು ದೇಶೀಯ ಭಾಷೆಗಳ ಪ್ರಾಶಸ್ತ್ಯವನ್ನು ಕುರಿತು ಇಂತು ಹೇಳಿದ್ದನು :—

> "The vernaculars are the living languages of this great continent. English is the vehicle of learning and advancement to the small minority, but, for the vast bulk, it is a foreign tongue which they do not speak and rarely hear."

ಇದು ಸತ್ಯವಾದ ಮಾತಾಗಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ಮತ್ತು ಹತ್ತಾರು ಪ್ರಾಂತ ಭಾಷೆಗಳಿರುವ ಈ ದೇಶದಲ್ಲಿ "Vehicle of learning and advancement" ಆಗಿರುವ ಇಂಗ್ಲಿಷನ್ನೇ ಸಂಪರ್ಕ ಭಾಷೆಯಾಗಿ ಮುಂದುವರಿಸಿ, ಅದೇ ಅಭಿವೃದ್ಧಿಯ ಪ್ರಗತಿಯು "to the small minority" ಇವರಿಗೆ ಮಾತ್ರ ಅಲ್ಲ, ಇಡೀ ದೇಶಕ್ಕೆ ಲಭಿಸುವ ಹಾಗೆ ನಮ್ಮ ದೇಶದ ಜನರು ಸಾಧಿಸಿದ್ದಾದರೆ ದೇಶಕ್ಕೆ ಎಷ್ಟೋ ಹಿತವಾದೀತು ಎಂಬುದಾಗಿ ಹಲವರು ಆಲೋಚಿಸಿದರೆ ಅದು ಅಹಿತ ವೆಂಬುದಾಗಿ ಪರಿಗಣಿಸಲಾರರೆಂದು ಭಾವಿಸಲಾಗಿದೆ.

ದೇಶೀಯ ಭಾಷೆಗಳ ಪ್ರಗತಿಗಾಗಿ ದುಡಿದ ಅಂದಿನ ಪಾಶ್ಚಾತ್ಯರು ಹಿಂದೆ ಹೇಳಿ ದಂತೆ ಆದೊಂದು ಸೇವಾಭಾವದಿಂದ ಮತ್ತು ಪ್ರೀತಿಯಿಂದ ಆ ಕೆಲಸವನ್ನು ಸಾಧಿಸಿ ದರು. ಹಾಗಾಗಿ ಅವರು ಆಯಾ ಭಾಷೆಗಳನ್ನು ಬಹು ಉತ್ಕೃಷ್ಟವಾದುದೆಂದು ಸಾರಿವರು ಕನ್ನಡದಲ್ಲಿ ಬಹು ಮುಖವಾಗಿ ದುಡಿದ ಮತ್ತು ನಾಡಿಗಾಗಿ ದಣಿದ Benjamin Rice ಇವನಿಗೆ ಈ ಭಾಷೆಯು "a sonorous and expressive language" ಎಂಬುದಾಗಿ ತೋರಿಬಂದಂತೆ ಇತರ ವಿದ್ವಾಂಸರೂ ಕನ್ನಡದ ಬಗೆ ಆದರಣೀಯವಾದ ಮಾತನ್ನು ಹೇಳಿದ್ದಾರೆ. Fernandiz Kittel ಇವನಂತೂ ಕನ್ನಡದ ಬಗ್ಗೆ ಯಾವ ಕನ್ನಡಿಗನನ್ನೂ ಮೀರಿಸಿದ ಹೆಮ್ಮೆಯನ್ನು ಪ್ರದರ್ಶಿಸಿದ್ದಾನೆ. Rev. Garrett, John Fleet ಮೊದಲಾದವರಂತೆ Dr. F. Kittel ಇವನು ಕನ್ನಡವನ್ನು ಕುರಿತಾಗಿ ಇಂತಂದನು :—

> "The more Kannada literature becomes known the more evident it becomes that it will fully bear comparison with any other literature in the country."

---

"ಅತ್ತಲಿತ್ತ ಸುಳಿದು ಸುತ್ತಿ ಇತ್ತಲಿತ್ತ ನೆಲ್ಲನೊತ್ತಿ
ಅಲ್ಲಿ ಬಳುಕುತಿಲ್ಲಿ ಬಾಗಿ ಅಲ್ಲಿ ಬಳಸುತಿಲ್ಲಿ ಸಾಗಿ
.........................................
ಬಲವ ಬೆಳಕ ನೀಡುತುಂ ನಿಲದೆ ನಾಟ್ಯವಾಡುತುಂ
ನುಗ್ಗಿ ಬೀಳುತೇಳುತಂ ನೆಗೆದು ಪಾರುತೋಡುತುಂ
ಭುವನ ರಚನೆಯೆನಿತು ಕುತುಕಮೆನುತ ಜನಕೆ ಸಾರುತುಂ
ಭುವನ ಜನಸಿಯೆನಿತು ಚತುರಳೆನುತ ಕಣ್ಗೆ ತೋರುತುಂ
ಪುರುಷ ಬಲವ ಬೆಳಗಿರೆನುತ ಜಡರ ಪಳಿದು ಮೊಳಗುತುಂ
ಪರಿವಳೀ ಕವೇರ ತನಯೆ ಧೀರ ಜನನಿಯೆನಿಸುತುಂ"

[ಡಿ. ವಿ. ಗುಂಡಪ್ಪ.]

ಕ್ರಿ. ಶ. 1865 ರಿಂದಿತ್ತಲಾಗಿ ಹಲವು ಬಗೆಯ ಕನ್ನಡ ಪುಸ್ತಕಗಳನ್ನು ಐರೋಪ್ಯಾ ಸಾಹಿತಿಗಳು ಬರೆದು ಮುದ್ರಿಸಿದರು. ಶಾಲಾ ಪಠ್ಯ ಪುಸ್ತಕಗಳು, ಕತೆ ಪುಸ್ತಕಗಳು, ಹಿಂದೂ ಧರ್ಮ ನೀತಿಗಳ ಭಾಷಾಂತರಗಳು, ಕೆಲವು ಕಾದಂಬರಿಗಳ ಕನ್ನಡ ಭಾಷಾಂತರಗಳು, ಬೈಬಲ್ ಪ್ರಸಂಗಗಳು, ಕಾವ್ಯ ಮಾಲಿಕೆಗಳು ಇತ್ಯಾದಿಯಾಗಿ ಹೊರಟುವು. ಅವೆಲ್ಲಾ ಒಂದಲ್ಲ ಒಂದು ತರದ ಪಠ್ಯಪುಸ್ತಕಗಳಾಗಿಯೂ ಆವರು ಉಪಯೋಗಿಸಿದ್ದರು. ಪಾಶ್ಚಾತ್ಯರು ಬೈಬಲ್ ಸಾಹಿತ್ಯದಿಂದ ತೊಡಗಿ ಕನ್ನಡ ಗದ್ಯ ಬರವಣಿಗೆಗೆ ಮೂಲಪುರುಷರಾದರೆಂದು ಹಿಂದೆಯೇ ನಿವೇದಿಸಲಾಗಿದೆ; ಆದರೆ ಭಾರತೀಯ ಪುರಾಣಗಳನ್ನೂ Daniel Sanderson ಇವನಂಥವರು ಸುಮಾರು 1000 ಪುಟಗಳಿಗೂ ಮಿಕ್ಕ ಕಥೆಪುಸ್ತಕಗಳ ರೂಪದಲ್ಲಿ ಕನ್ನಡ ಗದ್ಯವನ್ನು ಬರೆದಾಗ ಅವರು ಬೈಬಲನ್ನು ಮಾತ್ರ ಅಲ್ಲ; ಹಿಂದೂ ಧರ್ಮಗ್ರಂಥಗಳನ್ನೂ ಅಂತೆಯೇ ಗದ್ಯ ಸಾಹಿತ್ಯವಾಗಿ ಮಾರ್ಪಡಿಸಿದ್ದಾರೆಯೆಂದೂ ಊಹಿಸಿಕೊಳ್ಳಬೇಕಿದೆ.

'ಸುಭಾಷಿತ ಪ್ರಸಂಗ ಶತಕ' ಎಂಬ ನೀತಿ ಶ್ಲೋಕಗಳ ಕನ್ನಡ ಭಾಷಾಂತರವನ್ನು 1860 ರಷ್ಟು ಹಿಂದೆಯೇ ಮಾಡಿದ್ದರು. ಈ 107 ಪುಟಗಳ ಪುಸ್ತಕವು 1877 ರಲ್ಲಿ ಮೂರನೇ ಬಾರಿಗೆ ಮುದ್ರಣವಾಯಿತು.

'ತ್ವಮೇವ ಮಾತಾಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಗುರುಸ್ತ್ವಮೇವ
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವ ದೇವ |'

ಇಂಥಾ ಸುಂದರವಾದ ನೀತಿ ಶ್ಲೋಕಗಳೆಲ್ಲಾ ಬ್ರಾಹ್ಮಣೇತರರಿಗೆ ಪರಿಚಯವಾದುದು ಪಾಶ್ಚಾತ್ಯ ವಿದ್ವಾಂಸರ ಮೂಲಕವಾಗಿಯೇ ಎಂದು ತಿಳಿಯಬೇಕಿದೆ. ಅಂಥಾ ಶ್ಲೋಕಗಳನ್ನು ನೂರಾರು ಸಂಗ್ರಹಿಸಿ ಶಾಲಾ ವಿದ್ಯಾರ್ಥಿಗಳಿಗೆ ಅಂದು ಬಾಯಿಪಾಠ ಮಾಡಿಸಿದರು.

‘ ಕೃಷಿತೋ ನಾಸ್ತಿ ದುರ್ಭಿಕ್ಷಂ ಜಪತೋ ನಾಸ್ತಿ ಪಾತಕಂ,
ಮೌನತೋ ಕಲಹೋ ನಾಸ್ತಿ ನಾಸ್ತಿ ಜಾಗರತೋ ಭಯಂ |’

ಇದನ್ನು ಹೀಗೆ ಭಾಷಾಂತರಿಸಿದ್ದಾರೆ.—

‘ ಜೇಸಾಯದ ದೆಸೆಯಿಂದ ದುರ್ಭಿಕ್ಷವಿಲ್ಲಾ ; ಜಪದ ದೆಸೆಯಿಂದ ಪಾತಕವಿಲ್ಲಾ ; ಮೌನದ ದೆಸೆಯಿಂದ ಕಲಹವಿಲ್ಲಾ, ಜಾಗೃತೆಯಿಂದ ಭಯವಿಲ್ಲಾ ’.

**೨. ಕಳೆದ ಶತಮಾನಾಂತ್ಯದ ಕೆಲವು ಪಠ್ಯ ಪುಸ್ತಕಗಳು :—**

ಹಿಂದೆಯೇ ಹೆಸರಿಸಲಾದ ನೂರಾರು ಪಠ್ಯಪುಸ್ತಕಗಳು ಮೇಲಿಂದ ಮೇಲೆ ಪುನರ್ಮುದ್ರಣವಾಗುತ್ತಾ ಬಂದುವು. 1870 ರಿಂದ ಶಾಲೆಗಳ ಸಂಖ್ಯೆಯು ಹೆಚ್ಚಿದಂತೆ ಮತ್ತು ವಿದ್ಯಾಕ್ರಮ ಮತ್ತು ಪಾಠಕ್ರಮಗಳಲ್ಲಿ ತಕ್ಕ ಬದಲಾವಣೆಗಳು ಆಗುತ್ತಾ ಬಂದಂತೆ Garrett, Sanderson, Wuerth, Gustav Kies, B. L Rice, ಮೊದಲಾದವರು ರಚಿಸಿದ್ದ ಪಠ್ಯ ಪುಸ್ತಕಗಳನ್ನೇ ಕಾಲದಿಂದ ಕಾಲಕ್ಕೆ ಮಾರ್ಪಡಿಸಿ ಮತ್ತು ಪರಿಷ್ಕರಿಸಿ ಪುನರ್ಮುದ್ರಿಸಿದರು. ಆ ವೇಳೆಗೆ ಇತರ ಐರೋಪ್ಯಾ ವಿದ್ವಾಂಸರೂ ಅದೇ ಬಗೆಯ ಪಠ್ಯ ಪುಸ್ತಕಗಳನ್ನು ಹೊಸದಾಗಿ ಬರೆದು ಪ್ರಚಾರ ಪಡಿಸುತಿದ್ದರು.

ಧಾರವಾಡದಲ್ಲಿ ಇದ್ದ ಪ್ರಸಿದ್ಧ ವಿದ್ವಾಂಸನೂ ‘ ಡೆಪ್ಯುಟಿ ’ ಚೆನ್ನಬಸಪ್ಪ, ತುರಮರಿ, ರಂಗೋ ಕಟ್ಟಿ ಮೊದಲಾದ ದೇಶೀಯ ವಿದ್ವಾಂಸರನ್ನು ಪ್ರೋತ್ಸಾಹಿಸಿ ಮೇಲೆತ್ತಿದವನೂ ಆದ Rev. Fredrich Zeigler ಇವನ ಹೆಸರು ಹಿಂದೆಯೇ ಹಲವು ಬಾರಿ ಪ್ರಸ್ತಾಪಿಸಲಾಗಿದೆ. ಇವನೂ ಜರ್ಮನೀ ದೇಶಕ್ಕೆ ಸೇರಿದ ಒರ್ವ ಕರ್ಮಯೋಗಿ ಮತ್ತು ಶ್ರದ್ಧಾವಂತ ಸಾಹಿತಿ. Rev. Zeigler ಇವನು 1872 ರಲ್ಲಿ A Practical Key to Canarese Language ಎಂಬುದಾಗಿ ಕನ್ನಡ ಭಾಷೆಯನ್ನು ಮೊದಲಾಗಿ ಕಲಿಯುವ ವಿದೇಶೀಯರಿಗೆ ತಕ್ಕಂಥಾ ಒಂದು ಪಠ್ಯ ಪುಸ್ತಕವನ್ನು ಬರೆದನು. ವಿವರಣೆಯನ್ನು ಇಂಗ್ಲಿಷ್ ಜರ್ಮನ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಕೊಟ್ಟದ್ದಾನೆ. ಈ ಕೈಪಿಡಿಯು 1882 ರಲ್ಲಿ ಎರಡನೇ ಬಾರಿಗೆ ಪ್ರಕಟವಾಯಿತು.

1889 ರಲ್ಲಿ Rev. Zeigler ಇವನು A School Dictionary ಎಂಬುದಾಗಿ ಇಂಗ್ಲಿಷ್–ಕನ್ನಡ ನಿಘಂಟನ್ನು ಬರೆದದ್ದು ಶಾಲೆಗಳಲ್ಲಿ ವಿಶೇಷವಾಗಿ ಉಪಯೋಗಿಸಲ್ಪಟ್ಟಿತು. 1898 ರ ಒಳಗಾಗಿ ಈ ಅರ್ಥಕೋಶವು ಒಂದೆರಡು ಬಾರಿ ಪುನರ್ಮುದ್ರಣವಾಯಿತು. Rev. Zeigler ಮತ್ತು Rev. de Costa ಇವನು ಸೇರಿ ‘ ಕನ್ನಡ ಬಾಲವ್ಯಾಕರಣ ’ ಯೆಂಬುದನ್ನು 1877 ರಷ್ಟು ಹಿಂದೆಯೇ ಪ್ರಕಟಿಸಿದ್ದು ಉತ್ತರ ಕರ್ಣಾಟಕದ ಶಾಲೆಗಳಲ್ಲೆಲ್ಲಾ ಹಲವು ವರ್ಷಗಳ ವರೆಗೂ ಉಪಯೋಗಿಸಲ್ಪಟ್ಟಿತ್ತು.

ಹಳೆ ಮೈಸೂರಿನಲ್ಲಿ ವಿದ್ಯಾಪ್ರಗತಿಗೆ Rev Garrett ಎಷ್ಟರ ಮಟ್ಟಿಗೆ ದುಡಿದನೋ, ಮದ್ರಾಸಿನಲ್ಲಿ Rev. Miller ಇವನು ಎಷ್ಟು ಪ್ರಸಿದ್ಧನಾದನೋ

ಅಷ್ಟೇ ಪ್ರಮಾಣದಲ್ಲಿ ಧಾರವಾಡ ಮತ್ತು ಅದರ ನೆರೆಜಿಲ್ಲೆಗಳಲ್ಲಿ Rev. F. Zeigler ಇವನು ಶ್ರಮಿಸಿದನು. ಬಾಸೆಲ್ ಮಿಷನ್ನಿಗೆ ಸೇರಿದ್ದ ಈ ಕ್ರೈಸ್ತ ಗುರುವು ಧಾರವಾಡದಲ್ಲಿ ಅವರ ಮುದ್ರಣಾಲಯವನ್ನು ಅಭಿವೃದ್ಧಿಪಡಿಸಿದನಲ್ಲದೆ ಅವನ ಆಶ್ರಯದಲ್ಲಿ ನೂರಾರು ಕನ್ನಡ ಪುಸ್ತಕಗಳು 1890 ರ ಒಳಗಾಗಿ ಅಲ್ಲಿ ಮುದ್ರಣವಾಗಿ ಪ್ರಚಾರವಾದುವು.

**೩. ಉತ್ತಮ ಪಠ್ಯಪುಸ್ತಕಗಳೂ ಯೋಗ್ಯ ಅಧ್ಯಾಪಕರ ನೇಮಕವೂ :—**

ಐರೋಪ್ಯ ಶಿಕ್ಷಣ ತಜ್ಞರು ಅಂದಿನ ವಿದ್ಯಾಕ್ರಮವನ್ನು ಬಹು ಉನ್ನತ ಮಟ್ಟದಲ್ಲಿಟ್ಟರೆಂಬುದು ಜನಜನಿತವಾದ ವಿಚಾರವಾಗಿದೆ. ಹಿಂದೂಧರ್ಮ ಶಾಸ್ತ್ರಗಳನ್ನೂ ನೀತಿ ವಚನಗಳನ್ನೂ ಪಠ್ಯಪುಸ್ತಕಗಳಲ್ಲಿ ಇಳಿಸಿ ಬೋಧಿಸಿದಂತೆ ಅವರು ಹಿಂದೂ ಗಣಿತಶಾಸ್ತ್ರವನ್ನೂ ಕಲಿತು "ಗಣಿತ ನ್ಯಾಯ" "ಲೆಕ್ಕದ ವಿವರ" ಎಂಬೀ ಬಗೆಯ ಬೇರೆ ಬೇರೆ ದರ್ಜೆಗಳಿಗೆ ತಕ್ಕಂಥಾ ಪುಸ್ತಕಗಳನ್ನೂ ಬರೆದರು. ಭಾಷಾ ಶಾಸ್ತ್ರ ಮತ್ತು ವ್ಯಾಕರಣಗಳಲ್ಲಿ ಅವರಿಗೆ ಸಮದೊಗುವವರು ಯಾರೂ ಇರಲಿಲ್ಲ. 1896 ರಲ್ಲಿ ಪ್ರಕಟವಾದ "ಹೊಸ ಕೆಲವು ಕನ್ನಡ ಕೀರ್ತನೆಗಳು" ಎಂಬುದಾಗಿ ಪ್ರಾಚೀನ ಕವಿಗಳ ಪದ್ಯಗಳನ್ನು ಆರಿಸಿಕೊಟ್ಟ ಕಾವ್ಯಮಾಲಿಕೆಯ ವರೆಗೆ ಅಂಥಾ ಸಂಕಲನವನ್ನು ನೂರಾರು ಪ್ರಕಟಿಸಿದರು.

Archibald Gaikie ಇವನ 'ಪ್ರಾಕೃತಿಕ ಭೂಗೋಳಸಾರ' ಈ ಭೂಗೋಳ ವಿವರಣೆಯು ಎಲ್ಲಾ ಶಾಲೆಗಳಲ್ಲೂ ಬಹು ವರ್ಷಗಳವರೆಗೆ ಉಪಯೋಗಿಸಿದರು. 1858 ರಲ್ಲಿ ಪ್ರಕಟವಾದ 'ಗಣಿತ ಶಾಸ್ತ್ರ' ಎಂಬ ಉತ್ತಮ ಗಣಿತ ಪುಸ್ತಕವು ಸುಮಾರು ಮೂವತ್ತು ವರ್ಷಗಳ ಕಾಲ ಶಾಲೆಗಳಲ್ಲಿ ಉಪಯೋಗಿಸಲ್ಪಟ್ಟಿತ್ತು. ಅಂದಿನ ನೂರಾರು ಗಣಿತ ಪುಸ್ತಕಗಳ ಪೈಕಿ ಅದು ಬಹು ಮೇಲ್ಪಟ್ಟದೆಂದು ಪ್ರಸಿದ್ಧವಾಗಿತ್ತು. G. A. Wuerth ಇವನ Easop's Fables ಇದರಂತೆ 'ದೃಷ್ಟಾಂತ ಮಂಜರಿ' ಅಥವಾ 'A Moral Class-book' ಎಂಬ ಬೋಧಪ್ರದವಾದ ನೀತಿ ಪುಸ್ತಕವೂ John Garrett ಇವನ 'ಹಿಂದೂದೇಶದ ಚರಿತ್ರ ಸಂಗ್ರಹ' ಎಂಬೀ ಬಗೆಯ ಚರಿತ್ರೆ ಪುಸ್ತಕಗಳೂ ಎಲ್ಲಾ ಜಿಲ್ಲೆಗಳನ್ನು ಕುರಿತ ಭೂಗೋಳ ವಿವರಣೆ. ಚರಿತ್ರೆಗಳಲ್ಲದೆ ವಿಜ್ಞಾನ. ಬಾಲಗೀತೆ. ಭಾಷಾಬೋಧೆ ಎಂದಿತ್ಯಾದಿಯಾಗಿ ಪುಸ್ತಕಗಳು ಆಗಿಂದಾಗ್ಯೆ ಪ್ರಕಟಗಾಗುತ್ತಲೇ ಇದ್ದುವು. ನೀತಿ ಬೋಧೆ ಮತ್ತು ಆರೋಗ್ಯ ಶಾಸ್ತ್ರಕ್ಕೆ ವಿಶೇಷ ಪ್ರಾಶಸ್ತ್ಯನಿತ್ತಿದ್ದರು.

ಅದಕ್ಕೆ ತಕ್ಕಂತೆ ಶಾಲೆಗಳಲ್ಲಿ ಬೋಧಿಸಲು ಹೆಚ್ಚಾಗಿ ಪಾಶ್ಚಾತ್ಯರೇ ಇರುತಿದ್ದರು. ವಿದ್ಯಾವಂತರಾದ ಕ್ರೈಸ್ತಗುರುಗಳು ವಿದ್ಯಾ ಯೋಜನೆಯನ್ನು ಒಂದು ಸಮಾಜ ಸೇವೆಯೆಂಬಂತೆ ಭಾವಿಸಿ ದುಡಿಯುತಿದ್ದರು. ದೇಶೀಯ ಅಧ್ಯಾಪಕರನ್ನು ಬಹು ದಕ್ಷ ರೀತಿಯಲ್ಲಿ ಆರಿಸಿ ನೇಮಿಸುತ್ತಿದ್ದರು. ಸುಮಾರು 1850 ರಿಂದ ಈ ಹೊಸ ಪಾಠಶಾಲೆಗಳಲ್ಲಿ ದೇಶೀಯ ಅಧ್ಯಾಪಕರನ್ನು ಹೆಚ್ಚಿನ ಸಂಖ್ಯೆಯಲ್ಲಿ ನೇಮಿಸಲಾರಂಭಿಸಿದರು. ಇಂದು ಹೇಗೋ ಅಂದೂ ಪತ್ರಿಕೆಗಳಲ್ಲಿ ಅಧ್ಯಾಪಕರು 'ಬೇಕಾಗಿದ್ದಾರೆ' ಎಂಬ

ಜಾಹೀರಾತುಗಳು ಇರುತ್ತಿದ್ದುವು. ಉದಾಹರಣೆಗೆ 1863 ರ ಒಂದು ಪತ್ರಿಕೆಯಲ್ಲಿ ಸರಕಾರದವರು ಹೊರಡಿಸಿದ ಒಂದು ಪ್ರಕಟಣೆಯು ಹೀಗಿದೆ :—

" ಉತ್ತರ ಕನ್ನಡ ಜಿಲ್ಲೆಯಲ್ಲಿ ದೇಶ ಭಾಷೆಯ ಶಾಲೆಗಳ ಕೆಲಸದ ಮೇಲೆ ಹೋಗುವದಕ್ಕೆ ತಕ್ಕವರಾದ ಮಾಸ್ತರರು ಮತ್ತು ಅವರ ಅಸಿಸ್ಟಂಟರು ನಮಗೆ ಬೇಕಾಗಿದ್ದಾರೆ.

" ಮಾಸ್ತರರಿಗೆ ೧೫ ರೂಪಾಯಿ ಮೊದಲ್ಗೊಂಡು ೪೦ ವರೆಗೆ ಮತ್ತು ಅಸಿಸ್ಟಂಟ ಮಾಸ್ತರರಿಗೆ ೫ ಮೊದಲ್ಗೊಂಡು ೧೫ ರೂಪಾಯಿಗಳ ವರೆಗೆ ಪ್ರತಿ ತಿಂಗಳಿಗೆ ಸಂಬಳವು ಅವರ ಲಾಯಕಿ ಹಾಂಗು ಹುಶಾರಿಯ ಪ್ರಕಾರವಾಗಿ ದೊರಕುವದು.

" ಪ್ರತಿ ತಿಂಗಳಿಗೆ ೨೫ ರೂಪಾಯಿಗಳ ಹಾಂಗು ಇದಕ್ಕಿಂತ ಹೆಚ್ಚಿನ ಸಂಬಳದ ನವುಕರಿಯ ಉಮೇದುವಾರರಿಗೆ ಇಂಗ್ಲಿಷ್ ಬರುತ್ತಿದ್ದು ಅದು ಕಲಿಸುವ ತಕ್ಕದ್ದಾಗಿರಬೇಕು ".

" ಅರ್ಜದಾರರು ಸರಕಾರಿ ಇತರ ಶಾಲೆಯಲ್ಲಿ ಈಗ ನವುಕರರಿದ್ದು ಅವರ 'ಇಚ್ಛೆ ಇದ್ದರೆ' ತಮ್ಮಾ ವರಿಷ್ಠ ಹುದ್ದೆದಾರರ ಅಪ್ಪಣೆಯನ್ನು ತೆಗೆದುಕೊಂಡು ಅರ್ಜಿ ಮಾಡಬೇಕು."

" ಅಣೆಗಿರಿ, ಜಿಲ್ಹಾ ಧಾರವಾಡ, ತಾ. ೨೯ ಮಾಹೆ ಜನವರಿ 1863, ಈಸವಿ, Sd) J. F. Lester, ಎಡ್ಯುಕೇಶನಲ್ ಇನ್ಸ್ಪೆಕ್ಟರ್, ದಕ್ಷಿಣ ಭಾಗ."

೪. ಕೊಡಗಿನಲ್ಲಿ ರಿಕ್ಟರ್ ಸಾಹೇಬನ ಪ್ರಗತಿಶೀಲ ಪ್ರಯೋಗಗಳು :—

ಜರ್ಮನ್ ಜನಾಂಗಕ್ಕೆ ಸೇರಿದ್ದ ಐರೋಪ್ಯ ಕ್ರೈಸ್ತಗುರುಗಳು ಈ ದೇಶದ ವಿದ್ಯಾಯೋಜನೆಗೆ ತಕ್ಕುದಾದ ಮತ್ತು ಭದ್ರವಾದ ತಳಹದಿಯನ್ನು ಹಾಕಿದವರು. ಕೊಡಗಿನಂಥಾ ಅಂದಿನ ಚಿಕ್ಕ ಪ್ರಾಂತದಲ್ಲೂ ಅವರೇ ಈ ಮಹತ್ತಾದ ಕಾರ್ಯದಲ್ಲಿ ಮುಂದಾದರು. Hermann Moengling ಇವನು ಹತ್ತಾರು ಶಾಲೆಗಳನ್ನು ಕೊಡಗಿನಲ್ಲಿ ಸ್ಥಾಪಿಸಿ ಅವುಗಳ ಮುನ್ನಡೆಗೆ ಸುಮಾರು 1860 ರ ವರೆಗೂ ಶ್ರಮಿಸಿದನು. ಅವನನಂತರ ಬಂದ Rev. G Richtor ಇವನು ಆ ಜಿಲ್ಲೆಯ ವಿದ್ಯಾಪ್ರಗತಿಗೆ ಕಾರಣನಾದ ಪಿತಾಮಹನೆಂದೆನ್ನಬಹುದು. ಇವರಿರ್ವರೂ ಜರ್ಮನ್ನರು. ಅವರ ನಂತರ ಕಳೆದ ಶತಮಾನದಲ್ಲಿ ಕೊಡಗಿನ ಭೂಮಾಪನಗಳನ್ನು ಅಳೆದು ದಿವಾನ್ಗ್ರಿ ಇಲಾಖೆಗೆ ತಕ್ಕ ರೂಪವನ್ನು ಕೊಟ್ಟ Gustav Haller ಇವನು ಮತ್ತೊಬ್ಬನ ವೀರ ಜರ್ಮನ್ ಕರ್ತವ್ಯ ತತ್ಪರನು. ಇವನು ಈ ಶತಮಾನದ ಆರಂಭದಲ್ಲೂ ಕೆಲವು ವರ್ಷಗಳಿದ್ದು 1910 ರಲ್ಲಿ ನಿವೃತ್ತನಾದನು. ಹೀಗೆ ಈ Richtor ಮತ್ತು Haller ಇವರ ಹೆಸರು ಅಲ್ಲಿ ಅಂದಿನ ಕಾಲಕ್ಕೆ ಎಲ್ಲರ ಮನೆಮಾತಾಗಿದ್ದಿತು.

ಸುಮಾರು 1861 ರಲ್ಲಿ ಕೊಡಗಿಗೆ ಬಂದು ಮಡಿಕೇರಿ ಶಾಲಾ ಕಟ್ಟಡ ಮತ್ತು ಇತರ ಹಲವು ಶಾಲೆಗಳ ಸ್ಥಾಪನೆಗೆ ಕಾರಣನಾದ Rev. G. Richtor ಇವನು

ಸುಮಾರು ಇಪ್ಪತ್ತು ವರ್ಷಗಳ ಕಾಲ ಕೊಡಗಿನಲ್ಲಿದ್ದನು. ಇವನ ಸೇವಾಭಾವವನ್ನು ಕಂಡು ಬ್ರಿಟಿಷ್ ಸರಕಾರವು ಅವನನ್ನು ಅಂದಿನ ಹೈಸ್ಕೂಲಿನ ಪ್ರಥಮ ಮುಖ್ಯೋಪಧ್ಯಾಯನಾಗಿಯೂ ಕೊಡಗಿನ ಶಾಲೆಗಳ ಮೇಲಾಧಿಕಾರಿಯಾಗಿಯೂ ನೇಮಿಸಿತು. ಕೊಡಗಿನಲ್ಲಿ ಅಧ್ಯಾಪಕರ ತರಬೇತು ಶಾಲೆಯೊಂದನ್ನು ತೆರೆಯಲೋಸುಗ ಒಂದು ಯೋಜನೆಯನ್ನು ತಯಾರಿಸಿದನು. ತಾನು ರಜೆಯಲ್ಲಿ ತನ್ನ ಸ್ವದೇಶಕ್ಕೆ ಹೋಗಿದ್ದಾಗ ಅಲ್ಲಿ Normal School ಗಳನ್ನು ನಡೆಸುವ ವಿಧಾನವನ್ನು ಅಭ್ಯಸಿಸಿ ಅಂತೆಯೇ ಇಲ್ಲಿಯೂ ಒಂದು ಶಾಲೆಯನ್ನು 1871 ರಲ್ಲಿ ಸ್ಥಾಪಿಸಿದನು. ಶಾಲಾ ಮುಖ್ಯಾಧಿಕಾರಿಯಾಗಿ ಹಲವಾರು ಪ್ರಾಥಮಿಕ ಶಾಲೆಗಳ ಸ್ಥಾಪನೆಗೂ ಕಾರಣನಾದನು.

Rev. G. Richtor ಇವನು ಕೊಡಗಿನಲ್ಲಿ ಒರ್ವ ಪ್ರತಿಭಾವಂತ ವ್ಯಕ್ತಿಯಾಗಿದ್ದನು. ಅಲ್ಲಿಯ ಜನರ ಚರಿತ್ರೆ, ಜನಜೀವನ ಇತ್ಯಾದಿಗಳನ್ನು ಕುರಿತು ಅವನು ಬರೆದ 280 demy ಪುಟಗಳ Coorg Manual ಇಂದಿಗೂ ಆ ಜಿಲ್ಲೆಯ ಚರಿತ್ರೆಯ ಮಟ್ಟಿಗೆ ಒಂದು ಉತ್ತಮ ಆಧಾರ ಗ್ರಂಥವಾಗಿದೆ. ಕೊಡಗಿನ ಜನರನ್ನು ಸಂಘಟಿಸಿ ಅವರನ್ನು ಕರ್ತವ್ಯ ತತ್ಪರರಾಗುವಂತೆ ಪ್ರೇರೇಪಿಸಿದನು. ಕಾಫಿ. ಸಿಂಕೋನಾ ಇತ್ಯಾದಿಗಳ ವ್ಯವಸಾಯವನ್ನು ಪ್ರೋತ್ಸಾಹಿಸಿದನು. ನಾಡಿನ ಚಾರಿತ್ರಿಕ ವಿವರಗಳನ್ನು ಸಂಗ್ರಹಿಸಿ ಅಂದಿನ ಇತರ ಐರೋಪ್ಯ ಸಂಶೋಧಕರಿಗೆ ಕಳುಹಿಸಿಕೊಟ್ಟನು. ಶಾಲೆಗಳನ್ನು ಬಹು ಉನ್ನತ ಮಟ್ಟದಲ್ಲಿ ನಡೆಸಿದ್ದಲ್ಲದೆ ತಾನು ಸ್ಥಾಪಿಸಿದ್ದ ತರಬೇತು ಶಾಲೆ ಯಾ Normal School ನಲ್ಲಿ ತರಬೇತು ಹೊಂದಿದ ಯೋಗ್ಯ ಅಧ್ಯಾಪಕರನ್ನು ನೇಮಿಸಿ ಆಧುನಿಕ ವಿದ್ಯಾಪ್ರಚಾರಕ್ಕೆ ಕಾರಣಭೂತನಾದನು. Richtor ಇವನ ಜನಪ್ರಿಯತೆ ಮತ್ತು ಸಾಮಾಜಿಕ ಸುಧಾರಣಾ ಕಾರ್ಯಗಳನ್ನು ಕಂಡು ಸರಕಾರವು ಅವನನ್ನು ಆ ಹುದ್ದೆಯಲ್ಲಿ ಖಾಯಂ ಮಾಡಿದ್ದಲ್ಲವೆ ಅವನ ಸೇವೆಯನ್ನು ಅವನ ಕಡೇ ದಿನಗಳ ವರೆಗೂ ಪಡೆಯಿತು. ಅವನು ನಿವೃತ್ತನಾಗಿ ಸ್ವದೇಶಕ್ಕೆ ತೆರಳುವಾಗ ಸ್ಥಳೀಯ ಜನರು ಅವನನ್ನು ಒಡ್ಡೋಲಗ ಸಮೇತವಾಗಿ ಬೀಳ್ಕೊಟ್ಟರು.

೫. ಶೀಲ ಶಿಸ್ತುಗಳಿಗೆ ಪ್ರಾಧಾನ್ಯತೆ ಮತ್ತು ಶಾಲೆಗಳ ವೇಳಾಪಟ್ಟಿ :—

ಕೊಡಗಿನಲ್ಲಿ Rev. Richtor ಇವನು ಹೇಗೋ ಹಾಗೆಯೇ ಧಾರವಾಡದಲ್ಲಿ Rev. F. Zeigler ಇವನು ಎಂದು ಹಿಂದೆಯೇ ಹೇಳಲಾಗಿದೆ. ಮಂಗಳೂರಿನಲ್ಲಿ Rev. Buhrer ಮತ್ತು J. Brigel ಇವರಿದ್ದರು. ಮೈಸೂರಿನಲ್ಲಿ B. L. Rice ಇವನು ಒಂದು ಸರ್ವ ಶಕ್ತಿಯಂತೆ ಇದ್ದನು. ಹೀಗೆ ಎಲ್ಲಾ ಜಿಲ್ಲೆಗಳಲ್ಲೂ ಪ್ರಾಂತಗಳಲ್ಲೂ ಈ ವಿದೇಶೀಯ ವಿದ್ಯಾತಜ್ಞರು ತಮ್ಮ ಮತಪ್ರಚಾರ ಕಾರ್ಯವನ್ನು ಒತ್ತಟ್ಟಿಗಿಟ್ಟು ವಿದ್ಯಾಪ್ರಚಾರಕ್ಕೆ ಪಣತೊಟ್ಟು ದುಡಿದರು. ಶಾಲೆಗಳಲ್ಲಿ ಶೀಲ ಶಿಸ್ತುಗಳಿಗೆ ಪ್ರಾಧಾನ್ಯತೆಯಿತ್ತಿರುತ್ತಿದ್ದರು. ವಿಜ್ಞಾನ. ಚರಿತ್ರೆ. ಭೂಗೋಳ. ಗಣಿತ ಮತ್ತು ಭಾಷಾಪಾಠಗಳಲ್ಲದೆ ಕೈಬರಹ. ಉಕ್ತಲೇಖನ ಪದ್ಯಪಠನ ಪ್ರಬಂಧರಚನೆ, ಕೈಗಾರಿಕೆ, ಆಟ ಇತ್ಯಾದಿಗಳಿಗೂ ಪ್ರಾಶಸ್ತ್ಯವನ್ನಿತ್ತರು. ಸುಮಾರು 1893ರ ವರೆಗೂ ವಾರಕ್ಕೆ ಆರು ದಿವಸಗಳು ಶಾಲೆಯಿರುತಿದ್ದುವು; ಆನಂತರ ಶನಿವಾರ ದಿನ ಮಧ್ಯಾಹ್ನದ

ವರೆಗೆಯೆಂದು ನಿರ್ಣಯಿಸಿದರು. ಏಳನೇ ದರ್ಜೆಯಿಂದ ಮೇಲ್ಪಟ್ಟು ಇದ್ದ. ಶಾಲೆಗಳಲ್ಲಿ ಐರೋಪ್ಯಾ ವಿದ್ವಾಂಸರೇ ಮುಖ್ಯೋಪಾಧ್ಯಾಯರೂ ಇಂಗ್ಲಿಷ್ ಭಾಷಾ ಶಿಕ್ಷಕರೂ ಆಗಿರುತಿದ್ದರು. ಅಂದಿನ ಮಾಧ್ಯಮಿಕ ಶಾಲೆಗಳನ್ನು ಇಂಗ್ಲೆಂಡಿನ ಉನ್ನತ ಮಟ್ಟದ ಶಾಲೆಗಳಂತೆ ನಡೆಸುತಿದ್ದರು. ಬಹು ದಕ್ಷರೂ, ಜಾಣರೂ ಆದ ಅಧ್ಯಾಪಕರನ್ನು ಭಾರತ ಸರಕಾರದ ಮೂಲಕ ತರಿಸಿ ನೇಮಿಸುತಿದ್ದರು.

ಅಂದಿನ ಮಾಧ್ಯಮಿಕ ಶಾಲೆಯೊಂದರ ವೇಳಾಪಟ್ಟಿಯು ಎಂತಿದ್ದಿತೆಂಬುದಕ್ಕೆ 1872ನೇ ವರ್ಷದ ಮಡಿಕೇರಿ ಶಾಲೆಯ Time-table ಒಂದನ್ನು ಈ ಕೆಳಗೆ ಕೊಡಲಾಗಿದೆ. ಇದರಿಂದ ಅವರು ಯಾವಾವ ಪಾಠಗಳಿಗೆ ಎಷ್ಟು ಪ್ರಾಶಸ್ತ್ಯವಿತ್ತಿದ್ದರೆಂದು ತಿಳಿಯಬಹುದಾಗಿದೆ. ಒಂದನೇ ಫಾರ್ಮ್‌ನಿಂದ ನಾಲ್ಕನೇ ಫಾರ್ಮ್‌ವರೆಗಿನ ವೇಳಾಪಟ್ಟಿಗಳು ೫೭೮, ೫೭೯ ಮತ್ತು ೫೮೦ನೇ ಪುಟಗಳಲ್ಲಿ ಕೊಟ್ಟಂತಿದೆ.

ಹೀಗಿದ್ದ ನಾಲ್ಕು ದರ್ಜೆಗಳಿಗೆ ಬೋಧಿಸಲು ಆರು ಅಧ್ಯಾಪಕರಿದ್ದರು. ಅವರಲ್ಲಿ ಇರ್ವರು ಮುಖ್ಯೋಪಾಧ್ಯಾಯ Rev. Richtor ಇವನನ್ನು ಸೇರಿ ಪಾಶ್ಚಾತ್ಯರಾಗಿದ್ದರು. ಹಿಂದೂಸ್ಥಾನಿಯನ್ನು ಕಲಿಸಲು ಒರ್ವ ಹಿಂದೀ ಮುನಿಷಿಯಿದ್ದನು. ಇಂಗ್ಲಿಷ್ ಬೋಧನೆಗೆ ಹೆಚ್ಚು ಪ್ರಾಶಸ್ತ್ಯವಿತ್ತುದನ್ನೂ ಕನ್ನಡವನ್ನು ಬೋಧಿಸಲು ಪ್ರತಿದಿನ ಕಡೇ ಅವಧಿಯನ್ನು ಇಟ್ಟುದೂ ಗಮನಿಸತಕ್ಕದ್ದಾಗಿದೆ. ಉಕ್ತಲೇಖನ, ಬರೆಹ, Euclid ಗಣಿತ ಇತ್ಯಾದಿಗಳನ್ನೂ ತಕ್ಕಂತೆ ಮೇಲಿನ ದರ್ಜೆಗಳಲ್ಲೂ ಇಟ್ಟಿದ್ದರು. ಒಟ್ಟಾಗಿ ಅಂದಿನ ವಿದ್ಯಾಕ್ರಮದ ರೂಪುರೇಷೆಯೆಂತಿದ್ದಿತೆಂದು ಇದರಿಂದ ತಿಳಿಯಬಹುದಾಗಿದೆ. ಬೇರೆ ಬೇರೆ ಜಿಲ್ಲೆಗಳಲ್ಲಿ ಆಯಾ ಸ್ಥಳಕ್ಕೆ ತಕ್ಕಂತೆ ಅಲ್ಲಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳು ಅಂದಿನ ಪಾಠಕ್ರಮದಲ್ಲಿ ಇದ್ದಿತೆಂದೂ ಊಹಿಸಿಕೊಳ್ಳಬಹುದಾಗಿದೆ.

೬. ರೆ॥ ಎ. ಗ್ರೇಟರ್ ಮತ್ತು ರೆ॥ ಬಿ. ಗ್ರೇಟರ್ ಇವರ ಪುಸ್ತಕಗಳು :—

ಮಂಗಳೂರು ಮತ್ತು ಕೊಡಗಿನಲ್ಲಿ ಅಧ್ಯಾಪಕನಾಗಿದ್ದ Rev. A. Graetor ಇವನು 1869 ರಲ್ಲಿ First Canarese-English Translator ಎಂಬುದಾಗಿ 93 ಪುಟಗಳ ಪಠ್ಯಪುಸ್ತಕವನ್ನು ಬರೆದಿದ್ದು ಅಂದಿನ ಹಲವು ಶಾಲೆಗಳಲ್ಲಿ ಭಾಷಾಂತರ ಪಾಠಕ್ಕೆ ಉಪಯೋಗಿಸಲ್ಪಟ್ಟಿತ್ತು. ಅದರೊಡನೆಯೇ ಅವನು "ಕೊಡಗು ವಿವರಣೆ" ಎಂಬುದನ್ನೂ ಬರೆದನು. ಇವೆರಡು ಪುಸ್ತಕಗಳು ಹಲವು ಬಾರಿ ಪುನರ್ಮುದ್ರಣವಾದುವು.

Rev. A. Graetor ಇವನು ಕೊಡಗು ಮತ್ತು ಮೈಸೂರು ಜಿಲ್ಲೆಗಳಿಗೆ ಸಂಬಂಧಿಸಿದ ಹಲವು ಶಾಸನಗಳ ಮೇಲೆ ಚಾರಿತ್ರಿಕ ಲೇಖನಗಳನ್ನೂ ಬರೆದನು. ಗಂಗ ಮತ್ತು ಚೇರರಾಜವಂಶಗಳನ್ನು ಕುರಿತಾಗಿ ಅವನು ಬರೆದ ಲೇಖನಗಳು ಇತರ ವಿದ್ವಾಂಸರಿಂದ ಪ್ರಶಂಸಿಸಲ್ಪಟ್ಟುವು.

ಅವನನಂತರ ಉತ್ತರ ಕರ್ನಾಟಕ ಮತ್ತು ಧಾರವಾಡದ ಬಾಸೆಲ್ ಮಿಷನ್‌ನಲ್ಲಿದ್ದ Rev. B. Graetor ಇವನ Tables of Canarese Grammar ಎಂಬುದಾಗಿ ಅತೀ ಉತ್ತಮವಾದ ವ್ಯಾಕರಣ ಕೈಪಿಡಿಯೊಂದನ್ನು ರಚಿಸಿದನು.

| Form | Monday 11 a.m. to 4-45 p.m. | | | | | |
|---|---|---|---|---|---|---|
| I | Eng. Prose | Ind. History | Eng. Comp. | Recitation | Arithmetic | Kan. Gramr. |
| II | Ancient History | Eng. Prose | Gen. Geography | do | Algebra | ,, Poetry |
| III | Eng. Prose | Eng. Comp. | Geography | Writing | Hindustani | ,, Prose |
| IV | ,, Spelling | Eng. history | Arithmetic | Eng. Gramr. | Writing | Writing |

| Form | Tuesday 11 a.m. to 4-45 p.m. | | | | | |
|---|---|---|---|---|---|---|
| I | Eng. history | Gen. Geogy. | Eng. Gramr. | Singing | Algebra | Kan. Prose |
| II | Modren history | Eng. Poetry | English Composition | do | Hindustani | ,, Poetry |
| III | Indian history | Arithmetic | Kan. Poetry | do | English Geography | ,, Writing |
| IV | Eng. Reader | Ind. history | Geography | Translation | Kan. Gramr. | Writing |

| Form | Wednesday 8 a.m. to 12-15 p.m. | | | |
|---|---|---|---|---|
| I | Indian history | Eng. Poetry | Writing | Euclid |
| II | Algebra | ,, Prose | Arithmetic | do |
| III | English history | ,, Compo-sition | Eng. Prose | Hindustani |
| IV | Eng Spelling | ,, history | ,, Geogy. | Kan. Gramr. |

| Form | Thursday 11 a.m. to 4-45 p m. | | | | | |
|---|---|---|---|---|---|---|
| I | Eng. history | Geography | Eng. Prose | Hindustani | Arithmetic | Kan. Gramr. |
| II | Ancient history | English Poetry | English Composition | Arithmetic | Hindustani | Eng. ,, |
| III | History of India | Euclid | Geometry | Dictation | English Grammar | Kan. ,, |
| IV | Translation | Ind. history | Geography | Eng. Reader | Story | Writing |

| Form | Friday 8 a.m. to 11 a.m. | | |
|---|---|---|---|
| I | Map work | Geometry | Algebra |
| II | do | do | do |
| III | Eng. history | Arithmetic | Kan. Poetry |
| IV | ,, Spelling | Translation | Writing |

| Form | Saturday 11 a.m. to 4–45 p.m. | | | | | |
|---|---|---|---|---|---|---|
| I | Indian Geography | Eng. Poetry | Writing | Hindustani | Euclid | Kan. Prose |
| II | Modern history | Indian Geography | do | Euclid | Arithmetic | ,, Poetry |
| III | Eng. Prose | Dictation | Euclid | Arithmetic | Kannada Grammar | ,, Prose |
| IV | ,, Reader | History | Geometry | Eng. Gramr. | Arithmetic | Writing |

Rev. Zeigler ಇವನ 'ಶಾಲಾವ್ಯಾಕರಣ'ವನ್ನು ಅನುಸರಿಸಿ ಅಕ್ಷರಮಾಲೆ, ನಾಮವಾಚಕ ಮಾಲೆ, ಕ್ರಿಯಾಮಾಲೆ, ವಿಭಕ್ತಿಮಾಲೆ ಎಂದಿತ್ಯಾದಿಯಾಗಿ ಹನ್ನೊಂದು ಪಟ್ಟಿಗಳನ್ನು ಕೊಟ್ಟು ಅವುಗಳೊಳಗೆ ಇಡೀ ವ್ಯಾಕರಣಾಂಶಗಳನ್ನು ಅಡಗಿಸಲು ಪ್ರಯತ್ನಿಸಿದ್ದಾನೆ. 1884 ರಲ್ಲಿ ಪ್ರಕಟವಾದ ಈ ಪಟ್ಟಿ ಪುಸ್ತಕವು ಹಲವು ಬಾರಿ ಪುನರ್ಮುದ್ರಣವಾಯಿತು. ಇದನ್ನು ಮೊದಲು ಬರೆದಾಗ—

> "They [tables] were first intended for the use of foreigners studying Kanarese language. Afterwards it was suggested that the tables would be useful for Kannada Schools .........."

ಎಂಬುದಾಗಿ ಹೇಳಿದ್ದಾನೆ. ಇಂಥಾ ಪುಸ್ತಕಗಳನ್ನು ಪುನರ್ಮುದ್ರಿಸಿ ಸರಕಾರವು ಇಂದು ಸಹ ಎಲ್ಲಾ ಶಾಲೆಗಳಲ್ಲಿ ಪ್ರಚಾರಪಡಿಸಿದರೆ ಭಾಷಾ ವಿದ್ಯಾರ್ಥಿಗಳಿಗೆ ವ್ಯಾಕರಣವನ್ನು ಸುಲಭದಲ್ಲಿ ಕಲಿಯಲು ಅನುಕೂಲವಾಗುತ್ತದೆ ಎಂಬುದಾಗಿ ಪುನಃ ಹೇಳಬೇಕಿದೆ. ಈ ಇರ್ವರು Graetor ಎಂಬ ನಾಮಾಂಕಿತರರು ಹಲವು ಸ್ಥಳೀಯ ಜನಪದ ಹಾಡುಗಳನ್ನೂ ಗ್ರಾಮ್ಯ ಭಾಷೆಗಳಿಂದ ಕನ್ನಡಕ್ಕೂ ಇಂಗ್ಲಿಷ್‌ಗೂ ಭಾಷಾಂತರಿಸಿದ್ದಾರೆ. Rev. A Graetor ಇವನು ಮಂಗಳೂರು ಮತ್ತು ಕೊಡಗಿನ ಜನರ ಸ್ಥಳೀಯ ಹಬ್ಬಹುಣ್ಣಿಮೆಗಳ ಕಾಲದಲ್ಲಿ ಹಾಡುವ ಕೆಲವು ಉತ್ತಮ ನುಡಿಗಟ್ಟುಗಳನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾನೆ. ಅವುಗಳಲ್ಲಿ ಕೆಲವನ್ನು ಜರ್ಮನ್ ಭಾಷೆಗೂ ಇಳಿಸಿದ್ದಾನೆ.

**೭. ಲ್ಯೂಟಿ, ರಾಬರ್ಟ್ಸ್, ವಾಲ್ಸ್ ಮೊದಲಾದವರ ಗದ್ಯ ಬರೆಹಗಳು :—**

ಕಳೆದ ಶತಮಾನಾಂತ್ಯದಲ್ಲಿ ಮತ್ತು 1900 ನೇ ವರ್ಷದ ಒಳಗಾಗಿ ಐರೋಪ್ಯ ಕನ್ನಡ ಸಾಹಿತಿಗಳು ಹಲವು ಉತ್ತಮ ಕನ್ನಡ ಗದ್ಯ ಪುಸ್ತಕಗಳನ್ನು ಬರೆದು ಪ್ರಕಟಿಸಿದರು. ಹಲವು ಕನ್ನಡ ಬೈಬಲ್ ಕೃತಿಗಳನ್ನು ರಚಿಸಿದ Rev. Bendich Luethi ಇವನು ಜರ್ಮನ್ ಭಾಷೆಯಿಂದ 'Muslim's Autobiography' ಎಂಬ ಪುಸ್ತಕವನ್ನು ಕನ್ನಡಕ್ಕಿಳಿಸಿದನು. H. Roberts ಇವನು ಮಲಯಾಳ ಕಾದಂಬರಿ "ಸುಕುಮಾರಿ" ಇದನ್ನು ಕನ್ನಡಕ್ಕೆ ಭಾಷಾಂತರಿಸಿದನು. ಇದು 1898 ರಲ್ಲಿ ಪ್ರಕಟವಾಯಿತು. ಹಲವು ಪದ್ಯಪುಸ್ತಕ ಮತ್ತು 'ಶಾಲಾ ವ್ಯಾಕರಣ'ಗಳನ್ನು ಈ ಶತಮಾನದ ಪ್ರಾರಂಭದಲ್ಲಿ ಬರೆದು ಪ್ರಕಟಿಸಿದ Rev. T. G. Maben ಇವನ 'ಲೋಕವ್ಯವಹಾರ ಬೋಧಿನಿ' ಎಂಬ ನೀತಿಗ್ರಂಥವು 1896 ರಲ್ಲಿ ಹೊರಬಂತು. 112 ಪುಟಗಳ ಈ ಪುಸ್ತಕವು ಮಂಗಳೂರಿನಿಂದ ಇವನ ಇತರ ಕೃತಿಗಳೊಡನೆ ಪ್ರಕಟವಾಯಿತು. ಸುಮಾರು ಅದೇ ವೇಳೆಗೆ M. A. Couchman ಇವನು ದೇಶೀಯರಿಂದ ಬರೆಯಲ್ಪಟ್ಟ 'ಇಂದಿರಾಬಾಯಿ' ಮತ್ತು 'ಸೀಮಂತಿನೀ' ಕಾದಂಬರಿಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದನು.

ಇವರೆಲ್ಲರಿಗಿಂತಲೂ ಹಿಂದೆ ಇದ್ದ Theodre Micha Walz ಇವನ

ಹೆಸರನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆ. ಇವನು 1875 ರಲ್ಲಿ ಬರೆದ "ನಾಟಕ ಗಾರನೂ ಗೌರಮ್ಮ ರಾಜಕುಮಾರ್ತೆಯೂ" ಎಂಬ ಪುಸ್ತಕವೊಂದು ಅವನ ಬೈಬಲ್ ಸಾಹಿತ್ಯ ಕೃತಿಗಳೊಂದಿಗೆ ಪ್ರಕಟವಾಯಿತು. ಕಾದಂಬರಿಯ ರೀತಿಯಲ್ಲಿರುವ ಈ ಪುಸ್ತಕವು ಇಂಗ್ಲೆಂಡಿನಲ್ಲಿ 1852 ರಿಂದ ಹನ್ನೆರಡು ವರ್ಷಗಳ ಕಾಲವಿದ್ದ ಕೊಡಗಿನ ರಾಜಕುಮಾರಿ ಗೌರಮ್ಮನ ವಿಷಯವಾಗಿ ಕಾಲ್ಪನಿಕವಾಗಿ ಹೇಳಲ್ಪಟ್ಟಿದೆ. ಇದರಿಂದ ನಿದರ್ಶನಾರ್ಥವಾಗಿ ಈ ಕೆಳಗಿನ ಪಂಕ್ತಿಗಳನ್ನು ಎತ್ತಿಕೊಡಲಾಗಿದೆ:—

> "ಗೌರಮ್ಮನ ಹತ್ತರ ಸೇವಿಸಿ ಪರಾಮರ್ಶ ಮಾಡಲಿಕ್ಕೆ ಬಹಳ ಪ್ರೀತ್ಯಾಸಕ್ತಳಾದ ಹನ್ನಳೆಂಬ ಸೇವಕಿ ಇದ್ದಳು. ಅವಳನ್ನು ಆಕೆ ಸೇವಕಿಯಂತಲ್ಲಾ, ಸಖಿಯಂತೆಯೇ ಎಣಿಸಿ ಸ್ನೇಹಿಸುತಿದ್ದಳು. ಆದರೆ ಪ್ರೀತ್ಯಾಸಕ್ತಿಯೂ ನಂಬಿಕೆಯೂ ಮಾತ್ರವಲ್ಲಾ. ಸದ್ಭಕ್ತಿಯೂ ಸದಾಚಾರವೂ ಹನ್ನಳಲ್ಲಿ ಶೋಭಿಸುವಂಥಾದಾಗಿತ್ತು. ಹೊತ್ತು ಮೂಡದ ಕಾಡಿನಂತಾಗಿದ್ದ ತನ್ನ ಯಜಮಾನಿಯ ಹೃದಯವು ಸೂರ್ಯನ ಪ್ರಕಾಶದಿಂದಲೂ ಪುಷ್ಪ ಫಲಭರಿತ ಗಿಡವೃಕ್ಷಾದಿಗಳಿಂದಲೂ ಮೆರೆಯುವ ರಾಜವನದಂತಾಗಿ ವಿಶ್ವಾಸ, ತಾಳ್ಮೆ, ಭಕ್ತಿ ಮೊದಲಾದ ಗುಣಗಳಿಂದ ಶೋಭಿಸುವಂಥಾದ್ದಾಗಬೇಕೆಂದು ಬಹುಶಾ ದೇವರನ್ನು ಪ್ರಾರ್ಥಿಸಿ ಬೇಡಿಕೊಳ್ಳುತಿದ್ದಳು. ತನ್ನ ಯಜಮಾನಿ ಓದಿಸಿ ಲಾಲಿಸುತಿದ್ದ ಕಥೆಗಳಿಗೆ ಬದಲಾಗಿ ತಾನು ಆಕೆಗೆ ಎಂದಾದರೂ ಬೈಬಲೆಂಬ ಸದ್ವೇದದಲ್ಲಿ ಓದಿ ಹೇಳಬೇಕೆಂಬುದು ಬಹುದಿನದಿಂದ ಅವಳ ಅಭಿಲಾಷೆಯಾಗಿತ್ತು. ..................ಒಂದಾನೊಂದು ದಿನ ಗೌರಮ್ಮ ಹನ್ನಳಿಗೆ ಕರದು ಹೇಳಿದ್ದೇನೆಂದರೆ, "ಪ್ರೀಯಳೆ, ಬಹಳ ದಿವಸ ಎಲ್ಲಿಗಾದರೂ ಹೋಗಿ ಮೋದಿಸಿಕೊಳ್ಳಲಿಕ್ಕೆ ನಿನಗೆ ಒಂದು ಕ್ಷಣವಾದರೂ ಪುರುಸತ್ತು ಸಿಕ್ಕಲಿಲ್ಲಾ. ನಿತ್ಯಾ ರೋಗಿಯಾದ ನನ್ನ ಹತ್ತಿರ ಇರಲಿಕ್ಕೆ ನಿನಗೆ ಬೇಸರಾಗದೊ?", ಎಂದನ್ನಲು ಹನ್ನಳು "ಬೇಸರವೆಂದರೇನು? ನಿಮ್ಮ ಹತ್ತಿರವಿರುವುದು ನನಗೆ ಸುಖವೇ", ಎಂದು ಪ್ರತ್ಯುತ್ತರವಾಗಿ ಹೇಳಿದಳು."

**೮. ವಿವಿಧ ಬಗೆಯ ಪಠ್ಯಪುಸ್ತಕಗಳೂ ಭಾಷಾಂತರಗಳೂ :—**

ಕಳೆದ ಶತಮಾನದಲ್ಲಿ ಪ್ರಕಟವಾದ ಯಾವೊಂದು ಪಠ್ಯಪುಸ್ತಕವನ್ನು ನೋಡಿದರೂ ಅವು ಬರೇ ಶಾಲೆಗಳಲ್ಲಿ ಉಪಯೋಗಿಸಲ್ಪಡುವುದಕ್ಕಲ್ಲದೆ ವಿದ್ಯಾರ್ಥಿಗಳಿಗೂ ಹಿರಿಯರಿಗೂ ಲೌಕಿಕ ಜ್ಞಾನವನ್ನರಿಯಲು ಬೇಕಾದಂಥಾ ಹಲವು ವಿಚಾರಗಳಿಂದ ಕೂಡಿರುತಿದ್ದುವು. ಶಾಲೆಗಳಲ್ಲಿ ಉತ್ತಮ ಗ್ರಂಥಭಂಡಾರಗಳು ಇಲ್ಲದಿದ್ದ ಆ ಕಾಲದಲ್ಲಿ ಅಂದಿನ ಶಿಕ್ಷಣತಜ್ಞರು ಪಠ್ಯಪುಸ್ತಕಗಳ ಮೂಲಕವಾಗಿಯೇ ವಿಚಾರಜ್ಞಾನವನ್ನರಿಯುತಿದ್ದರು. ಮಾಧ್ಯಮಿಕ ಶಾಲೆಗಳಿಗೆ ಇಂಗ್ಲಿಷ್ ಪುಸ್ತಕಗಳನ್ನು ನೇರವಾಗಿ ಇಂಗ್ಲೆಂಡಿನಿಂದಲೇ ತರಿಸಿ ಶಾಲೆಗಳ ಗ್ರಂಥಭಂಡಾರಗಳನ್ನು ವಿಸ್ತರಿಸಿದರು. Weber's Dictionary, Encyclopaedia Britanica ಗಳಂಥಾ ಬೃಹದ್ಗ್ರಂಥಗಳು ಅಂದಿನ ಜನರು ಹೊಸತಾಗಿ ಕಂಡ ಉದ್ಭಾವು ಕೃತಿಗಳಾಗಿದ್ದುವು.

ನೂರಾರು ಸಹಸ್ರಾರರಂತೆ ಇಂಗ್ಲಿಷ್ ಕಾದಂಬರಿಗಳೂ ಕತೆಗಳೂ ವ್ಯಾಕರಣ ಗ್ರಂಥಗಳೂ ಅಂದಿನ ಶಾಲಾ ಕಾಲೇಜುಗಳಲ್ಲಿ ತುಂಬಿದಾಗ ದೇಶೀಯ ಸಾಹಿತ್ಯವೆಲ್ಲವೂ ಅದೇ ದಾರಿಯನ್ನು ಹಿಡಿದು ನವೀನ ಕೃತಿಗಳ ರೂಪದಲ್ಲಿ ಹೊರಬರಲಾರಂಭವಾದುವು.

ಶಾಲಾ ಪಠ್ಯಪುಸ್ತಕಗಳ ರಚನೆಯ ಮೂಲಕವಾಗಿಯೇ ಪಾಶ್ಚಾತ್ಯರು ದೇಶೀಯ ಭಾಷೆಗಳ ಸಾಹಿತ್ಯದ ಬೆಳವಣಿಗೆಗೆ ಮೂಲಪುರುಷರಾದರು. 1880 ರಿಂದೀಚೆಗೆ ಹೊರಟ ಅಂಥಾ ಪುಸ್ತಕಗಳು ಉತ್ತಮ ಸಾಹಿತ್ಯ ಕೃತಿಗಳಾಗಿವೆ. Zeigler, ಮತ್ತು Rice ಇವರು ಒಡಗೂಡಿ ಪ್ರಕಟಿಸಿದ 'ಕನ್ನಡ ಶಾಲಾವ್ಯಾಕರಣ'ವು ದೇಶೀಯ ಪಂಡಿತರಿಗೂ ಅಂಥಾ ಕೃತಿಗಳನ್ನು ರಚಿಸುವ ಸ್ಫೂರ್ತಿಯನ್ನಿತ್ತಿತು. ಅಂದಿನ ಶಾಲಾ ಅಧಿಕಾರಿಗಳಾದ J. Campbell. J. F. Liester, Edmund Marsden ಮೊದಲಾದವರು ಉತ್ತಮ ಗ್ರಂಥಗಳನ್ನು ಇತರರಿಂದ ಬರೆಯಿಸಿ ಪ್ರೋತ್ಸಾಹಿಸಿದರು. ದೇಶೀಯ ಕತೆಗಳು, ಲಾವಣಿಗಳು, ಹಾಡುಗಳು ಮುಂತಾದುವನ್ನೆಲ್ಲಾ ಉತ್ತಮ ಸಾಹಿತ್ಯವಾಗಿ ಮಾರ್ಪಡಿಸಿ ಪ್ರಚಾರಪಡಿಸಿದರು.

ಯಾವ ಜಿಲ್ಲೆಯ, ನಾಡಿನ. ಯಾ ಗ್ರಾಮದ ಲಾವಣಿಗಳು ಮತ್ತು ಜನಪದ ಹಾಡುಗಳೇ ಆಗಲಿ, ಅವೆಲ್ಲವನ್ನೂ ಅವರು ತಮ್ಮ ಐರೋಪ್ಯಾ ಭಾಷೆಗಳಿಗೂ ಇಳಿಸಿದರು. ಚಿತ್ರದುರ್ಗ, ರಾಯಚೂರು, ಬೆಳಗಾವಿ, ಬಿಜಾಪುರ ಇತ್ಯಾದಿ ಭಾಗಗಳಲ್ಲಿ ಹಾಡಲ್ಪಡುತಿದ್ದ ಅಂದಿನ ವೀರರನ್ನು ಕುರಿತಾದ ಹಾಡುಗಳನ್ನೂ ಸಮರ ಗಾನಗಳನ್ನೂ ಅವರು ಭಾಷಾಂತರಿಸಿದ್ದರು. ಈ ದೇಶದಿಂದ ತಮ್ಮ ಭಾಷೆಗಳ ಮೂಲಕವಾಗಿ ಯುರೋಪಿಗೆ ಕೊಂಡೊಯ್ದ ಅಂಥಾ ರಚನೆಗಳು ಹಲವು ಇವೆ. ಉದಾಹರಣೆಗೆ ನರಗುಂದದ ಬಾಬಾಸಾಹೇಬನು ಬ್ರಿಟಿಷರೊಡನೆ ಕಾದಾಡಿದಾಗ ಅದನ್ನು ಕುರಿತು ಕಟ್ಟಿದ ಲಾವಣಿಯೊಂದನ್ನು ಅಂದಿನ ಐರೋಪ್ಯಾ ಯೋಧನು ಇಂಗ್ಲಿಷ್‌ಗೆ ಭಾಷಾಂತರಿಸಿದನು. ಅದನ್ನು George de Jacob ಇವನು ತನ್ನ ಲಾವಣಿಗಳ ಸಂಕಲನದಲ್ಲಿ ಕೊಟ್ಟಿದ್ದುದರ ಕೆಲವು ಪಂಕ್ತಿಗಳು ಹೀಗಿವೆ.—

"Many valiant lords with one mind there came,
To over-flowing with anger was filled their frame
Gnashing their teeth they said, "At which place must
we aim ?
We have misgivings about the fort, Nargunda is its
name."

ಇಂಥಾ ಭಾಷಾಂತರಗಳು ಇಂಗ್ಲಿಷ್‌ನಲ್ಲಿ ಮಾತ್ರವಲ್ಲ; ಜರ್ಮನ್ ಮತ್ತು ಫ್ರೆಂಚ್ ಭಾಷೆಗಳಲ್ಲೂ ಇವೆ. ಆದರೆ ಆ ವಿದೇಶೀಯ ಭಾಷೆಗಳಿಂದ ಎಷ್ಟು ಭಾರತೀಯ ಭಾಷೆಗಳಿಗಿಳಿಸಲ್ಪಟ್ಟಿವೆ ಎಂಬುದನ್ನೂ ಊಹಿಸಿದಾಗ ಅವು ಏನೂ ಇಲ್ಲ ಅಥವಾ ಬಹು ಅಲ್ಪವೆಂದರೂ ಸಲ್ಲುವುದು. ಹಲಗಲಿಯ ಬೇಡರ ಪರಾಕ್ರಮವನ್ನು ಕುರಿತು ಇರುವ ಜನಪದ ಹಾಡಿನ ಇಂಗ್ಲಿಷ್ ಭಾಷಾಂತರದ ಒಂದು ಭಾಗವು ಹೀಗಿದೆ.—

"Our hands are of fighting men, not of the bangle-wristed women,
Our arms are our very god, the thought of yielding them is mad,"
So when the white Sahib did find the men were of resolute mind,
He ordered his troops quickly to march on the village, Halagaly."

೯. ಫರ್ನೆಂಡಿಸ್ ಕಿಟ್ಟೆಲ್ ಇವನಿಂದ ಹಲವು ಪಠ್ಯಪುಸ್ತಕಗಳು :—

Rev. Fernandiz Kittel ಇವನ ಜೀವನ ಪರಿಚಯವನ್ನು ಹಿಂದಿನ ಭಾಗದಲ್ಲಿ ಕೊಡಲಾಗಿದೆ. ಇವನು ರಚಿಸಿದ ಹಲವು ಬೈಬಲ್ ಕೃತಿಗಳು ಮತ್ತು ಬೈಬಲ್ ಕವಿತೆಗಳನ್ನೂ ಕುರಿತು ಹೇಳಲಾಗಿದೆ. ಆದರೆ ಇವನ ಕನ್ನಡ ಸೇವೆಯು ಅಷ್ಟರಿಂದಲೇ ಮುಗಿಯಲಿಲ್ಲ. 1852 ರಲ್ಲಿ ಭಾರತಕ್ಕೆ ಬಂದು 1855 ರಲ್ಲಿ ಕನ್ನಡದಲ್ಲಿ ಬೈಬಲನ್ನು ಬರೆಯಲು ಆರಂಭಿಸಿ 1858 ರಲ್ಲಿ ಕನ್ನಡದಲ್ಲಿ 'ಸಣ್ಣ ಕರ್ಣಾಟಕ ಕಾವ್ಯಮಾಲೆ' ಅಥವಾ Minor Poetical Anthology' ಎಂಬುದಾಗಿ ತನ್ನದೇ ಆದ ಷಟ್ಪದೀ ಕವನಗಳಿಂದೊಡಗೊಂಡ ಚಿಕ್ಕ ಪುಸ್ತಕವನ್ನು ರಚಿಸಿದ ಇವನು ಸಾಮಾನ್ಯ ವರ್ಗದ ಪಂಡಿತನಾಗಿರಲಿಲ್ಲ. ಆಗ ಅವನಿಗೆ ಬರೀ ಇಪ್ಪತ್ತಾರು ವರ್ಷ ಪ್ರಾಯವಾಗಿತ್ತು. 122 ಪುಟಗಳ ಆ ಪುಸ್ತಕದಲ್ಲಿ ತನ್ನ ಕವನಗಳ ಜತೆಗೆ ವೃತ್ತ. ಕಂದ, ತ್ರಿಪದಿ ಷಟ್ಪದೀ ಕಾವ್ಯ ಭಾಗಗಳನ್ನೂ ಆರಿಸಿದನು. ಬೈಬಲ್ ಪುರಾಣವನ್ನು ಬರೆಯುವ ನೆವದಿಂದ ತಾನೇ ಷಟ್ಪದೀ. ಕಂದ ಮೊದಾಲಾದುವುಗಳನ್ನು ಬರೆದನು. ಈ ಕವನ ಸಂಕಲನವು ಶಾಲೆಗಳಲ್ಲಿ ಉಪಯೋಗಿಸಲ್ಪಡಲು ತಕ್ಕದ್ದಾಗಿತ್ತು. ಇವನ ಪದ್ಯ ರಚನೆಗೆ ಹಿಂದೆಯೇ ಉದಾಹರಣೆಗಳನ್ನು ಕೊಡಲಾಗಿವೆ. ಇಲ್ಲಿ ಇನ್ನೊಂದು ಭಾಮಿನೀ ಷಟ್ಪದಿಯನ್ನು ಪುನಃ ಕೊಡಲಾಗಿದೆ.—

'ಹೆದರ ಬೇಡಿರಿ ದೊಡ್ಡ ಮೋದವ। ವದಿಸ ಬಂದೆನು ಸಕಲ ಜನರೊಡೆ।
ಕೆದುರ ಬೇತುಲೆಹೇಮಿನಲ್ಲೊಗದಿಹನು ರಕ್ಷಕನೂ॥
ಇದರ ಗುರ್ತನ್ನೊರವೆ ಛತ್ರದ। ಮೃದುವವಲ್ಲದ ಗೋದ್ಲಿ ಹುಲ್ಲಲಿ।
ಮುದದ ಶಿಶುವನು ಬಟ್ಟೆ ಸುತ್ತಿದದಾಗಿ ಕಾಣುವಿರೀ॥

[ಸೂ:—ಮೋದ-ಸಂತೋಷ; ಬೇತುಲೆಹೇಮು-ಯೂದಿದೇಶದ ಒಂದು ಪಟ್ಣ; ಒಗದಿಹನು-ಹುಟ್ಟಿದ್ದಾನೆ; ಒರೆಯುವದು-ಹೇಳುವುದು.]

ಹಿಂದೆ ಹೇಳಿದಂತೆ ಕನ್ನಡ ಅಥವಾ ಭಾರತೀಯ ಭಾಷೆಗಳನ್ನಾಡುವವರು ಇಂಗ್ಲಿಷ್‌ನಲ್ಲಿ ಕವನಗಳನ್ನು ಬರೆದರೆ ಹೇಗೋ ಅದೇ ರೀತಿಯಲ್ಲಿ ವಿದೇಶೀಯನೊಬ್ಬನ ಕನ್ನಡ ಕವನವೂ ಇದೆ. Rev. Kittel ಇವನು ಇಂಥಾ ರಚನೆಗಳ ಮೂಲಕ ತಾನು ಮುಂದಕ್ಕೆ ದೊಡ್ಡ ವಿದ್ವಾಂಸನಾಗಲಿರುವ ಪ್ರಯೋಗವನ್ನು ನಡೆಸಿದ್ದಾನೆ. ಈ

ಕಾವ್ಯ ಮಾಲಿಕೆಯಲ್ಲಿ ಒಂದು ಶಬ್ದಕೋಶವನ್ನೂ ಛಂದೋ ಶಾಸ್ತ್ರವನ್ನು ಕುರಿತಾಗಿ ಇಂಗ್ಲಿಷ್‌ನಲ್ಲಿ ಒಂದು ಮುನ್ನುಡಿಯನ್ನೂ ಕೊಟ್ಟಿದ್ದಾನೆ.

1863 ರಲ್ಲಿ F. Kittel ಇವನು ಬರೆದ 'ಪರಮಾತ್ಮಜ್ಞಾನ' ಎಂಬ ಇನ್ನೊಂದು ಚಿಕ್ಕ ಪುಸ್ತಕದಲ್ಲಿ ಅವನು ತನ್ನ ಪಾಂಡಿತ್ಯವನ್ನು ಪ್ರದರ್ಶಿಸಿದ್ದಾನೆ, ಹಿಂದೂ ಮತ್ತು ಕ್ರೈಸ್ತಮತಗಳ ವಿಚಾರವಾಗಿ ತುಲನಾತ್ಮಕ ವಿಮರ್ಶೆಯನ್ನು ನಡೆಸಿದ್ದಾನೆ. ಹಲವು ಸಂಸ್ಕೃತ ಶ್ಲೋಕಗಳನ್ನು ಅಲ್ಲಲ್ಲಿ ಉದಾಹರಿಸಿದ್ದಾನೆ, Morris Henry ಇವನು ಬರೆದ History of England ಇವನು 1864 ರಲ್ಲಿ ಕನ್ನಡಕ್ಕೆ ಭಾಷಾಂತರಿಸಿದನು. 423 ಪುಟಗಳ ಈ ಕನ್ನಡ ಪಠ್ಯಪುಸ್ತಕವನ್ನು ಮದ್ರಾಸು ಸರಕಾರವು ಪ್ರಕಟಿಸಿತು. ಚರಿತ್ರೆ ಪಾಠಕ್ಕೆ ಈ ಗ್ರಂಥವು ಹಲವು ವರ್ಷಗಳ ಕಾಲ ಉಪಯೋಗಿಸಲ್ಪಟ್ಟಿತ್ತು. Rev. Kittel ಇವನು ಬರೆದ ಮೊದಲನೇ ಕನ್ನಡ ವ್ಯಾಕರಣ ಪಠ್ಯಪುಸ್ತಕವು 104 ಪುಟಗಳ 'ಸಂಕ್ಷೇಪ ವ್ಯಾಕರಣ' ಎಂಬುದಾಗಿ ಹೊರಬಂತು. 1865 ರಲ್ಲಿ ಬರೆದ ಈ ಪುಸ್ತಕವನ್ನು ಅವನು ಪರಿಷ್ಕರಿಸಿ "ವ್ಯಾಕರಣ ಸೂತ್ರಗಳು" ಎಂಬುದಾಗಿ 184 ಪುಟಗಳ ಉತ್ತಮ ಗ್ರಂಥವಾಗಿ ಪ್ರಕಟಿಸಿದನು.

### ೧೦. ಕಿಟ್ಟೆಲ್ ಇವನಿಂದ 'ಕರ್ಣಾಟಕ ಕಾವ್ಯಮಾಲಿಕೆ'ಗಳು :—

ಕಳೆದ ಶತಮಾನದಲ್ಲಿ ಕೆಲವು ಕನ್ನಡದ ಕವಿಗಳು ಸಾಮಾನ್ಯವಾಗಿ ಬರೆಯುತಿದ್ದ ಶರ, ಕುಸುಮ, ಭಾಮಿನೀ, ವಾರ್ಧಕ ಷಟ್ಪದಿಗಳಲ್ಲಿಯೇ Rev. F. Kittel ಇವನು ತನ್ನ ಬೈಬಲ್ ಕವಿತೆಗಳನ್ನು ರಚಿಸಿದನು. ಈ ವಿದೇಶೀಯನ ಕವನಗಳು ಕೇವಲ ಸತ್ವವಿಲ್ಲದೆ ಸೊರಗಿಪಂತಿವೆ. ಕೆಲವು ಪದ್ಯಗಳನ್ನು ಪ್ರಾಸಾಕ್ಷರಗಳ ಸಹಿತವಾಗಿ ಬಹು ಪ್ರಯಾಸದಿಂದ ಹೆಣೆದಿದ್ದಾನೆ. ಅವನು ಮೊದಲು ರಚಿಸಿದ "ಸಣ್ಣ ಕರ್ಣಾಟಕ ಕಾವ್ಯಮಾಲೆ"ಯಿಂದ ಒಂದು ವಾರ್ಧಕ ಷಟ್ಪದಿಯನ್ನು ಇಲ್ಲಿ ಉದಾಹರಿಸಲಾಗಿದೆ.—

> "ಪಯಣಕ್ಕೆ ಹೊರಟೇಸುವಡಿಗೆರಗಿಯಧಿಕಾತಿ
> ಶಯದೊಳ್ಳೆ ಬೋಧಕನೆ ನಾ ನಿತ್ಯ ಜೀವವನು
> ಬಯಸುತ್ತಲದಕೇನು ಮಾಡಬೇಕೆಂದವನನೊಬ್ಬಯುವನಾಗ ಕೇಳ್ದಾ ।
> ನಯನವಿಟ್ಟೇಸುವವಗೊಳ್ಳೆಯವನೆಂದೆನುತ
> ಸುಯಥಾರ್ಥ ಮನದಿಂದ ಹೇಳಿದ್ದಿಯೇನಯ್ಯ
> ದಯೆಯುಳ್ಳ ದೇವೊಬ್ಬನೇ ಹೊರ್ತು ಯಾರೊಳ್ಳೆಯವರಿಲ್ಲವೆಲ್ಲೆಲ್ಲಿಯೂ.

[ಸೂ :—ಯುವ–ಯೌವನಸ್ಥ ; ನಯನ–ಕಣ್ಣು ; ಸುಯಥಾರ್ಥ–ಅರ್ಥ ಚಂದಾಗಿ ಗ್ರಹಿಸಿಕೊಂಡ ;—ಇದರ ಅರ್ಥವೇನಂದರೆ 'ನೀನು ಮಾತಾಡಿಸುವ ನಾನು ದೇವರೆಂದು ತಿಳಿದುಕೊಳ್ಳದಿದ್ದರೆ ನನ್ನನ್ನು ಒಳ್ಳೆಯವನೆಂದು ಹೇಳುವದ್ಯಾಕೆ] "

Rev. Kittel ಇವನದು ಇದು ಮೊದಲನೇ ಪ್ರಯತ್ನ. ಅದರನಂತರ 1874 ರಲ್ಲಿ

ಅವನ ಇದೇ ' ಕಾವ್ಯಮಾಲೆ ' ಯು ಇನ್ನಷ್ಟು ಪರಿಷ್ಕೃತವಾಗಿ ಮುದ್ರಣವಾಯಿತು. ಈ ಹದಿನೈದು ವರ್ಷಗಳ ಅವಧಿಯಲ್ಲಿ ಅವನು ಕನ್ನಡ ಭಾಷೆ, ವ್ಯಾಕರಣ. ಛಂದಸ್ಸು ಇತ್ಯಾದಿಗಳಲ್ಲಿ ಮಹಾ ತಜ್ಞನೆನಿಸಿದನು. 1877 ರಲ್ಲಿ ಅವನ " ಕನ್ನಡ ಕಾವ್ಯ ಮಾಲೆಯು "ಯು 400 ಪುಟಗಳಷ್ಟು ದೊಡ್ಡದಾದ ಗ್ರಂಥವಾಗಿ ಮುದ್ರಣವಾಯಿತು. ಇದರಲ್ಲಿ ಹಲವು ಪ್ರಾಚೀನ ಕನ್ನಡ ಕವಿಗಳ ಉತ್ತಮ ಪದ್ಯಭಾಗಗಳನ್ನು ಹೆಕ್ಕಿ ಸೇರಿಸಿದನು; ಅಲ್ಲದೆ ಇನ್ನಷ್ಟು ವಿವರವಾಗಿ ಎಲ್ಲಾ ತರಹದ ಪದ್ಯಗಳ ಛಂದಸ್ಸನ್ನೂ ವಿವರಿಸಿದನು. ಎಲ್ಲಾ ಕಠಿಣ ಶಬ್ದಗಳ ಅರ್ಥವನ್ನು ಕೊಟ್ಟು ಸುದೀರ್ಘವಾದ ಶಬ್ದಕೋಶವನ್ನೂ ಕೊಟ್ಟನು. ಪದಗಟ್ಟುಗಳನ್ನು ಆಯಾ ಪುಟದಲ್ಲಿ ವ್ಯಾಕರಣ ವಿವರಣೆಯೊಡನೆ ವಿವರಿಸಿದನು.

ಅದೇ ವರ್ಷ ಎಂದರೆ 1877 ರಲ್ಲಿ Rev. Kittel ಇವನು " ಕರ್ಣಾಟಕ ಕಾವ್ಯಮಂಜರಿ "ಯನ್ನು ಪ್ರಕಟಿಸಿದನು. ಇದನ್ನು " ಕನ್ನಡ ಕವಿತ್ವದ ಮೊದಲನೇ ಪುಸ್ತಕವು " ಎಂದು ಕರೆದಿದ್ದು ಇದನ್ನು ಪ್ರಾಥಮಿಕ ದರ್ಜೆಗಳಿಗೆ ಪಠ್ಯಪುಸ್ತಕವಾಗಿ ಉಪಯೋಗಿಸಲ್ಪಟ್ಟಿತು. ಇದರಲ್ಲೂ ಅವನು ಹಳೆಗನ್ನಡ ಕಾವ್ಯಗಳಿಂದ ಸೊಗಸಾದ ಪದ್ಯಗಳನ್ನು ಆರಿಸಿದನಲ್ಲದೆ ತನ್ನದೇ ಆದ ಷಟ್ಪದೀ ಪದ್ಯಗಳ ಸಹಿತವಾಗಿ ಟೀಕೆ, ನಿಘಂಟುಗಳಿತ್ಯಾದಿಗಳಿಂದ ಉತ್ತಮ ಸಂಕಲನವಾಗಿ ಹೊರತಂದನು. ಹೀಗೆ 60 ಪುಟಗಳಿಂದ ಹಿಡಿದು 400 ಪುಟಗಳವರೆಗಿನ ವಿವಿಧ " ಕಾವ್ಯಮಾಲೆ " ಗಳನ್ನು ರಚಿಸಿ ಮತ್ತು ಸಂಪಾದಿಸಿದ Dr. Kittel ಇವನ ಈ ಪುಸ್ತಕಗಳು ಅಂದಿನ ಶಾಲೆಗಳಲ್ಲಿ ಬೇರೆ ಬೇರೆ ತರಗತಿಗಳಿಗೆ ಪಠ್ಯಪುಸ್ತಕಳಾಗಿ ಉಪಯೋಗಿಸಲಾಗಿತ್ತು.

ಅವನ " ಕಾವ್ಯ ಮಾಲೆ " ಯು 1874 ರಲ್ಲಿ ಎರಡನೇ ಬಾರಿಗೆ ಮುದ್ರಣವಾದಾಗ ಅದರ ಮುನ್ನುಡಿಯಲ್ಲಿ ಹೀಗೆ ಹೇಳಿದ್ದನು.—

> " The present volume of selections from Kannada poetry, has been prepared not only with regard to the want of schools but also with the aim to cultivate a taste for good poetry in the reader. It comprises a great many subjects that are dear to poets, some of which have been introduced twice or thrice with the object of showing the manner in which they have been treated by different authors."

**೧೧. ಕಿಟ್ಟೆಲ್ ಇವನ ಛಂದೋಶಾಸ್ತ್ರ ಜ್ಞಾನಕ್ಕೆ ನಿದರ್ಶನಗಳು :—**

Rev. Kiitel ಇವನು ಸಂಪಾದಿಸಿ ಪ್ರಕಟಿಸಿದ ಈ ನಾಲ್ಕಾರು ' ಕಾವ್ಯ ಮಾಲಿಕೆ ' ಮತ್ತು ' ಕಾವ್ಯಮಂಜರಿ 'ಗಳಲ್ಲಿ ಕನ್ನಡ ಛಂದೋಶಾಸ್ತ್ರವನ್ನು ಹತ್ತಿಪ್ಪತ್ತು ಪುಟಗಳಲ್ಲಿ ಹೇಳಿ ವಿವರಿಸದಿದ್ದರೆ ಅವನಿಗೆ ಸಮಾಧಾನವಾಗಲೊಲ್ಲದು. ಉದಾಹರಣೆಗೆ ಪ್ರಾಸದ ವಿಷಯವಾಗಿ ಅವನು ಹೀಗನ್ನುತ್ತಾನೆ.—

> " ಪ್ರಾಸ ಎಂಬುದಕ್ಕೆ ' ಪ್ರ ' ಅಂದರೆ ಮುಂದೆ, ಮತ್ತು ' ಅಸ್ ' ಅಂದರೆ ಹಾಕುವದು ಎಂಬುದು ಮೂಲ. ಪ್ರಾಸ ಅಂದರೆ ಮುಂದೆ ಹಾಕುವಿಕೆ.

ಒಂದೊಂದು ಪದದ (ಚರಣದ) ಮುಂದುಗಡೆಯಲ್ಲಿ (ಅದರದರ ಆರಂಭದಲ್ಲಿ) ಇರುವ ಗಣದ ೨ನೇ ಹ್ರಸ್ವವಾದ ವ್ಯಂಜನವನ್ನಾಗಲೀ, ಒತ್ತು ವ್ಯಂಜನವನ್ನಾಗಲೀ ಪೂರ್ಣ ಶ್ಲೋಕದಲ್ಲಿ ಒಂದೇ ಮಾಡಿ ಇಡುವುದು ಪ್ರಾಸವಾಗಿದೆ.

"ಆ ವ್ಯಂಜನದ ಹಿಂದಿನ ಅಕ್ಷರವು ಹ್ರಸ್ವವಾಗಲೀ (No. 1, 3,) ದೀರ್ಘವಾಗಲೀ (No. 2, 6) ಇರಬಹುದು.

"ಪ್ರಾಸಕ್ಕಾಗಿ ಆ ೨ನೇ ಹ್ರಸ್ವವಾದ ವ್ಯಂಜನವನ್ನಾಗಲೀ ಒತ್ತು ವ್ಯಂಜನವನ್ನಾಗಲೀ ಪೂರ್ತಿ ಶ್ಲೋಕದಲ್ಲಿ ಒಂದೇಮಾಡಿ ಇಡುವದೆಂತ ಹೇಳಿದೆವು; ಹ್ಯಾಗಂದರೆ ಹ್ರಸ್ವವಾದ ಆ ವ್ಯಂಜನವನ್ನಲ್ಲದೆ ಅವವುಗಳ ಹ್ರಸ್ವವಾದ ಸ್ವರವನ್ನು ಲಕ್ಷಿಸುವುದೇ ಇಲ್ಲ. ಅ, ಇ ಉ. ಎ. ಒ. ಎಂಬ ಸ್ವರಗಳಲ್ಲಿ ಯಾವವಾದರೂ ಆ ವ್ಯಂಜನಗಳಲ್ಲಿ ತೋರಬಹುದು...."

F. Kittel ಇವನು ತನ್ನ 'ಕಾವ್ಯಮಂಜರಿ' ಯಲ್ಲಿ ಮತ್ತು "ದೊಡ್ಡ ಕರ್ಣಾಟಕ ಕಾವ್ಯಮಾಲೆ" ಯಲ್ಲಿ ಛಂದೋಶಾಸ್ತ್ರವನ್ನು ಇನ್ನಷ್ಟು ವಿಷದವಾಗಿ ಪ್ರಸ್ತಾಪಿಸುತ್ತಾನೆ. ದ್ವಿಪದಿಯನ್ನು ಕುರಿತು ಅವನು ಹೀಗನ್ನುತ್ತಾನೆ.---

"........ಇದರ ಗಣಗಳು ವಾರ್ಧಕ ಷಟ್ಪದಿಯ ಐದು ಮಾತ್ರೆಯವುಗಳ ಹಾಗೆಯೂ ಭಾಮಿನೀ ಷಟ್ಪದಿಯ ಮೂರು ಮಾತ್ರೆಯವುಗಳ ಹಾಗೆಯೂ ಬೀಳುತ್ತವೆ; ಮೂರು ಮಾತ್ರೆಯವುಗಳ ಒಂದೊಂದು ಪದದ ಅಂತ್ಯದಲ್ಲಿ ಕಾಣುತ್ತವೆ.

'ದಳಪನೆಂ ದನು ಪೌಜ ನೆನಿಸಿರೆನ್ ನುತ್ತಾ
(೧ನೇ ಪದ; ೧ನೇ ಗಣಸಾಲು)
ನಿಲಿಸಿದರು ವಿಧವಿಧದಿ ವಿಂಗಡಿಸಿ ಮತ್ತಾ
(೨ನೇ ಪದ; ೨ನೇ ಗಣಸಾಲು)

[ಕಡೇ ಅಕ್ಷರದ ದೀರ್ಘತ್ವವು ಹೇಳುವದರಿಂದಲೇ ಹುಟ್ಟುತ್ತದೆ.]

ಈ ರೀತಿಯಾಗಿ ವಿವಿಧ ಪದ್ಯಭಾಗಗಳ ಪ್ರಾಸ, ಗಣ, ಪ್ರಸ್ತಾರ ಇತ್ಯಾದಿಗಳನ್ನು ನಿದರ್ಶನ ಸಹಿತ ವಿವರಿಸಿ ಆ ವರೆಗೂ ಈ ಕನ್ನಡ ಭಾಷಾಶಾಸ್ತ್ರದ ಈ ಭಾಗವನ್ನು ಸುಲಭದಲ್ಲಿ ನಿರೂಪಿಸಲ್ಪಡದೇ ಇದ್ದಾಗ Rev. Kittel ಇವನು ಅದನ್ನು ಸರಳ ರೀತಿಯಲ್ಲಿ ಬರೆದು ಆ ಕೊರತೆಯನ್ನು ಪರಿಹರಿಸಿದನು. Rice, Wuerth, Zeigler, Graetor ಮೊದಲಾದವರೂ ಕಾವ್ಯ ಮಾಲಿಕೆಗಳನ್ನು ಸಂಪಾದಿಸಿ ಪ್ರಕಟಿಸಿದ್ದರಾದರೂ ಅವರೆಲ್ಲರಿಗಿಂತ Kittel ಇವನೇ ಕನ್ನಡ ಭಾಷಾಶಾಸ್ತ್ರವನ್ನು ಆಳವಾಗಿ ಅಭ್ಯಸಿಸಿ ಅದರ ಮೇಲೆ ಹಲವು ಪ್ರಾಯೋಗಿಕ ವಿವರಣೆಗಳನ್ನು ನಡೆಸಿ ಅಂದಿನ ಕನ್ನಡಿಗರ ಮುಂದೆ ಇಟ್ಟವರಲ್ಲಿ ಮೊದಲಿಗನಾದನು. ಇವನ ಈ ಬರೆವಣಿಗೆಗಳು ಮುಂದೆ ಅವನು ಸಾಧಿಸಿದಂಥಾ ಅಮೋಘ ಕೃತಿಗಳಿಗೆ ದ್ಯೋತಕವಾದುವೆಂದೂ ಹೇಳಬಹುದು.

### ೧೨. ಫರ್ನಾಂಡಿಸ್ ಕಿಟ್ಟೆಲ್ಲನ ಸಂಗೀತ ಮತ್ತು ರಾಗಜ್ಞಾನ:

Rev. Fernandiz Kittel ಇವನು ಒರ್ವ ಪ್ರತಿಭಾಶಾಲಿಯಾದ ಸಾಹಿತಿಯೆಂದೆನ್ನಬಹುದು. ಪದಗಳ ರಾಗಜ್ಞಾನವನ್ನು ಕುರಿತೂ ಅವನು ವಿಶೇಷ ವ್ಯಾಸಂಗವನ್ನು ನಡೆಸಿದ್ದಾನೆ. ತನ್ನ 'ಕಾವ್ಯಮಾಲೆ'ಗಳಲ್ಲಿ ಕರ್ಣಾಟಕ ಸಂಗೀತ ಶಾಸ್ತ್ರದಲ್ಲಿ ಹೇಳಲ್ಪಟ್ಟ ಎಲ್ಲಾ ರಾಗಗಳ ಬಗ್ಗೆ ಅನ್ವೇಷಣೆಯನ್ನು ನಡೆಸಿದ್ದಾನೆ. ಉದಾಹರಣೆಗೆ 'ಶಂಕರಾಭರಣ ರಾಗ, ಆದಿತಾಳ'—ಎಂಬುದನ್ನು ವಿವರಿಸುತ್ತಾ ಹೀಗನ್ನುತ್ತಾನೆ :—

"ಇದರ ಗಣಗಳು ೪ ಮಾತ್ರೆಯವುಗಳು; ಭಾಮಿನೀ ಷಟ್ಪದಿಯಲ್ಲಿ ಪ್ರಯೋಗಿಸಿದ ೪ ಮಾತ್ರೆಯ ಗಣಗಳ ಹಾಗೆಯೇ ಇವುಗಳನ್ನು ಕಟ್ಟಬೇಕು. 68 ನೇ ಪಲ್ಲವನ್ನೂ ಅರ್ಧ ಶ್ಲೋಕವನ್ನೂ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ :—

ವರದ ಸು/ಹೃದಯಾ/ವರದ ಸು,ಹೃದಯಾ/ ೧ನೇ ತಾಳ.
ವರದ ಸು/ಹೃದಯಾ/ಯೆನು ಮನ/ವೆ... / ೧ನೇ ಪದ ೨ನೇ ತಾಳ.
ದುರಿತ ಶ/ರಥಿಯುತ್/ತರಿಸ ಬೆ/ಕಾದರೆ/ ೩ನೇ ತಾಳ.
ಪರಮ ಸ/ತಿಯನುಡಿ/ಸಿರುಮನ/ವೆ..../ ೨ನೇ ಪದ, ೧ನೇ ಗಣಸಾಲು
೪ನೇ ತಾಳ.

ಹೀಗೆಯೇ ಈ ಪದದ ಮುಂದಿನ ಚರಣಗಳ ತಾಳ, ಗಣ ಇತ್ಯಾದಿಗಳನ್ನು ಕುರಿತು ಇನ್ನಷ್ಟು ವಿಷದವಾಗಿ ಸ್ಪಷ್ಟಪಡಿಸುತ್ತಾನೆ. ಮುಂದುವರಿಯುತ್ತಾ ರಾಗ ಮುಖಾರಿ, ಆನಂದ ಭೈರವಿ, ರಾಗ ಭೈರವಿ, ರಾಗ ಪೂರ್ವಿ ಮೊದಲಾದ ರಾಗಗಳನ್ನು ಕುರಿತು ಹೃದಯಂಗಮವಾಗಿ ವ್ಯಕ್ತಪಡಿಸಿದ್ದಾನೆ. ಉದಾಹರಣೆಗೆ 'ರಾಗ ಮಾರವಿ. ಏಕತಾಳ' ಇದನ್ನು Rev. Kittel ಇವನು ವಿವರಿಸಿದ್ದು ಈ ಕೆಳಗಿನಂತಿದೆ :—

"ಇದರ ಗಣಗಳು ರಾಗ ಶಂಕರಾಭರಣದ ಆದಿತಾಳದಂಥವುಗಳಾಗಿವೆ: ಆದರೆ ಗಣಸಾಲೂ ತಾಳವೂ ತಾಳಪೆಟ್ಟುಗಳೂ ಬೇರೆ. ಈ ಛಂದಸ್ಸಿಗೆ ನಮ್ಮ ಗ್ರಂಥದಲ್ಲಿ ದೃಷ್ಟಾಂತವಿಲ್ಲ; ಆದ್ದರಿಂದ 'ರಾವಣದಿಗ್ವಿಜಯ'ದ ಒಂದು ಶ್ಲೋಕದ ೨ನೇ ಭಾಗ ಹಾಕಿ, ಗಣಗಳನ್ನೂ ತಾಳಗಳನ್ನೂ ತಾಳಪೆಟ್ಟುಗಳನ್ನೂ ತೋರಿಸುವ :—

"(ಪನ್ನಗ) ಚಯಗಳ/ಕಟ್ಟಿದ/ ೧ನೇ ತಾಳ.
ಶ್ವಯಗಳ/ಸಹಿರಣ/ ೧ನೇ ಪದ, ೨ನೇ ತಾಳ.
ಮಯಗಳ/ಸುರಥಾ/ ೩ನೇ ತಾಳ.
ಲಯಗಳೊ/ಳುಲಿದೂ/ ೨ನೇ ಪದ, ೧ನೇ ಗಣಸಾಲು,
೪ನೇ ತಾಳ;
ನಡೆದ/ರಾಗಾ/ ‖ ಪಲ್ಲ ‖ ಒಂದು ತಾಳ!

ಸಂಗೀತ ಶಾಸ್ತ್ರದಲ್ಲಿ ಅಭಿರುಚಿಯಿರುವವರಿಗೆ ಇದೊಂದು ಉತ್ತಮ ಬರೆವಣಿಗೆಯಾಗಿ ಸುಮಾರು ತೊಂಭತ್ತು ವರ್ಷಗಳಿಗೆ ಹಿಂದೆ ಪ್ರಚಾರವಿತ್ತು. ಇದರಲ್ಲಿ ಈ ವಿದೇಶೀಯ ಸಾಹಿತಿಯು ತನ್ನ ಶಾಸ್ತ್ರೀಯ ಅನ್ವೇಷಣಾ ಕಾರ್ಯವನ್ನೂ ಬಹುವಿಧದಲ್ಲಿ ನಡೆಸಿದ್ದಾನೆಂಬುದು ಅವನ ನಿರೂಪಣಾ ಕ್ರಮದಿಂದ ವ್ಯಕ್ತವಾಗುತ್ತದೆ.

**೧೩. ರೆ॥ ಕಿಟ್ಟೆಲ್ ಇವನಿಂದ ವಿವಿಧ ಬಗೆಯ ಕನ್ನಡ ಪುಸ್ತಕಗಳು :—**

Rev. F Kittel ಇವನು 1852 ರಿಂದ ಹತ್ತುವರ್ಷಗಳ ವರೆಗೆ ಬೈಬಲ್ ಕೃತಿಗಳನ್ನೂ 1858 ರಿಂದ ಇನ್ನೊಂದು ಹತ್ತುವರ್ಷಗಳ ವರೆಗೆ ಶಾಲಾ ಪಠ್ಯಪುಸ್ತಕಗಳನ್ನೂ ಬರೆಯುತ್ತಾ ಇದ್ದು ಅನಂತರ 1865 ರಿಂದ ವಿವಿಧ ವಿಷಯಗಳ ಮೇಲೆ ಕನ್ನಡವಲ್ಲಿ ಗ್ರಂಥಗಳನ್ನು ಬರೆಯಲು ತೊಡಗಿದನು. 1870 ರ "ಯಜ್ಞತಂತ್ರ ಸುಧಾನಿಧಿ" ಎಂಬ 134 ಪುಟಗಳ ಪುಸ್ತಕದಲ್ಲಿ ಹಿಂದೂ ಮತ ಮತ್ತು ಕ್ರೈಸ್ತಮತಗಳ ಮೇಲೆ ತಕ್ಕ ವಿವೇಚನೆಯನ್ನು ನಡೆಸಿದ್ದನು. ಇವನು 1872 ರಲ್ಲಿ Indian Antiquary ಪತ್ರಿಕೆಯಲ್ಲಿ ವಿಮರ್ಶಿಸುತ್ತಾ ಒರ್ವನು ಹೀಗಂದಿದ್ದನು ;—

> "........The Indian sacrificial rites are very numerous and often exceedingly complex....... The object of this tract is purely Missionary, but the description of the Vedic rites is of general interest, and is throughout well-done . ...".

Rev. Kittel ಇವನು 1872 ರಲ್ಲಿ ಪ್ರಕಟಿಸಿದ ಕನ್ನಡ ಪಠ್ಯಪುಸ್ತಕಗಳು ಅತೀ ಉತ್ತಮ ವರ್ಗದವುಗಳಾಗಿದ್ದು ಅವು ಹಲವು ಬಾರಿ ಪುನರ್ಮುದ್ರಣವಾದುವು. 1873 ರಲ್ಲಿ 'Parables in Coorg ಎಂಬುದಾಗಿ ಕೊಡವ ನುಡಿಯಲ್ಲಿರತಕ್ಕಂಥಾ ಉತ್ತಮ ಪದಗಟ್ಟು ಮತ್ತು ಪ್ರಸಂಗಗಳನ್ನು ಸಂಗ್ರಹಿಸಿ ಒಂದು ಚಿಕ್ಕ ಕೃತಿಯನ್ನು ರಚಿಸಿದನು. ಅದರನಂತರ 1875 ರಲ್ಲಿ "ಸಹಸ್ರ ಗಾಥಾಮೃತಕಲಶ" ಎಂಬುದಾಗಿ ಕನ್ನಡ ಭಾಷೆಯಲ್ಲಿ ಪ್ರಚಲಿತವಿದ್ದ ಸುಮಾರು ೨೦೦೦ ಗಾದೆಗಳನ್ನು ಸಂಗ್ರಹಿಸಿ ಮತ್ತೊಂದು ಚಿಕ್ಕ ಕೈಪಿಡಿಯನ್ನು ರಚಿಸಿದನು. ಇಂಥಾ ಕೃತಿಗಳನ್ನೆಲ್ಲಾ ಅದೇ ಮೊದಲ ಬಾರಿಗೆ ಪಾಶ್ಚಾತ್ಯರು ರಚಿಸಿ ಪ್ರಚಾರ ಪಡಿಸಿದರೆಂಬುದನ್ನು ತಿಳಿದುಕೊಳ್ಳಬೇಕಿದೆ.

Rev. Kittel ಇವನು ಮಂಗಳೂರಿನ 'ವಿಚಿತ್ರ ವರ್ತಮಾನಸಂಗ್ರಹ' ಎಂಬ ಪತ್ರಿಕೆಯನ್ನು 1862 ರ ಕಾಲದಲ್ಲಿ ನಡೆಸಿದನಲ್ಲದೆ B. L. Rice ಇವನ 'ಅರುಣೋದಯ' ಪತ್ರಿಕೆಯ ಸಹ ಸಂಪಾದಕನಾಗಿಯೂ 1864 ರ ಕಾಲದಲ್ಲಿ ಇದ್ದನು. ಇದರಲ್ಲಿ ದೇಶದ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ವಿಷಯಗಳ ಮೇಲ ಪ್ರೌಢ ಲೇಖನಗಳನ್ನು ಬರೆದಿದ್ದನು. 1866 ರಲ್ಲಿ 'ವ್ಯಾಕರಣ ಸೂತ್ರಗಳು ಅಥವಾ A Short Grammar of Ancient Dialect ಎಂಬ 104 ಪುಟಗಳ ವ್ಯಾಕರಣ ಗ್ರಂಥವನ್ನು ಬರೆದಿದ್ದ ಇವನು 186? ರ 'ಕರ್ನಾಟಕ ವಾಗ್ವಿಧಾಯಿನಿ' ಸಾಹಿತ್ಯ ಪತ್ರಿಕೆಯಲ್ಲೂ Rice, Sanderson ಮೊದಲಾದವರೊಡನೆ

ಸೇರಿ ಕನ್ನಡ ವ್ಯಾಕರಣವನ್ನು ಧಾರವಾಹಿಯಾಗಿ ಬರೆದು ಪ್ರಕಟಿಸುವುದರಲ್ಲಿ ಸಹಾಯಕನಾದನು. 1865 ರಲ್ಲಿ ಸ್ಥಾಪನೆಯಾದ 'ವೃತ್ತಾಂತ ಬೋಧಿನಿ' ಪತ್ರಿಕೆಯಲ್ಲೂ Rev. Kittel ಇವನು ಕನ್ನಡ ಸಾಹಿತ್ಯ ಮತ್ತು ಚರಿತ್ರೆಯನ್ನು ಕುರಿತು ಲೇಖನಗಳನ್ನು ಬರೆಯುತ್ತಾ ಇದ್ದನು. Dr. A. C. Burnell ಇವನಿಗೆ ಕೊಡವ ಮತ್ತು ನುಡಿಗಳಲ್ಲಿರುವ ಕೆಲವು ಉತ್ತಮ ಪದಗಟ್ಟುಗಳನ್ನು ಸಂಗ್ರಹಿಸುವುದರಲ್ಲೂ ಸಹಾಯಕನಾದನು. 1878 ರಲ್ಲಿ 'Canarese-English Dialogues' ಎಂಬುದಾಗಿ ಮತ್ತೊಂದು ಭಾಷಾಬೋಧೆಗೆ ಉಪಯುಕ್ತವಾದ ಪುಸ್ತಕವನ್ನೂ ಬರೆದನು. ಇದೇ ವೇಳೆಗೆ ಅವನ 'ಕಾವ್ಯಮಂಜರಿ' ಮತ್ತು 'ಕಾವ್ಯ ಮಾಲೆ'ಗಳೂ ಹಲವು ಬಾರಿ ಪುನರ್ಮುದ್ರಣವಾದುವು. ಅವನ ಕೃತಿಗಳಲ್ಲಿ ಹಲವು ಮಂಗಳೂರು ಬಾಸೆಲ್ ಮಿಷನ್‌ನಲ್ಲಿಯೇ ಮುದ್ರಣವಾಗಿ ಪ್ರಕಟವಾದುವು.

### ೧೪. ಭಾಷಾಶಾಸ್ತ್ರದ ವಿಷಯವಾಗಿ ಕಿಟ್ಟೆಲ್ ಇವನ ಇಂಗ್ಲಿಷ್ ಲೇಖನಗಳು :—

Dr. Robert Caldwell ಇವನಿಗೆ ಬೇರೆ ಬೇರೆ ಭಾಷೆಗಳ ಪರಿಚಯವನ್ನು ಮಾಡಿಕೊಟ್ಟು ಅವನ ಗ್ರಂಥಕ್ಕೆ ಶಬ್ದ ಸಂಪತ್ತನ್ನು ಒದಗಿಸಿದವರಲ್ಲಿ Dr. F. Kittel ಇವನೂ ಒಬ್ಬನು. ಅಲ್ಲದೆ ಇವನು ಇತರರನ್ನು ಮೀರಿಸಿ ಹಲವು ದ್ರಾವಿಡ ಶಬ್ದಗಳ ಮೂಲ ಯಾವುದು ಎಂತೆಂಬುದನ್ನೂ ಪರ್ಯಾಲೋಚಿಸಿ 1872 ರ Indian Antiquary ಪತ್ರಿಕೆಯಲ್ಲಿ ಲೇಖನಗಳನ್ನೂ ಬರೆದನು.

Dravidian Element in Sanskrit Dictionaries ಎಂಬ ವಿಚಾರವಾಗಿ ಬರೆಯುತ್ತಾ Rev. Kittel ಇವನು ಸಂಸ್ಕೃತ ಭಾಷೆಯು ಅದೆಷ್ಟೋ ದ್ರಾವಿಡ ಭಾಷಾಶಬ್ದಗಳನ್ನು ಪಡೆದಿದೆಯೆಂಬುದನ್ನು ಸಾಧಿಸಿದ್ದಾನೆ.

> "The Aryans in adopting a Dravidian word, changed it considerably in order to suit their tongue, and whenever snch a word was imperfectly understood or negligently reproduced, the change naturally became still greater. It is more than probable that Sanskrit borrowed a number of words from the Dravidian tribe........"

ಇದಕ್ಕೆ ಉದಾಹರಣೆಯಾಗಿ ಅವನು ತುಳು, ತುಡಾ, ಕುರುಬ ಮೊದಲಾದ ಭಾಷೆಗಳಿಂದ ಹಲವು ಪದಗಳನ್ನು ಕೊಡುತ್ತಾನೆ. ಸಂಸ್ಕೃತ ಭಾಷೆಯು ಆ ಸಹಸ್ರಾರು ವರ್ಷಗಳ ಅವಧಿಯಲ್ಲಿಇತರ ಗ್ರಾಮ್ಯ ಭಾಷೆಗಳಿಂದ ನುಡಿಗಳನ್ನು ಸಂಪಾದಿಸಿದೆಯೆಂಬುದಕ್ಕೆ " ಪೆಟ್ಟಿಗೆ— ಪೇಟಿಕಾ ; ಮರ - ಮರ್ಕ ಯಾ ಮರ್ಕಟ ; ನೀರ—ನೀರ್ ಹೀಗೆ ಕೆಲವು ಶಬ್ದಗಳನ್ನು ಹೇಳುತ್ತಾನೆ. 'ಪುತ್ರ' ಎಂಬ ಪದಕ್ಕೆ ದ್ರಾವಿಡ ಪದಗಳಾದ 'ಪುದು ಪೊದಲ್, ಪುದಲ್ಲ' ಇವು ಮೂಲವೆಂದೂ, 'ಪಂಡಿತ' ಎಂಬುದಕ್ಕೆ 'ಪಣ್ಣಿದ, ಪಣ್ಣು, ಪಂತ' ಇವು ಮೂಲವೆಂದೂ ಹೀಗೆ ಹಲವು ನಿದರ್ಶನಗಳನ್ನು ಕೊಡಲಾಗಿದೆ.

Rev. F. Kittel, ಇವನ 'Numerals of the Ancient Dravidians' ಎಂಬುದಾಗಿ ಬರೆದ ಲೇಖನವು ಇನ್ನಷ್ಟು ಸ್ವಾರಸ್ಯವಾಗಿದೆ. ಚಿಕ್ಕ ಮತ್ತು ದೊಡ್ಡ ದ್ರಾವಿಡವರ್ಗದ ಎಲ್ಲಾ ಹನ್ನೆರಡು ಭಾಷೆಗಳಲ್ಲಿ ಸಂಖ್ಯಾವಾಚೀ ಪದಗಳು ಹೇಗೆ ಏಕರೀತಿಯಲ್ಲಿ ಹರಿಯುತ್ತಿವೆಯೆಂಬುದನ್ನು ಪ್ರಸ್ತಾಪಿಸುತ್ತಾ ಹೀಗನ್ನುತ್ತಾನೆ.

'ಒಂದು, ಒನ್ರು, ಒಂಜಿ, ಓರ್, ಒಮ್, ಒನ್, ಒಟ್ಟು, ಇತ್ಯಾದಿ.

ಎರಡು, ಇರಂಡು, ಇರಲ್, ರಡ್ಡು, ಇರ್, ಈರ್, ಇನ್, ಇಪ್, ಇತ್ಯಾದಿ.

ಮೂರು, ಮೂನ್ರು, ಮೂಂದು, ಮೂಜಿ, ಮುಯ್ಯು, ಮುನ್, ಮೂ, ಇತ್ಯಾದಿ.

ಎಂಟು, ಎಟ್ಟು, ಎನ್‌ಮು, ಎಮ್, ಎನ್, ಎಟ್ ಇತ್ಯಾದಿ.'

ಇದೇ ರೀತಿ ಹತ್ತು, ನೂರು, ಸಾವಿರ ಮೊದಲಾದ ಸಂಖ್ಯಾವಾಚಕ ಪದಗಳನ್ನು ಬರೆದು ವಿವಿಧ ಭಾಷೆಗಳಲ್ಲಿ ಅವುಗಳ ಪ್ರಯೋಗದಲ್ಲಿ ಇರುವ ಸಾಮ್ಯತೆಯನ್ನು ತೋರಿಸಿದ್ದಾನೆ.

F. Kittel ಇವನು 1865 ರಿಂದ ಮಡಿಕೇರಿಯಲ್ಲಿ ನೆಲೆಸಿ ತನ್ನ ಸಾಹಿತ್ಯ ಚಟುವಟಿಕೆಯನ್ನು ಮುಂದುವರಿಸಿದನು. Indian Antiquary, Evengelical Magazine, Literary Journal ಮೊದಲಾದ ಪತ್ರಿಕೆಗಳಲ್ಲೆಲ್ಲಾ ಅವನ ಲೇಖನಗಳು ಪ್ರಕಟವಾಗುತಿದ್ದುವು. 'Coorg Superstitions' ಎಂಬ ಲೇಖನದಲ್ಲಿ ಕೊಡಗಿನಲ್ಲಿ ಭೂತಪೂಜೆಯ ಹವ್ಯಾಸವನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಗುಳಿಗ, ಕುಟ್ಟಿಚಾತ, ಕಲ್ಲುರುಟಿ, ಪಂಜುರುಳಿ, ಕರಿಂಗಾಳಿ ಇತ್ಯಾದಿ ಭೂತಶಕ್ತಿಗಳ ಆರಾಧನೆಯನ್ನು ಚಾರಿತ್ರಿಕವಾಗಿ ಪರಿಶೀಲಿಸಿದ್ದಾನೆ. The Washerman Virasena ಎಂಬುದಾಗಿ ವೀರಶೈವ ಸಾಹಿತ್ಯದಿಂದ ಒಂದು ಕತೆಯನ್ನು ನಾಲ್ಕಾರು folio ಪುಟಗಳಲ್ಲಿ 1876 ರಲ್ಲಿ ಬರೆಯುತ್ತಾ ವೀರಶೈವ ಪುರಾಣವನ್ನೇ ಓದುಗರ ಮುಂದಿಟ್ಟಿದ್ದಾನೆ. The Kongu Inscriptions ಎಂಬುದಾಗಿ 1877 ರಲ್ಲಿ ಬರೆಯುತ್ತಾ ಕೊಯಮುತ್ತೂರು, ಕೊಡಗು, ಕೊಂಕಣ, ಕೊಂಗು, ಕೊಂಗು ನಾಡು ಇತ್ಯಾದಿ ಶಬ್ದಗಳ ಮೇಲೆ ವಿಮರ್ಶೆಯನ್ನು ನಡೆಸಿದ್ದಾನೆ. ಚಾರಿತ್ರಿಕವಾಗಿ ಆ ಪದಗಳನ್ನು ಪರಿಶೀಲಿಸುತ್ತಾ ಕೊಡಗಿನ ಜನಕ್ಕೆ ಅನ್ವಯವಾಗುವಂಥಾ ಈ ಒಂದು ವಿಷಯವನ್ನೂ ಹೇಳಿದ್ದಾನೆ.—

"... ....Among the Kodavas of our time there is a well-known family called the Konga house (Konganda), a secondary evidence of the Kongus over at least a portion of Coorg (Kodagu).

'ಕೊಡಗು' ಎಂಬುದರ ಮೂಲ ಯಾವುದು ಎಂಬುದಾಗಿ ಚರ್ಚಿಸುತ್ತಾ ಲಕ್ಷ್ಮಣ ತೀರ್ಥಹೊಳೆಯ ಬದಿಯಲ್ಲಿ ಲಕ್ಕುಂದ ಮತ್ತು ಕೋತೂರು ಗ್ರಾಮದ ಕಾಡುಗಳಲ್ಲಿ ಕಂಡು ಬಂದ ಮೂರು ಪ್ರಾಚೀನ ಶಿಲಾಶಾಸನಗಳನ್ನು ಕದಂಬ, ಗಂಗ ಮತ್ತು ಚೋಳರ ಕಾಲದ ಶಾಸನಗಳೊಡನೆ ತುಲನಾತ್ಮಕವಾಗಿ ಪರಿಶೀಲಿಸಿದ್ದಾನೆ. ಅವು ಕೊಂಗುನಾಡಿನ ಅರಸರ ಶಾಸನಗಳಾಗಿದ್ದಿರಬಹುದೆಂದೂ ಕನ್ನಡನಾಡಿನ ಈ ಭಾಗವು ಅವರಿಗೆ ಸೇರಿದ್ದಿರಬಹುದೆಂದೂ Rev. Kittel ಇವನು ಊಹಿಸುತ್ತಾನೆ.

## ೧೫. ದಾಸಸಾಹಿತ್ಯ ಮತ್ತು ಸಂಗೀತದ ಬಗ್ಗೆ ಕಿಟ್ಟೆಲ್ ಇವನ ಲೇಖನಗಳು :—

ಕ್ರಿ.ಶ. 1872 ರಲ್ಲಿ Rev. Kittel ಇವನು 'ಮಂಗರಾಜ ನಿಘಂಟು' ಎಂಬ ಗ್ರಂಥ ಮತ್ತು ಅದರ ಲೇಖಕನ ಬಗ್ಗೆ ಕೆಲವು ವಿಷಯಗಳನ್ನು ಮೊದಲ ಬಾರಿಗೆ ಕನ್ನಡಿಗರಿಗೆ ತಿಳಿಸಿದನು. 1873 ರಲ್ಲಿ Vaishnava Dasas of Kárnataka ಎಂಬುದಾಗಿ ಬರೆಯುತ್ತಾ ಪುರಂದರ, ಕನಕ ಮಾಧವ ವಿಠಲ, ವಿಜಯ, ವೆಂಕಟದಾಸರೇ ಮೊದಲಾದವರ ಕೃತಿಗಳನ್ನು ಸಂಗ್ರಹಿಸಿದಲ್ಲದೆ ಅವುಗಳಲ್ಲಿ ಕೆಲವನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದನು. ಪುರಂದರನ ಹಾಡು ನುಡಿಗಳು ಕೆಲವು ಹೀಗೆ ಅನುವಾದವಾಗಿದೆ.—

"All the gods are behind, Vishnu,
In charming devotion all are behind the snake-lord ;....
All the published books are behind the Bharatha,
All tress are behind the sacred Tulsi,
All the vitality is behind the wind ;
All the vows are behind Madhava's doctrine-sea;
All the various castes are behind the Brahmana,
All the excellent gifts are behind the gift of food ...
In the world all are behind the badges of honour ;
............in being called a fond devotee of Purandara Vittala."

Rev. Kittel ಇವನು 1875 ರಲ್ಲಿ 'Lingayat Legends' ಎಂಬುದಾಗಿ ಬರೆದ ಲೇಖನದಲ್ಲಿ ರಾಘವನ 'ಅನುಭವ ಶಿಖಾಮಣಿ' ಎಂಬ ಗ್ರಂಥದ ಆಧಾರದಿಂದ ಶೈವಮತ, ಚರಿತ್ರೆ ಮತ್ತು ಸಾಹಿತ್ಯದ ಬಗ್ಗೆ ಅರ್ಥಗರ್ಭಿತವಾದ ಮತ್ತು ದೀರ್ಘವಾದ ಲೇಖನವನ್ನು ಬರೆದಿದ್ದಾನೆ. ಅದೇ ವರ್ಷ Jaina, Vaishnava and Saiva Literature ಎಂಬುದಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನೇ ಹತ್ತಾರು ಪುಟಗಳಲ್ಲಿ ಸೂಕ್ಷ್ಮವಾಗಿ ನಿರೂಪಿಸಿದನು. ಇದರಲ್ಲಿ F. Kittel ಇವನು ತನ್ನ ಸಂಶೋಧನಾ ಸಾಮರ್ಥ್ಯವನ್ನು ತೋರಿಸಿದ್ದಾನೆ. ಈ ಮಹಾಪಂಡಿತನ ಸಂಗೀತ ಜ್ಞಾನವನ್ನು ಕುರಿತು ಹಿಂದೆಯೇ ಹೇಳಲಾಗಿದೆ. ನಿಜಗುಣ ಶಿವಯೋಗಿಯು ಯಾರು, ಎಂತೆಂಬುದನ್ನು ಅವನು ಆಧಾರ ಪೂರ್ವಕವಾಗಿ ಮೊದಲ ಬಾರಿಗೆ ಹೇಳಿದನು.

Kittel ಇವನು W. Strafford ಇವನ History of Music ಎಂಬ ಗ್ರಂಥದಲ್ಲಿ ಹೇಳಿದಕ್ಕನುಸಾರವಾಗಿ ಕರ್ಣಾಟಕ ಸಂಗೀತದ ರಾಗ, ತಾಳ, ಶ್ರುತಿ, ಗಮಕ ಮೊದಲಾದುವುಗಳನ್ನು ಕುರಿತು ಮತ್ತೊಂದು ಲೇಖನದಲ್ಲಿ ದೀರ್ಘ ವಾಗಿ ವಿವರಿಸಿದ್ದಾನೆ. ನಿಜಗುಣ ಶಿವಯೋಗಿಯು ವೀರಶೈವನೆಂದು ಆಧಾರ ಪೂರ್ವಕ ವಾಗಿ ಹೇಳುತ್ತಾ ಅವನ ಗ್ರಂಥರಚನಾ ನಿಬಂಧದಲ್ಲಿ "When it had become the Saka marked by ಗುಣ, ರಿತು, ಗಿರಿ, ವಿಷಯ— it was composed by Nijaguna" ಎಂಬುದಾಗಿ ತೀರ್ಮಾನಿಸಿ ದ್ದಾನೆ.

Rev. Kittel ಇವನಿಂದ ಬರೆಯಲ್ಪಟ್ಟ ಇಂಥಾ ಲೇಖನಗಳು ಹಲವಾರು ಅಂದಿನ ವಿಖ್ಯಾತ ಇಂಗ್ಲಿಷ್ ಪತ್ರಿಕೆಗಳಲ್ಲಿ ಅಲ್ಲದೆ, ವಾಗ್ವಿಧಾಯಿನಿ, ಅರುಣೋದಯ ಮತ್ತು ವೃತ್ತಾಂತ ಬೋಧಿನಿ ಕನ್ನಡ ಪತ್ರಿಕೆಗಳಲ್ಲೂ ತಾನಾಗಿಯೇ ರಚಿಸಿದ ಹಲವು ಗ್ರಂಥಗಳ ಮುನ್ನುಡಿಗಳಲ್ಲೂ ಹರಡಿಹೋಗಿವೆ. ಅವೆಲ್ಲವನ್ನೂ ಒಟ್ಟು ಸೇರಿಸಿ ಸಂಪಾ ದಿಸಿ ಪುನಃ ಪ್ರಕಟಿಸಿದ್ದಾದರೆ ಅಂದಿನ ಅಪೂರ್ವ ಸಾಹಿತಿಯೊರ್ವನ ಅಸಾಮಾನ್ಯ ವಿದ್ವತ್ತಿನ ಪರಿಚಯವು ಇಂದಿನ ಜನಾಂಗಕ್ಕೆ ಉಂಟಾಗುವುದಲ್ಲದೆ ಅವನ ಜ್ಞಾನ ಸಂಪತ್ತಿನಿಂದ ತಕ್ಕ ಪ್ರಯೋಜನವನ್ನು ಹೊಂದಬಹುದೆಂದೂ ಅನಿಸುತ್ತದೆ. Dr. J. F. Fleet ಇವನು F. Kittel ಇವನ ಬರೆವಣಿಗೆಯನ್ನು ಕುರಿತು ಹೀಗೆ ಹೇಳಿದ್ದನು.—

> "Rev. F. Kittel……was devoted to incessant earnest labour. The earlier volumes of the 'Indian Antiquary' contain a number of articles from his pen on Dravidian philology."

### ೧೬. ಕಿಟ್ಟೆಲ್ ಇವನ 'ಕನ್ನಡ ವ್ಯಾಕರಣ' ಮತ್ತು 'ಶಬ್ದಮಣಿ ದರ್ಪಣ' :—

ಕನ್ನಡ ವ್ಯಾಕರಣ ಕೃತಿಗಳನ್ನು ರಚಿಸುವುದು Rev. F. Kittel ಇವನಿಗೆ ಅಚ್ಚುಮೆಚ್ಚಾದ ಕೆಲಸವಾಗಿತ್ತು. ಅವನ ಜನಪ್ರಿಯವಾದ 'ಸಂಕ್ಷೇಪ ವ್ಯಾಕರಣ ಸೂತ್ರಗಳು' ಬರೀ 104 ಪುಟಗಳ ಚಿಕ್ಕ ಹೊತ್ತಗೆಯಾದರೂ ಉತ್ತಮ ಕೃತಿಯೆಂದು ಪ್ರಸಿದ್ಧವಾಗಿತ್ತು. ಆದರಿಂದ ಈ ಭಾಗವನ್ನು ಅವನ ನಿರೂಪಣೆಯೆಂತಿದೆಯೆಂಬುದಕ್ಕೆ ಕೊಡಲಾಗಿದೆ.—

> "ಕನ್ನಡ ಧಾತುವಿಗೆ ಹೇತುವಿನಲ್ಲಿಯೂ ಸ್ವಯಂ ಕರ್ತೃ ಪರಕರ್ತೃವಿನ ಲ್ಲಿಯೂ 'ಇಸು' ವಾಗುವದು. ಸಂಸ್ಕೃತದ ಧಾತುಗಳಿಗೆ ಸ್ವಯಂ ಕರ್ತೃವಿನ ಲ್ಲಿಯೂ ಪ್ರಯೋಜಕ ವಸ್ತುವಿನಲ್ಲಿಯೂ 'ಇಸು' ಹುಟ್ಟುವದು. 'ಇಸು' ಎಂಬುದಕ್ಕೆ ಆದೇಶವಾಗಿ ಕನ್ನಡ ಧಾತುಗಳಲ್ಲಿ ಪು, ಹು, ಚು, ಎಂದಾಗುವದು.

ಪ್ರಯೋಗ :-ಹೇತುಗೆ : ಮಾತಾ ನಗಿಸಿದಂ
ಸ್ವಯಂ ಕರ್ತೃವಿಗೆ :-ಹುಟ್ಟಿಸಿದಂ
ಪರ ಕರ್ತೃವಿಗೆ : ನುಡಿಯಿಸಿದಂ ."

1880 ರಲ್ಲಿ F. Kittel ಇವನು 106 ಪುಟಗಳ "ಸಂಸ್ಕೃತ ಸಣ್ಣ ವ್ಯಾಕರಣ" ಎಂಬುದಾಗಿ Max Mueller, Theodre Benfey ಈ ಮೊದಲಾದ ಘನ ವಿದ್ವಾಂಸರ ರಚನಾಕ್ರಮವನ್ನು ಅನುಸರಿಸಿ ಬರೆದನು. ಆನಂತರ ಅವನ "ಹಳಗನ್ನಡ ವ್ಯಾಕರಣ ಸೂತ್ರಗಳು" ಪುನಃ ಪರಿಷ್ಕೃತವಾಗಿ 184 ಪುಟಗಳಲ್ಲಿ 1889 ರಲ್ಲಿ ಪ್ರಕಟವಾಯಿತು. ಅವನ ಕಡೇದಾದ ಮತ್ತು ಮಹತ್ತಾದ ಕನ್ನಡ ವ್ಯಾಕರಣ ಗ್ರಂಥವು 1898 ರಲ್ಲಿ ಬಾಸೆಲ್ ಮಿಷನ್ ಮುದ್ರಣಾಲಯದಲ್ಲಿ ಅಚ್ಚಾಗತೊಡಗಿ 1903 ರಲ್ಲಿ ಪ್ರಕಟವಾಯಿತು. 478 demy ಪುಟಗಳ ಆ ವ್ಯಾಕರಣವು ಕನ್ನಡದಲ್ಲಿ "a Standard work" ಎಂಬುದಾಗಿ Dr. J. Fleet ಇವನು ಪ್ರಶಂಸಿಸಿದನು. ಹಳೆಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಪ್ರಯೋಗಗಳೆಲ್ಲವನ್ನೂ ಆಯಾಕಾಲದ ಕನ್ನಡ ಗ್ರಂಥಗಳಿಂದ ಉದಾಹರಿಸಿ ದೀರ್ಘವಾದ ಅನ್ವೇಷಣೆಯನ್ನೇ ನಡೆಸಿದನು. ಈ ಉದ್ಧಾಮ ವ್ಯಾಕರಣ ಗ್ರಂಥದ ರಚನೆಗೆ Benjamin Rice, Rev. Richtor ಮತ್ತು ಶಿಲಾಲಿಪಿಗಳ ಶಾಸ್ತ್ರತಜ್ಞನಾದ Dr. Edward Hultzsch ಇವರು ತುಂಬಾ ಪ್ರೋತ್ಸಾಹವನ್ನಿತ್ತರೆಂದು ಹೇಳಿದ್ದಾನೆ. ಈ ಗ್ರಂಥವನ್ನು ವಿಮರ್ಶಿಸುತ್ತಾ ಆಗ ಜರ್ಮನಿಯಲ್ಲಿದ್ದ Dr. Hultzsch ಇವನು ಹೀಗೆ ಹೇಳಿದನು.

"Dr. F. Kittel has not only explained and arranged Kesava's rules, but supplemented them with the help of existing vast literature, in old Kannada and epigraphical records in the same language ..... Dr. Kittel does not rest content with supplying of the facts of the language. Following in the foot-steps of Dr. Caldwell, he tries to ascertain the pre-historic growth of roots and inflexional forms by subjecting them to an analytical treatment .....".

ಈ ರೀತಿ ಕನ್ನಡ ವ್ಯಾಕರಣವನ್ನು ಹಲವು ಬಗೆಯಲ್ಲಿ ಬರೆದು Dr. Kittel ಇವನು ಕೃತಾರ್ಥನಾದನು. 1866 ರ 'ಸಂಕ್ಷೇಪ ವ್ಯಾಕರಣ' ಮತ್ತು 1870 ರ 124 ಪುಟಗಳ 'ಶಾಲಾ ವ್ಯಾಕರಣ' ಇವುಗಳಿಂದ ತೊಡಗಿ ಆವನು ಕರ್ನಾಟಕ ವ್ಯಾಕರಣ ಪ್ರಪಂಚದ ಸರ್ವರೂಪುರೇಷೆಗಳನ್ನು ಈ 478 demy ಪುಟಗಳ ಸವಿಸ್ತಾರವಾದ ವ್ಯಾಕರಣ ಗ್ರಂಥದಲ್ಲಿ ಬಿಚ್ಚಿಟ್ಟನು.

John Garrett ಇವನ ಆದರ್ಶವನ್ನನುಸರಿಸಿ 1871 ರಲ್ಲಿ Rev. Kittel ಇವನು 'ಶಬ್ದಮಣಿ ದರ್ಪಣ' ವನ್ನು ಸಂಪಾದಿಸಿದ್ದು ಬಾಸೆಲ್ ಮಿಷನ್ನವರಿಂದ ಆಕರ್ಷಕವಾಗಿ ಮುದ್ರಿಸಲ್ಪಟ್ಟಿತು. ಸೂತ್ರಗಳ ತಾತ್ಪರ್ಯವನ್ನೂ ಅವು

ಗಳ ವೃತ್ತಿ ಮತ್ತು ಟೀಕೆಗಳೊಡಗೂಡಿ ಅವನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾನೆ. ಉದಾಹರಣೆಗೆ.—

> " ಈಕ್ಷಿಸಿ ಶಿಕ್ಷಾ ಸೂತ್ರದ। ಲಕ್ಷಣಮಂ ಲೋಕರೂಢಿ ಕೆಡದವೊಲಿವರ್
> ಲಕ್ಷಿಪುದು ನುಡಿಗಳೊಳ್ ಬಹು। ಳಾಕ್ಷೇಪಣಮಿಲ್ಲದಿರೆಯುಮರಿಯದ
> ಕೆಲವಂ.

"There are (Apabramsa or Tadbhava) words in common use that are worth some consideration, also on the part of the learned."

ಹೀಗೆ ಭಾಷಾಂತರವಾಗಿದೆ. ಧಾತು ಶಬ್ದಗಳ ಪಟ್ಟಿಯಲ್ಲಿ ಎಲ್ಲಾ ಪದಗಳ ಅರ್ಥ ವನ್ನೂ ಇಂಗ್ಲಿಷ್‌ನಲ್ಲಿ ಕೊಟ್ಟಿದ್ದಾನೆ.—

> " ಮಾರ್ಕೊಳ್ (ಮಾರು + ಕೊಳ್) ಸಂಮುಖೇ—to be in front of
> ಸುರುಳ್—ಸಂಕೋಚನೇ—to contact, shrivel,
> ಪೊರಲ್—ಲುಠನೇ—to roll about
> ಮುಸುಳ್—ವಿಗತಪ್ರಭಯಾಂ—to be deprived of shine; grow dim;"

Rev. Kittel ಇವನಿಂದ ತನ್ನ ಇಂಗ್ಲಿಷ್ ವ್ಯಾಖ್ಯೆ ಅನುವಾದಗಳಿಂದೊಡಗೂಡಿದ 'ಶಬ್ದಮಣಿ ದರ್ಪಣ'ವು ಪ್ರಕಟವಾದನಂತರ ಅವನು ಸರ್ವ ವಿದ್ವಾಂಸರ ಮನ್ನಣೆಗೂ ಪಾತ್ರನಾದನು. ಇದರನಂತರ ಅವನು ಮೇಲೆ ಹೇಳಿದ 'ಸಂಸ್ಕೃತ ಸಣ್ಣ ವ್ಯಾಕರಣ' ಮತ್ತು 478 demy ಪುಟಗಳ 'ಕರ್ಣಾಟಕ ವ್ಯಾಕರಣ'ವನ್ನು ರಚಿಸಿದನು. ಅವನ ಈ ಕೃತಿಗಳ ಬಗ್ಗೆ Dr. Hultzsch ಇವನು ತನ್ನ ಸ್ವದೇಶದಿಂದ ಈ ರೀತಿ ಬರೆದನು.—

"........Throughout the book we feel the master-hand of a ripe scholar whose deep erudition and love of his subject is blended with amiable modesty."

## ೧೭. ಕಿಟ್ಟೆಲ್ ಇವನು ನಾಗವರ್ಮನ ಛಂದೋಂಬುಧಿಯನ್ನು ಸಂಪಾದಿಸಿದನು:—

Rev. Fernandiz Kittel ಇವನ ಮಹತ್ತಾದ ಕೆಲಸಗಳಲ್ಲಿ ನಾಗವರ್ಮನ ಛಂದೋಂಬುಧಿಯನ್ನು ಸಂಪಾದಿಸಿ ಪ್ರಕಟಿಸಿದ್ದು ಒಂದಾಗಿದೆ. ಈ ಕೆಲಸಕ್ಕೆ ಇವನು 1872 ರಿಂದ ಆರಂಭಿಸಿ ಕಡೆಗೆ 1874 ರಲ್ಲಿ ಅದನ್ನು ಮಂಗಳೂರು ಬಾಸೆಲ್ ಮಿಷನ್ ಛಾಪಖಾನೆಯಲ್ಲಿ ಮುದ್ರಿಸಿ ಹೊರತಂದನು. ನಾಗವರ್ಮನ ಛಂದೋಂಬುಧಿಯ ವಿಷಯವಾಗಿ ತನ್ನ "ಕಾವ್ಯ ಮಾಲೆ" ಯಲ್ಲಿ ಮುನ್ನುಡಿಯ ರೂಪ

ದಲ್ಲಿ 16 ಪುಟಗಳಷ್ಟು ಹಿಂದೆಯೇ ಬರೆದಿದ್ದನು. ಛಂದೋಲಕ್ಷಣಗಳನ್ನು ವಿವರಿಸುತ್ತಾ ಅದರ ಟೀಕೆ, ವೃತ್ತಿಗಳನ್ನೆಲ್ಲಾ ಕನ್ನಡದಲ್ಲಿಯೇ ವಿವರಿಸಿದನು. ಆದರೆ ಈ ಛಂದೋಂಬುಧಿಯಲ್ಲಿ ಅವೆಲ್ಲವನ್ನೂ ಇಂಗ್ಲಿಷ್‌ನಲ್ಲಿ ವಿವರಿಸಿದ್ದಾನೆ. ಅಲ್ಲದೆ ಕನ್ನಡ ಸಾಹಿತ್ಯದ ವಿಚಾರವಾಗಿ 50 Jemy ಪುಟಗಳಿಗೂ ಮೀರಿ ಒಂದು ಮುನ್ನುಡಿಯನ್ನೂ ಇಂಗ್ಲಿಷ್‌ನಲ್ಲಿಯೇ ಬರೆದಿದ್ದಾನೆ. ಆ ವರೆಗೂ ತಾಳೆ ವೋಲೆಗಳಲ್ಲಿ ಅಡಗಿ ಕತ್ತಲು ಕೊಠಡಿಗಳಲ್ಲಿ ಹುದುಗಿದ್ದ ಈ ಅಮೋಘ ಬರೆವಣಿಗೆಯನ್ನು ಕಾಗದಕ್ಕಿಳಿಸಿದ್ದು Rev. Kittel ಇವನ ಮಹತ್ಕಾರ್ಯಗಳಲ್ಲಿ ಒಂದೆಂದು ಪುನಃ ಹೇಳಬೇಕಿದೆ. ವ್ಯಾಕರಣಕ್ಕಿಂತಲೂ ಛಂದೋಶಾಸ್ತ್ರದಲ್ಲಿ Rev. Kittel ಇವನಿಗೆ ಹೆಚ್ಚು ಅಭಿರುಚಿಯಿದ್ದಂತೆ ಅವನ ಹಲವು 'ಕಾವ್ಯ ಮಾಲೆ' ಗಳ, ಮತ್ತು ಈ 'ಛಂದೋಂಬುದಿಯ ಪ್ರಕಟಣೆಗಳಿಂದ ವ್ಯಕ್ತವಾಗುತ್ತವೆ. ಅವನ ವಿವರಣೆಯು ಹೇಗೆ ಹರಿದಿದೆಯೆಂಬುದಕ್ಕೆ ಈ ಪದ್ಯವನ್ನು ಉದಾಹರಿಸಲಾಗಿದೆ:—

"ಚಂಪಕ ಮಾಲೆ. ಇದು ಪದ ಪದದಲ್ಲಿ ೨೧ ಅಕ್ಷರವಿದ್ದು—
ತ್ರಿದಶರವೀಂದು ಭಾಸ್ಕರ ಗಣ ತ್ರಿತಯಾಗ್ರದೊಳಾಗೆ ಚೆಲ್ವುವೆ
ತ್ತುದನಲದಿಂ ತ್ರಯೋ ದಶದೊಳಾಗಿರೆ ವಿಶ್ರಮಣಂ ನಿರಂತರಾ
ಭ್ಯುದಯತರಂ ಕರಂ ನಿನಗಶೋಕ ಮಹೀರುಹ ಪಲ್ಲವೋಲ್ಲಸತ್
ಪದಯುಗೆ ನಿಚ್ಚಮೋದು ಗಡ ಚಂಪಕಮಾಲೆಯನೊಲ್ದು ಲೀಲೆಯಿಂ.

ಟೀಕೆ—ತ್ರಿದಶಗಣ ⏑⏑⏑, ರವಿಗಣ ⏑—⏑, ಇಂದುಗಣ—⏑⏑, ಭಾಸ್ಕರ ಗಣ —⏑—⏑ ; ಇದರ ತ್ರಿತಯ ⏑—⏑/⏑—⏑/⏑—⏑/ ಮೂರಾದ ಇವರ ಅಗ್ರದೊಳ್ ಆಗೆ, (ಆ ತ್ರಿದಶ ರವಿ ಇಂದು ಎಂಬ ಗಣಗಳು) ಅನಲದಿಂದೆ ಚೆಲ್ವುಪೆತ್ತುದು ಅಂದರೆ ಚೆಲ್ವು ಹುಟ್ಟಿದಾಗಿವೆ; ...."

ಈ ರೀತಿ ಮೂಲವನ್ನು ಕೊಟ್ಟು ಅದನ್ನೇ ಸೂಕ್ಷ್ಮವಾಗಿ ಇಂಗ್ಲಿಷ್‌ನಲ್ಲೂ ಹೇಳಿದ್ದಾನೆ. ಅದಕ್ಕೆ ತ್ರಿಪದಿಯನ್ನು ವಿವರಿಸಿನ ರೀತಿಯನ್ನು ಕೆಳಗೆ ಹೇಳಿದೆ:—

"ಬಿಸರುಹೋದ್ಭವ ಗಣಂ ರಸ ದಶ ಸ್ಥಾನದೊಳ್
ಬಿಸರುಹ ನೇತ್ರೇ ಗಣಮೆ ಬರ್ಕುಳಿವವು,
ಬಿಸರುಹ ನೇತ್ರೇ ತ್ರಿಪದಿಗೇ,

The Scheme of the adduced Verse:

1 2 3 4
⏑⏑⏑—/⏑⏑⏑ --/⏑⏑⏑—/—⏑— 20 Moras in 4 feet.
5 VI 7 8
⏑⏑⏑⏑/-- —/ ⏑⏑⏑—/⏑⏑⏑⏑ 17 ,, ,, ,,
9 X 11
⏑⏑⏑⏑/— —/ ⏑⏑⏑— 13 ,, in 3 feet.

"To show that not the form but the number of the Moras is essential for the feet (excepting the 6 th and 10 th where, however, any one of the four Brahma feet may occur), the following scheme of Tripadi verses, occuring in the eleventh chapter of the Rajashekaravilasa, are given here........"

"A Tripadi verse:-The first line has four feet each consisting of 5 Moras, in its middle caesura and another Alliteration occur........".

ಹೀಗೆ ವಿವಿಧ ಗಣಗಳಿಗೆ ಬೇರೆ ಬೇರೆ ರಚನೆಗಳ ದೃಷ್ಟಾಂತಗಳನ್ನು ಹೆಕ್ಕಿ ವಿಷದವಾಗಿ ನಿರೂಪಿಸಲಾಗಿದೆ. ಹೇಗೂ Rev. Kittel ಇವನ 'ಛಂದೋಂಬುಧಿ' ಯ ಸಂಪಾದನಾ ಕಾರ್ಯವು ಅವನ ಇತರ ಪರಿಶ್ರಮದಂತೆ ಕನ್ನಡ ಸಾಹಿತ್ಯಕ್ಕೆ ಕಲಶ ಪ್ರಾಯವಾದಂಥಾಗಿದೆ; ಅಲ್ಲದೆ 1875 ರಿಂದ ಸುಮಾರು 60 ವರ್ಷಗಳವರೆಗೂ ಅವನು ಸಂಪಾದಿಸಿದ 'ಶಬ್ದ ಮಣಿ ದರ್ಪಣ' ಮತ್ತು 'ಛಂದೋಂಬುಧಿ' ಇವುಗಳೇ ಕನ್ನಡ ಭಾಷಾ ವಿದ್ಯಾರ್ಥಿಗಳ ಕೈಪಿಡಿಯಾಗಿ ಪ್ರಚಾರದಲ್ಲಿದ್ದುವು.

## ೧೮. ಫ. ಕಿಟ್ಟೆಲ್ ಇವನಿಂದ ರಚಿತವಾದ ಕನ್ನಡ–ಇಂಗ್ಲಿಷ್ ಅರ್ಥಕೋಶ:—

ಭಾರತೀಯ ಸಾಹಿತ್ಯದಲ್ಲಿ ಹಾಗೂ ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತವೂ ಪ್ರಬುದ್ಧವೂ ಜನಪ್ರೀಯವೂ ಆಗಿರುವ ನಿಘಂಟುಗಳಲ್ಲಿ Rev. Fernandiz Kittel ಇವನು ರಚಿಸಿದ ಕನ್ನಡ-ಇಂಗ್ಲಿಷ್ ಅರ್ಥಕೋಶವು ಒಂದಾಗಿದೆ. William Reeve ಇವನು 1824 ರಲ್ಲಿ ಇಂಗ್ಲಿಷ್–ಕನ್ನಡ ಮತ್ತು 1830 ರಲ್ಲಿ ಕನ್ನಡ-ಇಂಗ್ಲಿಷ್ ನಿಘಂಟುಗಳನ್ನು ರಚಿಸಿದ ನಂತರ Rev. F Kittel ಇವನ 1762 folio ಪುಟಗಳ ಉದ್ದಾಮ ಅರ್ಥಕೋಶವು ಹಲವಾರು ಶತಮಾನಗಳ ಕಾಲದ ಕನ್ನಡ ಸಾಹಿತ್ಯ ಗ್ರಂಥಭಂಡಾರಕ್ಕೆ ಹಿರಿದಾದ ಒಂದು ನಿಧಿಯಾಯಿತು. ಈ ನಿಘಂಟುವಿನ ಸಂಪಾದನೆಗೆ ಈ ಕ್ರೈಸ್ತಗುರುವು ಹತ್ತಾರು ವರ್ಷಗಳ ಕಾಲ ಅವಿರತ ವಾಗಿ ದುಡಿದನು. ಒಬ್ಬಿಬ್ಬರು ದೇಶೀಯ ಪಂಡಿತರು ಇವನ ಬರೆವಣಿಗೆಯ ಪ್ರತಿ ಯನ್ನು ತೆಗೆಯುವುದರಲ್ಲಿ ಇವನಿಗೆ ಸಹಕರಿಸಿದ್ದರಾದರೂ Rev. Kittel ಇವನ ಅಪಾರ ವಿದ್ವತ್ತೇ ಈ ಶಬ್ದಕೋಶದ ಪ್ರತಿಪುಟದಲ್ಲೂ ಮೇಲೆದ್ದು ಕಾಣುತ್ತದೆ. 1889 ರಲ್ಲಿ ಈ ಗ್ರಂಥವನ್ನು ಮಂಗಳೂರು ಬಾಸೆಲ್‌ಮಿಷನ್‌ನಲ್ಲಿ ಮುದ್ರಣಕ್ಕೆ ಒಪ್ಪಿಸಿ 1892 ರಲ್ಲಿ ಅವನು ಸ್ವದೇಶಕ್ಕೆ ಹಿಂದಿರುಗಿದನು. 1894 ರಲ್ಲಿ ಇದರ ಮುದ್ರಣವು ಪೂರೈಸುವ ವೇಳೆಗೆ ಅವನು ತನ್ನ ಹುಟ್ಟೂರಿನಲ್ಲಿಯೇ ವಿಶ್ರಾಂತಿಯನ್ನು ಪಡೆಯುತ್ತಿದ್ದು ಕಡೆಗೆ ಜರ್ಮನಿಯ ಟ್ಯೂಬಿಂಜನ್ ಪಟ್ಟಣದಿಂದಲೇ ಈ ಗ್ರಂಥಕ್ಕೆ ಒಂದು ಮುನ್ನುಡಿ ಯನ್ನು ಬರೆದು ಕಳುಹಿಸಿದನು. ಕರ್ನಾಟಕವಲ್ಲಿ ಅರ್ಧ ಶತಮಾನದ ಕಾಲ ಕನ್ನಡ ಸೇವೆಯನ್ನು ನಿರಂತರ ಕೈಗೊಂಡಿದ್ದ ಈ ಧರ್ಮಗುರುವೂ, ಸಾಹಿತಿಯೂ ನಿಷ್ಠಾವಂತ

ಸಮಾಜಸೇವಕನೂ ಆದ ಈ ವಿದ್ವಾಂಸನು ಈ ದೇಶವನ್ನು ಬಿಟ್ಟು ನಿವೃತ್ತನಾಗಿ ಹೋಗುವ ವೇಳೆಗೆ ಈ ನಾಡಿಗೆ ಅರ್ಪಿಸಿದ ವಿದ್ವತ್ಪೂರ್ಣವಾದ ಕಾಣಿಕೆಯೆಂದರೆ ಈ ಪ್ರಬುದ್ಧವಾದ ಶಬ್ದಕೋಶವೇ ಆಗಿದೆ.

Rev. Kittel ಇವನ ಅಮೋಘವಾದ ಈ ಕೃತಿಯಲ್ಲಿ ಅಡಕವಾಗಿರುವ ಶಬ್ದ ಸಂಪತ್ತು, ಕನ್ನಡ ನಾಡಿನ ನಾನಾ ಭಾಗಗಳಲ್ಲಿ ಉಪಯೋಗಿಸಲ್ಪಡುತ್ತಿರುವ ದಿನನಿತ್ಯದ ನುಡಿಗಳು, ನಾಣ್ಣುಡಿಗಳು, ಗಾದೆಗಳು, ಬಳಕೆಯ ಮಾತುಗಳು, ನುಡಿ ಮುತ್ತುಗಳು, ಹಳೆಗನ್ನಡ ಪ್ರಯೋಗಗಳು ಇತ್ಯಾದಿಗಳು ಅವನ ಪರಾಕ್ರಮ, ಕರ್ತವ್ಯ ನಿಷ್ಠೆ, ಉತ್ಸಾಹ, ವಿದ್ವತ್ತುಗಳೆಲ್ಲವನ್ನೂ ಪ್ರತಿಬಿಂಬಿಸಿವೆ. ಒಂದು ರೀತಿಯಲ್ಲಿ ಈ ಶಬ್ದಕೋಶವು ಒಂದು ಅಪಾರ ಸಾಹಿತ್ಯ ಭಂಡಾರವೇ ಆಗಿದೆ. ತನ್ನ ಕನ್ನಡ ವ್ಯಾಕರಣಗಳು, ಛಂದೋಶಾಸ್ತ್ರ, ಕಾವ್ಯ ಮಾಲಿಕೆ ಇತ್ಯಾದಿ ಕೃತಿಗಳ ರಚನೆಯಲ್ಲಿ ಮತ್ತು ಸಂಪಾದನೆಯಲ್ಲಿ ಪಡೆದ ಜ್ಞಾನ ಮತ್ತು ಅನುಭವ ಬಲವನ್ನು Rev. Kittel ಇವನು ಈ ಶಬ್ದಕೋಶದಲ್ಲಿ ತುಂಬಿದ್ದಾನೆ. ಈ ಎಲ್ಲಾ ಗ್ರಂಥಗಳ ರಚನೆಗೆ ಅವನು 1865 ರಿಂದ ಕೊಡಗಿನ ಮಡಿಕೇರಿಯಲ್ಲಿಯೇ ನೆಲೆಸಿ ಕಾರ್ಯೋನ್ಮುಖನಾದನು. ಕೆಲವು ಶಬ್ದಗಳಿಗೆ ಸುಮಾರು 40–50 ಪಂಕ್ತಿಗಳುದ್ದಕ್ಕೂ ಅರ್ಥ ಮತ್ತು ವಿವರಣೆ ಗಳನ್ನು ಕೊಡುತ್ತಾನೆ. ಪ್ರತಿಯೊಂದು ಪದದ ಮೂಲ, ಧಾತು, ಪ್ರಯೋಗ, ನುಡಿ ಗಟ್ಟು ಇತ್ಯಾದಿಗಳನ್ನು ಆಧಾರಪೂರ್ವಕವಾಗಿ ಕೊಡದೆ ಅವನಿಗೆ ಸಮಾಧಾನವಾಗದು. ಉದಾಹರಣೆಗೆ ಈ ಕೆಲವು ಪದಗಳನ್ನು ಅರ್ಥಕೋಶದಿಂದ ಎತ್ತಿ ಇಲ್ಲಿ ಕೊಡ ಲಾಗಿದೆ :—

"ತೆರಟು—teratu, To make round (T. ತಿರಟ್ಟು) to roll up, tuck up to (a garment when passing a river) to join to unite. (T; See ತೆರಳು 2, ತೆರೆ)

"ತೆಗ್ಗು—teggu—ತಗ್ಗು 2 (ಅವಟ, ಕುಣಿ, ಗರ್ತ, ಗುಣ್ಡಿ G; ತೆಗ್ಗು, ತೆವರು, dupl—ತಗ್ಗು ದಿನ್ನೆ (ವಿಷಮ cb) ತೆಗ್ಗು ಬೀರು— A hole to be formed, ತೆಗ್ಗು ಬಿದ್ದ ಗಲ್ಲ...

"ತೆತ್ತಿಗ—tettiga (fr. ತೆತ್ತು 2) A man who is entwined or closely bound to; a servant (Bp. 23,30...) 2, a Connection, a friend. (Ram 4, 8, 20, J. 20, 14....)"

ಈ ರೀತಿ ಸಹಸ್ರಾರು ಪದಗಳನ್ನೂ ವ್ಯಾಖ್ಯಾನಿಸಿದ್ದಾನೆ. ತೆನೆ, ತೆಂಕು, ತೆಂಗು ಎಂಬಂಥಾ ಇನ್ನೆಷ್ಟೋ ಪದಗಳಿಗೆ ಅರ್ಥವಿವರಣೆಗಳು ಹತ್ತಿಪ್ಪತ್ತು ಪಂಕ್ತಿಗಳಿಗೂ ಮೇಲ್ಪಟ್ಟು ಕೊಡಲಾಗಿದೆ. ಹಲವು ಪದಗಳಿಗೆ ಹಿಂದಿನ ಬೇರೆ ಬೇರೆ ಕಾಲದಲ್ಲಿನ್ದ ಪ್ರಯೋಗಗಳೂ ಇತರ ದ್ರಾವಿಡಭಾಷಾ ಪದಗಳಿಗೂ ಅವಕ್ಕೂ ಇರುವ ಸಂಬಂಧವೂ, ಅವುಗಳ ರೂಪಾಂತರಗಳೂ, ಅವುಗಳಿಂದ ಉಪಯೋಗಿಸಲ್ಪಟ್ಟ ವಾಕ್ಯಗಳೂ ನುಡಿ ಗಟ್ಟುಗಳೂ ಕೊಡಲ್ಪಟ್ಟು ತನ್ನ ಗ್ರಂಥವನ್ನು ಸಮರ್ಪಕವಾದ ಒಂದು ಶಬ್ದ ಹಾಗೂ

ಸಾಹಿತ್ಯಭಂಡಾರವಾಗಿ ನಿರ್ಮಿಸಿದ್ದಾನೆ. ಇದರ ರಚನೆಗೆ Rev. Kittel ಇವನು ೨೦ ವರ್ಷಗಳಿಗೂ ಮೇಲ್ಪಟ್ಟು ದುಡಿದಿರುವನೆಂದು ಅವನು ಸಂಗ್ರಹಿಸಿದ ಅಪಾರ ಸಾಹಿತ್ಯ ಸಂಪತ್ತಿನಿಂದಲೇ ವ್ಯಕ್ತವಾಗುತ್ತದೆ.

### ೧೯. ಕಿಟ್ಟೆಲ್ ಇವನ ಶಬ್ದಕೋಶದ ಬಗ್ಗೆ ವಿದ್ವಾಂಸರ ಪ್ರಶಂಸೆ:—

Rev. Fernandiz Kittel ಇವನು 1892 ರಿಂದ ತನ್ನ ಸ್ವದೇಶವಾದ ಜರ್ಮನಿಯಲ್ಲಿರಿತು ಕನ್ನಡ ವ್ಯಾಕರಣವನ್ನು ಕುರಿತಾದ ತನ್ನ ಕಡೇ ಪುಸ್ತಕವನ್ನು ಬರೆದನು; ಅಲ್ಲದೆ ಕನ್ನಡ ಸಾಹಿತ್ಯಕ್ಕೆ ಸಂಬಂಧವಾದ ಹಲವು ಲೇಖನಗಳನ್ನು ಅಲ್ಲಿಂದಲೇ ಬರೆದು ಕಳುಹಿಸುತ್ತಿದ್ದನು. ಅವನ ಕನ್ನಡ-ಇಂಗ್ಲಿಷ್ ಅರ್ಥಕೋಶವು 1894 ರಲ್ಲಿ ಪ್ರಕಟವಾದನಂತರ ಅವನು ಅಖಿಲ ಭಾರತ ಖ್ಯಾತಿಯ ವಿದ್ವಾಂಸನೆಂದು ಪರಿಗಣಿಸಲ್ಪಟ್ಟನು. 1896 ರಲ್ಲಿ ಅಂದಿನ ಕೊಡಗು ಸರಕಾರವು Rev. Kittel ಇವನಿಗೆ ಡಾಕ್ಟರೇಟ್ ಪದವಿಯನ್ನಿತ್ತು ಅವನ ಸಾಹಿತ್ಯ ಸೇವೆಯನ್ನು ಸ್ಮರಿಸಬೇಕೆಂದು ಮದ್ರಾಸು ವಿಶ್ವವಿದ್ಯಾಲಯವನ್ನು ಕೇಳಿಕೊಂಡಿತು. ಆದರೆ ಕಾರಣಾಂತರದಿಂದ ಹಾಗಾಗಲಿಲ್ಲ. ಆದರೆ ಅದೇ ವರ್ಷ ಜರ್ಮನಿಯ Wurthenberg University ಇದರ ಆಡಳಿತ ಮಂಡಳಿಯು ಈ ಅವಿಶ್ರಾಂತ ಸಾಹಿತಿಗೆ ಡಾಕ್ಟರೇಟ್ ಪದವಿಯನ್ನಿತ್ತು ಗೌರವಿಸಿತು. ಕನ್ನಡಸಾಹಿತ್ಯಕ್ಕಾಗಿ ದುಡಿದ ಇಂಥಾ ಒರ್ವ ವಿದ್ವಾಂಸನನ್ನು ವಿದೇಶೀಯ ವಿಶ್ವವಿದ್ಯಾಲಯವೊಂದು ಈ ರೀತಿ ಗೌರವಿಸಿದ್ದು ಕನ್ನಡಸಾಹಿತ್ಯಕ್ಕೆ ಸಲ್ಲಿಸಿದ ಗೌರವವೆಂದೇ ಕನ್ನಡಿಗರು ಹೆಮ್ಮೆಪಡಬೇಕಾಗಿದೆ.

ಸಾಹಿತ್ಯವು ಜರ್ಮನ್ ಸಾಹಿತ್ಯವಾದರೇನು? ಕನ್ನಡ ಯಾ ಬಂಗಾಳೀ ಸಾಹಿತ್ಯವಾದರೇನು? ಎಲ್ಲವೂ ಒಂದೆ! ಭಾಷೆಗಳು ಸಹಸ್ರಾರು ಇದ್ದರೂ ಅವೆಲ್ಲಾ ಸಾಹಿತ್ಯ ಸರಸ್ವತಿಯ ವೀಣೆಯ ವಿವಿಧ ತಂತಿಗಳು. ಇಂಥಾ ಘನ ವಿದ್ವಾಂಸನು ಜರ್ಮನಿಯಿಂದ ಕನ್ನಡ ನಾಡಿಗೆ ಬಂದು ಕನ್ನಡಕ್ಕಾಗಿಯೇ ತನ್ನ ಬಾಳನ್ನು ಸವೆದುದು ಕನ್ನಡದ ಪುಣ್ಯವಾಗಿದೆ.

Rev. Kittel ಇವನು ತನ್ನ ಕಡೇ ಗ್ರಂಥವಾದ demy 478 ಪುಟಗಳ ಕನ್ನಡ ವ್ಯಾಕರಣವು ತನ್ನ ಕೈ ಸೇರಿತೆಂದು ಮಂಗಳೂರು ಬಾಸೆಲ್ ಮಿಷನ್ ವ್ಯವಸ್ಥಾಪಕರಿಗೆ ನವಂಬರ್ 1903 ರಲ್ಲಿ ಒಂದು ಪತ್ರವನ್ನು ಬರೆದು ತಿಳಿಸಿದನು. ಅನಂತರ ಕೆಲವು ದಿವಸಗಳಲ್ಲಿಯೇ 1903 ರ ಡಿಸೆಂಬರ್ 19 ನೇ ಹೆಚ್ಚೇನೂ ನರಳದೆಯೇ ತನ್ನ ಪತ್ನೀ ಮತ್ತು ಮಕ್ಕಳ ಸಮ್ಮುಖದಲ್ಲಿ ಶಾಂತಿಯಿಂದ ವಿಧಿವಶನಾದನು. ಈ ನಿಷ್ಠಾವಂತ ಮತ್ತು ಕರ್ತವ್ಯಶೀಲ ವಿದ್ವಾಂಸನ ಆತ್ಮಕ್ಕೆ ಶಾಂತಿಯನ್ನು ಕೋರಿ ಯೂರೋಪಿನಲ್ಲೂ ಹಿಂದೂಸ್ಥಾನದಲ್ಲೂ ವಿದ್ವಾಂಸರು ಕ್ರೈಸ್ತ ಗುಡಿಗಳಲ್ಲಿ ಸೇರಿ ಪ್ರಾರ್ಥನೆಯನ್ನು ನಡೆಸಿದರು.

Rev. Kittel ಇವನ ಕನ್ನಡ-ಇಂಗ್ಲಿಷ್ ನಿಘಂಟನ್ನು ವಿಮರ್ಶಿಸುತ್ತಾ Dr. John Fleet ಇವನು ಈ ರೀತಿ ಬರೆದನು:—

"....We have in the Rev. F. Kittel's Kannada–English dictionary, a scholarly and admirable compilation which has now placed it in the power of all Western students to understand fully and do justice to, the beauties of that highly polished tongue....The preparation of this dictionary has evidently been thoroughly in accordance with all the traditions of the important work... and the issue of it marks a still more noticeable epoch in the language. Every page of it, and of its preface, bears witness to the constant care, earnestness, and thoroughness with which Mr. Kittel devoted himself to the task that lay before him... ..."

Rev. Bucher ಇವನು Dr. Kittel ಇವನ ಅರ್ಥಕೋಶ ಮತ್ತು ಕನ್ನಡ ವ್ಯಾಕರಣ ಗ್ರಂಥಗಳನ್ನು ಕುರಿತು ಪ್ರಶಂಸಿಸುತ್ತಾ ತನಗೆ ಅವನಲ್ಲಿ :—

"....have profound admiration for the supreme Kannada soholarship of Dr. Kittel's work..."

ಎಂಬುದಾಗಿ ಹೇಳಿದನು. ಇನ್ನೊರ್ವ ಅಸಾಧಾರಣ ವಿದ್ವಾಂಸನೂ ಶಿಲಾಶಾಸನ ಲಿಪಿತಜ್ಞನೂ ಆದ Dr. Edward Hultzsch ಇವನು Kittel ಇವನ ಪರಿಶ್ರಮವನ್ನು ಸ್ಮರಿಸುತ್ತಾ ಹೀಗಂದನು :—

"....Dr. Kittel's ...Kannada–English dictionary........will remain a Monnumentum Aere Perennius of a noble life devoted to incessant earnest labour."

---

"ದೇವರ ಬೀಡಿದು, ರಸಿಕರ ನಾಡಿದು। ಶಿಲ್ಪದ ತವರೂರಿದು
ಗೋಕರ್ಣ ಗಣಪತಿ, ಗದುಗಿನ ನರಹರಿ। ಚಾಮುಂಡಿ ಮಹಿಶೂರದು,
ಉಡುಪಿಯ ಕೃಷ್ಣನು, ಬೆಳ್ಗೊಳಗುಮಟನು। ಹುಬ್ಬಳ್ಳಿ ಶಿವಭಕ್ತನು
ಹಂಪಿಯ ನರಸಿಂಹ, ಬೇಲೂರ ಚೆನ್ನಕೇಶ। ಮೂಡ್ಬಿದ್ರೆ ಜಿನೇಶನು.

"ಈ ನಮ್ಮ ನಾಡಂತೆ, ಕಲೆಯು ಆ ಬೀಡಂತೆ। ವಿಜಯಾಪುರಿ ಗುಂಭವು
ಬೀದರೆಯು ಗುಲ್ಬರ್ಗ, ಬೆಳಗಾವಿ ಆ ದುರ್ಗ। ಚಾರಿತ್ರ್ಯ ಕನಸುಗಳು,
ಶ್ರೀರಂಗಪಟ್ಟವು, ಸಿರಿಲಿಂಗ ಹಂಪೆಯು। ಕಣ್ಣೀರ ಸ್ಮಾರಕವು
ಹಲವಾರು ಕತೆಗಳ, ಕಲೆಗಳ ವೈಭವ। ವನ್ನಿಟ್ಟ ಕರ್ಣಾಟವು!"

[ಮುತ್ತಣ್ಣ]

"India in 1900 A.D., was Britain's most dazzling imperial possession; a country of nearly 300 millions ........" ಎಂಬುದಾಗಿ Martin Gilbert ಇವನು ಹೇಳಿದ್ದನು. ಕ್ರಿ.ಶ. 19 ನೇ ಶತಮಾನವು ಕೊನೆಗೊಂಡು ೨೦ ನೇ ಶತಮಾನದ ಉದಯವಾದಾಗ ಅಂದಿನ ಅತಿರಥ ಮಹಾರಥರಾದ ಐರೋಪ್ಯಾ ವಿದ್ವಾಂಸರೂ ಸಂಶೋಧಕರೂ ನಿವೃತ್ತರಾಗಿ ತಮ್ಮ ಸ್ವದೇಶಗಳಿಗೆ ತೆರಳಿದರು. ಅವರಲ್ಲಿ ಕೆಲವರು ಆಗಲೇ ಗತಿಸಿದರು. ಹಲವರು ತಮ್ಮ ವೃದ್ಧಾಪ್ಯದಲ್ಲಿ ಯೂರೋಪಿನಿಂದಲೇ ಹಲವು ಬೋಧಪ್ರದವಾದ ಲೇಖನಗಳನ್ನು ತಮ್ಮ ಇಂಗ್ಲಿಷ್, ಫ್ರೆಂಚ್, ಜರ್ಮನ್ ಯಾ ಪೋರ್ಚುಗೀಸ್ ಭಾಷೆಗಳಲ್ಲಿ ಬರೆಯುತ್ತಾ ಭಾರತವನ್ನು ಪಾಶ್ಚಾತ್ಯ ದೇಶಗಳಿಗೆ ಪರಿಚಯ ಮಾಡಿಸುತ್ತಲೇ ಇದ್ದರು. ಇಂಥಾ ಮೇಧಾವಿಗಳು 1920 ರ ಒಳಗಾಗಿ ಒಬ್ಬರನಂತರ ಒಬ್ಬರಂತೆ ವಿಧಿವಶರಾಗುತ್ತಾ ಅಗಲಿದರು.

ಹೇಗೂ ಅವರು ಅಂದು ಯಾವ ಮಹತ್ಕಾರ್ಯಕ್ಕಾಗಿ ಶ್ರಮಿಸಿದರೋ ಅವೆಲ್ಲಾ ವ್ಯರ್ಥವಾಗಲಿಲ್ಲವೆಂಬಂತೆ ಅವರು ಮಾಡಿ ಬಿಟ್ಟಲ್ಲಿಂದ ಎಳೆಯನ್ನು ಎತ್ತಿಕೊಂಡು ದೇಶೀಯ ವಿದ್ವಾಂಸರು ಅದೇ ದಿಶೆಯಲ್ಲಿ ಶ್ರಮಿಸಲನುವಾದರು. ಅವರ ಉತ್ಸಾಹ, ಸೇವೆ, ಆದರ್ಶ, ವಿದ್ವತ್ತು, ಕರ್ತವ್ಯನಿಷ್ಠೆಗಳೆಲ್ಲವೂ ಭಾರತೀಯ ವಿದ್ವಾಂಸರಿಗೆ ನಂದಾದೀಪದಂತೆ ಮಾರ್ಗದರ್ಶಕವಾಯಿತು. ಪಾಶ್ಚಾತ್ಯರ ಆ ಮೇಲ್ಪಂಕ್ತಿಯನ್ನನುಸರಿಸಿ ಮತ್ತು ಹಿಂದಿನ ಪರಂಪರೆಗನುಗುಣವಾಗಿ ದುಡಿಯಲು ಮತ್ತು ದೇಶೀಯ ವಿದ್ವಾಂಸರಿಗೆ ಮಾರ್ಗದರ್ಶಕವಾಗಲು Lord Curzon ಇವನಂಥಾ ಒರ್ವ ಉಚ್ಚ ಅಧಿಕಾರಿಯೂ, Sir John Marshall, Richard Temple ಇವರಂಥಾ ಪ್ರಾಕ್ತನ ವಿಚಾರ ಸಂಶೋಧಕರೂ, Fr. F. Heras ಮತ್ತು Dr. George Smith ಇವರಂಥಾ ಸಂಶೋಧನಾ ತಜ್ಞರೂ, Sir George Grierson ಮತ್ತು Dr. M. Westernitz ಇವರಂಥಾ ಭಾಷಾ ಶಾಸ್ತ್ರಜ್ಞರೂ, Mathew

Arnold ಮತ್ತು Rudyard Kipling ಇವರಂಥಾ ಉದ್ದಾಮ ಸಾಹಿತಿಗಳೂ, Octavian Hume ಮತ್ತು W. Weddesburn ಇವರಂಥಾ ಭಾರತೀಯ ದೇಶಾಭಿಮಾನಿಗಳೂ ಹಲವರು ಅಲ್ಲಲ್ಲಿ ಇದ್ದರು.

ಕನ್ನಡ ನಾಡಿನಲ್ಲಿ ಅಂದಿನ Rice, Fleet, Hultzsch, Zeighler ಮತ್ತು Kittel ಇವರ ಕಾಲವೂ ಮುಗಿದಿತ್ತು. ಆದರೆ ಇವರೆಲ್ಲರೂ ಕರ್ಣಾಟಕದಲ್ಲಿ ದೇಶೀಯ ವಿದ್ವಾಂಸರ ಪೀಳಿಗೆಯೊಂದನ್ನು ಸೃಷ್ಟಿಸಿಯೇ ಅಗಲಿದರು ; ಅಲ್ಲಿಂದ ಮೊದಲ್ಗೊಂಡು ಕನ್ನಡಿಗ ವಿದ್ಯಾತಜ್ಞರೂ ಸಾಹಿತಿಗಳೂ, ಸಂಶೋಧಕರೂ ಬಹುಸಂಖ್ಯೆಯಲ್ಲಿ ತಮ್ಮ ಸಾಹಿತ್ಯ ಸೇವಾಕ್ಷೇತ್ರವನ್ನು ವಿಸ್ತರಿಸಿ ದುಡಿಯಲು ಮುಂದಾದರು.

## ೨. ವಿದೇಶೀಯ ವ್ಯಾಕರಣಗಾರರಲ್ಲಿ ಕಡೇದಾಗಿ ಹೆರಾಲ್ಡ್ ಸ್ಪೆನ್ಸರ್ ಇವನು :—

ಪಾಶ್ಚಾತ್ಯ ಕನ್ನಡ ವ್ಯಾಕರಣಗಾರರಲ್ಲಿ Harold Spencer ಇವನು ಕಡೆಯವನು. Rev. Kittel ಇವನ 458 demy ಪುಟಗಳ "ಕರ್ಣಾಟಕ ವ್ಯಾಕರಣ"ವು 1903 ರಲ್ಲಿ ಪ್ರಕಟವಾದನಂತರ Harold Spencer ಇವನು 1915 ರಲ್ಲಿ 452 ಪುಟಗಳ ಕನ್ನಡ ವ್ಯಾಕರಣವನ್ನು ಆಧುನಿಕ ಶೈಲಿಯಲ್ಲಿ ಬರೆದನು. ಇಂಗ್ಲಿಷ್‌ನಲ್ಲಿಯೇ ಬರೆದ ಈ ಗ್ರಂಥವನ್ನು ಇತ್ತೀಚೆಗೆ W. Preston ಇವನು ಪರಿಷ್ಕರಿಸಿ ಎರಡನೇ ಬಾರಿಗೆ ಪ್ರಕಟಿಸಿದನು. ಭಾಷಾಶಾಸ್ತ್ರ, ಶಬ್ದಕೋಶ, ಶಬ್ದವಿವರಣೆ ಇತ್ಯಾದಿಗಳಿಂದ ಕೂಡಿದ ಈ ಆಧುನಿಕ ಕನ್ನಡ ವ್ಯಾಕರಣವು ಪಾಶ್ಚಾತ್ಯ ಭಾಷಾಶಾಸ್ತ್ರಜ್ಞರಿಂದ ವಿಶೇಷವಾಗಿ ಪ್ರಶಂಸಿಸಲಾಯಿತು.

ಕನ್ನಡ ಸಾಹಿತ್ಯದಲ್ಲಿ ವೈಯ್ಯಾಕರಣಿಗಳ ಸಂಖ್ಯೆ ಅಲ್ಪವಾದರೂ ಅವರೆಲ್ಲರೂ ಒಬ್ಬರಿಂದೊಬ್ಬರಿಗೆ ಮೇಲಾದಂಥಾ ಮಹಾ ವಿದ್ವಾಂಸರಾಗಿದ್ದರು. ಕ್ರಿ.ಶ. 725 ರಿಂದೀಚೆಗೆ ದೇವನಂದಿ. ಪೂಜ್ಯಪಾದ ಮೊದಲಾದವರ ವ್ಯಾಕರಣ ಕೃತಿಗಳು ಕಾಲಗರ್ಭದಲ್ಲಿ ಹುಗಿದು ಹೋಗಿವೆ. ಕ್ರಿ.ಶ. 850 ರ ನೃಪತುಂಗನ "ಕವಿರಾಜ ಮಾರ್ಗ" ಮತ್ತು ಕ್ರಿ.ಶ. 990 ರಲ್ಲಿ ಒಂದನೇ ನಾಗವರ್ಮನ ಭಾಷಾಶಾಸ್ತ್ರ ಕೃತಿಗಳು ಹಳೇ ಪರಂಪರೆಗೆ ಸೇರಿದ್ದುವುಗಳಾಗಿವೆ. ೨ನೇ ನಾಗವರ್ಮನ "ಶಬ್ದ ಸ್ಮೃತಿ" ಮತ್ತು "ಕಾವ್ಯಾವಲೋಕನ", ಕೇಶಿರಾಜನ "ಶಬ್ದಮಣಿದರ್ಪಣ" ಮತ್ತು ಭಟ್ಟಾಕಳಂಕನ "ಶಬ್ದಾನುಶಾಸನ" ಇವೆಲ್ಲವನ್ನೂ Garrett, Rice ಮತ್ತು Kittel ಇವರು ಬೇರೆ ಬೇರೆ ಕಾಲದಲ್ಲಿ ಸಂಪಾದಿಸಿ ಹೊರತಂದರು. ಇವುಗಳನ್ನು ಕುರಿತು ಹಿಂದೆ ಹೇಳಲಾಗಿದೆ.

ಪಾಶ್ಚಾತ್ಯ ವೈಯ್ಯಾಕರಣಿಗಳಲ್ಲಿ ಹಲವರು ಕನ್ನಡದಲ್ಲಿ ಉದ್ದಾಮ ಪಂಡಿತರಾಗಿದ್ದರು. John Hands (1810), John Mckerrel (1815), William Carey (1820), C. Campbell (1850), Thomas Hudson (1855), John Garrett (1865), B. L. Rice (1870), George Wuerth (1872), F. Kittel (1872), Rev. Zeighler

(1880) ಹೀಗೆ ಮೊದಲಾಗಿ ವ್ಯಾಕರಣಗಾರರ ಒಂದು ಓಳಿಗೆಯು ಕನ್ನಡ ಭಾಷಾ ಶಾಸ್ತ್ರವನ್ನು ಸುಲಭರೂಪದಲ್ಲಿ ದೇಶೀಯರಿಗೆ ಪರಿಚಯ ಮಾಡಿಸಿದ್ದಲ್ಲದೆ ನೂರಾರು ಕನ್ನಡ ವ್ಯಾಕರಣ ಪತ್ಯಪುಸ್ತಕಗಳೂ ಇನ್ನು ಹಲವು ಐರೋಪ್ಯ ಅಧ್ಯಾಪಕರಿಂದ ಬರೆಯಲ್ಪಟ್ಟುವು. John Garrett ಇವನು "ಶಬ್ದಮಣಿದರ್ಪಣ"ವನ್ನು ಮೊದಲ ಬಾರಿಗೆ ಸಂಪಾದಿಸಿದಾಗ ಅದನ್ನು ವಿಮರ್ಶಿಸುತ್ತಾ Dr. A. C. Burnell ಇವನು ಹೀಗೆಂದನು :—

"The great and real merit of 'Shabda Mani Darpana' is that it bases its rules on independent research, and the usage of writers of repute. In this way, it is far ahead of the Tamil and Telugu treatises, which are much occupied with vain scholastic disputation."

ಅಷ್ಟೇ ಅಲ್ಲ, ಅದಕ್ಕಿಂತ ಹಿಂದೆ ಬರೆಯಲ್ಪಟ್ಟ ವ್ಯಾಕರಣಗಳೂ ಅಷ್ಟೇ ಶಬ್ದ ಸಂಪತ್ತಿನಿಂದ ಸಮೃದ್ಧವಾಗಿತ್ತೆಂದು "ಶಬ್ದಾನುಶಾಸನ"ವನ್ನು ಸಂಪಾದಿಸಿದ B. L. Rice ಇವನು ಹೇಳುತ್ತಾನೆ:—

"This encomium is equally applicable to other Kannada grammars, which had not been made public in 1875 when Dr. Burnell wrote (as above). Nothing is more striking than the wealth of quotation and illustration from previous authors which these grammatical writings contain, and this gives them a high scientific as well as historical value."

ಹೀಗೂ ಈ ಎಲ್ಲಾ ವಿದ್ವಾಂಸರು ಕೇವಲ ಹಳೇದನ್ನು ಸಂಶೋಧಿಸಿ ಮತ್ತು ಸಂಪಾದಿಸಿ ಹೊರತಂದುದು ಮಾತ್ರವಲ್ಲದೆ ಹೊಸದನ್ನು ಸೃಷ್ಟಿಸಿ ಸಾಹಿತ್ಯವನ್ನು ಪುಷ್ಟಿಗೊಳಿಸಬಲ್ಲ ಮೇಧಾವಿಗಳೆಂಬುದು ಧಾರಾಳವಾಗಿ ತೋರಿಬಂದಿದೆ. Estevao Thomas ಇವನ ಕೊಂಕಣಿ ವ್ಯಾಕರಣ, Robert Cole ಇವನ ಕೊಡವ ವ್ಯಾಕರಣ, Col. Marshall ಇವನ ಬಡಗ ವ್ಯಾಕರಣ ಮತ್ತು August Manner ಇವನ ತುಳು ವ್ಯಾಕರಣ. ಇವೆಲ್ಲವೂ ಅಲಕ್ಷಿಸತಕ್ಕಂಥಾ ಕೃತಿಗಳೇನೂ ಅಲ್ಲ. ಈ ಎಲ್ಲಾ ವೈಯಾಕರಣಿಗಳಿಗೆ ಗುರುಸ್ಥಾನದಲ್ಲಿದ್ದು ಭಾರತೀಯ ಭಾಷಾಶಾಸ್ತ್ರವನ್ನು ಸಾಮೂಲಾಗ್ರವಾಗಿ ಚರ್ಚಿಸಿ ವ್ಯಾಖ್ಯಾನಿಸಿದ ಮಹಾ ಪಂಡಿತರಾದ Halhed, Colebrooke, Carey, Hodgeson, Wilson, Caldwell, Beames ಹೀಗೆ ಇನ್ನೆಷ್ಟೋ ಅದ್ಭುತ ಭಾಷಾ ವಿಶಾರದರನ್ನು ಇನ್ನೊಮ್ಮೆ ಇನ್ನೊಮ್ಮೆ ಎಂಬಂತೆ ಸ್ಮರಿಸಬೇಕಾಗಿದೆ.

### ೩. ಎಡ್ವರ್ಡ್ ರೈಸ್ ಇವನ ಸಾಹಿತ್ಯ ಚರಿತ್ರೆ ಮತ್ತಿತರ ಕೃತಿಗಳು :—

"Fifty years ago very few, even of the Kannada people themselves, had any idea of the range of Kannada literature,

or of the relative age of the books which constitute it. Our present knowledge is the fruit of patient work on the part of a small number of painstaking scholars, who have laboriously pieced together the scattered information contained in inscription on stone and copper and in the colophone and text of palm leaf manuscripts........".

ಈ ರೀತಿಯಾಗಿ Edward Peter Rice ಇವನು 1920 ರ ಕಾಲದಲ್ಲಿ ಹೇಳಿದನು. ನಿಜಕ್ಕೂ ಕಾಲದ ಪರಿಸ್ಥಿತಿಯೂ ಹಾಗಿತ್ತು. E. P. Rice ಇವನು 1910 ರ ವರೆಗೂ ಕನ್ನಡದಲ್ಲಿ ಬೈಬಲ್ ಕೃತಿಗಳನ್ನು ರಚಿಸುತ್ತಾ ಇದ್ದು ಕಡೆಗೆ ಕನ್ನಡ ಸಾಹಿತ್ಯ ಚರಿತ್ರೆ, ಇಂಗ್ಲಿಷ್‌ನಲ್ಲಿ ಜೈಮಿನಿ ಭಾರತದ ಭಾಷಾಂತರ ವೊದಲಾದುವನ್ನು ಬರೆದನು. ಇವನ ಸಾಹಿತ್ಯ ಚರಿತ್ರೆಯು ಚಿಕ್ಕ ಪುಸ್ತಕವಾದರೂ ಅದರಲ್ಲಿ ಕವಿಕಾಲ ವಿಚಾರ, ಗ್ರಂಥ ಪರಿಚಯ, ಗ್ರಂಥ ವಿಮರ್ಶೆ ಇತ್ಯಾದಿಗಳನ್ನು ಬಹು ಸೂಕ್ತವಾಗಿ ಕೊಟ್ಟಿದ್ದಾನೆ. ಇವನ ಇಂಗ್ಲಿಷ್ ಕವಿಚರಿತೆ ಮತ್ತು ಇಂಗ್ಲಿಷ್ ಮಹಾಭಾರತ ಇವು ಪ್ರಸಿದ್ಧವಾಗಿವೆಯಲ್ಲದೆ ಅವು ಒಂದೆರಡು ಬಾರಿ ಪುನರ್ಮುದ್ರಣವೂ ಆದುವು.

ಉತ್ತಮವಾದ ಕನ್ನಡ ಕಾವ್ಯಭಾಗಗಳನ್ನು Edward P. Rice ಇವನು ಅದೆಷ್ಟು ಸ್ಪಷ್ಟವಾಗಿ ಭಾಷಾಂತರಿಸಿದ್ದಾನೆಂಬುದಕ್ಕೆ ಅವನ ಜೈಮಿನಿ ಭಾರತದ ಭಾಗದಿಂದ ಚಂದ್ರಹಾಸ ಮತ್ತು ವಿಷಯೆ ಇವರನ್ನು ಕುರಿತಾದ ಅನುವಾದ ಭಾಗವನ್ನು ಇಲ್ಲಿ ಕೊಡಲಾಗಿದೆ :—

His Excellency Dushtabudhi,
Prime Minister of Kuntala's fair realm,
To Madana his much beloved son,
A father's blessing send. No common man
Is he who brings this note. 'Tis plainly shown
That this same Chandrahasa shall become
The sovereign lord of Kuntala. Bethink
What promise this holds forth for me and mine,
And how by us he should esteemed be.
Wherefore make no delay ; nor idly ask
His birth or rank, his prowess or his fame.
But forthwith give him VISHAVA...........

Now Vishava
Doth 'poison' mean. And such the writer meant.
But where is he can alter by one jot
What Destiny hath on the forehead writ ?
And so it was. That gentle maiden pure,

Whose heart was full of tender hopes of love,
Remembering oft what, ere her father went,
He promised her, -that he a bridegroom fit
Would find and send-saw here promise kept,
...............Since this most princely youth
Was marked by Fate to be the sovereign lord
On Kuntala's wide realm, what need to ask
His birth, his rank, or deeds already done.
"My father writes to give him Vishaye.
'Tis well. But by some mere mischance my name
Is wrongly writ. From this one letter's fault
Lest mischief fall, I will amend it straight."

Upon the mango bark within her reach
A gum exuding trickled down. This served
For ink. And with the point of finger nail
For pen, she deftly scratched the palm-leaf scroll,
And changed the Va to Ye. Then fastened swift
The seal as 'twas before........and turned
To leave the place........She rejoined her folk.

But when they looked upon her face
They noted there a new-born light, as if
Some happy secret found. They questioned her-
"How now? Where didst thou stray so long?........,
Thy face is like a book that can be read...........".

**೪. ಜಾನ್ ಬುಚೆರ್ ಇವನು ಕನ್ನಡ ನಿಘಂಟುಕಾರರಲ್ಲಿ ಕಡೆಯವನು :—**

John Bucher ಇವನ ಕನ್ನಡ–ಇಂಗ್ಲಿಷ್ ಅರ್ಥಕೋಶವು 1899 ರಲ್ಲಿ ಪ್ರಥಮಬಾರಿಗೆ ಪ್ರಕಟವಾಯಿತು. Rev. Kittel ಇವನ ಬೃಹದರ್ಥಕೋಶದ ಛಾಯೆಯಂತಿದ್ದ ಈ ಪುಟ್ಟ ಶಾಲಾ ನಿಘಂಟು ಅನಂತರ ಹಲವು ಬಾರಿ ಪುನರ್ಮುದ್ರಣವಾಗಿ ಶಾಲೆಗಳಲ್ಲಿ ಉಪಯೋಗಿಸಲ್ಪಟ್ಟಿತು. ಅದರ ಸಂಪಾದನಾ ಕಾರ್ಯದಲ್ಲಿ ತಾನು Rev. Kittel ಇವನ ಅರ್ಥಕೋಶಕ್ಕೆ ಋಣಿಯಾಗಿದ್ದೇನೆಂದು John Bucher ಇವನು ಹೇಳಿದ್ದಾನೆ.

ಕಳೆದ ಶತಮಾನದ ಪ್ರಾರಂಭದ ವರೆಗೂ ಅಮರಕೋಶ, ಶಬ್ದಮಂಜರಿ, ಧಾತುಮಂಜರಿ ಮುಂತಾದುವುಗಳೇ ನಿಘಂಟುಗಳಂತೆ ದೇಶೀಯರಲ್ಲಿ ಪ್ರಚಾರವಿದ್ದಾಗ ಐರೋಪ್ಯಾ ವಿದ್ವಾಂಸರು ಆಧುನಿಕ ರೀತಿಯಲ್ಲಿ ಅರ್ಥಕೋಶಗಳನ್ನು ಬರೆಯುವುದಕ್ಕೆ ಮೊದಲಾದರು, ಹಾಗೆ ಪ್ರಕಟವಾದ ಕೆಲವು ದೇಶೀಯ ಭಾಷಾ ನಿಘಂಟುಗಳು ಮತ್ತು

ಅವನ್ನು ರಚಿಸಿದವರ ಸಂಖ್ಯೆ ಇಡೀ ಭಾರತದಲ್ಲಿ ನೂರಾರು ಜನರಂತೆ ಇದ್ದರು. ವ್ಯಾಕರಣ ಪುಸ್ತಕಗಳು ಹೇಗೋ ಹಾಗೆಯೇ ಈ ನಿಘಂಟುಗಳ ರಚನೆಯಲ್ಲೂ ಪಾಶ್ಚಾತ್ಯರು ಯಾವೊಂದು ಭಾಷೆ ಮತ್ತು ಉಪಭಾಷೆಯನ್ನೂ ಬಿಡದೆ ಅವುಗಳ ಮೇಲೆಲ್ಲಾ ಶಾಸ್ತ್ರೀಯ ಗ್ರಂಥಗಳನ್ನು ಬರೆದಿದ್ದಾರೆ. ಹಿಮಾಲಯದ ವಾಯವ್ಯ ಭಾಗದ ಪುಷ್ಟು ಭಾಷೆಯಲ್ಲಿ Dr. George Smith ಇವನು ಉದ್ಭಾಮ ವ್ಯಾಕರಣವನ್ನು 1860 ರ ಕಾಲದಲ್ಲಿ ಬರೆದಂತೆ ಹಿಮಾಲಯದ ಈಶಾನ್ಯದಲ್ಲಿ ಚಿರಾಪುಂಜೆಯಂಥಾ ಸ್ಥಳದಲ್ಲೂ ಬೀಡುಬಿಟ್ಟು ಉತ್ತಮ ಶಾಲೆಗಳನ್ನು ನಡೆಸುತಿದ್ದ Rev. E. Roberts ಇವನು ಕೋಸೀ ಭಾಷಾ ವ್ಯಾಕರಣವನ್ನೂ ತಯಾರಿಸಿದನು. ಇಂಥಾ ವ್ಯಾಕರಣಗಳೊಡನೆಯೇ ಆಯಾ ಭಾಷೆಗಳ ಶಬ್ದಕೋಶ ಮತ್ತು ಅರ್ಥಕೋಶಗಳನ್ನೂ ನೂರಾರು ಸಹಸ್ರಾರು ಎಂಬಂತೆ ರಚಿಸಲಾಗಿದೆ.

ಉದ್ಭಾಮ ಕನ್ನಡ ನಿಘಂಟುಕಾರರಲ್ಲಿ William Reeve, Rev. Bouteloupe, ಮತ್ತು Fernandiz Kittel ಇವರು ಪ್ರಸಿದ್ಧರಾಗಿದ್ದಾರೆ. Reeve ಇವನು ಇಂಗ್ಲಿಷ್-ಕನ್ನಡ ಮತ್ತು ಕನ್ನಡ-ಇಂಗ್ಲಿಷ್ ನಿಘಂಟುಗಳು, Bouteloupe ಇವನು ಕನ್ನಡ-ಲ್ಯಾಟಿನ್ ನಿಘಂಟು ಇವುಗಳು folio ಪುಟಗಳಾ ಕೃತಿಯಲ್ಲಿ ಪ್ರಕಟವಾದುವು. Rev. Kittel ಇವನ ಶಬ್ದಕೋಶವು ಪರಿಪೂರ್ಣವಾದ ಒಂದು ಮಹಾಗ್ರಂಥವಾಗಿ ಪ್ರಕಟವಾಯಿತು. ಉಳಿದ ಶಾಲಾ ನಿಘಂಟುಕಾರರಲ್ಲಿ D. Sanderson, J. Garrett, F. Zeighler ಮತ್ತು J. Bucher ಇವರು ಪ್ರಸಿದ್ಧರಾಗಿದ್ದಾರೆ. ಇವರೆಲ್ಲರ ರಚನೆಯೂ ಇಂದಿನ ಯಾವ ನಿಘಂಟುಕಾರನ ಕೃತಿಗೂ ಕಡಿಮೆಯಲ್ಲದಂತೆ ಚೆಲೋದಾಗಿಯೂ ಪರಿಪುಷ್ಟವಾಗಿಯೂ ಇವೆ.

ಶಬ್ದಮಂಜರಿಗಳನ್ನು ಬರೆಯಲು John Hands ಇವನ ಕಾಲದಿಂದಲೇ ಆರಂಭಿಸಿದ್ದರು. ಈ ಮೇಲೆ ಹೇಳಿದವರಲ್ಲದೆ Wurth, Hudson, Graetor ಇವರೂ ಕಾವ್ಯಮಾಲಿಕೆ, ಕಥಾ ಸಂಗ್ರಹ, ಶಾಲಾ ವ್ಯಾಕರಣ ಮೊದಲಾದುವುಗಳಲ್ಲೆಲ್ಲಾ ಉತ್ತಮ ಶಬ್ದಕೋಶಗಳನ್ನು ಕೊಟ್ಟುದಲ್ಲದೆ ವಿವಿಧ ಪದಗಳ ಮೂಲ, ಧಾತು, ಪದಗಟ್ಟು ಇತ್ಯಾದಿಗಳನ್ನೂ ಚೆನ್ನಾಗಿ ವಿವರಿಸಿದ್ದಾರೆ.

### ೫. ರೀವ್ ಮತ್ತು ಕಿಟ್ಟೆಲ್ ಇವರು ಶ್ರೇಷ್ಠ ನಿಘಂಟುಕಾರರೆಂದೆನಿಸಿದರು :—

"The task has been at all times most laborious.... extremely insipid, uuprofitable and irksome." ಎಂಬುದಾಗಿ ಕನ್ನಡ ಅರ್ಥಕೋಶವನ್ನು ಮೊದಲ್ನಬಾರಿಗೆ ರಚಿಸಿದ William Reeve ಇವನು ಉದ್ಗಾರವನ್ನೆತ್ತಿದನು. ನಿಜಕ್ಕೂ ಆ ಕಾಲದಲ್ಲಿ ಅವನು ಹಾಗೆ ಹೇಳಿದ್ದು ಅಕ್ಷರಶಃ ನ್ಯಾಯವಾದ ಮಾತಾಗಿದೆ. ಹಾಗಿದ್ದರೂ ಅವನು ಅಂಥಾ ಒಂದು ಅಪಾರವಾದ ಸಾಹಿತ್ಯವನ್ನು ಸೃಷ್ಟಿಸಿ ಜಯಪ್ರದನಾದನು. ಒಂದಲ್ಲ, ಎರಡು ಎಂಬಂತೆ, ಇಂಗ್ಲಿಷ್-

ಕನ್ನಡ ಅರ್ಥಕೋಶದೊಡನೆ ಕನ್ನಡ-ಇಂಗ್ಲಿಷ್ ಅರ್ಥಕೋಶವನ್ನು ಅದಕ್ಕಿಂತ ಉತ್ತಮವಾಗಿ ಸಂಪಾದಿಸಿದನು. 1824 ರಷ್ಟು ಹಿಂದೆಯೇ ತಾನು ಏಕೆ ಅಂಥಾ ಒಂದು ಕೆಲಸವನ್ನು ಸಾಧಿಸಿದೆನೆಂಬುದನ್ನು ಹೀಗೆ ಹೇಳುತ್ತಾನೆ :—

> "The motives........chiefly that of furnishing facilities for promoting and expediting the mental and spiritual improvement......of those......amongst whom the Karnataka language is vernacular."

ಇಂಥಾ ಉನ್ನತವಾದ ಧ್ಯೇಯದಿಂದ ಕೈಗೊಂಡ ಈ ನಿಘಂಟುಗಳ ರಚನೆಯಲ್ಲಿ William Reeve ಇವನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಹು ದೊಡ್ಡ ಸ್ಥಾನವನ್ನು ಪಡೆದನೆಂದು ಹೇಳಬಹುದು. ಆದರನಂತರ Sanderson ಮತ್ತು Garret ಇವರು ಸಂಪಾದಿಸಿದ ಅರ್ಥಕೋಶಗಳಿಗೆ William Reeve ಇವನ ನಿಘಂಟುಗಳೆ ಆಧಾರವಾದುವು. ಹಾಗಿದ್ದರೂ ಇವರಿರ್ವರು ವಿದ್ವಾಂಸರೂ ಶಬಾರ್ಥ ನಿರೂಪಣೆಯಲ್ಲಿ ತಮ್ಮ ಸ್ವಸಾಮರ್ಥ್ಯ ಮತ್ತು ವಿದ್ವತ್ತನ್ನು ವಿಶೇಷವಾಗಿ ಪ್ರದರ್ಶಿಸಿದ್ದಾರೆ.

Fernandiz Kittel ಇವನಿಗೆ W. Reeve ಇವನ ನಿಘಂಟುಗಳು 'Wonderful production' ಎಂಬುದಾಗಿ ತೋರಿದುವು. ಹಾಗಿದ್ದರೂ ಎಲ್ಲಾ ಭಾರತೀಯ ಭಾಷೆಗಳಲ್ಲಿ ಉದ್ದಾಮ ಅರ್ಥಕೋಶಗಳು ಪ್ರಕಟವಾಗುತಿದ್ದಾಗ ಕನ್ನಡದಲ್ಲೂ ಅಂಥಾ ಒಂದು ಕೃತಿಯು ಹೊಸತಾಗಿ ಬರೆಯಲ್ಪಡಬೇಕೆಂಬುದರ ಅವಶ್ಯಕತೆಯನ್ನು ಅಂದಿನ ಐರೋಪ್ಯಾ ವಿದ್ವಾಂಸರು ಮನಗಂಡು ಆ ಕೆಲಸವನ್ನು Rev. Kittel ಇವನಿಗೆ ಒಪ್ಪಿಸಿದರು. ಆಗ ಮಂಗಳೂರಿನಲ್ಲಿದ್ದ Moegling, ಬೆಂಗಳೂರಿನಲ್ಲಿದ್ದ Benjamin Rice, ಧಾರವಾಡದಲ್ಲಿದ್ದ Zeighler, ಮೈಸೂರಿನಲ್ಲಿದ್ದ Garret, ಮದ್ರಾಸಿನಲ್ಲಿದ್ದ Burnell, ಬೊಂಬಾಯಿಯಲ್ಲಿದ್ದ Buehler ಮೊದಲಾದ ವಿದ್ವಾಂಸರು ಆಯಾ ಸ್ಥಳಗಳಲ್ಲಿ ಉಪಯೋಗಿಸಲ್ಪಡುತ್ತಿರುವ ಕನ್ನಡ ಪದ ಮತ್ತು ಪದಗಟ್ಟುಗಳನ್ನು ಅವನಿಗೆ ಒದಗಿಸಿಕೊಡಲು ಮುಂದೆ ಬಂದರು. ಹೀಗಾಗಿ ಕಡೆಗೆ :—

> "The Committee of the Basel Evengelical Mission Society requested the author (Rev. F. Kittel) in 1876 to undertake the compilation of Kannada-English dictionary, and, he rather reluctantly consented, being conscious of great difficulties connected with the task, but soon commenced the work with pleasure, as he found that several persons interested in the Dravidian languages were in favour of his doing it."

ಹೀಗೆ ಆರಂಭವಾದ ಈ ಶಬ್ದಕೋಶದ ಅಪಾರ ನಿಧಿಯು ಅನಂತರ ಕನ್ನಡ ಸಾಹಿತ್ಯಕ್ಕೆ ಕೈಗನ್ನಡಿಯಂತಾಯಿತು. Prof. Horace Wilson ಮತ್ತು Dr.

Monier Williams ಇವರ ೨೦೦೦ folio ಪುಟಗಳಿಗೂ ಮೀರಿದ ಸಂಸ್ಕೃತ-ಇಂಗ್ಲಿಷ್ ಅರ್ಥಕೋಶಗಳೂ ಅವನಿಗೆ ವಿಶೇಷ ಸಹಾಯಕವಾದುವು, ಎಂದು Rev. Kittel ಇವನು ಹೇಳುತ್ತಾನೆ. 1762 folio ಪುಟಗಳ ಈ ಅರ್ಥಕೋಶವು ಮಂಗಳೂರು ಬಾಸೆಲ್ ಮಿಷನ್ ಮುದ್ರಣಾಲಯದಲ್ಲಿ ಅಚ್ಚಾಗಿ 1894 ರಲ್ಲಿ ಪ್ರಕಟವಾಯಿತು. ಅದರ ಮುನ್ನುಡಿಯನ್ನು 1893 ರಲ್ಲಿ Rev. Kittel ಇವನು ಜರ್ಮನಿಯಿಂದ ಬರೆದು ಕಳುಹಿಸಿದನು. ಹದಿನೆಂಟು ವರ್ಷಗಳ ಕಾಲದ ಅವನ ನಿರಂತರ ಶ್ರಮವು ಆ ಅಮೋಘ ಶಬ್ದಕೋಶದ ಪ್ರತಿ ಪುಟದಲ್ಲೂ ಪ್ರತಿ ಪದದ ವಿವರಣೆಯಲ್ಲೂ ಸಾಧಿಸಿದ್ದಾನೆ. ಆದರೂ ಏನಾದರೂ ಲೋಪದೋಷಗಳಿದ್ದರೆ ಅದು ಅನಿವಾರ್ಯವೆಂದು ತನ್ನ ದೈನ್ಯಗುಣಕ್ಕನುಸಾರವಾಗಿ ಹೀಗೆ ಹೇಳುತ್ತಾನೆ:—

> "It would be a matter of futility and imposibility for a single person with limited time to go and search every hamlet for the perhaps possible verification of this or that term of little importance ........in such a case a Munshi's word is to be relied upon, though an occasional error may happen."

**೬. ಕನ್ನಡ ನಾಡಿನ ಮತ್ತು ಸಾಹಿತ್ಯದ ಚರಿತ್ರೆಯನ್ನು ಅನ್ವೇಷಿಸಿದ ವೀರರು:**

Col. C. Mackenzie, Mark Wilkes ಮೊದಲಾದವರಿಂದ ಮೊದಲ್ಗೊಂಡು ಈ ನಾಡಿನ ಚರಿತ್ರೆಯನ್ನು ಕಳೆದ ಶತಮಾನದ ನೂರು ವರ್ಷಗಳ ಕಾಲವೂ ಹಲವು ಆಂಗ್ಲ ಚರಿತ್ರಕಾರರು ಅನ್ವೇಷಿಸುತ್ತಲೇ ಇದ್ದರು. ಕಟ್ಟಕಡೆಗೆ ಕ್ರಿ. ಶ. 1870 ರಿಂದ 1900 ರ ಕಾಲದ ಅವಧಿಯಲ್ಲಿ ಅವನ್ನೆಲ್ಲಾ ಒಂದು ನಿಶ್ಚಿತ ಮಟ್ಟಕ್ಕೆ ತಂದಿಳಿಸಿದವರು Dr. Fleet, Prof. Hultzsch ಮತ್ತು Benjamin Rice ಇವರೆಂದೆನ್ನಬಹುದು. ಕೇಂದ್ರ ಸರಕಾರ, ಬೊಂಬಾಯಿ, ಮದ್ರಾಸು ಮತ್ತು ಮೈಸೂರು ಪ್ರಾಂತ ಸರಕಾರಗಳ ಮೂಲಕವಾಗಿ ಕೈಗೊಂಡ ಆ ಅದ್ಭುತ ಅನ್ವೇಷಣಾ ಯತ್ನವು 1900ರ ಕಾಲಕ್ಕೆ ಮುಗಿದಂತಾಯಿತು. ಕ್ರಿ.ಶ. ಒಂದನೇ ಮತ್ತು ಎರಡನೇ ಶತಮಾನಗಳ ಕಾಲದ ಹಳೆಗನ್ನಡ ಪಾಲೀ ಮತ್ತು ಸಂಸ್ಕೃತ ಶಾಸನಗಳಲ್ಲದೆ ಕ್ರಿ. ಶ. 300ರ ಪ್ರಮಾಣಟೀಕೆಗಳ ಶಾಸನಗಳು, ಕ್ರಿ. ಶ. 675ರ ಕಿಗ್ಗ ಮತ್ತು ಕೊಪ್ಪಳದ ಶಾಸನಗಳು ಹೀಗೆ ಇನ್ನೂ ಹಲವು ಅಥವಾ ಸಹಸ್ರಾರು ಶಾಸನಗಳು ಪ್ರಾಚೀನ ಕರ್ನಾಟಕದ ಇತಿಹಾಸದ ಬಗ್ಗೆ ಹಲವು ಹೊಸ ವಿಚಾರಗಳನ್ನೀಯಿತು. Epigraphia Garnatica, South Indian Inscriptions, Epigraphia Indica ಮೊದಲಾದ ಗ್ರಂಥಗಳು ನಾಡಿನ ಪೂರ್ವಾನ್ವೇಷಣೆಯ ಪ್ರತೀಕವಾಗಿ ಶೋಭಿಸುವುವು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಮೊದಲ ಬಾರಿಗೆ ಬರೆಯಲು ಪ್ರಾರಂಭಿಸಿದ ವಿದ್ವಾಂಸರಲ್ಲಿ Fernandiz Kittel ಮತ್ತು Benjamin Rice ಇವರು ಪ್ರಮುಖರಾಗಿದ್ದರು. ಇವರಿಬ್ಬರೂ ತಾವು ಸಂಪಾದಿಸಿದ ಶಬ್ದಮಣಿದರ್ಪಣ,

ಶಬ್ದಾನುಶಾಸನ, ಛಂದೋಂಬುಧಿ, ಭಾಷಾಭೂಷಣ, ಪಂಪ ರಾಮಾಯಣ ಇತ್ಯಾದಿ ಗ್ರಂಥಗಳಲ್ಲಿ ಬರೆದ ನೂರಾರು folio ಪುಟಗಳ ಮುನ್ನುಡಿಗಳು ಕನ್ನಡ ಸಾಹಿತ್ಯ ಚರಿತ್ರೆಯೇ ಆಗಿವೆ. Rev. Kittel ಇವನು ಸಾಹಿತ್ಯ ಚರಿತ್ರೆಯನ್ನು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ (Ancient, Medieval ಮತ್ತು Modern) ಎಂಬುದಾಗಿ ವಿಭಾಗಿಸಿದನು. ಅದೇ ಸಿದ್ಧಾಂತವು ಇಂದಿಗೂ ಉಳಿದಿದೆ. Benjamin Rice ಇವನು ತನ್ನ Mysore Gazetteer–ಭಾಗ ೧, ಮತ್ತು ಶಬ್ದಾನುಶಾಸನಕ್ಕೆ ಬರೆದ ಮುನ್ನುಡಿಗಳು ಕನ್ನಡ ಸಾಹಿತ್ಯ ಚರಿತ್ರೆಗೆ ತಕ್ಕ ರೂಪನ್ನು ಕೊಟ್ಟಿತು. ಅಲ್ಲದೆ ಅದನ್ನು "the most readable account in English on Kannada literature" ಎಂಬುದಾಗಿ Edward P. Rice ಇವನು ಹೇಳಿದನು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಇವರೆಲ್ಲರಿಗಿಂತಲೂ ಮೊದಲಾಗಿ ಹೇಳಲು ತೊಡಗಿದವನು ಮತ್ತೊಬ್ಬ ಜರ್ಮನ್ ವಿದ್ವಾಂಸ Rev. G. Wuerth ಇವನು, ಹಲವು "ಕಾವ್ಯಮಾಲಿಕೆ"ಗಳನ್ನು ಸಂಪಾದಿಸಿ ಪ್ರಕಟಿಸಿದ ಇವನು 1870ರ ಕಾಲಕ್ಕೆ ಪ್ರಾಚೀನ ಕನ್ನಡ ಸಾಹಿತ್ಯದ ಕಡೆಗೆ ದೀರ್ಘದೃಷ್ಟಿಯನ್ನು ಬೀರಿ ಸೂಕ್ಷ್ಮ ಪರಿಶೀಲನೆಯನ್ನು ನಡೆಸಿದನು. ಅವನನಂತರ ತನ್ನ "ಛಂದೋಂಬುಧಿ"ಯ ಮುನ್ನುಡಿಯಲ್ಲಿ Rev. Kittel ಇವನು 1874ರಲ್ಲಿ ಇನ್ನಷ್ಟು ವಿಶದವಾಗಿ ಅದೇ ವಿಷಯವನ್ನು ಪ್ರಸ್ತಾಪಿಸಿದನು. ಹೀಗೆ Wuerth, Kittel, Rice ಮತ್ತು ಇವರಿಗೆ ಸಹಾಯಕರಾಗಿ Burnell, Pope, Buehler, Hultzch, Fleet ಮೊದಲಾದವರು ಸೇರಿ ಕನ್ನಡ ನಾಡು ಮತ್ತು ಸಾಹಿತ್ಯದ ಚರಿತ್ರೆಗೆ ತಕ್ಕ ತಳಹದಿಯನ್ನು ಹಾಕಿದರು. ಅದರನಂತರ ರಾ. ನರಸಿಂಹಾಚಾರ್ಯನ 'ಕವಿಚರಿತ್ರೆ', ಆಲೂರು ವೆಂಕಟರಾಯನ 'ಕರ್ನಾಟಕ ಗತವೈಭವ' ಗೋವಿಂದ ಪೈ ಇವನ 'ಕವಿ ಕಾಲ ವಿಮರ್ಶೆ' ಇತ್ಯಾದಿ ಬರವಣಿಗೆಗಳೆಲ್ಲಾ ಆ ಪಾಶ್ಚಾತ್ಯ ವಿದ್ವಾಂಸರು ಹೇಳಿದ್ದರ ಮೇಲೆ ಕಟ್ಟಿದ ಭವ್ಯಕೋಟೆಗಳು ಮಾತ್ರ ಎಂದೆನ್ನಬಹುದಲ್ಲದೆ ಇವರಾರೂ ತಾವಾಗಿ ಮೂಲತಃ ಯಾವ ಸಂಶೋಧನೆಯನ್ನು ಮಾಡಿದರೋ ತಿಳಿಯದು.

## ೭. ಕನ್ನಡ ನಾಡಿನಿಂದಲೂ ಹಲಕೆಲವು ಐತಿಹ್ಯಗಳು ಸಾಗಿಸಲ್ಪಟ್ಟುವು :—

ಕ್ರಿ. ಶ. 18 ನೇ ಶತಮಾನದಿಂದ ಈಚೆಗೆ ಸುಮಾರು 50 ವರ್ಷಗಳ ಕಾಲ ಫ್ರೆಂಚರು. ಡಚ್ಚರು ಮತ್ತು ಪೋರ್ಚುಗೀಸರು ಈ ದೇಶದ ಬಂದ್ರುಗಳಿಂದ ಓಡಾಡಿ ಸಹಸ್ರಾರು ಚಾರಿತ್ರಿಕ ವಸ್ತುಗಳನ್ನು ಯೂರೋಪು ಖಂಡಕ್ಕೆ ಸಾಗಿಸಿದ್ದಾರೆ. ಅಂಥಾ ಐತಿಹಾಸಿಕ ಅನ್ವೇಷಣೆಯಲ್ಲಿ ಬ್ರಿಟಿಷರೇ ಕಡೆಯವರೆಂದೆನ್ನಬಹುದು.

ಕನ್ನಡನಾಡಿನ ಬಗ್ಗೆ ಹೇಳುವುದಾದರೆ ಬಿಜಾಪುರ ಬೆಳಗಾವಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಹಂಪಿ, ಶ್ರೀರಂಗಪಟ್ಟಣ ಮೊದಲಾದ ಸ್ಥಳಗಳಿಂದ ಹಲವು ಚಾರಿತ್ರಿಕ ಕುರುಹುಗಳು ಅಂದೇ ವಿದೇಶಗಳಿಗೆ ಸಾಗಿಸಲ್ಪಟ್ಟವೆ. ಫ್ರೆಂಚರ ಮೂಲಕವಾಗಿ ಶ್ರೀರಂಗಪಟ್ಟಣದಿಂದ ಅದೆಷ್ಟೋ ಪ್ರಾಚೀನ ಗ್ರಂಥಗಳೂ ಟಿಪ್ಪುವಿಗೆ ಸೇರಿದ್ದ ಮರ

ಮುಟ್ಟುಗಳೂ ಪ್ಯಾರಿಸಿಗೆ ಹೋಗಿವೆ. ಕೆಲವನ್ನು ಅಂತೆಯೇ ಹಾಲೆಂಡು, ಮಾಸ್ಕೋ, ಲಿಸ್ಬನ್ ಇತ್ಯಾದಿ ಸ್ಥಳಗಳಿಗೆ ಒಯ್ಯಲಾಗಿವೆ. ಪೋರ್ಚುಗೀಸರು ಗೋವಾ, ಕಾರವಾರ, ಬೆಳಗಾವಿ ಮತ್ತು ಮಂಗಳೂರಿನಿಂದ ಹಲವು ಗ್ರಂಥಗಳನ್ನೂ ಶಿಲಾಶಾಸನ ಮತ್ತು ವಿಗ್ರಹಗಳನ್ನೂ ಯೂರೋಪಿಗೆ ಸಾಗಿಸಿದ್ದಾರೆ.

ಇಂಗ್ಲೆಂಡಿನ ವೆಲ್ಲಿಂಗ್ಟನ್ ವಸ್ತು ಸಂಗ್ರಹಾಲಯದಲ್ಲಿ ಶ್ರೀರಂಗಪಟ್ಟದಲ್ಲಿದ್ದ ಪರ್ಷಿಯನ್ ಓಲೆಗಳು, ಚಿನ್ನದ ಪದಕ ಮತ್ತು ಕೆಲವು ಖಡ್ಗಗಳು, ಸೇಂಡರ್ಸ್ಟ್‌ನಲ್ಲಿ ಮೈಸೂರು ಮತ್ತು ಕೊಡಗು ಯುದ್ಧಗಳಿಗೆ ಸಂಬಂಧಿಸಿದ ಖಡ್ಗಗಳು, ಚಿನ್ನದ ಪದಕಗಳು, ಬಣ್ಣ ಚಿತ್ರಗಳು ಮತ್ತು ಕೆಲವು ಶಿಲಾವಿಗ್ರಹಗಳು. ಲಂಡನ್ನಿನ ವಿಕ್ಟೋರಿಯಾ ಆಲ್ಬರ್ಟ್ ವಸ್ತು ಸಂಗ್ರಹಾಲಯದಲ್ಲಿ ಟಿಪ್ಪುವಿನ ಕುರ್ಚಿ. ಕೆಲವು ಆಭರಣ, ಅವನು ಉಪಯೋಗಿಸುತಿದ್ದ ಗಡಿಯಾರ; ಫ್ರೆಂಚರಿಂದ ನಿರ್ಮಿತವಾದ ಟಿಪ್ಪುವಿನ "ಹುಲಿ" ಕೆಲವು ಮರಮುಟ್ಟು ಇತ್ಯಾದಿಗಳು ಇವೆ. ಲಂಡನ್ನಿನ ವಿಶೇಷ ವಸ್ತು ಸಂಗ್ರಹಾಲಯದಲ್ಲಿ ಹೈದರನ ಖಡ್ಗ, ಹಂಪಿ, ಬಾದಾಮಿ ಮತ್ತಿತರ ಕಡೆಗಳಿಂದ ಸಾಗಿಸಲಾದ ಕುಸುರು ಕಲ್ಲು ವಿಗ್ರಹಗಳೂ ಬಣ್ಣ ಚಿತ್ರಗಳೂ ಇವೆ.

ಬೆಳಗಾವಿ ಜೈನ ಬಸದಿಯಿಂದ ದೊರಕಿದ ಸುಮಾರು ಹತ್ತನೇ ಶತಮಾನದ ಓಲೆ ಗ್ರಂಥ, ಹೈದರನು ತನ್ನ ಸೇನಾನಿಗೆ ಬರೆದ ಕನ್ನಡ ಪತ್ರ, ತೆಲುಗು ಮತ್ತು ಕನ್ನಡದಲ್ಲಿ ಬರೆಯಲಾದ ಕಾಲಗಣನೆ ವಿಚಾರ, ರಾಷ್ಟ್ರಕೂಟರ ಕಾಲದ ಕನ್ನಡ ತಾಮ್ರಶಾಸನ, ಮೊದಲಾದುವುಗಳೂ ಅಲ್ಲಿ ಇವೆ. Major T. B. Jervis ಇವನು 1843 ರ ಕಾಲದಲ್ಲಿ ಸಂಪಾದಿಸಿದ "ಅತಿಕಾಯನ ಕಾಳಗ–ಇಂದ್ರಕೀಲ" ಹೀಗೆ ಕೆಲವು ಕನ್ನಡ ಓಲೆಗಳನ್ನು ಲಂಡನ್ ಗ್ರಂಥಭಂಡಾರಗಳಿಗೆ ಒಪ್ಪಿಸಿದ್ದಾನೆ. E. Thurston ಇವನು ಮೈಸೂರಿನ Coins Catalogue ಎಂಬುದಾಗಿ 1888 ರಲ್ಲಿ ತಯಾರಿಸಿದ ಒಂದು ವರದಿಯು ಕೈಬರೆಹದಲ್ಲಿಯೇ ಇದೆ. Col. C. Mackenzie ಇವನು ದಕ್ಷಿಣ ಹಿಂದೂಸ್ಥಾನದಲ್ಲಿ ನಡೆಸಿದ ಅನ್ವೇಷಣೆಯನ್ನು ಸ್ಮರಿಸಿ ಮತ್ತು ಪ್ರಶಂಸಿಸಿ ಬರೆದ ಕೈ ಬರೆವಣಿಗೆ ಓಲೆಯೂ ಅಂತೆಯೇ ಇದೆ. ಕೊಡಗಿನ "ರಾಜೇಂದ್ರ ನಾಮೆ" ಯ ಪರ್ಷಿಯನ್ ಭಾಷಾಂತರವೂ ಟಿಪ್ಪುವಿಗೆ ಸೇರಿದ ಕೆಲವು ಪರ್ಷಿಯನ್ ಓಲೆ ಬರೆಹಗಳೆಲ್ಲಾ ಅಂತೆಯೇ ಇವೆ.

Major Jervis ಇವನು ಪಶ್ಚಿಮ ಹಿಂದೂಸ್ಥಾನದ ಜೈನ ಬಸದಿಗಳಿಗೆ ಸಂಬಂಧಿಸಿದ ಮತ್ತು ಕ್ರಿ.ಶ. 1191 ಮತ್ತು 1260 ರ ಕೆಲವು ಕನ್ನಡ ತಾಳೆ ಓಲೆಗಳೂ ಕನ್ನಡನಾಡಿನ ಇತರ ಕಡೆಗಳಿಂದ ಸಾಗಿಸಲಾದ ಇನ್ನೆಷ್ಟೊ ಸಂಸ್ಕೃತ. ಪರ್ಷಿಯನ್ ಮತ್ತು ಹಳೆಗನ್ನಡ ಓಲೆಗಳು ಲಂಡನ್ನಿನ ಗ್ರಂಥಭಂಡಾರಗಳಲ್ಲಿ ಇವೆ. ಕನ್ನಡ ಭಾಷೆಯಲ್ಲಿರುವ ಮತ್ತು ಕನ್ನಡನಾಡಿನ ವಿವಿಧ ವಿಚಾರಗಳನ್ನು ಕುರಿತು ಇಂಗ್ಲಿಷ್. ಫ್ರೆಂಚ್, ಜರ್ಮನ್, ಪೋರ್ಚುಗೀಸ್ ಇತ್ಯಾದಿ ಭಾಷೆಗಳಲ್ಲಿ ಬರೆಯಲ್ಪಟ್ಟಿರುವ ಗ್ರಂಥಗಳ ಸಂಖ್ಯೆಯು ಯೂರೋಪಿನಲ್ಲಿ ಒಟ್ಟಾಗಿ 30.000 ದಷ್ಟಾದರೂ ಇವೆಯೆಂದು ಹೇಳಬಹುದು. ಇದು ಬರೇ ಕನ್ನಡನಾಡಿಗೆ ಸಂಬಂಧಿಸಿದ ಗ್ರಂಥಗಳ ಸಂಖ್ಯೆಯಾದರೆ ಇಡೀ ಭಾರತವನ್ನು ಕುರಿತಾದ ಗ್ರಂಥಗಳ ಸಂಖ್ಯೆಯು ಲಕ್ಷಗಟ್ಲೆಯಾಗಿ ಇರಬಹು

ದೆಂದು ಧಾರಾಳವಾಗಿ ಹೇಳಬಹುದು.

## ೮. ಸಾಹಿತ್ಯ ಉತ್ಕ್ರಾಂತಿಯ ಗಾಳಿಯು ಹೀಗೆ ಯೂರೋಪಿನತ್ತ ಬೀಸಿತು :—

ಕಳೆದ ಶತಮಾನದಲ್ಲಿ ನಡೆದ ಭಾರತೀಯ ಸಾಹಿತ್ಯದ ಉತ್ಕ್ರಾಂತಿಯು ಸಾಮಾನ್ಯವಾದುದಾಗಿರಲಿಲ್ಲ. ಈ ದೇಶದಿಂದ ಒಯ್ಯಲ್ಪಟ್ಟ ಗ್ರಂಥಗಳು, ಈ ದೇಶದ ವಿಚಾರವಾಗಿ ಬರೆದ ಉದ್ದಾಮ ಗ್ರಂಥಗಳು, ಅವರು ನಡೆಸಿದ ಪರಿಶೋಧನೆ ಮತ್ತು ಪರಿಶೋಧನೆಗಳೆಲ್ಲವೂ ಮೂರ್ತಿವತ್ತಾಗಿ ಯೂರೋಪು ಖಂಡದ ಪ್ರಧಾನ ನಗರಗಳಾದ ರೋಮ್, ಲಿಸ್ಬನ್, ಪ್ಯಾರಿಸ್, ಲಂಡನ್, ಬರ್ಲಿನ್, ಫ್ಲೋರೆನ್ಸ್, ಕೊಪನ್ ಹೆಗನ್, ವಿಯೆನ್ನಾ, ಮೊದಲಾದ ಇನ್ನೆಷ್ಟೋ ಸ್ಥಳಗಳಲ್ಲಿ ಕಾಣುತ್ತಿದೆ. ಈ ಒಂದೊಂದು ನಗರಗಳ ನಾಲ್ಕಾರು ಗ್ರಂಥಭಂಡಾರಗಳಲ್ಲೂ ಭಾರತೀಯ ಸಾಹಿತ್ಯವು ತುಂಬಿ ಹರಿಯುತ್ತಿದೆ.

17ನೇ ಶತಮಾನವಲ್ಲಿಯೇ ಐರೋಪ್ಯಾ ದೇಶದವರು ಹಿಂದೂಸ್ಥಾನದ ವಿಚಾರವಾಗಿ ಸಾಕಷ್ಟು ಬರೆದಿಟ್ಟದ್ದಾರೆ. 18ನೇ ಶತಮಾನಾಂತ್ಯದಲ್ಲಿ Mon. Michand ಇವನಂಥಾ ಫ್ರೆಂಚ್ ವಿದ್ವಾಂಸನು ಹೈದರಾಲಿ, ಮತ್ತು ಟಿಪ್ಪು ವಿಷಯವಾಗಿ ಉತ್ತಮ ಗ್ರಂಥಗಳನ್ನು ಬರೆದನು. ಅದೇ ಕಾಲಕ್ಕೆ ವಿಜಯನಗರ, ಇಕ್ಕೇರಿ, ಮರಾಠ, ಮತ್ತು ಮೊಗಲರ ವಿಷಯವಾಗಿ ಪೋರ್ಚುಗೀಸರು, ಡಚ್ಚರು, ಮತ್ತು ಇಟಾಲಿಯನ್ ವಿದ್ವಾಂಸರೂ ಬರೆದರು.

19ನೇ ಶತಮಾನಕ್ಕೆ ಬಂದಾಗ ಕರ್ನಾಟಕವೊಂದನ್ನೇ ಕುರಿತು ಹೇಳುವುದಾದರೆ, ಕಿತ್ತೂರು ಗಲಭೆ, ಚಿತ್ರದುರ್ಗ ಪಾಳೆಯಗಾರರ ಪತನ, ಸುರಪುರ ಬೇಡರ ದಂಗೆ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ನಡೆದ ರಾಜಕೀಯ ಕಲಹ, 1857 ರ ಸಿಪಾಯಿ ದಂಗೆಯಲ್ಲಿ ಕರ್ನಾಟಕದ ಪಾಲು–ಇತ್ಯಾದಿ ವಿವರಗಳನ್ನು ಕುರಿತು ಐರೋಪ್ಯಾ ಭಾಷೆಗಳಲ್ಲಿ ಸಾಕಷ್ಟು ಬರೆಯಲ್ಪಟ್ಟವೆ. ಗೋವಾದಲ್ಲಿದ್ದ ಪೋರ್ಚುಗೀಸ್ ವಿದ್ವಾಂಸರಂತೂ ಪಶ್ಚಿಮ ಕರ್ನಾಟಕ ಜಿಲ್ಲೆಗಳು, ಮಲೆನಾಡು ಸಂಪತ್ತು, ಪಶ್ಚಿಮ ಸಮುದ್ರದಲ್ಲಿ ವ್ಯಾಪಾರ ವ್ಯವಹಾರ, ಇತ್ಯಾದಿಗಳ ವಿಷಯವಾಗಿ ಅಸಂಖ್ಯ ಗ್ರಂಥಗಳನ್ನು ಬರೆದಿದ್ದಾರೆ.

ಪ್ರಾಕ್ತನ ವಿಚಾರ ಪರಿಶೋಧನೆಯಲ್ಲಿ ಫ್ರೆಂಚರು ಇತರರಿಗಿಂತ ವಿಶೇಷ ಆಸಕ್ತಿಯನ್ನು ವಹಿಸಿದ್ದರು. ಈಜಿಪ್ಟ್ ದೇಶದ ಪ್ರಾಕ್ತನ ಪರಿಶೋಧನೆ (Egyptology) ಯನ್ನು ನಡೆಸಿದ ಇವರು ಈ ದೇಶದಲ್ಲಿ ಸಹಸ್ರಾರು ಪ್ರಾಚೀನ ಶಾಸನಗಳನ್ನೂ ಐತಿಹಾಸಿಕ ಅವಶೇಷಗಳನ್ನೂ ಸಂಗ್ರಹಿಸಿ ಅವುಗಳಲ್ಲಿ ಹಲವನ್ನು ತಮ್ಮ ದೇಶಕ್ಕೆ ಕೊಂಡೊಯ್ದರು. ಅಂದು ಫ್ರಾನ್ಸಿನ ಚಕ್ರವರ್ತಿಯಾಗಿದ್ದ Napoleon Bonaparte ಇವನೂ ಅಂಥಾ ಅನ್ವೇಷಣೆಯಲ್ಲಿ ಅಭಿರುಚಿಯಿದ್ದವನಾಗಿ ಈಜಿಪ್ಟಿನಿಂದ ಹೇಗೋ ಹಾಗೆಯೇ ಇತರ ದೇಶಗಳಿಂದಲೂ ಹಲವು ಪುರಾತನ ಪ್ರತಿಮೆಗಳನ್ನೂ ಸ್ಮಾರಕಾವಶೇಷಗಳನ್ನೂ ಸಂಗ್ರಹಿಸಲು ಕಾರಣರಾದರು. ಇದರ ಪರಿಣಾಮವಾಗಿ

ಪ್ಯಾರಿಸ್ ನಗರವು ವಿದ್ಯಾ ವ್ಯಾಸಂಗಕ್ಕೆ ಪ್ರಧಾನ ಕೇಂದ್ರವಾಯಿತು. ಭಾರತೀಯ ವಿದ್ಯೆಯನ್ನು ಪಡೆಯಲು ಸಂಸ್ಕೃತ ವ್ಯಾಸಂಗವನ್ನು ಕೈಕೊಳ್ಳಲು Von Schelegel ಇವನಂಥಾ ನೂರಾರು ಪ್ರಚಂಡ ಜರ್ಮನ್, ಡಚ್ಚ್, ಸ್ಪ್ಯಾನಿಷ್ ಇತ್ಯಾದಿ ವಿದ್ಯಾರ್ಥಿಗಳೂ ಆ ಕಾಲದಲ್ಲಿ ಪ್ಯಾರಿಸ್‌ಗೆ ಹೋಗುತಿದ್ದರು.

ಪಾಶ್ಚಾತ್ಯ ವಿದ್ವಾಂಸರೂ, ಕ್ರೈಸ್ತಗುರುಗಳೂ, ಸರಕಾರೀ ನೌಕರರೂ, ಸೇನಾನಿಗಳೂ ಈ ದೇಶದಿಂದ ಅದೆಷ್ಟು ಲಿಖಾವಟ್ಟುಗಳನ್ನು ಸಂಗ್ರಹಿಸಿದರೆಂದು ಇಂದಿಗೂ ಎಣಿಸಲಸಾಧ್ಯವಾದ ವಿಚಾರವಾಗಿದೆ. Col. Colin Mackenzie ಇವನೊಬ್ಬನೇ ಒಂದು ಹಡಗಿಗೆ ತಕ್ಕಷ್ಟು ಸಾಹಿತ್ಯರಾಶಿಯನ್ನು ಸಂಗ್ರಹಿಸಿದ್ದಾನೆ. ಮದ್ರಾಸು ಸರಕಾರದಲ್ಲಿ ದುಡಿಯುತಿದ್ದ C. M. Whish ಇವನು ವೇದ ಭಾಷ್ಯ, ಬ್ರಹ್ಮಗೀತ, ಮಹಾಭಾರತ, ತಲಾಕಾವೇರಿ ಮಹಾತ್ಮೆ, ಮೀಮಾಂಸ ದರ್ಶನ, ವಿವೇಕ ಚೂಡಾಮಣಿ, ಕಥಾ, ಮುಂಡಕ ಮತ್ತು ತೈತೀರ್ಯೋಪನಿಷತ್ತುಗಳು, ಖಗೋಳ ಮತ್ತು ಗಣಿತಶಾಸ್ತ್ರ ಗ್ರಂಥಗಳು ಎಂದಿತ್ಯಾದಿಯಾಗಿ 300ಕ್ಕೂ ಮೇಲ್ಪಟ್ಟ ಓಲೆಗಳನ್ನು ಸಾಗಿಸಿದ್ದಾನೆ.

ಇವೆಲ್ಲಾ ಕಳೆದ ಶತಮಾನದ ಪೂರ್ವಾರ್ಧದಲ್ಲಿಯೇ ನಡೆಸಲ್ಪಟ್ಟ ಅದ್ಭುತ ಸಂಶೋಧನಾ ಸಾಹಸವಾಗಿದೆ. ಭಾರತದಿಂದ ಅಂದು ಹೋಗುತಿದ್ದ ಹಡಗುಗಳಲ್ಲಿ ಈ ಗ್ರಂಥರಾಶಿಗಳೇ ಅವುಗಳ ಬಹು ಭಾಗವನ್ನು ಆಕ್ರಮಿಸಿರುತಿದ್ದುವೆಂದು ಹೇಳಲಾಗಿದೆ. ಯಾವೊಂದು ಚೂರು ಓಲೆಯನ್ನೂ ವೃಥಾ ಕೆಡಿಸದೆ ಅವೆಲ್ಲವನ್ನೂ ಯೂರೋಪು ಖಂಡದ ಆದ್ಯಂತಕ್ಕೂ ಅಂದೇ ಚೆಲ್ಲಾಡಿ ಅವುಗಳನ್ನು ಸದ್ವಿನಿಯೋಗಪಡಿಸಿ ಕಾದಿರಿಸಿದ ಅವರು ಅದೆಷ್ಟೋ ಮಂದಿ ವೀರ ಸಾಹಿತಿಗಳು; ಸುಸಂಸ್ಕೃತರಾದ ನಾಗರಿಕರು; ಭಾರತದ ವೈಭವವನ್ನು ವಿದೇಶಗಳಲ್ಲಿ ಪ್ರಚಾರಪಡಿಸಲು ದೌತ್ಯವನ್ನು ಕೈಗೊಂಡ ವಿದ್ಯಾಭಿಮಾನಿಗಳು!

## ೯. ಎಲ್ಲಾ ಭಾಷೆಗಳಲ್ಲೂ ಪ್ರಚಂಡ ಅರ್ಥಕೋಶಗಳು :—

ಪಾಶ್ಚಾತ್ಯ ವಿದ್ವಾಂಸರು ದೇಶೀಯ ಸಾಹಿತ್ಯಕ್ಕೆ ಇತ್ತ ಅಭೂತಪೂರ್ವ "ಕಾಣಿಕೆ" ಯೆಂದರೆ ಎಲ್ಲಾ ಭಾಷೆಗಳಲ್ಲೂ ಅವರು ಸಂಪಾದಿಸಿ ಪ್ರಕಟಿಸಿದ ನಿಘಂಟುಗಳು ಅಥವಾ ಅರ್ಥಕೋಶಗಳು. ಸಂಸ್ಕೃತ ಭಾಷೆಯಲ್ಲಿ ನಿಘಂಟುಗಳ ಸಂಪಾದನಾ ಕಾರ್ಯವು Wilkins, Halhed, Carey, Wilson ಈ ಮೊದಲಾದ ಪಂಡಿತರಿಂದ ಪ್ರಾರಂಭವಾಯಿತು. ಅದರಂತೆಯೇ ಭಾರತದ ನೂರಾರು ಚಿಕ್ಕ ಮತ್ತು ದೊಡ್ಡ ಭಾಷೆಗಳಲ್ಲೂ ನಿಘಂಟುಗಳು ಕಳೆದ ಶತಮಾನದ ಮೊದಲ ಭಾಗದಲ್ಲಿಯೇ ರಚಿಸಲ್ಪಟ್ಟುವು.

ಸುಮಾರು ಕ್ರಿ.ಶ. 1790 ರಿಂದ 1875ರ ವರೆಗಿನ ಆ 85 ವರ್ಷಗಳ ಅವಧಿಯಲ್ಲಿ ಅರ್ಥಕೋಶ ಮತ್ತು ಶಬ್ದಮಂಜರಿಗಳು ಬಹು ದೊಡ್ಡ ಪ್ರಮಾಣದಲ್ಲಿ ಸಂಪಾದಿತವಾದುವಲ್ಲದೆ ಅವೆಲ್ಲವೂ ಆಯಾ ಭಾಷೆಗಳ ಸಾಹಿತ್ಯ ಸಂಪತ್ತನ್ನೂ ಭಾಷಾಸಂಪತ್ತನ್ನೂ ಬಹುಮುಖವಾಗಿ ಪ್ರದರ್ಶಿಸಿದುವು. ಇಂದಿನ ಯಾವ ದೇಶೀಯ ವಿದ್ವಾಂಸನ ಯಾವ ಬಗೆಯ ಸಾಹಿತ್ಯ ವ್ಯಾಸಂಗಕ್ಕೂ ಅಂದಿನ ಆ ಪ್ರಚಂಡ ಪಾಶ್ಚಾತ್ಯ ಪಂಡಿತರು ರಚಿಸಿದ

ಆ ಅದ್ಭುತ ಅರ್ಥಕೋಶಗಳೇ ಕೈಗನ್ನಡಿಗಳಾದುವು.

ಹಿಂದೂಸ್ಥಾನದ ಎಲ್ಲಾ ಸಾಹಿತ್ಯ ಪ್ರಧಾನವಾದ ಭಾಷೆಗಳಲ್ಲೂ ಈ ರೀತಿ ಬೃಹದಾಕಾರದ ನಿಘಂಟುಗಳು ಕಳೆದ ಶತಮಾನದ ಪ್ರಾರಂಭದಲ್ಲಿ ಹೊರಟುದು ದೇಶದ ವಿದ್ಯಾಭ್ಯಾಸ ಮಟ್ಟದಲ್ಲಿ ಆದ ಬಹು ದೊಡ್ಡ ಮಾರ್ಪಾಟಾಗಿದೆ. Horace Wilson, Monier Williams ಹೀಗೆ ಹಲವರು ರಚಿಸಿದ ಸಂಸ್ಕೃತ ಅರ್ಥ ಕೋಶಗಳು ಎಲ್ಲಾ ಕಾಲಕ್ಕೂ ತಕ್ಕುದಾಗಿ ವಿರಾಜಿಸಿದುವು. ಅವುಗಳ ಪರಿಷ್ಕೃತ ಮುದ್ರಣವೂ ಹಲವು ಬಾರಿ ನಡೆದಿವೆ. Rev. William Carey ಇವನು ಬಂಗಾಳೀ-ಇಂಗ್ಲಿಷ್ ನಿಘಂಟನ್ನು ಕಳೆದ ಶತಮಾನಕ್ಕೆ ಹಿಂದೆಯೇ ರಚಿಸಿ ಭಾರ ತೀಯ ಭಾಷಾ ನಿಘಂಟುಗಳ ರಚನೆಗೆ ನಾಂದಿಯನ್ನು ಹಾಕಿದನು. ಕೂಡಲೇ ಅವನು ಪಂಜಾಬೀ ಮತ್ತು ಮರಾಠಿ ನಿಘಂಟುಗಳ ರಚನೆಗೂ ತೊಡಗಿ ಜಯಪ್ರದನಾದನು.

ಅವನನಂತರ ಬಂಗಾಳೀ-ಇಂಗ್ಲಿಷ್ ನಿಘಂಟನ್ನು ರಚಿಸಿದವರು ಹಲವರು ಇದ್ದ ರಾದರೂ ಅವರ ಪೈಕಿ William Morton ಇವನು ಪ್ರಮುಖನಾಗಿದ್ದಾನೆ. Halhed, Carey, Colebrooke ಮೊದಲಾದವರ ಸಮಕಾಲೀನನಾಗಿ ಪ್ರಬಲ ವಿದ್ವಾಂಸನಾಗಿದ್ದ Rev. Amos Sutton ಇವನು ಇಂಗ್ಲಿಷ್-ಒರಿಯಾ ನಿಘಂಟನ್ನು 1800 folio ಪುಟಗಳ ಮೂರು ಕಾಂಡಗಳಾಗಿ ಬರೆದದ್ದು 1841 ರಲ್ಲಿ ಪ್ರಕಟವಾಯಿತು. ಅದೇ ವೇಳೆಗೆ ಕನ್ನಡ ನಿಘಂಟುಗಳನ್ನು ತಯಾರಿಸಿ ಪ್ರಸಿದ್ಧನಾದ William Reeve ಇವನು ಒರಿಯಾ-ಇಂಗ್ಲಿಷ್ ಅರ್ಥಕೋಶವನ್ನು ಸಿದ್ಧಪಡಿಸಿ ದನು.

ಬಹು ಭಾಷಾ ವಿಶಾರದ Rev. William Carey ಇವನು ಮರಾಠಿ-ಇಂಗ್ಲಿಷ್ ಅರ್ಥಕೋಶವನ್ನು 1812 ರಷ್ಟು ಹಿಂದೆಯೇ ಮುದ್ರಿಸಿ ಹೊರತಂದನು. ಅದರನಂತರ 1857 ರಲ್ಲಿ Capt. J. T. Molesworth ಇವನು ಇನ್ನಷ್ಟು ವಿಸ್ತೃತವಾದ ಮರಾಠಿ-ಇಂಗ್ಲಿಷ್ ನಿಘಂಟನ್ನು ಬೆಳಕಿಗೆ ತಂದನು. ಹಿಂದೂಸ್ಥಾನೀ-ಇಂಗ್ಲಿಷ್ ಅರ್ಥಕೋಶಗಳನ್ನು ರಚಿಸಿದವರು ಹಲವರಿದ್ದಾರೆ. ಅವರಲ್ಲಿ Capt. J Ferguson ಮತ್ತು Duncan Forbes ಇವರು ಪ್ರಮುಖರು. Dr. Gilchrist ಇವನ ಹಿಂದೀ ಅರ್ಥಕೋಶವು ಅವನ ಅಪಾರ ಸಾಹಸವನ್ನು ಪ್ರದರ್ಶಿ ಸುತ್ತದೆ. Rev. J. D. Bate ಇವನು 1875 ರಲ್ಲಿ 820 folio ಪುಟಗಳ ಹಿಂದೀ-ಇಂಗ್ಲಿಷ್ ಅರ್ಥಕೋಶವನ್ನು ರಚಿಸಿದನು.

J. P. Rottler ಮತ್ತು J. Fabricious ಇವರು ತಮಿಳು-ಇಂಗ್ಲಿಷ್ ನಿಘಂಟನ್ನು ಬೇರೆ ಬೇರೆ ಕಾಲದಲ್ಲಿ ರಚಿಸಿದರು. Dr. Winslow ಇವನು 1862 ರಲ್ಲಿ ತಮಿಳು-ಇಂಗ್ಲಿಷ್ ಅರ್ಥಕೋಶವನ್ನು ಪರಿಷ್ಕರಿಸಿ ಬರೆದನು. J. Philip ಮತ್ತು J. Breithupt ಇವರು ಇಂಗ್ಲಿಷ್-ಮಲೆಯಾಳ ನಿಘಂಟನ್ನು ಒಡಗೂಡಿ ಸಿದ್ಧಪಡಿಸಿದರು. ಆದರೆ Dr. Gundart ಇವನು 1875 ರಲ್ಲಿ ಬರೆದ ಮಲೆ ಯಾಳ-ಇಂಗ್ಲಿಷ್ ಅರ್ಥಕೋಶವು ಸಮರ್ಪಕವಾದುದಾಗಿದೆ. ತೆಲುಗು-ಇಂಗ್ಲಿಷ್ ನಿಘಂಟು ಬರೆದವರಲ್ಲಿ Charles P. Brown ಇವನು ಪ್ರಮುಖನು. ಮತ್ತೊರ್ವ

ತೆಲುಗು ಭಾಷಾ ಪಂಡಿತ A. D. Campbell ಇವನೂ ಉತ್ತಮವಾದ ಒಂದು ತೆಲುಗು ಅರ್ಥಕೋಶವನ್ನು ಬರೆದನು.

Sir G. Abraham ಇವನು ಕಾಶ್ಮೀರಿ- ಇಂಗ್ಲಿಷ್ ನಿಘಂಟನ್ನು ಬರೆದನು. August Manners ಇವನು ತುಳು-ಇಂಗ್ಲಿಷ್ ನಿಘಂಟನ್ನು 1880 ರಲ್ಲಿ ಹೊರ ತಂದನು. ಇದೇ ರೀತಿ ಪಂಜಾಬೀ, ನೇಪಾಳೀ, ಗುಜರಾಥೀ, ಅಸ್ಸಾಮಿ, ಸಿಂಧೀ ಇತ್ಯಾದಿ ಎಲ್ಲಾ ಭಾಷೆಗಳಲ್ಲೂ ಅರ್ಥಕೋಶಗಳು ಮೇಲಿಂದ ಮೇಲೆ ಮುದ್ರಣವಾಗಿ ದೇಶದಲ್ಲಿ ಭಾಷಾ ಬೋಧೆ ದೃಷ್ಟಿಯಿಂದ ಕ್ರಾಂತಿಕಾರಕವಾದ ಪ್ರಗತಿಯು ತೋರ ತೊಡಗಿತು.

**೧೦. ವಿವಿಧ ಮುಖವಾಗಿ ಭಾರತೀಯ ಸಾಹಿತ್ಯದ ಪ್ರಚಾರ:**

ಕಳೆದ ಶತಮಾನದ ಕಡೇ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಈ ದೇಶದಲ್ಲಿ ಘಟಾನು ಘಟಿಗರಾದ ಪಾಶ್ಚಾತ್ಯ ಸಂಶೋಧಕರ ತಂಡವೊಂದು ಇದ್ದಿತು. ಕೇಂದ್ರ ಸರಕಾರದಲ್ಲಿ Gen. Cunningham ಮತ್ತು Sir William Hunter ಇವರು ಕಲ್ಕತ್ತಾದಿಂದ ಪ್ರಾಮುಖ್ಯ ನಿರ್ದೇಶಕರಾಗಿ ದುಡಿಯುತ್ತಿದ್ದರು. ಅವರ ನಂತರ Dr. Burgess ಇವನು Director–General of Archaeology ಈ ಸ್ಥಾನದಲ್ಲಿ 1886 ರಿಂದ ಇದ್ದನು. ಅವನು 1889 ರಲ್ಲಿ ನಿವೃತ್ತಿ ಯಾದೊಡನೆಯೇ ಆ ಹುದ್ದೆಯನ್ನು ರದ್ದುಗೊಳಿಸಲಾಯಿತು.

ಆದರೆ ಅದೇ ಕೆಲಸವನ್ನು ಬೇರೊಂದು ರೀತಿಯಲ್ಲಿ ಕೈಗೊಂಡು ದುಡಿದವರಲ್ಲಿ John Fleet ಮತ್ತು Edward Hultzsch ಇವರು ಪ್ರಮುಖರು. ಅವ ರಿಗೆ ನೆರವಾಗಿ ಬೊಂಬಾಯಿಯಲ್ಲಿ Buehler, ದಖ್ಖಣದಲ್ಲಿ Kielhorn, ಮದ್ರಾಸಿ ನಲ್ಲಿ Burnell, ಬೆಂಗಳೂರಿನಲ್ಲಿ Rice, ಹೀಗೆ ಹಲವರು ಇದ್ದರು. ಇವರೆಲ್ಲರ ಪ್ರಯತ್ನದ ಪರಿಣಾಮವಾಗಿ ಇಡೀ ದೇಶದ ಮತ್ತು ಕರ್ಣಾಟಕದ ಸಂಪೂರ್ಣ ಚರಿತ್ರೆಯು ಆಧಾರ ಸಹಿತವಾಗಿ ಬೆಳಕಿಗೆ ಬಂತು.

ಉತ್ತರ ಹಿಂದೂಸ್ಥಾನದಲ್ಲಿ ನೂರಾರು ಪಾಶ್ಚಾತ್ಯ ವಿದ್ಯಾತಜ್ಞರು ಸಂಸ್ಕೃತ ಪಾಲೀ, ಬ್ರಾಹ್ಮೀ, ತಿಬೇಟನ್, ಬರ್ಮಿ ಇತ್ಯಾದಿ ಭಾಷಾ ಸಾಹಿತ್ಯವನ್ನು ಬೆಳಕಿಗೆ ತರುತ್ತಲೆ ಇದ್ದರು. ಹಲವಾರು ಪ್ರಾಚೀನ ಮತ್ತು ಪೌರಾಣಿಕ ಗ್ರಂಥಗಳು ಇಂಗ್ಲಿಷ್‌ಗೆ ಇಳಿಸಲ್ಪಟ್ಟವು. Henry Colebrooke ಇವನು 1817 ರಲ್ಲಿ ಭಾಷಾಂತರಿಸಿದ ಭಾಸ್ಕರನ 'ಲೀಲಾವತಿ' ಗಣಿತ ಶಾಸ್ತ್ರವು ಅನಂತರ ಪ್ರಕಟವಾಯಿತು. Samuel Beal ಇವನ A Catena of Buddhist Philosophy, R. N. Chaplain ಇವನ Buddhist Pilgrim ಇಂಥಾ ಗ್ರಂಥಗಳು ಇನ್ನೂ ಹಲವು ಚೀನಿ, ತಿಬೇಟನ್, ಪಾಲೀ ಮೊದಲಾದ ಭಾಷೆಗಳಿಂದ ಐರೋಪ್ಯಾ ಭಾಷೆ ಗಳಿಗೆ ಇಳಿಸಲ್ಪಟ್ಟುವು.

ಅಲಹಾಬಾದ್‌ನಲ್ಲಿ ಹುಟ್ಟಿದ Sri Richard Temple ಇವನ ಅನ್ವೇ ಷಣಾ ಬರಹಗಳು ಮತ್ತು 1865 ರಲ್ಲಿ ಬೊಂಬಾಯಿಯಲ್ಲಿ ಹುಟ್ಟಿದ Rudyard

Kipling ಇವನ ಕಾವ್ಯ ಕಾದಂಬರಿಗಳೂ ಭಾರತೀಯ ಸಂಸ್ಕೃತಿಯನ್ನ ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಡಲು ಸಾಧಕಗಳಾಗಿದ್ದವು. ಅದೇ ವೇಳೆಗೆ ಕಳೆದ ಶತಮಾನಾಂತ್ಯಕ್ಕೆ Lord Curzon ಇವನನೇತೃತ್ವದಲ್ಲಿ Sri John Marshall ಇವನು ಭಾರತ ವಾಸ್ತುಶಿಲ್ಪ ಸಂಶೋಧನೆ ಮತ್ತು ಸಂರಕ್ಷಣಾ ಕಾರ್ಯವನ್ನೂ ಭರದಿಂದ ಸಾಗಿಸಿದನು.

ಭಾರತೀಯ ನಾಟ್ಯ ಕಲೆಯ ಬಗ್ಗೆ ವಿದೇಶೀಯರು ವಿಶೇಷ ಆಸಕ್ತಿ ವಹಿಸಿದ್ದರು. ಇತರ ದೇಶಗಳಲ್ಲಿ ನಾಟಕ ಕಲೆಯು ಕಿ. ಶ. 15 ನೇ ಶತಮಾನದ ವರೆಗೂ ಇಲ್ಲದೇ ಇದ್ದಾಗ ಈ ದೇಶದಲ್ಲಿ ನಾಟಕರಂಗ ಸ್ಥಳಗಳು ಸುಮಾರು 1500 ವರ್ಷಗಳಿಗೆ ಹಿಂದೆಯೇ ಇದ್ದು ನಾಟ್ಯ ಕಲೆಯು ಬಹು ಉನ್ನತಮಟ್ಟದಲ್ಲಿತ್ತೆಂದು ಅವರು ಹೇಳಿದರು. ಈ ವಿಷಯವಾಗಿ Dr. Monier Willliams ಇವನು ತನ್ನ 'ಶಾಕುಂತಳಾ' ಭಾಷಾಂತರದ ಮುನ್ನುಡಿಯಲ್ಲಿ ಈ ರೀತಿಯಾಗಿ ಹೇಳಿದ್ದನು.

"Considering that the nations of Europe can scarcely be said to have possessed a dramatic literature before the 14th or the 15th century, the greatest age of the Hindu plays would be of itself be a most interesting and attractive circumstance, even if their poetical merit were not of a very high order."

ಹಿಂದೂಸ್ಥಾನದಲ್ಲಿ ವರ್ತಮಾನ ಪತ್ರಿಕೆಗಳು 1780ರಿಂದೀಚೆಗೆ ಬಹು ಸಂಖ್ಯೆಯಲ್ಲಿ ಹುಟ್ಟಿದ್ದುವು. ಅವೆಲ್ಲಾ ಇಂಗ್ಲಿಷ್ ಪತ್ರಿಕೆಗಳೇ ಆಗಿದ್ದವು. ಬಂಗಾಳೀ ಭಾಷೆಯಲ್ಲಿ 1818 ರಲ್ಲಿ ಮೊದಲ ಬಾರಿಗೆ "ಸಮಾಚಾರ ದರ್ಪಣ"ಯೆಂಬ ಭಾರತೀಯ ಭಾಷಾ ಪತ್ರಿಕೆಯನ್ನು ಶ್ರೀರಾಮ್‌ಪುರ ಕ್ರೈಸ್ತ ಶಿಬಿರದಲ್ಲಿ ಹೊರಡಿಸಿದನಂತರ ರಾಜಾರಾಮ ಮೋಹನರಾಯನು ಪರ್ಷಿಯನ್ ಮತ್ತು ಬಂಗಾಳೀ ಭಾಷೆಗಳಲ್ಲಿ "ಮಿರಾಲ್‌ಉಲ್ ಅಕ್ಬರ್" ಅಥವಾ Mirror of News ಮತ್ತು "ಸಾಂಬತ್ ಕೌಮುದಿ" ಅಥವಾ Moon of Intelligence ಎಂಬೀ ಬಗೆಯ ಪತ್ರಿಕೆಗಳನ್ನು ಹೊರಡಿಸಿದನು. ಕಳೆದ ಶತಮಾನದ ಮೊದಲಾರ್ಧದಲ್ಲಿ ಎಲ್ಲಾ ದೇಶೀಯ ಭಾಷೆಗಳಲ್ಲಿ ಮೊದಲಬಾರಿಗೆ ಪತ್ರಿಕೆಗಳನ್ನು ಹೊರಡಿಸಿದವರು ಪಾಶ್ಚಾತ್ಯರೇ ಆಗಿದ್ದಾರೆ. ಕನ್ನಡದಲ್ಲೂ Rev. Moegling, John Garrett ಹೀಗೆ ಕೆಲವರು ಪತ್ರಿಕೆಗಳ ಸ್ಥಾಪನೆಗೆ ಮೊದಲಾದರು.

## ೧೧. ಅಳಿದುಳಿದ ಆರ್ಷೇಯ ಸಂಸ್ಕೃತಿಯನ್ನು ಪುನರ್ಜೀವಗೊಳಿಸಿದರು :

ಬಹು ಪ್ರತಿಭಾನ್ವಿತ ಜರ್ಮನ್ ವಿದ್ವಾಂಸರು ಈ ದೇಶದಿಂದಲೂ ಹೊರ ದೇಶಗಳಿಂದಲೂ ಭಾರತೀಯ ಸಂಸ್ಕೃತಿಯ ಬಗ್ಗೆ ದುಡಿಯುತ್ತಲೇ ಇದ್ದರು. Dr. Max Mueller, Max Dunker, Dr. Paul Deussean, ಈ ಗಣ್ಯ ಸಾಹಿತಿಗಳು ಭಾರತೀಯ ಐತಿಹ್ಯವನ್ನು ಚೀನಾ, ಟಿಬೇಟ್, ಬರ್ಮಾ, ಮೊದಲಾದೆಡೆ

ಗಳಿಂದ ತರಿಸಿ ಭವ್ಯ ಸಂಸ್ಕೃತಿಯ ಅಪಾರತೆಯನ್ನು ಜನಕ್ಕೆ ತಿಳಿಸಿದರು. ತಿಬೇಟಿನ ಬೌದ್ಧ ವಿಹಾರಗಳಿಂದ ಸಂಸ್ಕೃತ ಮತ್ತು ಪಾಲೀ ಭಾಷೆಗಳ ಅಸಂಖ್ಯ ಓಲೆಗಳನ್ನು ಅಲ್ಲಿನ ಲಾಮಾರಿಂದ ಸಂಪಾದಿಸಿದರು. ಸುಮಾರು 50,000 ವರ್ಷಗಳಿಂದೀಚೆಗಿನ ಸಾಹಿತ್ಯರಾಶಿಯು 2000 ವರ್ಷಗಳಿಗೆ ಹಿಂದೆ ಅಲೆಗ್ಸಾಂಡರನು ಈ ದೇಶಕ್ಕೆ ಕಾಲಿಡುವ ಮೊದಲೇ ನಿರ್ನಾಮವಾಗಿ ಹೋಗಿವೆ, ಅಲ್ಲಿಂದೀಚೆಗಿನ ಉಳಿದುಳಿದ ಕೆಲವನ್ನು ಪಾಶ್ಚಾತ್ಯರು ಬಹುದಕ್ಷತೆಯಿಂದ ಸಂಪಾದಿಸಿ ಭಾರತೀಯರ ಅವಗಾಹನೆಗೆ ತಂದರು.

ಶತ್ರುಗಳ ಧಾಳಿಯಿಂದ ತಪ್ಪಿಸಲು ಪೌರಾಣಿಕ ಹಾಗೂ ಮನ್ವಂತರಗಳಿಗೆ ಹಿಂದಿನ ಓಲೆಗಳನ್ನು ಪೂರ್ವಕಾಲದ ಅರಸರು ಮತ್ತು ಪಂಡಿತರು ಅವು ನಾಶವಾಗದಂತೆ ತಿಬೇಟ್ ದೇಶದತ್ತ ಕಳುಹಿಸಿ ಬಚ್ಚಿಟ್ಟಿದ್ದರು. ಹೀಗೆ ದೊರಕಿದ ಅಭೂತಪೂರ್ವ ಹಿಂದೂ ನಾಗರೀಕತೆಯ ಭವ್ಯತೆಯನ್ನೂ ಪೂರ್ವಕಾಲದ ಭೌತಶಾಸ್ತ್ರ, ಗಣಿತಶಾಸ್ತ್ರ, ಆಯುರ್ವೇದ, ಜ್ಯೋತಿಷ್ಯ, ಶುಶ್ರುತ, ಧನ್ವಂತರಿ, ಜಾರಭ, ಚೌರರ ಮೊದಲಾದವರ ವೈದ್ಯಕೀಯ ತಜ್ಞತೆಯನ್ನೆಲ್ಲಾ ಪಾಶ್ಚಾತ್ಯರೇ ಮೊದಲ ಬಾರಿಗೆ ಇಂದಿನ ಕಾಲದಲ್ಲಿ ತಿಳಿಸಿದರು. Mrs. C. Manning ಇವಳು ಶಸ್ತ್ರಚಿಕಿತ್ಸೆಗೆ ಉಪಯೋಗಿಸುತ್ತಿದ್ದ ಸಲಕರಣೆಗಳನ್ನು ಕುರಿತು.

"The surgical instruments of the Hindus were sufficiently sharp, indeed, as to be capable of dividing a hair longitudinally," ಎಂದು ಹೇಳಿದಳು.

ಇದೇ ವಿಷಯವನ್ನು ಕುರಿತು Sir William Hunter ಇವನು ತನ್ನ ಗಜೆಟಿಯರುಗಳಲ್ಲಿ ಇನ್ನಷ್ಟು ವಿಷದವಾಗಿ ಪ್ರಸ್ತಾಪಿಸಿರುವನು :–

"The surgery of the ancient Hindu physicians was bold and skilful. They conducted amputations, arresting the bleeding by pressure, a cup-shaped bandage and boiling oil; practised lithotomy, performed operations in the abdomen and uterus, cured hernia, fistula, piles; set broken bones and dislocations; and were dexterous in the extraction of foreign substances from the body. A special branch of surgery was devoted to rhinoplasty, or operation for improving deformed ears and noses and forming new ones, a useful operations which Europeans have now borrowed. The ancient Indian surgeons also mention cure for neuralgia analogous to the modern cutting of the fith nerve above the eyebrow. They devoted great care to the making of surgical instruments and to the training of students by means of operations performed on the wax spread on a board or on the tissues and cells of the vegetable kingdom, and upon dead animals. They were experts in midwifery, not shrink-

ing from the most critical operations, and in the diseases of women ond children."

ಕಿ. ಶ. 10 ನೇ ಶತಮಾನದಿಂದಿತ್ತ ಮುಹ್ಮದೀಯರ ಕರಾಳ ಲೂಟಿಗೆ ಅಹುತಿಯಾದ ಭಾರತೀಯಶಾಸ್ತ್ರ ಗ್ರಂಥಗಳ ಓಲೆಗಳ ಸಂಖ್ಯೆಯು ಪ್ರಪಂಚದ ಯಾವೆಡೆಯೂ ಹಿಂದಾವ ಕಾಲದಲ್ಲೂ ನಡೆದಿರಲಾರದೆಂಬಷ್ಟು ಆಗಿವೆ. ನಳಂದಾ, ತಕ್ಷಶಿಲಾ. ಕಾಶಿ, ಮೊದಲಾದ ಶ್ರೇಷ್ಠ ವಿಶ್ವವಿದ್ಯಾಲಯಗಳ ಗ್ರಂಥಭಂಡಾರಗಳನ್ನೆಲ್ಲಾ ಮುಹ್ಮದೀಯರು ಮೇಲಿಂದ ಮೇಲೆ ಸುಟ್ಟುಹಾಕಲು ತೊಡಗಿದರು. ಕ್ರಿ.ಶ. 1195 ರಲ್ಲಿ ಭುಕ್ತಾರ್ ಖಿಲ್ಜಿ ಇವನು ನಳಂದಾ ವಿಶ್ವವಿದ್ಯಾಲಯವನ್ನು ಸುಟ್ಟು ಹಾಕಲು ಆಜ್ಞಾಪಿಸಿದಾಗ ಆ ವಿದ್ವಾಂಸರು ಅದರ ಗ್ರಂಥ ಭಂಡಾರವನ್ನಾದರೂ ಉಳಿಸಬೇಕೆಂದು ಅವನನ್ನು ಅಂಗಲಾಚಿ ಬೇಡಿಕೊಂಡರು. ಆದರೆ ಏನೂ ಸಹನೆ, ವಿದ್ವತ್ತು, ಜ್ಞಾನದ ಬೆಲೆ ಇತ್ಯಾದಿಯನ್ನು ತಿಳಿಯದ ಆ ಮುಹ್ಮದೀಯ ರಾಕ್ಷಸರು ಹಾಗೆ ಬೇಡುತ್ತಿದ್ದವರನ್ನೆಲ್ಲಾ ಒದ್ದು ಹಾಕಿ ಮತ್ತೇನು ಮಾಡಿದನೆಂಬುದನ್ನು ಹೀಗೆ ಹೇಳಲಾಗಿದೆ :-

> "When the humbled monks of the burning monastery begged the general to spare at least the library, the invader kicked in the belly, his wrath became pronounced and angrily ordered the intensification of the burning campaign. Thus died a University which had held aloft the torch of Indian culture in all its aspects for more than a thousand years."

ಈ ನಳಂದಾ, ವಿಕ್ರಮಶಿಲಾ, ವಲಾಭಿ, ಉಜ್ಜಯಿನೀ ಮೊದಲಾದ ವಿದ್ಯಾ ಕೇಂದ್ರಗಳು ಗ್ರೀಕ್, ಅರಬೀ, ಚೀನೀ, ತಿಬೇಟ್ ಮೊದಲಾದ ವಿದ್ಯಾರ್ಥಿಗಳಿಗೆ ಯಾತ್ರಾಸ್ಥಳವಾಗಿದ್ದುವು. ಮಗಧ, ಗಯಾ, ಪಾಟಲೀಪುತ್ರ, ಇತ್ಯಾದಿ ಕೇಂದ್ರಗಳೂ ವಿಹಾರಗಳೂ ಹ್ಯೂವನ್‌ತ್ಸಾಂಗನಂಥಾ ಹಲವು ಯಾತ್ರಿಕರಿಗೆ ಆಶ್ರಯವಿತ್ತಿದ್ದುವು. ಬೌದ್ಧ ವಿದ್ವಾಂಸರಿಂದ ೨೦೦೦ ವರ್ಷಗಳಿಗೆ ಹಿಂದೆ ಪೋಷಿಸಲ್ಪಟ್ಟ ನಳಂದಾವು ಭಾರತೀಯ ಸಂಸ್ಕೃತಿಯನ್ನು ವಿದೇಶಗಳಿಗೂ ಹರಡಿತು. ಗುಪ್ತವಂಶದ ರಾಜರು, ಹರ್ಷಚಕ್ರವರ್ತಿ ಮತ್ತು ಉಳಿದ ಅರಸರು ಈ ಎಲ್ಲಾ ವಿಶ್ವವಿದ್ಯಾಲಯಗಳನ್ನು ಪೋಷಿಸುತ್ತಾ ಬಂದಿದ್ದರು. ಹಿಂದೂ, ಬೌದ್ಧ ಮತ್ತು ಜೈನಮತ ತತ್ವಗಳನ್ನೆಲ್ಲಾ ಸರ್ವಮತ ಸಮನ್ವಯ ದೃಷ್ಟಿಯಿಂದ ಕಂಡಿದ್ದರು. ಈ ಎಲ್ಲಾ ಧರ್ಮಗ್ರಂಥಗಳೂ ಶಾಸ್ತ್ರಗ್ರಂಥಗಳೂ ಎಲ್ಲೆಡೆಯೂ ಚೆಲ್ಲಾಡಲ್ಪಟ್ಟದ್ದುವು.

ಸರಿ. ಕ್ರಿ.ಶ. 1000 ವರ್ಷಗಳ ವರೆಗೂ ಇಷ್ಟು ಪ್ರತಿಭಾನ್ವಿತವಾಗಿ ಬೆಳಗಿದ ಈ ದೇಶದಲ್ಲಿ ಮಹಮ್ಮದೀಯರ ಬರುವಿಕೆಯಿಂದ ಕಾರ್ಗಾಲವು ಆವರಿಸಿತು. ಅಲ್ಲಿಂದ ನಂತರ ಭಾರತದ ಗ್ರಂಥಭಂಡಾರಗಳೂ ದೇವಸ್ಥಾನಗಳೂ ಮಠಗಳೂ ವಿಹಾರಗಳೂ ತೀರಾ ಮಹಮ್ಮದೀಯರ ಕರಾಳ ಕೃತ್ಯಕ್ಕೆ ಆಹುತಿಯಾದುವು. ದೇಶದಲ್ಲಿ ಸಾಂಸ್ಕೃತಿಕವಾಗಿ ಕಾರ್ಗಾಲವು ಕವಿಯಿತು. ಕ್ರಿ.ಶ. 17 ನೇ ಶತಮಾನದ ವರೆಗೂ ಈ ದುರ್ದೆಸೆ

ಯಿಂದ ಇಡೀ ದೇಶವೇ ಸತ್ವಹೀನವಾಗಿತ್ತು.

ಇಂತಿದ್ದ ಪರಿಸ್ಥಿತಿಯಿಂದ ಅದನ್ನು ಮೇಲೆತ್ತಲು ದೇಶದ ಸುದೈವವೋ ಎಂಬಂತೆ ಯೂರೋಪು ಖಂಡದ ಜನವು ಇಲ್ಲಿಗೆ ಬಂದು ಈ ನೂರಿನ್ನೂರು ವರ್ಷಗಳ ಕಾಲ ದಲ್ಲಿ ದೇಶದಲ್ಲಿ ಸಾಧಿಸಿದ ಮಹತ್ಕಾರ್ಯಗಳನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾ ಗಿದೆ. ಹಿಂದೂಮತ ಮತ್ತು ಜನವು ಜೀವನ್ಮೃತರಾಗಿ ಅರುಳೋ ಮರುಳೋ ಎಂಬಂತೆ ಸೊರಗಿದ್ದಾಗ ಅವರಿಗೆ ಪುನಃ ಜೀವನವನ್ನು ಇತ್ತ ಸಾಹಸವೂ ಕೀರ್ತಿಯೂ ಅವರ ದಾಗಿದೆ. ಆ ಪಾಶ್ಚಾತ್ಯರ ಮೂಲಕವಾಗಿಯೇ ಪುನಃ ಭಾರತೀಯರು ಚೇತನಗೊಂಡು ತಮ್ಮನ್ನು ತಾವೇ ತಿಳಿಯುವಂತಾದರು.

## ೧೨. ತಮ್ಮ ಕಡೇ ದಿನಗಳ ವರೆಗೂ ಭಾರತದ ಸೇವೆಯನ್ನು ದೀಕ್ಷಾಬದ್ಧವಾಗಿ ಕೈಗೊಂಡರು :—

"To know my country one has to travel to that age when she revealed her being in a radiant magnanimity which illumined the eastern horizon, making her recognised as their own by those in alien shore who were awakened into a surprise of life; and, now when she has withdrawn herself into a narrow barrier of obscurity into a miserly pride of exclusiveness into a poverty of mind that dumbly revolves around itself in an unmeaning repitition of the past that has lost its light and has no message for the pilgrims of the future."

ಈ ರೀತಿಯಾಗಿ ರವೀಂದ್ರನಾಥ ಟಾಗೋರರು ಹೇಳಿದರು. ಈ ಟಾಗೋರು, ವಿವೇಕಾ ನಂದ, ಗಾಂಧಿ ಮೊದಲಾದ ಸಹಸ್ರಾರು ಮಂದಿಗೆ ಆಧುನಿಕ ವಿದ್ಯೆಯನ್ನುಣಿಸಿದವರು, ಪಾಶ್ಚಾತ್ಯರು, ಆ ವಿದ್ಯೆಯ ಮೂಲಕ ಅವರು ಮತ್ತಷ್ಟು ಭಾರತೀಯ ವಿದ್ಯೆಯನ್ನು ಪಡೆದು ಮಹಾಪುರುಷರಾಗಿ ಅನಂತರ ಈ ರೀತಿ ಇಂಥಾ ಮಾತುಗಳನ್ನು ಅದೆಷ್ಟೋ ಸರ್ತಿ ಹೇಳುತ್ತಾ ಇದ್ದರು.

ಆದರೆ ಪಾಶ್ಚಾತ್ಯ ತತ್ವಾಭ್ಯಾಸಿಗಳು ಭಾರತೀಯ ಸಾಹಿತ್ಯ ಸೇವೆಯನ್ನು ತಮ್ಮ ಜೀವನದ ದೀಕ್ಷೆಯಂತೆ ಕೈಗೊಂಡರು. ಸರಕಾರದ, ಕ್ರೈಸ್ತ ಸಂಸ್ಥೆಗಳ ಮತ್ತು ಸಾಹಿತ್ಯ ಕೂಟಗಳ ಪ್ರೋತ್ಸಾಹವು ಅವರಿಗೆ ಯಥೇಚ್ಛವಾಗಿದ್ದಿತಾದರೂ ಅವರು ತಾವು ಕೈಗೊಂಡಿದ್ದ ಕೆಲಸವನ್ನು ಪ್ರೀತಿ ಹಾಗೂ ಉತ್ಸಾಹಗಳಿಂದ ಸಾಧಿಸಿದರು. ಸಾಹಿತ್ಯ ಸೇವೆಯನ್ನು ಧಾರ್ಮಿಕ ಶ್ರದ್ಧೆಯೆಂದು ಭಾವಿಸಿ ದುಡಿದರು. ಅದರಲ್ಲಿ ಹಲವರು ತಮ್ಮ ಕೆಲಸವು ಪೂರ್ತಿಯಾಗುವ ಮೊದಲೇ ಇಹಲೋಕವನ್ನು ತ್ಯಜಿಸಿದ್ದು ಈ ದೇಶಕ್ಕೆ ತುಂಬಲಾರದ ನಷ್ಟವಾಗಿ ಪರಿಣಮಿಸಿತು.

Sir William Jones ಇವನು ಮನುಸ್ಮೃತಿಯನ್ನು ಕೈಯ್ಯಲ್ಲಿ ಹಿಡಿದು ಕೊಂಡು ತನ್ನ ನಡುಹರೆಯದಲ್ಲಿಯೇ ವಿಧಿವಶನಾಗಬೇಕಾಯಿತು. **Dr. William**

Carey ಇವನು ತನ್ನ ಅಮೋಘ ಸೇವಾ ಶಿಬಿರವನ್ನು ನಡೆಸುತಿದ್ದಾಗಲೇ Brother Marshman will look after the cows, after I am gone, ಎಂದು ಹೇಳುತ್ತಾ ಕಾಲವಾದನು. Sir Henry Colebrooke ಇವನು ಇಂಗ್ಲೆಂಡಿನಲ್ಲಿ ಭಾರತೀಯ ಸಂಸ್ಕೃತಿ ಪ್ರಚಾರ ಕಾರ್ಯದಲ್ಲಿ ನಿರತನಾಗಿದ್ದಾಗ ಮರಣ ವನ್ನಪ್ಪಿದನು. ಪಾಲೀ, ಪ್ರಾಕೃತ, ಬ್ರಾಹ್ಮೀ ಇತ್ಯಾದಿ ಶಿಲಾಶಾಸನ ತಜ್ಞ James Princep ಇವನು ತನ್ನ ಎಳೆಪ್ರಾಯದಲ್ಲಿಯೇ ಮೃತನಾಗಿ ಭಾರತೀಯ ಸಂಸ್ಕೃತಿಯ ಸಂಶೋಧನೆಗೆ ಅಪಾರ ನಷ್ಟವಾಯಿತು. Horace Wilson ಇವನು ಓಕ್ಸ್ ಫರ್ಡ್‌ನಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿದ್ದಾಗಲೇ ವಿಧಿವಶನಾದನು.

Sir Cunningham, William Hunter ಹೀಗೆ ಮೊದಲಾದ ಶ್ರೇಷ್ಠ ವಿದ್ವಾಂಸರು ಅರುವತ್ತರ ಹರಯಕ್ಕೆ ಕಾಲಿಡುವ ಮೊದಲೇ ಕಾಲವಶರಾದರು. Dr. George Buehler ಇವನು ವಿಯೆನ್ನಾದಲ್ಲಿ ಭಾರತೀಯ ವಿದ್ಯಾಕ್ಷೇತ್ರ ವನ್ನು ಸ್ಥಾಪಿಸುತ್ತಿದ್ದಾಗಲೇ ಆಕಸ್ಮಿಕ ಮರಣಕ್ಕೊಳಗಾದನು. ಶ್ರೇಷ್ಠ ಪಂಡಿತ Prof. Max Mueller ಇವನು ತನ್ನ ಆತ್ಮಚರಿತೆಯ ಕಡೇ ಪುಟಗಳನ್ನು ತಿರುವು ತಿದ್ದಾಗ ಮೃತನಾದನು. Jos Burgess ಇವನು ಎಡಿನ್‌ಬರೋದಿಂದ ಕನ್ನಡ ನಾಡು ನುಡಿಗಳ ಬಗ್ಗೆ ಲೇಖನ ಮಾಲೆಯನ್ನು ತಯಾರಿಸುತಿದ್ದಾಗಲೇ ಕಣ್ಮರೆ ಯಾದನು. Rev. Kittel ಇವನು ತನ್ನ ಸ್ವದೇಶದ ಟೂಬಿನ್ಜಾನ್‌ನಲ್ಲಿ ತನ್ನ ಕನ್ನಡ ವ್ಯಾಕರಣವನ್ನು ಆದಾಗಲೇ ಮುಗಿಸಿದ್ದನು. " The preface (of his Kannada Grammar) is dated on the 5th Feb. 1903, and he died on the 19th December of the same year in his 72nd year, after having worked until the last day of his life", ಎಂಬುದಾಗಿ Prof. Hultzsch ಇವನು ಆ ವ್ಯಾಕ ರಣ ಗ್ರಂಥದ ಮೇಲೆ ವಿಮರ್ಶೆಯನ್ನು ಬರೆಯುತ್ತಾ ಹೇಳಿದನು.

ಇದೇ ರೀತಿ ನೂರಾರು ಮಂದಿ ಅಂದಿನ ಪಾಶ್ಚಾತ್ಯ ದೀಕ್ಷಾ ಜೀವಿಗಳು ಮಹಾ ತಪಸ್ವಿಗಳಂತೆ ಅಪಾರ ಕಾರ್ಯ ಸಾಧನೆಯನ್ನು ಮಾಡುತ್ತಾ ಇದ್ದು ಅವು ಪೂರ್ತಿ ಗೊಳ್ಳುವ ಮೊದಲೇ ಅಗಲಿದ್ದಾರೆ. ಈ ಶತಮಾನದ ಆರಂಭದಲ್ಲಿದ್ದ T. E. Abbott, Prof. H. Kern, L. A. Wadell, Prof. Jacobi ಇವ ರೆಲ್ಲರೂ ಅವರ ಹಿರಿಯರಂತೆ ನಾಲ್ಕಾರು,ಹತ್ತಾರು ಭಾಷೆಗಳಲ್ಲಿ ನಿಸ್ಸೀಮ ಪಂಡಿತರಾಗಿ ಅವರು ಬಿಟ್ಟು ಹೋದ ಕೆಲಸಗಳನ್ನು ಮುಂದುವರಿಸಿದರು.

Dr. Fleet ಇವನು ಇಂಗ್ಲೆಂಡಿನಿಂದ, Prof. Weber ಇವನು ಲೈಪ್ ಜ್ಹಿಗ್‌ನಿಂದ, Prof. Kielhorn ಜರ್ಮನಿಯಿಂದ, Prof. Kern ಲಂಡನ್ನಿ ನಿಂದ, ಹೀಗೆ ಇನ್ನೂ ಹಲವರು ಯೂರೋಪಿನ ವಿವಿಧ ಭಾಗಗಳಲ್ಲಿ ಇರಿತು ಭಾರ ತೀಯ ಚರಿತ್ರೆ ಮತ್ತು ಸಾಹಿತ್ಯದ ಬಗ್ಗೆ ಸಂಶೋಧನಾ ಲೇಖನಗಳನ್ನು ಬರೆಯು ತ್ತಲೇ ಇದ್ದರು. L. T. Barnett ಇವನು ಲಂಡನ್ನಿನ ಭಾರತೀಯ ವಸ್ತು ಸಂಗ್ರಹಾಲಯದಲ್ಲಿ ಅಪೂರ್ವ ಕಾರ್ಯವನ್ನು ಕೈಗೊಂಡು ಇತರ ಪೌರಸ್ತ್ಯಚಾರ

ಸಾಹಿತಿಗಳಿಗೆ ಮಾರ್ಗದರ್ಶಿಯಾಗಿದ್ದನು. ಅಂದಿನ ಆ ನೂರಾರು ಅಥವಾ ಸಹಸ್ರಾರು ವಿದ್ವಾಂಸರು ಈ ದೇಶವನ್ನು ತಮ್ಮ ಸ್ವದೇಶವೆಂದೇ ಭಾವಿಸಿ, ಈ ದೇಶದ ವಿಚಾರ ಜ್ಞಾನವು ಲೋಕವ್ಯಾಪಿಯಾಗಬೇಕೆಂದು ಎಣಿಸಿ ಅಂತೆಯೇ ದುಡಿದರು. ಅವರಲ್ಲಿ ಹಲವರು ಇಲ್ಲಿಯೇ ಮೃತರಾದರು; ಉಳಿದವರು ನಿವೃತ್ತರಾಗಿ ಸ್ವದೇಶಕ್ಕೆ ಹೋಗುವಾಗ ಅಳುತ್ತಾ, ಹೋದರು. ಪ್ರಚಂಡ ಜರ್ಮನ್ ವಿದ್ವಾಂಸ Dr. Paul Deussen ಇವನು 1893 ರಲ್ಲಿ ಕಲ್ಕತ್ತೆಯಿಂದ ಸ್ವದೇಶಕ್ಕೆ ಹಿಂದಿರುಗುವಾಗ 'Farewell to India' ಎಂಬುದಾಗಿ ಈ ರೀತಿ ಉದ್ಗಾರವೆನ್ನೆತ್ತಿದನು.

O, Sun of India, what have we committed
That we must leave thee and thy children now,
Thy giant trees, thy flowers, so well befitted
To thy blue heaven's never-frowning brow !
And you our Indian friends, whose hearty feeling
Deep sympathy with you has fast obtained-
From Ceylon to Peshawar and Darjeeling,
Are you now lost to us, as soon as gained ?

## ೧೩. ಪಾಶ್ಚಾತ್ಯರು "ಧರ್ಮ ಸಂಸ್ಥಾಪನಾರ್ಥಾಯ" ವಾಗಿಯೇ ಇಲ್ಲಿಗೆ ಬಂದರು :—

"ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂದು ಗೀತೆಯಲ್ಲಿ ಹೇಳಿದಾಗ ಧರ್ಮಸಂಸ್ಥಾಪನೆಗೆ ಓರ್ವ ಮಹಾ ವ್ಯಕ್ತಿಯೇ ಅವತರಿಸಿ ಬರಬೇಕೆಂದಿಲ್ಲ. ಧರ್ಮವು ಸೊರಗಿದಾಗ, ನೀತಿಯು ಅಮರಿದಾಗ, ಖ್ಯಾತಿಯು ಕುಮರಿದಾಗ ಅವನ್ನು ಸಮಗಟ್ಟಲು ಒಂದಲ್ಲ ಒಂದು ವಿಧದಲ್ಲಿ ಒಂದೊಂದು ಬಗೆಯ ಚಾರಿತ್ರಿಕ ಘಟನೆಯು ನಡೆಯುತ್ತದೆ. ಕ್ರಿ.ಶ. 9 ನೇ ಶತಮಾನದಿಂದ 17 ನೇ ಶತಮಾನದವರೆಗೆ ಈ ದೇಶವು ಹೇಳ ಹೆಸರಿಲ್ಲದ ಒಂದು ಮುಹಮ್ಮದೀಯ ರಾಜ್ಯವಾಗಿ ಕುಸಿದು ಬಿದ್ದಿತ್ತು. ಬರೇ ಸತ್ವಹೀನವಾಗಿತ್ತು, ಇಂದು ನಮ್ಮ ದೇಶದಲ್ಲಿ ನೂರು ಮಿಲ್ಲಿಯ ಮುಹಮ್ಮದೀಯರು ಪರದೇಶಗಳಿಂದ ಬಂದವರಲ್ಲ; ಅವರೆಲ್ಲರೂ ಇಲ್ಲಿಯವರೆ; ಅವರ ಅಜ್ಜಂದಿಯರೆಲ್ಲಾ ಹಿಂದೂಗಳೇ! 17 ನೇ ಶತಮಾನದಲ್ಲಿ ಪಾಶ್ಚಾತ್ಯರು ಬಂದು ಈ ದೇಶದ ಅಂದಿನ ದುರ್ಗತಿಯನ್ನು ಪಾರಾಗಿಸದೆ ಹೋಗಿದ್ದರೆ ಹಿಂದೂ ಮತವೇ ನಿರ್ನಾಮವಾಗಿ ಹೋಗುತಿದ್ದಿತು. ಉತ್ತರದಲ್ಲಿ ಮೊಗಲರು, ದಖ್ಖಣದಲ್ಲಿ ನೈಜಾಮನು, ದಕ್ಷಿಣದಲ್ಲಿ ಟಿಪ್ಪು ಸುಲ್ತಾನ ಇನ್ನೂ ಅಚೆ ಈಚೆ ಹಲವಾರು ನವಾಬರುಗಳಿಂದ ದೇಶವು ಛಿದ್ರ ಛಿದ್ರವಾಗಿತ್ತಲ್ಲದೆ ಅವರ ವಂಶಸ್ಥರಿಂದಲೇ ರಾಜ್ಯಭಾರವು ಮುಂದುವರಿದು ಇಡೀ ಭಾರತವೇ ಪಾಕಿಸ್ಥಾನವಾಗುವ ಸಂಭವವಿತ್ತು. ಅಂಥಾ ಒಂದು ಕಂಟಕದಿಂದ ದೇಶವನ್ನು ಪಾರಾಗಿಸಲು ದೇವದೂತರಂತೆ ಪಾಶ್ಚಾತ್ಯರು ಈ ದೇಶಕ್ಕೆ ಬಂದು ತಾವು "ಧರ್ಮಸಂಸ್ಥಾಪನಾರ್ಥಾಯ" ವಾಗಿ ಬಂದವರಂತೆ ತೋರ್ಪಡಿಸಿಕೊಂಡರು. ಮುಹಮ್ಮದೀಯರ ಪ್ರಾಬಲ್ಯವನ್ನು ಮುರಿದು ಹಾಕಿ, ತಾವೇ ಅಧಿಕಾರಿಗಳಾದರು. ಇದರಿಂದ ಉಂಟಾದ

ಚಾರಿತ್ರಿಕ ಸನ್ನಿವೇಶ, ಮತ್ತು ಅಪಾರ ಕ್ಷೇಮ, ಪ್ರಗತಿ, ಅಭಿವೃದ್ಧಿ ಜ್ಞಾನಾಭಿವೃದ್ಧಿ ಇತ್ಯಾದಿಗಳೆಲ್ಲಾ ಮೇರೆ ಮೀರಿ ಸಾಧಿಸಲಾಯಿತು.

ಈ ಗ್ರಂಥದ ಮೊದಲ ಪುಟಗಳಲ್ಲಿ ಹೇಳಿದಂತೆ ಪಾಶ್ಚಾತ್ಯರು ಈ ದೇಶದಲ್ಲಿ ರಾಜ್ಯಾಡಳಿತೆಯನ್ನು ನಡೆಸಿದುದಕ್ಕಿಂತ ಹೆಚ್ಚಾಗಿ ಅವರು ಸಾಧಿಸಿದ್ದು ಪ್ರಾಚೀನ ಭಾರತದ ಸಂಶೋಧನಾ ಸೇವೆ; ಹಾಗೆ ಬಹು ಮುಖ್ಯವಾಗಿ ಸಂಶೋಧಿಸಿ, ಧರ್ಮವನ್ನು ಮತ್ತು ಸಂಸ್ಕೃತಿಯನ್ನು ಅನ್ವೇಷಿಸಿ ಈ ದೇಶದಲ್ಲಿ ಮಾತ್ರವಲ್ಲ, ಸಾಂಸ್ಕೃತಿಕ ಕುರುಹುಗಳನ್ನೂ ವಾಸ್ತುಶಿಲ್ಪ ಅವಶೇಷಗಳನ್ನೂ ಸಾಗಿಸಿದರು. ಯೂರೋಪಿನಲ್ಲಿ ಮಾತ್ರವಲ್ಲ ದೂರದ ಅಮೇರಿಕಾ, ಇಂಡೋನೇಷ್ಯಾ, ಜಪಾನ್ ಮೊದಲಾದೆಡೆಗಳಲೆಲ್ಲಾ ಭಾರತೀಯ ಗ್ರಂಥಗಳನ್ನು ಬಿತ್ತಿದರು; ಪುಸ್ತಕ ಭಂಡಾರಗಳನ್ನು ಸ್ಥಾಪಿಸಿದರು, ಭಾರತದ ಅಮೋಘ ವಿಗ್ರಹಗಳು, ನಟರಾಜ, ಕಾಳಿ, ಗಣಪತಿ, ಇತ್ಯಾದಿ ಮೂರ್ತಿಗಳೆಲ್ಲಾ ಎಲ್ಲಾ ಭೂಖಂಡದ ವಸ್ತು ಪ್ರದರ್ಶನಾಲಯಗಳಲ್ಲಿ ಅಲಂಕೃತವಾಗಿವೆ.

ಇದರಲ್ಲೆಲ್ಲಾ ಪಾಶ್ಚಾತ್ಯ ರಾಜಕಾರಿಣಿಗಳೂ ಸಾಹಿತಿಗಳೂ ಸಾಧಿಸಿದ ಕೆಲಸದ ಪ್ರಮಾಣದ ನೂರ್ಮಡಿಯಷ್ಟು ಪಾಶ್ಚಾತ್ಯ ಮತ ಪ್ರಚಾರಕರು ಸಾಧಿಸಿದ್ದಾರೆ, ಮತ ಪ್ರಚಾರಕ್ಕೆಂದು ಅವರು ಬಂದರಾದರೂ ಅವರು ಬರೇ ಮತಾಂಧರಂತೆ ವರ್ತಿಸದೆ ಈ ದೇಶದ ಜನರ ಬಡತನ, ರೋಗ, ಕ್ಷಾಮ ಇತ್ಯಾದಿಗಳ ನಿವಾರಣೆಗೆ ಹಗಲಿರುಳು ದುಡಿದಿದ್ದಾರೆ. ಸಾಹಿತ್ಯ ಸಂಸ್ಕೃತಿಗಳ ಅನ್ವೇಷಣೆಗಳಿಗೂ ಅವರು ಪ್ರಧಾನ ಸ್ಥಾನವನ್ನಿತ್ತು ಅಂತೆಯೇ ದುಡಿದು ಕೃತಾರ್ಥರಾದರು. ಸ್ವಾಮಿ ವಿವೇಕಾನಂದರು ಒಮ್ಮೆ ಪಾಶ್ಚಾತ್ಯ ಸಭೆಯೊಂದರಲ್ಲಿ ಮಾತಾಡುತ್ತಾ ಈ ದೇಶದಲ್ಲಿ ಕ್ರೈಸ್ತಮತೋಪದೇಶಕರು ಅದೆಷ್ಟರಮಟ್ಟಿಗೆ ದುಡಿದು ಈ ದೇಶವನ್ನು ಮುಂದೊಯ್ದರೆಂಬುದನ್ನು ಕುರಿತು ಈ ರೀತಿ ಮುಕ್ತಕಂಠದಿಂದ ಪ್ರಶಂಸಿಸಿದರು:—

> "If we take all the mud from the bed of the Indian Ocean and throw it into your faces, it will be but a mere speek in comparison to what your missionaries have done to our religion and culture."

೧೪. **ಮೂಲಾಧಾರ ಕೃತಿಗಳನ್ನು ಖಾನೂನುಬದ್ಧವಾಗಿ ಕಾಯ್ದಿರಿಸಿದರು :-**

ಸರಕಾರ, ವ್ಯಾಪಾರ, ವ್ಯವಹಾರಾದಿಗಳಲ್ಲಿ ಜನರು ಪ್ರತಿನಿತ್ಯ ಸುಳ್ಳು, ಮೋಸ ವಂಚನೆ ಇತ್ಯಾದಿಗಳನ್ನು ತಮ್ಮ ಜನ್ಮಸಿದ್ಧ ಹಕ್ಕು ಎಂಬಂತೆ ಭಾವಿಸಿಕೊಂಡು ಅಂಥಾ ದುರಾಚಾರಗಳನ್ನು ಕಾಲದಿಂದ ಕಾಲಕ್ಕೆ ಸಾಧಿಸುತ್ತಲೇ ಇದ್ದಾರೆ. ವಿದ್ಯಾವಂತರೂ ಸಾಹಿತಿಗಳು ಅಂಥಾ ದುರ್ನೀತಿಗೆ ಇಳಿದರೆ ಇಡೀ ಜನಾಂಗವೇ ಅಧೋಗತಿಗಿಳಿಯುತ್ತದೆ. ಕೃತಿಚೌರ್ಯವೆಂಬುದು ನಮ್ಮ ದೇಶದಲ್ಲಿ ಬಹು ಹಿಂದಿನ ಕಾಲದಿಂದಲೇ ನಡೆದುಕೊಂಡು ಬಂದಿದೆ. ಅದಕ್ಕಾಗಿಯೇ ಒಬ್ಬನು ಪ್ರಯಾಸಪಟ್ಟು ಬರೆದುದನ್ನು, ತನ್ನ ಜ್ಞಾನಬಲದಿಂದ ಸಂಶೋಧಿಸಿ ಬರೆದುದನ್ನು, ಮತ್ತೊರ್ವನು ಕದ್ದು ಬರೆದರೆ

ಅದು ಕೃತಿ ಚೋರತನವಾಗುತ್ತದೆ. ಆ ಕಾರಣದಿಂದ ಬ್ರಿಟಿಷರು Copy-right ಖಾನೂನನ್ನು ಜಾರಿಗೆ ತಂದು ವಿಷಯಗಳನ್ನು ಕದ್ದು ಬರೆದವರ ಮೇಲೆ ಕಠಿಣ ಕ್ರಮ ವನ್ನು ಕೈಗೊಂಡಿದ್ದರು.

ಪ್ರಾಚೀನ ಕವಿಗಳು ತಮಗಿಂತ ಹಿಂದಿದ್ದ ಹಿರಿಯ ಮಹಾಕವಿಗಳ ಹೆಸರನ್ನು ಸ್ಮರಿಸಿ ಅವರಿಂದ ಪಡೆದ ಸ್ಫೂರ್ತಿಯ ಬಲದಿಂದ ತಾವು ಅಂಥಾ ಕೃತಿಗಳನ್ನು ರಚಿಸಿ ದ್ದೇವೆಂದು ಹೇಳಿ ತಮ್ಮ ಕಾವ್ಯಗಳನ್ನು ಹಾಡಿದರು. ಆದರೆ ಅವರ ಪೈಕಿಯೂ ಕೆಲವು ಕಪ್ಪು ಕುರಿಗಳು ಇಲ್ಲದೇ ಇರಲಿಲ್ಲ.

ಪಾಶ್ಚಾತ್ಯರು ಕಳೆದ ಶತಮಾನದಲ್ಲಿ ಇಂಗ್ಲಿಷ್‌ನಲ್ಲಿ ಬರೆದ ಈ ದೇಶದ ಸಾಹಿತ್ಯ ಮತ್ತು ಚಾರಿತ್ರಿಕ ಅಂಶಗಳನ್ನು ದೇಶೀಯ ವಿದ್ವಾಂಸರು ದುರುಪಯೋಗಪಡಿಸಿದ್ದಾರೆ. ಕೆಲವು ಅಂಹಭಾವಿಗಳು ಪಾಶ್ಚಾತ್ಯರು ಇಲ್ಲಿ ಏನು ಸಾಧಿಸಿಲ್ಲವೆಂಬಷ್ಟುಮಟ್ಟಿಗೆ ಅವರ ಮೇಲೆ ವಿಷವನ್ನು ಕಾರಿದ್ದಾರೆ. ಅವರು ಬಹುಶ್ರಮವಹಿಸಿ ಸಂಗ್ರಹಿಸಿದ ಶಾಸನಗಳನ್ನು ೨೫ ವರ್ಷಗಳ ನಂತರ ದೇಶೀಯ ವಿದ್ವಾಂಸರು ಅವೆಲ್ಲವನ್ನು ತಾವೇ ಸ್ವತಃ ನೋಡಿ, ತಿಳಿದು, ಕುಳಿತು, ಬರೆದು ಪ್ರಕಟಿಸಿದೆವು ಎಂದು ಹೇಳಿದರೆ ಅದು ಕೃತಜ್ಞತೆಯಲ್ಲ. ಆ ಪಾಶ್ಚಾತ್ಯ ತಪಸ್ವಿಗಳು ಅಂದು ಈ ದೇಶದಲ್ಲಿ ಅವತರಿಸದೇ ಹೋಗಿದ್ದರೆ ಇಡೀ ಭಾರತದ ಹೇಗೋ ಹಾಗೇಯೇ ಕನ್ನಡ ನಾಡಿನ ಹಲವು ಐತಿಹಾಸಿಕ ವಿಚಾರಗಳು ಇನ್ನೂ ಬೆಳಕಿಗೆ ಬಾರದೇ ಇರುತ್ತಿದ್ದಿತು. ಹೇಗೂ ಇಂತೀ ಬಗೆಯ ಕೃತಿಚೋರತನವು ಇಂದು ಒಂದಲ್ಲ ಒಂದು ರೀತಿಯಲ್ಲಿ ನಡೆಯುತ್ತಲೇ ಇದೆ.

ಇತ್ತೀಚೆಗಿನ ಸಾಹಿತಿಯೊರ್ವರು "ಕರ್ನಾಟಕ ಕವಿಚರಿತ್ರೆ"ಯಿಂದ ಹಲವು ವಿಷಯಗಳನ್ನು ಹೆಕ್ಕಿ ಬರೆದನಂತರ ಆ ಕವಿಚರಿತ್ರಾಕಾರರನ್ನು ತಳ್ಳಿಹಾಕಲು ಯತ್ನಿ ಸಿದ್ದಾರೆ. "ಅವರು ಬೆಂಗಳೂರಿನಲ್ಲಿ ಕುಳಿತುಕೊಂಡು" ತಮಗೆ ತೋರಿದಂತೆ ಬರೆದರು ಎಂಬುದಾಗಿ ಇಂದಿನ ವಿಮಾನ ಸಂಚಾರಿ ವಿದ್ವಾಂಸನು ತನ್ನ ಅಹಂಭಾವವನ್ನು ಪ್ರದರ್ಶಿಸಿದ್ದಾರೆ. ಹೀಗಾಗುವಾಗಲೇ ಸುಮಾರು ಮೂವತ್ತುವರ್ಷಗಳಿಗೆ ಹಿಂದೆ ಓರ್ವ ಪಾಶ್ಚಾತ್ಯ ಮಹಿಳೆಯು ಈ ದೇಶದ ಜನವನ್ನು ಕುರಿತು "Mr. Gandhi lives there; also tigers" ಎಂಬುದಾಗಿ ಉದ್ಗರಿಸಿದಳು.

ಸರ್ಕಾರದ ಪರವಾಗಿ ಸ್ವಾತಂತ್ರ್ಯ ಇತಿಹಾಸ, ಮಂತ್ರಿಗಳ ಇತಿಹಾಸ ಮೊದ ಲಾದುವನ್ನು ಕುರಿತು ಬರೆಯುವ ಕೆಲವು ವಿದ್ವಾಂಸರು ಹಿಂದಿನ ಚರಿತ್ರಾಕರ್ತರು ಬರೆ ದುದನ್ನು ಹೆಕ್ಕಿ ಹಾಗೆಯೇ ಕೊಡುತ್ತಾರೆ. ಪಾಶ್ಚಾತ್ಯ ತಜ್ಞರು, ವಿಮರ್ಶಕರು ಮತ್ತು ಪರಿಶೋಧಕರು ಬರೆದಿಟ್ಟ ಮೂಲ ಕೃತಿಗಳಿಂದ ಈ ಸ್ವಾತಂತ್ರ್ಯ ಇತಿಹಾಸಕಾರರು ವಿಷಯಗಳನ್ನು ಹೆಕ್ಕಿ ಆರು ತಿಂಗಳು ಯಾ ಒಂದುವರ್ಷದಲ್ಲಿ ಅದ್ಭುತ ಗ್ರಂಥವನ್ನು ಬರೆದು ಬಿಡುತ್ತಾರೆ. ಅದು ಪರಿಶೋಧನೆಯಾಗದು; ಕೇವಲ ವಾರ್ತಾ ಸಂಗ್ರಹ ಮಾತ್ರ ಆಗುತ್ತದೆ. ಹೇಗೂ ಅಂಥಾ ಲೇಖಕರು ತಮ್ಮ ಬರೆವಣಿಗೆಗೆ ಸರ್ಕಾರದಿಂದ ಹಣವನ್ನು ಹೇಗೂ ಪಡೆಯುತ್ತಾರೆ. ಆದರೆ ವಿಷಯಗಳನ್ನು ಯಾವ ಹಿಂದಿನ ಗ್ರಂಥ ಗಳಿಂದ ಕದ್ದು ಬರೆದನೆಂಬುದನ್ನು ಸೂಚಿಸದೆಯೇ ತಾವು ನೋಡದೇ ಇದ್ದ ಕೇಳದೇ ಇದ್ದ ಕೃತಿಗಳಿಂದ ಎತ್ತಿ ಬರೆದರೆಂದು ಸುಳ್ಳು ಹೇಳುತ್ತಾರೆ.

ಇಂಥಾ ಆಕ್ಷೇಪಣೀಯವಾದ ವಿಚಾರಗಳು ಹೆಚ್ಚು ನಡೆಯದಂತೆ ತಡೆಗಟ್ಟಲು ಮತ್ತು ಪ್ರತಿಯೊಂದು ಗ್ರಂಥದಲ್ಲಿ ಹೇಳಲ್ಪಟ್ಟ ವಿಷಯಗಳಲ್ಲಿ ಆ ಲೇಖಕನು ಸ್ವಂತ ವಾಗಿ ಬರೆದುದೆಷ್ಟು, ಕದ್ದು ಬರೆದಿದ್ದು ಎಷ್ಟು ಎಂದು ನೋಡಲು ತಕ್ಕ ಕ್ರಮವನ್ನು ಕೈಗೊಳ್ಳಬೇಕಿದೆ, ಇಂಥಾ ವಿಚಾರಗಳಲ್ಲಿ ಪಾಶ್ಚಾತ್ಯರು ಅನುಸರಿಸಿದ ಅಂದಿನ ಕ್ರಮ ವನ್ನು ಮತ್ತು ಇಂದಿಗೂ ಇರುವ Copy-right ನಿಯಮಗಳನ್ನುಪಾಲಿಸುವ ಬಗ್ಗೆ ಇನ್ನಷ್ಟು ಶ್ರದ್ಧಾಪೂರ್ವಕವಾದ ವ್ಯವಸ್ಥೆಯು ನಡೆಯಬೇಕಿದೆ ಎಂದಷ್ಟೇ ಇಲ್ಲಿ ಹೇಳ ಬಹುದಾಗಿದೆ.

### ೧೫. ಜನರಲ್ಲಿ ವಿಚಾರ ಜಾಗೃತಿಗೆ ತಕ್ಕ ಪ್ರಚೋದನೆಯನ್ನಿತ್ತರು :—

ದೇಶದ ಆರ್ಥಿಕ, ವಾಣಿಜ್ಯ, ವಿದ್ಯಾ, ಸಾಹಿತ್ಯ ಹೀಗೆ ಯಾವುದರ ಪ್ರಗತಿಗೂ ಜನ ತೆಯ ಮನೋಗುಣವು ಪಕ್ವವಾಗಬೇಕಾಗಿದೆ. ಪುರಾತನ ಸಾಹಿತ್ಯದ ಅಭಿವೃದ್ಧಿಯ ಕಾಲವು ಅದೊಂದು ಬಗೆಯಾಗಿತ್ತು. ಆದರೆ ಆಧುನಿಕ ಸಾಹಿತ್ಯವು ಪ್ರೌಢವಾಗಿ ಉನ್ನತವಾಗಿ ಮತ್ತು ಗಂಭೀರವಾಗಿ ತೋರಬೇಕಾದರೆ ಜನರ ಮನೋದಾರ್ಢ್ಯವು ಅಂತೆಯೇ ಅದಕ್ಕೆ ಸದಾವಕಾಶವನ್ನು ಕಲ್ಪಿಸಬೇಕು.

ಪಾಶ್ಚಾತ್ಯರು ಈ ದೇಶಕ್ಕೆ ಬಂದಾಗ ಜನತೆಯ ವಿಚಾರಜ್ಞಾನಕ್ಕೆ ಕುಷ್ಠರೋಗ ಬಡಿದಂತಾಗಿ ಅದು ಸೊರಗಿದ್ದಿತು. ಅದಕ್ಕೆ ತಕ್ಕ ರೀತಿಯಲ್ಲಿ ಪೋಷಣೆಯನ್ನಿತ್ತು ಜನತೆಯ ಮನೋಗುಣವನ್ನು ಕದಡಿದವರು ಈ ವಿದೇಶೀಯರೇ ಆಗಿದ್ದಾರೆ. Lord Cornwallis ಇವನು ಸುಮಾರು ೧೯೦ ವರ್ಷಗಳಿಗೆ ಹಿಂದೆ "Every native of Hindustan, I verily believe, is corrupt" ಎಂದು ಹೇಳಿದಾಗ ಅದೇಕೆ ಅಂತಾಯಿತು ಎಂದು ಊಹಿಸಿದ ದೇಶೀಯರು ಆಗ ಯಾರೂ ಇರಲಿಲ್ಲ. ಆವರೆಗೂ ಜನರಿಗೆ ಹೀನಾಮಾನವಾದ ಶಾರೀರಕ ಶಿಕ್ಷೆ, ಚಿತ್ರಹಿಂಸೆ ಇತ್ಯಾದಿಗಳ ಮೂಲಕವಾಗಿ ಹಿಂದಿನ ಅನಾಗರಿಕ ಅಧಿಕಾರಿಗಳು ಜನಕ್ಕೆ ಬುದ್ಧಿಯನ್ನು ಕಲಿಸಿದ್ದರು. ಪಾಶ್ಚಾತ್ಯರು ಜನರನ್ನು ಪ್ರಾಣಿಗಳಂತೆ ಕಾಣುವುದು ಸರಿಯಲ್ಲವೆಂದು ಭಾವಿಸಿ ಅಂಥಾ ಹಿಂಸಾಕೃತ್ಯಗಳನ್ನು ನಿಲ್ಲಿಸಿ ಅವರಿಗೆ ನಾಗರೀಕತೆಯ ಗಂಧ ಗಾಳಿಯನ್ನು ಬೀರಿದರು. ಅಷ್ಟೇ ಅಲ್ಲ, "The personal habits of even the most highly educated classes in India are unequalled," ಎಂಬುದಾಗಿ ಅಮೇರಿಕಾದ ಮಹಿಳೆಯೋರ್ವಳು ಅಂದು ಹೇಳಿದ್ದು ಇಂದಿಗೂ ಸರಿಯೆಂದೇ ಅನಿಸು ತ್ತದೆ. ಬುದ್ಧ, ಶಂಕರ, ಗಾಂಧಿ–ಇಂಥವರು ಒಂದು ಸಾವಿರ ವರ್ಷಗಳಿಗೊಬ್ಬರಂತೆ ಹುಟ್ಟಿದರೆ ಎಲ್ಲರೂ ಹಾಗೆ ಎಂದು ಭಾವಿಸಿಕೊಂಡರೆ ಕೇವಲ ಸ್ವಪ್ನಪ್ರಾಯವಾದೀತು. ಆ ಕಾರಣದಿಂದಲೇ ಅವರು "Mr. Gandhi lives there; also tigers", ಎಂದು ಹೇಳುತ್ತಾ ಹೋದರು.

ನಮ್ಮ ಸಾಹಿತ್ಯ, ಸಂಸ್ಕೃತಿ, ಧರ್ಮ, ಮತಗಳಿಗೆ ಕೊಲೆಪಾತಕರಾಗಿದ್ದ ವಿದೇಶೀ ಯರು ಮಹ್ಮದೀಯರು, 800 ವರ್ಷಗಳ ಕಾಲ ಈ ದೇಶವನ್ನು ನುಚ್ಚುನುರಿಯಾಗಿ ಮಾಡಿ ಅಧೋಗತಿಗಿಳಿಸಿದವರು ಅವರು. ಆ ಪಿಶಾಚ ಕೃತ್ಯವನ್ನು ನಿಲ್ಲಿಸಲು ದೇವ

ದೂತರಂತೆ ಬಂದು ಅದ್ಭುತವಾದ ಕೆಲಸಗಳನ್ನು ಮಾಡಿ ದೇಶವನ್ನು ಉಳಿಸಿದರು ಬ್ರಿಟಿಷರು ; ಛಿದ್ರ ಛಿದ್ರವಾಗಿ ಹೋಗಿದ್ದ ಮತ್ತು ಸತ್ವಹೀನವಾಗಿದ್ದ ಭಾರತವನ್ನು 1858 ರಿಂದ ಒಂದೇ ಧ್ವಜದಡಿಯಲ್ಲಿಟ್ಟು ಒಂದೇ ಸರ್ಕಾರವಾಗಿ ಕಟ್ಟಿ ಒಂದೇ ಪ್ರಭುವಿನ ಆಶ್ರಯದಲ್ಲಿ ಆಡಳಿತ ನಡೆಸಿ ಒಂದು ಒಕ್ಕೂಟವನ್ನು ಕಟ್ಟಿದ ಸಾಹಸ ಅವರದು ; ಈ ಸತ್ಯವನ್ನು ಇಂದಿನ ಜನತೆಯು ಮನಗಂಡಷ್ಟು ದೇಶಕ್ಕೆ ಶ್ರೇಯಸ್ಕರ ವೆಂದೇ ಹೇಳಬಹುದಾಗಿದೆ.

ಅಷ್ಟೇ ಅಲ್ಲ ; ಆಧುನಿಕ ವಿದ್ಯೆ, ಆಧುನಿಕ ಪ್ರಗತಿ, ಆಧುನಿಕ ಆಡಳಿತ, ಆಧುನಿಕ ವೈಜ್ಞಾನಿಕ ಪ್ರಭಾವವೆಲ್ಲವನ್ನೂ ಬೀರಿ ದೇಶದ ಜನಕ್ಕೆ ವಿಚಾರ ಜಾಗೃತಿಯನ್ನುಣಿಸಿ ಈ ಇಪ್ಪತ್ತನೆ ಶತಮಾನದ ನಾಗರಿಕ ಪ್ರಪಂಚಕ್ಕೆ ಈ ದೇಶವನ್ನು ಒದ್ದು, ಮುಂದಕ್ಕೆ ತಳ್ಳಿದವರು ಪಾಶ್ಚಾತ್ಯರು. ಇಂದೀಗ ಆ ಸತ್ಯತೆಯನ್ನು ಗಮನಿಸದೆ ಇಂಗ್ಲಿಷ್ ಭಾಷೆ ಬೇಡ, ಇಂಗ್ಲಿಷ್ ವಿದ್ಯೆ ಬೇಡ ಎಂದಿತ್ಯಾದಿಯಾಗಿ ಹೇಳುವಂಥಾ ನಮ್ಮ ಇಂದಿನ ಬುದ್ಧಿವಂತರು ತಾವು ನೇರವಾಗಿ ಸ್ವರ್ಗಲೋಕದಿಂದ ಹುಟ್ಟಿಬಂದವರು ಎಂಬಂತೆ ಭಾವಿಸಿಕೊಂಡು ದೇಶವನ್ನು ಪುನಃ ಕಗ್ಗತ್ತಲ ವಾತಾವರಣಕ್ಕೆ ಅದ್ದುವ ಸಾಹಸವನ್ನು ಮಾಡುತ್ತಿದ್ದಾರೆ. ಈ ಬಗ್ಗೆ ಮಹಾತ್ಮ ಗಾಂಧಿಯವರು ಹೇಳಿದ ಈ ಮಾತುಗಳನ್ನು ಇಲ್ಲಿ ಹೇಳುವುದು ಸೂಕ್ತವಿದೆ ;—

> "I cannot cast out English knowledge from my small store of knowledge. I do not wish to forget that language nor do I wish all the Indians to give up or forget it. I cannot boycott English language· Its international position cannot be disputed. The Superior role of the English lang uage cannot go."

ಕಳೆದ ಶತಮಾನದಲ್ಲಿ ಅದ್ಭುತ ಮೇಧಾವಿಗಳಾದ ಪೀಳಿಗೆಯೊಂದು ಬಂಗಾಳ, ಮದ್ರಾಸು ಮತ್ತು ಬೊಂಬಾಯಿ ಪ್ರಾಂತಗಳ ಆವರಣದಲ್ಲಿ ಸೃಷ್ಟಿಯಾಯಿತು. ಅಂದಿನ ಯಾವೊಬ್ಬ ದೇಶೀಯ ರಾಜಕಾರಿಣಿಯೂ ಈ ಭಾಗಿಗಳಿಗೆ ಸೇರಿದ್ದವನಾಗಿದ್ದನು. ಉತ್ತರ ಹಿಂದೂಸ್ಥಾನದ ವಿಶಾಲ ಭೂಭಾಗವು ಅದೆಷ್ಟು ಭಂಜರು ಸೀಮೆಯೋ ಅದೇ ರೀತಿ ಜ್ಞಾನ ಪರಿಪಕ್ವತೆಯಲ್ಲೂ ಬಂಜರಾಯಿತು. ಇಂದೀಗ ಅಂಥವರು ಇಂಗ್ಲಿಷ್ ಭಾಷೆ ಮತ್ತು ವಿದ್ಯೆಯನ್ನು ಓಡಿಸಬೇಕೆಂದು ಹೇಳುವುದರಲ್ಲಿ ಅವರಪಾಲಿಗೆ ನ್ಯಾಯವೇ ಆಗಿದೆ. ಆದರೆ ದೇಶವು ಇನ್ನೂ ಹಲವು ವಿಷಯಗಳಲ್ಲಿ ಸಾಕಷ್ಟು ವಿಚಾರ ಜಾಗೃತಿಯನ್ನು ಪಡೆಯಲಿಲ್ಲವೆಂದೇ ಹೇಳಬೇಕಾಗಿದೆ.

೧೬. ಸ್ವಾತಂತ್ರ್ಯಕ್ಕಾಗಿ ಹೋರಾಡಲು ಕಲಿಸಿದವರು ಯಾರು ? :—

ನಮ್ಮ ದೇಶದಲ್ಲಿ ಇಂದಿಗೂ ಇರುವ ಇಂಗ್ಲಿಷ್ ಹೆಸರುಗಳು, ಇಂಗ್ಲಿಷ್ ರಾಜಕಾರಿಣಿಗಳ ಪ್ರತಿಮೆಗಳು ಮತ್ತು ಇಂಗ್ಲಿಷ್‌ಗೆ ಸಂಬಂಧಿಸಿದ ಸ್ಮಾರಕಾವಶೇಷಗಳೆಲ್ಲಾ ತೊಲಗಬೇಕೆಂದು ಹೇಳುವವರ ವಿಷಯದಲ್ಲಿ ಪಶ್ಚಾತ್ತಾಪ ಪಡಬೇಕಿದೆ. ಆದರೆ ಅವರು

ಈ ಒಂದು ವಿಷಯವನ್ನು ಲಕ್ಷಿಸಬೇಕು ; ಅದೇನೆಂದರೆ ನಮ್ಮ ದೇಶದಲ್ಲಿರುವ ಹೈದರಾಬಾದ್, ಅಲಹಾಬಾದ್, ಅಹ್ಮದಾಬಾದ್, ಗಾಜಿಯಾಬಾದ್, ಎಂಬೀ ತರಹದ "ಬಾದ್" ಹೆಸರುಗಳು ಇದ್ದಷ್ಟು ಕಾಲ ಈ ದೇಶಕ್ಕೆ ಅಪಾಯವಿದೆ. ಇವೆಲ್ಲಾ ಪಾಶ್ಚಾತ್ಯರು ಈ ದೇಶಕ್ಕೆ ಬರುವುದಕ್ಕೆ ಹಿಂದಿದ್ದ ಮತ್ತು ಅಂತೆಯೇ ಉಳಿಸಿದ ಗುಲಾಮ ವ್ಯಾಪಾರಗಳು. ಅವೆಲ್ಲವನ್ನೂ ಕಿತ್ತೊಗೆದನಂತರ ಉಳಿದ ವಿಚಾರಗಳನ್ನು ಆಲೋಚಿಸಿದರೆ ದೇಶಕ್ಕೆ ಕ್ಷೇಮ; ಆದರೆ ಜನರು ಹೀಗೆ ಆಲೋಚಿಸಲಾರರು; ತಮ್ಮ ಬಳಕೆಯಲ್ಲಿಯೇ ಇರುವ ಶತ್ರುಗಳನ್ನು ಮಿತ್ರರಂತೆ ಕಾಣುವ ಹೇಡಿತನದಿಂದ ಜನವು ನರಳುತ್ತಿದೆ; ಬದಲಾಗಿ ದೇಶಕ್ಕೆ ಅದೆಷ್ಟೋ ಪ್ರಗತಿಯನ್ನು ಸಾಧಿಸಿ ತಾವಾಗಿಯೇ ಅಗಲಿದ ದೂರದ ಜನದ ಕಡೆಗೆ ಕೂಗೆಬ್ಬಿಸಿ ಅವರನ್ನು ಹಳಿಯುವುದು ಮತ್ತೊಂದು ಹೇಡಿತನ! ಹೇಗೂ ಇಂತಿದೆ ಇಂದಿನ ಜನತೆಯ ಮನೋದಾರ್ಢ್ಯ!

1857 ರಲ್ಲಿ ನಡೆದ "ಸಿಪಾಯಿದಂಗೆ"ಯನ್ನು ದೇಶದ ಸ್ವಾತಂತ್ರ್ಯ ಸಮರದ ಮೊದಲನೇ ಹಂತವೆಂದು ಹೆಮ್ಮೆಯಿಂದ ಕೆಲವರು ದೊಡ್ಡ ದೊಡ್ಡ ಗ್ರಂಥಗಳನ್ನು ಬರೆಯುತ್ತಾ ಹೇಳಿದ್ದಾರೆ. ಆದರೆ ನಿಜವಾದ ವಿಷಯ ಹೇಳುವುದಾದರೆ ಅದು "ಸ್ವಾತಂತ್ರ್ಯ ಸಮರ" ಅಲ್ಲ. ಅದು ಬರೇ ಒಂದು ದಂಗೆ! ಒಂದುನೂರು ವರ್ಷಗಳಿಗೆ ಹಿಂದೆ ಯಾವ ಭಾರತೀಯನಿಗೂ ಸ್ವಾತಂತ್ರ್ಯವೆಂದರೇನೆಂದು ತಿಳಿದೇ ಇರಲಿಲ್ಲ; ಇದನ್ನು ನಾವು ಒಪ್ಪಬೇಕು! ರಾಜಾರಾಮ ಮೋಹನರಾಯನಂಥಾ ಘನ ವಿದ್ವಾಂಸನೂ ಬ್ರಿಟಿಷ್ ಆಳ್ವಿಕೆಯನ್ನು ಮುಕ್ತಕಂಠದಿಂದ ಸ್ವಾಗತಿಸಿ ದೇಶದ ಪ್ರಗತಿಗೆ ಆ ಮೂಲಕ ಸಾಧಿಸಿದ್ದಾನಲ್ಲದೆ ಸ್ವಾತಂತ್ರ್ಯಕ್ಕಲ್ಲ. ಸ್ವಾತಂತ್ರ್ಯವೆಂದರೆ ಏನೆಂದು ಇಂದಿಗೂ ನಮ್ಮ ಜನಕ್ಕೆ ತಿಳಿದಿದೆಯೋ ಎಂದು ಕೆಲವರು ಸಂದೇಹಪಟ್ಟರೆ ಆದಕ್ಕೆ ಆಶ್ಚರ್ಯಪಡಬೇಕಾದ್ದಿಲ್ಲ.

1857 ರಲ್ಲಿ ದಂಗೆಯೆದ್ದ ಸಹಸ್ರಾರು ಜನಕ್ಕೆ ತಾವು ಏತಕ್ಕಾಗಿ ದೊಂಬಿ ಹೂಡಿದ್ದೇವೆಂದು ತಿಳಿದಿರಲಿಲ್ಲ, ಅಲ್ಲಲ್ಲಿ ಇದ್ದ ನೂರಾರು ದೇಶೀಯ ಪ್ರಮುಖರು ಮತ್ತು ಪಾಳೆಯಗಾರರು ತಮ್ಮ ಹಲವು ಎಕ್ರೆಗಳ ವಿಸ್ತಾರದ ರಾಜ್ಯ. ಭೂಮಿ, ಹಣ, ಮನೆ, ಮಠಗಳನ್ನು ಕಾಪಾಡಿಕೊಳ್ಳುವ ಬಗ್ಗೆ ತಮ್ಮ ನಿರಕ್ಷರಸ್ತ ಮತ್ತು ನಿರ್ಗತಿಕರಾದ ಜನವನ್ನು ಜತೆಗೂಡಿಸಿ ಅವರಿಗೆ ಕೋಲು ಡೋಲುಗಳನ್ನು ಹಿಡಿಸಿ ಊದಿ ಕಳುಹಿಸಿದರು. ಹಾಗೆ ದಂಗೆಯೆದ್ದು ಅಲ್ಲಲ್ಲಿ ಧಾಳಾಧೂಳಿಯೆಬ್ಬಿಸಿ ಅರಚಿದ ಜನರಲ್ಲಿ ಶೇಕಡ 75 ಕ್ಕೆ ಬೇಕಾಗಿದ್ದುದು ಹಣ ಮತ್ತು ಅವರ ಜೀವನೋಪಾಯ; ಉಳಿದ ೨೫ ರಷ್ಟು ಜನವು ಸಹ ತಾವು ಶತ್ರುಗಳೆಂದು ಭಾವಿಸಿದ್ದ ಆ ಪಾಶ್ಚಾತ್ಯ ರಾಜಕಾರಿಣಿಗಳ ಗೂಢಾಚಾರರಾಗಿ ಸೇರಿ ಅವರಿಗೆ ಅನುಕೂಲತೆಯನ್ನು ಕಲ್ಪಿಸಿಕೊಟ್ಟರು. ಇವರಿಗೆಲ್ಲಾ ದೇಶವೇನು, ದೇಶಾಭಿಮಾನವೇನು, ತಾವು ಮಾಡುವುದೇನು, ಏನೂ ತಿಳಿಯದು!

ಝಾನ್ಸೀರಾಣಿಯು ತನ್ನ ರಾಜ್ಯವನ್ನು ಉಳಿಸಿಕೊಳ್ಳಲು ಬ್ರಿಟಿಷರನ್ನು ಕಾಡಿ, ಬೇಡಿ ಪ್ರಯೋಜನವಾಗದೆ ಕಡೆಗೆ ತನ್ನಜೀವವನ್ನು ಉಳಿಸಿಕೊಳ್ಳಲು ತನ್ನಮಗುವನ್ನು ಕಟ್ಟಿಕೊಂಡು ಕುದುರೆಯನ್ನೇರಿ ತನ್ನ ರಾಜ್ಯದಿಂದ ಹೊರಟು ಹೋದಳು. ಅದೇ ರೀತಿ

ಅಂದಿನ ಎಲ್ಲಾ ಪ್ರಮುಖರ ಕತೆಯೂ ಆಗಿದೆ. ಕರ್ಣಾಟಕದ ರಾಜರು, ನಾಯಕರು, ಪಾಳೆಯಗಾರರೆಲ್ಲಾ ಮಾಡಿದ್ದು ತಮ್ಮ ರಾಜ್ಯ, ತಮ್ಮ ಭೂಮಿ, ತಮ್ಮ ಆಸ್ತಿ ಇತ್ಯಾದಿಗಳ ರಕ್ಷಣೆಗಾಗಿ ಹೋರಾಟ. ಇವರಿಗೆಲ್ಲಾ ಈ ವಿಶಾಲ ದೇಶದ ಉದ್ದಗಲದ ಪರಿಚಯವೇ ಇರಲಿಲ್ಲ. ಮೈಸೂರು ರಾಜವಂಶವು ಬ್ರಿಟಿಷರು ಬಾರದೇ ಹೋಗಿದ್ದರೆ ಅಂದೇ ನಿರ್ನಾಮವಾಗಬೇಕಿತ್ತು. ಕಿತ್ತೂರು ರಾಣಿ, ನರಗುಂದದ ನಾಯಕ, ಸವನೂರಿನ ನವಾಬ, ಕೊಡಗಿನ ರಾಜ, ಚಿತ್ರದುರ್ಗದ ಪಾಳೆಯಗಾರರು ಮೊದಲಾದವರಿಗೆ ಹಿಂದೂಸ್ಥಾನವೇನು, ಸ್ವಾತಂತ್ರ್ಯವೇನು ; ಏ ನೂ ತಿ ಳಿ ಯ ದು. ಅವರೆಲ್ಲರೂ ತಮ್ಮ ಕ್ಷೇಮವನ್ನು ಸಾಧಿಸಲು ದೇಶದ ಕ್ಷಾಮವನ್ನು ಸದುಪಯೋಗಪಡಿಸಿಕೊಂಡುದ್ದೇ ತೋರುತ್ತದೆ.

**೧೭. ಸ್ವಾತಂತ್ರ್ಯದ ಬೆಲೆಯನ್ನರಿಯಲು ಜನರು ನಾಗರಿಕರಾಗಬೇಕು** :—

ಸಹಸ್ರಾರು ಕುರಿಗಳು ಡೋಲು ದೊಣ್ಣೆಗಳನ್ನು ಹಿಡಿದು ಅರಚಿದರೆ ಅದು ಸ್ವಾತಂತ್ರ್ಯ ಹೋರಾಟವಾಯಿತೇ? ಪರಿಣಾಮವಾಗಿ ಸಮಗ್ರ ಹಿಂದೂಸ್ಥಾನವು 1858 ರಿಂದ ಬ್ರಿಟಿಷ್ ಸಾರ್ವಭೌಮತ್ವದೊಳಗೆ ಅಡಗಿತು ; ಹಾಗಾದುದು ದೈವ ಪ್ರೇರಣೆ ! ಹಾಗಾದುದು ನಿಜಕ್ಕೂ ಹಿಂದೂ ಧರ್ಮದ, ಹಿಂದೂ ಸಂಸ್ಕೃತಿಯ ಮತ್ತು ಹಿಂದೂಸ್ಥಾನದ ಸುಯೋಗ ! ಇದರಿಂದ ಹಿಂದೂಗಳ ಹಿಂದೂದೇಶವು ಮಹಮ್ಮದೀಯರ ಕೈವಾಡದಿಂದ ತಪ್ಪಿ ದೇಶವು ಉಳಿಯಿತು. ಅಂತಾಗದೆ ಹೋಗಿದ್ದರೆ ದೇಶದ ಕತೆಯು ಚಿಂತಾಜನಕವಾಗಿ ಪರ್ಯವಸಾನಗೊಳ್ಳುತಿತ್ತು.

ಸ್ವಾತಂತ್ರ್ಯಯೆಂಬುದಕ್ಕೆ ತುಂಬಾ ಬೆಲೆಯಿದೆ. ಅದೇನೆಂದು ತಿಳಿಯಲು ಜನರು ವಿದ್ಯಾವಂತರಾಗಬೇಕು ; ನೀತಿಯನ್ನು ಕಲಿಯಬೇಕು ; ವಿಚಾರಜ್ಞಾನ ಪಡೆಯಬೇಕು. ಎಂಬುದನ್ನು ಪಾಶ್ಚಾತ್ಯರು ಜನಕ್ಕೆ ಹೇಳಿಕೊಟ್ಟರು ; ಅಂತೆಯೇ ಆಧುನಿಕ ವಿದ್ಯೆಯನ್ನು ಕಲಿಸಿದರು. ವೈಜ್ಞಾನೀಕ ವಿಚಾರವನ್ನು ಬಿತ್ತರಿಸಿದರು. 1730 ರಷ್ಟು ಹಿಂದೆಯೇ ಮೊದಲ ಇಂಗ್ಲಿಷ್ ಶಾಲೆಯನ್ನು ಕಲ್ಕತ್ತಾದಲ್ಲಿ ತೆರೆದರು. ಮತ್ತೊಂದು ಅಂಥಾ ಶಾಲೆಯನ್ನು 1760 ರಲ್ಲಿ Mrs. Hedges ಇವಳು ಈ ದೇಶದ ಹುಡುಗಿಯರಿಗಾಗಿ ತೆರೆದು ಈ ದೇಶದಲ್ಲಿ ಆಧುನಿಕ ವಿದ್ಯಾಪ್ರಚಾರಕ್ಕೆ ನಾಂದಿಯನ್ನು ಹಾಕಿದರು. 1774 ರಲ್ಲಿ ಪ್ರಧಾನ ನ್ಯಾಯಾಲಯವೂ ಸ್ಥಾಪನೆಯಾಯಿತು. ಸ್ವೀಡನ್ ದೇಶದ Rev. Kiernander ಇವನು 1767 ರಲ್ಲಿ ಮೊದಲನೇ ಕ್ರೈಸ್ತ ಶಾಲೆಯನ್ನು ಕಲ್ಕತ್ತಾದಲ್ಲಿ ಸ್ಥಾಪಿಸಿದನು.

ಇಂಥಾ ಉತ್ತಮವಾದ ತಳಹದಿಯಿಂದ ದೇಶವು ಮೆಲ್ಲನೆ ಉಚ್ಛ್ರಾಯ ಸ್ಥಿತಿಗೆ ಏರುತ್ತಾ ಬಂತು. ಬಂಗಾಳದಲ್ಲಿ ದ್ವಾರಕನಾಥ ಟಾಗೋರ್, ಹರೀಶ ಮುಖರ್ಜಿ ಮತ್ತು ಇನ್ನೆಷ್ಟೋ ದೇಶೀಯ ವಿದ್ಯಾವಂತರು ಮುಂದಕ್ಕೆ ಬಂದರು. ಭಾರತೀಯರು ಹೀಗೆ ಮುಂದಕ್ಕೆ ಬರುತ್ತಾ ಇದ್ದಾಗ ಅವರ ಸಹಾಯವನ್ನು ಪಡೆದು ಆಂಗ್ಲೇಯರು ಇನ್ನಷ್ಟು ಬಿರುಸಿನಿಂದ ತಮ್ಮ ಯೋಜನೆಗಳನ್ನೆಲ್ಲಾ ಮುಂದೊತ್ತಿದರು. ಹೀಗಾಗಿ 19 ನೇ ಶತಮಾನಕ್ಕೆ ದೇಶವು ಕಾಲಿಟ್ಟಾಗ "the enlightened Hindus

were dazzled by the glare of the Western civilization" ಎಂಬಂತೆ ದೇಶದಲ್ಲಿ ಅಪೂರ್ವ ಬದಲಾವಣೆಯು ತೋರಿಬಂತು.

ಈತನ್ಮಧ್ಯೆ ಸಹಸ್ರಾರು ಅಥವಾ ಲಕ್ಷಗಟ್ಲೆ ಗ್ರಂಥಗಳು ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ವಿಚಾರವಾಗಿ ದೇಶದ ಆದ್ಯಂತಕ್ಕೂ ಪ್ರಕಟವಾಗುತ್ತಾ ಬಂದುವು. ಅಪಾರ ಪ್ರಾಚೀನ ಓಲೆಗಳನ್ನೂ ಶಾಸನಗಳನ್ನೂ ಕಾಲಗರ್ಭದಿಂದ ಅಗಿದು ತೆಗೆದರು. ರಾಜ್ಯಾಡಳಿತೆಗೆ ಸಹಾಯಕವಾಗುವಂತೆ ಸರಕಾರೀ ವರದಿಗಳೂ, ನಾನಾ ಬಗೆಯ ಗೆಜೆಟಯರುಗಳೂ, ಅದೆಷ್ಟೋ ಹೊರಬಂದುವು. ಅವುಗಳೆಲ್ಲಾ ಇಂದಿಗೂ ಹೊರದೆಗೆದು ಪುನರ್ಮುದ್ರಣಮಾಡಿ ಎಲ್ಲೆಲ್ಲೂ ಉಪಯೋಗಿಸಬಹುದಾದಷ್ಟು ಅಮೋಘಕೃತಿಗಳಾಗಿವೆ. ಅವುಗಳು ಲಕ್ಷಗಟ್ಲೆಯಾಗಿ ಪಾಶ್ಚಾತ್ಯ ಭಾಷೆಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಇಂದಿಗೂ ಉಳಿದು ಹೋಗಿವೆ. ಅವನ್ನೆಲ್ಲಾ ಅಥವಾ ಅವುಗಳಲ್ಲಿ ಉತ್ತಮವಾದುದನ್ನೆಲ್ಲಾ ಭಾರತೀಯ ಭಾಷೆಗಳಿಗೆ ಇಳಿಸಿ "ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗೆನಿದಾಗಿ ಸವಿ"ಯುವುದು ನಮ್ಮ ಕರ್ತವ್ಯವಾಗಬೇಕಿದೆ.

**೧೮. ಜನರಲ್ಲಿ ದೇಶಾಭಿಮಾನವನ್ನು ಮೊಳಗಿಸಿದರು :—**

"Sons of Ind, why sit ye idle
Wait ye for some Deva's aid?
Buckle to, be up and doing,
Nations by themselves are made."

ಎಂಬುದಾಗಿ 1880 ರ ಕಾಲದಲ್ಲಿ ನಿವೃತ್ತ ಸರಕಾರೀ ಉದ್ಯೋಗಿಯೂ Father of the Indian National Congress ಎಂಬುದಾಗಿಯೂ ಕರೆಯಲ್ಪಟ್ಟ Sir Octavian Hume ಇವನು ಹಾಡಿದನು. ಆ ವರೆಗೂ ಈ ದೇಶದ ಯಾವ ವಿದ್ಯಾವಂತನಿಗೂ ಅವಿದ್ಯಾವಂತನಿಗೂ ಸ್ವಾತಂತ್ರ್ಯಯೆಂಬುದರ ಪರಿವೆಯೇ ಇರಲಿಲ್ಲ. ಆ ಕಾರಣದಿಂದ ಆಂಗ್ಲೇಯರೇ ವಿದ್ಯಾವಂತರಾದ ದೇಶೀಯರನ್ನು ಜತೆ ಸೇರಿಸಿ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿದರು. Octavian Hume, George Yule, Samuel Smith ಮೊದಲಾದರು ಭಾರತೀಯ ಸ್ವಾತಂತ್ರ್ಯ ಸಮರದ ಮೊದಲ ವೀರರಾದರು. ಅಂದಿನ ವೈಸ್ರಾಯಿ Lord Dufferin, ಮತ್ತು ಸಂಯುಕ್ತ ಪ್ರಾಂತದ ಗೌರ್ನರ್ Aukland Colvin ಇವರಂಥಾ ಅಧಿಕಾರಿಗಳೂ ಆ ರಾಷ್ಟ್ರೀಯ ಸಂಸ್ಥೆಗೆ ಜಯವಾಗಲಿ ಎಂದು ಹರಸಿದರು. 1885 ರ ಕಾಂಗ್ರೆಸ್ ಅಧಿವೇಶನದಲ್ಲಿ ಮಾತಾಡುತ್ತಾ Lord Dufferin ಹೀಗೆ ಹೇಳಿದನು :—

"She, Great Britain, had given India order, she had given railways, and, above all, she had given them the inestimable blessing of Western education. But a great deal still remains to be done."

37

ಸಿದ್ಧಿಸಿದ ಈ ದೇಶದ ಜನವನ್ನು ಬಡಿದೆಬ್ಬಿಸಲು ಅಂದು ಇನ್ನೂ ಹಲವು ಆಂಗ್ಲೇಯ ದೇಶಭಕ್ತರು ಮುಂದೆ ಬಂದರು. ಅವರಲ್ಲಿ William Wedderburn, Henry Cotton, Mrs. Anne Besant ಹೀಗೆ ಕೆಲವರು ಪ್ರಮುಖ ಸ್ಥಾನವನ್ನು ವಹಿಸಿ ದೇಶದ ಉದ್ಧಗಲಕ್ಕೂ ಓಡಾಡಿದರು. ಮಿಲ್ಯಾಂತರ ಜನರಿಂದ ಕೂಡಿದ ಈ ವಿಶಾಲ ದೇಶದಿಂದ ಐವತ್ತು ಜನವಾದರೂ ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಮುಂದಾಗಿರಿಯೆಂದು ಆ ವಿದೇಶೀಯ ದೇಶಾಭಿಮಾನಿಗಳು 1882 ರಷ್ಟು ಹಿಂದೆ ಈ ದೇಶದ ಜನವನ್ನು ಬೇಡಿಕೊಂಡರು. 1857 ರಲ್ಲಿ ದೊಂಬಿ ಹೂಡಿದ ನಿರ್ಗತಿಕ ನಿರಕ್ಷರಸ್ಥರನ್ನು ಸ್ವಾತಂತ್ರ್ಯ ಸಮರವನ್ನು ನಡೆಸಿದವರೆಂದು ದೊಡ್ಡ ದೊಡ್ಡ ಗ್ರಂಥಗಳ ಮೂಲಕ ಇಂದು ಹೇಳಿಕೊಳ್ಳುವುದು ನಾಚಿಕೆಗೇಡು ಮಾತ್ರವಲ್ಲ, ಚರಿತ್ರೆಯನ್ನೇ ಅವಮಾನಗೊಳಿಸಿದಂತೆ ಎಂದು ಹೇಳಬಹುದು. ಹೇಗೂ ಅಂದಿನ ಆ ಪಾಶ್ಚಾತ್ಯ ವೀರರ ಕರೆಗೆ ನಾಲ್ಕಾರು ದೇಶೀಯರು ತಮ್ಮ ಮುಂಡಾಸು, ಪಗಡಿ, ಕುಚ್ಚು ಮೀಸೆಗಳನ್ನು ಹೊತ್ತುಕೊಂಡು ದೇಶಸೇವೆಗೆಂದು ಮುಂದಾದರು: ಹೀಗಾಗಿ “ದೇಶೀಯ ದೇಶಾಭಿಮಾನಿಗಳ” ತಂಡವೊಂದು ದೇಶದಲ್ಲಿ ಮೊದಲ ಬಾರಿಗೆ ಸೃಷ್ಟಿಯಾಯಿತು.

ಆದುದರಿಂದ ಹಿಂದಿನ ದಂಗೆಕೋರರನ್ನೂ ನಾಯಕರನ್ನೂ ಪಾಳೆಯಗಾರರನ್ನೂ ದೇಶಕ್ಕಾಗಿ ಹೋರಾಡಿದವರೆಂದು ಹೇಳಿದರೆ ಇಂದಿನ ಜನಾಂಗಕ್ಕೆ ಚಾರಿತ್ರಿಕ ವಿವರವನ್ನು ಸರಿಯಾಗಿ ಹೇಳಿದಂತೆ ತೋರಲಾರದು. ಹೇಗೂ ಮೊದಲ ಬಾರಿಗೆ ಪಾಶ್ಚಾತ್ಯರ ಪ್ರಭಾವದಿಂದ ನಿರ್ಮಾಣಗೊಂಡ ದೇಶಾಭಿಮಾನಿಗಳ ಪೈಕಿ ನವರೋಜಿ, ರಾನಡೆ, ಮೆಹತಾ, ವಾಚಾ, ಬಿಪಿನ್‌ಚಂದ್ರಪಾಲ್, ಗೋಖಲೆ ಹೀಗೆ ಕೆಲವರು ಶ್ರೇಷ್ಠ ವ್ಯಕ್ತಿಗಳು, ಮಹಾ ವಿದ್ಯಾವಂತರೂ, ವಾಗ್ಮಿಗಳೂ ಆಗಿ ಜನತೆಯಲ್ಲಿ ರಾಷ್ಟ್ರಾಭಿಮಾನವನ್ನು ಮೊಳಗಿಸಲು ಕಾರಣರಾದರು. ಆದರೆ ಅವರ ಹೋರಾಟದಲ್ಲಿ ಶೀಲ, ಶಿಸ್ತು, ಘಟನಾತ್ಮಕ ಚಳುವಳಿ ಇತ್ಯಾದಿಗಳಿಗೆ ಪಾಶ್ಚಾತ್ಯ ದೇಶಾಭಿಮಾನಿಗಳು ಹಿಂದೆ ನಿಂತು ದಿಗ್ದರ್ಶಕರಾಗಿದ್ದರು.

ಇಲ್ಲಿಂದ ಮೊದಲ್ಗೊಂಡು ಜನವು ಎಚ್ಚೆತ್ತಂತೆ ತೋರಿತು. ಸಾಕಷ್ಟು ಜನರು ಆಧುನಿಕ ವಿದ್ಯಾಭ್ಯಾಸವನ್ನು ಪಡೆಯುತ್ತಾ ಬಂದರು. ದೇಶದ ಭವಿಷ್ಯದಲ್ಲಿ ಆಶಾದಾಯಕವಾದ ಚಿಹ್ನೆಯು ತೋರಿಬಂತು. ಇಷ್ಟೆಲ್ಲಾ ಆದ ಮೇಲೆ ಇತ್ತೀಚೆಗೆ 1919 ರಲ್ಲಿ ಬಾಲಗಂಗಾಧರತಿಲಕನು “Swaraj is my birth-right” ಎಂದನ್ನುವಷ್ಟರವರೆಗೂ ಜನವು ಜಾಗೃತವಾಯಿತು. ಆದರೆ ಆವರಿಗೆ “ಜಾಗನ್ನಿರಿ” ಎಂದು ಅದಕ್ಕಿಂತ 35 ವರ್ಷಗಳಿಗೂ ಹಿಂದಿನಿಂದ ಆಂಗ್ಲೇಯ ಧುರೀಣರು ತರಬೇತುಗೊಳಿಸಿ ಜನರಲ್ಲಿ ದೇಶಾಭಿಮಾನವನ್ನು ಮೊಳಗಿಸಿ ಕೃತಾರ್ಥರಾದ ವಿಚಾರವು ಸಾಮಾನ್ಯವಾದುದಾಗಿರಲಿಲ್ಲ.

ಆ ಕಾಲಕ್ಕೆ ಮತ್ತು ಅದಕ್ಕೂ ಹಿಂದೆ ಹಲವಾರು ಪಾಶ್ಚಾತ್ಯರು ಭಾರತೀಯ ದೇಶಾಭಿಮಾನಿಗಳಾಗಿ ಈ ದೇಶದ ಸ್ವಾತಂತ್ರ್ಯಕ್ಕಾಗಿ ಈ ದೇಶದ ಜನವನ್ನು ಬಡಿದೆಬ್ಬಿಸಿದರಾದರೂ ಅವರಲ್ಲಿ ಗೋವಾದಲ್ಲಿದ್ದ Francisco Louis Gomes ಇವನು

ಪ್ರಮುಖನೆಂದೆನ್ನಬಹುದು. ಪೋರ್ಚುಗೀಸ್ ವಸಾಹತ್ತು ಗೋವಾದಲ್ಲಿ ಹುಟ್ಟಿದ ಇವನು ತನ್ನ ಎಳೆಪ್ರಾಯದಲ್ಲಿಯೇ ವಿಶೇಷ ದೇಶಾಭಿಮಾನಿಯಾಗಿ ವಿರಾಜಿಸಿದನು.

"I was born in India once the cradle of poetry, philosophy and history, and now their tomb."

ಎಂಬುದಾಗಿ ದರ್ಪದಲ್ಲಿ ಹೇಳುತ್ತಿದ್ದನು. F. Louis Gomes ಇವನು ಈ ದೇಶದ ಪ್ರಚಂಡ ಸಮಾಜ ಸುಧಾರಕನೂ ಆರ್ಥಿಕ ಹಾಗೂ ರಾಜಕೀಯ ತತ್ವಜ್ಞನೂ ಆಗಿದ್ದು ಕೊಂಕಣಿ ವ್ಯಾಕರಣವನ್ನು ರಚಿಸಿದ ಪ್ರಬಲ ಭಾರತೀಯ ಭಾಷಾ ಪಂಡಿತ Cunha Rivera ಇವನೊಡನೆ ಸೇರಿ ಅಪೂರ್ವ ಭಾಷಾಜ್ಞಾನವನ್ನು ಸಂಪಾದಿಸಿದನು. ಪೋರ್ಚುಗಲ್, ಇಂಗ್ಲಿಷ್, ಇಟಾಲಿಯನ್, ಸ್ಪ್ಯಾನಿಷ್, ಲ್ಯಾಟಿನ್ ಮತ್ತು ಮರಾಠಿ ಭಾಷೆಗಳಲ್ಲೂ ಪ್ರಬಲ ಪಂಡಿತನೆನಿಸಿ ಭಾರತದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಿದ ಪಾಶ್ಚಾತ್ಯರಲ್ಲಿ ಮೊದಲಿಗನೆನಿಸಿದ ವೀರಯೋಧನೆಂದು ಪ್ರಖ್ಯಾತನಾದನು. ಇವನು ಸೆಪ್ಟಂಬರ್ 1868 ರಲ್ಲಿ ತನ್ನ ಎಳೆಪ್ರಾಯದಲ್ಲಿಯೇ ವಿಧಿವಶನಾದನು.

೧೯. 'ಸ್ವರಾಜ್ಯವೇನೋ ಬಂತು'–ಎಂಬಂತೆ ಆಯಿತು :—

ಆಂಗ್ಲೇಯರು ಹಿಂದೂಸ್ಥಾನದಲ್ಲಿ ಅಧಿಕಾರ ನಡೆಸಲು ಪ್ರಾರಂಭಿಸಿದಾಗಲೇ ಅವರು ಈ ದೇಶದಲ್ಲಿ ತಾವೇನೂ ಬಹುಕಾಲ ನೆಲೆವೂರಲಾರೆವೆಂದೇ ಬಗೆದಿದ್ದರು. ಆ ಕಾರಣದಿಂದಾಗಿಯೇ ತಮಗೆ ದೈವದತ್ತವಾಗಿ ಲಭಿಸಿದ ಸದವಕಾಶವನ್ನು ಸದ್ವಿನಿಯೋಗಪಡಿಸಲೆಂದೇ ಅವರು ದೇಶದ ಅಭಿವೃದ್ಧಿಗಾಗಿ ಬಹುಮುಖವಾಗಿ ಶ್ರಮಿಸಿದರು. ಹಾಗೆ ಅವರು ಶ್ರಮಿಸಿ ಸಾರ್ಥಕ್ಯವನ್ನು ಪಡೆದ ಒಂದು ಸೇವಾಕ್ಷೇತ್ರವೆಂದರೆ ಹಿಂದೂಸ್ಥಾನದ ಚರಿತ್ರೆ, ಸಾಹಿತ್ಯ, ಸಂಸ್ಕೃತಿ, ಇತ್ಯಾದಿಗಳ ಅನ್ವೇಷಣೆ, ಸಂಶೋಧನೆ, ಸಂಪಾದನೆ ಮತ್ತು ಪೋಷಣೆ, ಇದರ ಮೂಲಕವಾಗಿ ಅವರು ಹಿಂದೂ ಧರ್ಮವನ್ನೇ ಕಾಪಾಡಿದರು ; ಹೈಂದವ ಸಂಸ್ಕೃತಿಯ ವಿನಾಶವನ್ನು ತಡೆದಿಟ್ಟರು. 800 ವರ್ಷಗಳ ಕಾಲದ ಮಹಮ್ಮದೀಯ ಕರಾಳ ಕೃತ್ಯದ ಪರಿಣಾಮವಾಗಿ ಹರಿಯುತ್ತಿದ್ದ ರಕ್ತದ ಹೊಳೆಗೆ ಕಟ್ಟೆಯನ್ನು ಕಟ್ಟಿ ತಡೆದಿಟ್ಟು ದೇಶವನ್ನು ಪ್ರಗತಿಪಥಕ್ಕೆ ಒಯ್ದರು. ಇಂಥಾ ಒಂದು ಮಹಾಕಾರ್ಯವನ್ನು ಸಾಧಿಸಲು ಮಾತ್ರ ಅವರು ಈ ದೇಶದಲ್ಲಿ ಅಷ್ಟೊಂದು ಕಾಲ ಉಳಿಯಬೇಕಾಯಿತು. ಭಾರತದ ಮೊದಲನೇ ಗೌರ್ನರ್ ಜನರಲ್ Warren Hastings ಇವನು ತಾವು ಈ ದೇಶದ ವಿದ್ಯೆ, ಸಂಸ್ಕೃತಿ, ಮತ್ತು ಜ್ಞಾನಪ್ರಚಾರ ನಿಮಿತ್ತ ಸಾಧಿಸಿದ್ದರ ಕೀರ್ತಿಯು ಇಲ್ಲಿ ಬಹುಕಾಲ ಉಳಿಯುವುದು ಎಂದು ಅಂದೆಯೇ ಭವಿಷ್ಯ ನುಡಿದಿದ್ದನು :—"These....writings will survive when British dominion in India shall have long ceased to exist."

ಆದರೂ ಬ್ರಿಟಿಷರು ಅದೇನೋ ಸಡಗರದಲ್ಲಿ 1947 ರ ಕಾಲಕ್ಕೆ ಈ ದೇಶದಿಂದ ತಾವಾಗಿಯೇ ಅಗಲಿದರು. ಅಷ್ಟು ಅವಸರದಿಂದ ಅದೇಕೆ ಬಿಟ್ಟು ಹೋಗಬೇಕಾಯಿತೋ ತಿಳಿಯದು. ಗಾಂಧೀಜಿಯು ಅನಂತರ ಆರು ತಿಂಗಳಲ್ಲೂ ಮಹಮ್ಮದಾಲಿ ಜಿನ್ನಾನು

ಅಲ್ಲಿಂದ ಇನ್ನೊಂದು ಆರು ತಿಂಗಳಲ್ಲೂ ಮೃತರಾದರು. ಆದರೆ ಬ್ರಿಟಿಷರು ಇನ್ನೊಂದು ಕೆಲಕಾಲ ಈ ಅವಿಭಾಜ್ಯ ಭಾರತದಲ್ಲಿ ಅಧಿಕಾರವನ್ನು ನಡೆಸಿ ಜನತೆಯ ಮನೋಗುಣ ವನ್ನು ಇನ್ನಷ್ಟು ಮೆರುಗಾಗಿಸಲು ಸಹಾಯಕರಾಗಬೇಕಿತ್ತು. ಹಲವು ಕ್ರೂರ ಪದ್ಧತಿ ಗಳನ್ನೆಲ್ಲಾ ನಿಲ್ಲಿಸಿ ಹಿಂದೂ ಸಮಾಜವನ್ನು ಉತ್ತಮಮಟ್ಟಕ್ಕೆ ಏರಿಸಿದ ಆ ನಾಗರಿಕ ಜನಾಂಗವು ಇನ್ನೂ ದೇಶದಲ್ಲಿ ತಾಂಡವವಾಡುತ್ತಿರುವ ಜಾತಿ, ಮತ, ಮೋಸ, ದ್ರೋಹ, ಇತ್ಯಾದಿ ಅತ್ಯಾಚಾರಗಳನ್ನು ಕಿತ್ತೊಗೆಯಲು ಕೆಲಕಾಲ ಇರಬೇಕಿತ್ತು. ಜನರನ್ನು ಆಧುನಿಕ ವಿದ್ಯಾಭ್ಯಾಸದಲ್ಲಿ ಪಳಗಿಸಿದ ಅವರು ಆ ದಿಶೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸಿ ಅಗಲಬೇಕಿತ್ತು.

ಹೇಗೂ ಚಾರಿತ್ರಿಕ ಘಟನೆಗಳೆಲ್ಲವೂ ದೈವ ಪ್ರೇರಣೆಯಿಂದ ಆಗತಕ್ಕಂಥ ದಾಗಿವೆ. ಅಂದು ಆಂಗ್ಲೇಯ ವಾಙ್ಮಯವು ದೇಶಕ್ಕೆ ನವ ಅರುಣೋದಯವಾದಂತೆ ಜಾಜ್ವಲ್ಯಮಾನವಾಗಿತ್ತು. ಭಾರತೀಯರು ಮುಂದುವರಿದರು ; ಹಲವರು ವಿಶ್ವ ವಿಖ್ಯಾತರಾದರು ; ಎಲ್ಲಾ ದಿಶೆಯಲ್ಲೂ ಪ್ರಗತಿಯು ತೋರಿತು. ರಾಷ್ಟ್ರೀಯ ಕಾಂಗ್ರೆಸ್ಸು ಸಂಸ್ಥೆಯು ಸ್ಥಾಪಿತವಾದಾಗ ಇದ್ದ ಪ್ರಚಂಡ ದೇಶೀಯ ರಾಷ್ಟ್ರಾಭಿಮಾನಿಗಳು ಭವಿ ಷ್ಯಕ್ಕೆ ತಕ್ಕ ಸ್ಫೂರ್ತಿಯನ್ನೀಯುವಂತಾದರು. ಅವರ ವಿದ್ಯಾಬಲ, ವಾಗ್ಬಲವೆಲ್ಲವೂ ಆಂಗ್ಲೇಯರನ್ನೂ ಬೆರಗಾಗಿಸಿತು. ಅಂದಿನ ಭಾರತೀಯ ದೇಶಾಭಿಮಾನಿಯೋರ್ವನ ವಾಕ್ಚಾತುರ್ಯವನ್ನು ಕುರಿತು Henry Nevinson ಇವನು ಈ ರೀತಿಯಾಗಿ ಆಶ್ಚರ್ಯವನ್ನು ವ್ಯಕ್ತಪಡಿಸಿದನು :—

> "Except for Gladstone, I have heard no speaker use the rhetorical style with more assurance and success......It was an oratory such as I suppose, Cicero loved to practice."

ಹೀಗೆ ಅತ್ಯುನ್ನತ ಮಟ್ಟದ ವಾಗ್ಮಿಗಳು ವಿದ್ವಾಂಸರು ಮತ್ತು ದೇಶಾಭಿಮಾನಿಗಳನ್ನು ತರಬೇತುಗೊಳಿಸಿ ಆಂಗ್ಲೇಯರು ಕೃತಾರ್ಥರಾದರು. ಅದೆಷ್ಟು ಅತ್ಯಲ್ಪ ಕಾಲದಲ್ಲ ಎಂಥಾ ಕ್ರಾಂತಿಕಾರಕವಾದ ಬದಲಾವಣೆಗಳನ್ನು ಅವರು ಸಾಧಿಸಿದರೆಂಬುದನ್ನು ಬೆರ ಗಾಂತು ಆಲೋಚಿಸಬೇಕಿದೆ. ಇವೆಲ್ಲಾ ಅಧಿಕಾರಬಲದಿಂದ ಆದುದಲ್ಲ ; ಶುದ್ಧ ಪ್ರಜಾ ಪ್ರಭುತ್ವವಾದಿಗಳಾದ ಬ್ರಿಟಿಷ್ ಜನಾಂಗವು ಬರೇ ಸೇವಾದೃಷ್ಟಿಯಿಂದ ಇವೆಲ್ಲವನ್ನೂ ಸಾಧಿಸಿದರೆಂದು ಹೇಳಬೇಕಾಗಿದೆ. ಇದಕ್ಕೆ ಸಾಕಷ್ಟು ಸಾಕ್ಷ್ಯಪೂರ್ಣವಾದ ವರದಿಗಳು ಇವೆ.

ಪರದೇಶೀ ಸರಕಾರಗಳು ತಾವು ಆಡಳಿತ ನಡೆಸುವ ದೇಶದ ಸಾಹಿತ್ಯ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪ ವಿಚಾರ, ಸಮಾಜಸೇವೆ ಇತ್ಯಾದಿಗಳ ಮಟ್ಟಿಗೆ ನಿಷ್ಠೆಯಿಂದ ದುಡಿಯ ಬೇಕೆಂದಿಲ್ಲ. ಪ್ರಪಂಚದ ಯಾವೆಡೆಯಲ್ಲೂ ಹಾಗಾದುದಿಲ್ಲ ; ಅದೇನೋ ದೇಶದ ಸುದೈವದಿಂದ ಅಂಥಾ ಒಂದು ನಾಗರಿಕ ಬ್ರಿಟಿಷ್ ಜನಾಂಗವು ಅದೇನೋ ಪಕ್ಕನೆ ಅವತರಿಸಿ ಮುಹಮ್ಮದೀಯರ ಕರಾಳ ಕೃತ್ಯದಿಂದ ದೇಶವನ್ನು ತಪ್ಪಿಸಿ ಸಂಸ್ಕೃತಿ ಮತ್ತು ಧರ್ಮವನ್ನು ಉಳಿಸಿ ಸಾಹಿತ್ಯಕ್ಕೆ ಪುನರ್ಜೀವವನ್ನಿತ್ತು ಆಧುನಿಕ ವಿದ್ಯೆಯನ್ನಿತ್ತು ಅಗಲಿದರು. ಕಾಲವು ಕಳೆದಂತೆ ಸತ್ಯವು ಹೊರಬರಲೇಬೇಕು. 1885 ರ ಕಾಲಕ್ಕೆ

